

**ಶ್ರೀ ಸಿದ್ದರಾಮಯ್ಯ**
ಸನ್ಮಾನ್ಯ ಮುಖ್ಯಮಂತ್ರಿಗಳು






**ಶ್ರೀ ಆರ್. ರೋಷನ್ ಬೇಗ್**
ಮಾನ್ಯ ಮೂಲಸೌಲಭ್ಯ ಅಭಿವೃದ್ಧಿ,
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ
ಹಾಗೂ ಹಜ್ ಸಚಿವರು

# ಸಮಗ್ರ ಅಭಿವೃದ್ಧಿಗಾಗಿ ಸರಿಸಾಟಿಯಿಲ್ಲದ ಮೂಲಸೌಕರ್ಯ




**ಹೆಚ್ಚುವರಿ ಸಾಮರ್ಥ್ಯ-**

- **1,00,000** ಕಿ.ಮೀ. ರಸ್ತೆ
- **134** ಕಿ.ಮೀ. ರೈಲ್ವೆ ಮಾರ್ಗ
- **5** ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ ಹಾಗೂ ಅಸ್ತಿತ್ವದಲ್ಲಿರುವ **4** ವಿಮಾನ ನಿಲ್ದಾಣಗಳ ಉನ್ನತೀಕರಣ
- **ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ** ಹಂತ-2 ವಿಸ್ತರಣೆ
- ಪ್ರಾದೇಶಿಕ ವಾಯು ಸಂಪರ್ಕ ಅಭಿವೃದ್ಧಿ
- **ಪೀಣ್ಯ ಇಂದ ಸಂಪಿಗೆ ರಸ್ತೆವರೆಗಿನ** 10.5 ಕಿ.ಮೀ.ಗಳ ಮೆಟ್ರೋ ರೈಲು ಸಂಪರ್ಕ **ಪೂರ್ಣ**



 **ಕರ್ನಾಟಕ ವಾರ್ತೆ**

**ಪ್ರಕಟಣೆ : ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ**

# ಶಬ್ದಮಾಲಿನ್ಯ ನಿಯಂತ್ರಣಕ್ಕೆ ಎಲ್ಲರೂ ಕೈಜೋಡಿಸೋಣ



ಡಾ॥ ವಾಮನ್ ಆಚಾರ್ಯ, ಅಧ್ಯಕ್ಷರು
ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ



### ಶಬ್ದಮಿತಿಯ ಪ್ರಮಾಣ (ಡೆಸಿಬೆಲ್‌ಗಳಲ್ಲಿ)

| ಪ್ರದೇಶ | ಹಗಲು (ಗರಿಷ್ಠ) | ರಾತ್ರಿ (ಗರಿಷ್ಠ) |
|---|---|---|
| ಕೈಗಾರಿಕಾ ಪ್ರದೇಶ | 75 | 70 |
| ವಾಣಿಜ್ಯ ಪ್ರದೇಶ | 65 | 55 |
| ವಸತಿ ಪ್ರದೇಶ | 55 | 45 |
| ಶಬ್ದ ಸೂಕ್ಷ್ಮ ಪ್ರದೇಶ | 50 | 40 (ಶಾಲೆ, ಕೋರ್ಟ್, ಆಸ್ಪತ್ರೆ ಇತ್ಯಾದಿ) |

### ಶಬ್ದಮಾಲಿನ್ಯ (ನಿಯಂತ್ರಣ) ಕಾಯಿದೆಯ ನಿಯಮಗಳು

- ಆಸ್ಪತ್ರೆ, ಶೈಕ್ಷಣಿಕ ಸಂಸ್ಥೆ, ಕೋರ್ಟ್ ಪ್ರದೇಶಗಳ ಸುತ್ತಮುತ್ತಲಿನ 100 ಮೀಟರ್ ವ್ಯಾಪ್ತಿ ಶಬ್ದರಹಿತವಾಗಿರಬೇಕು.
- ಸಾರ್ವಜನಿಕ ಸ್ಥಳದಲ್ಲಿ ಧ್ವನಿವರ್ಧಕಗಳನ್ನು ಅಳವಡಿಸಿಕೊಳ್ಳಬೇಕಾದರೆ ಸಂಬಂಧಿಸಿದ ಪೊಲೀಸ್ ಅಧಿಕಾರಿಗಳಿಂದ ಲಿಖಿತರೂಪದಲ್ಲಿ ಅನುಮತಿ ಪಡೆದುಕೊಳ್ಳಬೇಕು.
- ರಾತ್ರಿ 10 ಗಂಟೆಯಿಂದ ಬೆಳಗ್ಗೆ 6 ಗಂಟೆ ಸಮಯದಲ್ಲಿ ಸಾರ್ವಜನಿಕ ಪ್ರದೇಶದಲ್ಲಿ ಧ್ವನಿಯಂತ್ರಕಗಳನ್ನು ಬಳಸಬಾರದು.

### ಹಾರ್ನ್ ಮಾಡಲೇಬೇಡಿ

ಪಾದಚಾರಿಗಳ ಹಿಂದೆ ದಿಢೀರನೆ ಹಾರ್ನ್ ಮಾಡಿ ಅವರನ್ನು ಗಾಬರಿಪಡಿಸಬೇಡಿ. ಕೆಲವೇ ಗಳಿಗೆಗಳಲ್ಲಿ ಖಂಡಿತ ಅವರು ಸರಿಯುತ್ತಾರೆ. ಒಂದರ ಹಿಂದೆ ಒಂದರಂತೆ ಚಲಿಸುವಾಗಲೂ ಹಾರ್ನ್ ಮಾಡಬೇಡಿ. ಡಿಮ್-ಡಿಪ್ ದೀಪ ಬಳಸಿ.

### ತಾಳ್ಮೆ ಇರಲಿ

ಟ್ರಾಫಿಕ್ ಸಿಗ್ನಲ್‌ಗಳಲ್ಲಿ ವಾಹನಗಳು ಚಲಿಸಲು ಹಸಿರು ದೀಪದ ಸೂಚನೆ ಬಂದಾಗ ಹಿಂದಿರುವ ವಾಹನ ಸವಾರರು ಮುಂದಿರುವ ವಾಹನ ಸವಾರರರಿಗೆ ಅನವಶ್ಯಕವಾಗಿ ಹಾರ್ನ್ ಮಾಡುವ ಬದಲು ಕೆಲ ಸೆಕೆಂಡುಗಳ ಕಾಲ ತಾಳ್ಮೆಯಿಂದ ವರ್ತಿಸಬೇಕು.

### ಕಡಿಮೆ ಶಬ್ದದ ಹಾರ್ನ್, ಯಂತ್ರ ಬಳಸಿ

ವಾಹನ ಸವಾರರು ಹೆಚ್ಚಿನ ಶಬ್ದ ಮಾಡುವ ಅಥವಾ ತಮಗಿಷ್ಟ ಬಂದ ಹಾರ್ನ್‌ಗಳನ್ನು ಅಳವಡಿಸಿಕೊಳ್ಳಬಾರದು. ಬದಲಿಗೆ ಕಡಿಮೆ ಸದ್ದು ಮಾಡುವ ಹಾರ್ನ್ (ಗರಿಷ್ಠ 65 ಡೆಸಿಬೆಲ್) ಹಾಗೂ ಸರ್ಕಾರ ನಿಗದಿಪಡಿಸಿರುವ ಹಾರ್ನ್‌ಗಳನ್ನು ಅಳವಡಿಸಿಕೊಳ್ಳಬೇಕು.

### ಜನ ಜಾಗೃತಿಯಲ್ಲಿ ಪಾಲ್ಗೊಳ್ಳಿ

ಸ್ವಯಂಸೇವಾ ಸಂಘಸಂಸ್ಥೆಗಳು, ವಿದ್ಯಾರ್ಥಿಗಳು ಸರ್ಕಾರ ಹಾಗೂ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಹಮ್ಮಿಕೊಳ್ಳುವ ಶಬ್ದಮಾಲಿನ್ಯ ನಿಯಂತ್ರಣ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸಬಹುದು.

### ಸ್ವಯಂ ನಿಯಂತ್ರಣ ಇರಲಿ

ಕೈಗಾರಿಕೆಗಳ ಮಾಲೀಕರು ಸಹ ಕಡಿಮೆ ಶಬ್ದ ಮಾಡುವ ಯಂತ್ರಗಳನ್ನು ಅಳವಡಿಸಿಕೊಳ್ಳಬೇಕು.

### ಧ್ವನಿವರ್ಧಕ ಶಬ್ದದ ಮಟ್ಟ ಕಡಿಮೆ ಮಾಡಿ

ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಧ್ವನಿವರ್ಧಕದ ಶಬ್ದ ಮಿತಿಯನ್ನು ಪಾಲಿಸಿರಿ. ಅತಿಶಬ್ದ ಖಂಡಿತ ಅನಾರೋಗ್ಯ ಉಂಟು ಮಾಡುತ್ತದೆ.

### ಮಿತಿ ಮೀರಿದರೆ ದಂಡ ಸಂಗ್ರಹ

ಟ್ರಾಫಿಕ್ ಸಿಗ್ನಲ್‌ಗಳು ಹಾಗೂ ಸಂಚಾರ ದಟ್ಟಣೆ ಹೆಚ್ಚಿರುವ ಪ್ರದೇಶಗಳಲ್ಲಿ ಅನಾವಶ್ಯಕವಾಗಿ ಹಾರ್ನ್ ಮಾಡುವವರನ್ನು ಮೋಟಾರು ವಾಹನಗಳ ಕಾಯಿದೆ ಅನ್ವಯ ಆರ್‌ಟಿಒ ಅಧಿಕಾರಿಗಳು ಪತ್ತೆ ಹಚ್ಚಿ ದಂಡ ವಿಧಿಸುವ ಅಧಿಕಾರ ಪಡೆದಿರುತ್ತಾರೆ.

## ಶಬ್ದಮಯ ದಿನಚರಿ ನಮಗೆ ಬೇಡ




ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ
ಪರಿಸರ ಭವನ, ಚರ್ಚ್ ಸ್ಟ್ರೀಟ್, ಬೆಂಗಳೂರು 560001

ವೆಬ್‌ಸೈಟ್: www.kspcb.gov.in
ಫೇಸ್‌ಬುಕ್ ಪುಟ: kspcbofficial




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೬ ಜನವರಿ ೨೦೧೫





**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**






**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಈ ತಿಂಗಳು



ಇಸ್ರೋ ಅಧ್ಯಕ್ಷ ಡಾ॥ ಪಿ. ರಾಧಾಕೃಷ್ಣನ್ ಮಂಗಳ ಯಾನದ ರೂವಾರಿಯಾಗಿ ಖ್ಯಾತರು. ಅವರು ತಿರುಪತಿಯಲ್ಲೂ ಪ್ರಸಿದ್ಧರು. ಅಂತೆಯೇ ಶ್ರೀಕೃಷ್ಣನ ಗುರುವಾಯೂರಿನಲ್ಲಿ ಸಹ. ಅವರು ಅಧ್ಯಕ್ಷರಾದಾಗ ಕೃಷ್ಣನಿಗೆ ತಮ್ಮ ತೂಕದಷ್ಟು ಬೆಲ್ಲವನ್ನು ಅರ್ಪಿಸಿ ಸಂತುಷ್ಟಿಗೊಳಿಸಿದ್ದರು. ತಿರುಪತಿಯಲ್ಲಿ ಯಾನಕ್ಕೆ ತೆರಳಿದ ಯಂತ್ರದ ಪ್ರತಿಕೃತಿಯನ್ನು ವೆಂಕಟೇಶ್ವರನ ಮುಂದಿಟ್ಟು ಆಶೀರ್ವಾದ ಪಡೆದಿದ್ದರು. ಇವರನ್ನು ಮೀರಿಸಬೇಕೆಂದು ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಹಿರಿಯ ಅಧಿಕಾರಿಗಳ ನಡುವೆ ಸ್ಪರ್ಧೆ ಏರ್ಪಟ್ಟಿದ್ದಂತೆ ತೋರುತ್ತದೆ. ರಕ್ಷಣಾ ಇಲಾಖೆಯ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ (ಡಿ.ಆರ್.ಡಿ.ಒ.) ಹಾಗೆ ಸ್ಪರ್ಧೆಗಿಳಿದಿರುವ ಒಂದು ದೃಷ್ಟಾಂತವು ವರದಿಯಾಗಿದೆ. ಮಾಜಿ ರಾಷ್ಟ್ರಾಧ್ಯಕ್ಷ ಅಬ್ದುಲ್ ಕಲಾಂ ಈ ಸಂಸ್ಥೆಯಿಂದ ಬಂದವರು. ಈಗಿನ ಅದರ ನಿರ್ದೇಶಕರು ಪುಣೆಯಲ್ಲಿ ಈವರೆಗೆ ಕಂಡರಿಯದಿದ್ದ ಒಂದು ಕೆಲಸ ಮಾಡಿದ್ದಾರೆ. ಆಳಂದಿ ಎಂಬ ಊರು ಪುಣೆಗೆ ಬಹಳ ಹತ್ತಿರ. ಸಂತ ಜ್ಞಾನೇಶ್ವರರ ಸಮಾಧಿ ಅಲ್ಲಿರುವುದರಿಂದ ಮಹಾರಾಷ್ಟ್ರದಲ್ಲಿ ಆ ಊರಿಗೆ ಮಹತ್ವವಿದೆ. ಡಿ.ಆರ್.ಡಿ.ಒ. ಉನ್ನತಾಧಿಕಾರಿಗೆ ಜ್ಞಾನೇಶ್ವರರ ಗೊಡವೆ ಬೇಕಿಲ್ಲ. ಅದೇ ಊರಿನಲ್ಲಿ ಬೇರೊಂದು ಚಿಕ್ಕ ದೇವಾಲಯ ಇದೆ. ಆ ದೇವಾಲಯಕ್ಕೆ ಡಿ.ಆರ್.ಡಿ.ಒ. ಅಧಿಕಾರಿ ಒಂದು ಬೆಳ್ಳಿಯ ರಥ ಮಾಡಿಸಿ ಕೊಟ್ಟಿದ್ದಾರೆ. ಅದು ಐದು ಅಡಿ ಎತ್ತರದ್ದೆಂದು ಹೇಳಲಾಗಿದೆ. ಅಡಿಗೊಂದು ಕೋಟಿಯಂತೆ ಆ ರಥದ ಬೆಲೆ ಐದು ಕೋಟಿ ರೂಪಾಯಿಗಳು. ಅಷ್ಟು ಹಣವನ್ನು ಸರ್ಕಾರದ ರಕ್ಷಣಾ ಇಲಾಖೆಯು ಭರಿಸಿತೆ? ಹಾಗಿದ್ದರೆ ಅದಕ್ಕೆ ಅನುಮತಿ ನೀಡಿದವರಾರು? ಇಲ್ಲ, ಶ್ರೀಯುತರು ತಮ್ಮ ಸ್ವಂತದ ಹಣವನ್ನು ಕೊಟ್ಟರೆನ್ನುವುದಾದರೆ ಈ ಮಹಾತ್ಮ ಅಷ್ಟೊಂದು ಹಣ ಕೂಡಿಹಾಕಿಕೊಂಡಿದ್ದು ಹೇಗೆ? ಸಾರ್ವಜನಿಕರಿಂದ ಸಂಗ್ರಹಿಸ ಬೇಕಾದರೂ ಅವರು ಅನುಮತಿ ಪಡೆಯಬೇಕು. ನೌಕರರಿಂದ ದೇಣಿಗೆ ಪಡೆಯಲಂತೂ ಸಾಧ್ಯವಿಲ್ಲ. ಅವರೇನು ಈ ಅಧಿಕಾರಿಯಂತೆ ಮೂರ್ಖರೆ? ಜಪ್ಪಯ್ಯ ಎಂದರೂ ಅಷ್ಟು ಹಣ ಬಿಚ್ಚುವುದಿಲ್ಲ! ದೇವರಿಗೆ ಐದು ಕೋಟಿಯ ಬೆಳ್ಳಿ ರಥ ಕೊಟ್ಟರೆ ಅವನೂ ಇವರಿಗೇನಾದರೂ ಕೊಟ್ಟಿರಬೇಕಲ್ಲ, ಅದೆಷ್ಟು? ಇವರ ಜೇಬು ಭಾರಿ ಗಟ್ಟಿಯಾದಂತಾಯಿತು. ಎಲ್ಲಾ ಯಾರ ರಕ್ಷಣೆಗಾಗಿ? ಕತೆ ಅಲ್ಲಿಗೆ ಮುಗಿಯಲಿಲ್ಲ. ಪುಣೆಯಲ್ಲೇ ಡಿ.ಆರ್.ಡಿ.ಒ.ದಲ್ಲಿ ಕೆಲಸ ಮಾಡುವ ಪುಟ್ಟ ಅಧಿಕಾರಿಯೊಬ್ಬರು ದೊಡ್ಡ ಅಧಿಕಾರಿಯ ದುಂದುವೆಚ್ಚವನ್ನು ಟೀಕಿಸಿ ಪ್ರಶ್ನಿಸಿದರು. ಮಾರನೆಯ ದಿನವೇ ಆತನ ಎತ್ತಂಗಡಿಯಾಯಿತು. ಎಲ್ಲಿಗೆ ವರ್ಗ ಮಾಡಿ ಕಳಿಸಿದರೋ ತಿಳಿಯದು. ವಿದೇಶಗಳಿಂದ ಕಪ್ಪು ಹಣವನ್ನೆಲ್ಲಾ ತರುವುದಾಗಿ ಹೇಳುವ ಢೋಂಗಿಬಾಬಾ ಸರ್ಕಾರದಲ್ಲಿ ರಕ್ಷಣಾ ಸಚಿವ ರೊಬ್ಬರಿದ್ದಾರೆ. ಅವರು ಈ ಐದು ಕೋಟಿ ಹಗರಣದ ವಿಚಾರಣೆ ಮಾಡಿಯಾರೆ?

* * *

ಸಾಧ್ವಿ ನಿರಂಜನ ಜ್ಯೋತಿ. ಎಂತಹ ಅದ್ಭುತ ಹೆಸರು! ಆಕೆಯ ಮಾತಿನಲ್ಲಿ ಸಾಧುತನವಿಲ್ಲ. ನಾಲಿಗೆ ಹರಿಬಿಟ್ಟರೆ ಬರುವುವೆಲ್ಲಾ ಹೊಲಸು ಬೈಗುಳದ "ಅಚ್ಚ ಸಂಸ್ಕೃತ" ಪದಗಳು. ನಿರಂಜನ ಮತ್ತು ಜ್ಯೋತಿ ಎರಡೂ ಬೆಳಕು, ಜ್ಞಾನ, ತಿಳಿವಳಿಕೆ ಇತ್ಯಾದಿಗಳನ್ನು




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಸಂಚಿಕೆ | ₹ ೪೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಸೂಚಿಸುವ ಪದಗಳು. ಅನ್ವರ್ಥ ಅಲಂಕಾರಕ್ಕೆ ಹೇಳಿ ಮಾಡಿಸಿದ ಹೆಸರು ಆಕೆಯದು. ಮಂಗಳವಾರವು ತೀರಾ ಅಮಂಗಲಕರವೆಂದು ಭಾವಿಸುತ್ತಾರೆ. ಆದರೂ ಸೌಜನ್ಯಕ್ಕೆ ಅದನ್ನು ಮಂಗಳವಾರ ಎನ್ನಲಾಗುತ್ತದೆ. ಇದನ್ನು ಆಂಗ್ಲಭಾಷೆಯಲ್ಲಿ 'ಯೂಫೆಮಿಸಂ' ಎನ್ನುತ್ತಾರೆ. ಹಾಗಿದೆ ಈ ತಾಯಿಯ ಹೆಸರು. "ಮೊಟ್ಟಮೊದಲ ಬಾರಿ ಲೋಕಸಭೆಗೆ ಆಯ್ಕೆಯಾಗಿ ಬಂದಿದ್ದಾರೆ, ಅನುಭವ ಸಾಲದು; ಜೊತೆಗೆ ಹಳ್ಳಿಯಿಂದ ಬಂದಾಕೆ, ಹಿಂದುಳಿದ ಪಂಗಡಕ್ಕೆ ಸೇರಿರುವವರು. ಆದ್ದರಿಂದ ಅವರ ಕೆಟ್ಟ ಭಾಷೆಗಾಗಿ ಅವರನ್ನು ಛೇಡಿಸಬೇಡಿ" ಎಂದು ಪ್ರಧಾನಿಯವರು ಬೇಡಿದ್ದಾರೆ. ಜ್ಯೋತಿ ಅವರು ಕೇಳಿದ ಪ್ರಶ್ನೆಯು ಚುನಾವಣೆಗಳ ಸಂದರ್ಭದ್ದು: "ನಿಮಗೆ ನಮ್ಮ ಒಳ್ಳೆಯ ಬಿಜೆಪಿ ಸರ್ಕಾರ ಬೇಕೋ, ಇಲ್ಲ ಯಾರೋ ಹುಚ್ಚು ಮುಂಡೇಮಕ್ಕಳ ಸರ್ಕಾರ ಬೇಕೋ ?" ಎಂದು. ಅವೆರಡೂ ಬೇರೆಬೇರೆ ಎಂಬುದು ಅವರ ಮಾತಿನಲ್ಲಿದೆ ! ಅವರನ್ನು ಟೀಕಿಸಿದವರು ಕುಂಬಳಕಾಯಿ ಕಳ್ಳರು, ಆದ್ದರಿಂದ ಹೆಗಲು ಮುಟ್ಟಿನೋಡಿ ಕೊಳ್ಳುತ್ತಾ ಆಕೆಯನ್ನು ತರಾಟೆಗೆ ತೆಗೆದುಕೊಂಡರು. ಗ್ರಾಮ್ಯ ಭಾಷೆಯನ್ನು ಲೋಕಸಭೆಯಲ್ಲಿ ಬಳಸಬಾರದೇನು ? ಕೂಡದು ಎನ್ನುವುದಾದರೆ ಗ್ರಾಮಗಳವರು ಅಲ್ಲಿಗೆ ಹೋಗುವುದಾದರೂ ಹೇಗೆ ? ಹೆಚ್ಚೆಂದರೆ, ಕಾವಿ ಪೋಷಾಕು ತೆಗೆದುಹಾಕಿ, ಲಕ್ಷಣವಾಗಿ ಗ್ರಾಮದ ಒಂದು ಸೀರೆ ಉಟ್ಟು ಬನ್ನಿ, ಎಂದು ಹೇಳಬಹುದಿತ್ತೇನೊ !

✳ ✳ ✳

ನಮ್ಮ ದೇಶದ ಚರಿತ್ರೆಯಲ್ಲಿ ಎರಡಂಶಗಳು ಪ್ರಧಾನವಾಗಿ ಎದ್ದುಕಾಣುತ್ತವೆ : ಒಂದು, ಆರ್ಯರಿಂದ ಹಿಡಿದು ಪದೇ ಪದೇ ಪರಕೀಯರ ಧಾಳಿಗೆ ತುತ್ತಾಗಿ ಬೆಂಡಾಗುವುದು; ಇನ್ನೊಂದು, ಯಾವ ಅಂಜಿಕೆ ಮತ್ತು ನಿಯಂತ್ರಣವೂ ಇಲ್ಲದೆ ಮತಾಂತರ ಮಾಡುತ್ತಿರುವುದು. ಸ್ವಾತಂತ್ರ್ಯಗಳಿಸಿದಂದಿನಿಂದ ನಮ್ಮ ದೇಶವು ಪ್ಯಾಲಿಸ್ಟೈನಿನ ಸ್ವತಂತ್ರ ಅಸ್ತಿತ್ವವನ್ನು ಬೆಂಬಲಿಸುತ್ತಾ ಬಂದಿದೆ; ಈಗ ಹಠಾತ್ತನೆ ಮಾನ್ಯರಾದ ಸುಷ್ಮಾ ಸ್ವರಾಜ್ ಅವರಿಗೆ ತಿಳಿಯುವ ಮೊದಲೇ ನಮ್ಮ ಮತವನ್ನು ಆ ದೇಶದ ವಿರುದ್ಧ (ಅಂದರೆ, ಇಸ್ರೇಲ್ ಮತ್ತು ಅಮೆರಿಕ ಪರವಾಗಿ) ಚಲಾಯಿಸಲು ಮೋದಿ ನಿರ್ಧರಿಸಿಬಿಟ್ಟಿದ್ದಾರೆ. ಖ್ಯಾತ ದೊರೆ ವಿಷ್ಣುವರ್ಧನ ಬಹುಕಾಲ ಜೈನನಾಗಿದ್ದವನು ಏಕಾಏಕಿ ಒಂದು ದಿನ ಶ್ರೀವೈಷ್ಣವನಾಗಿಬಿಟ್ಟ. ಹಿಂದಿನ ಅವನ ಜೈನಮತಕ್ಕೆ ಅನ್ಯಾಯವಾಗದಿರಲೆಂದು ಇಬ್ಬರ ಪೈಕಿ ಒಬ್ಬ ಪತ್ನಿಯು ಜೈನಮತದವಳೇ ಆಗಿರಲೆಂದು ಸಮ್ಮತಿಸಿದ ವಿಶಾಲ ಹೃದಯಿ ಅವನು. ಇನ್ನು, ಬಸವಣ್ಣನವರಂತೂ ತಮ್ಮ ಜನಿವಾರ ಕಿತ್ತುಬಿಸುಟು ಶರಣರಾಗಿ ಹೋದರು. ಲೋಕಸಭೆ ಮತ್ತು ಶಾಸನಸಭೆಗಳಲ್ಲಿ ಮತಾಂತರ ಇಲ್ಲದಿದ್ದರೆ ಎಷ್ಟೋ ವೇಳೆ ಸರ್ಕಾರಗಳ ರಚನೆಯೇ ಸಾಧ್ಯವಿಲ್ಲ. ಅದು ಮಾನ್ಯ ನರೇಂದ್ರ ಮೋದಿಯವರಿಗೆ ಗೊತ್ತಿದೆ, ಮಹಾಸಂಸ್ಕೃತಿ ನಾಯಕ ಮೋಹನ ಭಾಗವತರಿಗೂ ತಿಳಿದಿದೆ. ಮನೆ ಬಿಟ್ಟು ಪರಾರಿಯಾಗಿ ಹೋಗಿದ್ದ ಬಾಲಕ ಮಧ್ಯವಯಸ್ಸಿನಲ್ಲಿ ಮನೆಗೆ ಹಿಂದಿರುಗಿದಾಗ ದೊಡ್ಡ ಉತ್ಸವವೋ ಎಂಬಂತೆ ಅವನನ್ನು ಕುಟುಂಬವು ಸ್ವಾಗತಿಸಿತೆಂದು ಬೈಬಲ್ಲಿನಲ್ಲಿ ಒಂದು ಕತೆ ಇದೆ. ದೇವರಲ್ಲಿ ಶ್ರದ್ಧೆ ಕಳೆದುಕೊಂಡಿದ್ದವನು ಅದನ್ನು ಮತ್ತೆ ಪಡೆದುಕೊಂಡಾಗ ದೇವರು ಸಂತೃಪ್ತನಾಗುತ್ತಾನೆಂಬುದು ಆ ಕತೆಯ ನೀತಿಯಂತೆ. ಯಾರೂ ಹುಟ್ಟುವಾಗ ಸ್ವಯಂ ಇಚ್ಛೆಯಿಂದ ಇಂಥದೇ ಮತದಲ್ಲಿ ಹುಟ್ಟುತ್ತೇನೆ ಎಂದು ತೀರ್ಮಾನಿಸಿ ಹುಟ್ಟಿಲ್ಲವೆಂಬುದು ಒಂದು ಜೈವಿಕ ಸತ್ಯ. ಹುಟ್ಟುವುದಕ್ಕೆ ಮುಂಚೆಯೇ ಮಿದುಳು ಇರುವುದಿಲ್ಲವಲ್ಲ, ಏನು ಮಾಡೋಣ ! ಬಂದಾಯಿತು, ಪ್ರಪಂಚವನ್ನು ಕಂಡಾಯಿತು, ಜೀವನವನ್ನು ನೂಕುತ್ತಾ ಬಂದಾಯಿತು, ಬುದ್ಧಿ ಬೆಳೆಯಿತು, ಸ್ವಂತದ ಆಯ್ಕೆ ಮಾಡಿಕೊಳ್ಳುವ ಪ್ರಜ್ಞೆ ಉದಯಿಸಿತು, ಎಂದಿಟ್ಟುಕೊಳ್ಳೋಣ. (ಕೆಲವರಿಗೆ ವಯಸ್ಸು ಹೆಚ್ಚುತ್ತದೆ, ಆದರೆ ಬುದ್ಧಿ ಬೆಳೆಯುವುದಿಲ್ಲ ಎನ್ನುತ್ತಾರೆ; ಅವರನ್ನು ಪಕ್ಕಕ್ಕಿಡೋಣ). ಆಗ ಯಾರಿಗೋ ಬುದ್ಧ ಬೇಕು, ಇನ್ನಾರಿಗೋ ಬಸವಣ್ಣ ಬೇಕು, ಮತ್ತಾರಿಗೋ ಝುರತುಷ್ಟ್ರ ಬೇಕು, ವಿಷ್ಣುವರ್ಧನನಿಗೆ ವಿಷ್ಣು ಬೇಕು, ಇನ್ನು ಕೆಲವರಿಗೆ ಯಾರೂ ಬೇಡ. "ಬೇಕಾದದ್ದನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ನಿನ್ನದು, ಆಯ್ಕೆ ಮಾಡಿಕೊಳ್ಳುವಷ್ಟು ಬುದ್ಧಿ ನಿನಗಿದೆ, ಸಂವಿಧಾನವು ಅದನ್ನು ಮಾನ್ಯ ಮಾಡಿದೆ" ಎಂದು ಹೇಳುತ್ತಲೇ "ಹೋ, ಮತಾಂತರವು ಪಾತಕ" ಎಂದು ಹೇಳುವುದರಲ್ಲಿ ಅರ್ಥವೇನಿದೆ, ತರ್ಕವೇನಿದೆ, ಸಂವಿಧಾನ ಸೂತ್ರವೇನಿದೆ ? ದೇಶದ ಅಳಿವು – ಉಳಿವಿನ ಪ್ರಶ್ನೆ ಅದು ಎಂಬಂತೆ ಮೋಹನ ಭಾಗವತರು, ಅಶೋಕ ಸಿಂಘಾಲರು, ನಾಟ್ಯ ಆರಂಭಿಸಿದರೆ ಎಲ್ಲರೂ ಅದೇ ತಾಳಕ್ಕೆ ಕುಣಿಯಬೇಕೆ ? ಋಗ್ವೇದದ ಕವಿಗಳಿಗೆ ಶಿವನಿರಲಿಲ್ಲ ಆದರೆ ನಾವು ಶೈವರಾದೆವು. ವೀರಶೈವರ ಹೆಸರೇ ಇರಲಿಲ್ಲ. ಆದರೆ ಬಸವಣ್ಣ ಅದೊಂದನ್ನು ಬಣವಾಗಿ ರಚಿಸಿದ. ಮನೆ ಬಿಟ್ಟು ಹೋಗಿರುವವರು ಸ್ವಗೃಹಕ್ಕೆ ಹಿಂದಿರುಗುವುದು ಬೇರೆ, ಮೊದಲಿಂದ ಪಿತ್ರಾರ್ಜಿತ ಮನೆಯಲ್ಲಿದ್ದವರು ಬೇರೊಂದು ಮನೆಗೆ ಬಂದು 'ಇದು ಸ್ವಗೃಹ' ಎಂದುಕೊಳ್ಳುವುದು ಬೇರೆ. ಇಷ್ಟಕ್ಕೂ ಯಾರು ತಮ್ಮ ತಮ್ಮ ತಥಾಕಥಿತ ಮತಧರ್ಮಗಳ ಸೂತ್ರಗಳಿಗೆ ಅಂಟಿಕೊಂಡಿದ್ದಾರೆ ? ವೀರಶೈವರೇ ಇರಲಿ, ಆಶ್ವಲಾಯನ ಸೂತ್ರದ ಬ್ರಾಹ್ಮಣರೇ ಇರಲಿ, ಮೆಕ್ಕಾಗೆ ಹೋಗಿ ಪಾವನವಾಗಿ ಹಿಂದಿರುಗಿರುವ ಮುಸಲ್ಮಾನರೇ ಆಗಲಿ, ಅಹಿಂಸೆಯ ವ್ರತವನ್ನು ಬೋಧಿಸುವ ಜೈನಮತದ ಮಾರ್ವಾಡಿಗಳೇ ಆಗಲಿ, ಜೀಸಸ್‌ನ ಹೆಸರಿನಲ್ಲಿ ಸದಾ ಶ್ರೇಷ್ಠತೆಯನ್ನು ಸಾರಿಕೊಳ್ಳುವ ಕ್ರೈಸ್ತರಾಗಲಿ, ಎಲ್ಲರೂ ಮತಾಂತರ ಮಾಡಿರುವವರೇ ! ಅಂದರೆ, ತಮ್ಮ ತಮ್ಮ ಮತಗಳ ಬೋಧನೆಗಳನ್ನು ಆಚರಣೆಯಲ್ಲಿ ತಿರಸ್ಕರಿಸಿರುವವರೇ ! ಹೀಗಿರುವಾಗ ಮತಾಂತರದ ಪ್ರಶ್ನೆ ಗೊಂದಲವನ್ನೇಕೆ ಹುಟ್ಟುಹಾಕಿದೆ ? ವಿಚಾರಯೋಗ್ಯವಾದ ಮಾತು.

✳ ✳ ✳

ಭಾರತದ ಮೊದಲ ಪ್ರಧಾನ ಮಂತ್ರಿ ಜವಹರಲಾಲ್ ನೆಹರೂ ರಾಜ್ಯಗಳ ಮುಖ್ಯಮಂತ್ರಿಗಳಿಗೆ ಪ್ರತಿ ತಿಂಗಳೂ ದೇಶದ ಪ್ರಮುಖ ವಿಚಾರಗಳತ್ತ ಗಮನಸೆಳೆಯಲು ಪತ್ರಗಳನ್ನು ಬರೆಯುವ ಪದ್ಧತಿಯನ್ನಿರಿಸಿಕೊಂಡಿದ್ದರು. ೧೯೪೭ರಿಂದ ೧೯೬೩ರವರೆಗೆ ತಿಂಗಳ ಮೊದಲ ದಿನದಂದು ಮತ್ತೆ ಹದಿನೈದನೇ ತಾರೀಖಿನಂದು ತಪ್ಪದೆ ಪತ್ರ ರವಾನಿಸುತ್ತಿದ್ದರು. ಅಂಥ ಸುಮಾರು ೪೦೦ ಪತ್ರಗಳ ಸಂಗ್ರಹ ಪ್ರಕಟವಾಗಿದೆ. ಅವುಗಳಲ್ಲಿ ಡಿಸೆಂಬರ್ ೭, ೧೯೪೭ರಂದು ಬರೆದಿದ್ದ ಪತ್ರ ಇಂದಿಗೂ ಪ್ರಸ್ತುತವಾಗಿರುವುದರಿಂದ ಇಲ್ಲಿ ಅದನ್ನು ನೀಡುತ್ತಿದ್ದೇವೆ. ಪತ್ರದ ಸಾರಾಂಶ ಹೀಗಿದೆ :

ಕೆಲವು ಪ್ರಾಂತಗಳಲ್ಲಿ ಆರೆಸ್ಸೆಸ್ ಬೃಹತ್ ಪ್ರದರ್ಶನಗಳನ್ನು ನಡೆಸಿರುವ ವರದಿಗಳು ನನಗೆ ಬಂದಿವೆ. ಪ್ರತಿಬಂಧಕಾಜ್ಞೆ ೧೪೪ನೇ ವಿಧಿ ಇದ್ದಾಗ್ಯೂ ಅಂಥ ಪ್ರದರ್ಶನಗಳು ನಡೆದಿವೆ. ಕಾಯ್ದೆಯ ಉಲ್ಲಂಘನೆಯನ್ನು ಗಮನಿಸಿದ್ದಾಗ್ಯೂ ಕೆಲವು ಪ್ರಾಂತಗಳ ಅಧಿಕಾರಿಗಳು ಏನೂ ಕ್ರಮ ಕೈಗೊಂಡಿಲ್ಲ. ಈ ವಿಷಯ ನಿಮ್ಮ ವಿವೇಚನೆಗೆ ಬಿಟ್ಟದ್ದು. ನಾನು ಮಧ್ಯೆ ಪ್ರವೇಶಿಸಬಯಸುವುದಿಲ್ಲ. ಆದರೂ, ಈ ಬಗೆಯ ಉಲ್ಲಂಘನೆಗಳಿಗೆ ಮೌನ ಸಮ್ಮತಿ ಸೂಚಿಸುವುದು ಮುಂದೆ ಅಪಾಯಕಾರಿ ಪರಿಣಾಮಗಳಿಗೆ ಎಡೆಕೊಡಬಹುದು ಎಂಬುದನ್ನು ನಾನು ನಿಮ್ಮ ಗಮನಕ್ಕೆ ತರಬಯಸುತ್ತೇನೆ.

ಆರೆಸ್ಸೆಸ್ ಸಂಘಟನೆ ಖಾಸಗಿ ಸೇನೆಯ ರೀತಿಯಲ್ಲಿ ಬೆಳೆಯುತ್ತಿದೆ ಎನ್ನುವುದಕ್ಕೆ ನಮಗೆ ಸಾಕಷ್ಟು ಸಾಕ್ಷ್ಯಾಧಾರಗಳು ದೊರೆತಿವೆ. ಸಂಘಟನೆಯನ್ನು ರೂಪಿಸುವ ತಂತ್ರದಲ್ಲಿ ಅದು ಖಚಿತವಾಗಿ ನಾಝಿಗಳ ಧಾಟಿಯಲ್ಲಿದೆ. ನಾಗರಿಕ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದು ನಮ್ಮ ಉದ್ದೇಶವಲ್ಲ. ಆದರೆ ದೊಡ್ಡ ಸಂಖ್ಯೆಯಲ್ಲಿ ವ್ಯಕ್ತಿಗಳಿಗೆ ಸೈನಿಕ ತರಬೇತಿ ನೀಡುವುದನ್ನು ಸಹಿಸಲಾಗದು. ಆರೆಸ್ಸೆಸ್ ಖಂಡಿತವಾಗಿ ಕೇಂದ್ರ ಹಾಗೂ ಪ್ರಾಂತೀಯ ಸರಕಾರಗಳಿಗೆ ವಿರೋಧವಾಗಿದೆ. ಅಷ್ಟಕ್ಕೇ ಅವರ ಮೇಲೆ ಕ್ರಮ ಕೈಗೊಳ್ಳುವುದು ಸರಿಯಲ್ಲ.



ನ್ಯಾಯಬದ್ಧವಾದ ಚಟುವಟಿಕೆಗೆ ಖಂಡಿತ ಅವಕಾಶ ನೀಡಬಹುದು. ಆದರೆ ಅವರ ಚಟುವಟಿಕೆಗಳು ಹೆಚ್ಚು ಹೆಚ್ಚಾಗಿ ಈ ಮಿತಿಗಳನ್ನು ಮೀರುತ್ತಿವೆಯಾದ್ದರಿಂದ ಪ್ರಾಂತೀಯ ಸರಕಾರಗಳು ಅವರ ಮೇಲೆ ನಿಗಾ ಇರಿಸಬೇಕಾದ್ದು ಅಗತ್ಯವೆನಿಸಿದಾಗ ಸೂಕ್ತ ಕ್ರಮ ಕೈಗೊಳ್ಳುವುದು ಅಪೇಕ್ಷಣೀಯ.

ವಿವಿಧ ಜನಸಮುದಾಯಗಳ ಮಧ್ಯೆ ದ್ವೇಷ ಪ್ರಚೋದಿಸುತ್ತಿರುವ ನಿಯತಕಾಲಿಕ ಪತ್ರಿಕೆಗಳ ಮೇಲೆ ಕೆಲವು ಪ್ರಾಂತೀಯ ಸರಕಾರಗಳು ಕ್ರಮ ಕೈಗೊಂಡಿವೆ. ಈ ವಿಷಯದಲ್ಲಿ ಆರೆಸ್ಸೆಸ್ ಪತ್ರಿಕೆಗಳನ್ನು ಹೆಚ್ಚಾಗಿ ದೂಷಿಸಬಹುದಾಗಿದೆ... ತೀವ್ರವಾದ ರೀತಿಯಲ್ಲಿ ಮತೀಯವಾದಿ ಪ್ರಚಾರವನ್ನು ಅವರು ನಡೆಸುವುದು ಅಚ್ಚರಿಯ ಸಂಗತಿ.

ಜರ್ಮನಿಯಲ್ಲಿ ನಾಜ಼ಿ ಚಳವಳಿ ಹೇಗೆ ಬೆಳೆಯಿತು ಎಂಬ ವಿಚಾರ ನನಗೆ ತಕ್ಕಮಟ್ಟಿಗೆ ತಿಳಿದಿದೆ. ಆಡಂಬರದ ಸಮವಸ್ತ್ರ, ಕಟ್ಟುನಿಟ್ಟಿನ ಶಿಸ್ತಿನಿಂದ ಅದು ಜನಸಾಮಾನ್ಯರನ್ನು ಆಕರ್ಷಿಸುತ್ತದೆ. ಸಾಕಷ್ಟು ಸಂಖ್ಯೆಯಲ್ಲಿ ಬಡ ಮಧ್ಯಮವರ್ಗದ ಅಮಾಯಕ ಯುವ ಜನರನ್ನು ಅದು ಸಂಘಟಿಸಿತು. ...ನಾಜ಼ಿ ಪಾರ್ಟಿ ಜರ್ಮನಿಯನ್ನು ನಾಶಗೊಳಿಸಿತು. ಇಂಥ ಪ್ರವೃತ್ತಿಗಳನ್ನು ಹರಡಲು ಬಿಟ್ಟರೆ, ಅಧಿಕಗೊಳ್ಳಲು ಅವಕಾಶ ನೀಡಿದರೆ ಭಾರತಕ್ಕೆ ಭಾರಿ ವಿಪತ್ತಾಗುತ್ತದೆ ಎಂಬುದರಲ್ಲಿ ನನಗೆ ಸಂಶಯವಿಲ್ಲ. ...ಭಾರತ ಉಳಿದರೂ ತೀವ್ರವಾದ ಹಾನಿಯಾಗುವುದರಿಂದ ಚೇತರಿಸಿಕೊಳ್ಳಲು ದೀರ್ಘಕಾಲ ಹಿಡಿಯುತ್ತದೆ.

✶ ✶ ✶

ಭೋಪಾಲ್ ಅನಿಲ ಸೋರಿಕೆ ದುರಂತ ಸಂಭವಿಸಿ ಮೂರು ದಶಕಗಳೇ ಕಳೆದಿವೆ. ಆದರೆ ಇನ್ನೂ ಸಹ ಸಂತ್ರಸ್ತ ಕುಟುಂಬಗಳಿಗೆ ನ್ಯಾಯವೂ ದೊರೆತಿಲ್ಲ, ಸಮರ್ಪಕವಾದ ಪರಿಹಾರವೂ ದೊರೆತಿಲ್ಲ. ಇಂಥ ಬೃಹತ್ ಅನಾಹುತಕ್ಕೆ ಕಾರಣನಾದ ಅಮೆರಿಕದ ಕಾರ್ಪೊರೇಟ್ ಧಣಿ ವಾರೆನ್ ಆಂಡರ್ಸನ್ ಕೂಡ ಕಳೆದ ಡಿಸೆಂಬರ್ ತಿಂಗಳ ಆದಿಯಲ್ಲಿ ತೀರಿಕೊಂಡ. ಈತ ದುರಂತ ಸಂಭವಿಸಿದಾಗ ಬಂಧನಕ್ಕೊಳಗಾಗಿದ್ದ, ಆದರೆ ಅಮೆರಿಕದ ಒತ್ತಡಕ್ಕೆ ಮಣಿದು ಅವನ ಬಿಡುಗಡೆ ಯಾಯಿತು. ಜಾಗತಿಕ ಬಂಡವಾಳಶಾಹಿಯ ಎಂಥ ಹೀನಕೃತ್ಯ ಗೈದರೂ ಪಾರಾಗಬಲ್ಲ ಎನ್ನುವುದಕ್ಕೆ ಇದು ಉದಾಹರಣೆ. ವಿದೇಶೀ ಬಂಡವಾಳಕ್ಕೆ ಮಣೆ ಹಾಕುವವರು, ಭಾರತದಲ್ಲೇ ತಯಾರಿಸಿ ಎಂದು ತಾಕೀತು ಮಾಡುವವರು ಇದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಈ ಮಹಾನ್ ಮಾರಣ ಹೋಮದಲ್ಲಿ ಸತ್ತವರ ಸಂಖ್ಯೆ ೨೫,೦೦೦ಕ್ಕೂ ಹೆಚ್ಚು. ಸುಮಾರು ೧೫೦,೦೦೦ ಮಂದಿ ಇನ್ನೂ ನಾನಾ ಬಗೆಯ ರೋಗರುಜಿನಗಳಿಂದ ಪರಿತಪಿಸುತ್ತಿದ್ದಾರೆ. ಇದು ಸಂಭವಿಸಿದ್ದು ೧೯೮೪ರಲ್ಲಿ. ಪ್ರಪಂಚದ ಇತಿಹಾಸದಲ್ಲಿ ಸಂಭವಿಸಿದ ಅತಿ ದೊಡ್ಡ ಔದ್ಯಮಿಕ ಅನಾಹುತ.

ಯೂನಿಯನ್ ಕಾರ್ಬೈಡ್ ಅಮೆರಿಕದ ಬಹು ದೊಡ್ಡ, ಕಳೆದ ಶತಮಾನದ ಆದಿಯಲ್ಲಿ ಸ್ಥಾಪನೆಗೊಂಡ ರಾಸಾಯನಿಕ ವಸ್ತುಗಳ ತಯಾರಿಕಾ ಸಂಸ್ಥೆ. ಭಾರತದಲ್ಲಿ ಕೀಟನಾಶಕ ತಯಾರಿಸಲು ೧೯೬೯ರಲ್ಲಿ ಮಧ್ಯಪ್ರದೇಶದ ಭೋಪಾಲ್‌ನಲ್ಲಿ ಕಾರ್ಖಾನೆ ಸ್ಥಾಪಿಸಿತು. ೧೯೭೮ರಲ್ಲೇ ಫೋಸಿಜೀನ್ ವಿಷಾನಿಲ ಸೋರಿಕೆಯಿಂದ ಕಾರ್ಖಾನೆಯ ನೌಕರನೊಬ್ಬ ಸಾವಿಗೀಡಾಗಿದ್ದ. ೧೯೮೨ರಲ್ಲಿ ಮತ್ತೆ ಅದೇ ವಿಷಾನಿಲದ ಸೋರಿಕೆಯಾಗಿತ್ತು. ಆದರೆ ಕಾರ್ಖಾನೆ ಆಡಳಿತಗಾರರು ಸೂಕ್ತ ಕ್ರಮ ಕೈಗೊಳ್ಳಲಿಲ್ಲ. ೧೯೮೪ರ ಡಿಸೆಂಬರ್ ೨ರ ಮಧ್ಯರಾತ್ರಿ ಸುಮಾರು ೪೧ ಟನ್ ವಿಷಾನಿಲ ಕಾರ್ಖಾನೆಯಿಂದ ಹೊರಹೊಮ್ಮಿ ನಗರದಲ್ಲಿ ಹತ್ಯಾಕಾಂಡ ನಡೆಸಿತು. ನಿದ್ರಾವಸ್ಥೆಯಲ್ಲಿದ್ದ ಸಾವಿರಾರು ಮಂದಿ ಚಿರನಿದ್ರೆಗೆ ಹೋದರು. ವಿಷಾನಿಲ ಸೋರಿಕೆ ಸುಮಾರು ಆರು ಲಕ್ಷ ಜನರನ್ನು ಬಾಧಿಸಿತು. ಈ ದುರಂತಕ್ಕೆ ಬಲಿಯಾದವರೆಲ್ಲ ಬಹುತೇಕ ಮಂದಿ ಬಡಜನರೇ. ಅತ್ಯಂತ ಕಡಿಮೆ ವೇತನ ತಿಂಗಳಿಗೆ ರೂ. ೧೫೦ ಪಡೆಯುತ್ತಿದ್ದು ಕಾರ್ಖಾನೆ ಸಮೀಪದಲ್ಲಿದ್ದ ಕೊಳಚೆ ಪ್ರದೇಶದಲ್ಲಿ ವಾಸಮಾಡುತ್ತಿದ್ದವರೇ. ವಿದೇಶೀ ಬಂಡವಾಳಕ್ಕೆ ಮಾರುಹೋಗುವ ಭಾರತದ ಆಡಳಿತವರ್ಗ ಈ ಬಡಜನರನ್ನು ನಿರ್ಲಕ್ಷಿಸಿರುವುದಕ್ಕೆ ಭೋಪಾಲ್ ಅವಘಡ ಒಂದು ನಿದರ್ಶನ. ಯೂನಿಯನ್ ಕಾರ್ಬೈಡ್ ಕಂಪೆನಿಯನ್ನು ಡೌ ಕೆಮಿಕಲ್ಸ್ ಎಂಬ ಇನ್ನೊಂದು ಕಾರ್ಪೊರೇಟ್ ಮಾರಾಟ ಮಾಡಿ ಕೈ ತೊಳೆದುಕೊಂಡಿತು. ಈಗ ಬಡಜನರ ಮೊರೆಯನ್ನು ಕೇಳುವವರು ಯಾರೂ ಇಲ್ಲದಂತಾಗಿದೆ.

✶ ✶ ✶

ಭಾರತದಲ್ಲಿ ರಫ್ತು ಮಾಡಬಹುದಾದ ಒಂದು 'ಸರಕು' ಎಂದರೆ ಬಾಬಾಗಳು ಮತ್ತು ಮಹರ್ಷಿಗಳು ಎಂದರೆ ತಪ್ಪಲ್ಲ. ಏಕೆಂದರೆ ಇಂಥ ಸನ್ಯಾಸಿಗಳು ಎಂದು ಕರೆದುಕೊಳ್ಳುವ ಕಾವಿಧಾರಿಗಳು (ಕೆಲವರು ಶ್ವೇತಾಂಬರರೂ ಇದ್ದಾರೆ) ಹೊರ ದೇಶಗಳಲ್ಲಿ ಮುಖ್ಯವಾಗಿ ಅಮೆರಿಕ, ಯೂರೋಪುಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಭಕ್ತಾದಿಗಳನ್ನು ಹೊಂದಿದ್ದಾರೆ. ದೇಶದಲ್ಲಿ ವ್ಯಾಪಕವಾಗಿ ಹರಡಿರುವ ಭ್ರಷ್ಟಾಚಾರಿಗಳಿಗೆ, ಕಪ್ಪು ಹಣಕ್ಕೆ ರಕ್ಷಾಕವಚವಾಗಿರುವವರು ಇಂಥವರೇ. ಇಂಥವರೆಲ್ಲ ತಾವು ದೇವಮಾನವರು, ಅವತಾರ ಪುರುಷರು ಎಂದು ಏನೇನೋ ಹೇಳಿಕೊಳ್ಳುತ್ತಾರೆ. ಆಶ್ರಮಗಳನ್ನು ಸ್ಥಾಪಿಸುವ ಇವರು ಕೋಟೆಕೊತ್ತಳಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಅಕ್ರಮವಾಗಿ ಶಸ್ತ್ರಾಸ್ತ್ರಗಳನ್ನೂ ದಾಸ್ತಾನಿರಿಸಿಕೊಂಡಿರುತ್ತಾರೆ. ಇಂಥ ಪ್ರಚಂಡರ ಮೇಲೆ ನಿಗಾ ಇರಿಸಿರಬೇಕಾದ ಸರಕಾರ ಮತ್ತು ಅಧಿಕಾರಿಗಳು ಅವರಿಗೇ ಶರಣಾಗುತ್ತಾರೆ. ಸಾಕಷ್ಟು ಸಂಖ್ಯೆಯಲ್ಲಿ ಅನುಯಾಯಿಗಳನ್ನು ಹೊಂದಿರುವ ಈ ಮಠಮಾನ್ಯಗಳು ಸಮಾಜಕ್ಕೆ ದೊಡ್ಡ ಪಿಡುಗಾಗುತ್ತಿವೆ ಎಂಬುದು ಈಗ ಒಂದೊಂದಾಗಿ ಬಹಿರಂಗಗೊಳ್ಳುತ್ತಿದೆ. ಹರಿಯಾಣ ರಾಜ್ಯದ ಹಿಸ್ಸಾರ್ ಜಿಲ್ಲೆಯಲ್ಲಿ ಆಶ್ರಮ ಕಟ್ಟಿಕೊಂಡಿದ್ದ ರಾಂಪಾಲ್ ಎಂಬ ದೇವಮಾನವನನ್ನು ಬಂಧಿಸಲು ಪೊಲೀಸರು ಹರಸಾಹಸ ಪಟ್ಟದ್ದು ಇತ್ತೀಚಿನ ಘಟನೆ. ಸಹಸ್ರಾರು ಭಕ್ತವೃಂದವನ್ನು ಹೊಂದಿದ್ದ ಈ ಕೊಲೆಪಾತಕಿ ದೇವಮಾನವ ಅವರನ್ನೇ ಕೋಟೆಯಾಗಿ ಬಳಸಿಕೊಂಡಿದ್ದ, ಪೊಲೀಸರಿಗೆ ಸವಾಲೊಡ್ಡಲು. ಇದಲ್ಲದೆ ಸಾಕಷ್ಟು ಆಯುಧ ಸಾಮಗ್ರಿಗಳನ್ನು ಹೊಂದಿದ್ದ. ಕೊನೆಗೂ ಈತ ಪೊಲೀಸರ ವಶಕ್ಕೆ ಸಿಕ್ಕಿ ಕಂಬಿ ಎಣಿಸುತ್ತಿರುವುದು ಬೇರೆ ವಿಷಯ. ಈ ದೇಶದ ಬಹುದೊಡ್ಡ ಯೋಗಗುರು, ಓಷಧ ವ್ಯಾಪಾರಿ ಬಾಬಾ ರಾಮದೇವ್ ಅತ್ಯಂತ ಶ್ರೀಮಂತ. ಭಾಜಪಗೆ ಬೇಕಾದ ಭೂಪ. ಈತನಿಗೆ ಈಗ ಮೋದಿ ಸರಕಾರ **'Z'** ವರ್ಗದ ರಕ್ಷಣೆ ನೀಡಿದೆ. ಬಂದೂಕುಧಾರಿಗಳು ಇವರನ್ನು ಸುರಕ್ಷಿತವಾಗಿ ಕಾಪಾಡುತ್ತಿದ್ದಾರೆ.

ಈ ಬಗೆಯ ಸುಳ್ಳುಗಾರ, ಮೋಸಗಾರ ದೇವಮಾನವರ ವಿಚಾರದಲ್ಲಿ ನಮ್ಮ ಕರ್ನಾಟಕ ರಾಜ್ಯವೇನೂ ಹಿಂದೆ ಬಿದ್ದಿಲ್ಲ. ಇವರೆಲ್ಲ ವೈಭವೋಪೇತ ಜೀವನ ನಡೆಸುತ್ತಿದ್ದು ಬಹುದೊಡ್ಡ ಆಶ್ರಮಗಳನ್ನು ಕಟ್ಟಿಕೊಂಡಿದ್ದಾರೆ. ಕನಕಪುರ ರಸ್ತೆಯಲ್ಲಿರುವ ರವಿಶಂಕರ ಗುರೂಜಿ ಆಶ್ರಮವನ್ನು ಒಮ್ಮೆ ಹೋಗಿ ನೋಡಿ ಬನ್ನಿ. ಆಗ ನಿಮಗೇ ಗೊತ್ತಾಗುತ್ತೆ ಅದರ ಶ್ರೀಮಂತಿಕೆ. ಈತ ಅಕ್ರಮವಾಗಿ ನೂರಾರು ಎಕರೆ ಜಮೀನನ್ನು ಒತ್ತುವರಿ ಮಾಡಿಕೊಂಡಿದ್ದಾನೆ ಎಂಬ ಆರೋಪವೂ ಇದೆ. ಈ ವಿಷಯದಲ್ಲಿ ಯಾರೇನೂ ಕಮ್ಮಿ ಇಲ್ಲ. ಈ ಕಾವಿಧಾರಿಗಳೆಲ್ಲ ಸರಕಾರದ ಕೃಪೆಯಿಂದ ರಿಯಾಯಿತಿಯಲ್ಲಿ ಜಮೀನು ಪಡೆದು ಆಶ್ರಮ ಕಟ್ಟಿಕೊಂಡು, ಸುತ್ತಮುತ್ತಲ ಜಮೀನುಗಳನ್ನು ಒತ್ತುವರಿ ಮಾಡಿಕೊಂಡು ಸಾಮ್ರಾಜ್ಯವನ್ನೇ ಕಟ್ಟಿಕೊಂಡಿದ್ದಾರೆ. ಬೇಕಿದ್ದರೆ ಬೆಳ್ಳೂರು ಕ್ರಾಸ್‌ನಲ್ಲಿರುವ ಶ್ರೀ ಸಂಸ್ಥಾನವನ್ನೂ ಹೋಗಿ ನೋಡಿ. ಈಗ ಕೆಲ ಕಪಟ ಸನ್ಯಾಸಿಗಳ ರಾಸಲೀಲೆ ಬಹಿರಂಗವಾಗುತ್ತಿದೆ. ಬಿಡದಿಯ ನಿತ್ಯಾನಂದ ಸ್ವಾಮಿ, ರಾಮಚಂದ್ರಾಪುರ ಮಠದ ಸ್ವಾಮಿ ರಾಘವಶ್ರೀ ಪ್ರಕರಣ ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಬಿಸಿ ಸುದ್ದಿ. ಇಂಥವರೆಲ್ಲ ಹೇಗೋ ಬಚಾವಾಗಿಬಿಡುತ್ತಾರೆ ಏನೇ ಮಾಡಿದರೂ. ಪುಟ್ಟಪರ್ತಿ ಸಾಯಿಬಾಬಾ ತೀರಿಕೊಂಡ ಮೇಲೆ ಏನಾಗಿದೆ ಎನ್ನುವುದು ಎಲ್ಲರಿಗೂ ಗೊತ್ತು. ಹಾಗಾಗಿ ಈ ಗುರೂಜಿಗಳಿಗೆಲ್ಲ ಜಯ ಇರುವವರೆಗೆ ಭಯವಿಲ್ಲ.

✶ ✶ ✶

ಮೋದಿ ಸರಕಾರ ಬಂದಮೇಲೆ ಶಾಲಾ ಮಕ್ಕಳಿಗೆ ರಜಾ ದಿನಗಳಿಗೆ ಕತ್ತರಿ ಬೀಳುತ್ತಿದೆ. ಸ್ವಾತಂತ್ರ್ಯ ದಿನಾಚರಣೆ, ಗಣತಂತ್ರ ದಿನಾಚರಣೆ ಮುಂತಾದವುಗಳಲ್ಲಿ ಕಡ್ಡಾಯವಾಗಿ ಪಾಲ್ಗೊಳ್ಳುತ್ತಿರುವ ಇವರಿಗೆ ಹೊಸ ಹೊಸ ದಿನಾಚರಣೆಗಳು ಬರುತ್ತಿವೆ. ಸಮವಸ್ತ್ರ ಧರಿಸಿ ಮಕ್ಕಳೆಲ್ಲ ರಜಾ ದಿನದಂದು ಶಾಲೆಗೆ ಹೋಗಬೇಕಾಗಿ ಬಂದಿದೆ. ಗಾಂಧಿ ಜಯಂತಿ ದಿನ ಪೊರಕೆ ಹಿಡಿಸಿ ಭಾರತವನ್ನು ಸ್ವಚ್ಛಗೊಳಿಸಿದ್ದಾಯಿತು. ಶಿಕ್ಷಕರ ದಿನಾಚರಣೆಯ ದಿನ ಶಾಲೆಗಳಿಗೆ ಹೋಗಿ ಮಕ್ಕಳು ಪ್ರಧಾನಿ ನಮೋ ಅವರ ಶುದ್ಧ ಹಿಂದಿ ಭಾಷಣವನ್ನು ಆಲಿಸಿ ಆಯಿತು. ಈಗ ಕ್ರಿಸ್ಮಸ್ ಹಬ್ಬದ ದಿನ ಘನವಾದ ಆಡಳಿತೆಯ ದಿನ ಆಚರಿಸಿಯಾಯಿತು. ಅಂದು ಭಾಜಪದ ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿಯವರ ಜನ್ಮದಿನವಂತೆ. ಇದುವರೆಗೆ ಅದು ಭಾಜಪ ಪಕ್ಷಕ್ಕೆ ಸೀಮಿತವಾಗಿತ್ತು. ಇನ್ನೂ ಏನೇನು ಆಚರಣೆಗಳು ಜಾರಿಗೆ ಬರುತ್ತೋ! ಸದ್ಯಕ್ಕಂತೂ ಗಾಂಧಿ ಕೊಲೆಗೈದ ನಾಥುರಾಮ್ ಗೋಡ್ಸೆ ದಿನಾಚರಣೆ ಇಲ್ಲ.



ಸಂಪಾದಕೀಯ

# ಹೊಸ ವರ್ಷಕ್ಕೆ, ಹಳೆಯ ಕನಸುಗಳೊಂದಿಗೆ

'ನೆಮ್ಮದಿಯ ನಾಳೆ ನಮ್ಮದು' ಎಂಬ ಕನಸಿನೊಂದಿಗೆ 'ಹೊಸತು' ಹದಿನಾರನೇ ವರ್ಷಕ್ಕೆ ಕಾಲಿಟ್ಟಿದೆ. ಜನಪರ ಚಿಂತನೆ, ವೈಚಾರಿಕ ಮನೋಭಾವ, ಸಮ ಸಮಾಜದ ಆಶಯಗಳನ್ನು ಹೊತ್ತು ನಿರಂತರವಾಗಿ ಪ್ರಕಟವಾಗುತ್ತಿರುವ ಪತ್ರಿಕೆಯ ಯಶಸ್ಸಿಗೆ ಕಾರಣರಾಗಿರುವ ನಾಡಿನ ಪ್ರಗತಿಪರ ಚಿಂತನೆಯ ಓದುಗರಿಗೂ, ಲೇಖಕರಿಗೂ, ಇಂಥ ದುಬಾರಿ ಕಾಲದಲ್ಲೂ ಲಾಭ–ಹಾನಿಯನ್ನು ಲೆಕ್ಕಿಸದೆ ನಿರಂತರವಾಗಿ ಪ್ರಕಟಿಸುತ್ತಿರುವ ನವಕರ್ನಾಟಕ ಪ್ರಕಾಶನದವರಿಗೂ, ಜಾಹೀರಾತುದಾರರಿಗೂ 'ಹೊಸತು' ಸಂಪಾದಕೀಯ ಮಂಡಲಿಯಿಂದ ಹೊಸ ವರ್ಷದ ಶುಭಾಶಯಗಳು.

'ಹೊಸ ವರ್ಷದ ಶುಭಾಶಯಗಳು' ಎನ್ನುವುದು ಮೇಲುನೋಟಕ್ಕೆ ಒಂದು ಸರಳವಾದ ವಾಕ್ಯವಾದರೂ ಅದು ಪ್ರತಿ ಹೊಸ ವರ್ಷದ ಸಂದರ್ಭದಲ್ಲಿ ವಿವಿಧ ರೀತಿಯ ಭಾವ–ಭಾಷೆಯೊಂದಿಗೆ ವಿಶ್ವದ ಕೋಟ್ಯಂತರ ಜನರ ಮಧ್ಯೆ ವಿನಿಮಯಗೊಳ್ಳುತ್ತದೆ. ಹೀಗೆ 'ಶುಭಾಶಯಗಳನ್ನು' ಹೇಳುವ, ಕೇಳುವ ಎಲ್ಲರ ಮನಸ್ಸಿನಲ್ಲಿ ಹಳೆಯ ವರ್ಷದಲ್ಲಾದ ಗಾಯಗಳನ್ನು ಮರೆತು ಹೊಸ ವರ್ಷವನ್ನು 'ನೆಮ್ಮದಿ'ಯ ವರ್ಷವನ್ನಾಗಿಸುವ ಬಯಕೆಗಳಿರುತ್ತವೆ. ಇಂಥ ಅಪೇಕ್ಷಣೀಯ ಬಯಕೆಗಳು ಯಾಂತ್ರಿಕವಾಗಿ ಈಡೇರುವುದಿಲ್ಲ. ಅದಕ್ಕೆ ಪೂರಕವಾದ ಪ್ರಯತ್ನಗಳೂ ಬೇಕಾಗುತ್ತವೆ. ಅದರಲ್ಲೂ ಮಾನವ ಸಮಾಜದ ನೆಮ್ಮದಿಯನ್ನು ತಮ್ಮ ಸ್ವಾರ್ಥಕ್ಕಾಗಿ ಕದಡುವ ಶಕ್ತಿಗಳಿದ್ದಾಗ ನೆಮ್ಮದಿಯ ಬದುಕು ಕಂಡುಕೊಳ್ಳುವ ಮನಸುಗಳು ಪ್ರಜ್ಞಾಪೂರ್ವಕವಾಗಿ, ಸಂಘಟಿತವಾಗಿ ಪ್ರಯತ್ನಿಸಬೇಕಾಗುತ್ತದೆ. ಅಂಥ ಕೆಲಸದಲ್ಲಿ ಒಂದು ಸಣ್ಣ ಜವಾಬ್ದಾರಿಯನ್ನು 'ಹೊಸತು' ನಿರ್ವಹಿಸಲಿ ಎಂಬ ಆಶಯದಿಂದ ಕಳೆದ ಹದಿನೈದು ವರ್ಷಗಳಿಂದ ಪತ್ರಿಕೆ ಪ್ರಕಟವಾಗುತ್ತಿದೆ. ಇಂಥ ಪ್ರಯತ್ನಕ್ಕೆ ಸಹಕರಿಸಿದ ಎಲ್ಲರಿಗೂ ವಂದಿಸುತ್ತ 'ಹೊಸತು' ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಜನಪರ ಚಿಂತಕರನ್ನೂ, ನೆಮ್ಮದಿಯನ್ನರಸುವ ಓದುಗರನ್ನೂ ಒಳಗೊಳ್ಳಲಿ ಎಂಬ ಬಯಕೆಯಿಂದ ಜನವರಿ ೨೦೧೫ರ ವಿಶೇಷ ಸಂಚಿಕೆಯನ್ನು ಓದುಗರ ಕೈಗಿಡುತ್ತಿದ್ದೇವೆ.

✶ ✶ ✶

ಹೊಸ ವರ್ಷಕ್ಕೆ ಹಳೆಯ ಕನಸುಗಳೊಂದಿಗೆ ಮುನ್ನಡೆಯಬೇಕಾಗಿದೆ. ಇದರರ್ಥ ಕಳೆದ ವರ್ಷ ಏನೂ ಸಾಧನೆಯಾಗಲೇ ಇಲ್ಲ ಎಂದು ಅರ್ಥವಲ್ಲ. ಜನತೆಯ ವೈಯಕ್ತಿಕ ಬದುಕಿನಲ್ಲಿ ಹಲವಾರು ಯಶಸ್ಸುಗಳೂ, ಸಂತೋಷಗಳೂ ಇರಬಹುದು. ಆದರೆ ಸಾಮಾಜಿಕ ಜೀವನದಲ್ಲಿ ಕಟ್ಟಿಕೊಂಡ ನೆಮ್ಮದಿಯ ಬದುಕಿನ ಕನಸುಗಳು ಹಾಗೇ ಉಳಿದಿವೆ. ೨೦೧೪ಅನ್ನು ದಾಟಿ ಬರುವಾಗ ಹೊಸ್ತಿಲಲ್ಲಿ ಹೆಣಗಳನ್ನು ದಾಟಿಕೊಂಡು ಬರಬೇಕಾದ ಭಯಾನಕ ಸ್ಥಿತಿ ಇತ್ತು. ಕಳೆದ ವರ್ಷದ ಡಿಸೆಂಬರ್ ೧೬ರಂದು ಪಾಕಿಸ್ತಾನದ ಪೆಶಾವರದಲ್ಲಿ ಭಯವಾಹಕರಾದ ತಾಲಿಬಾನಿಗಳು ೧೪೧ ಜನರನ್ನು ನಿರ್ದಯವಾಗಿ ಕೊಂದುಹಾಕಿದರು. ಅದರಲ್ಲಿ ೧೩೨ ಶಾಲಾ ಮಕ್ಕಳು ('ಭಯೋತ್ಪಾದಕರು' ಶಬ್ದದ ಬದಲಿಗೆ 'ಭಯವಾಹಕರು' ಎಂಬ ಶಬ್ದ ಬಳಸುತ್ತಿದ್ದೇನೆ). ಇದು ಪಕ್ಕದ ದೇಶದ ಸಂಗತಿ ಎಂದು ಕೆಲವರು ಭಾವಿಸಬಹುದು. ಅಂಥ ಭಯವಾಹಕರು ನಮ್ಮ ದೇಶವನ್ನೂ ಒಳಗೊಂಡು ವಿಶ್ವದಲ್ಲೆಲ್ಲ ಹರಡಿದ್ದಾರೆ. ಪೆಶಾವರದಲ್ಲಿ ಉಗ್ರರು ನಡೆಸಿದ ಶಾಲಾ ಮಕ್ಕಳ ಮಾರಣಹೋಮಕ್ಕೂ, ಅಸ್ಸಾಂನಲ್ಲಿ ೮೧ ಜೀವಗಳನ್ನು ಬಲಿ ತೆಗೆದುಕೊಂಡ ಬೋಡೊ ಪ್ರತ್ಯೇಕತಾವಾದಿ (ಎನ್.ಡಿ.ಎಫ್.ಬಿ.) ಸಂಘಟನೆಯವರು ನಡೆಸಿದ ಆದಿವಾಸಿಗಳ ಹತ್ಯಾಕಾಂಡ, ಆದಿವಾಸಿಗಳ ಪ್ರತಿದಾಳಿಗೂ ವ್ಯತ್ಯಾಸವೇನೂ ಇಲ್ಲ. ಬಹುತೇಕ ಅಮಾಯಕರು ಬಲಿಯಾಗಿದ್ದಾರೆ. ಇದು ದೂರದ ವಿಷಯವಾಯಿತು. ಬೆಂಗಳೂರು ನಗರದಲ್ಲಿ ಚರ್ಚ್ ಸ್ಟ್ರೀಟ್‌ನಲ್ಲಿ ಸಿಡಿದ ಸ್ಫೋಟಕ ಒಬ್ಬ ಮಹಿಳೆಯನ್ನು ಬಲಿ ಪಡೆದು ಕೆಲವರನ್ನು ಗಾಯಾಳುಗಳನ್ನಾಗಿ ಮಾಡಿತು. ಇದು ಹಳೆಯ ವರ್ಷದಿಂದ ಹೊಸ ವರ್ಷಕ್ಕೆ ದಾಟುವಾಗ ಉರುಳಿದ ಅಮಾಯಕರ ಸಾವಿನ ವಿಷಯ. ಕಳೆದ ವರ್ಷ ಶುಭಾಶಯಗಳನ್ನು ವಿನಿಮಯ ಮಾಡಿಕೊಂಡು ತಮ್ಮದಲ್ಲದ ತಪ್ಪಿಗೆ, ಭಯವಾಹಕರ, ಉಗ್ರಗಾಮಿಗಳ, ಪ್ರತ್ಯೇಕತಾವಾದಿಗಳ, ಕೋಮುವಾದಿಗಳ, ಸಾಮ್ರಾಜ್ಯ ವಿಸ್ತರಣಾವಾದಿಗಳ ರಕ್ತದಾಹಕ್ಕೆ ಸಾಯಬಾರದ ವಯಸ್ಸಿನಲ್ಲಿ ವಿಶ್ವದಲ್ಲಿ ಸಾವನ್ನಪ್ಪಿದ ಸಾವಿರಾರು ಜನರ ಬದುಕು ಅಂತ್ಯಗೊಂಡಿದೆ. ಇಲ್ಲಿ ಯಾರು ಯಾವ ಕಾರಣಕ್ಕೆ ಮಾರಣಹೋಮಗಳನ್ನು ಮಾಡಿದರು ಎನ್ನುವುದಕ್ಕಿಂತ ನಿಷ್ಪಾಪಿ ಜನ ಪ್ರಾಣ ಕಳೆದುಕೊಂಡದ್ದು ಮಾನವಕುಲದ ನೆಮ್ಮದಿಯನ್ನು ಕದಡಿದೆ. ಇಲ್ಲಿ ಸಾವಿಗೊಳಗಾದ ಅಮಾಯಕರು ಒಂದು ಸುಂದರ ಬದುಕಿಗಾಗಿ ಪರಿತಪಿಸಿದವರು. ಅವರಿಗೆ ಸಾಮ್ರಾಜ್ಯಕ್ಕಿಂತಲೂ, ಧರ್ಮಕ್ಕಿಂತಲೂ, ಜಾತಿಗಿಂತಲೂ, ಊಟ, ವಸತಿ, ಉದ್ಯೋಗ, ಶಿಕ್ಷಣ, ಆರೋಗ್ಯದಂಥ ಮೂಲಭೂತ ಅವಶ್ಯಕತೆಗಳು ಮುಖ್ಯ. ಆದರೆ ಯಾವುದೇ ಧರ್ಮದ ಮತಾಂಧರಿಗೆ, ಸಾಮ್ರಾಜ್ಯಶಾಹಿಗಳಿಗೆ ಜನರನ್ನು ಬಲಿಕೊಟ್ಟಾದರೂ ಜಗತ್ತನ್ನು ಜಯಿಸಬೇಕೆಂಬ ಉನ್ಮಾದ. ಈ ಉನ್ಮಾದದ ಹಿಂದೆ ಜಗತ್ತಿನ ಸಂಪತ್ತಿನ ಮೇಲೆ ಯಜಮಾನಿಕೆ, ಮತ್ತು ಅದನ್ನು ಲೂಟಿ ಮಾಡುವ ದುರಾಸೆ ತುಂಬಿದೆ. ಅದಕ್ಕಾಗಿ ತಾಲಿಬಾನಿಗಳು ಇಸ್ಲಾಂ ಧರ್ಮದವರಾದರೂ ಪಾಕಿಸ್ತಾನದ ಮುಸ್ಲಿಂ ಮಕ್ಕಳ ಮಾರಣಹೋಮ ನಡೆಸಲು ಹೇಸುವುದಿಲ್ಲ. ಇಂದು ಅಫ್ಘಾನಿಸ್ತಾನ, ಇರಾಕ್, ಸಿರಿಯಾ ಮುಂತಾದ ಪ್ರದೇಶಗಳಲ್ಲಿ ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಹತ್ಯಾಕಾಂಡಗಳು ಅವರ ಸಾಮ್ರಾಜ್ಯ ಸ್ಥಾಪನೆಯ ಗುರಿ ಹೊಂದಿವೆ ಎಂಬುದನ್ನು ಗಮನಿಸಬೇಕು. ಇಂದು ಇಸ್ರೇಲ್ ಪ್ಯಾಲಸ್ಟೈನ್ ದೇಶದ ಮೇಲೆ ದಾಳಿ ನಡೆಸಿ ಸಾವಿರಾರು ಜನರ ಸಾವಿಗೆ, ಲಕ್ಷಾಂತರ ಜನರ ನಿರ್ವಸತಿತನಕ್ಕೆ ಕಾರಣವಾಗಿದ್ದೂ ಸಾಮ್ರಾಜ್ಯ ಸ್ಥಾಪನೆಗಾಗಿಯೇ.

ಸಾಮ್ರಾಜ್ಯ ಸ್ಥಾಪನೆಗಾಗಿ ವ್ಯವಸ್ಥಿತ ಮಾರಣಹೋಮಗಳು ನಡೆದದ್ದಕ್ಕೆ ರಕ್ತರಂಜಿತ ಇತಿಹಾಸವಿದೆ. ಸಾಮ್ರಾಜ್ಯಶಾಹಿ ದೇಶಗಳ ಗೂಢಚಾರಿ ಸಂಸ್ಥೆಗಳು ತಮ್ಮ ಪ್ರಭುತ್ವದ ಹಿತಕ್ಕಾಗಿ ಇತರ ದೇಶಗಳಲ್ಲಿ ಮಾರಣಹೋಮ ನಡೆಸುವ, ಮತಾಂಧ, ಪ್ರತ್ಯೇಕತಾವಾದಿ, ಸಮಾಜಘಾತಕ ಶಕ್ತಿಗಳನ್ನು ಸೃಷ್ಟಿಸುವ, ಬೆಂಬಲಿಸುವ ಕೆಲಸವನ್ನು ವ್ಯವಸ್ಥಿತವಾಗಿ ಮಾಡುತ್ತ ಬಂದಿವೆ. ಮೊದಲ ಜಾಗತಿಕ ಯುದ್ಧದ ಮುಂಚೆಯೇ ಇಂಥ ಚಟುವಟಿಕೆಗಳ ನೇತೃತ್ವವನ್ನು ಬ್ರಿಟಿಷ್ ಸಾಮ್ರಾಜ್ಯವಾದಿ ಗುಪ್ತಚರ ಮಾಹಿತಿ ಸೇವಾ ವಿಭಾಗ (ಎಸ್.ಐ.ಎಸ್.) ವಹಿಸಿಕೊಂಡಿತ್ತು. ಬ್ರಿಟಿಷ್ ಸಾಮ್ರಾಜ್ಯದ ಪರವಾಗಿ ವಿಶ್ವದ ಯಾವುದೇ ಭಾಗದಲ್ಲಿ ಭಯವಾಹಕ ಚಟುವಟಿಕೆ, ಬುಡಮೇಲು ಕೃತ್ಯಗಳನ್ನು ವ್ಯವಸ್ಥಿತವಾಗಿ ಮಾಡುತ್ತಿತ್ತು. ಆದರೆ ಎರಡನೇ ಜಾಗತಿಕ ಯುದ್ಧದ ಹೊತ್ತಿಗೆ ಎಸ್.ಐ.ಎಸ್.ಗಿಂತಲೂ ಪ್ರಬಲವಾದ, ವ್ಯವಸ್ಥಿತವಾದ, ಕ್ರೂರವಾದ, ವಿಶ್ವದಾದ್ಯಂತ ಜಾಲಹೊಂದಿದ ಅಮೆರಿಕದ ಗುಪ್ತಚರ ಸಂಸ್ಥೆ (ಸಿ.ಐ.ಎ. – ಸೆಂಟ್ರಲ್ ಇಂಟೆಲಿಜನ್ಸ್ ಏಜೆನ್ಸಿ) ಜಗತ್ತಿನ ಎಲ್ಲ ಸಾಮ್ರಾಜ್ಯಶಾಹಿ ದೇಶಗಳ ಗೂಢಚಾರ ಸಂಸ್ಥೆಗಳಿಗೆ ನಾಯಕತ್ವ ಕೊಡುವ ಹಂತಕ್ಕೆ ಬೆಳೆದಿತ್ತು. ಎರಡನೇ ಜಾಗತಿಕ ಯುದ್ಧದ ನಂತರ ಮೊದಲು ಅಮೆರಿಕದ ಸಿ.ಐ.ಎ. ವಿರುದ್ಧ ಕಾರ್ಯಾಚರಣೆ ಮಾಡಿದ ನಾಝಿಗಳ ಗೂಢಚಾರ ಸಂಸ್ಥೆ ಗೆಸ್ಟಾಪೊ ಹಾಗೂ ಜಪಾನ್‌ನ ಗೂಢಚಾರ ಸಂಸ್ಥೆಗಳೂ ಸಿ.ಐ.ಎ.ಯ ಆಜ್ಞಾವರ್ತಿಗಳಾದವು. ಅಲ್ಲಿಂದ ಅಮೆರಿಕದ ಕೇಂದ್ರ ಗೂಢಚಾರ ಸಂಸ್ಥೆ (ಸಿ.ಐ.ಎ.) ಜಗತ್ತಿನ ಎಲ್ಲ ಬುಡಮೇಲು ಕೃತ್ಯಗಳಿಗೆ, ಸ್ಟೇಟ್ ಟೆರರಿಸಂಗೆ, ತನ್ನ ಹಿತಾಸಕ್ತಿಗಳಿಗೆ ವಿರುದ್ಧವಾದ ದೇಶಗಳ ಅಧ್ಯಕ್ಷರ ಕೊಲೆಗೆ, ಅನ್ಯದೇಶಗಳ ಆಂತರಿಕ ದಂಗೆಗಳಿಗೆ ಮತ್ತು ಆ ದೇಶಗಳ ಮೇಲೆ ಅಮೆರಿಕ ಹಾಗೂ ನ್ಯಾಟೋ ಕೂಟಗಳ ದಾಳಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸೂತ್ರ, ತರಬೇತಿ, ಧನಸಹಾಯ ಒದಗಿಸತೊಡಗಿತು. ೧೯೫೩ರ ಇರಾನ್‌ನ ಪ್ರಧಾನಿ ಮೊಹಮ್ಮದ್ ಮೊಸಾದೆಕ್‌ರನ್ನು ಅಧಿಕಾರದಿಂದ ಉರುಳಿಸುವಿಕೆ, ೧೯೫೪ರಲ್ಲಿ ಈಜಿಪ್ಟಿನ ಅಧ್ಯಕ್ಷ ನಾಸೆರ್ ಕೊಲೆ ಯತ್ನ, ೧೯೫೯ರಲ್ಲಿ ಶ್ರೀಲಂಕಾ ಪ್ರಧಾನಿ ಸೋಲೊಮನ್ ಬಂಡಾರ



# ಸಂಪಾದಕೀಯ

ನಾಯಿಕೆ ಕೊಲೆ, ೧೯೬೧ರಲ್ಲಿ ಕಾಂಗೋದ ಪ್ರಧಾನ ಮಂತ್ರಿ ಪಾಟ್ರಿಸ್ ಲುಮುಂಬಾ ಕೊಲೆ, ಲ್ಯಾಟಿನ್ ಅಮೆರಿಕದ ಕ್ರಾಂತಿಕಾರಿ ಚೆ ಗುವೆರಾ ಕೊಲೆಗೆ ಸೂತ್ರ ರಚನೆ, ೧೯೭೩ರಲ್ಲಿ ಚಿಲಿ ದೇಶದ ಚುನಾಯಿತ ರಾಷ್ಟ್ರಾಧ್ಯಕ್ಷ ಸಾಲ್ವಡಾರ್ ಅಲೆಂಡೆ ಕೊಲೆ, ಕ್ಯೂಬಾದ ನಾಯಕ ಫಿಡೆಲ್ ಕ್ಯಾಸ್ಟ್ರೋ ಕೊಲೆ ಯತ್ನಗಳು ಹೀಗೆ ನೂರಾರು ದೇಶಗಳಲ್ಲಿ ಅಮೆರಿಕದ ಸಾಮ್ರಾಜ್ಯಶಾಹಿಗಳಿಗೆ ಪ್ರತಿಕೂಲವಾಗಿದ್ದ, ಸ್ವಾತಂತ್ರ್ಯಪ್ರಿಯ ದೇಶಗಳ ನಾಯಕರ ಕೊಲೆಗೆ, ಕೊಲೆ ಯತ್ನಕ್ಕೆ ಸಿ.ಐ.ಎ. ಪಾತ್ರಧಾರಿ ಹಾಗೂ ಸೂತ್ರಧಾರಿಯಾಗಿತ್ತು. ಮತ್ತು ಇಂಥ ದೇಶಗಳಲ್ಲಿ ಭಯದ ವಾತಾವರಣ ಉಂಟುಮಾಡಲು ಭಯವಾಹಕ ಸಂಘಟನೆಗಳನ್ನು ಹುಟ್ಟುಹಾಕಿ ಅವರಿಗೆ ತರಬೇತಿ, ಶಸ್ತ್ರಾಸ್ತ್ರ,  ಹಣಕಾಸು ಒದಗಿಸಿದ್ದು ಕುಖ್ಯಾತ ದೇಶ ಅಮೆರಿಕ ಮತ್ತು ಅದರ ಸಿ.ಐ.ಎ. ಸಂಸ್ಥೆ. ಇರಾನ್‌ನ ಶಹಾ ದೊರೆಯ ರಹಸ್ಯ ಪೊಲೀಸ್ ಪಡೆ ೧೯೭೮ರಲ್ಲಿ ೩೦೦೦ಕ್ಕಿಂತ ಹೆಚ್ಚು ಜನರನ್ನು ಕೊಲೆ ಮಾಡಿತ್ತು. ಅದಕ್ಕೆ ಸಿ.ಐ.ಎ. ತರಬೇತಿ ಕೊಟ್ಟ ಮಾಹಿತಿಗಳು ಬಹಿರಂಗವಾದವು. ಹಾಗೆಯೇ ಟರ್ಕಿಯ ಗ್ರೇವುಲ್‌ವ್ಸ್, ಇಸ್ರೇಲ್‌ನ ಮೊಸಾದ್, ಅಂಗೋಲದ ಯಾನಿಟಾ ಮಾತ್ರವಲ್ಲ ಇಂದು ಬೆಳೆದು ನಿಂತಿರುವ ಮುಸ್ಲಿಂ ಬ್ರದರ್‌ಹುಡ್ ಸಂಘಟನೆಯನ್ನೂ ತರಬೇತಿ ಕೊಟ್ಟು ಬೆಳೆಸಿದ್ದು ಇದೇ ಸಿ.ಐ.ಎ. ಅಮೆರಿಕದ ಹಿತಾಸಕ್ತಿಗೆ ವಿರುದ್ಧವಾಗಿದ್ದ ಅಫ್ಘಾನಿಸ್ತಾನ ಸರಕಾರವನ್ನು ಬುಡಮೇಲು ಮಾಡಲು ಮತಾಂಧ ಸಂಘಟನೆಗಳಿಗೆ ಪಾಕಿಸ್ತಾನದಲ್ಲಿ ಸಿ.ಐ.ಎ. ತರಬೇತಿ ಕೇಂದ್ರಗಳನ್ನೇ ಆರಂಭಿಸಿತ್ತು. ಅದರ ಕೇಂದ್ರ ಕಾರ್ಯಾಲಯ ಇಂದು ಶಾಲಾ ಮಕ್ಕಳ ಮೇಲೆ ದಾಳಿಮಾಡಿದ ಪೆಶಾವರ. ಅಲ್ಲಿ ಅಮೆರಿಕದ ರಣತಂತ್ರಗಳ ತರಬೇತಿ ಪಡೆದ ಉಗ್ರಗಾಮಿಗಳೇ  ಇಂದು ವಿವಿಧ ಸಂಘಟನೆಗಳ ಹೆಸರಿನಲ್ಲಿ ಉಪಖಂಡದಲ್ಲಿ ಪ್ರತಿನಿತ್ಯ ಮಾರಣಹೋಮ ನಡೆಸಿದ್ದಾರೆ. ಅಮೆರಿಕದ ವಾಣಿಜ್ಯ ಸಂಕೀರ್ಣದ ಮೇಲೆ ದಾಳಿ ನಡೆಸಿದವರೂ ಅವರೇ. ಇಂದು ಪಾಕಿಸ್ತಾನ ಬಿತ್ತಿದ್ದನ್ನು ಬೆಳೆಯುತ್ತಿದೆ. ಒಟ್ಟಿನಲ್ಲಿ ಸಾಮ್ರಾಜ್ಯಶಾಹಿಗಳ ಈ ಭಯವಾಹಕ, ಹತ್ಯಾಕಾಂಡ, ಬುಡಮೇಲು ಕೃತ್ಯಗಳಿಗೆ ಎರಡನೇ ಜಾಗತಿಕ ಮಹಾಯುದ್ಧದಲ್ಲಿ ಪ್ರಾಣ ಕಳೆದುಕೊಂಡವರಿಗಿಂತಲೂ ಹೆಚ್ಚು ಸಾವುನೋವುಗಳು ಸಂಭವಿಸಿವೆ, ಸಂಭವಿಸುತ್ತಲೇ ಇವೆ. ಈ ಪಿತೂರಿಗಳಿಗೆ ವಿಶ್ವದ ಎಲ್ಲ ದೇಶಗಳ, ಎಲ್ಲ ಧರ್ಮಗಳ ಅಮಾಯಕ ಜನತೆ ಒಂದಿಲ್ಲಾ ಒಂದು ರೀತಿಯಲ್ಲಿ, ರೂಪದಲ್ಲಿ ಬಲಿಯಾಗಿದ್ದಾರೆ.

ಮೇಲಿನ ಎಲ್ಲ ವಿವರಗಳನ್ನು ಕೊಡುವ ಉದ್ದೇಶವೆಂದರೆ ಸಿ.ಐ.ಎ. ಅಮೆರಿಕದ ಅಧಿಕೃತ ಸರ್ಕಾರಿ ಸಂಸ್ಥೆಯಾಗಿ ವಿಶ್ವದಲ್ಲಿ ನಡೆಸಿದಂತಹ ಕುತಂತ್ರಗಳನ್ನು, ಘೋರಕೃತ್ಯಗಳನ್ನು ಆರ್.ಎಸ್.ಎಸ್. ಭಾರತದಲ್ಲಿ ಬಿ.ಜೆ.ಪಿ.ಯನ್ನು ಅಧಿಕಾರಕ್ಕೆ ತರಲು, ಪ್ರತಿರೋಧವನ್ನು ಹೊಸಕಿಹಾಕಲು ನಡೆಸಿದೆ,  ಈಗಲೂ ನಡೆಸುತ್ತಿದೆ. ಸ್ವಾತಂತ್ರ್ಯ ಬಂದ ಮರುವರ್ಷವೇ ಗಾಂಧೀಜಿಯನ್ನು ಕೊಲ್ಲುವುದರ ಮೂಲಕ ಅದರ ಪ್ರಮುಖ ಕಾರ್ಯಾಚರಣೆ ಆರಂಭವಾಯಿತು. ನಂತರ ಬಾಬರಿ ಮಸೀದಿ ಧ್ವಂಸ, ಗುಜರಾತ್ ಹತ್ಯಾಕಾಂಡಗಳು ಪ್ರಮುಖ ಕಾರ್ಯಾಚರಣೆಗಳಾದರೆ ಪ್ರತಿನಿತ್ಯ ದೇಶದಲ್ಲಿ ಒಂದಲ್ಲಾ ಒಂದು ಸ್ಥಳದಲ್ಲಿ ಮತೀಯ ದ್ವೇಷ, ಸಂಘರ್ಷ ಹುಟ್ಟಿಸುವ ಕ್ರಿಯೆಯಲ್ಲಿ ಆರ್.ಎಸ್.ಎಸ್. ನಿರತವಾಗಿರುತ್ತದೆ. ಇದೆಲ್ಲದರ ಪರಿಣಾಮ ಇಂದು ಅಭಿವೃದ್ಧಿ ಮುಖವಾಡದಿಂದ ಅಧಿಕಾರದ ಚುಕ್ಕಾಣಿ ಹಿಡಿದಿದೆ. ಈಗ ಆರ್.ಎಸ್.ಎಸ್. ಘೋಷಣೆಗಳು ಪ್ರಕಾಶಿಸುತ್ತಿವೆ. ಮರಳಿ ಮನೆಗೆ (ಘರ್ ವಾಪಸಿ), ಲವ್ ಜಿಹಾದ್, ಭೂಮಿಯ ಮೇಲಿರುವ ಎಲ್ಲರೂ ಹಿಂದೂಗಳು, ಗೋಡ್ಸೆ ಮಂದಿರ, ಬಹೂ ಲಾವೋ ಬೇಟಿ ಬಚಾವೋ ಇವೆಲ್ಲ ಅಭಿವೃದ್ಧಿಯ ಮಾತನಾಡಿ ಅಧಿಕಾರಕ್ಕೆ ಬಂದ ಸಂಘಪರಿವಾರದ ಘೋಷಣೆಗಳು. ಅಮೆರಿಕದ ಪರವಾದ ದಾಳಿಕೋರರನ್ನು ಜೇಮ್ಸ್ ಬಾಂಡ್ ಎಂದು ಕರೆದ ರೀತಿಯಲ್ಲಿಯೇ ಇಂದು ಗಾಂಧಿ ಹಂತಕ ನಾಥುರಾಮ್ ಗೋಡ್ಸೆಯನ್ನು ಹುತಾತ್ಮ ಪಟ್ಟಕ್ಕೇರಿಸಲಾಗುತ್ತಿದೆ. ಅವನಿಗಾಗಿ ಮಂದಿರ ಕಟ್ಟುವ ಮಾತು. ಮುಂದೊಂದು ದಿನ ದೀನ್ ದಯಾಳ ಉಪಾಧ್ಯಾಯರಿಗೆ ಕೊಟ್ಟಂತೆ ಗೋಡ್ಸೆಗೂ ಭಾರತರತ್ನ ಪ್ರಶಸ್ತಿ ಘೋಷಿಸಿದರೂ ಆಶ್ಚರ್ಯವಿಲ್ಲ. ಈ ಎಲ್ಲ ಚರ್ಚೆಗಳೂ ಬಿ.ಜೆ.ಪಿ.ಯ ಮುಖ್ಯ ಕಾರ್ಯಸೂಚಿ ಅಲ್ಲ. ಜನ ಈ ವಿಷಯಗಳ ಮೇಲೆಯೇ ತಮ್ಮ ಚಿಂತನೆ, ಚರ್ಚೆ ಕೇಂದ್ರೀಕರಿಸುವಾಗ ಕೇಂದ್ರ ಸರಕಾರ ದೇಶದ ಸಂವಿಧಾನವನ್ನು, ಸಂವಿಧಾನದ ಆಶಯಗಳನ್ನು ಬಲಿಕೊಟ್ಟು ದೇಶವನ್ನು ಬಂಡವಾಳಗಾರರಿಗೆ ಮತ್ತು ಬಹುರಾಷ್ಟ್ರೀಯ ಕಂಪನಿಗಳಿಗೆ ಮಾರಿಕೊಳ್ಳುವುದು ಅದರ ಮುಖ್ಯ ಅಜೆಂಡಾ. ಈಗಾಗಲೇ ಕಾರ್ಮಿಕ ಕಾನೂನುಗಳಿಗೆ ತಿದ್ದುಪಡಿ ತಂದಿರುವುದರಿಂದ ಸಣ್ಣ ಕೈಗಾರಿಕೆಗಳು ಕಾರ್ಮಿಕ ಕಾನೂನಿನ ವ್ಯಾಪ್ತಿಯಿಂದ ಹೊರಬಂದು ಮಾಲೀಕರಿಗೆ ಲಾಭವಾದರೆ, ೪೫ ಲಕ್ಷ ಬಡಕಾರ್ಮಿಕರು ಯಾವುದೇ ಕಾನೂನಿನ ರಕ್ಷಣೆ ಇಲ್ಲದೆ ಬೀದಿಗೆ ಬೀಳುತ್ತಾರೆ. ಈಗ ದೇಶದ ಇಡೀ ರೈತ ಸಮುದಾಯವನ್ನು ಬೀದಿಗೆ ತಳ್ಳುವ ಭೂಸ್ವಾಧೀನಕ್ಕೆ ಸಂಬಂಧಿಸಿದ ಸುಗ್ರೀವಾಜ್ಞೆ ಬಂದಿದೆ. ಇಷ್ಟಕ್ಕೂ ಬಿ.ಜೆ.ಪಿ. ವ್ಯಾಪಾರಿಗಳ ಪಕ್ಷ. ಈಗ ಅದಕ್ಕೆ ವಿಶ್ವ ವ್ಯಾಪಾರ ಸಂಘಟನೆ (ಡಬ್ಲ್ಯೂ.ಟಿ.ಓ.), ಬಹುರಾಷ್ಟ್ರೀಯ ಕಂಪನಿಗಳ, ಆದಾನಿ, ಅಂಬಾನಿಗಳ ಹಿತಾಸಕ್ತಿ ಮುಖ್ಯ. ಅಮೆರಿಕಕ್ಕೆ ಮೊದಲು ತನ್ನ ಹಾಗೂ ವಿಶ್ವದ ಬಂಡವಾಳಶಾಹಿಗಳಿಗೆ ವಿಶ್ವವನ್ನು ಲೂಟಿ ಮಾಡುವ ಹುನ್ನಾರಕ್ಕೆ ಸಿ.ಐ.ಎ. ಅವಶ್ಯಕತೆ ಇತ್ತು. ಈಗ ಅದರ ಬಹುಪಾಲು ಕೆಲಸವನ್ನು ಭಾರತದಲ್ಲಿ ಆಡಳಿತಾರೂಢ ಬಿ.ಜೆ.ಪಿ.ಯೇ ಮಾಡುತ್ತಿದೆ. ಹಿಂದೆ ಮನಮೋಹನ ಸಿಂಗ್ ಅವರೂ ಇದೇ ಕೆಲಸ ಮಾಡಿದ್ದರು. ಆದರೆ ಒಡೆಯರಿಗೆ ಸಂಪೂರ್ಣ ತೃಪ್ತಿಯಾಗುವಂತೆ ಮಾಡಿರಲಿಲ್ಲ. ಅದಕ್ಕಾಗಿಯೇ ಮೋದಿ ಅಲೆ ವೃದ್ಧಿಸಲು ಕಳೆದ ಲೋಕಸಭಾ ಚುನಾವಣೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳು ೧೫,೦೦೦ ಕೋಟಿ ಹಣ ಬಿ.ಜೆ.ಪಿ. ಪರವಾಗಿ ಹೂಡಿವೆ ಎಂಬ ಮಾಹಿತಿ ಇದೆ. ಮೋದಿ ಅಧಿಕಾರಕ್ಕೆ ಬರುವ ಮುಂಚೆ ಅವರಿಗೆ ತಮ್ಮ ದೇಶ ಪ್ರವೇಶಕ್ಕೆ ನಿಷೇಧ ಹೇರಿದ್ದ ಅಮೆರಿಕ ಈಗ 'ಓಬಾಮೋದಿ' ಮಂತ್ರ ಜಪಿಸುತ್ತಿದೆ. ಮೋದಿ ಅಲ್ಲಿ ಹೋಗಿ 'ಹೂಡಬನ್ನಿ' ಎಂಬ ಆಹ್ವಾನ ಕೊಟ್ಟು ಬಂದಿದ್ದಾರೆ. ಅವರು ಬರಲು ಅಡ್ಡಿಯಾಗಿರುವ ನಮ್ಮ ಸಂವಿಧಾನ ಎಂಬ ಬಂಡೆಗಲ್ಲನ್ನು ಪುಡಿ ಮಾಡುತ್ತಿದ್ದಾರೆ. ಜನ ಇದರ ವಿರುದ್ಧ ಸಿಡಿದೇಳಬಾರದು, ಸಿಡಿದೆದ್ದವರನ್ನು ಸದೆಬಡಿಯಬೇಕು ಅದಕ್ಕಾಗಿ ಸಿ.ಐ.ಎ.ಗೆ ವಾಷಿಂಗ್‌ಟನ್‌ನಿಂದ ನಿರ್ದೇಶನ ಮಾಡಿದ ಹಾಗೆ ಆರ್.ಎಸ್.ಎಸ್. ಮತ್ತು ಸಂಘಪರಿವಾರಗಳಿಗೆ ನಾಗಪುರ ಹೆಡ್‌ಕ್ವಾರ್ಟರ್ಸ್ ನಿರ್ದೇಶನ ಮಾಡುತ್ತಿದೆ. ಅದಕ್ಕಾಗಿಯೇ ಪಾರ್ಲಿಮೆಂಟ್‌ನಲ್ಲಿ ಬಹುಮತ, ಸುಗ್ರೀವಾಜ್ಞೆ ಹೆಸರಿನಲ್ಲಿ ನಮ್ಮ ಸಂವಿಧಾನ ಪುಡಿಯಾಗುತ್ತಿದ್ದರೆ ಹೊರಗಡೆ ಪಿಕೆ ಸಿನಿಮಾ, ಲವ್ ಜಿಹಾದ್, ಗೋಡ್ಸೆ ದೇವಸ್ಥಾನ, ಮರಳಿ ಮನೆಗೆ ಕುರಿತು ಚರ್ಚೆ, ವಾದ, ಪ್ರತಿವಾದ, ಸಂವಾದ ಗಂಭೀರವಾಗಿ ನಡೆಯುತ್ತಿದೆ. ಇದು ಬಿ.ಜೆ.ಪಿ. ಆರ್.ಎಸ್.ಎಸ್. ತಯಾರಿಸಿರುವ ಕಾರ್ಯಸೂಚಿ.

ಹೊಸ ವರ್ಷದ ಸವಾಲುಗಳು ಗಂಭೀರವಾಗಿವೆ. ಹಳೆ ಕನಸುಗಳ ಜೊತೆ ಹೊಸ ಕನಸುಕಾಣುವ ಹಕ್ಕು ಪ್ರತಿಯೊಬ್ಬರಿಗಿದೆ. ಆದರೆ ಕನಸು ನನಸಾಗಿಸಲು ಪೂರಕ ವಾತಾವರಣ ಬೇಕಿದೆ. ಅದನ್ನು ನಾವೇ ನಿರ್ಮಿಸಿಕೊಳ್ಳಬೇಕಿದೆ. ಮತಾಂಧತೆ, ಜಾತೀಯತೆ, ಪ್ರತ್ಯೇಕತಾವಾದ ಇವೆಲ್ಲ ಸಾಮ್ರಾಜ್ಯ ಶಾಹಿಗಳು ತಮ್ಮ ಸುಲಿಗೆಗೆ ಪೂರಕವಾಗಲು ಹುಟ್ಟುಹಾಕಿ, ಬೆಂಬಲಿಸಿ ಬೆಳೆಸುವ ಕ್ರಿಯಾಯೋಜನೆಗಳು. ಅವರು ಅದನ್ನು ಮುಂದುವರಿಸುತ್ತಾರೆ. ಅದು ಅವರು ಪ್ರಜ್ಞಾಪೂರ್ವಕವಾಗಿ, ತಮ್ಮ ವರ್ಗ ಹಿತಾಸಕ್ತಿಗಾಗಿ ಮಾಡುವ ಕೆಲಸ. ಆದರೆ ಪ್ರಜೆಗಳು ಪ್ರಜ್ಞಾಪೂರ್ವಕವಾಗಿ, ಎಚ್ಚರದೊಂದಿಗೆ ಅದನ್ನು ಗಮನಿಸಿ ಪ್ರತಿರೋಧ ವ್ಯಕ್ತಪಡಿಸಬೇಕು. ಧರ್ಮದ ಹೆಸರಲ್ಲಿ ರಾಷ್ಟ್ರ ಕಟ್ಟಲು ಹೊರಟು ಧರ್ಮಾಂಧರಿಂದ ಅಪಾಯಕ್ಕೆ ಸಿಲುಕಿ, ಬಿತ್ತಿದ್ದನ್ನು ಬೆಳೆದು ಅನುಭವಿಸುತ್ತಿರುವ ಪಾಕಿಸ್ತಾನ ನಮಗೆ ಮಾದರಿಯಲ್ಲ. ನಮ್ಮ ನೆಲದ ಎಲ್ಲ ಜನತೆಯ ಬದುಕು ಸುಂದರವಾಗಬೇಕು, ಮನುಷ್ಯ ಘನತೆಯಿಂದ ಬದುಕಬೇಕು. ಕೊಲೆ, ಸುಲಿಗೆ, ಅಸಮಾನತೆ, ಅತ್ಯಾಚಾರವಿಲ್ಲದ ನಾಡು ಕಟ್ಟುವ ನಮ್ಮ ಕೆಲಸ ನಿರಂತರವಾಗಿರಲಿ. ವಾತಾವರಣ ಎಷ್ಟೇ ಪ್ರತಿಕೂಲವಾಗಿದ್ದರೂ ಮಾನವನ ಶಕ್ತಿಯ ಮೇಲೆ ನಂಬಿಕೆ ಇಡೋಣ. ನಮ್ಮ ನಮ್ಮ ನೆಲೆಯಲ್ಲಿ ಕಂಡ ಕನಸು ನನಸಾಗಿಸಲು ಯತ್ನಿಸೋಣ.



ಸಿದ್ಧನಗೌಡ ಪಾಟೀಲ.

# ಪರಿವಿಡಿ

# ಪರಿವಿಡಿ



---


***ಮುಖಚಿತ್ರ:*** ಮೋಹಿತ್ ವರ್ಮ ಅವರ ಕಲಾಕೃತಿ 'ಸಾಮರಸ್ಯ'

***ವಿನ್ಯಾಸ:*** ನವಕರ್ನಾಟಕ ವಿನ್ಯಾಸ

***ಈ ಸಂಚಿಕೆಯ ಚಿತ್ರಗಳ ಕಲಾವಿದರು:***
ಕಮಲಂ ಅರಸು, ತನು, ಶ್ರೀಹರಿ, ಷಣ್ಮುಖ, ವಿ. ಗೋಪಾಲ್
ವಿ. ಆರ್. ಸಿ. ಶೇಖರ್, ಜಿಎಂಬೊ, ಗೋಪಿ

***ಕಚೇರಿ ಸಹಕಾರ:*** ಜಿ. ವಿ. ತೇಜೋವತಿ






















 ಡಿಸೆಂಬರ್ ೨೦೧೪ರ 'ಹೊಸತು' ಕೈ ಸೇರಿದೆ. ಶ್ರೀಮತಿ ಎಚ್. ಆರ್. ಲೀಲಾವತಿಯವರ 'ಕಿನ್ನರ ಕಂಠದ ಕನ್ನಡ ಕೋಗಿಲೆ ಪಿ. ಕಾಳಿಂಗರಾವ್' ಲೇಖನ ಮತ್ತೊಮ್ಮೆ ಆ ಅಪೂರ್ವ ಗಾಯಕನ ಕಂಠಸಿರಿಯನ್ನು ನೆನಪಿಸಿಕೊಳ್ಳುವಂತೆ ಮಾಡಿತು. ಅವರ ಗಾಯನವನ್ನು ಕಛೇರಿಗಳಲ್ಲಿ ಕೇಳುವ ಸೌಭಾಗ್ಯ ನನಗೆ ಒದಗಿತ್ತು. ಆಗಿನ್ನೂ ನಾನು ಚಿಕ್ಕವಳಾದರೂ ಅವರು ಅಂದು ಹಾಡಿದ ಹಾಡುಗಳು ನನ್ನ ಮನಸ್ಸಿನಲ್ಲಿ ಇಂದಿಗೂ ಸ್ಥಿರವಾಗಿ ನಿಂತಿವೆ. ಸ್ವಯಂ ಅತ್ಯುತ್ತಮ ಗಾಯಕಿಯಾದ ಶ್ರೀಮತಿ ಎಚ್. ಆರ್. ಲೀಲಾವತಿಯವರಿಗೆ ನನ್ನ ಧನ್ಯವಾದಗಳು.

ಶ್ರೀಯುತ ನಾ. ದಿವಾಕರ ಅವರ 'ಗಂಗೆ ನೀನು ಸದಾ ಕೊಳಕಿ' ಲೇಖನ ನಮ್ಮ ಭ್ರಷ್ಟ ಸರ್ಕಾರಗಳ ಹಾಗೂ ಸಾರ್ವಜನಿಕರ ನಿರ್ಲಕ್ಷ್ಯವನ್ನು ಎತ್ತಿ ಹಿಡಿದಿದೆ. ಪರಿಸರ ಮಾಲಿನ್ಯ ನಿವಾರಣೆಯನ್ನು ಕುರಿತು ಏನೇ ಭಾಷಣ ಮಾಡಿದರೂ, ಏನೇ ಯೋಜನೆಗಳನ್ನು ಹಾಕಿಕೊಂಡರೂ ಅದು ಯಶಸ್ವಿಯಾಗಲು ಕೈಗಾರಿಕೋದ್ಯಮಿಗಳು ಹಾಗೂ ಪ್ರವಾಸಿಗರು ಈ ಕುರಿತು ಕಾಳಜಿವಹಿಸದಿದ್ದಲ್ಲಿ ಯಾವುದೂ ಉಪಯೋಗಕ್ಕೆ ಬರುವುದಿಲ್ಲ. ಎಲ್ಲರ ಕಣ್ತೆರೆಸುವಂತಹ ಲೇಖನವನ್ನು ಪ್ರಕಟಿಸಿದ್ದಕ್ಕೆ ವಂದನೆಗಳು.

*ಬೆಂಗಳೂರು* **ಬಿ. ಎಸ್. ಸರೋಜ**

 ಡಿಸೆಂಬರ್ ೨೦೧೪ರ ಹೊಸತು ಮಾಸಪತ್ರಿಕೆಗೆ ಡಾ॥ ಸಿದ್ದನಗೌಡ ಪಾಟೀಲರ ಸಂಪಾದಕೀಯ ಲೇಖನಕ್ಕೆ ಪೂರಕ ಅಭಿಮತ. ಮಹಾನ್ ವ್ಯಕ್ತಿಗಳ ಹುಟ್ಟಿದ ಹಬ್ಬ ಮತ್ತು ಗತಿಸಿದ ದಿನದಂದು ಆಚರಣೆ ಹೆಸರಿಗೆ ಮಾತ್ರ ನಡೆದಿದೆ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಗಾಂಧೀಜಿಯವರನ್ನು ನಿರ್ದಯೆಯಿಂದ ಕೊಲೆ ಮಾಡಿದ ಪಾತಕಿಗಳು. ಈಗ ಮೊಸಳೆಕಣ್ಣೀರು ಸುರಿಸಿ ಅವರ ಹೆಸರಿನಲ್ಲಿ ಸ್ವಚ್ಛ ಭಾರತ ದಿನವನ್ನಾಗಿ ಆಚರಿಸುತ್ತಿದ್ದಾರೆ.

ಭಾರತರತ್ನ ಡಾ॥ ಬಿ. ಆರ್. ಅಂಬೇಡ್ಕರ್‌ರವರು ದೀನದಲಿತರ ಉದ್ಧಾರಕ್ಕಾಗಲ್ಲದೆ ಇಡೀ ಸಮಾಜದ ಉದ್ಧಾರಕ್ಕಾಗಿ ಶ್ರಮಿಸಿದರು. ಅಂತಹ ಮಹಾಪುರುಷರ ಚಿಂತನೆಗಳ ಮೇಲೆ ಕಾನೂನುಬದ್ಧವಾಗಿ ದಾಳಿ ಮಾಡುತ್ತಿದ್ದಾರೆ. ಶೋಷಿತವರ್ಗಗಳಾದ ಕಾರ್ಮಿಕ, ದಲಿತ, ರೈತ ಮತ್ತು ಮಹಿಳೆಯವರನ್ನೊಳಗೊಂಡ ಎಲ್ಲ ಜಾತಿಗಳ ಉದ್ಧಾರಕ್ಕಾಗಿ ಹೋರಾಡಿದವರು ಡಾ॥ ಅಂಬೇಡ್ಕರ್ ಅವರು. ಮಹಾರಾಷ್ಟ್ರದ ರತ್ನಗಿರಿ, ಥಾಣೆ ಜಿಲ್ಲೆಗಳಲ್ಲಿ ರೈತರನ್ನು ಶೋಷಣೆ ಮಾಡುವ ಖೋತಿ ಪದ್ಧತಿ ಮತ್ತು ಮಧ್ಯವರ್ತಿಗಳ ಹಾವಳಿ ಜಾರಿಯಲ್ಲಿತ್ತು. ಸ್ವಾತಂತ್ರ್ಯಪೂರ್ವದಲ್ಲಿಯೇ ಮುಂಬಯಿ ಅಸೆಂಬ್ಲಿಯಲ್ಲಿ ಮಸೂದೆಯನ್ನು ತಂದು ಅವುಗಳ ರದ್ದತಿಗೆ ಕಾನೂನು ಬರಲು ಕಾರಣರಾದರು. ಮನುಷ್ಯ, ಪ್ರಾಣಿ ಎಲ್ಲ ಜೀವರಾಶಿಗಳು ಹುಟ್ಟಿದ ಮೇಲೆ ಜೀವಿಸುವ ಹಕ್ಕು ಪ್ರಕೃತಿದತ್ತವಾಗಿದೆ. ಇದನ್ನು ಕಸಿಯುವ ಹಕ್ಕು ಯಾವ ಶಕ್ತಿಗೂ ಇಲ್ಲ. ಹಾಗೆಯೇ ಕಾರ್ಮಿಕರ ಮುಷ್ಕರದ ಹಕ್ಕು ಕೂಡ. ಇದು ಅಂಬೇಡ್ಕರ್‌ರವರ ಪ್ರತಿಪಾದನೆ. ಇದು ಅವರ ಸಂವಿಧಾನದ ಕರಡೂ ಕೂಡ ಆಗಿತ್ತು.

*ಬೆಂಗಳೂರು* **ಕು. ರಾಮಸ್ವಾಮಿ**

 ಶ್ರೀ. ಮುರಳೀಧರ ಚಿಕ್ಕಮಗಳೂರು ಅವರು 'ಸುಧಾರಣೆಯ ಸೋಗಿನಲ್ಲಿ ಕಾರ್ಮಿಕ ಹಕ್ಕುಗಳ ಮೇಲೆ ದಾಳಿ' ಎನ್ನುವ ಶೀರ್ಷಿಕೆಯ ಅಡಿಯಲ್ಲಿ ಬರೆದ ಲೇಖನವು ಚೆನ್ನಾಗಿ ಮೂಡಿಬಂದಿದೆ. ಸರಳ, ಸುಲಭ ಶೈಲಿಯಾಗಿದ್ದರೂ ಸಮಗ್ರವಾಗಿದೆ. 'ಅಚ್ಛಾದಿನ್ ಆಯೇಗಾ' ಎನ್ನುತ್ತಲೇ ದೇಶವಾಸಿಗಳನ್ನು ಮರಳುಗೊಳಿಸಿ ಅಧಿಕಾರಕ್ಕೆ ಬಂದ ಮೋದಿ ಸರ್ಕಾರದ ಕಾರ್ಮಿಕ ವಿರೋಧಿ ನೀತಿಗಳನ್ನು ಲೇಖಕರು ಮನಮುಟ್ಟುವಂತೆ ಅನಾವರಣಗೊಳಿಸಿದ್ದಾರೆ.




ದೇಶದ ಕಾರ್ಮಿಕ ವರ್ಗ ಶತಮಾನಕ್ಕೂ ಮೀರಿದ ಸುದೀರ್ಘ ಹೋರಾಟಗಳ ಫಲವಾಗಿ ಪಡೆದ ಕಾನೂನಾತ್ಮಕ ಹಕ್ಕುಗಳನ್ನು ಕಸಿದುಕೊಂಡು ದುಡಿಯುವ ಜನತೆಯನ್ನು ಗುಲಾಮರನ್ನಾಗಿಸಿ, ಸಮಾಜವನ್ನು ಹತ್ತೊಂಬತ್ತನೆ ಶತಮಾನಕ್ಕೆ ಎಳೆದೊಯ್ಯುವ ಮೋದಿ ಸರ್ಕಾರದ ಬಲಪಂಥೀಯ ಧೋರಣೆಗಳನ್ನು ಲೇಖಕರು ಸಮರ್ಪಕವಾಗಿ ಬಯಲಿಗೆಳೆದಿದ್ದಾರೆ.

ಸಂಸತ್ ಚುನಾವಣೆಯಲ್ಲಿ ಜಯಗಳಿಸಿದ ನಾಲ್ಕೈದು ತಿಂಗಳುಗಳಲ್ಲಿಯೇ ಕಾರ್ಮಿಕ ವರ್ಗದ ಪ್ರತಿರೋಧಕ್ಕೆ ಬಂಡವಾಳಿಗರ ಪ್ರಧಾನ ಸೇವಕ ಮೋದಿಯವರ ಸರ್ಕಾರ ಗುರಿಯಾಗಿದೆ. ಮೋದಿ ಸರ್ಕಾರದ ನೀತಿಗಳನ್ನು ವಿರೋಧಿಸಿ ಎಡಚಿಂತನೆಯ ಕಾರ್ಮಿಕ ಸಂಘಟನೆಗಳಷ್ಟೇ ಅಲ್ಲದೆ 'ಶ್ರಮ ಪರಿವಾರ'ದ ಪರಿಕಲ್ಪನೆಯಲ್ಲಿ ಶ್ರದ್ಧೆಯಿರುವ ಸಂಘಪರಿವಾರದ ಕಾರ್ಮಿಕ ಸಂಘಟನೆ ಭಾರತೀಯ ಮಜ್ದೂರ್ ಸಂಘ ಹಾಗೂ ವರ್ಗ ಸಾಮರಸ್ಯ ಸಿದ್ಧಾಂತದ ಪ್ರತಿಪಾದಕನಾದ ಐ.ಎನ್.ಟಿ.ಯು.ಸಿ. ಸಂಘಟನೆಗಳೂ ಸಹ ಕಾರ್ಮಿಕ ಕಾನೂನುಗಳ ತಿದ್ದುಪಡಿಯನ್ನು ವಿರೋಧಿಸುತ್ತಿವೆ. ಕಳೆದ ಸೆಪ್ಟೆಂಬರ್ ೧೫, ೨೦೧೪ರಂದು ನವದೆಹಲಿಯಲ್ಲಿ ಸಮಾವೇಶಗೊಂಡ ರಾಷ್ಟ್ರಮಟ್ಟದ ಕೇಂದ್ರೀಯ ಕಾರ್ಮಿಕ ಸಂಘಟನೆಗಳ ಜಂಟಿ ಸಮಿತಿಯು ರಾಷ್ಟ್ರವ್ಯಾಪಿ ಆಂದೋಲನಕ್ಕೆ ಕರೆ ನೀಡಿದೆ. ಈ ಕರೆಯ ಮೇರೆಗೆ ಡಿಸೆಂಬರ್ ೫, ೨೦೧೪ರಂದು ಪ್ರತಿಭಟನೆ ಕಾರ್ಯಕ್ರಮಗಳು ನಡೆದಿವೆ. ವಿಮಾ ಕ್ಷೇತ್ರದ ನೌಕರರು ಡಿಸೆಂಬರ್ ೧೨, ೨೦೧೪ರಂದು ರಕ್ಷಣಾ ಹಾಗೂ ವಿಮಾ ಕ್ಷೇತ್ರದಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆಗೆ ಅವಕಾಶ ನೀಡುತ್ತಿರುವುದನ್ನು ವಿರೋಧಿಸಿ ಮುಷ್ಕರ ನಡೆಸಿದ್ದಾರೆ. ಸಾರಿಗೆ ಕ್ಷೇತ್ರದ ಕಾರ್ಮಿಕರು ಡಿಸೆಂಬರ್ ೧೮, ೨೦೧೪ರಂದು ನವದೆಹಲಿಯಲ್ಲಿ ಪ್ರಯಾಣಿಕರ ಸುರಕ್ಷತೆಯ ಹೆಸರಿನಲ್ಲಿ ಸಾರಿಗೆ ಕ್ಷೇತ್ರವನ್ನು ಖಾಸಗೀಕರಣಗೊಳಿಸಲು ನಡೆಯುತ್ತಿರುವ ಹುನ್ನಾರವನ್ನು ಪ್ರತಿರೋಧಿಸಿದ್ದಾರೆ.

೧೯೯೧ರಿಂದಲೂ ಆರ್ಥಿಕ ಉದಾರೀಕರಣ ನೀತಿಗಳನ್ನು ದೇಶದ ದುಡಿಯುವ ವರ್ಗ ನಿರಂತರವಾಗಿ ವಿರೋಧಿಸುತ್ತಲೇ ಬಂದಿವೆ. ಅಂದಿನಿಂದ ಇಂದಿನವರೆಗೆ ನಡೆದಿರುವ ಹಲವಾರು ಹೋರಾಟಗಳಲ್ಲಿ, ರಾಷ್ಟ್ರೀಯ ಮುಷ್ಕರಗಳಲ್ಲಿ ಕೋಟ್ಯಂತರ ಕಾರ್ಮಿಕರು ಭಾಗವಹಿಸಿದ್ದಾರೆ. ಅವುಗಳ ಪರಿಣಾಮವಾಗಿ ರೂಪುಗೊಂಡ ಜನಜಾಗೃತಿಯ ಕಾರಣದಿಂದಾಗಿ ಕಳೆದ ಪಾರ್ಲಿಮೆಂಟ್ ಚುನಾವಣೆಯಲ್ಲಿ ಚಿದಂಬರಂ – ಮನಮೋಹನ್ ಕೂಟದ ಎರಡನೆ ಯು.ಪಿ.ಎ. ಸರ್ಕಾರ ಪತನವಾಯಿತು. ಆದರೆ ದುಡಿಯುವ ವರ್ಗದ ದುರದೃಷ್ಟ ಯು.ಪಿ.ಎ. ಸರ್ಕಾರವೇನೋ ಅಧಿಕಾರ ಕಳೆದುಕೊಂಡಿತು. ಆದರೆ ಜನಪರ ಪರ್ಯಾಯ ರಾಜಕೀಯ ಶಕ್ತಿಯ ಕೊರತೆಯಿಂದಾಗಿ, ಅದರ ಉದಾರೀಕರಣ ನೀತಿಗಳು ಮೋದಿಯ ರೂಪದಲ್ಲಿ ಇನ್ನಷ್ಟು ತೀವ್ರವೂ, ಗಾಢವೂ ಆಗಿದೆ. ಚುನಾವಣೆಗಳಲ್ಲಿ ವರ್ಗ ಶತ್ರುಗಳಿಗೆ ಅಧಿಕಾರ ನೀಡಿ ನಂತರ ಅವರ ನೀತಿಗಳ ವಿರುದ್ಧ ನಿರಂತರವಾಗಿ ಹೋರಾಡುತ್ತಿರುವುದೇ ದುಡಿಯುವ ಜನತೆಯ ಕರ್ಮಕಾಂಡವಾಗಿದೆ. ಪರ್ಯಾಯ ನೀತಿಗಳ ಒತ್ತಾಯಕ್ಕಾಗಿ ನಡೆಸುವ ಹೋರಾಟಗಳನ್ನು, ಪರ್ಯಾಯ ವ್ಯವಸ್ಥೆಯ ನಿರ್ಮಾಣಕ್ಕಾಗಿ ನಡೆಯುವ ಹೋರಾಟವಾಗಿ ರೂಪಾಂತರಗೊಳಿಸಬೇಕಾದ್ದು ಚಾರಿತ್ರಿಕ ಅವಶ್ಯಕತೆ. ಆ ದೃಷ್ಟಿಯಿಂದ ಕಾರ್ಮಿಕ ಚಳುವಳಿಯಲ್ಲಿ ಮೂಡುತ್ತಿರುವ ಐಕ್ಯತೆ ಆಶಾದಾಯಕ ಬೆಳವಣಿಗೆ. ಕಾರ್ಮಿಕ ಚಳುವಳಿಯನ್ನು ಬಲಗೊಳಿಸಿ, ಇತರ ಪ್ರಗತಿಪರ ಚಳುವಳಿಗಳ ಜೊತೆ ಏಕತೆಯನ್ನು ಸಾಧಿಸಿ, ಅದನ್ನೊಂದು ರಾಜಕೀಯ, ಸೈದ್ಧಾಂತಿಕ ಆಂದೋಲನವನ್ನಾಗಿಸಬೇಕಾದ್ದು ನಮ್ಮೆಲ್ಲರ ಪ್ರಸ್ತುತ ಕರ್ತವ್ಯ. ಈ ದಿಶೆಯಲ್ಲಿ ಶ್ರೀ. ಮುರಳೀಧರ ಚಿಕ್ಕಮಗಳೂರು ಅವರ ಲೇಖನ ಸಮಯೋಚಿತ. ಅದಕ್ಕಾಗಿ ಲೇಖರಿಗೆ ಹಾಗೂ 'ಹೊಸತು' ಪತ್ರಿಕೆಗೆ ಹಾರ್ದಿಕ ಅಭಿನಂದನೆಗಳು.

*ಬೆಂಗಳೂರು* **ವಿಜಯ ಭಾಸ್ಕರ್ ಡಿ. ಎ.**



# ಋಗ್ವೇದ ಪ್ರವೇಶಿಕೆ



## ಐತಿಹ್ಯ ಮತ್ತು ವಾಸ್ತವ

"ಪ್ರಸಿದ್ಧ ವೈದಿಕ ಸೂಕ್ತದ ಆಧುನಿಕ ಅನ್ವೇಷಣೆ" ಎಂಬ ಧ್ಯೇಯವಾಕ್ಯವನ್ನು ಇಟ್ಟುಕೊಂಡು ಈಚೆಗೆ ಒಂದು ರಂಗ ಅನ್ವೇಷಣೆಯನ್ನು ಪ್ರಸ್ತುತಪಡಿಸಲಾಗಿತ್ತು. ಅದರ ಪರಿಕಲ್ಪನೆ ಡಾ॥ ಜೆ. ಶ್ರೀನಿವಾಸ ಮೂರ್ತಿಯವರದು, ವಿನ್ಯಾಸ ಮತ್ತು ನಿರ್ದೇಶನ ಶ್ರೀ. ಜೋಸೆಫ್ ಜಾನ್ ಅವರದು. ಆ ಸಂದರ್ಭದಲ್ಲಿ ಹೊರತರಲಾಗಿದ್ದ ಕರಪತ್ರದ ಕೆಲವು ಸಾಲುಗಳಿವು : "ವೇದದಲ್ಲಿಯೇ ಭಾರತೀಯ ರಂಗಭೂಮಿಯ ಮೂಲಗಳನ್ನು ಹಲವು ದೃಷ್ಟಿಕೋನಗಳಿಂದ ಗುರುತಿಸಲಾಗಿದೆ. ನಾವು ವೇದದ ಸೂಕ್ತಗಳನ್ನೇ ರಂಗಕ್ಕೆ ಅಳವಡಿಸುವ ಹಾಗೂ ರಂಗದ ಮುಖಾಂತರ ಅರ್ಥೈಸುವ ಹೊಳಹುಗಳನ್ನು ಹೊತ್ತಿದ್ದೇವೆ. ಈ ದಿಸೆಯಲ್ಲಿ 'ಅಭಿಜ್ಞಾನ'ವು ಕೈಗೆತ್ತಿಕೊಂಡ ಮೊದಲ ಅನ್ವೇಷಣೆ – 'ಪುರುಷಸೂಕ್ತ.' ಪುರುಷಸೂಕ್ತವು ಎಲ್ಲ ವೇದಗಳಲ್ಲಿಯೂ ಕಂಡುಬರುವ, ಎಲ್ಲ ಕರ್ಮಗಳಲ್ಲಿಯೂ ಬಳಸುವ ಪ್ರಸಿದ್ಧ ಸೂಕ್ತ. ಎಲ್ಲದರೊಳಗಿದ್ದೂ ಎಲ್ಲವನ್ನೂ ಮೀರಿದ್ದು ಪುರುಷ. ಅದರೊಂದು ಭಾಗದಿಂದ ಕಾಣುವ ಈ ಜಗತ್ತು ಹಲವು ಹಂತದಲ್ಲಿ ಸೃಷ್ಟಿಗೊಳ್ಳುತ್ತಲೇ ಇದೆ. ಹೀಗೆ ಸೃಷ್ಟಿ ಆರಂಭವಾಗುವುದೇ ವಿರಾಟ್ ಪುರುಷನಿಂದ. ಅವನನ್ನು ಬಲಿಗೊಟ್ಟು ಹಂತಹಂತದಲ್ಲೂ ಹೊಸಸೃಷ್ಟಿ . ಅಷ್ಟಕ್ಕೂ ಸೃಷ್ಟಿ ಎಂದರೆ ಇರುವುದನ್ನು ಹೊಸಹೊಸದಾಗಿ ಜೋಡಿಸಿಕೊಳ್ಳುವುದು ಕೂಡ. ಆದಿ ಸೃಷ್ಟಿ ಎನ್ನುವುದೇ ಒಂದು ಚೋದ್ಯ. ಆದಿ ಅಂತ್ಯ ಎಂಬ ಕಲ್ಪನೆಗಳೇ ದೇಶ ಕಾಲಗಳ ಮಿತಿಯಿಂದ ಬಂದದ್ದು. ಸೃಷ್ಟಿಯ ಕಲ್ಪನೆಯೇ ಹುಟ್ಟುಸಾವಿನ ಕಲ್ಪನೆ. ಆದ್ದರಿಂದ ಕಾಲವೆಂದರೂ ನಮ್ಮಲ್ಲಿ ಮೃತ್ಯುವೆಂದೇ ಅರ್ಥ. ಆದ್ದರಿಂದ ಇಲ್ಲಿನ ವಸ್ತು ಒಂದೊಮ್ಮೆ ಶುರುವಾಗಿ ಇನ್ನೊಮ್ಮೆ ಮುಗಿಯುವ ಕಥೆಯಲ್ಲ. ಯುಗಯುಗಗಳಿಂದ ಇಗೋ ಈ ಕ್ಷಣದವರೆಗಿನ ಸೃಷ್ಟಿಯ ಒಳಬಿಂಬ ಈ ಪುರುಷಸೂಕ್ತ, ಈ ರಂಗಸೃಷ್ಟಿ . ಪುರುಷನ ಕಲ್ಪನೆಯೇ ಗೀತೆಯ ಕೃಷ್ಣನ ವಿಶ್ವರೂಪದರ್ಶನ. ಇದೇ ನಟರಾಜನ ದರ್ಶನ."

ಈ ಸೂಕ್ತದ ಕೆಲವು ಪ್ರಸಿದ್ಧ ಸಾಲುಗಳನ್ನು ಗಮನದಲ್ಲಿರಿಸಿಕೊಂಡು ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆಯಲ್ಲಿ ಕೆಲವು ಲೇವಡಿಯ ಮಾತುಗಳನ್ನಾಡಿದ್ದಾನೆ :

**ಜಿ. ರಾಮಕೃಷ್ಣ**

*ಮೊಗದೊಳ್ ಕರದೊಳ್ ಸ್ಥಿರಮೂ*
*ರುಗಳೊಳ್ ಪಾದಂಗಳೊಳ್ ದ್ವಿಜಾದಿಕುಲಂ ತಾ ।*
*ವೊಗೆದಂದುವೆಂಬಠಾವಿನೊ –*
*ಳಗೆ ಯೋನಿಗಳಕ್ಕುಮಕ್ಕು ಮಲ್ಲದೊಡೆನ್ನರ್ ॥* (೧೧.೩೦)

ಅಂದರೆ, ವಿವಿಧ ವರ್ಣದವರು ಎಲ್ಲೆಲ್ಲಿಂದ ಹುಟ್ಟಿದರೆಂದು ಹೇಳಲಾಗಿದೆಯೋ ಅಲ್ಲೆಲ್ಲಾ ಯೋನಿಗಳಿರಬೇಕು; ಇಲ್ಲದಿದ್ದರೆ ಅಲ್ಲೆಲ್ಲಾ ಹುಟ್ಟುವುದು ಶಕ್ಯವಲ್ಲ, ಎಂದರ್ಥ. ಇದು ಪುರುಷಸೂಕ್ತದ ಒಂದು ಮಂತ್ರದ (೧೦.೯೦.೧೨) ಮೇಲಿನ ವಿಮರ್ಶೆ. ವರ್ಣ ವಿಭಜನೆಯು ಸಾಮಾಜಿಕ ಶ್ರೇಣೀಕರಣದ ಸ್ಪಷ್ಟ ಸೂಚನೆ. ಋಗ್ವೇದದ ರಚನೆಯ ಕಡೆಯ ಭಾಗಕ್ಕೆ ಸೇರಿದ ಸೂಕ್ತ ಈ ಪುರುಷಸೂಕ್ತ. ಹಿಂದಿನ ಬುಡಕಟ್ಟು ಸಮಾಜವು ಭಗ್ನಗೊಂಡು ಹೊಸ ಉತ್ಪಾದನಾ ವಿಧಾನಗಳು ಮತ್ತು ಉತ್ಪಾದನಾ ಸಂಬಂಧಗಳು ಅಸ್ತಿತ್ವಕ್ಕೆ ಬಂದಿದ್ದ ಕಾಲದ ಸೂಕ್ತ ಅದು. ಸಮಾನತೆ ಮತ್ತು ನೈತಿಕತೆ ಎರಡೂ ಹೊಸ ಸ್ವರೂಪ ಧರಿಸಿರುವ ಕಾಲ ಕೂಡ ಇದಾಗಿದೆ. ಬಹುಕಾಲದಿಂದ ಚರ್ಚೆಗೆ ಮತ್ತು ಕಟು ಟೀಕೆಗೆ ಒಳಗಾಗಿರುವ ಈ ಸೂಕ್ತದ ಬಗೆಗಿನ ಒಂದು ಸರಳ ಸಂಗತಿಯನ್ನು ಗಮನಿಸುವುದು ಅವಶ್ಯಕ. ಈ ಸೂಕ್ತವು ಋಗ್ವೇದದಲ್ಲಿ ಇರದಿದ್ದರೂ ಪ್ರಾಚೀನ ಭಾರತೀಯ ಸಮಾಜದಲ್ಲಿ






ವರ್ಣ ವಿಭಜನೆ ಮತ್ತು ವರ್ಣ ತಾರತಮ್ಯ ಇರುತ್ತಿತ್ತು. ಏಕೆಂದರೆ, ಅಂತಹ ವಿದ್ಯಮಾನವು ಒಬ್ಬ ಕವಿಯ ಮನಸ್ಸಿನ ಮಾತ್ರದಿಂದಲೇ ಹುಟ್ಟುವುದು ಅಶಕ್ಯ. ಬುಡಕಟ್ಟು ಸಮಾಜದ ನೀತಿಗಳಾಗಲಿ, ವರುಣನಂತಹ ದೇವತೆಯ ಕಲ್ಪನೆಯಾಗಲಿ, ಋತದಂತಹ ಅನನ್ಯ ಕಲ್ಪನೆಯಾಗಲಿ, ಕೇವಲ ಒಬ್ಬ ಕವಿಯ ಬೌದ್ಧಿಕ ಸೃಷ್ಟಿಯಲ್ಲ. ಹೆಚ್ಚೆಂದರೆ ಕವಿಯು ಅಂತಹ ಸಂಗತಿಗಳನ್ನೆಲ್ಲಾ ತನ್ನ ಸುತ್ತಣ ಆಗುಹೋಗುಗಳಲ್ಲಿ ಗಮನಿಸಿದ್ದಾನೆ, ಗುರುತಿಸಿದ್ದಾನೆ ಮತ್ತು ದಾಖಲಿಸಿದ್ದಾನೆ. ಅಲೆಮಾರಿ ಜೀವನದಿಂದ ಬೇಟೆಯಾಡುವ ಹಂತಕ್ಕೆ ಕ್ರಮಿಸುವುದು, ಪಶುಸಂಗೋಪನೆಯಿಂದ ಕೃಷಿ ಮಾಡುವ ಹಂತಕ್ಕೇರುವುದು, ಇವೆಲ್ಲಾ ಹೊಸ ಉತ್ಪಾದನಾ ಸಾಧನಗಳ ಆವಿಷ್ಕಾರಗಳೊಂದಿಗೆ ಘಟಿಸುವ ಸಂಗತಿಗಳು. ಬುಡಕಟ್ಟು ಜೀವನದಲ್ಲಿ ವರ್ಣಗಳೂ ಇಲ್ಲ, ವರ್ಣ ವಿಭಜನೆಯೂ ಇಲ್ಲ; ಆದರೆ ಪುರುಷಸೂಕ್ತದಲ್ಲಿ ಅವಿವೆ. ಅವಿರುವುದರಿಂದ ಪುರುಷಸೂಕ್ತವು ಅವನ್ನು ದಾಖಲಿಸಿದೆಯೇ ವಿನಾ ಪುರುಷಸೂಕ್ತ ಹೇಳಿದ್ದರಿಂದ ಅವು ಉಂಟಾಗಲಿಲ್ಲ. ಪ್ರಸ್ತುತ ಹತ್ತೊಂಭತ್ತನೆಯ ಕಂತಿನಲ್ಲಿ ಆ ಸೂಕ್ತವನ್ನು ಪರಿಚಯಿಸಿಕೊಳ್ಳೋಣ.

* * *

ನಾಸದೀಯ ಸೂಕ್ತದ ನಂತರದಲ್ಲೇ ಸೃಷ್ಟಿಯನ್ನು ಕುರಿತು ಇನ್ನೊಂದು ಸೂಕ್ತವಿದೆ (೧೦.೧೩೦). ನಾಸದೀಯವು ಯಾವ ಯಜ್ಞದ ಪ್ರಸ್ತಾಪವನ್ನೂ ಮಾಡಿಲ್ಲ ಮತ್ತು ಸೃಷ್ಟಿಯು ಯಜ್ಞದಿಂದ ಸಂಭವಿಸಿತೆಂದು ಹೇಳಿಲ್ಲ. ಆದರೆ ಅದರ ಮುಂದಿನ ಸೂಕ್ತದಲ್ಲಿ, ಪುರುಷ ಸೂಕ್ತದಲ್ಲಿರುವಂತೆ, ಸೃಷ್ಟಿಗೆ ಯಜ್ಞದ ಮೂಲವನ್ನು ಹೇಳಲಾಗಿದೆ. ಯಜ್ಞದ ಪರಿಕರಗಳು ಹಲವು. ನಿಯಮಿತವಾದಂತೆ ದಾರಗಳನ್ನು ಎಳೆಯಬೇಕು, ನೂರು ಪುರೋಹಿತರನ್ನು ಕರೆಸಬೇಕು, ನೇಯ್ಗೆ ಮಾಡುತ್ತಿರಬೇಕು. ಸೃಷ್ಟಿಯನ್ನು ದಾರಗಳಿಂದ ಬಟ್ಟೆ ನೇಯುವುದಕ್ಕೆ ಸಮವೆಂದು ಕಲ್ಪಿಸಿಕೊಳ್ಳಲಾಗಿದೆ (೧. ಯೋ ಯಜ್ಞಃ ವಿಶ್ವತಃ ತಂತುಭಿಃ ತತಃ ಏಕಶತಂ ದೇವಕರ್ಮೇಭಿಃ ಆಯತಃ). ನೇಯ್ದ ಬಟ್ಟೆಯು ಪೃಥ್ವಿಯಿಂದ ಅಂತರಿಕ್ಷದವರೆಗೆ ಚಾಚಿದೆ. ನೇಯ್ಗೆಯ ಉಪಕರಣಗಳು ಯಾವುವು ? ಸಾಮಗಾನವೇ ಉಪಕರಣ (೨ : ...ಇಮೇ ಮಯೂಖಾಃ ಉಪಸೇದುಃ ಸದಃ ಸಾಮಾನಿ ಚಕ್ರುಃ ತಸರಾಣಿ ಓತವೇ). ಮುಂದೆ ಯಜ್ಞದಲ್ಲಿ ಅಗತ್ಯವಿರುವಂತಹ ಸಾಮಗ್ರಿಗಳನ್ನೂ ವೇದಮಂತ್ರಗಳ ಛಂದಸ್ಸುಗಳನ್ನೂ ಆ ಛಂದಸ್ಸುಗಳು ಯಾವ ಯಾವ ದೇವತೆಗಳೊಡನೆ ತೆಕ್ಕೆ ಹಾಕಿಕೊಂಡುವೆಂಬುದನ್ನೂ ಹೇಳಲಾಗಿದೆ : ಗಾಯತ್ರಿ ಛಂದಸ್ಸು ಅಗ್ನಿಯೊಡನೆ, ಉಷ್ಣಿ ಛಂದಸ್ಸು ಸವಿತೃವಿನೊಡನೆ, ಅನುಷ್ಟುಪ್ ಛಂದಸ್ಸು ಸೋಮನೊಡನೆ, ಇತ್ಯಾದಿ. ಇಲ್ಲಿ ಯಾವ ವಿಸ್ಮಯದ ಛಾಯೆಯೂ ಇಲ್ಲ; ಬದಲಾಗಿ, ಸಂಬಂಧಗಳನ್ನು ಯಾಂತ್ರಿಕವಾಗಿ ಗಂಟುಹಾಕಲಾಗಿದೆ. ಯಜ್ಞದ ತಂತ್ರಗಳು, ಛಂದಸ್ಸುಗಳು ಮತ್ತು ನಿಯಮಗಳು, ಇವನ್ನು ಚೆನ್ನಾಗಿ ತಿಳಿದಿದ್ದವರು ಏಳು ಋಷಿಗಳು. ಈ ಋಷಿಗಳು ರಥದ ಓಟವನ್ನು ನಿಯಂತ್ರಿಸಲು ಸಮರ್ಥರು, ಅವರು ಕುದುರೆಗಳ ನಿಯೋಜಕರು. ಅಂದರೆ, ಆ ಋಷಿಗಳಿಂದ ಯಜ್ಞದ ವಿಧಾನಗಳು ತಿಳಿದುಬಂದಿವೆ. ಒಟ್ಟಿನಲ್ಲಿ, ಜಗತ್ತು ತನ್ನ ಅಸ್ತಿತ್ವವನ್ನು ಪಡೆಯಲು ಯಜ್ಞವನ್ನು ಆಶ್ರಯಿಸಬೇಕಾಯಿತು. ಯಜ್ಞದಿಂದ ಇವೆಲ್ಲಾ ಹೇಗೆ ಸಾಧ್ಯವಾಗುತ್ತದೆಯೆಂಬ ಪ್ರಶ್ನೆಗೆ ಸೂಕ್ತವು ಉತ್ತರ ಕೊಡುವುದಿಲ್ಲ ಮತ್ತು ಆ ಪ್ರಶ್ನೆಯನ್ನು ಎತ್ತುವುದೂ ಇಲ್ಲ.

ಪುರುಷಸೂಕ್ತವು ಈ ಸೂಕ್ತದ ಜಾಡಿನಲ್ಲೇ ನಡೆದಿರುವಂತಿದೆ. ಆದರೆ ನಾಸದೀಯ ಸೂಕ್ತದಂತೆ 'ಸತ್' ಮತ್ತು 'ಅಸತ್' ಎರಡೂ ಇರದಿದ್ದ ಸಂದರ್ಭವೊಂದನ್ನು ಪುರುಷಸೂಕ್ತವು ಪರಿಭಾವಿಸಿಕೊಂಡಿಲ್ಲ. 'ಸತ್' ವಸ್ತುವು ಅಗಾಧ ವ್ಯಾಪ್ತಿ ಇರುವಂಥದು. "ಎಲ್ಲಕ್ಕಿಂತಲೂ ಮೊದಲು ಇದ್ದುದೆಲ್ಲಾ ಕೇವಲ 'ಸತ್' ಒಂದೇ ಆಗಿದ್ದಿತು" ಎಂದು ಛಾಂದೋಗ್ಯ ಉಪನಿಷತ್ತು ಹೇಳುವಾಗ ಈ ಅಗಾಧತೆ ಮತ್ತು ಎಲ್ಲೆಯಿಲ್ಲದ (ಅಥವಾ ಅಪರ್ಯಾಪ್ತವಾದ) ಅದರ ಅಸ್ತಿತ್ವವು

ವೇದ್ಯವಾಗಬೇಕು. ಆದಿಯಲ್ಲಿದ್ದ ಪರಮಾಣುಗಳ ಸಂಖ್ಯೆ ಒಂದೇ ಅಥವಾ ಒಂದು ಕೋಟಿಯೇ ? ಎರಡೂ ಅಲ್ಲ; ಅದು ಅಸಂಖ್ಯ ಮತ್ತು ಅಶೇಷ. ಒಂದರ್ಥದಲ್ಲಿ ಪುರುಷಸೂಕ್ತದ 'ಪುರುಷ' ಸಹ ಅದೇ ಲಕ್ಷಣಗಳನ್ನು ಹೊಂದಿದೆ. ಸೂಕ್ತದುದ್ದಕ್ಕೂ 'ಪುರುಷ'ನನ್ನು ಪುಲ್ಲಿಂಗ ದಲ್ಲಿ ನಿರ್ದೇಶಿಸಿದ್ದರೂ ನಿಜಾರ್ಥದಲ್ಲಿ 'ಅವನು' ಲಿಂಗರಹಿತವಾದ 'ಸತ್' ವಸ್ತುವಿನಂತೆಯೇ ಎಂದು ಭಾವಿಸಲಡ್ಡಿಯಿಲ್ಲ. ಪುರುಷನು (ಅಥವಾ 'ಪುರುಷ'ವು) ಜಗತ್ತಿನ ಮೂಲ ಸಾಮಗ್ರಿ ; ಅದನ್ನು ಬಳಸಿ, ವಿಭಜಿಸಿ, ಪರಿವರ್ತಿಸಿ, ದೇವತೆಗಳು ವಿಶ್ವದ ವಿವಿಧ ಅಂಗಗಳನ್ನು ಮತ್ತು ಚರಾಚರ ವಸ್ತುಗಳನ್ನು ನಿರ್ಮಿಸಬಹುದು. ಹೀಗೆ ನಿರ್ಮಾಣಗೊಳ್ಳುತ್ತಾ ಹೋಗುವ ವಸ್ತುಗಳು ಹಿಂದೆ ಇದ್ದವು, ಈಗಿರುವವು ಮತ್ತು ಮುಂದೆ ಇರತಕ್ಕಂಥವು (ಅಥವಾ ಬರತಕ್ಕಂಥವು) ಎಲ್ಲವನ್ನೂ ಒಳಗೊಂಡಿವೆ. 'ಸತ್' ವಸ್ತುವಿನ ಬಗೆಗೂ ಹೇಳಬಹುದಾದ್ದು ಇದನ್ನೇ : ಉಪನಿಷತ್ತು ನೀಡಿರುವ ದೃಷ್ಟಾಂತವನ್ನು ತೆಗೆದುಕೊಂಡರೆ, ಒಂದು ಮೃತ್ಪಿಂಡದಿಂದ (ಅಂದರೆ, ಮಣ್ಣು-ಜೇಡಿಮಣ್ಣು ಇತ್ಯಾದಿಗಳಿಂದ) ಒಂದು ನಿರ್ದಿಷ್ಟ ಪರಿಮಾಣದ ಭಾಗವನ್ನು ತೆಗೆದುಕೊಂಡು ಮಡಕೆಯೊಂದನ್ನು ಮಾಡಲಾಗುತ್ತದೆ; ಅಲ್ಲಿಗೆ ಮೃತ್ಪಿಂಡದ ಪರಿಸಮಾಪ್ತಿಯೇನೂ ಆಗುವುದಿಲ್ಲ. ಅಂದರೆ, ಒಟ್ಟು 'ಸತ್'ನ ಒಂದಂಶವನ್ನು ಮಾತ್ರ ನಾವು ಬಳಸಿಕೊಂಡಿದ್ದೇವೆ. ಉಳಿದಿರುವುದು ಇನ್ನೂ ಬೃಹತ್ತಾಗಿದೆ, ಅಖಂಡವಾಗಿದೆ. 'ಸತ್' ಎಂಬುದಕ್ಕೆ ಪುರುಷಾಕಾರವನ್ನೇನಾದರೂ ನೀಡಿದರೆ ಆ 'ಪುರುಷ' ಎನ್ನುವುದು ಅಸೀಮ ವಾಗಿಯೇ ಉಳಿಯುವಂಥದು. ಅದು ಕಲ್ಪನೆಗೆ ಮೀರಿದ್ದು. ನಮಗೆ ಗೋಚರವಾಗಿರುವುದು ಅಲ್ಪ, ಅಗೋಚರವಾಗಿ ಉಳಿದಿರುವುದು ಬ್ರಹ್ಮಾಂಡ. ಈ ಬ್ರಹ್ಮಾಂಡದಲ್ಲಿ ಭೂಮಿ ಮತ್ತು ಗಣನೆಗೆ ನಿಲುಕದ ಅಂತರಿಕ್ಷ ಎರಡೂ ಇವೆ. ಅದು ಅಪರ್ಯಾಪ್ತ ಅಥವಾ ಎಲ್ಲೆಯಿಲ್ಲದಿರುವುದೇಕೆಂದರೆ ಅದು ವೃದ್ಧಿಯಾಗುತ್ತಿರುತ್ತದೆ. ಆಹಾರದಿಂದ ಮರ್ತ್ಯಲೋಕದ ಹುಲುಮಾನವನು ಬೆಳೆಯುವಂತೆ ಬೃಹತ್ತಾದ ಪುರುಷವೂ ಬೆಳೆಯುತ್ತಿರುತ್ತದೆ. ಪುರುಷಸೂಕ್ತದ ಈ ದೃಷ್ಟಿಯನ್ನು ವಿಶ್ಲೇಷಿಸಿಕೊಂಡರೆ ನಾಸದೀಯ ಸೂಕ್ತವು ಪ್ರಸ್ತುತಪಡಿಸುವ ವಿಸ್ಮಯ, ದಂಗು ಬಡಿಸುವ ವಿಶ್ವದ ವಿರಾಟ್ ಸ್ವರೂಪ, ಎಲ್ಲವೂ ಪುರುಷ ಸೂಕ್ತದಲ್ಲೂ ಇವೆ. ಆದರೆ ನಾಸದೀಯದ ಮುಂದುವರಿದ ಭಾಗವೋ ಎಂಬಂತೆ ಇಲ್ಲಿ ಪುರುಷನ ಒಂದು ಅಂಶವನ್ನು ಯಜ್ಞಮುಖೇನ ವಿಕಾಸಕ್ಕೆ ಒಳ ಪಡಿಸಲಾಗಿದೆ ಮತ್ತು ಆ ವಿಕಾಸದ ಒಂದು ಕಲ್ಪಿತ ಕ್ರಮವನ್ನು ಸೂಚಿಸಲಾಗಿದೆ. ಸಕಲ ಜೀವಿಗಳೂ ನಿರ್ಜೀವಿಗಳೂ ಈ ವಿಕಾಸದ ಪರಿಣಾಮವೆನ್ನುವುದು ಪುರುಷಸೂಕ್ತದ ಇಂಗಿತವೂ ಆಗಿದೆ. ಸೂಕ್ತದಲ್ಲಿ ಡೈನಸೋರ್ ಮತ್ತದರ ವಿಕಸಿತ ರೂಪಗಳ ಹೆಸರುಗಳನ್ನು ನಿರೀಕ್ಷಿಸುವುದು ಬೌದ್ಧಿಕ ಅಲ್ಪತನ ಮತ್ತು ಮೊಂಡುತನವಾಗುತ್ತದೆ. ಪುರುಷಸೂಕ್ತದ ಕರ್ತೃವು ಚಾರ್ಲ್ಸ್ ಡಾರ್ವಿನ್ನನ ಮುತ್ತಾತನೆಂಬಂತೆ ಅರ್ಥೈಸಹೊರಡುವುದು ಬಾಲಿಶವಾಗುತ್ತದೆ. ಸೂಕ್ತವು ವಿಶ್ವದ ಅಗಾಧ ವಿಸ್ಮಯವನ್ನು ಯಜ್ಞದ ಸಂಕೇತದ ಮೂಲಕ ಗ್ರಹಿಸಲು ಹೊರಟಿದೆ. ಗ್ರಹಿಕೆಗಿರುವ ವಸ್ತುವು ಇಡೀ ವಿಶ್ವ. ಅದರಲ್ಲಿ ಪ್ರಕೃತಿ ಇದೆ, ಪ್ರಾಣಿಗಳಿವೆ, ಮಾನವರಿದ್ದಾರೆ ಮತ್ತು ಕಡೆಗೆ ಮಾನವ ಸಮಾಜವೂ ಇದೆ. ಪುರುಷಸೂಕ್ತವೆಂದರೆ ನಾಲ್ಕು ವರ್ಣಗಳ ಶ್ರೇಣೀಕರಣವನ್ನು ನಿಗದಿಗೊಳಿಸುವ ಕಲುಷಿತ ಮನಸ್ಸಿನ ಪ್ರತಿರೂಪವೆಂದು ವ್ಯಾಖ್ಯಾನಿಸಿಕೊಂಡರೆ ಅದು ಋಗ್ವೇದದ ವಿಸ್ಮಯ ಮತ್ತು ಅಂತರಾರ್ಥಗಳನ್ನು ಗೌಣವಾಗಿಸಿಬಿಡುತ್ತದೆ. ಅಪೌರುಷೇಯ ವೆನ್ನಲಾದ ವೇದವು ನಾಲ್ಕು ಶ್ರೇಣೀಕೃತ ವರ್ಣಗಳನ್ನು ಹೇಳಿರುವುದರಿಂದ ನಾವಿಂದು ಆ ವರ್ಣ ವಿಭಜನೆಯನ್ನು ಸಮರ್ಥಿಸಲೇಬೇಕೆಂಬ ಹಟವು ಬಾಲಿಶವೆನಿಸುತ್ತದೆ, ವೇದಕ್ಕೆ ಅಪಚಾರವೆನಿಸುತ್ತದೆ. ಏಕೆಂದರೆ, ಮೂಲಭೂತವಾಗಿ ಮಾನವ ಜನಾಂಗದ ಯಾವ ಗ್ರಂಥವೂ ಅಪೌರುಷೇಯವಲ್ಲ. ಎಲ್ಲವೂ ಚರಿತ್ರೆಯ ವಿವಿಧ ಘಟ್ಟಗಳಲ್ಲಿ, ಆಯಾ ಘಟ್ಟಗಳ ಅನುಭವಕ್ಕೆ ತಕ್ಕಂತೆ ಮತ್ತು ಆಯಾ ಘಟ್ಟಗಳ ಚಾರಿತ್ರಿಕ ಸಂದರ್ಭಗಳಿಗನುಗುಣವಾಗಿ ರಚಿತವಾಗಿರುವಂಥವೇ.




ಅವು ಎಷ್ಟೇ ಪವಿತ್ರವೆಂದು ನಾವಿಂದು ಬಗೆದರೂ ಅವುಗಳ ನಿಚ್ಚಳ ಚಾರಿತ್ರಿಕ ಹಿನ್ನೆಲೆ ಮತ್ತು ಸಂದರ್ಭಗಳನ್ನು ನಿರಾಕರಿಸಲು ಸಾಧ್ಯವಿಲ್ಲ. ಏಳನೆಯ ಶತಮಾನದ ಕುರ್-ಅನ್ ಆಗಲಿ, ಎರಡನೇ ಶತಮಾನದ ಬೈಬಲ್ ಆಗಲಿ, ಕ್ರಿಸ್ತಪೂರ್ವ ನಾಲ್ಕು ಅಥವಾ ಮೂರನೇ ಶತಮಾನದ ಬೌದ್ಧ ತ್ರಿಪಿಟಕ ಗಳಾಗಲಿ, ಕ್ರಿ.ಪೂ. ಸಾವಿರದ ಆರುನೂರರ ಋಗ್ವೇದ ಮತ್ತು ಅವೆಸ್ತಾ ಆಗಲಿ, ಎಲ್ಲವೂ ಮಾನವ ಸಮಾಜದ ನಿರ್ಮಿತಿಗಳೇ ಮತ್ತು ಅವಕ್ಕೆಲ್ಲಾ ನಿರ್ದಿಷ್ಟ ಚಾರಿತ್ರಿಕ ಹಿನ್ನೆಲೆಗಳಿವೆ. ಆ ಹಿನ್ನೆಲೆಯಿಂದ ಬೇರ್ಪಡಿಸಿ ಅವನ್ನು ನಿತ್ಯ, ಅಪೌರುಷೇಯ, ದೈವವಾಣಿ, ಇತ್ಯಾದಿಯಾಗಿ ಭಾವನಾತ್ಮಕ ನೆಲೆಯಿಂದ ನೋಡಲಡ್ಡಿಯಿಲ್ಲ; ಆದರೆ ಅವನ್ನು ಅರ್ಥೈಸುವಾಗ ಆ ಹಿನ್ನೆಲೆಗಳನ್ನು ಗಮನದಲ್ಲಿರಿಸಿಕೊಳ್ಳುವುದು ಆರೋಗ್ಯಕರ.

ಪುರುಷಸೂಕ್ತವು ವಿಶ್ವ ವಿಕಾಸವನ್ನು ಹೇಳುವುದಿಲ್ಲ, ಅದು ವಿಶ್ವಸೃಷ್ಟಿಯನ್ನು ತನ್ನದೇ ಸೂಕ್ಷ್ಮ ಕಲ್ಪನೆಯಿಂದ ತೆರೆದಿಡಲು ಯತ್ನಿಸುತ್ತದೆ. ಸೃಷ್ಟಿಯು ಒಂದು ಯಜ್ಞ, ಅದರಲ್ಲಿ ಪುರುಷನೇ ಆಹುತಿಯಾಗುವ ವಸ್ತು; ಆದರೆ ಇಡಿಯಾಗಿ ಅಲ್ಲ. ಪುರುಷನ ಒಂದು ಅಂಶವು ಆಹುತಿಯಾದಾಗ ಅಗಾಧ ವಿಶ್ವದ ಸೃಷ್ಟಿಯಾಗುತ್ತದೆ, ಆದರೆ ಆ ಪುರುಷ ಎಷ್ಟು ಬೃಹತ್ತಾದುದೆಂದರೆ ಅದರಿಂದ ಒಂದಂಶ ಹೊರಬಂದಿರುವುದು ನಗಣ್ಯ. ನಮ್ಮ ಭೂಮಿ-ಸಮುದ್ರಗಳಷ್ಟೇ ವಿಶ್ವವಲ್ಲ. ನಮಗೆ ತಿಳಿಯದ ವಿಶ್ವವು ನಮ್ಮ ಕಲ್ಪನೆಯನ್ನು ಮೀರಿಸುವಂಥದು. ಆದ್ದರಿಂದಲೇ ಪುರುಷಸೂಕ್ತದ ಪುರುಷನಿಗೆ ಸಾವಿರ ತಲೆಗಳು, ಸಾವಿರ ಕಣ್ಣುಗಳು, ಸಾವಿರ ಪಾದಗಳು; ಇಡೀ ವಿಶ್ವವನ್ನು ಆವರಿಸಿರುವ ಪುರುಷನು ವಿಶ್ವವನ್ನು ಮೀರಿ ಅದರ ಮೇಲೆ ಇನ್ನೂ ಹತ್ತಂಗುಲ ಎತ್ತರದಲ್ಲಿ ಉಳಿಯುತ್ತಾನೆ. ನಮಗೆ ಗೋಚರವಾಗುವ ವಿಶ್ವಕ್ಕಿಂತಲೂ ಗೋಚರವಾಗ ದಿರುವುದು ಅಗಾಧವಾದ್ದೆಂದು ಇದನ್ನು ವ್ಯಾಖ್ಯಾನಿಸಿಕೊಳ್ಳಬಹುದು (೧೦.೯೦.೧ : ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸಃ ಭೂಮಿಂ ವಿಶ್ವತಃ ವೃತ್ವಾ ಅತ್ಯತಿಷ್ಠತ್ ದಶಾಂಗುಲಂ ॥). "ಅವ್ಯಕ್ತ, ಮಹತ್, ಇತ್ಯಾದಿ ವಿಲಕ್ಷಣಯುಕ್ತ ಚೇತನವು" ಪುರುಷ ಎಂದು ಸಾಯಣನು ವ್ಯಾಖ್ಯಾನಿಸಿರುವುದು ಗಮನಾರ್ಹ. ಬ್ರಹ್ಮಾಂಡವು ಬೇರೆಯಲ್ಲ, ಪುರುಷನು ಬೇರೆಯಲ್ಲ, ಎಂದಾಗ ಬ್ರಹ್ಮಾಂಡದ ಸೃಷ್ಟಿಕರ್ತನ ಪ್ರಶ್ನೆ ಬರುವುದಿಲ್ಲ. ಇದನ್ನು "ಪ್ಯಾಂತೀಯಿಸಂ" ಎನ್ನುತ್ತಾರೆ. ಇರುವುದೆಲ್ಲಾ ಪುರುಷನೇ; ಈಗಿನದು, ಮುಂದಿನದು, ಎಲ್ಲಾ ಅವನೇ (ಅಥವಾ ಅದೇ). ಪುರುಷನು ಅಮರ ಮತ್ತು ಅಮರತ್ವದ ಅಧಿಪತಿ. ಯಜ್ಞದಲ್ಲಿ ನೀಡಲಾಗುವ ಹವಿಸ್ಸಿನಿಂದ ಅವನು ವರ್ಧಿಸುತ್ತಲೇ ಇರುತ್ತಾನೆ (೨ : ಪುರುಷಃ ಏವ ಇದಂ ಸರ್ವಂ ಯತ್ ಭೂತಂ ಯಚ್ಚ ಭವ್ಯಂ । ಉತ ಅಮೃತತ್ವಸ್ಯ ಈಶಾನಃ ಯತ್ ಅನ್ನೇನ ಅತಿರೋಹತಿ ॥).

ಚರಿತ್ರೆಯ ದೃಷ್ಟಿಯಿಂದ ಕೆಲವು ಅಂಶಗಳನ್ನಿಲ್ಲಿ ಸ್ಪಷ್ಟಪಡಿಸಿಕೊಳ್ಳಬೇಕು. ಋಗ್ವೇದದ ಆದಿಭಾಗದ ಬುಡಕಟ್ಟು ಸಮಾಜದಲ್ಲಿ ಆಚರಣೆಗಳೆಲ್ಲಾ ಸಾಮೂಹಿಕ ವಾದವು. ಅಲ್ಲಿಯ ಆಶಯಗಳು ಇಡೀ ಸಮುದಾಯದ್ದು. ಆ ಆಶಯಗಳು ಹಾಗೂ ಆಚರಣೆಗಳು ವೈಯಕ್ತಿಕ ಮಟ್ಟಕ್ಕೆ ಬರುವುದು ಬುಡಕಟ್ಟಿನ ವಿಘಟನೆಯ ನಂತರದಲ್ಲಿ. ಅಲ್ಲಿಂದ ಮುಂದಕ್ಕೆ ಯಜ್ಞವು ಬಹಳ ಸಂಕೀರ್ಣವಾದ ಆಚರಣೆಯಾಗುತ್ತದೆ, ಫಲವು ಒಬ್ಬ ಯಜಮಾನನದಾಗಿರುತ್ತದೆ, ಯಜ್ಞದ ಸಂಯೋಜನೆಗೆ ಪರಿಕರಗಳು ಅನೇಕವಾಗುತ್ತವೆ, ಪುರೋಹಿತ ವರ್ಗವೊಂದು ಬೆಳೆಯುತ್ತದೆ ಮತ್ತು ಯಜ್ಞವಿಧಿಯು ಸರಳವಾಗಿರದೆ ತಾಂತ್ರಿಕ ಕ್ರಿಯೆಗಳನ್ನು ಮೈಗೂಡಿಸಿಕೊಳ್ಳುತ್ತದೆ. ಉದಾಹರಣೆಗೆ, ಸಮಿತ್ತನ್ನು ಎಡಗಡೆ ಇಡಬೇಕೋ ಅಥವಾ ಬಲಗಡೆ ಇಡಬೇಕೋ ಎನ್ನುವುದೇ ಒಂದು ನಿಗೂಢ ವಿಷಯವಾಗಿ ಬಿಡುತ್ತದೆ. ವೇದಿಯನ್ನು ಯಾವ ದಿಕ್ಕಿನಲ್ಲಿಡಬೇಕು, ಎಷ್ಟು ವೇದಿಗಳಿರಬೇಕು, ಯಾವ ವೇದಿಯಲ್ಲಿ ಯಾವ ಹವಿಸ್ಸು ನೀಡಬೇಕು, ಎಂಬಂತಹ ಪ್ರಶ್ನೆಗಳಿಗೆಲ್ಲಾ ಎಲ್ಲಿಲ್ಲದ ಮಹತ್ವವನ್ನು ಹೇರಲಾಗುತ್ತದೆ. ಈ ಪ್ರಕ್ರಿಯೆಗಳನ್ನು ಯಜುರ್ವೇದವು ವಿಸ್ತೃತವಾಗಿ ವಿವರಿಸುತ್ತದೆ. ಪುರುಷ ಸೂಕ್ತವು ಕಾಲಾನುಕ್ರಮದಲ್ಲಿ ಎಷ್ಟು

ಅರ್ವಾಚೀನವಾದುದೆಂದರೆ ಅದರ ರಚನೆಯ ವೇಳೆಗಾಗಲೆ ಯಜುರ್ವೇದ ಮತ್ತು ಸಾಮವೇದಗಳ ರಚನೆ ಆಗಿಹೋಗಿದೆ, ಯಜ್ಞವು ಅತಿಯಾಗಿ ಸಂಕೀರ್ಣಗೊಂಡಿದೆ ಮತ್ತು ಸಮಾಜವು ವಿಘಟನೆಗೆ ಗುರಿಯಾಗಿ ಶ್ರೇಷ್ಠ–ಕನಿಷ್ಠ ಎಂಬ ಆಧಾರದಲ್ಲಿ ವರ್ಣಗಳು ಸ್ಥಾಪನೆಗೊಂಡಿವೆ. ಇದೆಲ್ಲದರ ಪರಿಣಾಮವಾಗಿ ವಿಶ್ವದ ಬಗೆಗಿನ ಚಿಂತನೆಯಲ್ಲಿ "ಅಯ್ಯೋ, ಇದೇನು ? ಇದು ಬಂದದ್ದಾದರೂ ಹೇಗೆ ? ಇದೆಷ್ಟು ಅದ್ಭುತವಾಗಿದೆ ಮತ್ತು ತಿಳಿವಳಿಕೆಗೆ ನಿಲುಕದಾಗಿದೆ ?" ಎಂಬ ಪ್ರಶ್ನೆಗಳ ಹಿಂದಿನ ಗಾಢ ವಿಸ್ಮಯದ ಜಾಗದಲ್ಲಿ "ಇದು ಹೀಗೆ, ಇದು ಆದದ್ದೇ ಈ ರೀತಿಯಲ್ಲಿ, ಯಜ್ಞದಿಂದ ಎಲ್ಲವುಗಳ ಪ್ರಾದುರ್ಭಾವವಾಯಿತು" ಎಂಬಂತಹ ನಿಷ್ಕರ್ಷೆಗಳು ಸ್ಥಾಪನೆಗೊಂಡಿವೆ. ಆರಂಭಿಕ ಕಾಲದ ಋತದ ಪರಿಕಲ್ಪನೆಯಾಗಲಿ, ನಾಸದೀಯ ಸೂಕ್ತವು ನೀಡುವಂತಹ ವಿವೇಚನೆಯಾಗಲಿ, ಈ ಅರ್ವಾಚೀನ ಚಾರಿತ್ರಿಕ ಘಟ್ಟದಲ್ಲಿ ಪ್ರಕರ್ಷವಾದ ಸ್ಥಾನ ಪಡೆಯುವುದಿಲ್ಲ. ಯಜುರ್ವೇದ ಮತ್ತು ಅದರ ನಂತರದ ಬ್ರಾಹ್ಮಣಗಳೆಂಬ ಗ್ರಂಥಗಳಲ್ಲಿ ಯಜ್ಞಸಂಬಂಧಿ ಪ್ರತಿಪಾದನೆಗಳನ್ನು ಯಾವ ಶೈಲಿಯಲ್ಲಿ ಮುಂದಿಡಲಾಗಿದೆಯೋ ಅದಕ್ಕೆ ಪೂರ್ವಪೀಠಿಕೆಯಂತಿರುವುದು ಪುರುಷಸೂಕ್ತ. ಕಟ್ಟುನಿಟ್ಟಾದ ವರ್ಣ ವಿಭಜನೆಯ ಮಂತ್ರವು ಈ ಸೂಕ್ತದಲ್ಲಿ ಇರದಿದ್ದಲ್ಲಿ ಅದಕ್ಕೆ ಮುಂದಿನ ಕಾಲದಲ್ಲಿ ದೊರೆತ ಪ್ರಾಮುಖ್ಯತೆ ಖಂಡಿತಕ್ಕೂ ದೊರೆಯುತ್ತಿರಲಿಲ್ಲ. ಈ ಸೂಕ್ತವು ಎಷ್ಟು ಪ್ರಶಸ್ತವೆಂದು ಗುರುತಿಸಲಾಯಿತೆಂದರೆ ಅದನ್ನು ಎಂಥದೇ ಆಚರಣೆಯಲ್ಲೂ ಬಳಸುವ ಸಂಪ್ರದಾಯವಿದೆ. ಯಜ್ಞದಲ್ಲಿ ಅದಕ್ಕೆ ಸ್ಥಾನವಿರುವಂತೆ ದೇವರ ಪೂಜೆಯಲ್ಲಿ, ಶ್ರಾದ್ಧ ಕರ್ಮಗಳಲ್ಲಿ, ವಿವಿಧ ವ್ರತಗಳಲ್ಲಿ, ಅದಕ್ಕೆ ಭದ್ರವಾದ ಸ್ಥಾನವಿದೆ. ದಾರ್ಶನಿಕ ಚಿಂತನೆಯ ದೃಷ್ಟಿಯಿಂದ ನೋಡಿದರೆ ಇದು ಬಹಳ ಮಾಮೂಲಿಯಾಗುವಂತಹ ಸೂಕ್ತ. ನಾಸದೀಯ ಸೂಕ್ತದ ಗಾಂಭೀರ್ಯ, ಋತದ ಕಲ್ಪನೆಯ ವ್ಯಾಪಕತೆ, ವರುಣನಂತಹ ದೇವತೆಯ ನೈತಿಕ ಆಳ್ವಿಕೆ, ಹೀಗೆ ಯಾವುದರ ಸೂಚನೆಯೂ ಈ ಸೂಕ್ತದಲ್ಲಿಲ್ಲ. ಯಜ್ಞದ ಯಾಂತ್ರಿಕ ಕ್ರಿಯೆಗಳಿಗೆ ಪ್ರಧಾನ ಸ್ಥಾನವು ದೊರೆಯಲಾರಂಭಿಸಿದ ಪರ್ವಕಾಲಕ್ಕೆ ಸೇರಿದ್ದು ಪುರುಷಸೂಕ್ತ. ಅದರ ಮುಂಚಿನ ಮತ್ತು ನಂತರದ ಘಟ್ಟಗಳು ಗುಣಾತ್ಮಕವಾಗಿ ಭಿನ್ನವಾದುವು. ವೇದಕಾಲೀನ ಸ್ಥಿತ್ಯಂತರಗಳ ಮಹತ್ವದ ಘಟ್ಟಗಳಲ್ಲಿ ಪುರುಷಸೂಕ್ತವು ವಿಶೇಷವಾದ ಸ್ಥಾನವನ್ನು ಹೊಂದಿದೆ.

## ರೊಮಿಲಾ ಥಾಪರ್ ಉಪನ್ಯಾಸ

### ಜನವರಿ ೨೧ಕ್ಕೆ ಮಂಗಳೂರಿನಲ್ಲಿ



ಖ್ಯಾತ ಇತಿಹಾಸ ತಜ್ಞೆ ರೊಮಿಲಾ ಥಾಪರ್ ದಿನಾಂಕ ೨೧–೦೧–೨೦೧೫ರಂದು 'ಭಾರತೀಯ ಸಮಾಜ ಮತ್ತು ಧರ್ಮ ನಿರಪೇಕ್ಷತೆ' ವಿಷಯ ಕುರಿತು ಉಪನ್ಯಾಸ ನೀಡಲಿದ್ದಾರೆ. ಸಮದರ್ಶಿ ವೇದಿಕೆ, 'ಹೊಸತು' ಪತ್ರಿಕೆ ಹಾಗೂ ಮಂಗಳೂರು ವಿಶ್ವವಿದ್ಯಾಲಯ ಕಾಲೇಜಿನ ಸಹಯೋಗದಲ್ಲಿ ಸಂಜೆ ೪.೩೦ಕ್ಕೆ ಮಂಗಳೂರಿನ ರವೀಂದ್ರ ಕಲಾಭವನ (ವಿ.ವಿ. ಕಾಲೇಜ್)ದಲ್ಲಿ ನಡೆಯಲಿದೆ. ಆಸಕ್ತರಿಗೆ ಸ್ವಾಗತ ಕೋರಲಾಗಿದೆ.

*ಸಂ.*

ಪುರುಷನ ಮಹಿಮೆಯನ್ನು ವಿಜೃಂಭಿಸುತ್ತಾ ಮುಂದಿನ, ಅಂದರೆ ಮೂರನೆಯ, ಮಂತ್ರವು ಹೇಳುತ್ತದೆ, "ವಿಶ್ವವನ್ನೆಲ್ಲಾ ಮೀರಿ ಮೇಲೆ ನಿಲ್ಲುವುದು, ಭೂತ–ಭವಿಷ್ಯಗಳೆಲ್ಲಾ ತಾನಾಗಿರುವುದು, ಇವನ ಮಹಿಮೆ. ಆದರೆ ಅದಕ್ಕಿಂತಲೂ ಹೆಚ್ಚಿನ ಸ್ಥಾನ ಅವನದಾಗಿದೆ. ಇಡೀ ವಿಶ್ವದ ಜೀವ ಮತ್ತು ಭೌತಿಕ ಸಂಕುಲವು ಅವನ ನಾಲ್ಕನೆಯ ಒಂದು ಭಾಗ ಮಾತ್ರ. ಇನ್ನುಳಿದ ನಾಲ್ಕನೆಯ ಮೂರು ಭಾಗವು ದ್ಯುಲೋಕದಲ್ಲಿದೆ; ಅದು ಅಮೃತತ್ವ ಲಕ್ಷಣ ಉಳ್ಳದ್ದು" (೩. ಏತಾವಾನ್ ಅಸ್ಯ ಮಹಿಮಾ ಅತಃ ಜ್ಯಾಯಾನ್ ಚ ಪುರುಷಃ । ಪಾದಃ ಅಸ್ಯ ವಿಶ್ವಾ ಭೂತಾನಿ ತ್ರಿಪಾತ್ ಅಸ್ಯ ಅಮೃತಂ ದಿವಿ ॥). ವಿಶ್ವದ ಜೀವ ಮತ್ತು ಭೌತಿಕ ಸಂಕುಲದ ಭಾಗವು ಕ್ಷೀಣಿಸಬಹುದು, ನಶಿಸಬಹುದು; ಆದರೆ ದ್ಯುಲೋಕದ ಭಾಗವು ಅಮರವಾದ್ದು. ಅಂದರೆ, ಪುರುಷನ ಮೂರು ಭಾಗಗಳು ಮೇಲೇರಿ (ದ್ಯುಲೋಕಕ್ಕೆ) ಹೋದವು, ಉಳಿದ ಒಂದು ಭಾಗವು ಮತ್ತೆ ಇಲ್ಲೇ ನೆಲೆಸಿತು. ಹಾಗೆ ನೆಲೆಸಿದ ಒಂದು ಭಾಗವು ಸರ್ವತ್ರ ವ್ಯಾಪಿಸಿತು, ಜೀವಿ ಮತ್ತು ನಿರ್ಜೀವಿಗಳನ್ನೆಲ್ಲಾ ಆವರಿಸಿ ನಿಂತಿತು (೪ : ತ್ರಿಪಾತ್ ಊರ್ಧ್ವಃ ಉತ್ ಐತ್ ಪುರುಷಃ ಪಾದಃ ಅಸ್ಯ ಇಹ ಅಭವತ್ ಪುನಃ । ತತಃ ವಿಷ್ವಙ್ ವಿ ಅಕ್ರಾಮತ್ ಸಾಶನಾನಶನೇ ಅಭಿ ॥). ಇಲ್ಲಿ ವಿಶ್ವದ ವಸ್ತುಗಳನ್ನು 'ತಿಂದು ಬದುಕುವಂಥವು' ಮತ್ತು 'ತಿನ್ನದೆ ಬದುಕುವಂಥವು' ಎಂದು ವಿಂಗಡಿಸಲಾಗಿದೆ. ಇಲ್ಲಿಯೇ ಉಳಿದ ನಾಲ್ಕನೆಯ ಒಂದು ಭಾಗದಿಂದ ವಿರಾಟ್ (ಅಥವಾ, ವಿರಾಜ್) ಉದಯಿಸಿತು ಮತ್ತು ಆ ವಿರಾಟ್‌ನಿಂದ ಮತ್ತೆ ಪುರುಷನು ಉದಯಿಸಿದ. ಹಾಗೆ ಉದಯಿಸಿದ ಪುರುಷನು ಭೂಮಿಯ ಎಲ್ಲೆಡೆ ಪಸರಿಸಿದನು (೫ : ತಸ್ಮಾತ್ ವಿರಾಟ್ ಅಜಾಯತ ವಿರಾಜಃ ಅಧಿ ಪುರುಷಃ । ಸಃ ಜಾತಃ ಅತಿ ಅರಿಚ್ಯತ ಪಶ್ಚಾತ್ ಭೂಮಿಂ ಅಥಃ ಪುರಃ ॥). ಹಿಂದಿನ ಮಂತ್ರಗಳಲ್ಲಿ ಪ್ರಸ್ತಾಪಿಸಲಾಗಿದ್ದ ಪುರುಷನು ಆದಿರೂಪದ ಪುರುಷ; ಇಲ್ಲಿ ಪ್ರಸ್ತಾಪಿಸಲಾಗಿರುವ ಪುರುಷನು ವಿಕಸಿತ ಪುರುಷ. ಆದಿ ಪುರುಷನಿಗೆ ವಿಕಸಿತ ಪುರುಷನ ರೂಪದಲ್ಲಿ ದೇವತೆಗಳು ಹವಿಸ್ಸನ್ನು ಯಜ್ಞದಲ್ಲಿ ಅರ್ಪಿಸಬೇಕಾದ ಸಂದರ್ಭದಲ್ಲಿ ವಸಂತ ಋತುವು ತುಪ್ಪವಾಗಿ ಕೆಲಸ ಮಾಡಿತು, ಗ್ರೀಷ್ಮ ಋತುವು ಸಮಿತ್ತುಗಳಾದವು ಮತ್ತು ಶರದೃತುವು ಹವಿಸ್ಸಾಯಿತು (೬ : ಯತ್ ಪುರುಷೇಣ ಹವಿಷಾ ದೇವಾಃ ಯಜ್ಞಂ ಅತನ್ವತ । ವಸಂತಃ ಆಸೀತ್ ಆಜ್ಯಂ ಗ್ರೀಷ್ಮಃ ಇಧ್ಮಃ ಶರತ್ ಹವಿಃ ॥). ಅಂದರೆ, ಕಾಲವೆಂಬುದು ಯಜ್ಞದ ಪೂರ್ಣತೆಗೆ ಪೂರಕವೆಂದು ಅರ್ಥ ಮಾಡಿಕೊಳ್ಳಬೇಕೆಂಬ ಸೂಚನೆ ಇದೆಂದು ತೋರುತ್ತದೆ. ಅದು ಯಜ್ಞದಿಂದ ಉದ್ಭವಿಸಲಿಲ್ಲವೆಂದು ಭಾವಿಸಿಕೊಳ್ಳಬೇಕು. ಆಗ್ಗೆ ಇನ್ನೂ ಬೇರಾವುದೂ







**ಹ**ಳೇ ಸೈಕಲ್ಲು ಲಡ್ಡಾಗಿದೆ
ಅದೆಷ್ಟೋ...
ಜೀವಗಳ ಹೊತ್ತು
ಗೋಡೆಗೆ ವಾಲಿದ ಅದಕೆ
ಸ್ಪರ್ಶಿಸುತಿದೆ ತಂಗಾಳಿ ಪದ
ಯಾತ್ರೆ, ಸಂಜೆ ರಂಗು ಬಳಿದು
ತಣ್ಣಗೆ ಮಲಗಿದೆ ಚಕ್ರದಡಿಗೆ.

ಕೈ ಕಾಲು ಮಡಚಿ ನಿಂತ
ಸೈಕಲ್ಲು ಯೋಗಿ
ಅಪ್ರಕಟಿತ ವಾಸನೆಯ
ತರಗೆಲೆಯದು ಹಾರುವ ಒಣಸದ್ದು

ಸಡಿಲ ಚೈನಿಗೆ ವಯಸ್ಸಾಗಿದೆ
ಅದಕೆ ಅವಳ ಹೆಸರ
ಮರೆಮಾಡಿ ಮೈಗೆ
ಜಂಗು ಹೊತ್ತಿಸಿಕೊಂಡಿದೆ
ತುಳಿಯುತ್ತಿದ್ದವ
ನೇತು ಹಾಕಿರುವ ಚೀಲ
ಕನಸೇ ತುಂಬಿಕೊಂಡಂತಿದೆ...

**ಅಕ್ಷತಾ ಕೃಷ್ಣಮೂರ್ತಿ** ಬೇಲೇಕೇರಿ, ಕೆ. ಪಿ. ಸಿ. ಕಾಲೋನಿ, ಕದ್ರಾ, ಕಾರವಾರ, ಉತ್ತರ ಕನ್ನಡ ಜಿಲ್ಲೆ

ಉದ್ಭವಿಸಿರಲಿಲ್ಲವಾದ್ದರಿಂದ ಪುರುಷನನ್ನೇ ಹವಿಸ್ಸಾಗಿ ಅರ್ಪಿಸಬೇಕಾಗಿ ಬಂದಿತೆಂದು ಸಾಯಣನು ವ್ಯಾಖ್ಯಾನಿಸಿದ್ದಾನೆ. ಹಾಗೆ ಅರ್ಪಿಸಿರದಿದ್ದರೆ ಮುಂದಿನ ಸೃಷ್ಟಿಕ್ರಿಯೆಯು ಫಲಿಸುತ್ತಿರಲಿಲ್ಲ; ಅರ್ಪಿಸಿದ್ದರಿಂದ ಮುಂದಿನ ಸೃಷ್ಟಿಯಿಂದಾಗಿ ಹಲವು ಪ್ರಕಾರಗಳು ಉದ್ಭವಿಸಿದವು.

ಯಜ್ಞದ ಪರಿಕರಗಳಲ್ಲಿ ದರ್ಭೆ ಮುಂತಾದ ಹುಲ್ಲುಗಳು ಸೇರಿವೆ. ಅವನ್ನು ಹರವಿ ಅವುಗಳ ಮೇಲೆ ಆಹುತಿಯಾಗಬೇಕಾದ ವಸ್ತುಗಳನ್ನು ಇಡುವುದು ಪದ್ಧತಿ. ಪ್ರಸ್ತುತ ಯಜ್ಞದಲ್ಲಿ ಮೊದಲು ಅಸ್ತಿತ್ವಕ್ಕೆ ಬಂದಿದ್ದ ಪುರುಷನು ಹವಿಸ್ಸಾಗಿ ಅರ್ಪಿಸಲ್ಪಡುವುದಿತ್ತು. ಅವನನ್ನು ದರ್ಭೆಯ ಮೇಲಿಟ್ಟು ದೇವತೆಗಳು, ಸಾಧ್ಯರು, ಋಷಿಗಳು, ಎಲ್ಲರೂ ಯಜ್ಞದಲ್ಲಿ ಅವನನ್ನು ಅರ್ಪಿಸಿದರು (೭ : ತಂ ಯಜ್ಞಂ ಬರ್ಹಿಷಿ ಪ್ರ ಔಕ್ಷನ್ ಪುರುಷಂ ಜಾತಂ ಅಗ್ರತಃ। ತೇನ ದೇವಾಃ ಅಯಜಂತ ಸಾಧ್ಯಾಃ ಋಷಯಶ್ಚ ಯೇ॥). ಋಗ್ವೇದದಲ್ಲಿ ಸಾಧ್ಯರನ್ನು ಹೆಸರಿಸಿರುವುದು ಮೂರು ಬಾರಿ ಮಾತ್ರ. ಅದೂ ಕಡೆಯ ಹಂತದಲ್ಲಿ ರಚಿತವಾದ ಎರಡು ಸೂಕ್ತಗಳಲ್ಲಿ; ಪುರುಷಸೂಕ್ತದಲ್ಲಿ ಎರಡು ಬಾರಿ. ಆರಂಭಿಕ ಹಂತದ ಋಗ್ವೇದದಲ್ಲಿ ಇವರ ಸುಳಿವಿಲ್ಲ. ಇವರನ್ನು ಮೊದಲ ಯಾಜ್ಞಿಕರೆಂದು ಪರಿಗಣಿಸಲಾಗಿದೆ. ಯಜ್ಞವು ಸಂಕೀರ್ಣವಾದ ಆಚರಣೆಯಾದ ಕಾಲದಲ್ಲಿ ಹುಟ್ಟಿಕೊಂಡವರು ಇವರು. ಅವರಿಗೆ ಯಜ್ಞಪಶುವಾಗಿ ಲಭಿಸಿದವನು ಪುರುಷ. ಬಹುಶಃ ಅವನನ್ನು ಯೂಪಸ್ತಂಭಕ್ಕೆ ಕಟ್ಟಿರಲೂಬಹುದು. ಅವನನ್ನು ಆಹುತಿಯಾಗಿ ನೀಡಿದಾಗ ಸಾಕಷ್ಟು ಮೇದಸ್ಸು ಅಥವಾ ಕೊಬ್ಬು ಹೊರಹೊಮ್ಮಿರಬೇಕು. ಅದನ್ನೆಲ್ಲಾ ಸಂಗ್ರಹಿಸಿಕೊಳ್ಳಲಾಯಿತು. ಪುರುಷನು ಅದನ್ನು ಮೂರು ವಿಧದ ಪಶು ಅಥವಾ ಪ್ರಾಣಿಗಳನ್ನಾಗಿ ಮಾಡಿದನು : ಪಕ್ಷಿಗಳು, ಕಾಡುಮೃಗಗಳು ಮತ್ತು ಗ್ರಾಮಗಳಲ್ಲಿ ಸಂಗೋಪನೆ ಮಾಡಲಾಗುವ ಪಶುಗಳು (೮ : ತಸ್ಮಾತ್ ಯಜ್ಞಾತ್ ಸರ್ವಹುತಃ ಸಂಭೃತಂ ಪೃಷತ್ ಆಜ್ಯಂ। ಪಶೂನ್ ತಾನ್ ಚಕ್ರೇ ವಾಯವ್ಯಾನ್ ಆರಣ್ಯಾನ್ ಗ್ರಾಮ್ಯಾಃ ಚ ಯೇ॥). ಇತ್ತೀಚಿನ ದಿನಗಳಲ್ಲಿ ಭಾರತದ ಕೇಂದ್ರ ಸರ್ಕಾರದಲ್ಲಿ ಅಧಿಕಾರಾರೂಢರಾಗಿರುವ ಕೆಲವು ಸಚಿವರು ಪ್ರಾಚೀನ ಭಾರತದಲ್ಲಿ ಕತ್ತರಿಸಿದ ತಲೆಯನ್ನು ದೇಹಕ್ಕೆ ಮತ್ತೆ ಹೊಲೆದು ಸೇರಿಸುವುದು, ಭಾಂಡ ಅಥವಾ ಪಾತ್ರೆಗಳಲ್ಲಿ ಅಂಡವನ್ನು ಶೇಖರಿಸಿ ಮಗುವನ್ನು ಬೆಳೆಸುವುದು, ಉತ್ತರಾಂಚಲದಲ್ಲಿ ಕಣಾದನು ಪರಮಾಣುವನ್ನು ಸ್ಫೋಟಿಸುವುದು, ಎಲ್ಲಾ ನಡೆಯುತ್ತಿದ್ದುವೆಂದು ಹೇಳುತ್ತಾ ತಮ್ಮ ವಿದ್ವತ್ತನ್ನು ಮೆರೆಯುತ್ತಿದ್ದಾರೆ. ಋಗ್ವೇದದ ಈ ಮಂತ್ರವನ್ನಾಧರಿಸಿ ಅವರು ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ ಯಜ್ಞದಲ್ಲಿ ದೊರೆತ ಕೊಬ್ಬಿನಿಂದ ಪ್ರಾಣಿ ಮತ್ತು ಪಕ್ಷಿ ಸಂಕುಲವನ್ನು ಸೃಷ್ಟಿಸುವ ಕೌಶಲ್ಯವೂ ಭಾರತದ ಪ್ರಾಚೀನರಿಗೆ ಸಿದ್ಧಿಸಿತ್ತೆಂದು ಹೇಳಿ ಅದನ್ನು ಕೇಂದ್ರೀಯ ವಿದ್ಯಾಶಾಲೆಗಳ ಸಂಸ್ಕೃತದ ಪಠ್ಯಪುಸ್ತಕದಲ್ಲಿ ಸೇರಿಸುವ ಸದವಕಾಶವಿದೆ !

ಅದೇ ಯಜ್ಞದ ಮುಂದುವರಿಕೆಯಾಗಿ ಪುರುಷನನ್ನು ಆಹುತಿ ನೀಡಿದ ಪರಿಣಾಮವಾಗಿ ಋಗ್ವೇದ, ಯಜುರ್ವೇದ ಮತ್ತು ಸಾಮವೇದದ ಆವಿರ್ಭಾವವಾಯಿತು; ಛಂದಸ್ಸುಗಳು ಮತ್ತು ಯಜ್ಞವಿಧಿಯ ಸೂತ್ರಗಳು ಸಹ ಆಗಲೇ ಹುಟ್ಟಿಕೊಂಡವು (೯ : ತಸ್ಮಾತ್ ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ। ಛಂದಾಂಸಿ ಜಜ್ಞಿರೇ ತಸ್ಮಾತ್ ಯಜುಃ ತಸ್ಮಾತ್ ಅಜಾಯತ॥). ಯಜ್ಞದಲ್ಲಿ ಆಹುತಿ ನೀಡಿದಾಗ ಸಾಹಿತ್ಯವು ಸೃಷ್ಟಿಯಾಗಿರುವುದು ಒಂದು ಅನನ್ಯ ಘಟನೆ ! ಯಜ್ಞವನ್ನು ಆಗಲೇ ನಡೆಸುತ್ತಿದ್ದಾರೆ, ಆದರೆ ಯಜ್ಞಕ್ರಿಯೆಯ ಸೂತ್ರಗಳು ಈಗ ತೋರಿಬರುತ್ತಿವೆ ಎಂಬುದು ಸಹ ಒಂದು ವಿಶೇಷ. ಪುರುಷಸೂಕ್ತವು ಸೃಷ್ಟಿಕ್ರಿಯೆಯನ್ನು ಹೇಳುತ್ತಿದೆಯೋ ಅಥವಾ ಯಜ್ಞದ ಮಹಾತ್ಮೆಯನ್ನು ಉತ್ಪ್ರೇಕ್ಷಿಸುತ್ತಿದೆಯೋ ಎಂಬುದನ್ನು ವಾಚಕ ಮಹಾಶಯರೇ ತೀರ್ಮಾನಿಸಿಕೊಳ್ಳಬೇಕು. ರಾಗರಾಗವಾಗಿ ಹುಮ್ಮಸ್ಸಿನಿಂದ ಈ ಮಂತ್ರಗಳನ್ನು ಪಠಿಸುವ ನಮ್ಮ ಪುರೋಹಿತ ವಿದ್ವನ್ಮಣಿಗಳಿಗೆ ಮಂತ್ರಗಳ ಅರ್ಥದ ಬಗ್ಗೆ ಅಸಡ್ಡೆಯು ಅತಾರ್ಕಿಕವಲ್ಲದಿರಬಹುದು ! ಅದಂತಿರಲಿ, ಆದರೆ ಅದೇ ಯಜ್ಞದಲ್ಲಿ ನೀಡಲಾದ ಆಹುತಿಯಿಂದಾಗಿ ಕುದುರೆಗಳು, ಎರಡು ಪಂಕ್ತಿ ಹಲ್ಲುಗಳಿರುವ ಎಲ್ಲ ಪ್ರಾಣಿಗಳು, ಗೋವುಗಳು, ಮೇಕೆಗಳು ಮತ್ತು ಕುರಿಗಳು ಹುಟ್ಟಿದುವು (೧೦ : ತಸ್ಮಾತ್ ಅಶ್ವಾಃ ಅಜಾಯಂತ ಯೇ ಕೇ ಚ ಉಭಯಾದತಃ। ಗಾವಃ ಹ ಜಜ್ಞಿರೇ ತಸ್ಮಾತ್ ತಸ್ಮಾತ್ ಜಾತಾಃ ಅಜಾವಯಃ॥). ಇವೆಲ್ಲಾ ಹೇಗೆ ಜನ್ಮ ತಾಳಿದುವೆಂಬುದು ಯೋಚನೆ ಮಾಡಬೇಕಾದ ವಿಷಯವೇ ಸರಿ. ಅದಕ್ಕಿಂತಲೂ ಮುಖ್ಯವಾದ ವಿಷಯವೆಂದರೆ ಋಗ್ವೇದದ ಕಾಲದ ಪಶುಸಂಗೋಪನೆಯಲ್ಲಿ ಕುದುರೆ ಮತ್ತು ಗೋವುಗಳು ಪ್ರಧಾನ ಸ್ಥಾನ ಪಡೆದಿದ್ದವು ಎಂಬುದು. ಋಗ್ವೇದದಲ್ಲಿ ಕುದುರೆಯು ಹಲವು ಬಾರಿ ಪ್ರಸ್ತಾಪಕ್ಕೆ ಬಂದಿದೆ, ಆದರೆ ಅದು ಹರಪ್ಪ ಸಂಸ್ಕೃತಿಯ ಕಾಲದ ಮೊಹರುಗಳಲ್ಲೆಲ್ಲೂ ಲಭ್ಯವಿಲ್ಲ. ಆದ್ದರಿಂದ ಹರಪ್ಪ ಸಂಸ್ಕೃತಿಯ ನಿರ್ಮಾತೃಗಳು

ಬೇರೆ ಮತ್ತು ಋಗ್ವೇದದ ಬುಡಕಟ್ಟು ಜನ ಬೇರೆ ಎಂದು ತರ್ಕಿಸಲಾಗಿದೆ. ಆದರೆ ಅದೊಂದೇ ತರ್ಕವಲ್ಲ. ಅದಕ್ಕಿಂತಲೂ ಹೆಚ್ಚು ನಿರ್ಣಾಯಕ ಅಂಶಗಳು ಬೇರೆಯವು ಬೇಕಾದಷ್ಟಿವೆ. ಉತ್ಸಾಹಿ ಸಂಶೋಧಕರು ಕೆಲವರು ಗಣಕಯಂತ್ರಗಳ ಸಹಾಯದಿಂದ ಹರಪ್ಪ ಸಂಸ್ಕೃತಿಯ ಮೊಹರುಗಳಲ್ಲಿ ಕುದುರೆಯನ್ನು ಸೃಷ್ಟಿಸಿಬಿಟ್ಟಿದ್ದಾರೆ ಮತ್ತು ಅದನ್ನಾಧರಿಸಿ ಹರಪ್ಪ ಸಂಸ್ಕೃತಿ ಮತ್ತು ಋಗ್ವೇದದ ಕರ್ತೃಗಳು ಒಬ್ಬರೇ ಎಂಬ ಘನವಾದ ತೀರ್ಮಾನವನ್ನು ನೀಡಿ ಸಂತಸ ಅನುಭವಿಸಿದ್ದಾರೆ. ಇಲ್ಲದ್ದನ್ನು ಇದೆಯೆಂದು ಸಾಧಿಸಲು ಪುರಾವೆಗಳನ್ನು ಸೃಷ್ಟಿಸುವುದು ಸಹ ಸಂಶೋಧನೆ ಎನಿಸಿಕೊಳ್ಳುತ್ತದೆ !

ಪುರುಷಸೂಕ್ತದ ಮುಂದಿನ ಎರಡು ಮಂತ್ರಗಳು ಅಧ್ಯಯನಕಾರರಿಗೆ, ಸಮಾಜ ವಿಜ್ಞಾನಿಗಳಿಗೆ, ಇತಿಹಾಸಕಾರರಿಗೆ ಮತ್ತು ಸಿಟ್ಟಿನಿಂದ ಪ್ರತಿಭಟಿಸುವವರಿಗೆ ಫಲವತ್ತಾದ ಕ್ಷೇತ್ರವನ್ನು ತೆರವು ಮಾಡಿಕೊಟ್ಟಿವೆ. ಅವುಗಳ ಮೇಲಿನ ವ್ಯಾಖ್ಯಾನಗಳನ್ನು ಒಂದೆಡೆ ಸಂಗ್ರಹಿಸಿದರೆ ಕನಿಷ್ಠ ಪಕ್ಷ ಎರಡು ಸಾವಿರ ಪುಟಗಳ ವಿಶ್ವಕೋಶವೇ ಆಗಿಬಿಡುವ ಸಾಧ್ಯತೆಯುಂಟು. ಆದರೆ ಖೇದದ ಸಂಗತಿಯೆಂದರೆ ವ್ಯಾಖ್ಯಾನಕಾರರು ಬಹುತೇಕ ಈ ಮಂತ್ರಗಳ ಮತ್ತು ಸೂಕ್ತದ ಚಾರಿತ್ರಿಕ ಹಿನ್ನೆಲೆಗೆ ಅಷ್ಟಾಗಿ ಗಮನ ನೀಡಿಲ್ಲದಿರುವುದು. ನಾವೀಗಾಗಲೆ ಅದನ್ನು ಸಂಕ್ಷಿಪ್ತವಾಗಿ ನಿರೂಪಿಸಿದ್ದಾಗಿದೆ. ಈ ಎರಡು ಮಂತ್ರಗಳ ಅರ್ಥವನ್ನು ಮೊದಲು ಉಲ್ಲೇಖಿಸೋಣ : "ಯಜ್ಞದಲ್ಲಿ ಪುರುಷನನ್ನು ಆಹುತಿಯನ್ನಾಗಿ ಕೊಟ್ಟಾಗ ಅವನನ್ನು ಎಷ್ಟು ಭಾಗ ಮಾಡಿದರು (ಅಥವಾ, ಎಷ್ಟು ಭಾಗಗಳನ್ನಾಗಿ ಕೊಚ್ಚಿ ಹಾಕಿದರು) ? ಅವನ ಮುಖ (ಅಥವಾ ಬಾಯಿ) ಏನಾಯಿತು ? ಅವನ ಎರಡು ತೋಳುಗಳು, ಎರಡು ತೊಡೆಗಳು ಮತ್ತು ಎರಡು ಪಾದಗಳು ಏನಾದವು ?" (೧೧ : ಯತ್ ಪುರುಷಂ ವಿ ಅದಧುಃ ಕತಿಧಾ ವಿ ಅಕಲ್ಪಯನ್ । ಮುಖಂ ಕಿಂ ಅಸ್ಯ ಕೌ ಬಾಹೂ ಕೌ ಊರೂ ಪಾದೌ ಉಚ್ಯೇತೇ ॥). ಲೋಕಪ್ರಸಿದ್ಧವಾದ ಉತ್ತರ ಮುಂದಿನ ಮಂತ್ರದಲ್ಲಿದೆ : "ಅವನ (ಅಂದರೆ, ಯಜ್ಞದಲ್ಲಿ ಆಹುತಿಯಾಗಿ ನೀಡಲಾದ ಪುರುಷನ) ಮುಖವು ಬ್ರಾಹ್ಮಣವಾಯಿತು, ಅವನ ಎರಡು ಬಾಹುಗಳಿಂದ ರಾಜನ್ಯನು (ಅಂದರೆ, ಕ್ಷತ್ರಿಯನು) ಮಾಡಲ್ಪಟ್ಟನು, ಅವನ ಎರಡು ತೊಡೆಗಳಿಂದ ವೈಶ್ಯನನ್ನು ಮಾಡಲಾಯಿತು (ಪದಶಃ ಅರ್ಥ ಹೀಗಿದೆ : ಅವನ ಎರಡು ತೊಡೆಗಳು ವೈಶ್ಯನಿದ್ದನಲ್ಲ ಅವನಾದುವು); ಮತ್ತು, ಅವನ ಪಾದಗಳಿಂದ ಶೂದ್ರನು ಹುಟ್ಟಿದನು" (೧೨ : ಬ್ರಾಹ್ಮಣಃ ಅಸ್ಯ ಮುಖಂ ಆಸೀತ್ ಬಾಹೂ ರಾಜನ್ಯಃ ಕೃತಃ । ಊರೂ ತತ್ ಅಸ್ಯ ಯತ್ ವೈಶ್ಯಃ ಪದ್ಭ್ಯಾಂ ಶೂದ್ರಃ ಅಜಾಯತ ॥). ಇಲ್ಲಿ ಕ್ರಿಯಾಪದಗಳನ್ನು ಗಮನಿಸುವುದು ಅವಶ್ಯಕ. ಬ್ರಾಹ್ಮಣನು ಮುಖವಾದ, ರಾಜನ್ಯನು ಬಾಹುಗಳಿಂದ ಮಾಡಲ್ಪಟ್ಟ, ಎರಡು ತೊಡೆಗಳಿಂದ ವೈಶ್ಯನನ್ನು ಮಾಡಲಾಯಿತು ಮತ್ತು ಪಾದಗಳಿಂದ ಶೂದ್ರನು ಹುಟ್ಟಿದನು. ಈ ಕ್ರಿಯಾಪದಗಳನ್ನು ಪ್ರಜ್ಞಾಪೂರ್ವಕವಾಗಿ ಆಯ್ಕೆ ಮಾಡಿಕೊಳ್ಳಲಾಯಿತೋ ಅಥವಾ ಕವಿತ್ವ ಪ್ರಸಂಗದಲ್ಲಿ ಛಂದಸ್ಸಿನ ಕಾರಣದಿಂದಾಗಿ ಆಕಸ್ಮಿಕವಾಗಿ ಬಂದಿವೆಯೋ ಹೇಳಲು ಬರುವುದಿಲ್ಲ. ಋಗ್ವೇದದಲ್ಲಿ ಇದೊಂದೇ ಕಡೆ ನಾಲ್ಕು ವರ್ಣಗಳ ಹೆಸರುಗಳು ಮತ್ತು ಅವುಗಳ ಶ್ರೇಣೀಕರಣ ಉಲ್ಲೇಖಿಸಲಾಗಿರುವುದು ಎಂಬುದನ್ನು ಮತ್ತೆ ಸ್ಮರಿಸೋಣ. ವಿದ್ವಾನ್ ರಂಗನಾಥ ಶರ್ಮ, ಮಾನ್ಯ ಡಿ. ವಿ. ಗುಂಡಪ್ಪ, ಮೊದಲಾದವರು ಈ ಮಂತ್ರದ ಸಾರವನ್ನು ತಮ್ಮ ತಮ್ಮ ರೀತಿಗಳಲ್ಲಿ ಸಮರ್ಥಿಸಿದ್ದಾರೆ. ಇದು ಶ್ರೇಣೀಕರಣವಲ್ಲ, ಬದಲಾಗಿ ದುಡಿಮೆಯ ವಿಭಜನೆಯ ಸೂಚನೆ, ಎಂಬುದು ಸಾಮಾನ್ಯವಾಗಿ ನೀಡಲಾಗಿರುವ ವಿವರಣೆ. ಆ ವಿಭಜನೆಯನ್ನು ದೇಹದ ಅಂಗಾಂಗಗಳನ್ನು ಹೆಸರಿಸುವುದರ ಮೂಲಕ ಹೇಳಿದ್ದಕ್ಕೆ ನಿರ್ದಿಷ್ಟ ಉದ್ದೇಶವೇನಾದರೂ ಇರಬಹುದೆ ? ಅದು ಸ್ಪಷ್ಟವಾಗಿ ಉತ್ತಮ–ಅಧಮ, ಮೇಲು–ಕೀಳು, ಶ್ರೇಷ್ಠ–ಪ್ರಾಕೃತ, ಎಂಬ ಶ್ರೇಣೀಕರಣವನ್ನು ಸೂಚಿಸುತ್ತಿರಬಹುದೆ ? ಹಾಗೇನೂ ಇಲ್ಲ, ಶರೀರದ ಎಲ್ಲ ಅಂಗಗಳೂ ಸಮಾನವಾದುವು ಮತ್ತು ಎಲ್ಲ ಅಂಗಗಳ ಕ್ರಿಯೆಯೂ ಶರೀರಕ್ಕೆ ಸಮಾನವಾಗಿ ಅಗತ್ಯವಾದುವು, ಎಂಬ ಸಮಾಧಾನ ಹೇಳಿರುವುದುಂಟು. ಮಂತ್ರದೊಳಗಿಂದಲೇ ಅದರ ಅರ್ಥವನ್ನು ಹೊರತೆಗೆಯಬೇಕೇ ವಿನಾ ಬಾಹ್ಯ ಸಂಗತಿಗಳಾದ ಇತಿಹಾಸ, ಸಾಮಾಜಿಕ ಏರು–ಪೇರು, ಮುಂತಾದ ಅಪ್ರಾಸಂಗಿಕ ಸಂಗತಿಗಳನ್ನು ಎಳೆದು ತರಬಾರದು ಎನ್ನುವುದು ಆಧುನಿಕ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಆಗಾಗ್ಗೆ ಕೇಳಿಬರುವ ಮಾತು. ಚಾರಿತ್ರಿಕ ಹಿನ್ನೆಲೆಯನ್ನು ಕೆದಕುವುದನ್ನು ಆಕ್ಷೇಪಿಸಬೇಕೇಕೆ ? ಅದರಿಂದ ಮುಜುಗರವಾಗುತ್ತದೆಂದೆ ? ವಾಸ್ತವಿಕ ಚಾರಿತ್ರಿಕ ಸಂಗತಿಗಳು ಮುಜುಗರವನ್ನೇಕೆ ಉಂಟುಮಾಡಬೇಕು ? ನಮ್ಮ ದೇಶಕ್ಕೆ ಆರ್ಯರು ಹೊರಗಿನಿಂದ ಬಂದರು; ಅಂತೆಯೇ ಹೂಣರು, ಶಕರು, ಕುಶಾಣರು, ಅರಬ್ಬರು, ಬ್ರಿಟಿಷರು, ಫ್ರೆಂಚರು, ಪೋರ್ಚುಗೀಸರು, ಎಲ್ಲರೂ ಬಂದರು. ಮುಜುಗರಪಟ್ಟುಕೊಂಡರೆ ಆ ಸತ್ಯಸಂಗತಿಯು ಇಲ್ಲವಾಗುವುದಿಲ್ಲ. ನಮ್ಮ ಸಮಾಜದ ವಿಕಾಸದ ಒಂದು ಹಂತದಲ್ಲಿ ಚಾರಿತ್ರಿಕವಾಗಿ ವರ್ಣ ವಿಭಜನೆ ಉಂಟಾದ ಘಟ್ಟವಿದ್ದಿತು. ಅದಕ್ಕೆ ಅಂದಿನ ನಾಗರಿಕತೆ ಮತ್ತು ಉತ್ಪಾದನಾ ವ್ಯವಸ್ಥೆ ಕಾರಣಗಳಾಗಿದ್ದವು. ಮುಂದಿನ ಇತಿಹಾಸದ ಘಟ್ಟಗಳಲ್ಲಿ ಊಳಿಗಮಾನ್ಯ ವ್ಯವಸ್ಥೆಗೆ ಇಂಬುಕೊಡಲು ಈ ವರ್ಣ ವಿಭಜನೆಯು ಸಹಕಾರ ನೀಡಿತು. ಅನೇಕ ಸಂದರ್ಭಗಳಲ್ಲಿ ಇದು ಮೇಲು–ಕೀಳು ಎಂಬ ರೀತಿಯಲ್ಲೇ ವಾಸ್ತವವಾಗಿ ಕಂಡುಬಂದಿತು. ವೃತ್ತಿಗೂ ವರ್ಣಕ್ಕೂ ಸಂಬಂಧವಿರಲಿಲ್ಲ ಎಂಬ ಮಾತು ನಿಜವಾಗಬೇಕಾದರೆ ವೃತ್ತಿಗಳ ಆಯ್ಕೆಯಲ್ಲಿ ಪೂರ್ಣ ಸ್ವಾತಂತ್ರ್ಯವಿರಬೇಕಾಗಿತ್ತು. ಆದರೆ ಅದೆಂದೂ ಇರಲಿಲ್ಲ. ಮುಂದಿನ ಧರ್ಮಶಾಸ್ತ್ರಕಾರರು ದಾಖಲಿಸಿರುವಂತೆ ಇದೇ ವಸ್ತುಸ್ಥಿತಿ. ಆಪಸ್ತಂಬ ಎಂಬ ಧರ್ಮಶಾಸ್ತ್ರಕಾರನು "ತೇಷಾಂ ಪೂರ್ವತಃ ಪೂರ್ವೇ ಜನ್ಮತಃ ಶ್ರೇಯಾನ್" ಎಂದಿದ್ದಾನೆ. ಅಂದರೆ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬಲ್ಲಿ) ಮೊದಲು ಹೇಳಲ್ಪಟ್ಟಿರುವವರು ಆಮೇಲೆ ಹೇಳಲ್ಪಟ್ಟಿರುವವರಿಗಿಂತಲೂ ಜನ್ಮತಃ ಶ್ರೇಷ್ಠರು, ಎಂದರ್ಥ. ಇದನ್ನೇ ಹತ್ತಾರು ಬೇರೆ ಸ್ಮೃತಿಕಾರರು ಪುನರುಚ್ಚರಿಸಿದ್ದಾರೆ ಮತ್ತು ಸಾಮಾಜಿಕ ವ್ಯವಹಾರದಲ್ಲಿ ಹಲವು ಶತಮಾನಗಳಿಂದ ಈ ಶ್ರೇಷ್ಠ – ಕನಿಷ್ಠ ಎಂಬುದು ಜೀವಂತವಾಗಿ ಉಳಿದುಬಂದಿದೆ. ಋಗ್ವೇದದ ಕೊನೆಯ ಹಂತದ ವೇಳೆಗೆ ಸಾಮಾಜಿಕವಾಗಿ ಇಂತಹ ಏರುಪೇರಿನ ಸಮಾಜವು ಸಂರಚನೆಗೊಂಡಿತ್ತು. ಅದಕ್ಕೆ ಇಂದು ನಾವು ಪರಿತಪಿಸಬೇಕಾಗಿಲ್ಲ, ಪರಿತಪಿಸಿದರೆ ಪ್ರಯೋಜನವಿಲ್ಲ, ಮತ್ತು ಹಾಗಿರಲಿಲ್ಲ ಎಂದು ಸಬೂಬು ಹೇಳಿದರೆ ಅದು ಅಸತ್ಯವಾಗುತ್ತದೆ, ಅಪ್ರಾಮಾಣಿಕವಾಗುತ್ತದೆ. ಮುಜುಗರವೇನಾದರೂ ಇದ್ದರೆ ಊಳಿಗಮಾನ್ಯ ವ್ಯವಸ್ಥೆಯು ಈ ಕಳಂಕವನ್ನು ಕಿತ್ತೊಗೆಯಬೇಕು, ಅಷ್ಟೆ. ವೃಥಾ ಪುರುಷ ಸೂಕ್ತವನ್ನು ದೂಷಿಸುವುದರಲ್ಲಿ ಅರ್ಥವಿಲ್ಲ. ಹಿಂದೆಯೇ ಹೇಳಿದಂತೆ, ಪುರುಷ ಸೂಕ್ತವು ವರ್ಣ ವಿಭಜನೆಯನ್ನು

## ಜಗದೀಶ ಮಂಗಳೂರಮಠ ನಿಧನ



ಕವಿ, ಚಿಂತಕ ಜಗದೀಶ ಮಂಗಳೂರಮಠ ಅವರು ೧೫.೧೨.೨೦೧೪ರಂದು ಹುಬ್ಬಳ್ಳಿಯಲ್ಲಿ ನಿಧನರಾಗಿದ್ದಾರೆ. ಸರಳ ಬದುಕಿನ, ಸ್ನೇಹಮಯಿ ವ್ಯಕ್ತಿತ್ವದ, ಮಂಗಳೂರಮಠ ಅವರು ಮೂಲತಃ ಪ್ರಗತಿಪರ ಮನೋಭಾವದವರು. ವೃತ್ತಿಯಿಂದ ಸಾರಿಗೆ ನೌಕರರಾಗಿದ್ದರೂ ಅವರ ಮೂಲ ಆಸಕ್ತಿ ಸಾಹಿತ್ಯ ಕ್ಷೇತ್ರವಾಗಿತ್ತು. 'ಕಲ್ಲರಳಿ ಹೂವಾಗಿ', 'ಉರಿಯ ಚಪ್ಪರದೊಳಗೆ, 'ಬರುವೆನೆಂದವನು' ಎಂಬ ಮೂರು ಕವನ ಸಂಕಲನಗಳನ್ನು ಪ್ರಕಟಿಸಿದ್ದ ಅವರು ಹುಬ್ಬಳ್ಳಿ-ಧಾರವಾಡದಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯ ಪ್ರಮುಖರಲ್ಲೊಬ್ಬರಾಗಿದ್ದರು. ಸಾರಿಗೆ ನೌಕರರಾಗಿ ಕಾರ್ಮಿಕ ಸಂಘಟನೆಯಲ್ಲೂ ಕ್ರಿಯಾಶೀಲರಾಗಿದ್ದರು. ಕಾರ್ಮಿಕ ವರ್ಗದ ಸಮಸ್ಯೆಗಳಿಗೆ ಸ್ಪಂದಿಸುತ್ತಲೇ ಕಾರ್ಮಿಕರಲ್ಲಿ ವರ್ಗಪ್ರಜ್ಞೆ ಬೆಳೆಸಲು ನಿರಂತರವಾಗಿ ಶ್ರಮಿಸಿದ್ದರು. ಕೆ.ಎಸ್.ಆರ್.ಟಿ.ಸಿ. ಸ್ಟಾಫ್ ಆ್ಯಂಡ್ ವರ್ಕರ್ಸ್ ಫೆಡರೇಶನ್ ಪದಾಧಿಕಾರಿಯಾಗಿಯೂ ಕೆಲಸ ಮಾಡಿದ್ದರು. ನಿವೃತ್ತಿಯ ನಂತರ ಹೆಚ್ಚು ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದ ಮಂಗಳೂರಮಠ ಅವರು ೭೫ನೇ ವಯಸ್ಸಿನಲ್ಲಿ ಹೃದಯಾಘಾತದಿಂದ ನಿಧನರಾಗಿದ್ದಾರೆ. ಮಡದಿ, ಇಬ್ಬರು ಪುತ್ರರು, ಒಬ್ಬ ಪುತ್ರಿ ಅಪಾರ ಸಂಖ್ಯೆಯ ಸ್ನೇಹವಲಯವನ್ನು ಅಗಲಿದ್ದಾರೆ. ಅವರ ಕುಟುಂಬದ ದುಃಖದಲ್ಲಿ 'ಹೊಸತು' ಬಳಗ ಭಾಗಿಯಾಗುತ್ತ, ಮಂಗಳೂರಮಠ ಅವರಿಗೆ ಅಂತಿಮ ನಮನ ಸಲ್ಲಿಸುತ್ತದೆ.

ಹೇಳಿದ್ದರಿಂದ ಸಮಾಜದಲ್ಲಿ ವಿಭಜನೆಯು ಘಟಿಸಲಿಲ್ಲ; ಆ ವಿಭಜನೆಯು ಅಂದಿನ ಹತ್ತಾರು ಚಾರಿತ್ರಿಕ ಸಂಗತಿಗಳ ಪರಿಣಾಮವಾಗಿ ಮೂಡಿಬಂದ ವ್ಯವಸ್ಥೆ. ಬ್ರಾಹ್ಮಣ – ಕ್ಷತ್ರಿಯ ವರ್ಣದವರು ಉಚ್ಚ ಸ್ಥಾನವನ್ನು ಪಡೆದುಕೊಂಡಿದ್ದ ಕಾಲಘಟ್ಟದಲ್ಲಿ ಪುರುಷಸೂಕ್ತದ ರಚನೆಯಾಗಿದೆ ಎಂಬುದಂತೂ ಶತಸ್ಸಿದ್ಧ.

ಯಜ್ಞದಲ್ಲಿ ಆಹುತಿಯಾದ ಪುರುಷನ ಅಂಗಾಂಗಗಳಿಂದ ವರ್ಣಗಳು ಮಾತ್ರವೇ ಹೊಮ್ಮಲಿಲ್ಲವೆಂಬುದು ಮುಂದಿನ ಮಂತ್ರಗಳಲ್ಲಿ ವ್ಯಕ್ತವಾಗಿದೆ. ಅವನ ಮನಸ್ಸಿನಿಂದ ಚಂದ್ರನು ಉದಿಸಿದ, ಕಣ್ಣುಗಳಿಂದ ಸೂರ್ಯ ಹೊರಬಂದ. ಅವನ ಮುಖದಿಂದ ಅಥವಾ ಬಾಯಿಂದ ಇಂದ್ರ ಮತ್ತು ಅಗ್ನಿ ಹುಟ್ಟಿದರು. ಅವನ ಉಸಿರಿನಿಂದ ವಾಯುವು ರೂಪುತಾಳಿತು (೧೩ : ಚಂದ್ರಮಾಃ ಮನಸಃ ಜಾತಃ ಚಕ್ಷೋಃ ಸೂರ್ಯಃ ಅಜಾಯತ। ಮುಖಾತ್ ಇಂದ್ರಃ ಚ ಅಗ್ನಿಃ ಚ ಪ್ರಾಣಾತ್ ವಾಯುಃ ಅಜಾಯತ॥). ಮನಸ್ಸು ಪ್ರಫುಲ್ಲವಾದ್ದರಿಂದ ಚಂದ್ರನು ಅದರಿಂದ ಉದಿಸಿದ್ದು ಅನ್ವರ್ಥವಾಗಿದೆ. ಕಣ್ಣುಗಳ ಹೊಳಪು ಸದಾ ಉಳಿಯಲೆಂದು ಸೂರ್ಯ ಅವುಗಳಿಂದ ಹೊಮ್ಮಿದನೆನ್ನಬಹುದು.

ಪುರುಷನ ನಾಭಿಯಿಂದ ಅಂತರಿಕ್ಷವು ರಚಿತವಾಯಿತು (ಮತ್ತು ಅಂತರಿಕ್ಷದಲ್ಲಿ ಗಾಳಿಯು ತುಂಬಿದೆ); ಅವನ ತಲೆಯಿಂದ ಆಕಾಶವು ವಿಕಸಿಸಿತು. ಅವನ ಎರಡು ಪಾದಗಳಿಂದ ಭೂಮಿಯೂ ಕಿವಿಗಳಿಂದ ದಿಕ್ಕುಗಳೂ ಮೂಡಿದವು. ಹೀಗೆ ಪ್ರಪಂಚಗಳನ್ನು ದೇವತೆಗಳು ಕಲ್ಪಿಸಿದರು (೧೪ : ನಾಭ್ಯಾಃ ಆಸೀತ್ ಅಂತರಿಕ್ಷಂ ಶೀರ್ಷ್ಣಃ ದ್ಯೌಃ ಸಮವರ್ತತ। ಪದ್ಭ್ಯಾಂ ಭೂಮಿಃ ದಿಶಃ ಶ್ರೋತ್ರಾತ್ ತಥಾ ಲೋಕಾನ್ ಅಕಲ್ಪಯನ್॥). ಸೃಷ್ಟಿಯನ್ನು ಕುರಿತಂತೆ ವಿಶ್ವದ ಅನೇಕ ಪುರಾಣ ಕತೆಗಳಲ್ಲಿ ಈ ರೀತಿಯ ಪ್ರಕ್ರಿಯೆಯನ್ನು ಕುರಿತಂತೆ ಹೇಳಲಾಗಿದೆ. ಗ್ರಿಫ್ಫಿತ್ ಹೇಳುವಂತೆ ಉತ್ತರ ಯೂರೋಪಿನ ಪ್ರಾಚೀನ ಕಾವ್ಯದಲ್ಲಿ ಯೀಮಿರ್ ಅಥವಾ ಹೈಮೀರ್ ಎಂಬ ವಿಶ್ವದೈತ್ಯನ ಶರೀರದಿಂದ ಸೃಷ್ಟಿಯನ್ನು ಮಾಡಲಾಯಿತೆಂದು ಭಾವಿಸಲಾಗಿದೆ. ಅವನ ಮೂಳೆಗಳಿಂದ ಪರ್ವತಗಳು, ತಲೆಬುರುಡೆಯಿಂದ ಆಕಾಶ, ರಕ್ತದಿಂದ ಸಮುದ್ರ ಮತ್ತು ಮಿದುಳಿನಿಂದ ಮೋಡಗಳನ್ನು ಮಾಡಲಾಯಿತಂತೆ. ಪುರಾಣ ಕತೆಗಳ ಕಲ್ಪನಾ ಲಹರಿ ಏನೇ ಇರಲಿ, ಪುರುಷ ಸೂಕ್ತದ ಈ ಮಂತ್ರದ ಒಂದು ವಿಚಾರವು ಸಾರವತ್ತಾಗಿದೆ. ಪುರುಷನ ಕಾಲುಗಳಿಂದ ಶೂದ್ರನು ಜನಿಸಿದನೆಂದು ೧೨ನೆಯ ಮಂತ್ರ ಹೇಳಿದೆ. ಅವೇ ಕಾಲುಗಳಿಂದ ಭೂಮಿಯು ಮೂಡಿತೆಂದು ಈಗ ೧೪ನೆಯ ಮಂತ್ರವು ಹೇಳುತ್ತಿದೆ. ಸಾಂಪ್ರದಾಯಿಕವಾಗಿ ಪುರುಷಸೂಕ್ತದ ನಿರೂಪಣೆಗೆ ಮಾನ್ಯತೆ ನೀಡಿ ತಲೆದೂಗುವವರು ಕನಿಷ್ಠ ಇನ್ನೊಂದಂಶವನ್ನು ಮಾನ್ಯಮಾಡಿ ಅದನ್ನು ಅನುಷ್ಠಾನಕ್ಕೆ ತರಬೇಕು. ಅದೇನೆಂದರೆ, ಪುರುಷನ ಪಾದಗಳಿಂದ ಜನಿಸಿದ ಶೂದ್ರರಿಗೆ ಅವೇ ಪಾದಗಳ ಉತ್ಪನ್ನವಾದ ಭೂಮಿಯನ್ನು ಬಿಟ್ಟುಕೊಡಬೇಕು, ಎಂಬುದು. ಮಾನವರಲ್ಲಿ ಶ್ರೇಣೀಕರಣವನ್ನು ಸಮರ್ಥಿಸುವುದಕ್ಕೆ ಅಂಜದವರು ಈ ಇನ್ನೊಂದು ಸಮರ್ಥನೆಯಿಂದ ಹಿಂಜರಿಯಬಾರದಲ್ಲವೆ?

ಯಜ್ಞದಲ್ಲಿ ಯಜ್ಞಕುಂಡದ ಸುತ್ತ ಮೂರು ಹಸಿರು ಕಡ್ಡಿಗಳನ್ನು ಇರಿಸುವುದು ರೂಢಿ. ಅವನ್ನು 'ಪರಿಧಿಗಳು' ಎಂದು ಕರೆಯುತ್ತಾರೆ. ಮುಂದಿನ ಮಂತ್ರವು ಹಿಂದಿನ ಒಂದು ಮಂತ್ರದಲ್ಲಿ ಹೇಳಿದ್ದುದನ್ನು ಪುನರುಚ್ಚರಿಸುತ್ತದೆ. ಪುರುಷನನ್ನು ಯಜ್ಞಪಶುವನ್ನಾಗಿಸಿ ಕಂಭಕ್ಕೆ ಕಟ್ಟಿಹಾಕುವ ಪ್ರಸಂಗ ಅದು. ಬೇರೆ ಯಜ್ಞಗಳಲ್ಲಿ ಮೂರು ಪರಿಧಿಗಳು; ಆದರೆ ಇಲ್ಲಿ ಏಳು ಪರಿಧಿಗಳನ್ನು ಇರಿಸಲಾಗಿತ್ತು. ಏಳರ ಮೂರರಷ್ಟು, ಅಂದರೆ ಇಪ್ಪತ್ತೊಂದು, ಸಮಿತ್ತುಗಳನ್ನು ಸಿದ್ಧಗೊಳಿಸಲಾಗಿತ್ತು. "ಹೋಮಕ್ಕೆ ಬೇಕಾಗುವ ಅತ್ತಿ, ಅರಳಿ ಮುಂತಾದ ಮರಗಳ ಪುಳ್ಳೆ"ಯು ಸಮಿತ್ತು. (೧೫ : ಸಪ್ತ ಅಸ್ಯ ಆಸನ್ ಪರಿಧಯಃ ತ್ರಿಃ ಸಪ್ತ ಸಮಿಧಃ ಕೃತಾಃ। ದೇವಾಃ ಯತ್ ಯಜ್ಞಂ ತನ್ವಾನಾಃ ಅಬಧ್ನನ್ ಪುರುಷಂ ಪಶುಂ॥). ಏಳು ಎಂಬುದು ಹೇಗೋ ಪವಿತ್ರವಾದ ಸಂಖ್ಯೆಯೆಂದು ಗುರುತಿಸಲಾಗಿತ್ತೆಂದು ತೋರುತ್ತದೆ. ಋಗ್ವೇದದಲ್ಲಿ ಏಳು ಛಂದಸ್ಸುಗಳು (ಗಾಯತ್ರಿ, ಜಗತೀ, ತ್ರಿಷ್ಟುಪ್, ಬೃಹತೀ, ಅನುಷ್ಟುಪ್, ಪಂಕ್ತಿ ಮತ್ತು ಉಷ್ಣಿ) ಪ್ರಸಿದ್ಧವೆಂದು ಸಾಯಣನೂ



ಹರಿದ ಹಾಳೆಯಲ್ಲಿ
ಅವಳ ಚಿತ್ರವಿತ್ತು
ತಾಯ ಮೊಗದ ನಗೆ
ಎಂದೂ ಮಾಸದಂತಿತ್ತು.

**ಡಾ॥ ಪ್ರಕಾಶ ಗ. ಖಾಡೆ**
ನವನಗರ, ಬಾಗಲಕೋಟೆ

ಗುರುತಿಸಿದ್ದಾನೆ. ಬೇರೆಯವೂ ಇವೆ. ಉದಾಹರಣೆಗೆ, ವಿರಾಜ್, ಅತ್ಯಷ್ಟಿ, ಅತಿ ಶಕ್ವರೀ, ಸತೋ ಬೃಹತೀ, ಇತ್ಯಾದಿ. ಇಪ್ಪತ್ತೊಂದು ಸಮಿತ್ತುಗಳು ಏನನ್ನು ಪ್ರತಿನಿಧಿಸುತ್ತವೆಂಬುದನ್ನು ತೈತ್ತಿರೀಯ ಸಂಹಿತೆಯಲ್ಲಿ (೫.೧.೧೦.೩) ಗುರುತಿಸಲಾಗಿದೆ. ೧೨ ತಿಂಗಳುಗಳು, ಐದು ಋತುಗಳು, ಮೂರು ಲೋಕಗಳು ಮತ್ತು ಆದಿತ್ಯ ಸೇರಿ ೨೧ ಸಮಿತ್ತುಗಳೆಂಬುದು ಒಂದು ಕಲ್ಪನೆ. ದೇವತೆಗಳು ಮಾಡಹೊರಟಿದ್ದ ಯಜ್ಞವು ಮೂರ್ತವಾದ ಯಜ್ಞವಲ್ಲ, ಅದು "ಮಾನಸಿಕ ಯಜ್ಞ"ವೆಂದು ಸಾಯಣನು ವ್ಯಾಖ್ಯಾನಿಸಿದ್ದಾನೆ.

ದೇವತೆಗಳು ಯಜ್ಞ ಮಾಡುವಾಗ ಪಶುವನ್ನು ಆಹುತಿಯಾಗಿ ಅರ್ಪಿಸಿದ್ದು, ಅಂದರೆ ಪುರುಷನ ಒಂದು ಭಾಗವನ್ನು ಹವಿಸ್ಸಾಗಿ ಮಾರ್ಪಡಿಸಿದ್ದು, ಯಜ್ಞದ ಒಂದು ಆದಿ ಮಾದರಿ. ಅದನ್ನು ಇಂಗ್ಲಿಷಿನಲ್ಲಿ 'ಪ್ರೋಟೋಟೈಪ್' ಎನ್ನುತ್ತಾರೆ. ಅದರದೇ ನಿಯಮಗಳನ್ನು ಅನುಕರಣೀಯ ಮಾದರಿಗಳೆಂದು ನಂತರದ ಯಜ್ಞ ಕ್ರಿಯೆಗಳಲ್ಲಿ ಅಂಗೀಕರಿಸಲಾಗಿದೆ. "ದೇವತೆಗಳು ಯಜ್ಞದಿಂದ ಯಜ್ಞವನ್ನು ಯಜ್ಞ ಮಾಡಿದರು" ಎಂದು ಪುರುಷಸೂಕ್ತದ ಕಡೆಯ ಮಂತ್ರವು ಹೇಳುತ್ತದೆ. ಅಂದರೆ, ಪುರುಷನು ಯಜ್ಞಪಶುವೂ ಹೌದು, ಯಜ್ಞಪುರುಷನೂ ಹೌದು; ಆಹುತಿಯೂ ಅವನೇ, ಆಹುತಿ ಸ್ವೀಕರಿಸುವವನೂ ಅವನೇ. ಹೇಗೂ ಪುರುಷನ ಒಂದು ಭಾಗವು ಮಾತ್ರ ತಾನೆ ಪಶುವಾಗುವುದು; ಇನ್ನು ಮೂರು ಭಾಗಗಳು ದ್ಯುಲೋಕದಲ್ಲಿವೆ. ಇದರ ಒಂದು ಪ್ರತಿಫಲನವು ಭಗವದ್ಗೀತೆಯಲ್ಲೂ ಇದೆ (೪.೨೪). ಆ ಯಜ್ಞದ ಮಹಿಮಾನ್ವಿತರು ದ್ಯುಲೋಕವನ್ನು (ಮಂತ್ರದಲ್ಲಿ ಅದನ್ನು 'ನಾಕ' ಎನ್ನಲಾಗಿದೆ) ಸೇರಿಕೊಂಡರು. ಅಲ್ಲಿ ಪ್ರಾಚೀನ ಸಾಧ್ಯರು ಮತ್ತು ದೇವತೆಗಳನ್ನವರು ಕೂಡಿಕೊಂಡರು (೧೬ : ಯಜ್ಞೇನ ಯಜ್ಞಂ ಅಯಜಂತ ದೇವಾಃ ತಾನಿ ಧರ್ಮಾಣಿ ಪ್ರಥಮಾನಿ ಆಸನ್। ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ॥).

ಪುರುಷಸೂಕ್ತದ ವೇಳೆಯಲ್ಲೇ, ಅಥವಾ ಸ್ವಲ್ಪ ತರುವಾಯದಲ್ಲಿ, ಯಜುರ್ವೇದದ ತೈತ್ತಿರೀಯ ಸಂಹಿತೆಯು ರಚನೆಗೊಂಡಿತು. ಅದನ್ನು ಕೃಷ್ಣ ಯಜುರ್ವೇದ ಶಾಖೆಯ ಗ್ರಂಥವೆಂದು ಪರಿಗಣಿಸಲಾಗಿದೆ. ಇನ್ನೊಂದು ಪಂಥವು ಶುಕ್ಲ ಯಜುರ್ವೇದದ್ದು. ಅದರ ಸಂಹಿತೆಯನ್ನು ವಾಜಸನೇಯಿ ಸಂಹಿತೆಯೆಂದು ಕರೆಯಲಾಗಿದೆ. ಆ ಎರಡೂ ಸಂಹಿತೆಗಳಲ್ಲಿ ಯಜ್ಞಗಳೇ ಪ್ರಧಾನ ವಸ್ತು. ಯಜ್ಞಗಳ ಸಂಖ್ಯೆಯೂ ಸಾಕಷ್ಟಿದೆ. ಅವುಗಳ ಆಚರಣೆಯ ನಿಯಮಗಳು ಅನುಲ್ಲಂಘನೀಯವಾದ ಯಾಂತ್ರಿಕ ಚಟುವಟಿಕೆಗಳಂತೆ ಚಿತ್ರಿತವಾಗಿವೆ. ಯಜುರ್ವೇದದಲ್ಲಿ ಪ್ರಮುಖವಾಗಿ ಋಗ್ವೇದ ಮಂತ್ರಗಳ ವಿನಿಯೋಗವನ್ನು ನಿರ್ದೇಶಿಸಲಾಗಿದೆ. ಅಂದರೆ, ಯಜ್ಞವಿಧಿಯ ಯಾವ ನಿರ್ದಿಷ್ಟ ಕ್ರಿಯೆಯ ಸಂದರ್ಭದಲ್ಲಿ ಯಾವ ಮಂತ್ರವನ್ನು ಪಠಿಸಬೇಕೆಂಬುದು ಅಲ್ಲಿ ಸೂಚಿತವಾಗಿರುತ್ತದೆ. ಪುರುಷಸೂಕ್ತವು ಅಥರ್ವವೇದದಲ್ಲಿ ಪುನರುಕ್ತವಾಗಿದೆ (೧೯.೬), ಆದರೆ ಅದರಲ್ಲಿ ಬಹಳಷ್ಟು ಬದಲಾವಣೆಗಳನ್ನು ಸಹ ಮಾಡಲಾಗಿದೆ. ಒಂದರ್ಥದಲ್ಲಿ ಯಜ್ಞವು ಸೃಷ್ಟಿಕ್ರಿಯೆಯ ಪ್ರತೀಕವೆಂಬ ತಾತ್ಪರ್ಯವು ಪುರುಷಸೂಕ್ತದಿಂದ ಹೊಮ್ಮುತ್ತದೆ. ಸೂಕ್ತದ ಅಧ್ಯಯನದ ಕೊನೆಯಲ್ಲಿ ಎರಡು ಪ್ರಶ್ನೆಗಳು ಹಾಗೆಯೇ ಉಳಿಯುತ್ತವೆ: (ಅ) ಕಾವ್ಯದೃಷ್ಟಿಯಿಂದ ಸೂಕ್ತದ ಮಹತ್ವದ ಕೊಡುಗೆ ಮನನೀಯವಾಗಿದೆಯೆ? ಮತ್ತು (ಆ) ವಿಶ್ವದ ಅಗಾಧ ವಿಸ್ಮಯವನ್ನು ಕಟ್ಟಿಕೊಡುವ ನಾಸದೀಯ ಸೂಕ್ತದೊಂದಿಗೆ ತುಲನೆ ಮಾಡಿನೋಡಿದರೆ ಪುರುಷಸೂಕ್ತದ ಚಿಂತನೆಯ ಸಾಧನೆ ಏನು? ಚಾರಿತ್ರಿಕವಾಗಿ ಇದು ಸಾಮಾಜಿಕ ಬೆಳವಣಿಗೆಯ ಒಂದು ಘಟ್ಟವನ್ನು ಪ್ರತಿನಿಧಿಸುತ್ತದೆಯೆಂಬುದನ್ನು ಈಗಾಗಲೆ ಚರ್ಚಿಸಿದ್ದೇವೆ. ಆ ಕಾರಣದಿಂದಲೇ ಈ ಸೂಕ್ತವು ಅಷ್ಟು ಪ್ರಾಮುಖ್ಯತೆ ಪಡೆದಿದೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್
ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಬಿಡಿಎ ಆಧುನಿಕ ಬೆಂಗಳೂರಿನ ಶಿಲ್ಪಿ






**ಶ್ರೀ ಸಿದ್ಧರಾಮಯ್ಯ**
ಸನ್ಮಾನ್ಯ ಮುಖ್ಯಮಂತ್ರಿಗಳು

ಬೆಂಗಳೂರು ಜಗತ್ತಿನಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಕೆಲವೇ ಮಹಾ ನಗರಗಳಲ್ಲೊಂದು. 2021ರ ವೇಳೆಗೆ ಇಲ್ಲಿಯ ಜನಸಂಖ್ಯೆ 1 ಕೋಟಿ ತಲುಪಲಿದೆ. ಭಾರತದ ತಂತ್ರಜ್ಞಾನ ರಾಜಧಾನಿ, ಸಿಲಿಕಾನ್ ವ್ಯಾಲಿ ಬೆಂಗಳೂರು ರಾಷ್ಟ್ರದ ಆರ್ಥಿಕ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರ ವಹಿಸುತ್ತಿದೆ. ಬೆಂಗಳೂರಿನ ಈ ಭಾರೀ ಮುನ್ನಡೆಗೆ ಇಲ್ಲಿನ ಔದ್ಯಮಿಕ-ಬೌದ್ಧಿಕ ಸಾಮರ್ಥ್ಯಗಳು, ನಿರಂತರ ಪ್ರಗತಿಪರ ಖಾಸಗೀ, ಸರ್ಕಾರೀ ಕಾರ್ಯಚಟುವಟಿಕೆಗಳೇ ಕಾರಣ.

ಇಂದು ಅಂತರರಾಷ್ಟ್ರೀಯ ಮಹಾನಗರವಾಗುತ್ತಿರುವ ಬೆಂಗಳೂರಿನ ರಭಸದ ಬೆಳವಣಿಗೆಗೆ ಅಗತ್ಯವಾದ ಭಾರಿ ಪ್ರಮಾಣದ ವಸತಿ ಸೌಲಭ್ಯ, ರಸ್ತೆ, ಉತ್ತಮ ಸಾರಿಗೆ ವ್ಯವಸ್ಥೆ, ಮೌಲ್ಯಾಧಾರಿತ ಸೇವೆ ಸೌಕರ್ಯಗಳನ್ನು ಒದಗಿಸುವ ಕಾರ್ಯಗಳು ನಿರಂತರವಾಗಿ ಅಷ್ಟೇ ರಭಸದಿಂದ ಸಾಗುತ್ತಿವೆ.

ಬೆಂಗಳೂರಿನ ಸಮರ್ಪಕ ಬೆಳವಣಿಗೆ, ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿಯೇ 1976ರಲ್ಲಿ ಜನ್ಮ ತಳೆದ ಬಿಡಿಎ (ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ) ಮಹಾನಗರದ ಬೆಳವಣಿಗೆಗೆ ಹೊಸ ತಿರುವು ನೀಡಿ, ಬೆಂಗಳೂರಿನ ಸರ್ವಾಂಗೀಣ ಅಭಿವೃದ್ಧಿಯ ಆಧಾರ ಸ್ತಂಭವಾಗಿ ಬೆಳೆದು ನಿಂತಿದೆ.

### ನಿವೇಶನ ಹಂಚಿಕೆಯಲ್ಲಿ ಸಾಧನೆ

- ನಿರ್ಮಿಸಿರುವ ಬಡಾವಣೆಗಳು-79
- ರಚಿಸಲಾದ ನಿವೇಶನಗಳ ಸಂಖ್ಯೆ-1,44,453
- ರಚಿಸಲಾದ ನಾಗರಿಕ ಸೌಲಭ್ಯ ನಿವೇಶನಗಳು-1,272
- ಒಟ್ಟು ಉದ್ಯಾನ ಮತ್ತು ಆಟದ ಮೈದಾನಗಳು-416

### ವಸತಿ ಯೋಜನೆ

- ವಿವಿಧ ವಿಸ್ತೀರ್ಣದ ಮತ್ತು ವಿವಿಧ ಆದಾಯ ವರ್ಗದ ಜನರಿಗಾಗಿ ಒಟ್ಟು 30,000 ವಸತಿ ಘಟಕಗಳ ನಿರ್ಮಾಣಕ್ಕೆ ಚಾಲನೆ.
- ನಗರದ ಒಟ್ಟು 12 ವಿವಿಧ ಸ್ಥಳಗಳಲ್ಲಿ ವಸತಿ ಸಮುಚ್ಚಯ ನಿರ್ಮಾಣ.
- ಈಗಾಗಲೇ 784 ವಸತಿ ಘಟಕಗಳ ಹಂಚಿಕೆ ಪೂರ್ಣ.
- 6013 ಮನೆಗಳ ನಿರ್ಮಾಣ ಶೀಘ್ರವೇ ಪೂರ್ಣ.
- ಒಂದು, ಎರಡು ಮತ್ತು ಮೂರು ಕೊಠಡಿಗಳ ವಸತಿ ಗೃಹಗಳು.
- ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ವಿಶೇಷ ರಿಯಾಯಿತಿ ದರದಲ್ಲಿ ಒಂದು ಕೊಠಡಿಯ ವಸತಿ ಗೃಹಗಳು.

### ಮೂಲಸೌಕರ್ಯ ಅಭಿವೃದ್ಧಿಗೆ ಆದ್ಯ ಗಮನ

- ಸುಗಮ ಸಂಚಾರಕ್ಕಾಗಿ ಆಯಕಟ್ಟಿನ ಜಂಕ್ಷನ್‌ಗಳಲ್ಲಿ 25ಕ್ಕೂ ಹೆಚ್ಚು ಗ್ರೇಡ್ ಸೆಪರೇಟರ್‌ಗಳ ನಿರ್ಮಾಣ.
- ಇಂದಿರಾನಗರ, ಬನಶಂಕರಿ, ಎಚ್.ಎಸ್.ಆರ್. ಬಡಾವಣೆ, ಎಚ್.ಬಿ.ಆರ್. ಬಡಾವಣೆ ಮುಂತಾದ ವಿವಿಧ ಬಡಾವಣೆಗಳಲ್ಲಿ 14 ವಾಣಿಜ್ಯ ಸಂಕೀರ್ಣಗಳ ನಿರ್ಮಾಣ.

### ದೂರದೃಷ್ಟಿಯ ಯೋಜನೆಗಳು

- ಪೆರಿಫೆರಲ್ ವರ್ತುಲ ರಸ್ತೆ ನಿರ್ಮಾಣದ ಮೂಲಕ ಸಂಚಾರ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಪರಿವರ್ತನೆ ತರುವ ನಿಟ್ಟಿನಲ್ಲಿ ಬಿ.ಡಿ.ಎ. ಕಾರ್ಯೋನ್ಮುಖವಾಗಿದೆ.

### ಕೆರೆಗಳ ಸಮಗ್ರ ಅಭಿವೃದ್ಧಿ

- ಕೆರೆಗಳ ಸಮಗ್ರ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತ್ ಒಟ್ಟು 123 ಕೆರೆಗಳನ್ನು ಬಿ.ಡಿ.ಎ.ಗೆ ವಹಿಸಿದೆ.
- ಮೊದಲನೇ ಹಂತದಲ್ಲಿ 13 ಕೆರೆಗಳ ಸಮಗ್ರ ಅಭಿವೃದ್ಧಿ ಸಾಧಿಸಲಾಗಿದೆ.
- ಎರಡನೇ ಹಂತದಲ್ಲಿ 32 ಕೆರೆಗಳ ಅಭಿವೃದ್ಧಿ ಕೈಗೆತ್ತಿಕೊಳ್ಳಲಾಗಿದೆ.
- 3ನೇ ಹಂತದಲ್ಲಿ 78 ಕೆರೆಗಳ ಅಭಿವೃದ್ಧಿಯನ್ನು ಕೈಗೆತ್ತಿಕೊಳ್ಳಲಾಗುವುದು.

### ನಗರದ ಪರಂಪರೆ ಸಂರಕ್ಷಣೆ-ನಿರ್ಮಾಣಕ್ಕೆ ಕೊಡುಗೆ

- ಪಾರಂಪರಿಕ ತಾಣಗಳಾದ ಲಾಲ್‌ಬಾಗ್ ಕೆರೆ, ಗಾಜಿನ ಮನೆ, ಬ್ಯಾಂಡ್‌ಸ್ಟಾಂಡ್, ಗಾಂಧೀಭವನ ಮತ್ತು ಶ್ರೀ ಕಂಠೀರವ ಕ್ರೀಡಾಂಗಣದ ಒಳಾಂಗಣಕ್ಕೆ ಕಾಯಕಲ್ಪ.
- ಬೆಂಗಳೂರಿನ ಹೃದಯ ಭಾಗದಲ್ಲಿ ಹುತಾತ್ಮ ಯೋಧರಿಗೆ ಶ್ರದ್ಧಾಂಜಲಿ ಅರ್ಪಿಸುವ **"ರಾಷ್ಟ್ರೀಯ ಸೈನಿಕ ಸ್ಮಾರಕ"** ನಿರ್ಮಾಣ.
- ಎಂಟು ಎಕರೆ ವಿಸ್ತೀರ್ಣದಲ್ಲಿ ವಿನೂತನ **"ಶಿಲ್ಪೋದ್ಯಾನ"**.

### ಪರಿಷ್ಕೃತ ಮಾಸ್ಟರ್ ಯೋಜನೆ 2015

- ಮುಂಬರುವ ಹತ್ತು ವರ್ಷಗಳಿಗೆ ಈ ಯೋಜನೆ 1,219.50 ಚ.ಕಿ.ಮೀ.ಗಳ ಸ್ಥಳೀಯ ಯೋಜನಾ ಪ್ರದೇಶ ಈ ಯೋಜನೆಗೆ ಸೇರ್ಪಡೆ. ಗ್ರೇಟರ್ ಬೆಂಗಳೂರು ಪ್ರದೇಶವೂ ಇದಕ್ಕೆ ಸೇರ್ಪಡೆ.



**ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ**
ಟಿ. ಚೌಡಯ್ಯ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು -20
www.bdabangalore.org
ಬಿಡಿಎ ಮುಂದಾಳತ್ವದಲ್ಲಿ ಬೆಂಗಳೂರು ಅಭಿವೃದ್ಧಿ ಪಥದಲ್ಲಿ

ಮೊದಲನೆಯ ಎರಡು ಬಗೆಯ ದುಡಿಮೆಗಳು ಸಂಪಾದನಾ ರಹಿತ ದುಡಿಮೆಗೆ ಸಂಬಂಧಿಸಿದ್ದರೆ ಎರಡನೆಯದು ಸಂಪಾದನಾ ದುಡಿಮೆಗೆ ಸಂಬಂಧಿಸಿದೆ. ಮಹಿಳೆಯರು ಅನೇಕ ಸಂದರ್ಭಗಳಲ್ಲಿ ಎರಡನ್ನೂ ನಿರ್ವಹಿಸಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿರುತ್ತಾರೆ. ಇದನ್ನು ಅನಿವಾರ್ಯ ಅನ್ನುವುದಕ್ಕಿಂತ ಮಹಿಳೆಯರ ಮೇಲಿನ ಹೇರಿಕೆ ಎಂದು ಭಾವಿಸಬಹುದು. ಸಂಪಾದನೆ ಮತ್ತು ಸಂಗೋಪನೆ ಎರಡನ್ನೂ ನಿರ್ವಹಿಸಬೇಕಾಗಿರುವುದರಿಂದ ಮಹಿಳೆಯರು ಪ್ರತಿ ದಿನ 'ಎರಡು ದುಡಿಮೆ ದಿನಗಳನ್ನು' ಬದುಕುತ್ತಿರುತ್ತಾರೆ. ಲಿಂಗ ಅಸಮಾನತೆಗೆ ಇದೊಂದು ಮುಖ್ಯವಾದ ಸೂಚಿಯಾಗಿದೆ. 'ಎಲ್ಲಕ್ಕೆ ಮನೆತನದ ಉದ್ಧಾರ ಸೂತ್ರ' ಎಂಬುದು ಅವ್ವನ ದುಡಿಮೆಯ ಒಂದು ಗುರಿಯಾದರೆ 'ಸರೀಕರ ಮುಂದೆ ತಲೆಯೆತ್ತಿ ನಡೆಯಲಿಕ್ಕೆ' ಎಂಬುದು ಅವಳ ದುಡಿಮೆಯ ಮತ್ತೊಂದು ಗುರಿಯಾಗಿದೆ. ಇದು ಅವಳ ದುಡಿಮೆಯ ಆರ್ಥಿಕ ಮಹತ್ವವನ್ನು ತೋರಿಸುತ್ತದೆ.

# ದುಡಿಮೆ ಸಂಸ್ಕೃತಿ ಮತ್ತು ಲಿಂಗ ರಾಜಕಾರಣ

ಟಿ. ಆರ್. ಚಂದ್ರಶೇಖರ



**ಪ್ರಸ್ತಾವನೆ**

ನಮ್ಮ ಸಮಾಜದ ಸಂದರ್ಭದಲ್ಲಿ ದುಡಿಮೆ/ಕಾಯಕ/ಕೆಲಸ/ಶ್ರಮ/ಕೂಲಿ ಅನ್ನುವುದು ಪ್ರತಿಷ್ಠೆಯ ಸಂಗತಿಯೇನಲ್ಲ (ಇಲ್ಲಿ 'ಶ್ರಮ' ಅನ್ನುವ ನುಡಿಗೆ ಪ್ರತಿಯಾಗಿ 'ದುಡಿಮೆ' ಅನ್ನುವುದನ್ನು ಬಳಸಲಾಗಿದೆ. ಇದಕ್ಕೆ ಒಂದು ಕಾರಣವೆಂದರೆ ಶ್ರಮ ಅನ್ನುವುದು ಎಲೀಟಿಸ್ಟ್ ನುಡಿಯಾಗಿದೆ). ಅದು ಮೈಲಿಗೆಗೆ, ಕೆಳ ಅಂತಸ್ತಿಗೆ ಮತ್ತು ಕೀಳು ಸ್ಥಾನಮಾನಕ್ಕೆ ಕಾರಣವಾಗುವ ಒಂದು ಸಂಗತಿಯಾಗಿದೆ (ಸ್ಕಾರ್ ಲೆಟ್ ಎಪಿಸ್ಟೀನ್. ಟಿ. ೧೯೯೬ : ೩೭). ಮಹಿಳೆಯರು ಸರ್ವೇಸಾಮಾನ್ಯವಾಗಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುತ್ತಾರೆ. 'ಶ್ರಮ ಶಕ್ತಿ ವರದಿ'ಯು ೧೯೮೮ರಲ್ಲಿ ಗುರುತಿಸಿರುವಂತೆ ಶೇ. ೯೦ಕ್ಕಿಂತ ಅಧಿಕ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ದುಡಿಮೆಯನ್ನು ನಮ್ಮ ಸಮಾಜವು ಹೇಗೆ ಪರಿಭಾವಿಸಿಕೊಂಡು ಬರುತ್ತಿದೆ? ಅದರಲ್ಲೂ ಮಹಿಳೆಯರ ದುಡಿಮೆಗೆ ಯಾವ ಸ್ಥಾನವನ್ನು ನೀಡಲಾಗಿದೆ? ಅಲ್ಲಿ ಮಹಿಳೆಯರ ದುಡಿಮೆ ಅನ್ನುವುದನ್ನು ಪುರುಷರ ದುಡಿಮೆಗೆ ಭಿನ್ನವಾಗಿ ನೋಡಲಾಗುತ್ತಿದೆಯೇ? ಮಹಿಳೆಯರ ದುಡಿಮೆಗೆ ಸಂಬಂಧಿಸಿದಂತೆ ಇರುವ ಮಿತಿಗಳು ಯಾವುವು? ದುಡಿಮೆ ಮಾರುಕಟ್ಟೆಯಲ್ಲಿ ಪುರುಷರಿಗೆ ಸಮಾನವಾದ ಅವಕಾಶಗಳು ಮಹಿಳೆಯರಿಗೆ ಲಭ್ಯವಾಗುತ್ತಿವೆಯೇ? ಏಕೆಂದರೆ ಅಭಿವೃದ್ಧಿಯು ಸರ್ವೇಸಾಮಾನ್ಯವಾಗಿ ಅನುಕೂಲಗಳನ್ನು ಹೆಚ್ಚು ಹೆಚ್ಚಾಗಿ ಪುರುಷರಿಗೆ ಒದಗಿಸುತ್ತಿರುತ್ತದೆ. ಇದನ್ನು ಹೀಗೂ ಹೇಳಬಹುದು. ಅಭಿವೃದ್ಧಿಯಲ್ಲಿ ಅನುಕೂಲಗಳನ್ನು ಹೆಚ್ಚು ಹೆಚ್ಚು ಪುರುಷರು ತಮ್ಮ ವಶಪಡಿಸಿಕೊಳ್ಳುತ್ತಿರುತ್ತಾರೆ. ಮಹಿಳೆಯರಿಗೆ ಸಂಬಂಧಿಸಿದಂತೆ ಖಾಸಗಿ (ಕುಟುಂಬ, ಗಂಡ, ಮಕ್ಕಳು ಇತ್ಯಾದಿ...) ಮತ್ತು ಸಾರ್ವಜನಿಕ (ಮನೆಯ ಹೊರಗಿನ ದುಡಿಮೆ) ಎಂಬ ವರ್ಗೀಕರಣದ ಮೂಲದಲ್ಲಿ ಕೆಲಸ ಮಾಡುತ್ತಿರುವ ಸಂಗತಿ ಯಾವುದು? ಲಿಂಗ ಸಮಾನತೆ, ರಾಜಕೀಯ ಪ್ರಾತಿನಿಧ್ಯ, ಮನೆಯ ಹೊರಗಿನ ದುಡಿಮೆ, ಶಿಕ್ಷಣ ಮುಂತಾದ ಸಂಗತಿಗಳು ಮಹಿಳೆಯರ ದೃಷ್ಟಿಯಿಂದ ಇಂದು ಯಾಕೆ ಅಪ್ರಸ್ತುತವಾಗುತ್ತಿವೆ? ದುಡಿಮೆ ಸಂಸ್ಕೃತಿ ಮತ್ತು ದುಡಿಮೆ ಮಾರುಕಟ್ಟೆ – ಎರಡೂ ಅನೇಕ ಬಗೆಯ ಲಿಂಗ ತಾರತಮ್ಯಕ್ಕೆ ಒಳಗಾಗಿವೆ. ಉದ್ಯೋಗ ಅನ್ನುವುದು ಪುರುಷರಿಗೆ ಸಂಬಂಧಿಸಿದ್ದು ಅನ್ನುವ ನಂಬಿಕೆಯು ನಮ್ಮಲ್ಲಿ ಆಳವಾಗಿ ಬೇರೂರಿರುವ ಸಂಗತಿಯಾಗಿದೆ. ಯಾವುದನ್ನು ನಾವು 'ಸಂಪಾದನೆ ಮಾಡುವುದು' (ಬ್ರೆಡ್ ಅರ್ನಿಂಗ್ಸ್) ಎಂದು ಕರೆಯುತ್ತೇವೆಯೋ ಅದು ಪುರುಷವಾಚಿಯಾಗಿದೆ. ಸಂಪಾದನೆ ಮಾಡುವವರು ಪುರುಷರೆಂದು, ಮಹಿಳೆಯರು ಕೇವಲ ಅನುಭೋಗಿಗಳೆಂದು – ಗ್ರಾಹಕರೆಂದು

# ಹೇಮಂತ ಸಾಹಿತ್ಯ ಪ್ರಕಾಶನದ ಅಮೂಲ್ಯಕೊಡುಗೆ

## ಶ್ರೀಮದ್ ವಾಲ್ಮೀಕಿ ಮಹರ್ಷಿ ಪ್ರಣೀತ ಯೋಗವಾಸಿಷ್ಠ

ಯೋಗವಾಸಿಷ್ಠವು ಅದ್ವೈತ ವೇದಾಂತದ ಪ್ರತಿಪಾದನೆಯಾಗಿದ್ದು ಪುರಾಣಗ್ರಂಥಗಳಲ್ಲೆಲ್ಲ ಬೃಹತ್ ಮತ್ತು ಮಹತ್ ಎಂದು ಪರಿಗಣಿತವಾಗಿದೆ. ಖಂಡವಲ್ಲದ ಅಖಂಡ ಕಲ್ಪನೆಯೇ ಅದ್ವೈತದ ಸಾರ. ಇವುಗಳ ಶ್ಲೋಕಗಳು ಮೂಲ ಸಂಸ್ಕೃತದಲ್ಲಿದ್ದು ಇಕ್ಷ್ವಾಕು ಕುಲ ಪುರೋಹಿತ ವಸಿಷ್ಠಮುನಿ ಶ್ರೀರಾಮಚಂದ್ರನಿಗೆ ಉಪದೇಶಿಸಿದಂತೆ ಗುರು-ಶಿಷ್ಯರ ನಡುವಿನ ಸಂವಾದ ರೂಪದಂತಿವೆ. ಪ್ರಾಪಂಚಿಕ ಬದುಕಿನ ಬಗ್ಗೆ ಗಂಭೀರವಾಗಿ ಹೇಳಲ್ಪಟ್ಟ ಜ್ಞಾನೋಪದೇಶವಾಗಿದೆ. ವಸಿಷ್ಠರು ಇಲ್ಲಿ ಜ್ಞಾನಯೋಗಕ್ಕೆ ಹೆಚ್ಚು ಒತ್ತು ಕೊಟ್ಟು ವಿಶೇಷವಾಗಿ ಹೇಳಿರುವುದರಿಂದಲೇ ಇದು 'ಯೋಗವಾಸಿಷ್ಠ' ಎನಿಸಿದೆ. ಹಿಂದಿನ ಯುಗಗಳಲ್ಲಿ ಅತಿ ಶ್ರೇಷ್ಠರೆಂದು ಮಾನ್ಯರಾದ, ಋಷಿಮುನಿ ಪುಂಗವರೆಂದು ಖ್ಯಾತರಾದ, ಇಂದಿಗೂ ಪೂಜ್ಯರೆಂದು ಗೌರವಿಸಲ್ಪಡುವ ಮಹಾಜ್ಞಾನಿಗಳಿಂದ ಅನಂತ ವಿಶ್ವದ ಬಗ್ಗೆ ಮತ್ತೂ ತಿಳಿಯುವ ಹಂಬಲ ತೀವ್ರವಾಗಿತ್ತು. ಅವರ ವಿಚಾರ-ವಿಶ್ಲೇಷಣೆಗಳು ಬ್ರಹ್ಮಾಂಡದ ಉತ್ಪತ್ತಿ - ಜೀವದ ಉಗಮ - ಜೀವಿಯ ಜನನ-ಜೀವನ-ಮರಣ ಮುಂತಾದ ಅಧ್ಯಾತ್ಮಗಳತ್ತ ಹರಿದಿದ್ದವು. ಅಂದಿನವರು ತಮ್ಮ ಬುದ್ಧಿಗೋ ದಿವ್ಯದೃಷ್ಟಿಗೋ ಹೊಳೆದುದನ್ನು ಶ್ಲೋಕಗಳಾಗಿ, ಉಪಕಥೆಗಳೊಂದಿಗೆ, ನೀತಿಕಥೆಗಳೊಂದಿಗೆ ತಮ್ಮ ಮುಂದಿನ ಪೀಳಿಗೆಗೆ ದಾಟಿಸುತ್ತ ಬಂದಿದ್ದಾರೆ. ಈ ಜಿಜ್ಞಾಸೆ ಅಂದಿನಿಂದ ಇಂದಿನವರೆಗೂ ನಡೆದಿದೆ. ಪ್ರಾಪಂಚಿಕ ಸುಖಗಳು ಕ್ಷಣಿಕವಾದುವು, ಪರಬ್ರಹ್ಮವೊಂದೇ ಶಾಶ್ವತ ಎಂಬ ತತ್ತ್ವವು ಅಂದು ಮಾನ್ಯವಾಗಿದ್ದು ತತ್ತ್ವಶಾಸ್ತ್ರಗಳು, ದರ್ಶನಗಳು, ವೇದಪುರಾಣಗಳು ಅದನ್ನೇ ಸಾರಿದವು. ಜ್ಞಾನ -ವೈರಾಗ್ಯಗಳು ಮೇಲುಗೈ ಪಡೆದು ವಿವಿಧ ಚಿಂತನೆಗಳಿಂದಾಗಿ ಬಹು ಶಾಖೆಯ ಜ್ಞಾನದರ್ಶನಗಳು ರೂಪುಗೊಂಡವು. ಕೊನೆಗೆ ಇಡೀ ವಿಶ್ವವೇ ಪರಬ್ರಹ್ಮ ಎಂಬ ಅಂತಿಮ ಸತ್ಯದೊಂದಿಗೆ ಐಕ್ಯಗೊಳ್ಳುವುದೆಂದೂ, ಮತ್ತೆ ಉಗಮವಾಗುವುದೆಂದೂ ನಂಬಲಾಯಿತು. ಬುದ್ಧಿ ವಿಕಾಸಗೊಂಡಂತೆಲ್ಲ, ಜ್ಞಾನಶಾಖೆಗಳು ಬೆಳೆದಂತೆಲ್ಲ ಮಾನವ ಮಾತ್ರವಲ್ಲ, ಸಕಲ ಜೀವಿಗಳು, ಅಣು-ರೇಣು ತೃಣ-ಕಾಷ್ಟಗಳಲ್ಲಿಯೂ ಸರ್ವ ಅಂತರಗಾಮಿಯಾದ ಯಾವುದೋ ಶಕ್ತಿ ಎಲ್ಲವನ್ನೂ ನಿಯಂತ್ರಿಸುವುದೆಂಬ ನಿರ್ಧಾರವೇ ಅಂತಿಮವಾಯಿತು. ಮುಂದೆ ಪರಸ್ಪರ ವಿಚಾರ ವಿನಿಮಯ - ಶ್ರೇಷ್ಠರೆಲ್ಲ ಸೇರಿ ಚರ್ಚೆಗಳು - ವಾಗ್ವಾದಗಳು ಬೆಳೆದಂತೆಲ್ಲ ಅತಿಶ್ರೇಷ್ಠರು ಯಾರೆಂದೂ, ಅತ್ಯುನ್ನತ ಜ್ಞಾನಿ ಯಾರೆಂದೂ ಸಕಲ ವಿದ್ಯಾಪಾರಂಗತರೆಲ್ಲ ಸೇರಿ ಚರ್ಚಿಸಿದರು. - ಹೀಗೆ ಕಥೆಗಳು - ಉಪಕಥೆಗಳು ಬೆಳೆದು ಪ್ರಪಂಚದ ಜ್ಞಾನವನ್ನೆಲ್ಲ ಕ್ರೋಢೀಕರಿಸ ತೊಡಗಿದಾಗ ಇಂತಹ ಮಹಾನ್ ವ್ಯಕ್ತಿಗಳಿಂದ ಬೃಹತ್ ಗ್ರಂಥಗಳ ರಚನೆಯಾಯಿತು. ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯತೆಯನ್ನು ಎತ್ತಿ ತೋರಿಸುವ ಈ ದರ್ಶನ ಗ್ರಂಥವು ಏಳು ಸಂಪುಟಗಳಲ್ಲಿ ಸುಮಾರು 5600 ಪುಟಗಳಷ್ಟಿದ್ದು ಜ್ಞಾನಧಾರೆಯೇ ಹರಿದುಬಂದು ಜನಸಾಗರವನ್ನು ಸೇರುವಷ್ಟು ಅಗಾಧವಾಗಿದೆ. ಹೇಮಂತ ಸಾಹಿತ್ಯದ ಅಗಾಧ ಪರಿಶ್ರಮದ ಪ್ರಕಟಣೆಯಾದ 28,000 ಶ್ಲೋಕಗಳಿರುವ ಇಂಥ ಮಹತ್ವದ ಉದ್ಗ್ರಂಥವನ್ನು ನಾಡಿನ ಶ್ರೇಷ್ಠ ಸಾಹಿತ್ಯ ಪ್ರತಿಭೆಯೆಂದು ಗೌರವಕ್ಕೆ ಪಾತ್ರರಾದ ದೇವುಡು ಕನ್ನಡೀಕರಿಸಿದ್ದಾರೆ.

**ಒಟ್ಟು 7 ಸಂಪುಟಗಳ ಬೆಲೆ ₹ 3150/-**

**ಈ ಮಾಲಿಕೆಯ 8ನೇ ಸಂಪುಟ ಸದ್ಯದಲ್ಲೇ ಬಿಡುಗಡೆಯಾಗಲಿದೆ.**

ಲೇಖಕರು
ಹಿತ್ಲಳ್ಳಿ ಸೂರ್ಯನಾರಾಯಣ ನಾಗೇಂದ್ರ ಭಟ್ಟ



ಸಮಾಜ ಪ್ರತಿಪಾದಿಸಿಕೊಂಡು ಬರುತ್ತಿದೆ. 'ಮಹಿಳೆ' ಅನ್ನುವುದು ಸರಳವಾದ – ಅಖಂಡವಾದ, ಪ್ರಶ್ನಾತೀತವಾದ ಪರಿಕಲ್ಪನೆಯೇನಲ್ಲ. ಅವರನ್ನು ಒಂದು ಅಖಂಡ–ಅಭಿನ್ನ ವರ್ಗವಾಗಿ ಪರಿಭಾವಿಸಿ ಕೊಳ್ಳುವುದು ಸಾಧ್ಯವಿಲ್ಲ. ಮಹಿಳೆಯರಿಗೆ ಸಂಬಂಧಿಸಿದಂತೆ 'ಸಮತೆ' (ಈಕ್ವಾಲಿಟಿ) ಮತ್ತು 'ಭಿನ್ನತೆ' (ಡಿಫ್‌ರೆನ್ಸ್)ಗಳು ಸ್ತ್ರೀವಾದಿಗಳನ್ನು ಆರಂಭ ದಿಂದಲೂ ಕಾಡುತ್ತಿರುವ ಸಂಗತಿಗಳಾಗಿವೆ. ಸಮಾನತೆಯನ್ನು ಒತ್ತಾಯಿಸುವ ಹಿನ್ನೆಲೆಯಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಭಿನ್ನತೆಯ ಸಂಗತಿಗಳಾದ ಜಾತಿ, ಬುಡಕಟ್ಟು, ವರ್ಣ, ವರ್ಗ, ಜನಾಂಗ, ಅಂತಸ್ತು, ಶಿಕ್ಷಣ, ಪ್ರದೇಶ ಮುಂತಾದವು ಗಳನ್ನು ನಿರ್ಲಕ್ಷಿಸುವುದು ಸಾಧ್ಯವಿಲ್ಲ. ಮಹಿಳೆಯರು ತಾವು ಮಹಿಳೆಯರು ಅನ್ನುವ ಕಾರಣಕ್ಕೆ ತಾರತಮ್ಯಕ್ಕೆ (ಲಿಂಗ ಅಸಮಾನತೆ) ಒಳಗಾಗು ತ್ತಿದ್ದಾರೆ ಎಂಬುದು ನಿಜವಾದರೂ ಅವರು ವರ್ಗ ಸಂಬಂಧಿ ನೆಲೆಯಿಂದ (ವರ್ಗ ಅಸಮಾನತೆ) ಜಾತಿ ನೆಲೆಯಿಂದ (ಜಾತಿ ಅಸಮಾನತೆ), ವರ್ಣದ ನೆಲೆಯಿಂದ, ಜನಾಂಗೀಯತೆ ನೆಲೆಯಿಂದ, ಪ್ರದೇಶದ ನೆಲೆಯಿಂದ (ಪ್ರಾದೇಶಿಕ ಅಸಮಾನತೆ), ಮಾರುಕಟ್ಟೆ ಪ್ರಕಾರವನ್ನು ಅವಲಂಬಿಸಿಕೊಂಡು (ಮಾರುಕಟ್ಟೆ ಸಂಬಂಧಿ ಅಸಮಾನತೆ) ಶೋಷಣೆಗೆ ಒಳಗಾಗುತ್ತಿದ್ದಾರೆ ಎಂಬುದು ಅಷ್ಟೇ ನಿಜ (ಮಹಿಳೆಯರು ಯಾವ ರೀತಿಯಲ್ಲಿ ಜಾತಿ ಸಂಬಂಧಿ ಶೋಷಣೆಗೆ ಒಳಗಾಗಿದ್ದಾರೆ ಎಂಬುದಕ್ಕೆ ನೋಡಿ : ಉಮಾ ಚಕ್ರವರ್ತಿ ೨೦೦೬). ನಮ್ಮ ಸಂಸ್ಕೃತಿಯಲ್ಲಿ ಮಹಿಳೆಯರಿಗೆ ಗೌರವದ ಸ್ಥಾನ ನೀಡಲಾಗಿದೆ. ಆದರೆ ಲಿಂಗ ಸಮಾನತೆಯು ನಮ್ಮ ಸಂಸ್ಕೃತಿಯ ಲಕ್ಷಣವೇ ಅಂದರೆ ಉತ್ತರ ಹೇಳುವುದು ಕಷ್ಟ. ಗೌರವ ಬೇರೆ : ಸಮಾನತೆ ಬೇರೆ. ತಾಯಿಯಾಗಿ ಮಹಿಳೆಯರಿಗೆ ನಾವು ಗೌರವ ನೀಡುತ್ತೇವೆ. ಆದರೆ ಹೆಂಡತಿಯಾಗಿ ಅಥವಾ ಬೇರೆ ಹೆಣ್ಣಾಗಿ ಮಹಿಳೆಯರಿಗೆ ಗೌರವ ನೀಡಲಾಗುತ್ತಿದೆಯೇ ಎಂಬುದು ಪ್ರಶ್ನೆಯಾಗಿಯೇ ಇನ್ನೂ ಉಳಿದಿದೆ. ದುಡಿಮೆ ಸಂಸ್ಕೃತಿಯಲ್ಲಿನ ತಾರತಮ್ಯಗಳಿಂದಾಗಿ ಮತ್ತು ದುಡಿಮೆ ಮಾರುಕಟ್ಟೆಯ ಅಸಮಾನತೆಯಿಂದಾಗಿ ಇಂದು ನಮ್ಮ ಸಮಾಜದಲ್ಲಿ ಮಹಿಳೆಯರು ಹುಟ್ಟುವುದೇ ದುರ್ಲಭವಾಗಿಬಿಟ್ಟಿದೆ. ಉದಾಹರಣೆಗೆ ನಮ್ಮ ರಾಜ್ಯದಲ್ಲಿ ಲಿಂಗ ಅನುಪಾತವು ೯೭೩ರಷ್ಟಿದ್ದರೆ ೧೪–೧೯ ವಯೋಮಾನದ ಜನಸಂಖ್ಯೆಯಲ್ಲಿ ಲಿಂಗ ಅನುಪಾತ ೨೦೧೧ರಲ್ಲಿ ೯೩೦ರಷ್ಟಿದೆ. ಒಂದು ಅಂದಾಜಿನ ಪ್ರಕಾರ ನಮ್ಮ ರಾಜ್ಯದಲ್ಲಿ ೨೦೧೧ರಲ್ಲಿ ಲಿಂಗ ಅನುಪಾತ ೧೦೩೦ ಎಂದಿಟ್ಟು ಕೊಂಡರೆ ಕಾಣೆಯಾದ ಮಹಿಳೆಯರ ಸಂಖ್ಯೆ ೧೭.೬೭ ಲಕ್ಷ. ಇದು ಲಿಂಗ ಅಸಮಾನತೆಯ ನಿರ್ಣಾಯಕ ಸೂಚಿಯಾಗಿದೆ. ದುಡಿಮೆ ಅನ್ನುವುದು ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಯರ ಬದುಕಿನ ಅವಿಭಾಜ್ಯ–ಅಂತರ್ಗತ ಭಾಗವಾಗಿದೆ. ಆದರೆ ಅವಳನ್ನು ದುಡಿಮೆಗಾರಳು ಎಂದು ಪರಿಗಣಿಸುವುದಕ್ಕೆ ಸಮಾಜ ಸಿದ್ಧವಿಲ್ಲ. ಅವಳ ದುಡಿಮೆಯನ್ನು ದುಡಿಮೆಯೆಂದು ಪರಿಗಣಿಸುವುದು ಸಾಧ್ಯವಾಗುತ್ತಿಲ್ಲ.

**ಚೌಕಟ್ಟು ೧**

| ದುಡಿಮೆ ಮಾರುಕಟ್ಟೆಯ ಲಿಂಗ ಸಂಬಂಧಿ ಆಯಾಮಗಳು | |
|---|---|
| **ಪುರುಷರು** | **ಮಹಿಳೆಯರು** |
| ಉತ್ಪಾದನೆ | ಅನುಭೋಗ |
| ಮೌಲ್ಯವು ಭೌತಿಕ ಸರಕು–ಸೇವೆಗಳ ರೂಪದಲ್ಲಿರುತ್ತದೆ | ಮಹಿಳೆಯರು ಮೌಲ್ಯವನ್ನು ಬದುಕುತ್ತಿರುತ್ತಾರೆ |
| ಶ್ರಮ ಮಾರುಕಟ್ಟೆ | ಮನೆವಾರ್ತೆ–ಸಂಗೋಪನೆ |
| ಸಂಪಾದನಾ ದುಡಿಮೆ | ಸಂಪಾದನೆ–ಸಂಗೋಪನಾ ದುಡಿಮೆಗಳು |
| ವಿಸ್ತೃತ ಸಂಚಾರದ ಅವಕಾಶಗಳು | ಸೀಮಿತ ಸಂಚಾರದ ಅವಕಾಶಗಳು |
| ಆರ್ಥಿಕತೆಗೆ ಸಂಬಂಧಿಸಿದ್ದು | ಜೈವಿಕತೆಗೆ–ಕುಟುಂಬಕ್ಕೆ ಸಂಬಂಧಿಸಿದ್ದು |
| ಸಾರ್ವಜನಿಕ ಕಾರ್ಯಕ್ಷೇತ್ರ (ಮನೆಯ ಹೊರಗೆ) | ಖಾಸಗಿ ಕಾರ್ಯಕ್ಷೇತ್ರ (ಮನೆಯ ಒಳಗೆ) |
| ಮಾರುಕಟ್ಟೆಗಾಗಿ ದುಡಿಮೆ | ಜೀವನೋಪಾಯ ದುಡಿಮೆ ಮತ್ತು ಮಾರುಕಟ್ಟೆ ದುಡಿಮೆ |
| ಸಾಪೇಕ್ಷವಾಗಿ ಸಂಘಟಿತ ವಲಯದಲ್ಲಿ ದುಡಿಮೆ | ಸಾಪೇಕ್ಷವಾಗಿ ಅಸಂಘಟಿತ ವಲಯದಲ್ಲಿ ದುಡಿಮೆ |
| ಪೂರ್ಣಾವಧಿ, ಖಾಯಂ, ಪ್ರತಿಷ್ಠಿತ ಉದ್ಯೋಗಗಳು | ಅಲ್ಪಾವಧಿ, ತಾತ್ಪೂರ್ತಿಕ, ಹಂಗಾಮಿ, ಕನಿಷ್ಠ ಉದ್ಯೋಗಗಳು |

ಯಾವೆಲ್ಲ ಸಂಗತಿಗಳನ್ನು ಪ್ರಧಾನ ಸಂಸ್ಕೃತಿಯು ಮಹಿಳೆಯರಿಗೆ ನಿಷೇಧಿಸಿತ್ತೋ ಅವೆಲ್ಲವನ್ನೂ ಇಲ್ಲಿ ಅವ್ವ ನಿರ್ವಹಿಸುತ್ತಿದ್ದಾಳೆ. ದುಡಿಮೆ ಅನ್ನುವುದು ನಮ್ಮಲ್ಲಿ ಮುಕ್ಕಾಲುಮೂರುವೀಸೆ ಪಾಲು ಮಹಿಳೆಯರಿಗೆ ಬದುಕಿನ ಅಂತರ್ಗತ–ಅವಿಭಾಜ್ಯ ಭಾಗವಾಗಿದೆ. ಅವರನ್ನು ದುಡಿಮೆಗಾರರಲ್ಲ ಎಂದು ಹೇಳುವುದು ಹೇಗೆ? ನಮ್ಮ ಸಮಾಜ ಮಹಿಳೆಯರನ್ನು ದುಡಿಮೆಗಾರರೆಂದು ಪರಿಗಣಿಸದಿದ್ದರೆ ಅದರ ಮೂಲದಲ್ಲಿ ಪುರುಷ ರಾಜಕಾರಣ ಕೆಲಸ ಮಾಡುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ನಮ್ಮ ಅಖಿಲ–ಭಾರತೀಯ ಅನ್ನಬಹುದಾದ ಪರಂಪರೆಯಲ್ಲಿ ದುಡಿಮೆಯನ್ನು ಪ್ರತಿನಿಧಿಸುವ ಯಾವುದೇ ಆದರ್ಶ ಮಹಿಳೆಯು ಕಂಡುಬರುವುದಿಲ್ಲ (ಸತಿ ಸಾವಿತ್ರಿ ಜಾನಕಿ ಊರ್ಮಿಳೆಯಲ್ಲ ಎಂಬ ಪಿ. ಲಂಕೇಶ್ ಕವನದ ಸಾಲನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈ ವಿಷಯ ಕುರಿತ ವಿವರಗಳಿಗೆ ನೋಡಿ: ಸ್ಕಾರ್‌ಲೆಟ್ ಎಪಿಸ್ಟೀನ್. ಟಿ. ೧೯೯೬ : ೩೩–೫೪). ಇದಕ್ಕೆ ನಮ್ಮ ರಾಜ್ಯದಲ್ಲಿನ ಒಂದು ಅಪವಾದವೆಂದರೆ ವಚನ ಸಂಸ್ಕೃತಿಯಲ್ಲಿ ಬಂದ ವಚನಕಾರ್ತಿಯರು – ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಿಯಮ್ಮ ಇತ್ಯಾದಿ. 'ಮಹಿಳೆಯರ ಸಹಜ ಗುಣಗಳು' (ಫೆಮಿನೈನ್ ಎಸೆನ್ಸಿಯಲಿಸಮ್) ಎಂದು ಯಾವ ಗುಣಗಳನ್ನು ಗುರುತಿಸ ಲಾಗುತ್ತಿದೆಯೋ ಅವುಗಳಲ್ಲಿ 'ದುಡಿಮೆ' ಅನ್ನುವುದು ಗೈರುಹಾಜರಾಗಿದೆ. ಸಮಾಜದಲ್ಲಿರುವ ನಂಬಿಕೆ ಎಂದರೆ ದುಡಿಮೆ ಅನ್ನುವುದು ಮಹಿಳೆಯರ ಸಹಜ ಗುಣವೇನಲ್ಲ.

ಪ್ರಸ್ತುತ ಪ್ರಬಂಧದಲ್ಲಿ ದುಡಿಮೆಯನ್ನು, ಅದರಲ್ಲೂ ಮಹಿಳೆಯರ ದುಡಿಮೆಯನ್ನು ಪರಿಭಾವಿಸಿ ಕೊಂಡಿರುವ ಕ್ರಮ, ಮನೆವಾರ್ತೆ–ಸಂಗೋಪನೆ ಮತ್ತು ದುಡಿಮೆ ಮಾರುಕಟ್ಟೆಗಳ ನಡುವಣ ಸಂಬಂಧ, ಲಿಂಗ ಸಂಬಂಧಿ ಶ್ರಮ ವಿಭಜನೆಯ ಸಮಸ್ಯೆಗಳು, ದುಡಿಮೆ ಮಾರುಕಟ್ಟೆಯಲ್ಲಿ ನಡೆದಿರುವ ಬದಲಾವಣೆ ವಿನ್ಯಾಸ ಮುಂತಾದ ಸಂಗತಿಗಳನ್ನು ಕರ್ನಾಟಕವನ್ನು ಕೇಂದ್ರದಲ್ಲಿಟ್ಟುಕೊಂಡು ಕೆಲವು ಪ್ರಮುಖ ಪ್ರವೃತ್ತಿ ಗಳನ್ನಿಲ್ಲಿ ಚರ್ಚಿಸಲಾಗಿದೆ. ದುಡಿಮೆ ಮಾರುಕಟ್ಟೆಯ ಪುರುಷಶಾಹಿ ನೆಲೆಗಳನ್ನು ಚೌಕಟ್ಟು ೧ರಲ್ಲಿ ತೋರಿಸಿದೆ.

**ಭಾಗ ೧**

**ದುಡಿಮೆಯ ನಿರ್ವಚನ**

ದುಡಿಮೆಯನ್ನು ನಾವು ಹೇಗೆ ನಿರ್ವಚಿಸಿಕೊಂಡು ಬರುತ್ತಿದ್ದೇವೆ? ಇಲ್ಲಿ ಎರಡು ಸಂಗತಿಗಳು ಮುಖ್ಯವಾಗಿವೆ. ಮೊದಲನೆಯದು ಸರಕು–ಸೇವೆಗಳ ನಿರಂತರ ಉತ್ಪಾದನೆ. ಈ ಉತ್ಪಾದನೆಗೆ ನಿರಂತರವಾಗಿ ಸಲ್ಲುವ ಶ್ರಮವೇನಿದೆ ಅದು ದುಡಿಮೆ. ಎರಡನೆಯದು ಉತ್ಪಾದನೆಗೆ ಸಲ್ಲುವ ಶ್ರಮಕ್ಕೆ ಸಂಭಾವನೆ. ಅದು ದುಡಿಮೆ. ಉತ್ಪಾದನೆಗೆ ಸಲ್ಲುವ ಶ್ರಮ ಮತ್ತು ಸಂಭಾವನೆ ಪಡೆಯುವ ಶ್ರಮವನ್ನು ದುಡಿಮೆ ಎಂದು ಕರೆಯಲಾಗುತ್ತದೆ. ಉತ್ಪಾದನೆ ಮತ್ತು ಸಂಭಾವನೆ ಎರಡೂ ಮಾರುಕಟ್ಟೆಗೆ

ಸಂಬಂಧಿಸಿದ ಸಂಗತಿಗಳು (ವಿವರಗಳಿಗೆ ನೋಡಿ ಚೌಕಟ್ಟು ೧). ದುಡಿಮೆಯ ನಿರ್ವಚನದಲ್ಲಿ ಮಾರುಕಟ್ಟೆಯು ಅವಿಭಾಜ್ಯ-ಅಂತರ್ಗತ ಅಂಗವಾಗಿದೆ. ದುಡಿಮೆ ಅನ್ನುವುದು ಮೂರು ಸಂಗತಿಗಳನ್ನು ಒಳಗೊಂಡಿರಬೇಕು.

೧. ನಿರಂತರ ಸರಕು-ಸೇವೆಗಳ ಉತ್ಪಾದನೆ

೨. ಉತ್ಪಾದನೆಗೆ ಸಂದ ಶ್ರಮಕ್ಕೆ ಸಂಭಾವನೆ

೩. ಉತ್ಪಾದನೆ, ಶ್ರಮ, ಸಂಭಾವನೆ ಮುಂತಾದವು ಮಾರುಕಟ್ಟೆಯಲ್ಲಿ ಸಂಭವಿಸುವ ಸಂಗತಿಗಳು.

ಈ ಮೂರು ಸಂಗತಿಗಳಿದ್ದಾಗ ಮಾತ್ರ ಅದನ್ನು ದುಡಿಮೆ-ಶ್ರಮ ಎಂದು ಪರಿಗಣಿಸಲಾಗುತ್ತದೆ. ಆದರೆ ಮಹಿಳೆಯರ ದುಡಿಮೆಗೆ ಸರ್ವೇಸಾಮಾನ್ಯವಾಗಿ ಮೇಲೆ ತಿಳಿಸಿದ ಗುಣಗಳಿರುವುದಿಲ್ಲ. ಮಹಿಳೆಯರ ದುಡಿಮೆಯು ಹೆಚ್ಚಾಗಿ ಮನೆಗೆ, ಕುಟುಂಬಕ್ಕೆ, ತಮ್ಮ ಹೊಲ-ಗದ್ದೆಗಳಿಗೆ ಸೀಮಿತವಾಗಿರುತ್ತದೆ. ಅವಳ ದುಡಿಮೆಯು ಸಾಮಾನ್ಯವಾಗಿ ಸಂಪಾದನಾ-ರಹಿತವಾಗಿರುತ್ತದೆ. ಈ ಕಾರಣದಿಂದ ಅವಳನ್ನು ದುಡಿಮೆಗಾರಳೆಂದು ಪರಿಗಣಿಸುವುದಕ್ಕೆ ಸಮಸ್ಯೆಗಳಿವೆ. ಮಹಿಳೆಯರ ದುಡಿಮೆಯನ್ನು ಮಾಪನ ಮಾಡುವುದು ಕಷ್ಟದ ಕೆಲಸ. ದುಡಿಮೆ ಮಾರುಕಟ್ಟೆಯಲ್ಲಿನ ಪರಿಭಾಷೆಯು ಅನೇಕ ಸಂದರ್ಭಗಳಲ್ಲಿ ಮಹಿಳೆಯರನ್ನು ಒಳಗೊಳ್ಳುವುದಿಲ್ಲ. ಅದು ಪುರುಷಶಾಹಿ ಪರಿಭಾಷೆಯಾಗಿದೆ. ಉದಾಹರಣೆಗೆ ಸಾಹುಕಾರ, ದಣಿ, ಸಂಪಾದನೆ ಮಾಡುವವರು, ವ್ಯಾಪಾರಿ, ವಣಿಕ, ಜಮೀನ್ದಾರ, ರೈತ, ದಲ್ಲಾಳಿ, ವಿತರಕ, ಹಮಾಲ, ಲೇವಾದೇವಿಗಾರ, ಮಾಲೀಕ, ಕೂಲಿ, ಮಾರಾಟಗಾರ ಇತ್ಯಾದಿ. ಈ ಎಲ್ಲ ಕಾರಣಗಳಿಂದ ಮಹಿಳೆಯರು ದುಡಿಮೆಯ ಭಾಗವಾಗಿದ್ದರೂ ಅದರಿಂದ ವಂಚಿತರಾಗಿದ್ದಾರೆ. ದುಡಿಮೆಯ ವ್ಯಾಖ್ಯೆಯ ವ್ಯಾಪ್ತಿಯಿಂದ ಮಹಿಳೆಯರು ಹೊರಗುಳಿದಿದ್ದಾರೆ. ಪುರುಷರು ಮಾಡುವುದು 'ಸಂಪಾದನೆ'ಯಾದರೆ (ಉತ್ಪಾದನೆ) ಮಹಿಳೆಯರು ಮಾಡುವುದು 'ಸಂಗೋಪನೆ' (ಅನುಭೋಗ) ಎಂದು ಹೇಳಲಾಗುತ್ತದೆ. ಸಂಪಾದನೆಯಿಂದ ಕೂಡಿದ್ದು ಮಾತ್ರ ದುಡಿಮೆ. ಸಂಗೋಪನೆಯಲ್ಲಿ ಶ್ರಮ ಸಲ್ಲುತ್ತಿರಬಹುದು. ಆದರೆ ಅದು ದುಡಿಮೆಯಲ್ಲ. ಈ ಬಗೆಯ ನಿರ್ವಚನಕ್ಕೆ ಯಾವುದೇ ಅರ್ಥವಿಲ್ಲ. ಮಹಿಳೆಯರು ಹೆಚ್ಚುವರಿ ದುಡಿಮೆಯನ್ನು ಸಮಾಜದಲ್ಲಿ ಸಲ್ಲಿಸುತ್ತಿರುತ್ತಾರೆ. ಈ ಹೆಚ್ಚುವರಿ ಮೌಲ್ಯವನ್ನು ಪುರುಷರು (ಆರ್ಥಿಕತೆ) ಅನುಭವಿಸುತ್ತಿರುತ್ತಾರೆ. ಇಲ್ಲಿ ಬಂಡವಾಳಶಾಹಿ ಮತ್ತು ಪುರುಷಶಾಹಿ - ಎರಡೂ ಒಟ್ಟಿಗೆ ಕೆಲಸ ಮಾಡುವುದನ್ನು ಕಾಣಬಹುದು. ಉತ್ಪಾದನೆಗೆ ಸಂಬಂಧಿಸಿದಂತೆ ಬಂಡವಾಳಶಾಹಿ ಮತ್ತು ಮನೆವಾರ್ತೆಗೆ ಸಂಬಂಧಿಸಿದಂತೆ ಪುರುಷಶಾಹಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಒಟ್ಟಾರೆ ದುಡಿಮೆಯ ವ್ಯಾಖ್ಯೆಗೂ ಮತ್ತು ಅದರ ವಾಸ್ತವಿಕ ಸ್ಥಿತಿಗೂ ನಡುವೆ ಭಿನ್ನತೆಯಿದೆ. ಸಂಪಾದನೆಯು ಪುರುಷರದ್ದಾದರೆ ಮಹಿಳೆಯರು ಸಂಪಾದನೆ ಮತ್ತು ಸಂಗೋಪನೆ ಎರಡನ್ನೂ ನಿರ್ವಹಿಸುತ್ತಿದ್ದಾರೆ. ಅವರ ಸಂಗೋಪನಾ ದುಡಿಮೆಯನ್ನು ದುಡಿಮೆಯೆಂದು ಪರಿಗಣಿಸುವ ಅಗತ್ಯವಿದೆ. ಅದಿಲ್ಲದೆ ಆರ್ಥಿಕತೆಯೊಂದು ಬೆಳೆಯುವುದು ಸಾಧ್ಯವಿಲ್ಲ.

ಉತ್ಪಾದನೆ ಅನ್ನುವುದು ಮನೆಯ ಒಳಗಿನ ಮತ್ತು ಮನೆಯ ಹೊರಗಿನ ದುಡಿಮೆಗಳ ಸಂಯುಕ್ತ ಸಂಗತಿಯಾಗಿದೆ. ಮನೆವಾರ್ತೆಯನ್ನು ಮತ್ತು ಸಂಗೋಪನೆಯನ್ನು ಅನುತ್ಪಾದಕ ಚಟುವಟಿಕೆಗಳು ಎಂದು ಪರಿಗಣಿಸುವ ಕ್ರಮ ಸರಿಯಲ್ಲ. ಉತ್ಪಾದನಾ ಚಟುವಟಿಕೆ ಅನ್ನುವುದು ಮನೆವಾರ್ತೆಗಳಾದ ಆಹಾರವನ್ನು ಸಿದ್ಧಪಡಿಸುವುದು, ಮಕ್ಕಳ ಪಾಲನೆ, ಹೊಲ-ಗದ್ದೆಗಳಿಗೆ ಊಟವನ್ನು ಹೊತ್ತೊಯ್ಯುವುದು, ನೀರು ಸಂಗ್ರಹಿಸುವುದು, ಕಟ್ಟಿಗೆ ತರುವುದು, ಮನೆಯನ್ನು ಸಾರಿಸುವುದು, ಬಟ್ಟೆಗಳನ್ನು ತೊಳೆಯುವುದು ಮುಂತಾದವುಗಳನ್ನು ಅವಲಂಬಿಸಿದೆ. ತಂತ್ರಜ್ಞಾನ ಅನ್ನುವುದು ಕೇವಲ ಯಂತ್ರಗಳಿಗೆ ಅಥವಾ ಉದ್ಯಮದ ನಿರ್ವಹಣೆಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಉತ್ಪಾದನೆಯನ್ನು ಆಗು ಮಾಡಿಕೊಡುವ ಸಾಮಾಜಿಕ ವ್ಯವಸ್ಥಾಪನೆಯ ಪಾತ್ರವನ್ನು ನಿರ್ಲಕ್ಷಿಸುವುದು ಸಾಧ್ಯವಿಲ್ಲ. ಉತ್ಪಾದನೆಗೆ ಪೂರಕವಾಗಿರುವ ಮನೆವಾರ್ತೆ ಮತ್ತು ಸಂಗೋಪನಾ ದುಡಿಮೆಗಳನ್ನು 'ಸಾಮಾಜಿಕ ತಂತ್ರಜ್ಞಾನ' ಎಂದು ಅಮರ್ತ್ಯಸೇನ್ (೧೯೯೦ : ೧೨೮) ಕರೆಯುತ್ತಾನೆ. ಉತ್ಪಾದನೆಗೆ ಪೂರಕ ಸನ್ನಿವೇಶವನ್ನು ಒದಗಿಸುವ ಸಾಮಾಜಿಕ ವ್ಯವಸ್ಥಾಪನೆಯನ್ನು ಸೆನ್ ಉತ್ಪಾದನೆ ಎಂದು ಕರೆಯುತ್ತಾನೆ. ಈ ಬಗೆಯ ಉತ್ಪಾದನೆಯನ್ನು ಹೆಚ್ಚಾಗಿ ಮಹಿಳೆಯರು ನಿರ್ವಹಿಸುತ್ತಿದ್ದಾರೆ. ಈ ಕ್ರಮದಲ್ಲಿ ಸೆನ್ ಮಹಿಳೆಯರ ದುಡಿಮೆಯನ್ನು ಉತ್ಪಾದನಾ ದುಡಿಮೆ ಎಂದು ಪರಿಗಣಿಸುವ ಅಗತ್ಯವನ್ನು ಕುರಿತಂತೆ ಮಾತನಾಡುತ್ತಾನೆ. ಉತ್ಪಾದನೆ, ಸಂಪತ್ತಿನ ಸಂಗ್ರಹ, ಭೌತಿಕ ಸಮೃದ್ಧತೆ - ಇವುಗಳೇ ಬದುಕಿನ-ದುಡಿಮೆಯ ಅಂತಿಮ ಗಂತವ್ಯವಲ್ಲ (ಶುಮಾಂಕರ್. ಈ. ಎಫ್.೧೯೭೩ : ೧೨೬). ಮನುಷ್ಯ ಅನ್ನಿಸಿಕೊಳ್ಳಲು ದುಡಿಮೆ ಬೇಕು. ಅದು ಉತ್ಪಾದನಾ ಸಂಬಂಧಿಯಾಗಿದ್ದರೆ ಮಾತ್ರ ದುಡಿಮೆ, ಅದು ಸಂಗೋಪನಾ ಸಂಬಂಧಿಯಾಗಿದ್ದರೆ ಅದು ದುಡಿಮೆಯಲ್ಲ ಅನ್ನುವುದು ಸೀಮಿತವಾದ ದೃಷ್ಟಿಕೋನವಾಗುತ್ತದೆ. ದುಡಿಮೆಯಿಂದ ಎಷ್ಟು ಮೌಲ್ಯದ ಉತ್ಪಾದನೆಯಾಯಿತು ಅನ್ನುವುದಕ್ಕಿಂತ ದುಡಿಮೆಯನ್ನೇ ಮೌಲ್ಯವೆಂದು ಬದುಕುವ ಕ್ರಮದ ಬಗ್ಗೆ ಸ್ತ್ರೀವಾದ ನಮ್ಮ ಗಮನ ಸೆಳೆಯುತ್ತಿದೆ (ಇರನಿ ವಾನ್ ಸ್ಟಾವರೆನ್. ೨೦೦೫; ೮೩-೧೧೧). ಮಹಿಳೆಯರು ದುಡಿಮೆಯನ್ನು ಬದುಕುತ್ತಿದ್ದಾರೆ. ಅವರ ದುಡಿಮೆಗೆ ಮಾರುಕಟ್ಟೆ ಮೌಲ್ಯ ಇಲ್ಲದೆ ಇರಬಹುದು. ಆದರೆ ಅದಿಲ್ಲದೆ ಉತ್ಪಾದನೆಯು ಸಾಧ್ಯವಿಲ್ಲ. ಅದನ್ನು ದುಡಿಮೆಯಲ್ಲ ಎಂದು ಪರಿಗಣಿಸುವುದು ಲಿಂಗ ತಾರತಮ್ಯದ ಸಂಗತಿಯಾಗುತ್ತದೆ.

### ಭಾಗ ೨

### ಮನೆವಾರ್ತೆ-ಸಂಗೋಪನೆ ಮತ್ತು ದುಡಿಮೆ ಮಾರುಕಟ್ಟೆ

ಮೊದಲನೆಯ ಎರಡು ಬಗೆಯ ದುಡಿಮೆಗಳು ಸಂಪಾದನಾ ರಹಿತ ದುಡಿಮೆಗೆ ಸಂಬಂಧಿಸಿದ್ದರೆ ಎರಡನೆಯದು ಸಂಪಾದನಾ ದುಡಿಮೆಗೆ ಸಂಬಂಧಿಸಿದೆ. ಮಹಿಳೆಯರು ಅನೇಕ ಸಂದರ್ಭಗಳಲ್ಲಿ ಎರಡನ್ನೂ ನಿರ್ವಹಿಸಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿರುತ್ತಾರೆ. ಇದನ್ನು ಅನಿವಾರ್ಯ ಅನ್ನುವುದಕ್ಕಿಂತ ಮಹಿಳೆಯರ ಮೇಲಿನ ಹೇರಿಕೆ ಎಂದು ಭಾವಿಸಬಹುದು. ಸಂಪಾದನೆ ಮತ್ತು ಸಂಗೋಪನೆ ಎರಡನ್ನೂ ನಿರ್ವಹಿಸಬೇಕಾಗಿರುವುದರಿಂದ

ಮಹಿಳೆಯರು ಪ್ರತಿ ದಿನ 'ಎರಡು ದುಡಿಮೆ ದಿನಗಳನ್ನು' ಬದುಕುತ್ತಿರುತ್ತಾರೆ. ಲಿಂಗ ಅಸಮಾನತೆಗೆ ಇದೊಂದು ಮುಖ್ಯವಾದ ಸೂಚಿಯಾಗಿದೆ. 'ಎಲ್ಲಕ್ಕೆ ಮನೆತನದ ಉದ್ಧಾರ ಸೂತ್ರ' ಎಂಬುದು ಅವ್ವನ ದುಡಿಮೆಯ ಒಂದು ಗುರಿಯಾದರೆ 'ಸರೀಕರ ಮುಂದೆ ತಲೆಯೆತ್ತಿ ನಡೆಯಲಿಕ್ಕೆ' ಎಂಬುದು ಅವಳ ದುಡಿಮೆಯ ಮತ್ತೊಂದು ಗುರಿಯಾಗಿದೆ. ಇದು ಅವಳ ದುಡಿಮೆಯ ಆರ್ಥಿಕ ಮಹತ್ವವನ್ನು ತೋರಿಸುತ್ತದೆ. ಅವ್ವನ ದುಡಿಮೆಯು ಜಿ. ಡಿ. ಪಿ.ಗೆ ಕಾಣಿಕೆ ನೀಡುತ್ತಿಲ್ಲ ಎಂದು ಭಾವಿಸಲು ಸಾಧ್ಯವಿಲ್ಲ.

ಮನೆವಾರ್ತೆಯು ಇಂದು ನಾಲ್ಕು ಗೋಡೆಗಳ ಒಳಗಿನ ಸಂಗತಿಯಾಗಿ ಉಳಿದಿಲ್ಲ. ಮಹಿಳೆಯರು ಸಾರ್ವಜನಿಕ ಕ್ಷೇತ್ರದಲ್ಲಿನ ಹೋಟೆಲ್‌ಗಳು, ರೆಸ್ಟೋರೆಂಟ್‌ಗಳು, ಅಂಗಡಿ–ಮುಂಗಟ್ಟುಗಳು, ಔಷಧಿ ಕೇಂದ್ರಗಳು, ಸರ್ಕಾರಿ ಇಲಾಖೆಗಳು, ಕಾರ್ಖಾನೆಗಳು, ಕಟ್ಟಡ ನಿರ್ಮಾಣ ಮುಂತಾದವುಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿಯೂ ಸಹ ಲಿಂಗ ಸಂಬಂಧಿ ಶ್ರಮ ವಿಭಜನೆಯನ್ನು ಅನುಸರಿಸಲಾಗುತ್ತಿದೆ. ಮಹಿಳೆಯರು ಶ್ರಮ ಮಾರುಕಟ್ಟೆಯನ್ನು ಪ್ರವೇಶಿಸಿದ ಮೇಲೂ ಮನೆವಾರ್ತೆಯಿಂದ ಅವರಿಗೆ ಬಿಡುಗಡೆಯೇನೂ ದೊರೆಯುವುದಿಲ್ಲ. ಯಾವುದನ್ನು ಇಂದು ಪ್ರಥಮ ಸ್ತ್ರೀವಾದಿ ಅಲೆಯೆಂದು ಕರೆಯುತ್ತೇವೆಯೋ ಆ ಅಲೆಯ ಅವಧಿಯಲ್ಲಿ (ಉದಾರವಾದಿ ಸ್ತ್ರೀವಾದ) ಅದನ್ನು ಪ್ರತಿಪಾದಿಸುತ್ತಿದ್ದ ಸ್ತ್ರೀವಾದಿಗಳಿಗೆ ಮಹಿಳೆಯರ ದುಡಿಮೆಯ ಪ್ರಶ್ನೆಯು ಮುಖ್ಯವಾಗಿರಲಿಲ್ಲ. ಅಲ್ಲಿ ಮುಖ್ಯವಾದದ್ದು ಮತದಾನದ ಹಕ್ಕು. ಸ್ತ್ರೀವಾದದ ಎರಡನೆಯ ಅಲೆಯ ಸಂದರ್ಭದಲ್ಲಿ (ಸಮಾಜವಾದಿ ಸ್ತ್ರೀವಾದ) ಮನೆವಾರ್ತೆ ಮತ್ತು ಸಂಗೋಪನೆಯ ಸಂಗತಿಗಳು ಚರ್ಚೆಯ ಮುಂಚೂಣಿಗೆ ಬಂದವು. ಇವೆರಡು ಬಗೆಯ ದುಡಿಮೆಯು ಮಹಿಳಾ – ವಿಶಿಷ್ಟವೇನಲ್ಲ. ಅವುಗಳನ್ನು ಪುರುಷರು ನಿರ್ವಹಿಸುತ್ತಿರುವುದಕ್ಕೆ ನಮ್ಮಲ್ಲಿಯೇ ಉದಾಹರಣೆಗಳು ದೊರೆಯುತ್ತವೆ. ಆದರೆ ಅದೊಂದು ಅಪವಾದವಾಗಿದೆಯೇ ವಿನಾ ದೈನಂದಿನ ಬದುಕಿನ ಅಂಗವಾಗಿಲ್ಲ. ಇವುಗಳು ಕೇವಲ ದುಡಿಮೆ. ಇಲ್ಲಿ ಮಹಿಳೆಯರಿಗೆ ಎಂದು ನಿಯಮಿಸಿದ ಸಂಗತಿ ಯಾವುದೂ ಇಲ್ಲ. ಆದರೆ ನಿಯಮದೋಪಾದಿಯಲ್ಲಿ ಇವೆರಡನ್ನೂ ಮಹಿಳೆಯರಿಗೆ ನಿರ್ದಿಷ್ಟಪಡಿಸಲಾಗಿದೆ. ಇದು ಲಿಂಗ ಅಸಮಾನತೆಯನ್ನು ಊರ್ಜಿತಗೊಳಿಸುತ್ತಿರುವ ಪರಿಯಾಗಿದೆ. ಸಂತಾನೋತ್ಪತ್ತಿ ದುಡಿಮೆಯನ್ನು ಬಿಟ್ಟರೆ ಉಳಿದವು ಯಾವುವೂ ಲಿಂಗ–ನಿರ್ದಿಷ್ಟ ದುಡಿಮೆಗಳಲ್ಲ. ದುಡಿಮೆಯನ್ನು ಲಿಂಗದ ಆಧಾರದ ಮೇಲೆ ವರ್ಗೀಕರಿಸುವ ಕ್ರಮದ ಹಿಂದೆ ಪುರುಷ–ರಾಜಕಾರಣವು ಕೆಲಸ ಮಾಡುತ್ತಿದೆ. ಈ ಎಲ್ಲ ಅಸಮಾನತೆಗಳು ಸಾಮಾಜಿಕವಾಗಿ ರೂಪಿತವಾಗಿರುವ ಸಂಗತಿಗಳೇ ವಿನಾ ಅವು ಜೈವಿಕವಾದವುಗಳಲ್ಲ – ದೈವನಿಯಾಮಕವೂ ಅಲ್ಲ. ಇವೆಲ್ಲವೂ ಸಾಮಾಜಿಕವಾದ ಸಂಗತಿಗಳು. ಅವು ನಿಸರ್ಗ– ನಿಯಮಿತ ಸಂಗತಿಗಳಲ್ಲ. ಮಹಿಳೆಯರ ದುಡಿಮೆಯು ಪ್ರಕೃತಿದತ್ತವಾದುದೆಂದು ಮತ್ತು ಪುರುಷರ ದುಡಿಮೆಯು ಸಂಸ್ಕೃತಿದತ್ತವಾದುದೆಂದು ಪ್ರತಿಪಾದಿಸಲಾಗುತ್ತಿದೆ. ಇದನ್ನು ಪ್ರಶ್ನೆ ಮಾಡುವ ಅಗತ್ಯವಿದೆ.




ನಮ್ಮ ರಾಜ್ಯದಲ್ಲಿ ೨೦೦೧ರಲ್ಲಿ ದುಡಿಯುವ ಮಹಿಳೆಯರ ಪ್ರಮಾಣ ಶೇ. ೩೧.೯೮ರಷ್ಟಿದ್ದುದು ೨೦೧೧ರಲ್ಲಿ ಅದು ಶೇ. ೩೧.೯೦ರಷ್ಟಾಗಿದೆ. ಒಟ್ಟಾರೆ ಅದು ೨೦೦೧ರಿಂದ ೨೦೧೧ರ ಅವಧಿಯಲ್ಲಿ ಸ್ಥಿರವಾಗಿದೆ. ಆದರೆ ಪುರುಷರ ದುಡಿಮೆ ಪ್ರಮಾಣ ಮೊದಲೆ ಹೆಚ್ಚಿನ ಮಟ್ಟದಲ್ಲಿದೆ ಮತ್ತು ೨೦೦೧ರಿಂದ ೨೦೧೧ರ ಅವಧಿಯಲ್ಲಿ ಅದು ಶೇ. ೫೬.೬೪ರಿಂದ ೨೦೧೧ರಲ್ಲಿ ಅದು ಶೇ. ೫೯.೦೦ಕ್ಕೇರಿದೆ. ದುಡಿಮೆ ವಿಷಯದಲ್ಲಿ ನಮ್ಮ ಮಹಿಳೆಯರು ಹೆಚ್ಚಿನ ತಾರತಮ್ಯಕ್ಕೆ ಒಳಗಾಗಿದ್ದಾರೆ.

ಮೊದಲನೆಯದಾಗಿ ಮಹಿಳಾ ದುಡಿಮೆಗಾರರ ಪ್ರಮಾಣ ಪುರುಷ ದುಡಿಮೆಗಾರರ ಪ್ರಮಾಣಕ್ಕಿಂತ ಕಡಿಮೆಯಿದೆ. ಎರಡನೆಯದಾಗಿ ಕಳೆದ ದಶಕದಲ್ಲಿ ಪುರುಷ ದುಡಿಮೆಗಾರರ ಸಂಖ್ಯೆಯು ಏರಿಕೆಯಾಗಿದ್ದರೆ ಮಹಿಳಾ ದುಡಿಮೆಗಾರರ ಸಂಖ್ಯೆಯು ಸ್ಥಿರವಾಗುಳಿದಿದೆ. ಇದರ ಆಧಾರದ ಮೇಲೆ ಮಹಿಳೆಯರು ನಿರ್ವಹಿಸುತ್ತಿರುವ ದುಡಿಮೆ ಪ್ರಮಾಣ ಪುರುಷರಿಗಿಂತ ಕಡಿಮೆ ಎಂದು ಭಾವಿಸಿದರೆ ತಪ್ಪಾಗುತ್ತದೆ. ಏಕೆಂದರೆ ಇಲ್ಲಿ ಮಹಿಳೆಯರ ಸಂಪಾದನಾ–ರಹಿತ ದುಡಿಮೆಯನ್ನು ಗಣನೆ ಮಾಡುತ್ತಿಲ್ಲ. ಅಥವಾ ಅದನ್ನು ದುಡಿಮೆ ಎಂದು ಪರಿಗಣಿಸುತ್ತಿಲ್ಲ. ದುಡಿಮೆಯ ಸೀಮಿತ ವ್ಯಾಪ್ತಿಯ ಮತ್ತು ಅವಾಸ್ತವಿಕ ನಿರ್ವಚನದ ಪರಿಣಾಮವಾಗಿ ಅವರ ಸಂಖ್ಯೆಯು ದುಡಿಮೆ ಕ್ಷೇತ್ರದಲ್ಲಿ ಕಡಿಮೆಯಿದೆ.

**ಕೋಷ್ಟಕ ೧**

**ಕರ್ನಾಟಕದಲ್ಲಿ ಮಹಿಳಾ ದುಡಿಮೆಗಾರರು : ೨೦೧೧ (ಲಕ್ಷಗಳಲ್ಲಿ)**

| ದುಡಿಮೆಗಾರರ ವಿವರಗಳು | ಮಹಿಳಾ ದುಡಿಮೆಗಾರರು | ಪುರುಷ ದುಡಿಮೆಗಾರರು | ಒಟ್ಟು ದುಡಿಮೆಗಾರರು |
|---|---|---|---|
| ಒಟ್ಟು ದುಡಿಮೆಗಾರರು | ೯೬.೦೨ (ಶೇ. ೩೪.೪೫) | ೧೮೨.೭೦ (ಶೇ. ೬೫.೫೫) | ೨೭೮.೭೨ |
| ಪೂರ್ಣಾವಧಿ ದುಡಿಮೆಗಾರರು | ೭೦.೪೭ (ಶೇ. ೩೦.೧೨) | ೧೬೩.೫೦ (ಶೇ. ೬೯.೮೮) | ೨೩೩.೯೭ |
| ಅಲ್ಪಾವಧಿ ದುಡಿಮೆಗಾರರು | ೨೫.೫೫ (೫೭.೦೯) | ೧೯.೨೦ (ಶೇ. ೪೨.೯೧) | ೪೪.೭೫ |
| ಕೃಷಿಯಲ್ಲಿ ಒಟ್ಟು ದುಡಿಮೆಗಾರರು | ೫೬.೯೮ (ಶೇ. ೪೧.೪೮) | ೮೦.೩೭ (ಶೇ. ೫೮.೫೨) | ೧೩೭.೩೫ |
| ದಿನಗೂಲಿ ಭೂರಹಿತ ದುಡಿಮೆಗಾರರು | ೩೮.೭೨ (೫೪.೧೨) | ೩೨.೮೩ (ಶೇ. ೪೫.೮೮) | ೭೧.೫೫ |
| ಕುಟುಂಬ ಕೈಗಾರಿಕಾ ದುಡಿಮೆಗಾರರು | ೪.೭೪ (ಶೇ. ೫೧.೯೦) | ೪.೩೯ (ಶೇ. ೪೮.೧೦) | ೯.೧೩ |
| ಇತರೆ ದುಡಿಮೆಗಾರರು | ೩೪.೨೯ (ಶೇ. ೨೫.೯೩) | ೯೭.೯೪ (ಶೇ. ೭೪.೦೭) | ೧೩೨.೨೩ |

**ಮೂಲ :** ಸೆನ್ಸಸ್ ಆಫ್ ಇಂಡಿಯಾ ೨೦೧೧. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್. ಕರ್ನಾಟಕ. ಸಿರೀಸ್ ೩೦. ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್, ಕರ್ನಾಟಕ.

**ಟಿಪ್ಪಣಿ :** ಆವರಣದಲ್ಲಿರುವ ಅಂಕಿಗಳು ಒಟ್ಟು ಮೊತ್ತದ ಶೇಕಡ ಪ್ರಮಾಣವನ್ನು ತೋರಿಸುತ್ತವೆ.

ನಮ್ಮ ದೇಶದ ಬೆನ್ನೆಲುಬು ಕೃಷಿ ಎಂದು ಹೇಳಲಾಗಿದೆ. ನಿಜ ಸ್ಥಿತಿಯೇನೆಂದರೆ ನಮ್ಮ ಕೃಷಿಯ ಬೆನ್ನೆಲುಬು ಮಹಿಳಾ ದುಡಿಮೆಗಾರರಾಗಿದ್ದಾರೆ. ಇದು ಆಶ್ಚರ್ಯವಾದರೂ ನಿಜವಾದ ಸಂಗತಿಯಾಗಿದೆ. ನಮ್ಮ ರಾಜ್ಯದಲ್ಲಿ ೨೦೧೧ರ ಜನಗಣತಿ ಪ್ರಕಾರ ಒಟ್ಟು ದುಡಿಮೆಗಾರರಲ್ಲಿ ಕೃಷಿಯಲ್ಲಿ ದುಡಿಮೆ ಮಾಡುತ್ತಿರುವವರ ಪ್ರಮಾಣ ಕೇವಲ ಶೇ. ೪೯.೨೭. ಆದರೆ ಒಟ್ಟು ಪುರುಷ ದುಡಿಮೆಗಾರರಿಗೆ ಸಂಬಂಧಿಸಿದಂತೆ ಕೃಷಿಯಲ್ಲಿ ದುಡಿಮೆ ಮಾಡುವವರ ಪ್ರಮಾಣ ಶೇ. ೪೩.೯೮ರಷ್ಟಾದರೆ ಒಟ್ಟು ಮಹಿಳಾ ದುಡಿಮೆಗಾರರಲ್ಲಿ ಕೃಷಿಯನ್ನು ಅವಲಂಬಿಸಿರುವ ಮಹಿಳಾ ದುಡಿಮೆಗಾರರ ಪ್ರಮಾಣ ಶೇ. ೫೯.೩೪. ನಮ್ಮ ರಾಜ್ಯದಲ್ಲಿ ಕೃಷಿಯು ತೀವ್ರ ಬಿಕ್ಕಟ್ಟನ್ನು ಎದುರಿಸುತ್ತಿದೆ. ಸರಿಸುಮಾರು ಶೇ. ೬೦ರಿಂದ ಶೇ. ೭೦ರಷ್ಟು ಕೃಷಿಗೆ ಸಂಬಂಧಿಸಿದ ದುಡಿಮೆಯನ್ನು ಮಹಿಳೆಯರು ನಿರ್ವಹಿಸುತ್ತಿದ್ದಾರೆ. ಜನಗಣತಿ ಮಾಹಿತಿ ಪ್ರಕಾರ ೨೦೦೧ರಿಂದ ೨೦೧೧ರ ಅವಧಿಯಲ್ಲಿ ಭೂಮಾಲೀಕರ ಸಂಖ್ಯೆಯು ೬೮.೮೪ ಲಕ್ಷದಿಂದ ೬೫.೭೯ ಲಕ್ಷಕ್ಕಿಳಿದಿದೆ. ಇದಕ್ಕೆ ಪ್ರತಿಯಾಗಿ ಭೂರಹಿತ ಕೃಷಿ ಕಾರ್ಮಿಕರ ಸಂಖ್ಯೆಯು ೬೧.೨೭ ಲಕ್ಷದಿಂದ ೭೧.೫೫ ಲಕ್ಷಕ್ಕೇರಿದೆ. ಭೂರಹಿತ ಕೃಷಿ ದಿನಗೂಲಿಗಳ ಪ್ರಮಾಣ ಶೇ. ೧೬.೭೭ರಷ್ಟು ಏರಿಕೆ ಕಂಡಿದೆ. ಇದು ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿನ ಏರಿಕೆಗೆ ಸಮನಾಗಿದೆ.

ಮಹಿಳಾ ದುಡಿಮೆಗಾರರ ಪ್ರಮಾಣ ಪುರುಷ ದುಡಿಮೆಗಾರರಿಗೆ ಹೋಲಿಸಿದರೆ ಏಕೆ ಕಡಿಮೆಯಿದೆ ? ಇದಕ್ಕೆ ಕಾರಣ ಸ್ಪಷ್ಟವಾಗಿದೆ. ಮಹಿಳೆಯರು ನಿರ್ವಹಿಸುವ ಮನೆಗೆಲಸವನ್ನು, ಸಂಗೋಪನಾ ಜವಾಬುದಾರಿಯನ್ನು ಮತ್ತು ಸ್ವಂತ ಹೊಲ–ತೋಟಗಳಲ್ಲಿ ಮಾಡುವ ಕೆಲಸವನ್ನು 'ದುಡಿಮೆ' ಎಂದು ಪರಿಗಣಿಸುತ್ತಿಲ್ಲ. ವಾಸ್ತವವಾಗಿ ಮಹಿಳೆಯರು ಮೂರು ಬಗೆಯ ದುಡಿಮೆಯಲ್ಲಿ ನಿರತರಾಗಿದ್ದಾರೆ. ಮೊದಲನೆಯದು ಸಂಪಾದನಾ ದುಡಿಮೆ. ಇದನ್ನು ಪುರುಷರೂ ನಿರ್ವಹಿಸುತ್ತಾರೆ. ಎರಡನೆಯದು ಸಂಪಾದನಾ ರಹಿತ ದುಡಿಮೆ. ಉದಾಹರಣೆಗೆ ನೀರು ಸಂಗ್ರಹಿಸುವುದು, ಕಟ್ಟಿಗೆ ತರುವುದು, ಅಡುಗೆ ಮಾಡುವುದು, ಮನೆಗೆಲಸ, ಗಂಡ ಮತ್ತು ಮಕ್ಕಳ ಸಂಗೋಪನೆ ಮುಂತಾದವು. ಮೂರನೆಯದು ಸಂತಾನೋತ್ಪತ್ತಿ ಮತ್ತು ಶುಶ್ರೂಷಾ ದುಡಿಮೆ. ಪುರುಷರು ಮೊದಲನೆಯದರ ಜೊತೆಗೆ ಎರಡನೆಯದನ್ನು ನಿರ್ವಹಿಸಬಹುದು. ಆದರೆ ಎರಡನೆಯ ಮತ್ತು ಮೂರನೆಯ ಪ್ರಕಾರದ ಮಹಿಳೆಯರ ದುಡಿಮೆಯ ಗಣನೆ ನಡೆಯುತ್ತಿಲ್ಲ. ಆದರೆ ಸರ್ವೇಸಾಮಾನ್ಯವಾಗಿ ಪುರುಷರು ಇವೆರಡನ್ನು ನಿರ್ವಹಿಸುತ್ತಿಲ್ಲ. ಅಂದಮೇಲೆ ಮಹಿಳೆಯರು ನಿರ್ವಹಿಸುತ್ತಿರುವ ದುಡಿಮೆಯ ಪ್ರಮಾಣ ಅದೆಷ್ಟೋ ಪಾಲು ಪುರುಷರಿಗಿಂತ ಅಧಿಕ. ಆದರೆ ಲೆಕ್ಕಕ್ಕೆ ಮಾತ್ರ ಅದು ಅಗೋಚರವಾಗಿದೆ ಮತ್ತು ಅದು ನಿಕೃಷ್ಟವಾಗಿದೆ. ಶುಮಾಂಕರ್ (೧೯೭೯ : ೧೨೬) ಪ್ರಕಾರ ಭೌತಿಕ ಉತ್ಪಾದನೆಯು ಮಾತ್ರ ಮನುಷ್ಯನ ಬದುಕನ್ನು ಸುಖಕರವನ್ನಾಗಿ ಮಾಡುವುದು ಸಾಧ್ಯವಿಲ್ಲ. ವಾಸ್ತವವಾಗಿ ರಾಷ್ಟ್ರೀಯ ವರಮಾನ(ಜಿಎನ್‌ಪಿ)ಕ್ಕೂ ಮತ್ತು ಸುಖಕರ ಬದುಕಿಗೂ ಸಂಬಂಧವಿಲ್ಲ. ಅದೊಂದು ಗಾತ್ರಕ್ಕೆ ಸಂಬಂಧಿಸಿದ ಸಂಗತಿಯೇ ವಿನಾ ಗುಣಕ್ಕೆ ಸಂಬಂಧಿಸಿದುದಲ್ಲ. ಮನೆವಾರ್ತೆ, ಸಂಗೋಪನೆ, ಶುಶ್ರೂಷಾ ದುಡಿಮೆಗಳಿಲ್ಲದೆ ಮನುಷ್ಯನ ಬದುಕು ಸುಖಕರವಾಗುವುದು ಅಸಾಧ್ಯ. ಆದ್ದರಿಂದ ಉತ್ಪಾದನೆ, ಸಂತಾನೋತ್ಪತ್ತಿ, ಸಂಗೋಪನೆ – ಎಲ್ಲವೂ ಪರಸ್ಪರ ಪೂರಕವಾದ ಸಂಗತಿಗಳು. ಸಂಗೋಪನೆಯಿಲ್ಲದೆ ಉತ್ಪಾದನೆಯನ್ನು ಊಹಿಸಿಕೊಳ್ಳುವುದಕ್ಕೆ ಬರುವುದಿಲ್ಲ. ಉತ್ಪಾದನೆ ಅನ್ನುವುದು ಭೌತಿಕ ಸರಕು–ಸೇವೆಗಳ ರೂಪದಲ್ಲಿ ಸಂಭವಿಸುತ್ತಿದ್ದರೆ ಸಂಗೋಪನೆ ಅನ್ನುವುದು ಮಹಿಳೆಯರು ದುಡಿಮೆಯನ್ನು ಬದುಕುವ ಸಂಗತಿಯನ್ನು ಸೂಚಿಸುತ್ತದೆ. ಉತ್ಪಾದನೆ ಅನ್ನುವುದು ಬಾಹ್ಯದಲ್ಲಿ ಗೋಚರವಾಗುವ ಮೌಲ್ಯವಾದರೆ ಸಂಗೋಪನೆಯಲ್ಲಿ ಮಹಿಳೆಯರು ಮೌಲ್ಯವನ್ನು

ಕಾವ್ಯಲೋಕ



# ಮೀರುವವನು ಮತ್ತು ಮುಳುಗುವವಳು



ಭವಬಟ್ಟಲ ಅಗುಳುಗಳನ್ನು
ಚಂಚಗಲಿಸಿದ ಹಕ್ಕಿಗಳ ಅಂಗುಳಕ್ಕೆ
ಇಕ್ಕುವ ಕಾಯಕವೇ ಹಗಲಿರುಳೂ
ಇಕ್ಕುವ ಕೈಯ ಬಾಯಿಗಳು
ಕೊಕ್ಕಗಲಿಸಲು ಮರೆತಿವೆ
ನಿರಂತರ ಮುಳುಗೇಳುವ ದಂದುಗದಲ್ಲಿ
ನಾಲಗೆ ಒಣಗಿದೆ...

ಅವನು ದಾಟುತ್ತಲೇ ಇದ್ದಾನೆ
ಮನೆ, ಕೇರಿ, ಊರುಗಳ ದಾಟಿ
ದೇಶಾಂತರ, ಖಂಡಾಂತರ
ವಿಶ್ವ ಅವನ ತೆಕ್ಕೆ
ಇಕ್ಕುವ, ನೀಡುವ, ಬೇಯುವ, ಮುಳುಗುವ
'ಕ್ಷುದ್ರ' ದಂದುಗ ಅಂಟದ ನೆಂಟನವ
ಅವನಿಗೆ ನಗು ಹುಸಿ, ಅಳು ಹುಸಿ
ಮಾತೆಲ್ಲ ನಿರ್ಲೇಪ
ದಾಟು, ಹಾರು, ಜಿಗಿ, ಮೀರು
ಸಂಗವಿಲ್ಲದ ಲಂಘನ
ಬದುಕ ಬಟ್ಟೆಯಲ್ಲಿ ಉಬ್ಬು ತಗ್ಗು

ಉಲ್ಲಂಘನ
ಆಕೆಗೆ ನಿತ್ಯ ಕನಸು...
ಭುವಿಗೆಳೆಯುವ ಗುಂಡು
ಭವದ ಸೆರಗ ನೆರಳಲ್ಲಿ,
ಅವಳ ಬಿಗಿದ ಹಸ್ತ

ಅವನ ಬೆಚ್ಚಗಿನ ಕೈಯಲ್ಲಿ,
ಆಳಕ್ಕಿಳಿ, ಮುಳುಗು...
ಭುವಿಯ ಸೆಳೆತ
ನಿರ್ವಾತದ ನಿರ್ಭಾರ
ಅಂಟಿಸಿಕೊಳ್ಳದ ಬೇಹಾರ...

ಹೀಗೆ...
ಮುಳುಗುವ ಮೀರುವ ಜೊತೆಯಾಟದಲ್ಲಿ
ದಿನ ರಾತ್ರಿ ನಿರಂತರ ಅಲೆತ
ದಡಮುಟ್ಟ ತಣ್ಣಗೆ ಮೊರೆಯುತ್ತಿದ್ದೂ
ಕ್ಷಣಕಾಲ ಚಂದ್ರನ ಮುಟ್ಟುವ
ವೀಚಿಗಳ ಉತ್‌ಗಮನ
ಅಲೆಗಳ ಒಲೆತ
ಅಲೆಗಳ ಮೇಲೆ ಅಲೆ... ಅಲೆ... ಅಲೆ...
ಉಬ್ಬರವಿಳಿತ...

**ಡಾ॥ ಭಾರತಿದೇವಿ ಪಿ.**
ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಗೃಹ ವಿಜ್ಞಾನ ಕಾಲೇಜು, ಹೊಳೆನರಸೀಪುರ, ಹಾಸನ – ೫೭೩ ೨೧೧

ಬದುಕುತ್ತಿರುತ್ತಾರೆ. ದುಡಿಮೆ ಮಾರುಕಟ್ಟೆಯನ್ನು ಮತ್ತು ಮಹಿಳೆಯರ ದುಡಿಮೆಯನ್ನು ಆರ್ಥಿಕ ನಿಯಮಗಳಿಗೆ ಪ್ರತಿಯಾಗಿ ಲಿಂಗ ಸಂಬಂಧಿ ಪೂರ್ವಗ್ರಹಗಳು ಮತ್ತು ಸಾಂಸ್ಕೃತಿಕ ಸಂಹಿತೆಗಳು ನಿಯಂತ್ರಿಸುತ್ತಿರುತ್ತವೆ (ನೀರಾ ದೇಸಾಯಿ. ೧೯೯೬).

**ಭಾಗ ೩**

**ಲಿಂಗ ಸಮಾನತೆ ಮತ್ತು ದುಡಿಮೆ ಮಾರುಕಟ್ಟೆ**

ವಾಸ್ತವವಾಗಿ ಲಿಂಗ ಸಮಾನತೆ ಅನ್ನುವುದು ಇಂದು ಸ್ತ್ರೀವಾದದ ಪ್ರಮುಖ ಗುರಿಯಾಗಿ ಉಳಿದಿಲ್ಲ. ಲಿಂಗ ಸಮಾನತೆಯ ದೃಷ್ಟಿಯಿಂದ ನಾವು ಸಾಕಷ್ಟು ಸಾಧನೆ ಮಾಡಿದ್ದೇವೆ. ಆದರೆ ಮಹಿಳೆಯರ ಬದುಕು ಉತ್ತಮ ವಾಗುತ್ತಿಲ್ಲ. ಸಾಂಪ್ರದಾಯಿಕ ಅರ್ಥದಲ್ಲಿ ಲಿಂಗ ಸಮಾನತೆಯಿಂದ ಮಹಿಳೆಯರು ಅನುಭವಿಸುತ್ತಿರುವ ಅನ್ಯಾಯಗಳು ಕಡಿಮೆಯಾಗುತ್ತಿಲ್ಲ. ಅವರ ಮೇಲಿನ ಹಿಂಸೆಯು ನಿಲ್ಲುತ್ತಿಲ್ಲ. ಸಮಾನ ಅವಕಾಶಗಳು ಮಹಿಳೆಯರ ಬದುಕನ್ನು ಸಮೃದ್ಧಗೊಳಿಸುತ್ತವೆ ಎಂದು ಹೇಳಲು ಬರುವುದಿಲ್ಲ ಎಂಬುದು ಇಂದು ನಿಚ್ಚಳವಾಗಿದೆ. ಲಿಂಗ ಸಮಾನತೆಯನ್ನು ಇಂದು ವಿಸ್ತೃತ ನೆಲೆಯಲ್ಲಿ ಪರಿಭಾವಿಸಿಕೊಳ್ಳುವ ಕ್ರಮದ ಬಗ್ಗೆ ಚಿಂತನೆ ನಡೆದಿದೆ. ಸಮಾಜ/ಕುಟುಂಬದಲ್ಲಿ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸುವುದು, ಮನೆಯ ಹೊರಗೆ ಉದ್ಯೋಗ ಪಡೆಯುವುದು, ತನ್ನ ಬದುಕಿಗೆ ಸಂಬಂಧಿಸಿದ ಸಂಗತಿಗಳ ಬಗ್ಗೆ ತಾನು ನಿರ್ಧಾರ ಮಾಡುವುದು, ಮನೆವಾರ್ತೆಯನ್ನು ಗಂಡನ ಜೊತೆಯಲ್ಲಿ ಹಂಚಿಕೊಳ್ಳುವುದು ಮುಂತಾದವುಗಳಲ್ಲಿ ಸ್ತ್ರೀವಾದ ಇಂದು ಹೆಚ್ಚು ಅರ್ಥವನ್ನು ಕಂಡುಕೊಳ್ಳುತ್ತಿದೆ. ಸಾಂಪ್ರದಾಯಿಕ ಲಿಂಗ ಸಮಾನತೆಯ ಗುರಿಗಳನ್ನು 'ಮಹಿಳೆಯರ ದೈನಂದಿನ ಹಿತಾಸಕ್ತಿಗಳು' ಎಂದೂ, ಉಗ್ರವಾದಿ ಲಿಂಗ ಸಮಾನತೆಯ ಗುರಿಗಳನ್ನು 'ಮಹಿಳೆಯರ ಸಂಘರ್ಷವಾದಿ ಹಿತಾಸಕ್ತಿ'ಗಳೆಂದೂ ಸ್ತ್ರೀವಾದಿಗಳು ಕರೆಯುತ್ತಾರೆ (ಮಾಕ್ಸೈನ್ ಮೊಲಿನಿಕ್ಸ್. ೧೯೮೫). ವಾಸ್ತವವಾಗಿ ರಾಜಕೀಯ ಪ್ರಾತಿನಿಧ್ಯವೂ ಕೂಡ ಔಪಚಾರಿಕವಾಗಿ ತನ್ನ ಅರ್ಥ ಕಳೆದುಕೊಂಡುಬಿಟ್ಟಿದೆ (ವಿವರಗಳಿಗೆ ನೋಡಿ : ಗಾಯತ್ರಿ ಎನ್. ೨೦೧೨). ಪುರುಷಶಾಹಿ ಮೌಲ್ಯಗಳನ್ನು ಮೈಗೂಡಿಸಿ ಕೊಂಡಿರುವ ಮಹಿಳೆಯರಿಗೆ ರಾಜಕಾರಣದಲ್ಲಿ ಪ್ರಾತಿನಿಧ್ಯ ದೊರೆತರೆ ಅಂತಹ ರಾಜಕೀಯ ಪ್ರಾತಿನಿಧ್ಯದಿಂದ ಯಾವ ಬಗೆಯ ಲಿಂಗ ಸಂಬಂಧಿ ನ್ಯಾಯವನ್ನು ನಿರೀಕ್ಷಿಸುವುದು ? ರಾಜಕೀಯ ಪ್ರಾತಿನಿಧ್ಯದ ಮೂಲಕ ಮಹಿಳೆಯರು ರಾಜಕೀಯ ಸಂಸ್ಥೆಗಳನ್ನು (ಸಂಸತ್ತು, ವಿಧಾನಮಂಡಲ,

ಪಂ. ರಾ. ಸಂ.) ಪ್ರವೇಶಿಸಿದರೆ ಸದರಿ ಸಂಸ್ಥೆಗಳಿಗೆ ತಾಯಿ ಗುಣ ಬರುತ್ತದೆ ಎಂದು ಮಹಿಳಾ ಸಹಜತೆಯನ್ನು ಎತ್ತಿ ಹೇಳಿದರೆ ಅಲ್ಲಿ ಮಹಿಳಾ ಸಬಲೀಕರಣ ಹೇಗೆ ಸಾಧ್ಯವಾಗುತ್ತದೆ ? ಈ ಕಾರಣದಿಂದಾಗಿ ರಾಜಕೀಯ ಪ್ರಾತಿನಿಧ್ಯ ಅನ್ನುವುದು ಒಂದು ಆಲಂಕಾರಿಕ ಸಂಗತಿಯಾಗಿದೆಯೆ ವಿನಾ ಅದು ಮಹಿಳೆಯರ ಸಬಲೀಕರಣಕ್ಕೆ ಕಾಣಿಕೆ ನೀಡುತ್ತಿಲ್ಲ. ಲಿಂಗ ಸಮಾನತೆಯ ಪಾತ್ರವನ್ನು ಮತ್ತು ಅದರ ಮಹತ್ವವನ್ನು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲಾಗಿದೆ. ಅದು ಕೇವಲ ಮಹಿಳೆಯರಿಗೆ ಸಂಬಂಧಿಸಿದ ಸಂಗತಿಯಲ್ಲ. ಅದು ಅಮೂರ್ತ-ರಮ್ಯ-ಭಾವನಾತ್ಮಕ ಸಂಗತಿಯೂ ಅಲ್ಲ. ಅದು ಮೂಲಭೂತವಾಗಿ ಅಭಿವೃದ್ಧಿಯ ಸಂಗತಿ. ಲಿಂಗ ಸಮಾನತೆ ಅನ್ನುವುದು 'ಮಾನವ ಘನತೆ'ಯ ಸಂಗತಿಯಾಗಿದೆ (ಮಾರ್ತಾ ನುಸುಬೌಮ್. ೨೦೦೦). ಲಿಂಗ ಸಮಾನತೆ ಅಂದರೆ ಮಹಿಳೆಯರು ಪುರುಷರಂತಾಗುವುದಲ್ಲ. ಅದು ಮಹಿಳೆಯರಿಗೆ ಮಾತ್ರ ಸಂಬಂಧಿಸಿದ ಸಂಗತಿಯೂ ಅಲ್ಲ.

ವರ್ಲ್ಡ್ ಬ್ಯಾಂಕ್ ತನ್ನ ೨೦೧೨ರ ವಿಶ್ವ ಅಭಿವೃದ್ಧಿ ವರದಿಯಲ್ಲಿ ಲಿಂಗ ಸಮಾನತೆಯನ್ನು 'ಸ್ಮಾರ್ಟ್ ಎಕನಾಮಿಕ್ಸ್' (ವರ್ಲ್ಡ್ ಬ್ಯಾಂಕ್, ೨೦೧೨) ಎಂದು ಕರೆದಿದೆ. ಅದು ಕೇವಲ ಭಾವುಕತನದ, ಅಮೂರ್ತವಾದ ಸಂಗತಿಯಲ್ಲ. 'ಲಿಂಗ ಸಮಾನತೆಯು ಮಹಿಳೆಯರಿಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ' (ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್ ೧೯೯೫). 'ಅಭಿವೃದ್ಧಿಯನ್ನು ಮಹಿಳೀಕರಿಸದಿದ್ದರೆ ಅದಕ್ಕೆ (ಅಭಿವೃದ್ಧಿಗೆ) ಅಪಾಯ ತಪ್ಪಿದ್ದಲ್ಲ' (ಯುಎನ್‌ಡಿಪಿ ೧೯೯೫). 'ಲಿಂಗ ಸಮಾನತೆ ಅಂದರೆ ಎಲ್ಲರ ಅಭಿವೃದ್ಧಿ' (ಯುಎನ್‌ಒ ಸಂದೇಶ ೨೦೧೪). ಲಿಂಗ ಸಮಾನತೆಗೆ ಅಡ್ಡಿಯಾಗಿರುವ ಒಂದು ಸಂಗತಿ ಎಂದರೆ ದುಡಿಮೆ ಸಂಸ್ಕೃತಿ ಮತ್ತು ದುಡಿಮೆ ಮಾರುಕಟ್ಟೆಗಳ ಸೀಮಿತ ವ್ಯಾಪ್ತಿ. ದುಡಿಮೆಯ ಬಗ್ಗೆ ಸಮಾಜದಲ್ಲಿರುವ ತಾರತಮ್ಯವಾದಿ ನಂಬಿಕೆ ಮತ್ತು ದುಡಿಮೆ ಮಾರುಕಟ್ಟೆಯ ಲಿಂಗ ಸಂಬಂಧಿ ಪ್ರತ್ಯೇಕೀಕರಣ ಲಿಂಗ ಅಸಮಾನತೆಗೆ ಪ್ರಮುಖ ಕಾರಣಗಳಾಗಿವೆ. ಲಿಂಗವನ್ನು ಆಧರಿಸಿ ದುಡಿಮೆಯನ್ನು ವರ್ಗೀಕರಿಸುವುದು ಒಂದು ಕ್ರಮವಾದರೆ ದುಡಿಮೆ ಮಾರುಕಟ್ಟೆಯನ್ನು ಲಿಂಗದ ಆಧಾರದ ಮೇಲೆ ವರ್ಗೀಕರಿಸುವುದು ಇನ್ನೊಂದು ಕ್ರಮ. ಇವೆರಡೂ ಕ್ರಮಗಳು ಮಹಿಳೆಯರನ್ನು ಹೆಚ್ಚು ಅಸಮಾನತೆಗೆ, ತಾರತಮ್ಯಕ್ಕೆ ಒಳಗು ಪಡಿಸಿವೆ. ಇದು ಕೇವಲ ಶ್ರಮ ವಿಭಜನೆ ಮಾತ್ರವಲ್ಲ. ಇದು ಶ್ರಮಿಕರ ವಿಭಜನೆಯೂ ಆಗಿದೆ.



ದುಡಿಮೆ ಮಾರುಕಟ್ಟೆಯಲ್ಲಿ ಮಹಿಳೆಯರಿಗೆ ಸಮಾನವಾದ ಅವಕಾಶಗಳನ್ನು ಒದಗಿಸುವುದು ಲಿಂಗ ಸಮಾನತೆಯ ಸಂಗತಿ. ದುಡಿಮೆ ಮಾರುಕಟ್ಟೆಯಲ್ಲಿ ಲಿಂಗ ಆಧರಿತ ಪ್ರತ್ಯೇಕೀಕರಣವನ್ನು ತೊಡೆದುಹಾಕುವುದು ಲಿಂಗ ಸಮಾನತೆ. ಲಿಂಗ ಸಮಾನತೆಯ ಮೂಲಕ ಸಮಾಜದಲ್ಲಿ ಒಟ್ಟು ಅಭಿವೃದ್ಧಿಯ ಕಾರ್ಯಕ್ಷಮತೆಯನ್ನು ಉತ್ತಮಪಡಿಸಬಹುದು. ಈ ದೃಷ್ಟಿಯಿಂದ ಲಿಂಗ ಸಮಾನತೆ ಅನ್ನುವುದು ಅಭಿವೃದ್ಧಿಗೆ ಸಂಬಂಧಿಸಿದ ಸಂಗತಿ.

ಭಾರತದಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರವು ವೇಗವಾಗಿ ಬೆಳೆಯುತ್ತಿದೆ. ಆದರೆ ಅಲ್ಲಿ ಮಹಿಳೆಯರಿಗೆ ಸಮಾನವಾದ ಅವಕಾಶಗಳು ದೊರೆಯುತ್ತಿಲ್ಲ. 'ಮಾನ್ಸ್‌ಟರ್ ಸ್ಯಾಲರಿ ಇಂಡೆಕ್ಸ್ ಇಂಡಿಯಾ, ಐಟಿ ಸೆಕ್ಟರ್ ೨೦೧೪' ವರದಿಯ ಪ್ರಕಾರ ಐಟಿ ಸೆಕ್ಟರ್‌ನಲ್ಲಿ ಮಹಿಳೆಯರು ಪಡೆಯುತ್ತಿರುವ ಸಂಬಳ ಪುರುಷರು ಪಡೆಯುತ್ತಿರುವ ಸಂಬಳಕ್ಕಿಂತ ಶೇ. ೨೯ರಷ್ಟು ಕಡಮೆಯಿದೆ. ಉದ್ಯೋಗಗಳನ್ನು ಲಿಂಗದ ಆಧಾರದ ಮೇಲೆ ವರ್ಗೀಕರಿಸುವುದು ಒಂದು ಬಗೆಯ ಅಸಮಾನತೆಯಾದರೆ ಸಂಭಾವನೆ/ಸಂಬಳ ನೀಡುವುದರಲ್ಲಿಯೂ ಲಿಂಗ ಅಸಮಾನತೆ ಇರುವುದು ಅತ್ಯಂತ ಖೇದದ ಸಂಗತಿಯಾಗಿದೆ. ಐಟಿ ಉದ್ಯಮದಲ್ಲಿ ಮಹಿಳೆಯರಿಗೆ ಪ್ರತಿಯಾಗಿ ಪುರುಷರನ್ನು ಹೆಚ್ಚಾಗಿ ನೇಮಿಸಿಕೊಳ್ಳುವುದು ಸಾಮಾನ್ಯವಾಗಿದೆ. ಭಾರತದ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಮಹಿಳೆಯರ ಪ್ರಮಾಣ ಇಂದಿಗೂ ಶೇ. ೩೦ರಷ್ಟಿದೆ. ಕೂಲಿಯಲ್ಲಿ ಲಿಂಗ ತಾರತಮ್ಯವು ಕೃಷಿಕ್ಷೇತ್ರದಲ್ಲಿದೆ ಎಂದು ಹೇಳಲಾಗುತ್ತಿತ್ತು. ಆದರೆ ಅದು ಆಧುನಿಕ ವಲಯದಲ್ಲಿಯೂ ಕಂಡುಬರುತ್ತಿದೆ. ಐಟಿ ಕ್ಷೇತ್ರದಲ್ಲಿ ಮಹಿಳೆಯರು ಗಂಟೆಗೆ ರೂ. ೨೫೪.೦೪ ಸಂಭಾವನೆ ಪಡೆಯುತ್ತಿದ್ದರೆ ಪುರುಷರು ಗಂಟೆಗೆ ಪಡೆಯುತ್ತಿರುವ ಸಂಬಳ ರೂ. ೩೪೯.೨೫. ಐಟಿ ಕ್ಷೇತ್ರದಲ್ಲಿನ ಮೇಲ್ವಿಚಾರಣಾ ಹುದ್ದೆಗಳಲ್ಲಿ ಪ್ರಧಾನವಾಗಿ ಪುರುಷರು ಕಂಡುಬರುತ್ತಾರೆ. ಸಾಮಾಜಿಕವಾಗಿ ಮಹಿಳೆಯರು ಎದುರಿಸುತ್ತಿರುವ ಲಿಂಗ ತಾರತಮ್ಯವನ್ನು ಉದ್ಯಮಗಳು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಮನೆವಾರ್ತೆಯನ್ನು ನಿರ್ವಹಿಸಬೇಕಾದ ಮಹಿಳೆಯರು ಹಂಗಾಮಿ ಉದ್ಯೋಗವನ್ನು ಹೆಚ್ಚು ಬಯಸುವುದು ಅನಿವಾರ್ಯವಾಗಿದೆ. ಇದನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಉದ್ಯಮಿಗಳು ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಲಿಂಗ ಅಸಮಾನತೆಯನ್ನು ಮತ್ತಷ್ಟು ಗಟ್ಟಿಗೊಳಿಸುವ-ಊರ್ಜಿತ ಗೊಳಿಸುವ ಕೆಲಸ ಮಾಡುತ್ತಿದ್ದಾರೆ.

ಶ್ರಮ ಮಾರುಕಟ್ಟೆಯಲ್ಲಿ ಯಾಕೆ ಲಿಂಗ ಅಸಮಾನತೆಯಿದೆ ? ಇದಕ್ಕೆ ಅನೇಕ ಕಾರಣಗಳು ಸಾಧ್ಯ. ಅರ್ಥಶಾಸ್ತ್ರದ ನಿಯಮದ ಪ್ರಕಾರ ಯಾವುದರ ಪೂರೈಕೆಯು ಅದರ ಬೇಡಿಕೆಗಿಂತ ಅಧಿಕವಾಗಿರುತ್ತದೆಯೋ ಅದಕ್ಕೆ ದೊರೆಯುವ ಸಂಭಾವನೆಯು ಕೆಳಮಟ್ಟದಲ್ಲಿರುತ್ತದೆ. ದುಡಿಮೆ ಮಾರುಕಟ್ಟೆಯಲ್ಲಿ ಮಹಿಳಾ ದುಡಿಮೆಗಾರರ ಪೂರೈಕೆಯು ಅವರ ಬೇಡಿಕೆಗಿಂತ ಅಧಿಕವಾಗಿರುವುದರಿಂದ ಅವರು ಪಡೆಯುತ್ತಿರುವ ಸಂಭಾವನೆಯು ಕೆಳಮಟ್ಟದಲ್ಲಿದೆ. ಎರಡನೆಯದಾಗಿ ನಮ್ಮ ಸಮಾಜದಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಮಾನವ ಬಂಡವಾಳ ಕೊರತೆಯಿಂದ ಕೂಡಿರುವುದರಿಂದ ಅವರಿಗೆ ನೀಡುವ ಸಂಭಾವನೆಯು ಪುರುಷರಿಗಿಂತ ಕೆಳಮಟ್ಟದಲ್ಲಿದೆ. ಮೂರನೆಯದಾಗಿ ಶ್ರಮ ಮಾರುಕಟ್ಟೆಯಲ್ಲಿ ಮಹಿಳೆಯರು ಎಂಬ ಕಾರಣಕ್ಕೆ ಮತ್ತು ಅವರ ಮಾನವ ಬಂಡವಾಳದ ಕೊರತೆಯಿಂದಾಗಿ ಮಹಿಳೆಯರ ಬಾರ್ಗೈನಿಂಗ್ ಅಧಿಕಾರ ಕೆಳಮಟ್ಟದಲ್ಲಿರುತ್ತದೆ. ಇದರಿಂದಾಗಿ ಅವರು ಹೆಚ್ಚಿನ ಸಂಭಾವನೆ ಪಡೆಯುವುದು ಸಾಧ್ಯವಾಗುತ್ತಿಲ್ಲ. ಮನೆವಾರ್ತೆ, ಶುಶ್ರೂಷಾ ದುಡಿಮೆ, ಸಂಗೋಪನಾ ದುಡಿಮೆ ಹಾಗೂ ಸಂಪಾದನಾ ದುಡಿಮೆಗಳನ್ನು ನಿರ್ವಹಿಸುತ್ತಿರುವ ಕಾರಣದಿಂದಾಗಿ ಉದ್ಯೋಗದಲ್ಲಿ ಅವರಿಗೆ ಹೆಚ್ಚಿನ ಸಾಧನೆಯನ್ನು ತೋರುವುದು ಮತ್ತು ಬಡ್ತಿಯನ್ನು ಪಡೆಯುವುದು ಸಾಧ್ಯವಾಗುತ್ತಿಲ್ಲ. ಉದಾಹರಣೆಗೆ ಐಟಿ ಕ್ಷೇತ್ರದಲ್ಲಿ ಸೂಪರ್‌ವೈಸರಿ ಹುದ್ದೆಗಳಲ್ಲಿರುವ ಮಹಿಳೆಯರ ಪ್ರಮಾಣ ಅತ್ಯಂತ ಕಡಿಮೆ. ಇದಕ್ಕೆ ಕಾರಣ ಅವರು ಪ್ರತಿ ದಿನ ಎರಡು ದುಡಿಮೆ ದಿನಗಳನ್ನು ಬದುಕುತ್ತಿರುವುದು.

ಈ ಎಲ್ಲ ಬಗೆಯ ಲಿಂಗ ತಾರತಮ್ಯ, ಅಸಮಾನತೆ, ದೌರ್ಜನ್ಯ, ಮಹಿಳಾ–ವಿರೋಧಿ ಪೂರ್ವಗ್ರಹಗಳು ಮುಂತಾದವುಗಳಿಗೆ ಲಿಂಗ ಸಂಬಂಧಗಳ ಬಗೆಗಿನ ಜನರ ಕೂಪಮಂಡೂಕ ತನದ ಮನೋಭಾವ ಕಾರಣ ಎಂದು ಹೇಳಲಾಗುತ್ತದೆ. ಇದು ಸರಿಯಾಗಲು ಇಂದು ತಜ್ಞರು 'ಜನರ ಮೈಂಡ್‌ಸೆಟ್ ಬದಲಾಗಬೇಕು' ಎಂದು ಹೇಳುತ್ತಿದ್ದಾರೆ. ಲಿಂಗ ತಾರತಮ್ಯ ನಿವಾರಣೆಗೆ ಜನರ 'ಮೈಂಡ್‌ಸೆಟ್ ಬದಲಾಗಬೇಕು' ಎಂದು ಹೇಳುವುದು ಇಂದು ಒಂದು ಕ್ಲೀಷೆಯಾಗಿ ಬಿಟ್ಟಿದೆ. ಇಲ್ಲಿರುವ ಮೂಲ ಪ್ರಶ್ನೆ ಮೈಂಡ್‌ಸೆಟ್ಟನ್ನು ರೂಪಿಸುವ ಸಂಗತಿಗಳು ಯಾವುವು ? ಅವುಗಳನ್ನು ಸರಿಪಡಿಸದೆ ಮೈಂಡ್‌ಸೆಟ್ಟನ್ನು ಬದಲಾಯಿಸುವುದು ಸಾಧ್ಯವೇ ? ನಮ್ಮ ಪರಂಪರೆ, ನಮ್ಮ ಸಂಸ್ಕೃತಿ, ನಮ್ಮ ಚರಿತ್ರೆ, ನಮ್ಮ ಪುರಾಣಗಳು, ನಮ್ಮ ನಂಬಿಕೆಗಳು–ಆಚರಣೆಗಳು, ಆಳುವ ವರ್ಗದ ಪುರುಷಶಾಹಿ ಮೌಲ್ಯಗಳು ಮುಂತಾದವು ನಮ್ಮ ಮೈಂಡ್‌ಸೆಟ್ಟನ್ನು ರೂಪಿಸುತ್ತಿರುವ ಸಂಗತಿಗಳಾಗಿವೆ. ಅಲ್ಲಿರುವ ಮಹಿಳೆಯರ ಬಗೆಗಿನ ಪೂರ್ವಗ್ರಹಗಳನ್ನು ಸರಿಪಡಿಸದೆ ಮೈಂಡ್‌ಸೆಟ್ಟನ್ನು ಬದಲಾಯಿಸುವುದು ಸಾಧ್ಯವಿಲ್ಲ. ಪ್ರಸಿದ್ಧ ಸ್ತ್ರೀವಾದಿ ಸಮಾಜ ವಿಜ್ಞಾನಿ ಬೀನಾ ಅಗರವಾಲಾ (೨೦೦೦) ಪ್ರಕಾರ ಲಿಂಗ ಅಸಮಾನತೆ ಮೌಲ್ಯವನ್ನು ಬಿತ್ತುವ ಕೆಲಸ ಕುಟುಂಬಗಳಲ್ಲಿ ನಡೆಯುತ್ತಿದೆ. ಲಿಂಗ ಸಮಾನತೆಯು ಕುಟುಂಬ ವ್ಯವಸ್ಥೆಗೆ ಕಂಟಕಪ್ರಾಯವಾಗುತ್ತದೆಂದು ನಂಬುವ ಜನರು ಸಮಾಜದಲ್ಲಿದ್ದಾರೆ. ಲಿಂಗ ಸಮಾನತೆಯು ಕೇವಲ ಕಾನೂನುಗಳು, ಶಾಸನಗಳು, ಭಾಷಣಗಳು, ಶಾಲಾ ಪಠ್ಯಗಳಿಂದ ಸಾಧ್ಯವಿಲ್ಲ. ಅದು ಸಮಾಜದ ಪ್ರತಿಯೊಂದು ಸಾಮಾಜಿಕ ಸಂಸ್ಥೆಯ ದೈನಂದಿನ ಆಚರಣೆಯ ಸಂಗತಿಯಾಗಬೇಕು. ಅಸ್ತಿತ್ವದಲ್ಲಿರುವ ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿನಲ್ಲಿ ಸಮಾಜವು ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳಲು ಬಯಸುತ್ತದೆ. ನಮ್ಮ ಸಮಾಜದಲ್ಲಿ ಕುಟುಂಬವು ಪಾಲನೆಯ, ಪೋಷಣೆಯ, ಅಕ್ಕರೆಯ ಕೇಂದ್ರವಾಗಿರುವಂತೆ ಹಿಂಸೆಯ, ದಬ್ಬಾಳಿಕೆಯ, ಪೂರ್ವಗ್ರಹಗಳ ಕೂಪವೂ ಆಗಿದೆ (ಮಾರ್ತಾ ನುಸುಬೌಮ್. ೨೦೦೦). ಕುಟುಂಬ ಮಟ್ಟದಲ್ಲಿ ಪುರುಷರು ಮತ್ತು ಮಹಿಳೆಯರ ಪಾತ್ರಗಳು ಸಮಾನತೆಯ ನೆಲೆಯಲ್ಲಿ ಬದಲಾಗದಿದ್ದರೆ ಸಮಾಜದಲ್ಲಿ ಲಿಂಗ ಸಮಾನತೆಯು ಸಾಧ್ಯವಾಗುವುದಿಲ್ಲ. ಮಹಿಳೆಯರ ದುಡಿಮೆಯ ಬಗ್ಗೆ, ಅವರ ಆರ್ಥಿಕ ಕೊಡುಗೆಯ ಬಗ್ಗೆ, ಲಿಂಗ ಸಂಬಂಧಿ ಶ್ರಮ ವಿಭಜನೆ ಬಗ್ಗೆ ಸಮಾಜದಲ್ಲಿರುವ ಜನರ ಪೂರ್ವಗ್ರಹದಿಂದ ಕೂಡಿದ ಮನೋಭಾವವನ್ನು ರೂಪಿಸುತ್ತಿರುವ ಸಂಗತಿಗಳನ್ನು ಗುರುತಿಸಿ ಅವುಗಳನ್ನು ಬದಲಾಯಿಸಲು ಪ್ರಯತ್ನಿಸಬೇಕು. ಆಗ ಮಾತ್ರ ಸಮಾನತೆ, ಸಾಮಾಜಿಕ ನ್ಯಾಯ, ಪರಸ್ಪರ ಗೌರವ ಮುಂತಾದವುಗಳನ್ನು ಸಾಧಿಸಿಕೊಳ್ಳುವುದು ಮತ್ತು ಅನುಭವಿಸುವುದು ಸಾಧ್ಯ. ಮಹಿಳೆಯರಿರಲಿ, ಪುರುಷರಿರಲಿ– ಮನುಷ್ಯರೆಲ್ಲ ಒಂದೇ ಅನ್ನುವ ಮೌಲ್ಯವನ್ನು ಬೆಳೆಸುವ ಅಗತ್ಯವಿದೆ. ಎಲ್ಲರಿಗೂ ಶಿಕ್ಷಣ ದೊರೆತುಬಿಟ್ಟರೆ ಇದು ಸರಿಯಾಗುವುದಿಲ್ಲ. ಸಮಾಜದಲ್ಲಿ ಜನರ ವರಮಾನದ ಮಟ್ಟ ಉತ್ತಮವಾಗಿಬಿಟ್ಟರೆ ತಾರತಮ್ಯಗಳು ತೊಲಗಿಬಿಡುವುದಿಲ್ಲ. ಅದಕ್ಕೆ ಉದ್ದೇಶಪೂರ್ವಕ ಪ್ರಯತ್ನದ ಅಗತ್ಯವಿದೆ. ಇದು ನಿರಂತರ ನಡೆಯಬೇಕಾದ ಕೆಲಸ. ಇದಕ್ಕೆಲ್ಲ ಶಾಸನಗಳನ್ನು, ಕಾನೂನನ್ನು ನಂಬಿದರೆ ಸಾಧ್ಯವಿಲ್ಲ. ಅವುಗಳ ಪಾತ್ರ ಸೀಮಿತವಾದುದು. ಸಮಾನತೆಯನ್ನು ಜನರು ಮತ್ತೆ ಮತ್ತೆ ಚರ್ಚೆಯ, ಸಂವಾದದ, ಅನುಸಂಧಾನದ ಸಂಗತಿಯನ್ನಾಗಿ ಮಾಡಬೇಕಾಗಿದೆ. ಅದರ ಬಗ್ಗೆ ಸಮಾಜ ಸದಾ ಎಚ್ಚರದಿಂದಿರುವಂತೆ ಮಾಡಬೇಕಾಗಿದೆ. ಮಹಿಳೆಯರ ದುಡಿಮೆಗೆ ಹೆಚ್ಚು ಅರ್ಥ ಮತ್ತು ಮಹತ್ವ ಬರಬೇಕಾದರೆ ಮತ್ತು ಅದಕ್ಕೆ ಆರ್ಥಿಕ ಮನ್ನಣೆ ದೊರೆಯಬೇಕಾದರೆ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ಅನುಭವಿಸುವುದು ಸಾಧ್ಯವಾಗಬೇಕು. ಕರ್ನಾಟಕದಲ್ಲಿನ ಒಟ್ಟು ಭೂಮಾಲೀಕರಲ್ಲಿ ಪುರುಷರ ಪ್ರಮಾಣ ೨೦೧೧ರಲ್ಲಿ ಶೇ. ೭೭.೫೫ರಷ್ಟಿದ್ದರೆ ಭೂರಹಿತ ದಿನಗೂಲಿ ಕೃಷಿ ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಶೇ. ೫೪.೧೭ರಷ್ಟಿದೆ. ಇದು ಬದಲಾಗಬೇಕು. ಆಸ್ತಿಯ ಹಕ್ಕು ಸಾಮಾಜಿಕವಾಗಿ ಮತ್ತು ಕೌಟುಂಬಿಕ ಮಟ್ಟದಲ್ಲಿ ಮಹಿಳೆಯರ ಬದುಕಿನಲ್ಲಿ ಬದಲಾವಣೆಗಳನ್ನು ತರಬಲ್ಲದು.

**ಅವಳಿ**

ಅಹಂಭಾವದ
ಅವಳಿ ಮಕ್ಕಳು
'ನಾನು' ಹಾಗೂ
'ನನ್ನಿಂದ'

ಡಾ॥ ವಿ. ಪುಗಳೇಂದಿ
ಬಳ್ಳಾರಿ

**ಕೊನೆಯ ಮಾತುಗಳು**

ದುಡಿಮೆ ಮಾರುಕಟ್ಟೆಯಲ್ಲಿ, ದುಡಿಮೆ ಸಂಸ್ಕೃತಿಯಲ್ಲಿ ಕಂಡುಬರುವ ಮಹಿಳಾ ವಿರೋಧಿ ಮನೋಭಾವವು ಕೇವಲ ಆರ್ಥಿಕ ಜಗತ್ತಿಗೆ ಸಂಬಂಧಿಸಿದ ಸಂಗತಿಯಲ್ಲ. ಅವು ಸಾಮಾಜಿಕವಾದ ಸಂಗತಿಗಳು. ಆದರೆ ಪುರುಷಶಾಹಿಯು ಅದನ್ನು ಜೈವಿಕತೆಗೆ ಆರೋಪಿಸಿ ಅದನ್ನು ಸಮಾಜದಲ್ಲಿ ಊರ್ಜಿತಗೊಳಿಸುವ ಕೆಲಸ ಮಾಡುತ್ತಿದೆ. ಅಂದರೆ ದುಡಿಮೆ ಮಾರುಕಟ್ಟೆಯನ್ನು ಹೆಚ್ಚು ಹೆಚ್ಚು ಮಹಿಳೆಯರು ಪ್ರವೇಶಿಸಿದರೆ ಅಲ್ಲಿನ ಲಿಂಗತಾರತಮ್ಯದ ಸಂಗತಿಗಳನ್ನು ಸರಿಪಡಿಸಬಹುದು ಎಂಬ ನಂಬಿಕೆಯು ಇಂದು ಹುಸಿಯಾಗಿದೆ. ಮಹಿಳೆಯರ ಬಗ್ಗೆ, ಮಹಿಳೆಯರ ದುಡಿಮೆಯ ಬಗ್ಗೆ, ಅವರ ಬೌದ್ಧಿಕ ಸಾಮರ್ಥ್ಯದ ಬಗ್ಗೆ ಸಮಾಜದಲ್ಲಿ ಆಳವಾಗಿ ಬೇರೂರಿರುವ ತಾರತಮ್ಯವಾದಿ ನಂಬಿಕೆಗಳನ್ನು ತೊಡೆಯದೆ ಮಹಿಳೆಯರಿಗೆ ನ್ಯಾಯವನ್ನು ದೊರಕಿಸಿಕೊಡುವುದು ಸಾಧ್ಯವಾಗುವುದಿಲ್ಲ. ಮಹಿಳೆಯರು ನಿರ್ವಹಿಸುತ್ತಿರುವ ಮನೆವಾರ್ತೆ, ಸಂಗೋಪನೆ, ಶುಶ್ರೂಷೆ ಮುಂತಾದವುಗಳನ್ನು 'ದುಡಿಮೆ' ಎಂದು ಪರಿಗಣಿಸುವ ಅಗತ್ಯವಿದೆ. 'ದುಡಿಮೆ' ಅನ್ನುವುದು ಮನುಷ್ಯರ – ಅವರು ಮಹಿಳೆಯರಾಗಿರಲಿ ಅಥವಾ ಪುರುಷರಾಗಿರಲಿ – ಅವರು ನಡೆಸುವ ಚಟುವಟಿಕೆಗಳಿಗೆ ಸಂಬಂಧಿಸಿದ್ದು ಅನ್ನುವುದನ್ನು ಸಮಾಜ ಒಪ್ಪಿಕೊಳ್ಳಬೇಕು. ಈ ಗುಣಗಳಿದ್ದವರು ಮಾತ್ರ ಮಹಿಳೆಯರು ಮತ್ತು ಈ ಗುಣಗಳಿದ್ದವರು ಮಾತ್ರ ಪುರುಷರು ಎಂಬ 'ಸಹಜತೆ'ಯನ್ನು ಆಧರಿಸಿದ ವರ್ಗೀಕರಣಕ್ಕೆ ಅರ್ಥವಿಲ್ಲ. ಮನುಷ್ಯರಾಗಿ ಇಬ್ಬರೂ – ಎಲ್ಲರೂ ಸಮಾನರು. ಸಮಾನತೆ–ಸಮತೆಯು ಇಲ್ಲಿ ಪ್ರಧಾನ ಮಾನದಂಡವಾಗಬೇಕು (ಮಾರ್ತಾ ನುಸುಬೌಮ್. ೨೦೦೨) .

ಆರ್ಥಿಕತೆಗೆ ಮಹಿಳೆಯರು ಸಲ್ಲಿಸುತ್ತಿರುವ ಕಾಣಿಕೆಯನ್ನು ಗುರುತಿಸಬೇಕಾಗಿದೆ. ಸಮಾಜಕ್ಕೆ ತಾವೇನೂ ಸಲ್ಲಿಸುತ್ತಿಲ್ಲ ಎಂಬ ಹುಸಿ ನಂಬಿಕೆಯು ಮಹಿಳೆಯರಲ್ಲಿಯೇ ಮನೆ ಮಾಡಿಕೊಂಡಿದೆ. ತಮಗೆ ಯಾವುದೇ ವೈಯಕ್ತಿಕ ಹಿತಾಸಕ್ತಿಗಳು ಇಲ್ಲ ಎಂಬ ಪೂರ್ವಗ್ರಹಗಳಿಂದ ಮೊದಲು ಮಹಿಳೆಯರು ಹೊರಬರಬೇಕು. ಸಮಾಜವು ಅವರ ಹಿತಾಸಕ್ತಿಗಳನ್ನು ಗಂಡ, ಮಕ್ಕಳು, ಕುಟುಂಬ, ಮನೆತನ ಇವುಗಳಿಗೆ ಸೀಮಿತಗೊಳಿಸಿಬಿಟ್ಟಿದೆ. ಮಹಿಳೆಯರಿಗೂ ತಮ್ಮದೇ ಆದ ಹಿತಾಸಕ್ತಿಗಳು ಸಾಧ್ಯ. ಅವುಗಳನ್ನು ಪೂರೈಸಿಕೊಳ್ಳಲು ಅಗತ್ಯವಾದ ವಾತಾವರಣವನ್ನು ರೂಪಿಸಬೇಕು ಮತ್ತು ಮಹಿಳೆಯರ ಧಾರಣಾ ಸಾಮರ್ಥ್ಯವನ್ನು ಉತ್ತಮಪಡಿಸಬೇಕು. ಮಹಿಳೆಯರಿಗೆ ಸ್ವಂತದ್ದು ಅನ್ನುವ, ವೈಯಕ್ತಿಕವಾದದ್ದು ಅನ್ನುವ ಹಿತಾಸಕ್ತಿಗಳೇ ಇಲ್ಲ ಎಂಬ ಸಂಗತಿಯನ್ನು ಮೊದಲು ತೊಡೆದುಹಾಕಬೇಕು. ಮಹಿಳೆಯರ ಸಂಗೋಪನಾ ದುಡಿಮೆಗೆ, ಸಂತಾನೋತ್ಪತ್ತಿ ದುಡಿಮೆಗೆ, ಅವರ ಶುಶ್ರೂಷಾ ದುಡಿಮೆಗೆ, ಮನೆವಾರ್ತೆ ದುಡಿಮೆಗೆ, ಆರ್ಥಿಕ ಮಹತ್ವವಿದೆ. ಈ ಬಗೆಯ ದುಡಿಮೆ ಅಭಿವೃದ್ಧಿಯ ದೃಷ್ಟಿಯಿಂದ ಆಯಕಟ್ಟಿನದಾಗಿದೆ. ಒಟ್ಟಾರೆ ಮಹಿಳೆಯರಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡಲು ಸಮಾಜವು ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸಬೇಕಾಗಿದೆ. ಅದು ತನ್ನಷ್ಟಕ್ಕೆ ತಾನು ಸಂಭವಿಸುವ ಸಂಗತಿಯಲ್ಲ. ಸಾಕ್ಷರತೆ–ಶಿಕ್ಷಣ ಮಟ್ಟ ಉತ್ತಮವಾದಂತೆ, ವರಮಾನದಲ್ಲಿ ಏರಿಕೆಯಾದಂತೆ, ಉದ್ಯೋಗದ ಅವಕಾಶಗಳು ವಿಸ್ತೃತಗೊಂಡಂತೆ, ಸಮಾಜದಲ್ಲಿ ಜಾಗೃತಿ ಉಂಟಾದಂತೆ ಲಿಂಗ ತಾರತಮ್ಯ, ಅಸಮಾನತೆ, ಶೋಷಣೆ ಮುಂತಾದವು ತಮ್ಮಷ್ಟಕ್ಕೆ ತಾವು ಮಾಯವಾಗುತ್ತವೆ ಅನ್ನುವ ಸಂಗತಿಯಲ್ಲಿ ಹುರುಳಿಲ್ಲ. ಅದನ್ನು ಪ್ರಜ್ಞಾಪೂರ್ವವಾಗಿ ಸಾಧಿಸಿಕೊಳ್ಳಬೇಕಾಗಿದೆ. ಅದಕ್ಕೆ ಸಮಾಜ ನಿರಂತರ ಪ್ರಯತ್ನ ನಡೆಸಬೇಕು.

**ಟಿ. ಆರ್. ಚಂದ್ರಶೇಖರ**
ನಂ. ೩೪೦/೧, 'ವಚನ', ಸೊಸೈಟಿ ರಸ್ತೆ, ಅಮರಾವತಿ, ಹೊಸಪೇಟೆ – ೫೮೩ ೨೦೧




# ಕಾಶ್ಮೀರ

## ಇತಿಹಾಸದ ಒಂದು ಇಣುಕುನೋಟ

ಕಾಶ್ಮೀರವು ಅತ್ಯಂತ ವಿಶಿಷ್ಟತೆ ಹಾಗೂ ಸೋಜಿಗಗಳಿಂದ ಕೂಡಿದ ರಾಜ್ಯ. ಇಸ್ಲಾಂ ಧರ್ಮದ ಅನುಯಾಯಿಗಳು ಬಹುಸಂಖ್ಯೆಯಲ್ಲಿದ್ದರೂ ಪ್ರಾಚೀನ ಬೌದ್ಧ ಧರ್ಮದ ಪ್ರಭಾವ ಇನ್ನೂ ದಟ್ಟವಾಗಿರುವ ಈ ಪ್ರಾಂತ್ಯದಲ್ಲಿ ಗೋಮಾಂಸ ತಿನ್ನುವವರು ಬಹಳ ಕಮ್ಮಿ ಮಂದಿ! ಇಲ್ಲಿಯ "ಕಾಶ್ಮೀರೀ ಪಂಡಿತರು" ಗೋ–ಮಾಂಸವೊಂದನ್ನು ಮಾತ್ರ ಸೇವಿಸುವುದಿಲ್ಲ!! ಇತಿಹಾಸದ ಸಂಶೋಧಕರು ನಡೆಸಿರುವ ಉತ್ಖನನಗಳಿಂದ ಈ ಪ್ರಾಂತ್ಯವು ಪುರಾತನ ಹರಪ್ಪ–ಮೊಹೆಂಜೋದಾರೋ ಸಂಸ್ಕೃತಿಯ ಜನರೊಡನೆ ಸಂಪರ್ಕವಿದ್ದದ್ದು ದೃಢಪಟ್ಟಿದೆ. ಕಾಶ್ಮೀರದ ಪಠಾಣರು ಇಸ್ರೇಲಿನ "ಯಹೂದಿಗಳು" ಎಂಬ ಮಾತು ಕಾಶ್ಮೀರದಲ್ಲಿ ಜನಜನಿತವಾಗಿದೆ. ಹೀಗಾಗಿ ಇಲ್ಲಿಯ ಬಹುತೇಕ ಮುಸ್ಲಿಮರು ಇಸ್ರೇಲ್ ಕುರಿತು ಮೃದುಧೋರಣೆ ಹೊಂದಿದವರಾಗಿದ್ದಾರೆ!! ಕಾಶ್ಮೀರದ 'ಪಂಡಿತ'ರ ಕಥೆ–ವ್ಯಥೆಗಳು ನಮ್ಮೆಲ್ಲರಿಗೂ ಚಿರಪರಿಚಿತ. ಸ್ವತಂತ್ರ ಭಾರತದ ಮೊದಲ ಪ್ರಧಾನಿ ಜವಾಹರ ಲಾಲ್ ನೆಹರು ಕಾಶ್ಮೀರದ ಪಂಡಿತ ಮನೆತನದವರು.

**ಕಾಶ್ಮೀರದ ಪಠಾಣರು ಇಸ್ರೇಲ್ ಮೂಲದವರೇ ?**

ಭಾರತ ಮತ್ತು ಪಾಕಿಸ್ತಾನದಲ್ಲಿರುವ ಪಠಾಣರು ಇಸ್ರೇಲಿನಲ್ಲಿ ಕ್ರಿ. ಪೂ. ೭೨೨ರಲ್ಲಿ ಒಮ್ಮಿಂದೊಮ್ಮೆಗೆ ಕಣ್ಮರೆಯಾದ ಹತ್ತು ಬುಡಕಟ್ಟುಗಳ ಜನರೆಂಬ ಪ್ರತೀತಿಯಿದ್ದು, ಕಾಶ್ಮೀರಿಗಳಲ್ಲೂ ಇದು ಮನೆಮಾತಾಗಿದೆ.

೧೧ನೇ ಶತಮಾನದ ಪರ್ಶಿಯಾದ ಮುಸ್ಲಿಂ ವಿದ್ವಾಂಸ ಅಲ್ ಬರೂನಿ ಇದನ್ನು ಮೊದಲು ಪ್ರಸ್ತಾಪಿಸಿದನು.

'ಅಹಮದಿಯಾ' ಪಂಥದ ಸಂಸ್ಥಾಪಕ ಮಿರ್ಜಾ ಗುಲಾಮ್ ಅಹಮದ್‌ನ ಪ್ರಕಾರ : "ಶಿಲುಬೆಗೆ ಏರಿಸಲ್ಪಟ್ಟ ಏಸುಕ್ರಿಸ್ತನು ಬದುಕಿ ಉಳಿದು ಕಾಶ್ಮೀರಕ್ಕೆ ಬಂದು, ಅಲ್ಲಿರುವ ಇಸ್ರೇಲಿನ ಬುಡಕಟ್ಟು ಜನಾಂಗಗಳಿಗೆ ಬೋಧನೆ ನೀಡುತ್ತ ವಾಸಿಸುತ್ತಾನೆ. ೧೨೦ ವಯಸ್ಸಿನವರೆಗೆ ಬದುಕಿದ್ದ ಆತನಿಗೆ ಮಕ್ಕಳೂ ಇದ್ದರು. ಶ್ರೀನಗರದಲ್ಲಿ ಆತನ ಸಮಾಧಿಯಿದೆ."

ಕಾಶ್ಮೀರದಲ್ಲಿರುವ ಅನೇಕ ಸ್ಥಳನಾಮಗಳಿಗೂ, ಇಸ್ರೇಲಿನ ಹೀಬ್ರೂ ಶಬ್ದಗಳಿಗೂ ಅನೇಕ ಸಾಮ್ಯತೆಗಳಿದ್ದು ಈ ಊಹಾಪೋಹಗಳಿಗೆ ಇನ್ನಷ್ಟು ಇಂಬು ಕೊಡುವಂತಿವೆ. ಹೀಬ್ರೂ ಭಾಷೆಯ 'ಕಶ್ಮೀರ' ಶಬ್ದದಿಂದ 'ಕಾಶ್ಮೀರ' ಎಂಬ ಹೆಸರು ಬಂತೆಂಬ ಮಾತಿದೆ. ಕಾಶ್ಮೀರವನ್ನು 'ಬಾಗ್–ಇ–ಸುಲೆಮಾನ್ (ಸೊಲೆಮಾನಿನ ಉದ್ಯಾನವನ)' ಎಂದೂ ಕರೆಯುತ್ತಾರೆ. ಮೋಸಸ್‌ನ ಸಮಾಧಿ, ಸೊಲೊಮನ್‌ನ ಗದ್ದುಗೆ ಇತ್ಯಾದಿ ಹೆಸರುಗಳುಳ್ಳ ಸ್ಥಳಗಳೂ ಕಾಶ್ಮೀರದಲ್ಲಿವೆ.

ಕಾಶ್ಮೀರದ ಸುಮಾರು ೩೫೦ ಸ್ಥಳಗಳ ಹೆಸರುಗಳು (ಹಳ್ಳಿ ಹಾಗೂ ನಗರಗಳು) ಇಸ್ರೇಲಿನಲ್ಲಿರುವ ಅನೇಕ ಭೂಭಾಗಗಳ ಹೆಸರುಗಳೊಂದಿಗೆ ಬಹಳ ಸಾಮ್ಯತೆ ಹೊಂದಿರುವುದನ್ನು ನೋಡಬಹುದು.

ಉದಾಹರಣೆ : ೧) ಕಾಶ್ಮೀರದ ಬಂದಪೂರ್, ನಬೂ ಗುಡ್ಡ, ಪಿಶ್‌ಗಢ, ಮಮ್ರೆ, ಗಿಲ್‌ಗಿಟ್, ಗೋಚನ, ಅಮುನಾಹ್, ಅಂತೆಯೇ ಇಸ್ರೇಲಿನ ಬೇತ್ ಪಿಯೋರ್, ನೆಬೂ ಪರ್ವತ, ಪಿಶ್‌ಗಡ್, ಮಮ್ರೆ, ಗಿಲ್‌ಗಲೆ, ಗೋಶೇನ್ ಮತ್ತು ಅಮೋನ್.

ಉದಾಹರಣೆ : ೨) ಪಾಕಿಸ್ತಾನದ ಗಡಿಯ ಬಳಿ 'ಹಂದ್ವಾರ್' ಎಂಬ ಜನಸಮೂಹವಿದ್ದು, ಇವರು ಈಗಲೂ ತಮ್ಮನ್ನು 'ಬಿನ್ನೈ ಇಸ್ರೇಲಿಗಳು' (ಇಸ್ರೇಲಿನ ಮಕ್ಕಳು) ಎಂದೇ ಕರೆದುಕೊಳ್ಳುತ್ತಾರೆ.

ಉದಾಹರಣೆ : ೩) : ಕಾಶ್ಮೀರದ ಪಠಾಣರ ಹೆಸರುಗಳಿಗೂ ಇಸ್ರೇಲಿನಲ್ಲಿ

**ಎಮ್. ಸಿ. ಡೋಂಗ್ರೆ**

ಕೇಂದ್ರ ಸರ್ಕಾರವು ತನ್ನ ಅನೇಕ ತಪ್ಪು ನಡೆಗಳಿಂದ 'ಕಾಶ್ಮೀರದ ಜನರ' ವಿಶ್ವಾಸಾರ್ಹತೆಯನ್ನು ಕಳೆದುಕೊಂಡಿದೆ. ಜಮ್ಮು-ಕಾಶ್ಮೀರ ರಾಜ್ಯಕ್ಕೆ ಸಂವಿಧಾನದ ೩೭೦ನೇ ಕಲಂನ ಪ್ರಕಾರ 'ವಿಶೇಷ ಸ್ವಾಯತ್ತೆ'ಯನ್ನು ನೀಡಿದ್ದರೂ ಸಹ ಈ ಸ್ವಾಯತ್ತೆಯ ಉದ್ದೇಶ ಹಾಗೂ ಭಾವನೆಗಳನ್ನು ಮೊಟಕು ಮಾಡುವಂತಹ ಅನೇಕ ತಿದ್ದುಪಡಿಗಳನ್ನು ಕೇಂದ್ರ ಸರ್ಕಾರವು ತಂದಿರುವುದು (ಬಹು ಮುಖ್ಯವಾಗಿ ಕಾಂಗ್ರೆಸ್ ಸರ್ಕಾರ) ಇಲ್ಲಿಯ ಜನತೆ ಕೇಂದ್ರ ಸರ್ಕಾರವನ್ನು ಅನುಮಾನದಿಂದ ನೋಡುವ ಹಾಗೇ ಮಾಡಿವೆ. ಅಲ್ಲದೆ ಭಾರತೀಯ ಸೈನ್ಯದಿಂದ ಕಾಶ್ಮೀರದಲ್ಲಿ ಆಗುತ್ತಿರುವ ದಬ್ಬಾಳಿಕೆ, ಕ್ರೌರ್ಯ, ಮಾನವ ಹಕ್ಕುಗಳ ಉಲ್ಲಂಘನೆಗಳೂ ಕೂಡ ಉರಿವ ಬೆಂಕಿಗೆ ತುಪ್ಪ ಸುರಿಯುವಂತಾಗಿದೆ.

ಕಣ್ಮರೆಯಾದ ಹತ್ತು ಬುಡಕಟ್ಟುಗಳ ಹೆಸರುಗಳಿಗೂ ಸಾಮ್ಯತೆ ಇವೆ. ಉದಾಹರಣೆ : ರಬ್ಬಾನಿ (ರ್‍ಯೂಬೆನ್), ಶಿನವಾರಿ (ಶಿಮೋನ್), ದಫ್ತಾರೆ (ನಫ್ತಾಲಿ), ಆಶುರಿ (ಆಶೇರ್), ಅಲ್‌ಫ್ರಿದಿ (ಏಫ್ರಿಯಂ) ಇತ್ಯಾದಿ.

ಉದಾಹರಣೆ : ೪) ಕಾಶ್ಮೀರದಲ್ಲಿ ಕ್ರಿಸ್ತನನ್ನು 'ಯುಜ್ ಅಸಫ್' ಎಂಬ ಹೆಸರಿನಲ್ಲಿ ಕರೆಯುತ್ತಾರೆ. ಹೀಬ್ರೂ ಭಾಷೆಯಲ್ಲಿ ಕ್ರಿಸ್ತನ ಹೆಸರು 'ಯಜು' ಎಂದು !!

* * *

**ಕಾಶ್ಮೀರಿ ಭಾಷೆ; 'ಇಂಡೋ–ಆರ್ಯನ್' ಅಥವಾ ಇಂಡೋ–ಇರಾನಿಯನ್ ?**

ಕಾಶ್ಮೀರಿ ಭಾಷೆಯು ಕಾಶ್ಮೀರದ ಮಾತೃಭಾಷೆ. ಅಲ್ಲಿಯ ಎಲ್ಲ ಜನರ ಭಾಷೆ. ಇದರ ಜೊತೆಗೆ ಉರ್ದು ಭಾಷೆಯನ್ನೂ ಬಳಸುತ್ತಾರೆ. ಆದರೆ ಕಾಶ್ಮೀರಿ ಭಾಷೆಯ ಕುರಿತು ಇದು 'ಇಂಡೋ–ಆರ್ಯನ್' ಭಾಷೆಯೋ ಅಥವಾ 'ಇಂಡೋ–ಇರಾನಿಯನ್' ಭಾಷೆಯೋ ಎಂಬ ಚರ್ಚೆ ಈಗಲೂ ಇದ್ದರೂ, ಬಹುತೇಕ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಇದು 'ಇಂಡೋ–ಆರ್ಯನ್' ಭಾಷೆಯಿಂದ ಹುಟ್ಟಿಕೊಂಡ ಭಾಷೆ. ಪ್ರಾಚೀನ 'ಋಗ್ವೇದ'ದಲ್ಲಿ ಬಳಸಲ್ಪಟ್ಟಿರುವ ಅನೇಕ ಪದಗಳು ಕಾಶ್ಮೀರಿ ಭಾಷೆಯಲ್ಲಿ ನಿತ್ಯ ಉಪಯೋಗಿಸುವ ಪದಗಳಾಗಿವೆ. ಆದರೆ ಈ ಶಬ್ದಗಳು ನಂತರದ ಸಂಸ್ಕೃತದಲ್ಲಿ ಕಾಣಸಿಗುವುದಿಲ್ಲ !! ಭಾರತೀಯ ಭಾಷೆಗಳ ಕುರಿತು ಅಪಾರ ಜ್ಞಾನವಿದ್ದ ಗ್ರಿಯರ್‌ಸನ್‌ನ ಪ್ರಕಾರ ಕಾಶ್ಮೀರೀ ಭಾಷೆಯು ಇಂಡೋ–ಇರಾನಿಯನ್ ಭಾಷಾ–ಮೂಲದಿಂದ ಹುಟ್ಟಿರುವ 'ದಾರ್ದಿಕ್' ಭಾಷೆಯಿಂದಾಗಿದೆ. ಆದರೆ ನಂತರ ಬಂದ ಭಾಷಾಶಾಸ್ತ್ರಜ್ಞರು 'ದಾರ್ದಿಕ್' ಭಾಷಾಗುಂಪು ಇಂಡೋ–ಆರ್ಯನ್ ಭಾಷೆಯಿಂದ ಜನಿತವಾಗಿದೆ ಎಂದು ಸ್ಪಷ್ಟಪಡಿಸಿರುತ್ತಾರೆ.

**ಕಾಶ್ಮೀರದ ಕುರಿತು ಐತಿಹ್ಯಗಳು ಹಾಗೂ ಪುರಾಣಕಥೆಗಳು**

ಹೀಬ್ರೂ ಭಾಷೆಯ 'ಕಶ್ಮೀರ'ದಿಂದ 'ಕಾಶ್ಮೀರ' ಶಬ್ದ ಬಂದಿದೆ ಎಂಬ ಮಾತಿದ್ದರೂ, ಜನಜನಿತ ಮಾತಿನ ಪ್ರಕಾರ 'ಕಾಶ್ಮೀರ' ಶಬ್ದವು ಸಂಸ್ಕೃತದ (ಕ+ಶಿಮೀರ = ನೀರು+ ಬೇರ್ಪಡಿಸು, ತುಂಡಾಗಿಸು) ಎಂಬ ಶಬ್ದದಿಂದ ಹುಟ್ಟಿಕೊಂಡಿದೆ. ಹೀಗಾಗಿ 'ಕಾಶ್ಮೀರ'ವೆಂದರೆ 'ನೀರಿನಿಂದ ಬೇರ್ಪಡಿಸಲ್ಪಟ್ಟ ಭೂಪ್ರದೇಶ' ಎಂದರ್ಥ.

೧೨ನೇ ಶತಮಾನದಲ್ಲಿ ಬರೆಯಲ್ಪಟ್ಟ ಕಲ್ಹಣನ 'ರಾಜತರಂಗಿಣಿ'ಯ ಪ್ರಕಾರ ಕಾಶ್ಮೀರದ ಕಣಿವೆ ಮೊದಲಿಗೆ ಒಂದು ಬಹು ದೊಡ್ಡ ಕೊಳವಾಗಿತ್ತು. ಹಿಂದೂ ಪುರಾಣಗಳ ಪ್ರಕಾರ ಕಶ್ಯಪ ಋಷಿಯು ಈಗಿನ ಬಾರಮುಲ್ಲ (ಆಗಿನ ವರಾಹ–ಮೂಲ) ಪರ್ವತಗಳಲ್ಲಿ ರಂಧ್ರಗಳನ್ನು ಕೊರೆದು ಈ ಕೊಳವನ್ನು ಬರಿದಾಗಿಸಿದನಂತೆ, ಆದ್ದರಿಂದ ಇದಕ್ಕೆ 'ಕಾಶ್ಮೀರ' ಎಂಬ ಹೆಸರು ಬಂದಿತು. ಪೂರ್ವದಲ್ಲಿ ಇಲ್ಲಿಯ ಮುಖ್ಯ ನಗರಕ್ಕೆ 'ಕಶ್ಯಪಪುರ' ಎಂಬ ಹೆಸರೇ ಇತ್ತು.

ಮಹಾಭಾರತದ ಪ್ರಕಾರ ಆಗಿನ ಸಮಯದಲ್ಲಿ ಕಾಂಭೋಜರು ಕಾಶ್ಮೀರವನ್ನು ಆಳುತ್ತಿದ್ದರು. ಅವರ ರಾಜಧಾನಿ 'ರಾಜಪುರ'ವಾಗಿದ್ದು, ಈಗ ಅದರ ಹೆಸರು 'ರಾಜೌರಿ'. ನಂತರದಲ್ಲಿ ಅಲ್ಲಿ 'ಪಾಂಚಾಲರು' ರಾಜ್ಯವಾಳಿದ್ದು ಅದಕ್ಕೆ ಸಾಕ್ಷಿಯಾಗಿ 'ಪೀರ್ ಪಂಜಾಲ್' ಎಂಬ ಊರಿದೆ ಎನ್ನುತ್ತಾರೆ. ಐತಿಹ್ಯಗಳ ಪ್ರಕಾರ "ಜಮ್ಮು" ನಗರವನ್ನು ಕ್ರಿ. ಪೂ. ೧೪ನೇ ಶತಮಾನದಲ್ಲಿ 'ಜಂಬೋಲೋಚನ' ಎಂಬುವವನು ಆಳಿದ್ದರಿಂದ ಅದಕ್ಕೆ 'ಜಮ್ಮು' ಎಂಬ ಹೆಸರು ಬಂದಿದೆ.

**ಇತಿಹಾಸ ಏನನ್ನುತ್ತದೆ ?**

ಕಾಶ್ಮೀರದಲ್ಲಿ ದೊರಕಿರುವ 'ನಿಯೋಲಿಥಿಕ್' ಕುರುಹುಗಳ ಕಾಲ ಕ್ರಿ. ಪೂ. ಸುಮಾರು ೩೦೦೦ ವರ್ಷಗಳಷ್ಟು ಪ್ರಾಚೀನವಾದದ್ದು. ಮಾನವನ ಮೃತದೇಹ ದೊಟ್ಟಿಗೆ ಸಾಕುಪ್ರಾಣಿಗಳನ್ನೂ ಮತ್ತು ಕಾಡುಪ್ರಾಣಿಗಳನ್ನೂ ಒಟ್ಟಿಗೆ ಹೂಳುವ ವಿಶಿಷ್ಟ ಆಚರಣೆ ಇಲ್ಲಿ ಕಂಡುಬರುತ್ತದೆ. ವೇದೋತ್ತರದ ಕಾಲದಲ್ಲಿ 'ಉತ್ತರದ ಕುರು' ರಾಜವಂಶಸ್ಥರು ಕಾಶ್ಮೀರದಲ್ಲಿ ಬಂದು ನೆಲೆಸಿದ್ದರು. ಅಶೋಕನ ಕಾಲದಲ್ಲಿ ಕಾಶ್ಮೀರವು ಮೌರ್ಯ ಚಕ್ರಾಧಿಪತ್ಯದ ಒಂದು ಭಾಗವಾಗಿ, ಇಲ್ಲಿ ಬೌದ್ಧ ಧರ್ಮವು ಪ್ರವೇಶಿಸುತ್ತದೆ. 'ಶ್ರೀನಗರಿ' ಅಂದರೆ ಈಗಿನ 'ಶ್ರೀನಗರ'ವು ಮೌರ್ಯರ ಆಳ್ವಿಕೆಯಲ್ಲಿ ಕಟ್ಟಲ್ಪಟ್ಟ ನಗರ. ಕನಿಷ್ಕನ ಕಾಲದಲ್ಲಿ 'ಬೌದ್ಧರ ಮೂರನೇ ಮಹಾ ಸಮ್ಮೇಳನ' ಶ್ರೀನಗರದಲ್ಲಿ ನಡೆಯುತ್ತದೆ. ಅದರಲ್ಲಿ ಮಹಾನ್ ಬೌದ್ಧ ವಿದ್ವಾಂಸರುಗಳಾದ ಅಶ್ವಘೋಷ, ನಾಗಾರ್ಜುನ ಮತ್ತು ವಸುಮಿತ್ರರು ಭಾಗವಹಿಸುತ್ತಾರೆ. ಟಿಬೆಟ್ ಹಾಗೂ ಚೀನಾಕ್ಕೆ ಬೌದ್ಧ ಧರ್ಮವು ಕಾಶ್ಮೀರದಿಂದ ಪ್ರವೇಶಿಸಿತು.

> **ಗಂಧ**
>
> ಶರೀರದ ನಾನಾ
> ದುರ್ಗಂಧಗಳಿಗೆ
> ಪರಿಹಾರ, ಬುದ್ಧ
> ಹೇಳಿದ
> 'ಶೀಲಗಂಧ !'
>
> ಸಿ.ಪಿ.ಕೆ.
> ಮೈಸೂರು

ಕ್ರಿ. ಶ. ೭ನೇ ಶತಮಾನದ ನಂತರ ಹಿಂದೂ ಧರ್ಮದ ಪ್ರಮುಖ ಕೇಂದ್ರವಾಗಿ ಕಾಶ್ಮೀರವು ಹೊರಹೊಮ್ಮಿದ್ದನ್ನು ಕಾಣಬಹುದು. 'ವಸುಗುಪ್ತ'ನ 'ಶಿವಸೂತ್ರ'ಗಳು ಕಾಶ್ಮೀರದಲ್ಲಿ 'ಶೈವ'ಪಂಥವು ಬೆಳೆಯಲು ಪ್ರಮುಖ ಪ್ರಭಾವವನ್ನು ಬೀರಿದೆ. 'ಅಭಿನವ ಗುಪ್ತ'ನ ಪ್ರಭಾವಕ್ಕೆ ಸಿಲುಕಿದ ಕಾಶ್ಮೀರದಲ್ಲಿ ಶೈವ ಪಂಥವು ಪ್ರಭಾವಶಾಲಿಯಾಗಿ ಬೆಳೆದು, ನಂತರ ದಕ್ಷಿಣ ಭಾರತವನ್ನು ಪ್ರವೇಶಿಸುತ್ತದೆ.

**ಕಾಶ್ಮೀರಕ್ಕೆ 'ಮುಸ್ಲಿಮರ' ಆಗಮನ**

ಕಾಶ್ಮೀರದಲ್ಲಿ ಸುಮಾರು ೩೦೦ ವರ್ಷಗಳಿಗೂ ಹೆಚ್ಚಿನ ಅವಧಿಯಷ್ಟು ಕಾಲ (ಕ್ರಿ. ಶ. ೧೦೦೩ರಿಂದ ಕ್ರಿ. ಶ. ೧೩೨೦ರವರೆಗೆ) ಲೋಹರ್ ಎಂಬ ರಾಜಸಂತತಿ ಆಳ್ವಿಕೆ ನಡೆಸುತ್ತದೆ. ಭ್ರಷ್ಟಾಚಾರ, ಮಿತಿಮೀರಿದ ತೆರಿಗೆಗಳು, ಅಂತಃಕಲಹಗಳ ಕಾರಣದಿಂದ ಕಾಶ್ಮೀರವು ಸುಲಭವಾಗಿ ಹೊರಗಿನ ಆಕ್ರಮಣಗಳಿಗೆ ತುತ್ತಾಗುತ್ತದೆ. ತುರ್ಕ್–ಮಂಗೋಲದ ನಾಯಕ 'ದುಲಚ' (ಈತನನ್ನು 'ಜುಲಿಜು' ಎಂದೂ ಕರೆಯುತ್ತಾರೆ) ಎನ್ನುವವನು ಕಾಶ್ಮೀರದ ಮೇಲೆ ಆಕ್ರಮಣ ಮಾಡಿದಾಗ ಲೋಹರ್ ದೊರೆ ಸುಹದೇವನು ಪಲಾಯನಗೈದು ದುಲಚನ ಹಾದಿಯನ್ನು ಸುಗಮಗೊಳಿಸುತ್ತಾನೆ !!

* * *

ನಂತರ 'ರಿಂಚನ' ಎಂಬ ಹೆಸರಿನ ಬೌದ್ಧ ನಿರಾಶ್ರಿತನೊಬ್ಬ ಇಲ್ಲಿ ರಾಜ್ಯವಾಳುತ್ತಾನೆ. ಈತನಿಗೆ ಬಹುಸಂಖ್ಯಾತ ಹಿಂದುಗಳ ಬೆಂಬಲ ಸಿಗದ ಕಾರಣ ಇಸ್ಲಾಂ ಧರ್ಮಕ್ಕೆ ಮತಾಂತರ ಪಡೆಯುತ್ತಾನೆ. ರಿಂಚನನ ಮಂತ್ರಿ 'ಶಾ ಮೀರ್' ಕಾಶ್ಮೀರದಲ್ಲಿ ಮುಸ್ಲಿಂ ಆಧಿಪತ್ಯವನ್ನು ಸ್ಥಾಪಿಸುತ್ತಾನೆ. ಒಂದು ವೇಳೆ ಕಾಶ್ಮೀರದ ಹಿಂದುಗಳು ರಿಂಚನನಿಗೆ ಬೆಂಬಲ ನೀಡಿರುತ್ತಿದ್ದಲ್ಲಿ ಕಾಶ್ಮೀರದಲ್ಲಿ ಇಸ್ಲಾಂ ಧರ್ಮವು ಈಗಿರುವಷ್ಟು ಪ್ರಭಾವಶಾಲಿಯಾಗಿ ಬೆಳೆಯುತ್ತಿರಲಿಲ್ಲ ಎಂಬ ವಾದವನ್ನು ಇತಿಹಾಸಜ್ಞರು ಮುಂದಿಟ್ಟಿದ್ದಾರೆ.

**ಸೂಫಿ ಸಂಪ್ರದಾಯದ ಕೇಂದ್ರವಾಗಿ 'ಕಾಶ್ಮೀರ'**

೧೪ನೇ ಶತಮಾನದ ಅಂತ್ಯದ ವೇಳೆಗೆ ಕಾಶ್ಮೀರದಲ್ಲಿ ಇಸ್ಲಾಂ ಧರ್ಮವು ಬಹಳ ಪ್ರಮುಖ ಧರ್ಮವಾಗಿ ಬೆಳೆಯುತ್ತದೆ. ಮುಸ್ಲಿಂ ಧರ್ಮ ಪ್ರಚಾರಕ 'ಶೇಖ್ ನೂರುದ್ದೀನ್ ನೂರಾನಿ'ಯು ಕಾಶ್ಮೀರದ ಶೈವ ಪಂಥವನ್ನು ಇಸ್ಲಾಮಿನ 'ಸೂಫಿ' ಸಂಪ್ರದಾಯದೊಡನೆ ಬೆರೆಸಿ ಇಸ್ಲಾಮನ್ನು ಇನ್ನೂ ಜನಪ್ರಿಯಗೊಳಿಸುತ್ತಾನೆ. ಹಿಂದುಗಳು ಇವನನ್ನು 'ನೂಂದ್ ಋಷಿ' ಎಂತಲೇ ಗೌರವಿಸುತ್ತಾರೆ. ಕಾಶ್ಮೀರವನ್ನು ಆಳಿದ ಮುಸ್ಲಿಂ ಸುಲ್ತಾನರು ಇತರ ಧರ್ಮಗಳನ್ನೂ ಸಹ ಬಹಳ ಗೌರವಿಸುತ್ತಿದ್ದರು. ಆದರೆ ಕಾಶ್ಮೀರವನ್ನು ೧೩೮೯ರಿಂದ ೧೪೧೩ರವರೆಗೆ ಆಳಿದ 'ಸುಲ್ತಾನ್ ಸಿಕಂದರ್' ಇದಕ್ಕೆ ದೊಡ್ಡ ಅಪವಾದವಾಗಿದ್ದ. ಈತನ ಕಾಲದಲ್ಲಿ ಹಿಂದುಗಳಿಗೆ ಪ್ರತ್ಯೇಕ ತೆರಿಗೆ, ಹಿಂಸೆ, ಬಲಾತ್ಕಾರದ ಮತಾಂತರ, ಮುಂತಾದುವನ್ನು ಹೇರುತ್ತಾನೆ. ಇವನ ನಂತರ ಮತ್ತೆ ಈ ರೀತಿಯ ಮತೀಯ–ಉನ್ಮಾದದಲ್ಲಿ ಇದೇ 'ಔರಂಗಜೇಬ'ನು ಕಾಶ್ಮೀರದಲ್ಲಿ ತೊಡಗಿದ್ದನ್ನು ನೋಡಬಹುದು.

**ಕಾಶ್ಮೀರದ 'ಶಾಲು' ಬಂದಿದ್ದು ಹೇಗೆ ?**

ಕಾಶ್ಮೀರದ ಜನಪ್ರಿಯ ಸುಲ್ತಾನನಾದ ಸುಲ್ತಾನ್ ಝಿಯಾನ್–ಉಲ್–ಅಬಿದಿನ್ ( ಕ್ರಿ. ಶ. ೧೪೨೦ರಿಂದ ಕ್ರಿ. ಶ. ೧೪೭೦) ಮಧ್ಯ ಏಷ್ಯಾ ಹಾಗೂ

ಇತರ ಕಡೆಯಿಂದ ಕಲಾವಿದರನ್ನೂ ಹಾಗೂ ಕುಶಲಕರ್ಮಿಗಳನ್ನೂ ಕರೆಸಿ ಸ್ಥಳೀಯರನ್ನು ತರಬೇತುಗೊಳಿಸುತ್ತಾನೆ. ಅವನ ಆಳ್ವಿಕೆಯಲ್ಲಿ ಮರದ ಅದ್ಭುತ ಕೆತ್ತನೆ ಮಾಡುವುದು, ಶಾಲುಗಳನ್ನು ತಯಾರಿಸುವುದು ಹಾಗೂ ನೆಲಹಾಸುಗಳನ್ನು ಹೆಣೆಯುವುದು, ಮತ್ತು ಪೇಪರಿನ ಪಲ್ಪಿನಿಂದ ಅದ್ಭುತ ಕಲಾಕೃತಿಗಳನ್ನು ನಿರ್ಮಿಸುವ ಉದ್ಯಮಗಳು ಕಾಶ್ಮೀರದಲ್ಲಿ ಬಹಳ ಗಟ್ಟಿಯಾಗಿ ನೆಲವೂರಿ, ವಿಶ್ವದ ಗಮನವನ್ನು ಸೆಳೆಯುವಲ್ಲಿ ಯಶಸ್ವಿಯಾಗುತ್ತವೆ.

೧೭೦೦ರಲ್ಲಿ ಕಾಶ್ಮೀರದ ಶ್ರೀಮಂತ ವರ್ತಕನ ಆಳೊಬ್ಬ ಪ್ರವಾದಿ ಮೊಹಮ್ಮದ್‌ರ ಕೂದಲೊಂದನ್ನು ಕಾಶ್ಮೀರಕ್ಕೆ ತರುತ್ತಾನೆ. ಕಾಶ್ಮೀರದ 'ದಾಲ್ ಕೊಳ'ದ ದಂಡೆಯಲ್ಲಿರುವ 'ಹಜರತ್ ಬಾಲ್ ಶ್ರೈನ್'ನಲ್ಲಿ ಇದನ್ನು ಈಗಲೂ ಸುರಕ್ಷಿತವಾಗಿಡಲಾಗಿದ್ದು, ಇದು ದೇಶದ ಮುಸ್ಲಿಂರ ಪ್ರಸಿದ್ಧ ಮತ್ತು ಪವಿತ್ರ 'ಪ್ರವಾಸೀ ತಾಣ'ಗಳಲ್ಲಿ ಇದೂ ಒಂದು ಎಂದು ಪರಿಗಣಿಸಲಾಗಿದೆ.

**ಜಮ್ಮು-ಕಾಶ್ಮೀರಕ್ಕೆ 'ಮಹಾರಾಜಾ'ನ ಆಗಮನ**

೧೮೪೬ರಲ್ಲಿ ಸಿಖ್ಖರು ಮತ್ತು ಬ್ರಿಟಿಷರ ವಿರುದ್ಧ ಜರುಗಿದ ಮೊದಲ ಯುದ್ಧದ ಸಂದರ್ಭದಲ್ಲಿ ಕಾಶ್ಮೀರದ 'ಡೋಗ್ರಾ ಬುಡಕಟ್ಟು ಜನಾಂಗ'ಕ್ಕೆ ಸೇರಿದ ಸಾಮಂತ ರಾಜ 'ಗುಲಾಬ್ ಸಿಂಗ್' ಬ್ರಿಟಿಷರಿಗೆ ಅನುಕೂಲವಾಗುವ ಹಾಗೇ ಮಧ್ಯಸ್ಥಿಕೆ ವಹಿಸುತ್ತಾನೆ. ಇದಕ್ಕೆ ಪ್ರತಿಯಾಗಿ 'ಸಿಂಧೂ ನದಿಯ ಪೂರ್ವದ ಭಾಗಗಳನ್ನು ಹಾಗೂ ರಾವಿ ನದಿಯ ಪಶ್ಚಿಮದ ಭಾಗಗಳನ್ನು (ಅಂದರೆ ಕಾಶ್ಮೀರದ ಭೂಭಾಗಗಳನ್ನು)' ಗುಲಾಬ್ ಸಿಂಗ್‌ಗೆ ಬ್ರಿಟಿಷರು ಆಗಿನ ಕಾಲದಲ್ಲಿ ೭೫ ಲಕ್ಷ ರೂಪಾಯಿಗಳಿಗೆ ಬಿಟ್ಟುಕೊಡುತ್ತಾರೆ!! ಈ ರೀತಿಯಲ್ಲಿ ಗುಲಾಬ್ ಸಿಂಗ್ ಜಮ್ಮು-ಕಾಶ್ಮೀರದ ಮೊದಲ ಮಹಾರಾಜನಾಗಿ ಅಸ್ತಿತ್ವಕ್ಕೆ ಬರುತ್ತಾನೆ. ಗುಲಾಬ್ ಸಿಂಗ್ ಕಾಶ್ಮೀರದ ಪ್ರಮುಖ ಬುಡಕಟ್ಟು ಪಂಗಡ 'ಡೋಗ್ರಾ' ಬುಡಕಟ್ಟಿಗೆ ಸೇರಿದವನು. ಈ ಡೋಗ್ರಾಗಳು ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟಗಾರರಿಗೆ ಸಹಾಯ ಮಾಡುವ ಬದಲು ಬ್ರಿಟಿಷರಿಗೆ ಸಹಾಯ ಮಾಡುತ್ತಾರೆ. ಈ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಬ್ರಿಟಿಷರ ಹೆಂಗಸರಿಗೆ ಹಾಗೂ ಮಕ್ಕಳಿಗೆ ತಮ್ಮಲ್ಲಿ ಆಶ್ರಯವನ್ನು ನೀಡುತ್ತಾರೆ. ಹೀಗಾಗಿ ಕಾಶ್ಮೀರದಲ್ಲಿ ಡೋಗ್ರಾಗಳ ಆಳ್ವಿಕೆಗೆ ಬ್ರಿಟಿಷರಿಂದ ಸಂಪೂರ್ಣ ಸಹಾಯ ದೊರಕುತ್ತದೆ. ಗುಲಾಬ್ ಸಿಂಗ್‌ನ ಮೊಮ್ಮಗನೇ ರಾಜಾ ಹರಿಸಿಂಗ್!! ೧೯೨೫ರಲ್ಲಿ ಸಿಂಹಾಸನವೇರಿದ ರಾಜಾ ಹರಿಸಿಂಗ್ ತನ್ನ ಕೆಟ್ಟ ಆಡಳಿತಕ್ಕೆ ಕುಖ್ಯಾತಿ ಪಡೆದವನು. ಈತನ ಅತ್ಯಧಿಕ ತೆರಿಗೆಗಳಿಂದ ಬೇಸತ್ತ ಪೂಂಛ್ ಪ್ರಾಂತ್ಯದ ಜನ ದಂಗೆ ಏಳುತ್ತಾರೆ. ಆಗಸ್ಟ್, ೧೯೪೭ರಲ್ಲಿ ಪೂಂಛ್ ಪ್ರಾಂತ್ಯದ ಜನರು ತಮ್ಮನ್ನು ಪಾಕಿಸ್ತಾನಕ್ಕೆ ಸೇರಿಸಬೇಕೆಂದು ಒತ್ತಾಯಿಸಿ ಸಭೆಗಳನ್ನು ನಡೆಸಿದಾಗ ರಾಜಾ ಹರಿಸಿಂಗನು ಸಾವಿರಾರು ಮುಗ್ಧರ ಹತ್ಯೆ ನಡೆಸುತ್ತಾನೆ. ನೂರಾರು ಹಳ್ಳಿಗಳಿಗೆ ಬೆಂಕಿ ಹಚ್ಚಿ ಸುಡುತ್ತಾನೆ. ಪೂಂಛ್ ಪ್ರಾಂತ್ಯದ ದಂಗೆಕೋರರು ೨೪.೧೦.೧೯೪೭ರಲ್ಲಿ ಪ್ರತ್ಯೇಕ "ಆಜ಼ಾದ್ ಕಾಶ್ಮೀರ" ರಾಜ್ಯವನ್ನು ಘೋಷಿಸುತ್ತಾರೆ. ಇದರ ನಡುವೆ ರಾಜಾ ಹರಿಸಿಂಗನು ಪಾಕಿಸ್ತಾನದೊಡನೆ ಪ್ರತ್ಯೇಕವಾಗಿ ವ್ಯಾಪಾರ, ವಾಣಿಜ್ಯ, ಪ್ರಯಾಣ ಇತ್ಯಾದಿ ಸೇವೆಗಳನ್ನು ಮುಂದುವರಿಸಿಕೊಂಡು ಹೋಗುವುದರ ಕುರಿತು ಒಪ್ಪಂದಕ್ಕೆ ಸಹಿ ಹಾಕುತ್ತಾನೆ. ಆದರೆ ಭಾರತದೊಡನೆ ಯಾವುದೇ ಒಪ್ಪಂದ ಮಾಡಿಕೊಳ್ಳುವುದಿಲ್ಲ.

* * *

ಈ ಸಂದರ್ಭದಲ್ಲಿ ಪೂಂಛ್‌ನ ದಂಗೆಕೋರರು ಪಾಕಿಸ್ತಾನದ ಪುಶ್ತೂನರನ್ನು ತಮ್ಮ ಸಹಾಯಕ್ಕೆ ಕರೆಯುತ್ತಾರೆ. ಪುಶ್ತೂನರಿಂದ ಲೂಟಿ ಹಾಗೂ ಕೊಲೆಗಳು ಅವ್ಯಾಹತವಾಗಿ ನಡೆಯುತ್ತವೆ. ರಾಜಾ ಹರಿಸಿಂಗ್ ಲಾರ್ಡ್ ಮೌಂಟ್ ಬ್ಯಾಟನ್‌ನ ಸಹಾಯ ಕೇಳುತ್ತಾನೆ. ಕಾಶ್ಮೀರವನ್ನು ಭಾರತದೊಡನೆ ಸೇರಿಸಿದಲ್ಲಿ ಮಾತ್ರ ಸಹಾಯ ಮಾಡುವುದಾಗಿ ಮೌಂಟ್ ಬ್ಯಾಟನ್ ಷರತ್ತನ್ನೊಡ್ಡುತ್ತಾರೆ. ಈ ಷರತ್ತಿಗೆ ರಾಜಾ ಹರಿಸಿಂಗ್ ಸಹಿ ಹಾಕಿದ ಕೂಡಲೇ ಭಾರತದ ಸೈನಿಕರು ಕಾಶ್ಮೀರವನ್ನು ಪ್ರವೇಶಿಸಿ ಪುಶ್ತೂನರನ್ನು ಹಿಂದಕ್ಕೆ ಅಟ್ಟುತ್ತಾರೆ. ಆದರೆ ಒಂದು ಸಣ್ಣ ಪ್ರಾಂತ್ಯದಲ್ಲಿ ಪುಶ್ತೂನರು

ಗಟ್ಟಿಯಾಗಿ ನಿಲ್ಲುತ್ತಾರೆ. ಕಾಶ್ಮೀರವನ್ನು ಭಾರತದೊಡನೆ ವಿಲೀನಗೊಳಿಸಿದ್ದನ್ನು ಪಾಕಿಸ್ತಾನ ಈಗಲೂ ವಿರೋಧಿಸುತ್ತಿದೆ. ಆ ರಾಷ್ಟ್ರದ ಪ್ರಕಾರ ಹರಿಸಿಂಗನು ಪಾಕಿಸ್ತಾನದೊಡನೆ ಮಾಡಿಕೊಂಡ ಒಪ್ಪಂದ ಇನ್ನೂ ರದ್ದಾಗಿಲ್ಲ. ಒತ್ತಡಕ್ಕೆ ಒಳಗಾಗಿ ಹರಿಸಿಂಗ್ ಈ ರೀತಿ ನಡೆದುಕೊಂಡಿದ್ದ ಎನ್ನುವುದೇ ಪಾಕಿಸ್ತಾನದ ವಾದ.

**ಪಾಕ್ ಆಕ್ರಮಿತ ಕಾಶ್ಮೀರ**

'ಆಜ಼ಾದ್ ಕಾಶ್ಮೀರ'ವನ್ನು 'ಪಾಕ್ ಆಕ್ರಮಿತ ಕಾಶ್ಮೀರ'ವೆಂದೂ ಕರೆಯುತ್ತಾರೆ. ಈ ಪ್ರದೇಶವು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ.

೧) ಆಜ಼ಾದ್ ಕಾಶ್ಮೀರ: ಸುಮಾರು ೪೦೦ ಕಿ. ಮೀ. ಉದ್ದ ಹಾಗೂ ೧೬ರಿಂದ ೬೪ ಕಿ.ಮೀ. ಅಗಲವಿರುವ ಪ್ರದೇಶ. ಇಲ್ಲಿ ಪಾರ್ಲಿಮೆಂಟರಿ ವ್ಯವಸ್ಥೆಯಿರುವ ಸರ್ಕಾರವಿದೆ. ತನ್ನದೇ ಆದ ಸಂವಿಧಾನವನ್ನು ಹೊಂದಿದೆ. ತನ್ನದೇ ಆದ ಸುಪ್ರೀಂ ಕೋರ್ಟ್, ಹೈಕೋರ್ಟ್‌ಗಳನ್ನು ಹೊಂದಿದೆ. ಆದರೆ ಈ ಪ್ರಾಂತ್ಯದ ಜನರ ಆಗು-ಹೋಗುಗಳ ಮೇಲೆ ಪಾಕಿಸ್ತಾನದ ಅಧಿಕಾರಿಗಳು ನೇರ ನಿಯಂತ್ರಣವನ್ನು ಹೊಂದಿದ್ದಾರೆ.

೨) ಗಿಲ್‌ಗಿಟ್-ಬಲ್ತಿಸ್ತಾನ್ ಪ್ರಾಂತ್ಯ: ಇದು ೭೨,೪೯೬ ಚದರ ಕಿ.ಮೀ. ವಿಸ್ತೀರ್ಣದ ಜಾಗ. ಇದು ಸಂಪೂರ್ಣವಾಗಿ ಪಾಕಿಸ್ತಾನದ ನೇರ ಅಧೀನದಲ್ಲಿದೆ.

ಪಾಕ್-ಆಕ್ರಮಿತ ಸ್ಥಾನದ ಬಗ್ಗೆ ಭಾರತವು ವಿಶ್ವಸಂಸ್ಥೆಗೆ ದೂರು ನೀಡಿದ್ದು, ಈ ಪ್ರದೇಶ ಪಾಕಿಸ್ತಾನಕ್ಕೆ ಸೇರಬೇಕೋ ಅಥವಾ ಭಾರತಕ್ಕೆ ಸೇರಬೇಕೋ ಎಂಬುದರ ಕುರಿತು 'ಜನಮತ ಸಂಗ್ರಹ' ಮಾಡಬೇಕೆಂದು ವಿಶ್ವಸಂಸ್ಥೆ ನಿರ್ದೇಶಿಸಿದೆ. ಆದರೆ ಅದು ಇನ್ನೂ ಕಾರ್ಯಗತವಾಗಿಲ್ಲ. 'ಜನಮತ ಸಂಗ್ರಹ'ಕ್ಕೆ ಮುಂಚಿತವಾಗಿ ಇಲ್ಲಿರುವ ತನ್ನ ಸೈನ್ಯವನ್ನು ಪಾಕಿಸ್ತಾನವು ಹಿಂದಕ್ಕೆ ಕರೆಸಿಕೊಳ್ಳಬೇಕೆಂಬ ಷರತ್ತನ್ನು ವಿಶ್ವಸಂಸ್ಥೆ ವಿಧಿಸಿದ್ದು, ಅದನ್ನು ಪಾಕಿಸ್ತಾನ ಇನ್ನೂ ಕಾರ್ಯಗತಗೊಳಿಸಲು ಸಿದ್ಧವಿಲ್ಲ.

**ಜಮ್ಮು- ಕಾಶ್ಮೀರದ ಸಂವಿಧಾನ**

'ಕಾಶ್ಮೀರದ ಹುಲಿ' ಎಂದೇ ಪ್ರಖ್ಯಾತರಾದ ಶೇಖ್ ಅಬ್ದುಲ್ಲ ಕಮ್ಯುನಿಸ್ಟ್ ಸಿದ್ಧಾಂತಗಳಿಂದ ಬಹಳ ಪ್ರಭಾವಿತರಾಗಿದ್ದರು. ಅವರ ಪಕ್ಷ 'ನ್ಯಾಷನಲ್ ಕಾನ್‌ಫರೆನ್ಸ್'ನ ಬಾವುಟದ ಬಣ್ಣ ಕೆಂಪು ಹಾಗೂ ಅದರೊಳಗೆ ನೇಗಿಲಿನ ಚಿತ್ರವಿದೆ. ಜಮ್ಮು-ಕಾಶ್ಮೀರದ ಸಂವಿಧಾನದ ರಚನೆಯಲ್ಲಿ ಕಮ್ಯುನಿಸ್ಟ್ ಸಿದ್ಧಾಂತದ ಪ್ರಭಾವವನ್ನು ದಟ್ಟವಾಗಿ ಕಾಣಬಹುದು. ಅತ್ಯಂತ ಕ್ರಾಂತಿಕಾರಿ ಸತ್ವವುಳ್ಳ ಭೂ-ಸುಧಾರಣೆಯನ್ನು ಪ್ರಪ್ರಥಮವಾಗಿ ದೇಶದಲ್ಲಿ ಜಾರಿಗೆ ತಂದ ಖ್ಯಾತಿ ಜಮ್ಮು-ಕಾಶ್ಮೀರಕ್ಕೆ ಸಲ್ಲುತ್ತದೆ. ಜಮ್ಮು-ಕಾಶ್ಮೀರಕ್ಕೆ ತನ್ನದೇ ಆದ ಸಂವಿಧಾನವಿದ್ದು, ೧೭.೧೧.೧೯೫೬ರಂದು ಜಮ್ಮು-ಕಾಶ್ಮೀರದ ಅಸೆಂಬ್ಲಿಯಲ್ಲಿ ಈ ಸಂವಿಧಾನವು ಅಂಗೀಕೃತಗೊಂಡಿತು. ಈ ಸಂವಿಧಾನದ ಕೆಲವು ಬಹು ಮುಖ್ಯ ಅಂಶಗಳು ಹೀಗಿವೆ:

✳ ಜಮ್ಮು-ಕಾಶ್ಮೀರ ರಾಜ್ಯವು ಭಾರತದ ಅವಿಭಾಜ್ಯ ಅಂಗವಾಗಿದೆ ಹಾಗೂ ಅವಿಭಾಜ್ಯ ಅಂಗವಾಗಿರುತ್ತದೆ.

✳ ದಿನಾಂಕ ೧೫.೦೮.೧೯೪೭ (ಅಂದರೆ ಭಾರತಕ್ಕೆ ಸ್ವಾತಂತ್ರ್ಯ ಬಂದ ದಿನ) ರಂದು ಯಾವ ಯಾವ ಪ್ರಾಂತ್ಯಗಳು ಅಥವಾ ಪ್ರದೇಶಗಳು ಆಗಿನ ಜಮ್ಮು-ಕಾಶ್ಮೀರದ ಮಹಾರಾಜನ ಆಳ್ವಿಕೆಗೆ ಸೇರಲ್ಪಟ್ಟಿದ್ದವೋ ಅವೆಲ್ಲವೂ ಜಮ್ಮು-ಕಾಶ್ಮೀರ ರಾಜ್ಯಕ್ಕೆ ಸೇರಿದ ಪ್ರದೇಶಗಳಾಗಿರುತ್ತವೆ.

✳ ಜಮ್ಮು-ಕಾಶ್ಮೀರ ರಾಜ್ಯವು ತನ್ನ ಜನರ ಯೋಗಕ್ಷೇಮವನ್ನು ವೃದ್ಧಿಸುವ ನಿಟ್ಟಿನಲ್ಲಿ 'ಸಮಾಜವಾದಿ ವ್ಯವಸ್ಥೆ' ಯನ್ನು ಸ್ಥಾಪಿಸಬೇಕು.

✳ ಸಾರ್ವತ್ರಿಕ ವಲಯ, ಸಹಕಾರಿ ವಲಯ ಹಾಗೂ ಖಾಸಗಿ ವಲಯಗಳನ್ನು ಬೆಳೆಸುವ ನಿಟ್ಟಿನಲ್ಲಿ 'ಯೋಜನಾಬದ್ಧ'ವಾಗಿ ರಾಜ್ಯದ ಅರ್ಥವ್ಯವಸ್ಥೆಯನ್ನು ನಡೆಸಬೇಕಾಗಿದ್ದು, ಸರ್ವಜನರ ಹಿತಕ್ಕೆ ವಿರುದ್ಧವಾಗಿ ಕೆಲವೇ ಕೆಲವರ ಕೈಯಲ್ಲಿ ಸಂಪತ್ತು ಹಾಗೂ ಉತ್ಪಾದನಾ ವಿಧಾನಗಳು ಕೇಂದ್ರೀಕೃತ ಗೊಳ್ಳದಂತೆ ಎಚ್ಚರವಹಿಸಬೇಕಾಗಿದೆ.

✳ ಉದ್ಯೋಗದ ಹಕ್ಕು, ಮಹಿಳೆಯರಿಗೂ ಸಮಾನ ಹಕ್ಕು, ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದವರಿಗೆ ವಿಶೇಷ ಸುರಕ್ಷಣಾ ಹಕ್ಕು, ಮಕ್ಕಳ ಹಕ್ಕುಗಳ ಕುರಿತು ಸಂವಿಧಾನದ 'ಡೈರೆಕ್ಟಿವ್ ಪ್ರಿನ್ಸಿಪಲ್ಸ್'ನಲ್ಲಿ ಹೇಳಲಾಗಿದೆ.

✳ ✳ ✳

**ಜಮ್ಮು-ಕಾಶ್ಮೀರದ 'ಖಾಯಂ ನಿವಾಸಿ'ಗಳು ಎಂದರೆ ಯಾರು ?**

ಜಮ್ಮು-ಕಾಶ್ಮೀರದ ಸಂವಿಧಾನದಲ್ಲಿ ಪ್ರಸ್ತಾಪಿಸಲಾಗಿರುವ ಎಲ್ಲ ಹಕ್ಕುಗಳು ಅಲ್ಲಿಯ 'ಖಾಯಂ ನಿವಾಸಿ'ಗಳಿಗೆ ಮಾತ್ರ ಅನ್ವಯವಾಗುತ್ತವೆ. ಖಾಯಂ ನಿವಾಸಿಗಳಲ್ಲದವರು ಆಸ್ತಿ ಕೊಳ್ಳುವಂತಿಲ್ಲ ಹಾಗೂ ಯಾವುದೇ ರಾಜಕೀಯ ಹಕ್ಕುಗಳೂ ಇರುವುದಿಲ್ಲ. ಹಾಗಾದರೆ ಜಮ್ಮು-ಕಾಶ್ಮೀರದ 'ಖಾಯಂ ನಿವಾಸಿ' ಗಳೆಂದರೆ ಯಾರು ? ಇದರ ಕುರಿತು ವ್ಯಾಖ್ಯೆಯನ್ನು ಜಮ್ಮು-ಕಾಶ್ಮೀರದ ಸಂವಿಧಾನದ ೩ನೇ ಭಾಗದಲ್ಲಿ ಹೇಳಲಾಗಿದೆ. ಜಮ್ಮು-ಕಾಶ್ಮೀರದ 'ಖಾಯಂ ನಿವಾಸಿ'ಗಳೆಂದರೆ, ಅಂಥವರು :

೧) ಭಾರತದ ಪ್ರಜೆಯಾಗಿರಬೇಕು ಅಥವಾ ಭಾರತದ ಪ್ರಜೆಯೆಂದು ಕೇಂದ್ರ ಸರ್ಕಾರ ಒಪ್ಪಿಕೊಂಡಿರಬೇಕು

೨) ೧೪.೦೫.೧೯೫೪ನೇ ದಿನಕ್ಕೆ ಸಂಬಂಧಿಸಿದಂತೆ: (ಅ) ಕ್ಲಾಸ್ ೧ ಅಥವಾ ಕ್ಲಾಸ್ ೨ರ ಪ್ರಕಾರ 'ರಾಜ್ಯದ ಪ್ರಜೆ'ಯಾಗಿರಬೇಕು.

(ಆ) ನ್ಯಾಯಯುತವಾಗಿ ಆಸ್ತಿಯನ್ನು ಹೊಂದಿದವರಾಗಿದ್ದು, ೧೪.೦೫.೧೯೫೪ರಂದು ಕನಿಷ್ಠ ಹತ್ತು ವರ್ಷಗಳ ಕಾಲ ಸಾಮಾನ್ಯ ಪ್ರಜೆಯಾಗಿ ವಾಸವಿರಬೇಕು.

(ಇ) ದಿನಾಂಕ ೧೪.೦೫.೧೯೫೪ನೇ ದಿನಕ್ಕೆ ಸಂಬಂಧಿಸಿದಂತೆ ಕ್ಲಾಸ್ ೧ ಅಥವಾ ಕ್ಲಾಸ್ ೨ರ ಪ್ರಕಾರ 'ರಾಜ್ಯದ ಪ್ರಜೆ'ಯಾಗಿದ್ದು, ನಂತರ ಈಗಿನ ಪಾಕಿಸ್ತಾನಕ್ಕೆ ಸೇರಿರುವ ಪ್ರದೇಶದಲ್ಲಿ ವಾಸಿಸುತ್ತಿದ್ದು ಅಂತಹವರು ರಾಜ್ಯಕ್ಕೆ ಹಿಂದಿರುಗಿ ಬರುವ ಆಸಕ್ತಿ ತೋರಿ ಅವರಿಗೆ ರಾಜ್ಯದಲ್ಲಿ ಬಂದು ವಾಸಿಸಲು 'ಪರವಾನಗಿ' ದೊರೆತವರು.

ಇಲ್ಲಿ ಉಲ್ಲೇಖಿತವಾಗಿರುವ 'ರಾಜ್ಯದ ಪ್ರಜೆ' ಎಂದರೆ ಯಾರು ಎಂದು ತಿಳಿಯಬೇಕಾದಲ್ಲಿ ೨೦.೦೪.೧೯೨೭ರಲ್ಲಿ ಆಗಿನ ಮಹಾರಾಜ ಗುಲಾಬ್ ಸಿಂಗನು ಹೊರಡಿಸಿದ್ದ ನೋಟಿಫಿಕೇಷನ್ನನ್ನು ನೋಡಬೇಕಾಗುತ್ತದೆ. ಆ ನೋಟಿಫಿಕೇಷನ್ನಿನಲ್ಲಿ ೪ ವಿಧದ 'ರಾಜ್ಯದ ಪ್ರಜೆ'ಗಳನ್ನು ಉಲ್ಲೇಖಿಸಲಾಗಿದೆ.

೧) ಕ್ಲಾಸ್ ೧: ಮಹಾರಾಜಾ ಗುಲಾಬ್ ಸಿಂಗ್ ಅವರ ಆಳ್ವಿಕೆ ಆರಂಭವಾಗುವ ಮೊದಲು ರಾಜ್ಯದಲ್ಲಿ ಹುಟ್ಟಿ, ಅಲ್ಲಿ ವಾಸಿಸುತ್ತಿರುವ ಎಲ್ಲ ವ್ಯಕ್ತಿಗಳು ಹಾಗೂ 'ಸಂವತ್ ವರ್ಷ ೧೯೪೨' ಆರಂಭವಾಗುವ ಮುನ್ನ ನೆಲೆಸಿದವರು.

೨) ಕ್ಲಾಸ್ ೨: 'ಸಂವತ್ ವರ್ಷ ೧೯೬೮' ಮುಗಿಯುವ ಮುನ್ನ ಬಂದು ನೆಲೆಸಿರಬೇಕು ಹಾಗೂ ಕ್ಲಾಸ್ ೧ಕ್ಕೆ ಸೇರಿರಕೂಡದು.

೩) ಕ್ಲಾಸ್ ೩: ಕ್ಲಾಸ್ ೧ ಅಥವಾ ಕ್ಲಾಸ್ ೨ಕ್ಕೆ ಸೇರಿರಕೂಡದು ಮತ್ತು 'ರಯತ್‌ನಾಮಾ'ದ ಅಡಿಯಲ್ಲಿ ಸ್ಥಿರ ಆಸ್ತಿಯನ್ನು ಹೊಂದಿದವ ರಾಗಿರಬೇಕು ಅಥವಾ 'ಇಜ಼ಾಜ಼ತ್‌ನಾಮಾ'ದ ಅಡಿಯಲ್ಲಿ ಆಸ್ತಿಯನ್ನು ಪಡೆವವರಾಗಿದ್ದು, ೧೦ ವರ್ಷಗಳ ನಂತರ 'ರಯತ್‌ನಾಮಾ'ದ ಅಡಿಯಲ್ಲಿ ನೋಂದಣಿ ಆಗಬಲ್ಲವರಾಗಿರಬೇಕು.

೪) ಕ್ಲಾಸ್ ೪: ಕಾಶ್ಮೀರದಲ್ಲಿ ನೋಂದಣಿಗೊಂಡ 'ಕಂಪೆನಿ'ಗಳು.

ಇವೆಲ್ಲವುಗಳ ಒಟ್ಟು ಸಾರಾಂಶವೆಂದರೆ ೧೪.೦೫.೧೯೫೪ರ ನಂತರ ಕಾಶ್ಮೀರದಲ್ಲಿ ಬಂದು ನೆಲೆಸಿದವರು ಅಲ್ಲಿಯ 'ಖಾಯಂ ನಿವಾಸಿ'ಗಳಲ್ಲ. ಅಂತಹವರಿಗೆ ಆಸ್ತಿ ಹಕ್ಕಾಗಲೀ, ಸ್ಕಾಲರ್‌ಶಿಪ್‌ಗಳಾಗಲೀ, ಮತದಾನದ ಹಕ್ಕಾಗಲೀ ಇರುವುದಿಲ್ಲ.

ಆದರೆ ಇಲ್ಲಿ ಒಂದು ತಾರತಮ್ಯದ ಅಂಶವನ್ನು ಕಾಣಬಹುದು. ರಾಜ್ಯ ಸರ್ಕಾರದ ಉದ್ಯೋಗ ನೇಮಕಾತಿಗಳಲ್ಲಿ, ಸ್ಕಾಲರ್‌ಶಿಪ್‌ಅನ್ನು ನೀಡುವ ಸಂದರ್ಭಗಳಲ್ಲಿ, ಮನೆಗಳನ್ನು ಕಟ್ಟಿಸಿಕೊಡುವ ಸಂದರ್ಭಗಳಲ್ಲಿ ಹಾಗೂ ಕೃಷಿಗಾಗಿ ಭೂಮಿಯನ್ನು ಹಂಚುವ ಸಮಯದಲ್ಲಿ ಕ್ಲಾಸ್ ೧ರ ಗುಂಪಿಗೆ ಪ್ರಥಮ ಆದ್ಯತೆ ಇರುತ್ತದೆ. ಒಬ್ಬ ವ್ಯಕ್ತಿ ಕ್ಲಾಸ್ ೨ರ ಗುಂಪಿಗೆ ಸೇರಿದ್ದಲ್ಲಿ ಆ ವ್ಯಕ್ತಿಯ ಪತಿ/ಪತ್ನಿ, ಮಕ್ಕಳು ಮತ್ತು ಮೊಮ್ಮಕ್ಕಳು ಎಲ್ಲರೂ ಕ್ಲಾಸ್ ೨ಕ್ಕೇ ಸೇರಿದವರಾಗಿರುತ್ತಾರೆ. ತನ್ನ ಪ್ರಜೆಗಳಲ್ಲೇ 'ರಾಜ್ಯ ಪ್ರಜೆಗಳು' ಹಾಗೂ 'ರಾಜ್ಯ-ಪ್ರಜೆಗಳಲ್ಲದವರು' ಎಂದು ವಿಭಾಗಿಸಿ, ಅವರುಗಳಲ್ಲಿ ಈಗಲೂ ತರತಮವನ್ನು ಮುಂದುವರಿಸಿಕೊಂಡು ಹೋಗುತ್ತಿ ರುವುದು 'ಸಾಮಾಜಿಕ ನ್ಯಾಯ' ಪರಿಕಲ್ಪನೆಯ ವಿರುದ್ಧವಾಗಿರುವ ವಿದ್ಯಮಾನ.

**ಕಾಶ್ಮೀರದ ಪಂಡಿತರ ಕುರಿತು**

ಸರಸ್ವತಿ ನದಿ ತೀರದಲ್ಲಿ ವಾಸಿಸುತ್ತಿದ್ದ ಆರ್ಯರ ಗುಂಪೊಂದು ನಂತರದಲ್ಲಿ ಕಾಶ್ಮೀರಕ್ಕೆ ಬಂದು ನೆಲೆಸಿದ್ದನ್ನು ಕಾಣುತ್ತೇವೆ. ಇವರನ್ನು 'ಕಾಶ್ಮೀರಿ ಪಂಡಿತರು' ಎಂದೂ 'ಸಾರಸ್ವತ ಬ್ರಾಹ್ಮಣರು' ಎಂದೂ ಕರೆಯುತ್ತಾರೆ. ಇವರು ಭಾರತದಲ್ಲಿ 'ಶೈವ ಪಂಥ'ವನ್ನು ಅತ್ಯಂತ ಪ್ರಭಾವಶಾಲಿಯಾಗಿ ಬೆಳೆಸಿದವರು. ಇವರು 'ಮಾಂಸಾಹಾರಿ ಬ್ರಾಹ್ಮಣರು'!! 'ಅತ್ಯಂತ ಅಮಾನವೀಯ ಕೋಮುವಾದ'ಕ್ಕೆ ಬಲಿಯಾದವರ ಗುಂಪಿಗೆ 'ಕಾಶ್ಮೀರಿ ಪಂಡಿತರೂ' ಸಹ ಸೇರುತ್ತಾರೆ. ೧೯೮೦ರಲ್ಲಿ ಕಾಶ್ಮೀರದ ಜನಸಂಖ್ಯೆಯ ಶೇಕಡ ೭ರಷ್ಟಿದ್ದ ಅವರ ಸಂಖ್ಯೆ ಈಗ ಕಾಶ್ಮೀರದಲ್ಲಿ ಕೇವಲ ಸುಮಾರು ೩೦೦೦ಕ್ಕೆ ಇಳಿದಿದೆ. ೧೯೮೦ರ ನಂತರ ಇವರುಗಳ ಮೇಲೆ ವ್ಯವಸ್ಥಿತವಾಗಿ ಅನ್ಯಾಯ, ಕಿರುಕುಳ, ದಬ್ಬಾಳಿಕೆಗಳು ಆರಂಭಗೊಂಡವು. ೧೯೮೭ರಲ್ಲಿ ಸ್ಫೋಟಗೊಂಡ ದಂಗೆ ಹಾಗೂ ತೀವ್ರ ಮುಸ್ಲಿಂ ಕೋಮುವಾದಿ ಬೆಳವಣಿಗೆಗಳಿಂದ ಬೆದರಿದ ಸಾವಿರಾರು ಪಂಡಿತರು ಕಾಶ್ಮೀರದಿಂದ ವಲಸೆ ಹೋಗಲಾರಂಭಿಸಿದರು. ವಾತಾವರಣ ತಿಳಿಗೊಂಡ ನಂತರ ಪುನಃ ವಾಪಸ್ಸು ಬರುವ ಆಸೆಯನ್ನಿಟ್ಟುಕೊಂಡು ಹೊರನಡೆದ ಈ ಜನರು ಇನ್ನೂ ತಮ್ಮ ತಾಯ್ನಾಡಿಗೆ ಹಿಂದಿರುಗಲಾಗಿಲ್ಲ.

ಕೇಂದ್ರ ಸರ್ಕಾರವು ಅನೇಕ ಸವಲತ್ತುಗಳನ್ನು ಘೋಷಿಸಿದ್ದರೂ 'ಪಂಡಿತರು' ತಮ್ಮ ತಾಯ್ನಾಡಿಗೆ ಮರಳಲು ಒಪ್ಪುತ್ತಿಲ್ಲ. ಇದಕ್ಕೆ ಪ್ರಮುಖ ಕಾರಣ ಗಳನ್ನು ಈ ರೀತಿಯಾಗಿ ಪಟ್ಟಿ ಮಾಡಬಹುದು :

೧) ಕಾಶ್ಮೀರದಲ್ಲಿ ಮುಂದುವರಿಯುತ್ತಿರುವ ಅಶಾಂತಿಯುತ ವಾತಾವರಣ ಹಾಗೂ ಮತ್ತೊಮ್ಮೆ ಮುಸ್ಲಿಂ ಉಗ್ರಗಾಮಿಗಳ ಕೆಂಗಣ್ಣಿಗೆ ಬಲಿಯಾಗುವ ಭೀತಿ.

೨) ಕಾಶ್ಮೀರದಲ್ಲಿ ಉದ್ಯೋಗಾವಕಾಶಗಳಿಗೆ ಕೊರತೆ ಇರುವುದು.

೩) ಕಾಶ್ಮೀರಿ ಪಂಡಿತರ ಆಸ್ತಿ-ಪಾಸ್ತಿಗಳನ್ನು ಬೇರೆ ಯವರು ಆಕ್ರಮಿಸಿಕೊಂಡಿದ್ದು ಈಗ ಅದನ್ನು ವಾಪಸ್ಸು ಪಡೆಯುವುದು ಕಷ್ಟಕರವೆಂಬ ಭಾವನೆ.

೪) ಕಾಶ್ಮೀರಿ ಪಂಡಿತರ 'ಯುವಪೀಳಿಗೆಯು' ಕಾಶ್ಮೀರದ ಹೊರಗೇ ಹುಟ್ಟಿ ಬೆಳೆದಿರುವುದರ ಕಾರಣ ಅವರಿಗೆ ಕಾಶ್ಮೀರದ ಬಗ್ಗೆ ಅಂತಹ 'ಮಮತೆ ಅಥವಾ ಆಕರ್ಷಣೆ' ಇಲ್ಲದಿರುವುದು.

**ಕಾಶ್ಮೀರದ ಕುರಿತು ಕೆಲವು ಆರ್ಥಿಕ ಮಾಹಿತಿಗಳು**

ಕಾಶ್ಮೀರದ ಬಹು ದೊಡ್ಡ ಮಿತಿಯೆಂದರೆ ದೇಶದ ಪ್ರಮುಖ ಮಾರುಕಟ್ಟೆಗಳಿಂದ ಬಹಳ ದೂರದಲ್ಲಿರುವುದು, ವಿರಳವಾಗಿ ಹರಡಿರುವ ಜನಸಂಖ್ಯೆ, ಆರ್ಥಿಕ ಮೂಲಭೂತ ಸೌಕರ್ಯದ ಕೊರತೆ ಹಾಗೂ ಸುಮಾರು ಎರಡು ದಶಕ ಗಳಿಂದ ಅಸ್ತವ್ಯಸ್ತಗೊಂಡಿರುವ ಪೌರ ಜೀವನ. ಕಾಶ್ಮೀರದ 'ಆಂತರಿಕ ಮಾರುಕಟ್ಟೆ'ಯೂ ಸಹ ವಿಸ್ತಾರಗೊಳ್ಳದೆ ಇರುವುದರಿಂದ ಅಲ್ಲಿ ಉತ್ಪಾದನಾ ಚಟುವಟಿಕೆಗಳೂ ಸಹ ಅಷ್ಟಾಗಿ ವೈವಿಧ್ಯಮಯವಾಗಿಲ್ಲ.

ಇಷ್ಟೆಲ್ಲ ಇತಿಮಿತಿಗಳಿದ್ದರೂ ಸಹ ಜಮ್ಮು-ಕಾಶ್ಮೀರ ರಾಜ್ಯವು ಆರೋಗ್ಯ, ಪುಷ್ಪೋದ್ಯಮ, ಅರಣ್ಯ ಸಂರಕ್ಷಣೆ ಹಾಗೂ ಬಡತನವನ್ನು ಕಡಿಮೆಗೊಳಿಸುವ ಕ್ಷೇತ್ರಗಳಲ್ಲಿ 'ರಾಜ್ಯಗಳಿಗೆ ನೀಡುವ ಪ್ರಶಸ್ತಿಗಳನ್ನು ತನ್ನದಾಗಿಸಿಕೊಂಡಿದೆ. ಓಮರ್ ಅಬ್ದುಲ್ಲಾರವರ ದಕ್ಷ ಆಡಳಿತಕ್ಕೆ ಲಭಿಸಿರುವ ಕೀರ್ತಿ ಹಾಗೂ ಗುರ್ತಿಸುವಿಕೆ ಇದಾಗಿದೆ. ಮೂಲಭೂತ ಸೌಕರ್ಯಗಳನ್ನು ವೃದ್ಧಿಸುವಲ್ಲಿ, ಕೆಲಸಗಳಲ್ಲಿ ಪಾರದರ್ಶಕತೆಯನ್ನು ತರುವಲ್ಲಿ, ಸರ್ಕಾರಿ ಸೇವೆಗಳು ಬಹಳ ತ್ವರಿತಗತಿಯಲ್ಲಿ ಸಿಗುವ ಹಾಗೆ ಮಾಡುವಲ್ಲಿ ಕಳೆದ ನಾಲ್ಕು ವರ್ಷಗಳಲ್ಲಿ ಬಹಳಷ್ಟು ಮುನ್ನಡೆಯನ್ನು ಜಮ್ಮು-ಕಾಶ್ಮೀರ ಸರ್ಕಾರ ಸಾಧಿಸಿದೆ.

**ಈ ಕೆಲವು ಅಂಕಿ-ಅಂಶಗಳು ಜಮ್ಮು-ಕಾಶ್ಮೀರ ರಾಜ್ಯವು ಅಭಿವೃದ್ಧಿಯತ್ತ ದಾಪುಗಾಲನ್ನು ಹಾಕುತ್ತಿರುವುದಕ್ಕೆ ಸಾಕ್ಷಿಯಾಗಿವೆ.**

| | |
|---|---|
| ಒಟ್ಟು ಜನಸಂಖ್ಯೆ (೨೦೧೧ರ ಜನಗಣತಿ) | ೧.೨೫ ಕೋಟಿ |
| ಸಾಕ್ಷರತಾ ದರ (೨೦೧೧ರ ಜನಗಣತಿ) | ೬೮.೭೪% |
| ಹೆಣ್ಣು-ಗಂಡು ಅನುಪಾತ (೨೦೧೧ರ ಜನಗಣತಿ) | ೮೮೪ (ಪ್ರತಿ ಸಾವಿರ ಗಂಡಿಗೆ) |
| ಪ್ರಮುಖ ಉದ್ಯಮಗಳು | ಪ್ರವಾಸ, ಹ್ಯಾಂಡಿಕ್ರಾಫ್ಟ್ಸ್, ರೇಷ್ಮೆ, ಕೈಮಗ್ಗ, ಪುಷ್ಪೋದ್ಯಮ, ಕೃಷಿ ಮತ್ತು ಆಹಾರ ಸಂಸ್ಕರಣೆ |
| ಪ್ರಾಥಮಿಕ ಆರೋಗ್ಯ ಸೌಲಭ್ಯದಲ್ಲಿ | ದೇಶದಲ್ಲೇ ೧ನೇ ರ್‍ಯಾಂಕ್ |
| ಕೃಷಿಯಲ್ಲಿ | ದೇಶದಲ್ಲೇ ೧೧ನೇ ರ್‍ಯಾಂಕ್ |
| ಹೂಡಿಕೆಗೆ ಅನುಕೂಲಕರ ವಾತಾವರಣದಲ್ಲಿ | ದೇಶದಲ್ಲೇ ೪ನೇ ರ್‍ಯಾಂಕ್ |
| ಕಾರ್ಮಿಕ ಕಾನೂನುಗಳ ಅನುಷ್ಠಾನದಲ್ಲಿ | ದೇಶದಲ್ಲೇ ೪ನೇ ರ್‍ಯಾಂಕ್ |
| ಮ್ಯಾಕ್ರೋ ಆರ್ಥಿಕತೆಯಲ್ಲಿ | ದೇಶದಲ್ಲೇ ೩ನೇ ರ್‍ಯಾಂಕ್ |
| ಪ್ರಾಥಮಿಕ ವಿದ್ಯಾಭ್ಯಾಸದಲ್ಲಿ | ದೇಶದಲ್ಲೇ ೪ನೇ ರ್‍ಯಾಂಕ್ |
| ಮೂಲಭೂತ ಸೌಕರ್ಯದಲ್ಲಿ | ದೇಶದಲ್ಲೇ ೧೧ನೇ ರ್‍ಯಾಂಕ್ |
| ಗ್ರಾಹಕ ಮಾರುಕಟ್ಟೆ | ದೇಶದಲ್ಲೇ ೭ನೇ ರ್‍ಯಾಂಕ್ |
| ಪ್ರಪಂಚದ 'ವಾಲ್ ನಟ್' ಉತ್ಪಾದನೆಯಲ್ಲಿ | ವಿಶ್ವದಲ್ಲೇ ೭ನೇ ಸ್ಥಾನ |
| ತಲಾ ಆದಾಯ (೨೪,೨೧೪/- ರೂಪಾಯಿ) | ದೇಶದಲ್ಲೇ ೨೧ನೇ ರ್‍ಯಾಂಕ್ |
| ಬಡತನದ ರೇಖೆಯ ಕೆಳಗಡೆ ಇರುವ ಜನಸಂಖ್ಯೆ | ಶೇಕಡ ೨೧% |
| ನಿರುದ್ಯೋಗ ದರ | ಶೇಕಡ ೫.೨೫% |
| ಶಿಶು ಮರಣ ಪ್ರಮಾಣ ದರ | ೧೦೦೦ ಮಕ್ಕಳಲ್ಲಿ ಕೇವಲ ೫೦ (ಇದು ಅಖಿಲ ಭಾರತ ಮಟ್ಟಕ್ಕಿಂತ ಬಹಳ ಕಮ್ಮಿ) |

* * *

**ಕೇಂದ್ರ ಸರ್ಕಾರದ 'ತಪ್ಪು ನೀತಿ'ಗಳು**

ಕೇಂದ್ರ ಸರ್ಕಾರವು ತನ್ನ ಅನೇಕ ತಪ್ಪು ನಡೆಗಳಿಂದ 'ಕಾಶ್ಮೀರದ ಜನರ' ವಿಶ್ವಾಸಾರ್ಹತೆಯನ್ನು ಕಳೆದುಕೊಂಡಿದೆ. ಜಮ್ಮು-ಕಾಶ್ಮೀರ ರಾಜ್ಯಕ್ಕೆ ಸಂವಿಧಾನದ ೩೭೦ನೇ ಕಲಂನ ಪ್ರಕಾರ 'ವಿಶೇಷ ಸ್ವಾಯತ್ತೆ'ಯನ್ನು ನೀಡಿದ್ದರೂ ಸಹ ಈ ಸ್ವಾಯತ್ತೆಯ ಉದ್ದೇಶ ಹಾಗೂ ಭಾವನೆಗಳನ್ನು ಮೊಟಕು ಮಾಡುವಂತಹ ಅನೇಕ ತಿದ್ದುಪಡಿಗಳನ್ನು ಕೇಂದ್ರ ಸರ್ಕಾರವು ತಂದಿರುವುದು (ಬಹು ಮುಖ್ಯವಾಗಿ ಕಾಂಗ್ರೆಸ್ ಸರ್ಕಾರ) ಇಲ್ಲಿಯ ಜನತೆ ಕೇಂದ್ರ ಸರ್ಕಾರವನ್ನು ಅನುಮಾನದಿಂದ ನೋಡುವ ಹಾಗೇ ಮಾಡಿವೆ. ಅಲ್ಲದೆ ಭಾರತೀಯ ಸೈನ್ಯದಿಂದ ಕಾಶ್ಮೀರದಲ್ಲಿ ಆಗುತ್ತಿರುವ ದಬ್ಬಾಳಿಕೆ, ಕ್ರೌರ್ಯ, ಮಾನವ ಹಕ್ಕುಗಳ ಉಲ್ಲಂಘನೆಗಳೂ ಕೂಡ ಉರಿವ ಬೆಂಕಿಗೆ ತುಪ್ಪ ಸುರಿಯುವಂತಾಗಿದೆ. ಇದರ ಮಧ್ಯೆ ನೆರೆಯ ಪಾಕಿಸ್ತಾನದಿಂದ ತರಬೇತುಗೊಂಡು ಬರುತ್ತಿರುವ 'ತಲೆತಿರುಕರ' ಹಾವಳಿಗಳು - ಇವೆಲ್ಲ ಕಾಶ್ಮೀರವನ್ನು ಒಂದು ದಿನನಿತ್ಯ ಕುದಿಯುತ್ತಿರುವ ಅಗ್ನಿಪರ್ವತವನ್ನಾಗಿಸಿವೆ. ಬಹಳ ಎಚ್ಚರಿಕೆಯ ನಡೆಗಳ ಮೂಲಕ, ಸುಧಾರಣಾವಾದಿ ಅಭಿವೃದ್ಧಿ-ಪೂರಕ ಕಾರ್ಯಕ್ರಮಗಳ ಮೂಲಕ ಹಾಗೂ ಕೆಲವು ವಿಷಯಗಳಲ್ಲಿ ಅತ್ಯಂತ ಕಠಿಣ ನಿಲುಮೆಗಳನ್ನು ತೆಗೆದುಕೊಳ್ಳುವ ಮೂಲಕ ಕಾಶ್ಮೀರವನ್ನು ತಂಪಾಗಿಸಬೇಕಾಗಿದೆ. ಒಂದು ಹೊಸ ರೀತಿಯ ಜನಪರ ಚಳುವಳಿಯನ್ನು ಇಲ್ಲಿ ಆರಂಭಿಸಬೇಕಾಗಿದ್ದು, ಇದರ ಕುರಿತು ಬಹಳ ಗಂಭೀರವಾಗಿ ಆಲೋಚಿಸಬೇಕಾಗಿದೆ.

ಎಮ್. ಸಿ. ಡೋಂಗ್ರೆ
ಆಶೀರ್ವಾದ, ೩ನೇ ತಿರುವು, ಎರಡನೇ ಮುಖ್ಯರಸ್ತೆ, ಆದರ್ಶನಗರ, ಹಾಸನ - ೫೭೩ ೨೦೧




# ಸಾಧನೆಗಳ ಮಹಾಪೂರ



ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು



ಡಾ॥ ಹೆಚ್.ಸಿ. ಮಹದೇವಪ್ಪ
ಮಾನ್ಯ ಲೋಕೋಪಯೋಗಿ ಸಚಿವರು

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಯನ್ನು ರಾಜ್ಯ ಸರ್ಕಾರದ ಒಡೆತನದ ಸಾರ್ವಜನಿಕ ಕಂಪನಿಯಾಗಿ ಲೋಕೋಪಯೋಗಿ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ದಿನಾಂಕ : 21-07-1999ರಂದು ಸ್ಥಾಪಿಸಲಾಗಿದೆ. ನಿಗಮದ ಸಾಧನೆಗಳು ಕೆಳಗಿನಂತಿವೆ.

1. ರಾಜ್ಯದ ವಿವಿಧ ಭಾಗಗಳಲ್ಲಿ ಒಟ್ಟು 884 ಕಿ.ಮೀ. ಉದ್ದದ 31 ರಸ್ತೆ ಯೋಜನೆಗಳನ್ನು ರೂ. 1311 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ ಆಧಾರದಲ್ಲಿ ಅಭಿವೃದ್ಧಿಪಡಿಸಲಾಗಿದೆ.
2. 131 ಕಿ. ಮೀ. ಉದ್ದದ ಮೂರು ರಸ್ತೆ ಅಭಿವೃದ್ಧಿ ಯೋಜನೆಗಳನ್ನು ಪಿ.ಪಿ.ಪಿ – ವರ್ಷಾಸನ ಆಧಾರದಲ್ಲಿ ಕೈಗೊಂಡು ಪೂರ್ಣಗೊಳಿಸಲಾಗಿದೆ.
3. 202 ಕಿ. ಮೀ ಉದ್ದದ ಎರಡು ರಸ್ತೆ ಯೋಜನೆಗಳನ್ನು ಒಟ್ಟಾರೆ ಯೋಜನಾ ಮೊತ್ತ ರೂ. 481 ಕೋಟಿಗಳಲ್ಲಿ ಪಿ.ಪಿ.ಪಿ. – ವಿ.ಜಿ.ಎಫ್. (ಟೋಲ್) ಆಧಾರದಲ್ಲಿ ಅಭಿವೃದ್ಧಿಪಡಿಸಲಾಗಿದೆ.
4. 2001-04 ಮೊದಲನೇ ಹಂತದಲ್ಲಿ 7327 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ. 225 ಕೋಟಿಗಳ ಮೊತ್ತದಲ್ಲಿ ಮತ್ತು 2005-08ರ ಎರಡನೇ ಹಂತದಲ್ಲಿ 14500 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ.503 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ.
5. ಒಟ್ಟು 642 ಸೇತುವೆಗಳನ್ನು ಹಂತವಾರು ನಿರ್ಮಾಣ ಯೋಜನೆ ಅಡಿಯಲ್ಲಿ ರೂ. 620 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ. ಇದಲ್ಲದೆ 11 ಬೃಹತ್ ಸೇತುವೆಗಳನ್ನು ರೂ. 162 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ.
6. ಒಟ್ಟು 278 ಕಿ. ಮೀ. ಉದ್ದದ 7 ರಸ್ತೆ ಯೋಜನೆಗಳನ್ನು ರೂ. 732 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ. ಆಧಾರದಲ್ಲಿ ಕೈಗೊಂಡಿದ್ದು , ಕಾಮಗಾರಿಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿವೆ.
7. ಒಟ್ಟು 14 ಬೃಹತ್ ಸೇತುವೆಗಳನ್ನು ರೂ. 239 ಕೋಟಿಗಳ ಅಂದಾಜು ಮೊತ್ತದಲ್ಲಿ ಕೈಗೊಳ್ಳಲಾಗಿದ್ದು , ಕಾಮಗಾರಿಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿವೆ.

**ಉದ್ದೇಶಿತ ಯೋಜನೆಗಳು:**

8. ಒಟು 696.93 ಕಿ.ಮೀ. ಉದ್ದದ ರೂ. 2107.39 ಕೋಟಿಗಳ ಒಟ್ಟಾರೆ ಯೋಜನಾ ಮೊತ್ತದ 8 ಯೋಜನೆಗಳನ್ನು ಪಿ.ಪಿ.ಪಿ.–ವಿ.ಜಿ.ಎ.ಫ್.–ಡಿ.ಬಿ.ಎಫ್.ಓ.ಟಿ ಆಧಾರದಲ್ಲಿ ಕೈಗೊಳ್ಳಲು ಯೋಜಿಸಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ.
9. 81.40 ಕಿ.ಮೀ. ಉದ್ದದ 7 ರಸ್ತೆ ಯೋಜನೆಗಳನ್ನು ಡಿ.ಬಿ.ಎಫ್.ಓ.ಟಿ. (ಅನ್ಯುಟಿ) ಮಾದರಿಯಲ್ಲಿ ವಿಶ್ವ ಬ್ಯಾಂಕ್ ನೆರವಿನೊಂದಿಗೆ ಕೈಗೆತ್ತಿಕೊಳ್ಳಲು ಯೋಜಿಸಿ ರಿಯಾಯಿತಿದಾರರ ಪೂರ್ವಾರ್ಹತೆ ಪ್ರಕ್ರಿಯೆ ಪ್ರಗತಿಯಲ್ಲಿದೆ.
10. ಭಾಗಶ: ಕೋರ್ ರೋಡ್ ನೆಟ್‌ವರ್ಕ್ ಅಭಿವೃದ್ಧಿಯನ್ನು ಹುಡ್ಕೋ ನೆರವಿನೊಂದಿಗೆ ಕೈಗೊಳ್ಳಲು ಯೋಜಿಸಿದೆ.
11. ಕರ್ನಾಟಕ ರಾಜ್ಯಾದ್ಯಂತ ಅತ್ಯಂತ ಅವಶ್ಯವಿರುವ ಒಟ್ಟು 201 ಸೇತುವೆಗಳನ್ನು ಒಟ್ಟು ಅಂದಾಜು ಮೊತ್ತ ರೂ. 1235.77 ಕೋಟಿಗಳ ಮೊತ್ತದಲ್ಲಿ ನಬಾರ್ಡ್ ನೆರವಿನೊಂದಿಗೆ ಕೈಗೊಳ್ಳಲು ಯೋಜಿಸಿದೆ.



**ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ**

**ಉತ್ತಮ ರಸ್ತೆಗಳು ಅಭಿವೃದ್ಧಿಗೆ ಮುನ್ನುಡಿ**



# ಯಾರು, ಏಕೆ ಅತ್ಯಾಚಾರ ಮಾಡುತ್ತಾರೆ?

**ಹ**ಸಿವು, ನೀರಡಿಕೆ, ನಿದ್ರೆಯಂತೆ ಲೈಂಗಿಕ ಕ್ರಿಯೆ-ಕಾಮ ಮನುಷ್ಯನ ಪ್ರಾಥಮಿಕ ಅಗತ್ಯ. ಸಂತಾನೋತ್ಪತ್ತಿಯ ಮೂಲ ಉದ್ದೇಶವಿದ್ದರೂ ಕಾಮವು ಸುಖ ಮತ್ತು ಮನರಂಜನೆಯನ್ನು ನೀಡುತ್ತದೆ. ಲೈಂಗಿಕ ಸುಖಾನುಭವಕ್ಕಾಗಿ ಹಾತೊರೆಯದ ವ್ಯಕ್ತಿ ಇಲ್ಲ. ಹರೆಯಕ್ಕೆ ಕಾಲಿಡುತ್ತಿದ್ದಂತೆ, ಹುಡುಗನಲ್ಲಿ ಟೆಸ್ಟೋಸ್ಟೀರಾನ್ ಹಾರ್ಮೋನು ಹೆಚ್ಚು ಉತ್ಪತ್ತಿಯಾಗಿ, ಅವನಲ್ಲಿ ಪುರುಷ ಲಕ್ಷಣಗಳು, ಲೈಂಗಿಕ ಆಸೆ, ಬಯಕೆಗಳು ಮೂಡುತ್ತವೆ. ಹುಡುಗಿಯಲ್ಲಿ ಈಸ್ಟ್ರೋಜನ್ ಮತ್ತು ಪ್ರೊಜೆಸ್ಟೆರಾನ್ ಹಾರ್ಮೋನುಗಳು ಉತ್ಪತ್ತಿಯಾಗಿ ಆಕೆ ಋತುಮತಿಯಾಗುತ್ತಾಳೆ. ಋತುಚಕ್ರ ಶುರುವಾಗುತ್ತದೆ. ದೇಹದಲ್ಲಿ ಸ್ತ್ರೀತನದ ಲಕ್ಷಣಗಳು ಮತ್ತು ಲೈಂಗಿಕ ಆಸೆಗಳು ಕಾಣಿಸಿಕೊಳ್ಳುತ್ತವೆ. ಸ್ತ್ರೀಗಿಂತ ಪುರುಷನಿಗೆ ಕಾಮಾಸಕ್ತಿ ಹೆಚ್ಚು. ಅಧಿಕ ಟೆಸ್ಟೋಸ್ಟೀರಾನ್ ಹಾರ್ಮೋನೇ ಇದಕ್ಕೆ ಕಾರಣ. ದಿನದ ೨೪ ಗಂಟೆ, ವರ್ಷದ ೩೬೫ ದಿನಗಳು... ಹೀಗೆ ಯಾವಾಗ ಬೇಕಾದರೂ ಅವನಲ್ಲಿ ಲೈಂಗಿಕ ಆಸೆ ಹುಟ್ಟಬಹುದು. ಆಂತರಿಕ ಪ್ರಚೋದನೆ (ಕಲ್ಪನೆ) ಅಥವಾ ಬಾಹ್ಯ ಪ್ರಚೋದನೆಯಿಂದ (ಸುಂದರ ಸ್ತ್ರೀ. ಲೈಂಗಿಕ ಪ್ರಚೋದಕ ಚಿತ್ರಗಳು, ಮಾತು, ಸಾಹಿತ್ಯ ಸನ್ನಿವೇಶಗಳು) ಲೈಂಗಿಕ ಉದ್ರೇಕ ಉಂಟಾಗುತ್ತದೆ. ಮಿದುಳಿನ ಲಿಂಬಿಕ್ ವ್ಯವಸ್ಥೆ ಹಸಿವು, ನೀರಡಿಕೆಯನ್ನು ಉಂಟುಮಾಡುವಂತೆ ಲೈಂಗಿಕ ಆಸೆ-ಬಯಕೆಗಳನ್ನೂ ಸೃಷ್ಟಿಸುತ್ತದೆ. ಕಣ್ಣುಗಳು ಲೈಂಗಿಕ ಚಿತ್ರವನ್ನು ನೋಡುತ್ತಿದ್ದಂತೆ, ಸುಂದರ ಸ್ತ್ರೀಯನ್ನು ಕಾಣುತ್ತಿದ್ದಂತೆ, ಕಿವಿಗಳು ಲೈಂಗಿಕ ಮಾತುಗಳನ್ನು ಕೇಳುತ್ತಿದ್ದಂತೆ ಮನಸ್ಸು ಲೈಂಗಿಕ ಕಲ್ಪನೆಯನ್ನು ಮಾಡಿಕೊಳ್ಳುತ್ತಿದ್ದಂತೆ, ಲೈಂಗಿಕ ಕ್ರಿಯೆ ನಡೆಸುವ ಬಯಕೆ ಹುಟ್ಟುತ್ತದೆ. ಮೈ ಬಿಸಿ ಏರಿ, ಜನನಾಂಗ ಉದ್ರೇಕಗೊಂಡು, ಲೈಂಗಿಕ ಕ್ರಿಯೆ ನಡೆಸಲು ಸಜ್ಜಾಗುತ್ತದೆ. ಆಗ ಯಾವುದೇ ವ್ಯಕ್ತಿ, ಲೈಂಗಿಕ ಸಂಗಾತಿ ಸಿಕ್ಕಿದರೆ, ಲೈಂಗಿಕ ಕ್ರಿಯೆಯನ್ನು ನಡೆಸಿಯೇ ಬಿಡುತ್ತಾನೆ. ಲೈಂಗಿಕ ಸಂಗಾತಿ ಇಲ್ಲದಿದ್ದರೆ, ಅವನಿಗಿಷ್ಟವಾದ ಕಲ್ಪನೆಯ ಸಂಗಾತಿಯೊಂದಿಗೆ ಸಂಭೋಗ ಮಾಡಿದಂತೆ ಹಗಲುಗನಸು ಕಾಣುತ್ತಾನೆ. ಹಸ್ತಮೈಥುನ ಮಾಡಿಕೊಂಡು ಸುಖಿಸುತ್ತಾನೆ. ಈ ರೀತಿ ಲೈಂಗಿಕ ಹಗಲುಗನಸು ಕಾಣದ ಪುರುಷನಿಲ್ಲ ಎನ್ನಬಹುದು. ಕಲ್ಪನೆಯ ಸಂಗಾತಿ ಯಾರಾದರೂ ಆಗಬಹುದು. ಸಿನಿಮಾ ತಾರೆಯರು, ಕ್ರೀಡಾಪಟುಗಳು, ದೃಶ್ಯ ಅಥವಾ ಮುದ್ರಣ ಮಾಧ್ಯಮದಲ್ಲಿ ಕಾಣುವ ಸ್ತ್ರೀಯರು, ಸಹಪಾಠಿಗಳು, ಸಹೋದ್ಯೋಗಿಗಳು, ಮನೆಯವರು, ನೆರೆಹೊರೆಯವರು, ದೇವತಾ ಸ್ತ್ರೀಯರು... ಹೀಗೆ ಯಾರೇ ಆಗಿರಬಹುದು, ಅವರೊಡನೆ ಮಾನಸಿಕವಾಗಿ "ವ್ಯಭಿಚಾರ"ವನ್ನು ಬಹುತೇಕ ಪುರುಷರು (ಹಾಗೆಯೇ ಸ್ತ್ರೀಯರೂ ಕೂಡ) ಮಾಡುತ್ತಾರೆ. ಈ "ಅತ್ಯಾಚಾರ" ಅಥವಾ "ವ್ಯಭಿಚಾರ" ಮಾನಸಿಕ ಮಟ್ಟದಲ್ಲೇ ಇದ್ದರೆ, ಯಾರಿಗೂ ಅಪಾಯವಿಲ್ಲ. ಮಾನಸಿಕ ವ್ಯಭಿಚಾರದಿಂದ ನೈತಿಕ ಪ್ರಜ್ಞೆ ಇರುವ ಸಾಕಷ್ಟು ಪುರುಷರು ತಪ್ಪಿತಸ್ಥ ಭಾವನೆಯನ್ನೂ, ಪಾಪ ಪ್ರಜ್ಞೆಯನ್ನು ಬೆಳೆಸಿಕೊಳ್ಳುತ್ತಾರೆ. "ನನ್ನ ಸೋದರಿಯ ಬಗ್ಗೆ, ನನ್ನ ಟೀಚರ್ ಬಗ್ಗೆ, ನನ್ನ ಅತ್ತಿಗೆ ಬಗ್ಗೆ, ದೇವರ ಬಗ್ಗೆಯೇ ಈ ರೀತಿ ಕಲ್ಪನೆ ಮಾಡಿಕೊಂಡೆನಲ್ಲ! ನಾನು ಪಾಪಿ" ಎಂದು ಪರಿತಪಿಸುತ್ತಾರೆ. ಲೈಂಗಿಕ ಪ್ರಚೋದನೆಯಿಂದ, ಮತ್ತೆ ಅದೇ ತಪ್ಪನ್ನು ಮಾಡುತ್ತಾರೆ. ತಮ್ಮ ದುರ್ಬಲ ಮನಸ್ಸಿನ ಬಗ್ಗೆ ತಾವೇ ಸಿಟ್ಟಿಗೇಳುತ್ತಾರೆ. ಮದ್ಯಪಾನ ಮಾಡಿದಾಗ ಈ ನೈತಿಕ ಪ್ರಜ್ಞೆ ಮರೆಯಾಗಿ, ಅದೇ ತಪ್ಪನ್ನು ಮತ್ತೆ ಮತ್ತೆ ಮಾಡುತ್ತಾರೆ. ಈ ಲೈಂಗಿಕ ಕಲ್ಪನೆ-ಮಾನಸಿಕ ವ್ಯಭಿಚಾರ, ಕಲ್ಪನೆಯ ಮಟ್ಟದಲ್ಲೇ ಬಹುಜನರಲ್ಲಿ ಉಳಿದುಬಿಡುತ್ತದೆ. ಕೆಲವರು, ಕೆಲವು ಪ್ರಚೋದಕ ಪರಿಸರದಲ್ಲಿ, ಕೋಪ, ದ್ವೇಷದ ಭಾವೋದ್ವೇಗದಲ್ಲಿ, ಮದ್ಯದ ಅಮಲಿನಲ್ಲಿ, ಮಾದಕ ವಸ್ತುಗಳ ಪ್ರಭಾವದಲ್ಲಿ, ಬ್ಲೂಫಿಲ್ಮ್‌ನಲ್ಲಿ ವಿಕೃತ ಕಾಮಕೇಳಿಯನ್ನು ನೋಡಿ ಉಂಟಾಗುವ ಲೈಂಗಿಕ ಉದ್ರೇಕದಿಂದಾಗಿ, ಸಿಕ್ಕ ಸಿಕ್ಕ ಸ್ತ್ರೀಯರೊಂದಿಗೆ ಬಲಾತ್ಕಾರವಾಗಿ ಸಂಭೋಗ ಮಾಡಲು ಸಿದ್ಧರಾಗುತ್ತಾರೆ, 'ಕಾಮಾತುರಾಣಾಂ, ನ ಭಯಂ ನ ಲಜ್ಜಾಂ' ಎಂಬ ನುಡಿಯಂತೆ ಭಯವಿಲ್ಲದೆ, ನಾಚಿಕೆ-ಮಾನ-ಮರ್ಯಾದೆಗಳ ಗೊಡವೆಯೇ ಇಲ್ಲದೆ ಸಿಕ್ಕಿಹಾಕಿಕೊಂಡರೆ, ಮನೆಯವರು ಬಂಧು ಮಿತ್ರರು ಏನೆಂದಾರು ಎಂಬ ಅಳುಕಿಲ್ಲದೆ, ಪೊಲೀಸು-ಕೋರ್ಟು-ಕಾನೂನಿನ ಶಿಕ್ಷೆಯ ಹೆದರಿಕೆ ಇಲ್ಲದೆ ಅತ್ಯಾಚಾರವನ್ನು ಎಸಗಿಯೇ ಬಿಡುತ್ತಾರೆ.

"ಬಲಾತ್ಕಾರ ಸಂಭೋಗ ಶಿಕ್ಷಾರ್ಹ ಅಪರಾಧ. ಅದಕ್ಕೆ ಈಗಿರುವ ಶಿಕ್ಷೆ ಏನೇನೂ ಸಾಲದು. ಅತ್ಯಾಚಾರ ಮಾಡಿದ ವ್ಯಕ್ತಿ 'ರೆಡ್‌ಹ್ಯಾಂಡ್' ಆಗಿ ಸಿಕ್ಕಿಬಿದ್ದರೆ, ಕೂಡಲೇ ಅವನ ಜನನಾಂಗವನ್ನು ಕತ್ತರಿಸಿ, ಅವನನ್ನು ಗಲ್ಲಿಗೇರಿಸಿ ರೆಡ್‌ಹ್ಯಾಂಡ್‌ಆಗಿ ಸಿಕ್ಕಿ ಬೀಳದಿದ್ದರೆ, ಬೇಗ ತನಿಖೆ ಮಾಡಿ, ಸಾಕ್ಷ್ಯಾಧಾರಗಳ ಆಧಾರದ ಮೇಲೆ ಅವನಿಗೆ ಬೇಗ ಶಿಕ್ಷೆ ಕೊಡಿ. ಅತ್ಯಾಚಾರಿಗೆ ಬಹಿರಂಗವಾಗಿ ಗಲ್ಲು ಶಿಕ್ಷೆಕೊಟ್ಟು ಇತರರು ಈ ಅಪರಾಧ ಮಾಡಲು ಹೆದರುವಂತಾಗ ಬೇಕು" ಎಂಬ ಕೂಗು ನಮ್ಮ ದೇಶದಲ್ಲಿ ಎಲ್ಲೆಡೆ ಕೇಳಿಬರುತ್ತಿದೆ. ಅಂತಹ ವ್ಯಕ್ತಿಯೊಬ್ಬ ಅದು ತಪ್ಪು, ಘೋರ ಅಪರಾಧ ಎಂದು ಗೊತ್ತಿದ್ದರೂ, ಸಿಕ್ಕಿ ಬಿದ್ದರೆ ಅವಮಾನ, ಹೀನಾಯವಾದುದು ಅದಕ್ಕೆ ಉಗ್ರಶಿಕ್ಷೆ ಕಾದಿದೆ ಎಂದು ತಿಳಿದಿದ್ದರೂ ಅತ್ಯಾಚಾರಿಗಳು ಅಂತಹ

ಡಾ|| ಸಿ. ಆರ್. ಚಂದ್ರಶೇಖರ್

ಕೃತ್ಯವನ್ನು ಏಕೆ ಎಸಗುತ್ತಾರೆ ? ಶಿಸ್ತು, ಸಂಯಮ ಇಲ್ಲದಿರುವುದು, ಅದನ್ನು ಬೆಳೆಸಿಕೊಳ್ಳದಿರುವುದು, ಯಾರಿಗೂ ಕಾಣದಂತೆ ಮಾಡುತ್ತೇನೆ. ಸಿಕ್ಕಿಹಾಕಿ ಕೊಳ್ಳುವುದಿಲ್ಲ, ಸಿಕ್ಕಿಹಾಕಿಕೊಂಡರೂ, ಲಂಚಕೊಟ್ಟು, ವಶೀಲಿ ಹಾಕಿ, ಶಿಕ್ಷೆಯಿಂದ ಪಾರಾಗಬಹುದು. ಅತ್ಯಾಚಾರ ಮಾಡಿ, ಅದನ್ನು ಜೀರ್ಣಿಸಿಕೊಳ್ಳಬಹುದು ಎಂಬ ಭಂಡ ಧೈರ್ಯದಿಂದ ವ್ಯಕ್ತಿ ಅತ್ಯಾಚಾರಕ್ಕೆ ಮುಂದಾಗುತ್ತಾನೆ.

ಲೈಂಗಿಕ ಸ್ವೇಚ್ಛಾಚಾರ, ಲೈಂಗಿಕ ಅತ್ಯಾಚಾರ ಮಾಡಲು ವ್ಯಕ್ತಿಯನ್ನು ಪ್ರೇರೇಪಿಸುವ ಅಂಶಗಳು :

* ಬಾಲ್ಯದಲ್ಲಿ ಲೈಂಗಿಕ ಅಪಚಾರ (ಅತ್ಯಾಚಾರಕ್ಕೆ ಒಳಗಾಗುವುದು). ನಮ್ಮ ದೇಶದಲ್ಲಿ ೫ರಿಂದ ೧೨ ವರ್ಷದ ಮಕ್ಕಳಲ್ಲಿ ಶೇಕಡ ೫೨ರಷ್ಟು ಮಕ್ಕಳು ಪರಿಚಿತರು ಅಥವಾ ಅಪರಿಚಿತರಿಂದ ಲೈಂಗಿಕ ಶೋಷಣೆಗೆ ಒಳಗಾಗುತ್ತಾರೆ. ಗಂಡುಮಕ್ಕಳು ಪುರುಷರಿಂದ (ಸಲಿಂಗಕಾಮ) ಅತ್ಯಾಚಾರಕ್ಕೆ ಒಳಗಾಗುತ್ತಾರೆ. ಈ ಅನುಭವ ಅವರನ್ನು ಮುಂದೆ ಲೈಂಗಿಕ ಅತ್ಯಾಚಾರ ಮಾಡಲು ಪ್ರೇರಕವಾಗಬಹುದು.
* ನಮ್ಮ ದೇಶದಲ್ಲಿ ಶೇಕಡ ೫೦ರಷ್ಟು ಕುಟುಂಬಗಳು, ಮನೆಗಳಲ್ಲಿ ಪ್ರೈವೆಸಿ ಇರುವುದಿಲ್ಲ. ತಂದೆ-ತಾಯಿ, ಅಣ್ಣ-ಅತ್ತಿಗೆ ಮತ್ತು ಇತರರ ಲೈಂಗಿಕ ಕ್ರಿಯೆಯನ್ನು ಮಕ್ಕಳು ನೋಡಿ ಪ್ರಚೋದಿತರಾಗಬಹುದು.
* ಮಾಧ್ಯಮಗಳಲ್ಲಿ, ಟಿ. ವಿ., ಸಿನಿಮಾ, ಇಂಟರ್‌ನೆಟ್, ಮೊಬೈಲ್, ವಿಡಿಯೋ, ಬ್ಲೂಫಿಲ್ಮ್ ವೀಕ್ಷಣೆ ಇವು ಬೆಳೆಯುವ ಮಕ್ಕಳಲ್ಲಿ ಮಾತ್ರವಲ್ಲ, ಯಾವುದೇ ವಯಸ್ಸಿನವರಲ್ಲೂ ಲೈಂಗಿಕ ಬಯಕೆಯನ್ನು ಪ್ರಚೋದಿಸುತ್ತವೆ. ಈ ಬಹುತೇಕ ಮಾಧ್ಯಮಗಳಲ್ಲಿ ಸ್ತ್ರೀಯರನ್ನು ಕಾಮದ ಬೊಂಬೆಗಳಂತೆ, ಪರೋಕ್ಷವಾಗಿ, ಅಪರೋಕ್ಷವಾಗಿ ಲೈಂಗಿಕತೆಯನ್ನು ಪ್ರಚೋದಿಸಲು ಪ್ರದರ್ಶಿಸಲಾಗುತ್ತದೆ. ಸಹಜ ಮತ್ತು ಅಸಹಜ ಹಾಗೂ ವಿಕೃತ ಕಾಮಕೇಳಿಯನ್ನು ಈಗ ಮೊಬೈಲ್‌ನಲ್ಲಿ, ಅಂತರ್ಜಾಲದಲ್ಲಿ ಯಾವಾಗ ಬೇಕಾದರೂ ನೋಡಬಹುದು, ಲೈಂಗಿಕವಾಗಿ ಪ್ರಚೋದನೆಗೊಳ್ಳಬಹುದು. ನೋಡಿದ್ದನ್ನು ಖುದ್ದಾಗಿ ಮಾಡಿ ಸುಖಿಸಲು ವ್ಯಕ್ತಿ ಮುಂದಾಗುತ್ತಾನೆ.
* ಅತ್ಯಾಚಾರದ ವೈಭವೀಕರಣವನ್ನು ನಮ್ಮ ೨೪ ಗಂಟೆಗಳ ಕಾಲವೂ ಬಿಂಬಿಸುವ ಸುದ್ದಿವಾಹಿನಿಗಳು ನಿಷ್ಠೆಯಿಂದ, ಸಂಭ್ರಮದಿಂದ ಮಾಡುತ್ತಿವೆ. ಐದ್ಹೆದು ನಿಮಿಷಕ್ಕೊಂದು ಬಾರಿ ಅತ್ಯಾಚಾರದ ದೃಶ್ಯಗಳನ್ನು ತೋರಿಸುತ್ತಿವೆ. ವಿ.ಐ.ಪಿ. ಅತ್ಯಾಚಾರಿಯನ್ನು 'ಹೀರೋ'ನಂತೆ ಬಿಂಬಿಸಲಾಗುತ್ತದೆ. ಅಂತಹ ಧೂರ್ತ ವ್ಯಕ್ತಿಯನ್ನು ಅರೆಸ್ಟ್ ಮಾಡಬೇಡಿ ಎಂದು ಒತ್ತಾಯಿಸುವ ಅವನ ಅಭಿಮಾನಿಗಳನ್ನು ತೋರಿಸುತ್ತವೆ.
* ಫ್ಯಾಶನ್ ಹೆಸರಿನಲ್ಲಿ, ಸಣ್ಣವಯಸ್ಸಿನ ಹೆಣ್ಣು ಮಕ್ಕಳಿಂದ ಹಿಡಿದು ಮಧ್ಯ ವಯಸ್ಸಿನ ಸ್ತ್ರೀಯರೂ ತಮ್ಮ ಮೈ, ಕೈ, ಎದೆ, ಪೃಷ್ಠ ಭಾಗಗಳೂ ಆಕರ್ಷಕವಾಗಿ, ಸೆಕ್ಸಿಯಾಗಿ ಕಾಣುವಂತೆ ಉಡುಗೆ – ತೊಡುಗೆಗಳನ್ನು ಧರಿಸುತ್ತಾರೆ.
* ಈಗಿನ ಜೀವನಶೈಲಿಯಲ್ಲಿ ಸ್ತ್ರೀಯರು, ಪುರುಷರು ಒಟ್ಟಿಗೆ ಕೆಲಸ ಮಾಡುವ (ಮನರಂಜನೆಯೂ ಸೇರಿದಂತೆ) ವಿವಿಧ ಚಟುವಟಿಕೆಗಳಲ್ಲಿ ಮುಕ್ತವಾಗಿ ಭಾಗವಹಿಸುವ ಅವಕಾಶಗಳು ಹೆಚ್ಚಿವೆ. ಇಂತಹ ಅನೇಕ ಸಂದರ್ಭಗಳಲ್ಲಿ ಪರಸ್ಪರ ಲೈಂಗಿಕ ಆಕರ್ಷಣೆಗೆ ಒಳಗಾಗುತ್ತಾರೆ.
* ಲೈಂಗಿಕ ಕ್ರಿಯೆಯನ್ನು ತಮ್ಮ ತಮ್ಮ ಸಂತೋಷಕ್ಕಾಗಿ, ಖುಷಿಗಾಗಿ ಮಾಡಬೇಕು, ನೀತಿನಿಯಮಗಳ ಕಡಿವಾಣ ಬೇಡ. ಇಷ್ಟ ಬಂದ ಸಮಯದಲ್ಲಿ ಇಷ್ಟ ಬಂದ ವ್ಯಕ್ತಿಯೊಡನೆ (ಆಕೆಯ ಒಪ್ಪಿಗೆ ಇರಲಿ ಇಲ್ಲದಿರಲಿ) ಇಷ್ಟ ಬಂದ ರೀತಿಯಲ್ಲಿ ಲೈಂಗಿಕ ಕ್ರಿಯೆಯಲ್ಲಿ ತೊಡಗಿ 'ಮಜಾ' ಮಾಡುವುದೇ ಸರಿ ಎಂಬ ಅಪಾಯಕಾರಿ ಧೋರಣೆ ಪುರುಷರಲ್ಲಿ ಬೆಳೆಯುತ್ತಿದೆ.
* ಲೈಂಗಿಕ ಚಟುವಟಿಕೆಯಲ್ಲಿ ವೈವಿಧ್ಯತೆ ಇರಬೇಕು, ಏಕವ್ಯಕ್ತಿ ನಿಷ್ಠೆಯ ಅಗತ್ಯವಿಲ್ಲ, ವಿವಿಧ ವಯಸ್ಸಿನ, ವಿವಿಧ ರೂಪ, ಆಕಾರದ, ವಿವಿಧ

ರೀತಿಯ ಸ್ತ್ರೀಯರೊಡನೆ ಸಂಭೋಗ ಮಾಡಿ ಖುಷಿಪಡಬೇಕು, ಸಹಜ ಸೆಕ್ಸ್‌ಗಿಂತ ಅಸಹಜ ಸೆಕ್ಸ್ ಹೆಚ್ಚು ಮಜಾ ಕೊಡುತ್ತದೆ, ಸಹಕರಿಸದೆ ವಿರೋಧ ವ್ಯಕ್ತಪಡಿಸುವ ಸ್ತ್ರೀಯನ್ನು ಮಣಿಸಿ, ಬಲಾತ್ಕಾರದಿಂದ ಕೂಡಿದರೆ ಹೆಚ್ಚು ಸುಖ ಸಿಗುತ್ತದೆ ಎಂಬ ವಿಕೃತ ಧೋರಣೆ ಕೆಲವು ಪುರುಷರಲ್ಲಿ ಬೆಳೆಯುತ್ತಿದೆ.

* ಸಲಿಂಗ ಕಾಮ : ಪುರುಷರು ಪುರುಷನೊಡನೆ, ಸ್ತ್ರೀಯರು ಸ್ತ್ರೀಯೊಡನೆ ಲೈಂಗಿಕ ಕ್ರಿಯೆ ನಡೆಸುವುದು ಈಗ ಹೆಚ್ಚು ಪ್ರಚಾರ ಪಡೆಯುತ್ತಿದೆ. ಇದು ಮಾನವೀಯ ಸಹಜ ಪ್ರವೃತ್ತಿಗೆ ವಿರುದ್ಧವಾದುದು, ಅಸಹಜ, ಅಪರಾಧ, ವಿಕೃತ ಎಂಬ ಧೋರಣೆಗೆ ವಿರುದ್ಧವಾಗಿ ಇದು ಸಹಜವೇ, ವಿಕೃತವಲ್ಲ, ಸಲಿಂಗ ಕಾಮದಲ್ಲಿ ತೊಡಗಿ ಖುಷಿಪಡಲು ಯಾರದೇನು ಅಡ್ಡಿ ಎಂಬ ವಾದಕ್ಕೆ ಈಗ ಎಲ್ಲೆಡೆ ಪ್ರೋತ್ಸಾಹ ಸಿಗುತ್ತಿದೆ. ಗೇ ಕ್ಲಬ್‌ಗಳೂ, ಲೆಸ್ಬಿಯನ್ ಕ್ಲಬ್‌ಗಳೂ ಹುಟ್ಟಿಕೊಂಡಿವೆ. ಹಾಸ್ಟೆಲ್‌ಗಳಲ್ಲಿ, ಪಿ. ಜಿ.ಗಳಲ್ಲಿ, ರೆಸಾರ್ಟ್‌ಗಳಲ್ಲಿ, ಹೋಟೆಲ್–ಲಾಡ್ಜ್‌ಗಳಲ್ಲಿ ಸಲಿಂಗ ಕಾಮದಲ್ಲಿ ತೊಡಗುವವರ ಸಂಖ್ಯೆ ಹೆಚ್ಚುತ್ತಿದೆ.
* ಅಸಹಜ ಲೈಂಗಿಕ ಚಟುವಟಿಕೆಗಳೆಂದು ಪರಿಗಣಿಸಲಿರುವ ಮುಖ ಮೈಥುನ, ಗುದ ಮೈಥುನ, ಸಮೂಹ ಮೈಥುನ ಇತರರು ಲೈಂಗಿಕ ಕ್ರಿಯೆಯಲ್ಲಿ ತೊಡಗಿರುವುದನ್ನು ವೀಕ್ಷಿಸುವುದು ಇವು ಈಗ ಹೆಚ್ಚು ಪ್ರಚಾರ ಮತ್ತು ಜನಪ್ರಿಯತೆಯನ್ನು ಗಳಿಸಿಕೊಳ್ಳುತ್ತಿವೆ.
* ಬುದ್ಧಿಮಾಂದ್ಯರು, ಮಾನಸಿಕವಾಗಿ ಅಸ್ವಸ್ಥರಾಗಿರುವವರು, ಮಕ್ಕಳು, ವಿಕೃತ ಅಥವಾ ಅತಿ ಕಾಮಿಗಳಿಗೆ ಸುಲಭದ ತುತ್ತಾಗುತ್ತಿದ್ದಾರೆ.
* ದಾಂಪತ್ಯ ಜೀವನದಲ್ಲಿ, ಪರಸ್ಪರ ಪ್ರೀತಿವಿಶ್ವಾಸವಿಲ್ಲದೆ, ಅತಿ ನಿರೀಕ್ಷೆ ಮತ್ತು ಸಮಯದ ಅಭಾವಗಳಿಂದ, ಗಂಡ–ಹೆಂಡತಿಯರ ಸಂಬಂಧ ಬಹುತೇಕ ಕುಟುಂಬಗಳಲ್ಲಿ ಹಳಸಿಕೊಂಡಿದೆ. ದುಡಿಯುವ ಮಹಿಳೆ ಕ್ರಮೇಣ ಲೈಂಗಿಕ ಅನಾಸಕ್ತಿಗೆ ಒಳಗಾಗಬಹುದು. ಯಾಂತ್ರಿಕವಾಗಿ ಮಾತ್ರ ಕ್ರಿಯೆಯಲ್ಲಿ ಪಾಲ್ಗೊಳ್ಳಬಹುದು. ಇದರಿಂದ ಪುರುಷನಲ್ಲಿ ಲೈಂಗಿಕ ಅತೃಪ್ತಿ ಮನೆ ಮಾಡುತ್ತದೆ. ಲೈಂಗಿಕ ಸುಖಕ್ಕಾಗಿ ಇತರೆಡೆ, ಇತರರೊಡನೆ ಲೈಂಗಿಕ ಸುಖ ಪಡೆಯಲು ಪ್ರಯತ್ನಿಸುತ್ತಾನೆ. ಇದರಿಂದಾಗಿ ವಿವಾಹೇತರ ಸಂಬಂಧಗಳು ಹೆಚ್ಚುತ್ತಿವೆ.

**ಮೂರು ಬಗೆಯ ಅತ್ಯಾಚಾರಿಗಳು**

ಅತ್ಯಾಚಾರಿಗಳನ್ನು ಮನೋವೈಜ್ಞಾನಿಕವಾಗಿ ಅಧ್ಯಯನ ಮಾಡಲಾಗಿದೆ. ಇದರ ಪ್ರಕಾರ ಅತ್ಯಾಚಾರಿಗಳನ್ನು ಮೂರು ಗುಂಪುಗಳನ್ನಾಗಿ ವಿಂಗಡಿಸಲಾಗಿದೆ.

೧ **ಸ್ತ್ರೀ ದ್ವೇಷಿಗಳು :** ಬಾಲ್ಯದ ಅನುಭವಗಳು, ತಾಯಿ, ಸೋದರಿಯೂ ಸೇರಿದಂತೆ ಯಾವುದೇ ಸ್ತ್ರೀಯಿಂದ ತೊಂದರೆ, ಪಕ್ಷಪಾತ, ಅನ್ಯಾಯಕ್ಕೆ ಒಳಗಾಗುವುದು, ಪ್ರೀತಿಸಿದ ಹುಡುಗಿಯಿಂದ ಮೋಸ ಹೋಗುವುದು, ಅವಳಿಂದ ಹಣ–ವಸ್ತುಗಳನ್ನು ಕಳೆದುಕೊಳ್ಳುವುದು, ಸ್ತ್ರೀಯಿಂದ/ಸ್ತ್ರೀಯರಿಂದ ಇತರ ರೀತಿಯಲ್ಲಿ ಮೋಸ, ವಂಚನೆ, ಕೌರ್ಯಕ್ಕೆ ತುತ್ತಾಗುವುದು ಅಥವಾ ತಂದೆ ಅಣ್ಣ, ಶಿಕ್ಷಕ ಮತ್ತು ಇತರ ಪುರುಷರ ಸ್ತ್ರೀ ದ್ವೇಷದಿಂದ ಪ್ರೇರಿತರಾಗಿ, ಸ್ತ್ರೀಯರ ಬಗ್ಗೆ ಸಿಟ್ಟು, ಕೋಪ–ದ್ವೇಷವನ್ನು ಇಂತಹ ಪುರುಷರು ಬೆಳೆಸಿಕೊಳ್ಳುತ್ತಾರೆ. ಸ್ತ್ರೀಯರೆಲ್ಲ ಕೆಟ್ಟವರು, ಮೋಸಗಾರ್ತಿಯರು, ಸ್ವಾರ್ಥಿಗಳು, ಪುರುಷರನ್ನು ಶೋಷಣೆ ಮಾಡಿ ಆನಂದಿಸುವವರು, ತಮ್ಮ ಸ್ವಾರ್ಥಕ್ಕೆ ಪುರುಷರನ್ನು ಬಳಸಿ ಬಿಸಾಡುವವರು ಎಂಬಿತ್ಯಾದಿ ಇವರು ನಂಬುತ್ತಾರೆ. ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದರೆ, ಅವರಿಗೆ ಚಿತ್ರಹಿಂಸೆಯಾಗುತ್ತದೆ; ಜೀವನಪರ್ಯಂತ ನರಳುವಂತಾಗುತ್ತದೆ; ಕೆಟ್ಟುಹೋದವಳು ಎಂದು ಸಮಾಜದ ತಿರಸ್ಕಾರಕ್ಕೆ ಒಳಗಾಗುತ್ತಾರೆ, ಅಪ್ಪ, ಅಮ್ಮ, ಸೋದರ ಸೋದರಿಯರು, ಗಂಡುಮಕ್ಕಳು ಅವಳನ್ನು ಕಜ್ಜಿ ನಾಯಿ ಅಥವಾ ಹುಚ್ಚು ನಾಯಿಯನ್ನು ಓಡಿಸುವಂತೆ ಓಡಿಸುತ್ತಾರೆ; ಅವಳು ಬೀದಿಪಾಲಾಗಿ ಅತೀವ ಹಿಂಸೆ ಅನುಭವಿಸುತ್ತಾಳೆ; ಅವಳಿಗೆ ಇಂತಹ ಶಿಕ್ಷೆಯನ್ನು ನಾನೂ ಕೊಡಬೇಕು – ಎಂದು ಈ ಗುಂಪಿನ ಪುರುಷರು ಯೋಚಿಸುತ್ತಾರೆ. ಅಲ್ಲದೆ ಹಾಗೆ ಮಾಡಿಯೂ ತೋರಿಸುತ್ತಾರೆ. ತಾವು ಎಸಗಿದ ಕೃತ್ಯಕ್ಕೆ ಪಶ್ಚಾತ್ತಾಪಪಡುವುದಿಲ್ಲ. ತೆರೆಯಮೇಲೆ ಅತ್ಯಾಚಾರ ನಡೆಯುವುದನ್ನು ನೋಡಿ ಆನಂದಿಸುತ್ತಾರೆ. ಅತ್ಯಾಚಾರ ಮಾಡಲು ಇತರರಿಗೆ ಉತ್ತೇಜನ ನೀಡುತ್ತಾರೆ. ಸಾಮೂಹಿಕ ಅತ್ಯಾಚಾರದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ. ದ್ವೇಷ ಸಾಧಿಸಿ ವಿಕೃತ ತೃಪ್ತಿಯನ್ನು ಅನುಭವಿಸುತ್ತಾರೆ.

ಪುರುಷ ಪ್ರಧಾನ ಸ್ವಭಾವದಲ್ಲಿ, ಸ್ತ್ರೀಯರನ್ನು ಅಬಲೆ, ಮಾಯೆ, ಪುರುಷನ ಭೋಗವಸ್ತು ಎಂದೆಲ್ಲಾ ನಂಬಲಾಗುತ್ತದೆ. ತಂದೆತಾಯಿಗಳೂ ಸೇರಿದಂತೆ, ಬಹುತೇಕ ಜನರು ಲಿಂಗ ಪಕ್ಷಪಾತವನ್ನು ಮಾಡುತ್ತಾರೆ. ಯಾವತ್ತಿಗೂ ಪುರುಷನು ಶ್ರೇಷ್ಠ, ಸ್ತ್ರೀ ಕೀಳು, ಪಾಪ ಮಾಡಿದವರು ಹೆಣ್ಣಾಗಿ ಹುಟ್ಟುತ್ತಾರೆಂದು ಹೇಳಿ ಸ್ತ್ರೀ ದ್ವೇಷಕ್ಕೆ ಪ್ರೋತ್ಸಾಹ ನೀಡಲಾಗುತ್ತದೆ. ಈ ಮೂಲಕ ಸ್ತ್ರೀಯರನ್ನು ನಿಕೃಷ್ಟವಾಗಿ ಕಾಣಲು, ಅವರನ್ನು ಶೋಷಿಸಲು ವಿಕೃತ ಮನಸ್ಸಿನವರಿಗೆ ಉತ್ತೇಜನ ಸಿಗುತ್ತದೆ.

೨. **ಪುರುಷತನದ ಸಾಬೀತು ಮತ್ತು ಪ್ರದರ್ಶನ :** ಅತ್ಯಾಚಾರಿಗೆ ತನ್ನ ಪುರುಷತನದ ಬಗ್ಗೆ ಅನುಮಾನ ಇರುತ್ತದೆ. ತಾನು ಕಪ್ಪಗಿದ್ದೇನೆ; ಸಣ್ಣಗಿದ್ದೇನೆ; ತನ್ನ ಬುದ್ಧಿಚತುರತೆ ಕಡಿಮೆ; ತನ್ನ ಮಾತನ್ನು ಯಾರೂ ಕೇಳುವುದಿಲ್ಲ; ಮನೆಯಲ್ಲಿ ತಾಯಿ, ಸೋದರಿ, ಹೆಂಡತಿ ತನ್ನ ಬಗ್ಗೆ ಗೌರವ ಪ್ರೀತಿ ತೋರಿಸುವುದಿಲ್ಲ; ತನ್ನ ಶಕ್ತಿಸಾಮರ್ಥ್ಯದ ಬಗ್ಗೆ ಇತರರು ಅಪಹಾಸ್ಯ ಮಾಡುತ್ತಾರೆ; ತನ್ನ ಜನನಾಂಗ ಚಿಕ್ಕದು; ತನ್ನ ಲೈಂಗಿಕ ಸಂಗಾತಿ (ಹೆಂಡತಿ, ಪರಿಚಯದ ಸ್ತ್ರೀ ಅಥವಾ ವೇಶ್ಯೆ) ತನ್ನ ಪುರುಷತನದ ಬಗ್ಗೆ ಪರಿಹಾಸ್ಯ ಮಾಡುತ್ತಾಳೆ; ಅತಿ ಶೀಘ್ರವಾಗಿ ವೀರ್ಯಸ್ಖಲನವಾಗುತ್ತದೆ; ಉದ್ರೇಕಗೊಂಡಾಗ ಜನನಾಂಗ ಮೆದುವಾಗೇ ಇರುತ್ತದೆ; ಹೆಚ್ಚು ಹೊತ್ತು ಸಂಭೋಗ ಮಾಡಲಾಗುವುದಿಲ್ಲ; ಎಂಬಂತಹ ಕೀಳರಿಮೆ ಇರುವ ಇಂತಹ ವ್ಯಕ್ತಿ 'ಹೆಣ್ಣಿನ ಮೇಲೆ ಬಲಾತ್ಕಾರ ಸಂಭೋಗ ಮಾಡಿ' ತನ್ನ ಪುರುಷತನವನ್ನು ಸಾಬೀತುಪಡಿಸಲು ಯತ್ನಿಸುತ್ತಾನೆ. ಪುರುಷನಾಗಿ ಹೆಣ್ಣಿಗೆ ಅಪಮಾನ ಮಾಡುವುದು, ಸೋಲಿಸುವುದು, ಅವಳಿಗೆ ನೋವುಂಟುಮಾಡುವುದು, ಆಕೆಯ ಇಚ್ಛೆಗೆ ವಿರುದ್ಧ ಆಕೆಯನ್ನು ಭೋಗಿಸಿ ತಮ್ಮ ಪುರುಷತನವನ್ನು ಇಂಥವರು ಪ್ರದರ್ಶಿಸುತ್ತಾರೆಂದು ಹೇಳಲಾಗಿದೆ. ಇವರು ಮಧ್ಯವಯಸ್ಸು, ಇಳಿವಯಸ್ಸಿನ ಸ್ತ್ರೀಯರ ಮೇಲೂ ಅತ್ಯಾಚಾರವನ್ನೆಸಗುತ್ತಾರೆ. ಸಾಮೂಹಿಕ ಅತ್ಯಾಚಾರದಲ್ಲೂ ಭಾಗಿಯಾಗುತ್ತಾರೆ.

೩. **ವಿಕೃತ ಕಾಮಿಗಳು :** ಮಿದುಳಿಗೆ ಸಣ್ಣ ಪ್ರಮಾಣದ ಹಾನಿ, ಬುದ್ಧಿಮಾಂದ್ಯತೆ, ಲೈಂಗಿಕ ಅತ್ಯಾಚಾರಕ್ಕೆ ಒಳಗಾದ ಅನುಭವ, ವಿಡಿಯೋ ಮತ್ತು ಬ್ಲೂಫಿಲ್ಮ್‌ಗಳಲ್ಲಿ ವಿಕೃತ ಲೈಂಗಿಕ ಕ್ರಿಯೆಗಳನ್ನು ನೋಡಿ ಪ್ರಚೋದಿತರಾಗಿ, ಕೆಲವರು ವಿಕೃತ ಕಾಮಿಗಳಾಗುತ್ತಾರೆ. ಲೈಂಗಿಕ ಸಂಗಾತಿಗೆ ನೋವು, ಹಿಂಸೆಕೊಟ್ಟು, ಆಕೆಯ ದೇಹಕ್ಕೆ ಹಾನಿ ಮಾಡಿ, ಮನಸ್ಸಿಗೆ ಹಿಂಸೆ ನೀಡಿ, ಲೈಂಗಿಕ ಸುಖಾನುಭವವನ್ನು ಪಡೆಯುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಾರೆ. ಲೈಂಗಿಕ ಸಂಗಾತಿಯನ್ನು ಅಸಹಾಯಕ ಸ್ಥಿತಿಗೆ ದೂಡಿ, ಆಕೆ ನೋವಿನಿಂದ ಕಿರಿಚುತ್ತಿದ್ದರೆ, ಆಕ್ರಂದನ ಮಾಡುತ್ತಿದ್ದರೆ, ಇವರು ಖುಷಿಯನ್ನು ಅನುಭವಿಸುತ್ತಾರೆ. ಇದನ್ನು 'ಸ್ಯಾಡಿಸಮ್' ಎನ್ನುತ್ತಾರೆ.

* ಮಕ್ಕಳ ಮೇಲೆ (ಹಸುಗೂಸಿನಿಂದ ಹಿಡಿದು, ಅಪ್ರಾಪ್ತ ಹದಿಹರೆಯದ ಮಕ್ಕಳ ಮೇಲೆ) ಅತ್ಯಾಚಾರ.
* ವಿಕೃತ ರೀತಿಯಲ್ಲಿ ಲೈಂಗಿಕ ಕ್ರಿಯೆ ಮಾಡುವುದು (ಮುಖ/ಗುದ ಮೈಥುನ).
* ಸಾಮೂಹಿಕ ಲೈಂಗಿಕ ಕ್ರಿಯೆ.

ಇಂತಹ ವ್ಯಕ್ತಿಗಳಿಗೆ ಸಹಜ ರೀತಿಯಲ್ಲಿ, ಸಹಕರಿಸುವ ಜೀವನ ಸಂಗಾತಿ ಜೊತೆಗೆ ಸಂಭೋಗ ಮಾಡುವುದು ರುಚಿಸುವುದೇ ಇಲ್ಲ.

**ಮದ್ಯಪಾನ–ಮಾದಕವಸ್ತುಗಳ ಸೇವನೆಯ ಅಮಲು**

ಶೇಕಡ ೩೦ರಿಂದ ೪೦ರಷ್ಟು ಅತ್ಯಾಚಾರಿಗಳು, ಅತ್ಯಾಚಾರಕ್ಕೆ ಮುಂದಾದಾಗ, ಅತ್ಯಾಚಾರ ಕ್ರಿಯೆಯಲ್ಲಿ ತೊಡಗಿದಾಗ ಆಲ್ಕೋಹಾಲ್ ಸೇವಿಸಿರುತ್ತಾರೆ (ಬೀರ್, ಬ್ರಾಂದಿ, ಸಾರಾಯಿ, ವಿಸ್ಕಿ, ರಮ್ ಇತ್ಯಾದಿಗಳು) ವ್ಯಕ್ತಿಯ ವಿವೇಚನೆಯನ್ನು ಹಾಳುಮಾಡುತ್ತವೆ. ಸರಿತಪ್ಪುಗಳ ಬಗ್ಗೆ ಯೋಚಿಸುವ ಶಕ್ತಿಯನ್ನು ಕಸಿದುಕೊಳ್ಳುತ್ತವೆ. ಆಲ್ಕೋಹಾಲ್ ಸೇವಿಸಿ, ಲೈಂಗಿಕ ಕ್ರಿಯೆಯಲ್ಲಿ ತೊಡಗಿದರೆ ಹೆಚ್ಚು ಸುಖ–ಮಜ ಸಿಗುತ್ತದೆ ಎಂಬ ತಪ್ಪು ನಂಬಿಕೆ ನಮ್ಮ ಜನರಲ್ಲಿದೆ. ಕುಡಿದ ಅಮಲಿನಲ್ಲಿ ಅನೇಕ ಪುರುಷರು, ತಮ್ಮ ಹೆಂಡತಿಯ ಮೇಲೆ ಬಲಾತ್ಕಾರ ಸಂಭೋಗ ನಡೆಸುತ್ತಾರೆ. ಹಾಗೆಯೇ ಗಾಂಜಾ, ಭಂಗಿ, ಅಫೀಮು, ಹೆರಾಯಿನ್, ಬ್ರೌನ್ ಶುಗರ್, ಕೊಕೇನ್ ಮುಂತಾದ ಮಾದಕ ವಸ್ತುಗಳನ್ನು ಸೇವಿಸಿ, ಆ ಮಾದಕವಸ್ತು ನೀಡುವ ಮಜದ ಜೊತೆಗೆ ಲೈಂಗಿಕ ಸುಖವನ್ನು ಸೇರಿಸಿ ಅನುಭವಿಸಲು ಪ್ರಯತ್ನ ಮಾಡುತ್ತಾರೆ.

ಬಾರ್‌ನಲ್ಲೋ, ವೈನ್ ಶಾಪಿನಲ್ಲೋ ಕುಡಿದು, ಆ ಅಮಲಿನಲ್ಲಿ ಮನೆಗೆ ವಾಪಸ್ ಬರುವಾಗ ದಾರಿಯಲ್ಲಿ ಅಥವಾ ನಿರ್ಜನ ಪ್ರದೇಶದಲ್ಲಿ ಒಂಟಿ ಹೆಂಗಸನ್ನು ಕಂಡರೆ ಅತ್ಯಾಚಾರ ಎಸಗುವುದಕ್ಕೆ ಅನೇಕರು ಹಿಂಜರಿಯುವುದಿಲ್ಲ. ರಾತ್ರಿವೇಳೆ ರೈಲು, ಬಸ್ಸಿನಲ್ಲಿಯೂ ವ್ಯಾಪಾರ ಎಸಗುವವರೂ ಇಲ್ಲದಿಲ್ಲ.



**ವ್ಯಕ್ತಿತ್ವ ದೋಷ** (PERSONALITY DISORDER)

ಸಮಾಜ ವಿರೋಧಿ ವ್ಯಕ್ತಿತ್ವ ದೋಷ (ASPD = Antisocial personality disorder, passive Aggressive personality disorder = ಅಪರೋಕ್ಷ, ಆಕ್ರಮಣಶೀಲತೆಯ ವ್ಯಕ್ತಿತ್ವ ದೋಷ) ಬಾರ್ಡರ್ ಲೈನ್ ವ್ಯಕ್ತಿತ್ವ ದೋಷವುಳ್ಳ ವ್ಯಕ್ತಿಗಳೂ ಇತರೆ ಜನಸಾಮಾನ್ಯರಿಗೆ ಹೋಲಿಸಿದರೆ, ಲೈಂಗಿಕ ಅಪರಾಧಗಳಲ್ಲಿ ತೊಡಗುವ ಸಂಭವವೇ ಹೆಚ್ಚು.

**ಮರೆವಿನ ಕಾಯಿಲೆ** – DEMENTIA

೫೦ ವರ್ಷವಾದ ಮೇಲೆ, ಮರೆವಿನ ಕಾಯಿಲೆ (ಡೆಮೆನ್ಷಿಯ) ಬರುತ್ತದೆ. ಆಲ್‌ಜೈಮರ್ ಕಾಯಿಲೆ, ಪಾರ್ಕಿನ್‌ಸನ್ ಕಾಯಿಲೆ ಮಿದುಳಿನಲ್ಲಿ ಗೆಡ್ಡೆ (ಮುಖ್ಯವಾಗಿ ಮಿದುಳಿನ ಮುಂಭಾಗದಲ್ಲಿ), ಮಿದುಳಿನಲ್ಲಿ ರಕ್ತಸ್ರಾವ ಇವು ಡೆಮೆನ್ಷಿಯಾಗೆ ಕಾರಣ. ತಾವೇನು ಮಾಡುತ್ತಿದ್ದೇವೆಂಬ ಅರಿವಿಲ್ಲದೆ, ಡೆಮೆನ್ಷಿಯದಿಂದ ನರಳುತ್ತಿರುವ ರೋಗಿ ಲೈಂಗಿಕ ಅತ್ಯಾಚಾರವನ್ನು ಮಾಡಬಹುದು. ಲೈಂಗಿಕ ಬಯಕೆಯನ್ನು ಹತೋಟಿಯಲ್ಲಿಡಲು, ರೋಗಿಯ ಮನಸ್ಸು ವಿಫಲವಾಗುತ್ತದೆ.

**ಮನೋರೋಗಗಳು**

ಸ್ಕಿಜೋಫ್ರೀನಿಯಾ, ಮೇನಿಯಾದಂತಹ ತೀವ್ರ ಮಾನಸಿಕ ರೋಗಿಗಳಿಂದ ಬಳಲುವವರು ಭ್ರಮೆ, ತಪ್ಪು ಕಲ್ಪನೆ, ಕೋಪ, ಆಕ್ರಮಣಶೀಲತೆಗಳಿಂದಾಗಿ, ವಿವೇಚನೆ ಕಳೆದುಕೊಂಡು ಲೈಂಗಿಕ ಅತ್ಯಾಚಾರ ಮಾಡಬಹುದು. ಇದನ್ನು ಅವರು ಬಹಿರಂಗವಾಗಿ ಎಲ್ಲರೆದುರಿಗೇ ಮಾಡಬಹುದು. ತಮ್ಮ ಕೃತ್ಯವನ್ನು ಮುಚ್ಚಿಡಲು ಪ್ರಯತ್ನಿಸದೆಯೂ ಇರಬಹುದು. ಪ್ಯಾರನಾಯಿಡ್ ಮತ್ತು ಸ್ಕಿಜೋಫ್ರೀನಿಯಾ ರೋಗಗಳಲ್ಲಿ ರೋಗಿ ಒಂದು ನಿರ್ದಿಷ್ಟ ಸ್ತ್ರೀಯ ಮೇಲೆ ದ್ವೇಷ ಸಾಧಿಸುತ್ತ, ಆಕೆಯ ಮೇಲೆ ಸಂಶಯಪಡುತ್ತ, ಆಕೆ ತನಗೆ ಹಾನಿಯುಂಟುಮಾಡಲು, ಕೊಲ್ಲಲು ಪ್ರಯತ್ನ ಮಾಡುತ್ತಿದ್ದಾಳೆಂಬ ಭ್ರಮೆಯಲ್ಲಿ ನಂಬುತ್ತಾ (ಇದು ಅವಾಸ್ತವ, ಬದಲಿಸಲಾಗದ ತಪ್ಪು ನಂಬಿಕೆ) ಆಕೆಯ ಮೇಲೆ ಅತ್ಯಾಚಾರವೆಸಗಬಹುದು. ಮೇನಿಯಾ ರೋಗಿ ತಾನು ಸೂಪರ್‌ಮ್ಯಾನ್, ತನ್ನ ಲೈಂಗಿಕ ಶಕ್ತಿ ಅಪರಿಮಿತ. ಯಾವುದೇ ಸ್ತ್ರೀ ತನ್ನೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗಿಕೊಂಡರೆ ಅಪೂರ್ವ ಆನಂದವನ್ನುಂಟುಮಾಡುವಳು. ಅಲ್ಲದೆ ಅಂತಹ ಆನಂದವನ್ನು ತಾನೂ ಅನುಭವಿಸುತ್ತಾಳೆಂದು ನಂಬಿ ಬಲಾತ್ಕಾರಕ್ಕೆ ಸಿದ್ಧನಾಗಬಹುದು.

ಹೀಗೆ ಅತ್ಯಾಚಾರ ಮಾಡುವ ವ್ಯಕ್ತಿ, ತನ್ನದೇ ಆದ ಕಾರಣಗಳು ಮತ್ತು ಮನಃಸ್ಥಿತಿಯಿಂದ ಪರಿಸರದ ಪ್ರಚೋದನೆಗಳಿಂದ ಯಾವುದೇ ವಿವೇಚನೆ ಇಲ್ಲದೆ ಅತ್ಯಾಚಾರವನ್ನೆಸಗುತ್ತಾನೆ.

**ನಿವಾರಣೆ–ಪ್ರತಿಬಂಧಕ ಉಪಾಯಗಳು**

* ಆಹಾರ ಸೇವನೆ, ನಿದ್ರೆಯೂ ಸೇರಿದಂತೆ ಜೀವನದ ಪ್ರತಿಯೊಂದು ಕೆಲಸಗಳಲ್ಲಿ, ಚಟುವಟಿಕೆಯಲ್ಲಿ ಶಿಸ್ತು–ಸಂಯಮಗಳನ್ನು ಬೆಳೆಸಿಕೊಳ್ಳಬೇಕು.
* ಹರೆಯಕ್ಕೆ ಬರುತ್ತಿದ್ದಂತೆ ಲೈಂಗಿಕ ಆಸೆ–ಅಭಿವ್ಯಕ್ತಿಯ ಬಗ್ಗೆ ಮಾಹಿತಿ, ಸಂಯಮವನ್ನು ಸಾಧಿಸಬೇಕು.
* ಸ್ತ್ರೀಯರನ್ನು ಗೌರವಿಸುವುದು.
* ಲೈಂಗಿಕ ಪ್ರಚೋದನೆಗಳನ್ನು ನಿವಾರಿಸುವುದು. ಅಗತ್ಯವಿದ್ದರೆ ಸಾತ್ವಿಕ ಸಂಯಮದ ಜೀವನ ನಡೆಸಲು ತರಪೇತಿ ಪಡೆಯಬೇಕು.
* ಏಕ ಲೈಂಗಿಕ ಸಂಗಾತಿಯೊಂದಿಗೆ ಮಾತ್ರ ಕಾಮಕ್ರಿಯೆ ನಡೆಸಿ ತೃಪ್ತಿಪಡುವುದನ್ನು ರೂಢಿಸಿಕೊಳ್ಳಬೇಕು.
* ಹದ್ದುಮೀರಿದ ಮಾಧ್ಯಮಗಳ ಚಾನಲ್‌ಗಳಿಗೆ ಲಗಾಮು ಹಾಕಬೇಕು. ಬ್ಲೂಫಿಲ್ಮ್‌ಗಳನ್ನು ನಿಷೇಧಿಸಬೇಕು.
* ಅತ್ಯಾಚಾರಿಗೆ ಗರಿಷ್ಠ ಮಟ್ಟದ ಶಿಕ್ಷೆ ವಿಧಿಸಬೇಕು.
* ಸ್ವರಕ್ಷಣೆಗೆ ಮಕ್ಕಳಿಂದ ಹಿಡಿದು ಎಲ್ಲ ಸ್ತ್ರೀಯರಿಗೆ ತರಪೇತಿ.
* ಸಮಾಜದಲ್ಲಿ ಸ್ತ್ರೀಯರಿಗೆ ಸಮಾನ ಸ್ಥಾನಮಾನ–ಗೌರವಗಳು.


**ಡಾ॥ ಸಿ. ಆರ್. ಚಂದ್ರಶೇಖರ್**
# ೩೮, ೨ನೇ ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಕಾಲೋನಿ, ಅರಕೆರೆ
ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೫೬೦ ೦೭೬





# ಮತ್ತೆ ಗಾಂಧಿ ಬರುತ್ತಾರೆ



ಯಾರೋ ಅಂದರು
ಮತ್ತೆ ಗಾಂಧಿ ಬರುತ್ತಾರೆಂದು.

ಎಲ್ಲ ನಿಲ್ದಾಣಗಳಿಗೂ ಬಂತು ಜೀವ
ವಿಮಾನ, ಬಸ್ಸು, ರೈಲು ನಿಲ್ದಾಣಗಳ ಮುಂದೆ
ಅರಳಿದವು ರಂಗೋಲಿ,
ನಳನಳಿಸಿದವು ತಳಿರು ತೋರಣ
ಧೂಳು ಕೊಡವಿಕೊಂಡು
ತಲೆಯೇರಿದವು ಬಿಳಿ ಟೊಪ್ಪಿಗೆಗಳು
ಸರಕಿನರಮನೆಯಿಂದ ಬಂದವು
ಚರಕ ಲಡಿ ನೂಲುಗಳು.

'ಗಾಂಧಿ ಎಲ್ಲಿಂದ ಬರಬಹುದು ? ಹೇಗೆ ?'
ಯಾರೋ ಕೇಳಿದರು
ದಕ್ಷಿಣ ಆಫ್ರಿಕೆಯಿಂದ; ನ್ಯೂಯಾರ್ಕ್‌ನಿಂದ –
ಚೆಚೇನಿಯಾ ? ಕಾರ್ಗಿಲ್
ನೌಖಾಲಿಯಿಂದ ?
ಇನ್ಯಾರೋ ಅಂದರು,
'ಮೊನ್ನೆ ನಾನೇ ನೋಡಿದೆ ಮಂಡೇಲನ ಕೈ ಕುಲುಕಿ
ಆಫ್ರಿಕೆಯಲ್ಲಿದ್ದರು' ! – ಎಂದು
ಇನ್ನೊಬ್ಬ 'ಕಾರ್ಗಿಲ್ ಬೀದಿಯಲಿ
ವರ್ಲ್ಡ್ ಟ್ರೇಡ್ ಸೆಂಟರ್‌ನಲ್ಲಿ ಏನೇನೋ
ಹುಡುಕುತಾ ಇರುವುದ ನಾನೇ ಕಂಡೆ
ಸಿಕ್ಕಿರಬಹುದು ಅದು. ಅವರು ಬಂದರೆ
ಅಲ್ಲಿಂದಲೇ ವಾಘಾಗಡಿಯ ದಾಟಿ ಬರಬಹುದು.'

ಬಿಹಾರದ ಕ್ರಿಸ್ತ ಪಾದ್ರಿಯ ಗಾಯಗಳ ಬಳಿ
ಇಸ್ಲಾಮಾಬಾದ್‌ನ ಬೀದಿಗಳಲಿ
ಲಾಡೆನ್, ಒಬಾಮಾ ಜೊತೆಯಲಿ
ಕಂಡೆವೆನ್ನುವರು ಹಲವರು
ಅವರು ಬಂದರೆ ಅಲ್ಲಿಂದಲೇ ಬರಬಹುದು
ಯಾರಿಗೂ ಖಚಿತವಿಲ್ಲ.
ಹಾಗೆಂದೇ ಎಲ್ಲ ಮೂಲೆಗಳ
ಎಲ್ಲ ನಿಲ್ದಾಣಗಳಿಗೂ ಬಂತು ಜೀವ.

'ಬರಲಿ ಎಲ್ಲಿಂದಲಾದರೂ ಗಾಂಧಿ'
ಎಲ್ಲ ನಿಲ್ದಾಣಗಳಲ್ಲೂ ಇರಲಿ ಗುಂಡು ನಿರೋಧಕ
ವಾಯಪಡೆ, ಸೇನಾಪಡೆ
ಅಶ್ವ, ಶ್ವಾನದಳ ಇರಲಿರಲಿ ಕಟ್ಟೆಚ್ಚರ
ಇದ್ದೇ ಇರಬೇಕೊಂದು
ಆಂಬ್ಯುಲೆನ್ಸ್

ದೇಶದ ತುಂಬ ಮೊಳಗುವ
ಸೈರನ್ನಿನ ಸದ್ದು;
ಪಥ ಸಂಚಲನದ ಬೂಟು
ಸಾಲಾಗಿ ಬಂದು ನಿಲ್ಲುವ ಗೂಟಗಳ ಕಾರು
ಭಾಷಣಗಳ ಟೈಪಿಸುವ ಸದ್ದು
ವೃತ್ತಪತ್ರಿಕೆ ಚಾನಲ್‌ಗಳ ಧಾವಂತ

ಬರುವ ರೈಲುಗಳು ಬಂದವು; ಬಸ್ಸುಗಳು,
ವಿಮಾನಗಳು ಏರಿಳಿದು ಉಬ್ಬಸಪಟ್ಟವು
ಇಣುಕಿಣುಕಿ ಹೂ ಹಿಡಿದ ಗೋಣುಗಳು
ಗೋಣಗಾಡಿದವು.
ಸದ್ದಡಗುತ್ತ ಬಂದ ಪಥಸಂಚಲನ
ದೇಶಕ್ಕೆ ಶತಮಾನದ ದಣಿವಿನ ನಿದ್ದೆ
ಮಂಪರು ಹತ್ತಿ ಮಂದಿ
ಅಲ್ಲಲ್ಲೇ ಉರುಳಿದರು.

ಬಂದರು ಗಾಂಧಿ !
ಟಾಂಗಾದ ಮೆಟ್ಟಿಲಿಳಿದು
ಬಡವಾದ ಕುದುರೆಯ ಮೈಸವರಿ
'ಅಚ್ಛಾ ! ನೀನಿನ್ನು ಹಿಂದೆ ಹೋಗು
ಎಳೆಯಲಾರದು ಈ ಮುದಿ ಕುದುರೆ
ನಡೆದೇ ಹೋಗುವೆ' – ಎಂದು ಕುದುರೆಯ
ಮೈದಡವಿದರು
ನೌಖಾಲಿ ಕಡೆ ಹೆಜ್ಜೆ ಹಾಕಿದರು.

ಮೊಗ್ಗುಗಳು ಪಟಪಟ ಬಿರಿದವು
ಹಕ್ಕಿ ಪಾರಿವಾಳಗಳು ಹಾಡಿದವು
ಹಸುವಿನ ಗಂಟೆ ಕಿಣಿ ಕಿಣಿಸಿತು.
ಸೂರ್ಯ ಸಂಜೆಗೆ ಇಳಿವ ಹೊತ್ತು
ಬೀಸುಗಾಲಿನ ಗಾಂಧಿ ಕಿವಿಗೆ ಕೇಳಿಸಲಿಲ್ಲ
ಭಜನೆ, ಸಂಕೀರ್ತನೆ ಸುಶ್ರಾವ್ಯ ಹಾಡು.
ಕೇಳಿದರೂ ಒಡೆದ ಗ್ರಾಮಫೋನಿನ ಹಾಡು.
'ಹೇ ರಾಮ್' ಎನ್ನುತ್ತ
ದಿಕ್ಕು ಬದಲಿಸಿ ನಡೆಯುತ್ತಾ ಹೋಗೇಬಿಟ್ಟರು
ಗಾಂಧಿ.
ನೌಖಾಲಿಗೊ... ನಾಗಸಾಕಿಗೋ
ಬುದ್ಧ ಗಯೆಗೋ...


**ಡಾ|| ಲೋಕೇಶ ಅಗಸನಕಟ್ಟೆ**
'ದಶಮಿ', ತರಳಬಾಳು ಬಡಾವಣೆ
ಚಿತ್ರದುರ್ಗ – ೫೭೭ ೫೦೧




# EXPERIENCE FRIENDSHIP FINANCE

FROM




Can Fin Homes Ltd
(Sponsor : CANARA BANK)









- Sound, Transparent & Ethical practices
- Personalized services with Low "TAT"
- AAA rating for NCD's/Loans
- A1+ rating for Commercial Paper
- MAAA rating for Deposits
- Interest rates from 9.60% onwards
- Personal Loans/Loan Against Property from 13.00% onwards
- Customer Portal/Missed Call facilities
- 23 Branches (Total:106) & 6 Satellite Offices opened in 2014-15
- SMS alert/ECS/Online application
- Attractive Deposit scheme with rate of interest upto 9.75%

# FINANCIAL HIGHLIGHTS

Rs. in Crores

| PARTICULARS | Year Ended (Audited Results) | | | Half-Yearly (Audited Results) 30/09/14 (6 Months) |
|---|---|---|---|---|
| | 31/03/12 (12 Months) | 31/03/13 (12 Months) | 31/03/14 (12 Months) | |
| 1. Loan Sanctioned | 1105.41 | 2092.65 | 2907.27 | 1847.32 |
| 2. Loan Disbursed | 859.07 | 1813.77 | 2548.39 | 1617.03 |
| 3. Loan Book Size | 2674.39 | 4016.15 | 5844.00 | 7036.69 |
| 4. Gross NPA (%) | 0.71 | 0.39 | 0.21 | 0.28 |
| 5. Net Interest Income | 83.71 | 95.69 | 134.29 | 77.25 |
| 6. Profit Before Tax & Provisions | 68.36 | 73.71 | 111.32 | 63.67 |
| 7. Profit After Tax | 43.76 | 54.12 | 75.71 | 37.41 |
| 8. Earning Per Share (FV:Rs.10/-) | 21.36 | 26.42 | 36.96 | 18.26 |
| 9. Reserves & Surplus | 327.09 | 371.68 | 431.82 | 469.14 |
| 10. Book Value per share (in Rs.) | 170 | 191 | 221 | 239 |

*This is an abridged representation of the Audited result and not for the purpose of legal compliance.*



*Details of financials for the last 5 years available in our website **www.canfinhomes.com** in Investors Page.*




Can Fin Homes Ltd
(Sponsor : CANARA BANK)
HOME LOANS ✦ DEPOSITS
*Translating Dreams into Reality*

Regd. Office : No. 29/1, Sir. M N Krishna Rao Road, Lalbagh West, Basavanagudi, Bangalore – 560 004
• Tel : (080) 2657 0155 • Fax : (080) 2656 5746 • E-mail : development@canfinhomes.com
CIN : L85110KA1987PLC008699

# ಬದಲಾವಣೆ ಹಳ್ಳಿಗಳಿಂದ ಆಗಬೇಕು

ಎಸ್. ಆರ್. ಹಿರೇಮಠ ಅವರ ಹೆಸರು ರಾಜ್ಯದ ಸಾರ್ವಜನಿಕ ಬದುಕಿನಲ್ಲಿ ಚಿರಪರಿಚಿತವಾದದ್ದು. ನಾಡಿನ ನೆಲ, ಜಲ, ನಿಸರ್ಗ ಸಂಪತ್ತಿನ ರಕ್ಷಣೆಗಾಗಿ, ಭ್ರಷ್ಟಾಚಾರಿಗಳನ್ನು ಬೀದಿಗೆಳೆಯಲು ನಿರಂತರ ಹೋರಾಟ ನಡೆಸಿದವರು ಇವರು. ಅದರಲ್ಲೂ ಕರ್ನಾಟಕದ ಲೋಕಾಯುಕ್ತರಾಗಿದ್ದ ನ್ಯಾಯಮೂರ್ತಿ ಸಂತೋಷ ಹೆಗಡೆಯವರು ರಾಜ್ಯದ ಅಕ್ರಮ ಗಣಿಗಾರಿಕೆಯ, 'ಬಳ್ಳಾರಿ ರಿಪಬ್ಲಿಕ್'ನ ದುರಾಡಳಿತ ಗಳನ್ನು ತಮ್ಮ ವರದಿಯ ಮೂಲಕ ಬಯಲಿಗೆಳೆದ ಮೇಲೆ ಅದನ್ನು ತಾರ್ಕಿಕ ಅಂತ್ಯದವರೆಗೆ ನ್ಯಾಯಾಂಗದ ಹೋರಾಟದ ಮೂಲಕ ಕೊಂಡೊಯ್ದವರು ಎಸ್. ಆರ್. ಹಿರೇಮಠರು. ಸರ್ವೋಚ್ಚ ನ್ಯಾಯಾಲಯದಲ್ಲಿ ಪಿ. ಐ. ಎಲ್. ದಾಖಲಿಸಿ ಅಕ್ರಮ ಗಣಿಗಾರಿಕೆಗೆ ಸಮರ್ಥ ಸಾಕ್ಷ್ಯಗಳನ್ನು ಒದಗಿಸಿ ಅಪರಾಧಿಗಳ ವಿಚಾರಣೆ ನಡೆಯಲು, ಅಕ್ರಮ ಗಣಿಗಾರಿಕೆಗೆ ತಡೆಯೊಡ್ಡಲು ಮಹತ್ವದ ಪಾತ್ರ ವಹಿಸಿದವರು. ಇಂದಿಗೂ ಆಡಳಿತ ಹಾಗೂ ವಿರೋಧ ಪಕ್ಷಗಳ ರಾಜಕಾರಣಿಗಳ, ಅಧಿಕಾರಿಗಳ ಭ್ರಷ್ಟಾಚಾರವನ್ನು ಬೀದಿಗೆಳೆಯುವಲ್ಲಿ ನಿರಂತರ ಕ್ರಿಯಾಶೀಲರಾಗಿದ್ದಾರೆ. ಹಿರೇಮಠ ಅವರದು ಕೇವಲ ಪ್ರತಿರೋಧದ ಚಳುವಳಿ ಮಾತ್ರವಲ್ಲ, ಕ್ರಿಯೆ ಆಧಾರಿತ, ನೆಮ್ಮದಿಯ ಬದುಕಿನ ಪರ್ಯಾಯ ರೂಪಿಸುವ ಆಶಯ ಹೊಂದಿರುವ ಕ್ರಿಯಾಶೀಲತೆ ಎಂಬುದು ಅವರ ಬದುಕಿನ ಪಯಣವನ್ನು ಗಮನಿಸಿದರೆ ವೇದ್ಯವಾಗುತ್ತದೆ.

ಸಂಗಯ್ಯ ರಾಚಯ್ಯ ಹಿರೇಮಠ ಅವರು ಅಂದಿನ ಧಾರವಾಡ ಜಿಲ್ಲೆಯ (ಇಂದಿನ ಗದಗ ಜಿಲ್ಲೆ) ರೋಣ ತಾಲ್ಲೂಕಿನ ಬೆಳವಣಕಿ ಎಂಬ ಗ್ರಾಮದಲ್ಲಿ ೫-೧೧-೧೯೪೪ರಲ್ಲಿ ಜನಿಸಿದವರು. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ಅವರು ತಾಯಿ ರಾಚವ್ವ ಅವರ ತವರೂರಾದ ವಿಜಾಪುರ (ವಿಜಯಪುರ)ದಲ್ಲಿ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸ ಆರಂಭಿಸಿದರು. ವಿಜಯಪುರದ ಎಸ್. ಎಸ್. ಹೈಸ್ಕೂಲ್, ವಿಜಯಾ ಕಾಲೇಜ್‌ನಲ್ಲಿ ಪ್ರೌಢ ಮತ್ತು ಪದವಿಪೂರ್ವ ವಿದ್ಯಾಭ್ಯಾಸ ಮಾಡಿ, ಹುಬ್ಬಳ್ಳಿಯ ಬಿ. ವಿ. ಬಿ. ಇಂಜಿನಿಯರಿಂಗ್ ಕಾಲೇಜ್‌ನಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ಪದವಿ ಪಡೆದರು. ಅದೇ ಕಾಲೇಜ್‌ನಲ್ಲಿ ೧೯೬೭-೧೯೬೮ರಲ್ಲಿ ಉಪನ್ಯಾಸಕನಾಗಿದ್ದರೂ ಅದನ್ನು ಬಿಟ್ಟು ಅಮೆರಿಕಾಕ್ಕೆ ಹೋಗಿ ಕನ್ಸಾಸ್ ಹಾಗೂ ಚಿಕಾಗೊ ವಿಶ್ವವಿದ್ಯಾಲಯಗಳಲ್ಲಿ ಎಂ. ಎಸ್. ಮತ್ತು ಎಂ.ಬಿ.ಎ. ಪದವಿ ಪಡೆದರು. ಮೂಲತಃ ಬಡ ಕುಟುಂಬದಿಂದ ಬಂದ ಹಿರೇಮಠರು ತಮ್ಮ ಪೂರ್ತಿ ವಿದ್ಯಾಭ್ಯಾಸ ವನ್ನು ವಿವಿಧ ಸ್ಕಾಲರ್‌ಶಿಪ್‌ಗಳ ಮೂಲಕವೇ ಮಾಡಿದರೆಂಬುದು ಅವರ ಪ್ರತಿಭಾವಂತಿಕೆಯನ್ನು ಸೂಚಿಸುತ್ತದೆ.

೧೯೬೮ರಿಂದ ೧೯೭೯ರವರೆಗೆ ಅಮೆರಿಕ ದಲ್ಲಿನ ವಿದ್ಯಾರ್ಥಿ ಜೀವನ ಹಾಗೂ ಹಲವಾರು ಸಂಸ್ಥೆಗಳಲ್ಲಿ ಉನ್ನತ ಸ್ಥಾನದ ಉದ್ಯೋಗದಲ್ಲಿ ಇದ್ದಾಗಲೂ ಅವರು ಅಲ್ಲಿನ ವಿದ್ಯಾರ್ಥಿಗಳ ಸಂಘಟನೆ, ಅಲ್ಲಿನ ಭಾರತೀಯರ ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿ ಕೆಲಸ ಮಾಡಿದವರು.

ಸಂದರ್ಶಕರು
**ಡಾ॥ ಸಿದ್ದನಗೌಡ ಪಾಟೀಲ**
**ಶ್ರೀ ಬಸವಪ್ರಭು ಹೊಸಕೇರಿ**

ಚಿತ್ರಗಳು
**ಶ್ರೀ ಬಸವರಾಜ ಮ್ಯಾಗೇರಿ**




**ಎಸ್. ಆರ್. ಹಿರೇಮಠ**

ಭಾರತದಲ್ಲಿನ ತುರ್ತು ಪರಿಸ್ಥಿತಿಯ ವಿರುದ್ಧ ನಿರಂತರವಾಗಿ ಪ್ರತಿಭಟನೆಗಳನ್ನು ನಡೆಸಿದವರು. ೧೯೭೯ರಲ್ಲಿ ಭಾರತಕ್ಕೆ, ಕರ್ನಾಟಕಕ್ಕೆ ಬಂದರು. ಬರುವಾಗ ಅಲ್ಲಿನ ಉನ್ನತ ಸ್ಥಾನದ ಉದ್ಯೋಗಗಳನ್ನು ತೊರೆದು ತನ್ನ ತಾಯ್ನಾಡಿನಲ್ಲಿ ಜನತೆಗಾಗಿ, ದೇಶಕ್ಕಾಗಿ ಕೆಲಸ ಮಾಡಬೇಕೆಂಬ ಉನ್ನತ ಧ್ಯೇಯಗಳನ್ನಿಟ್ಟುಕೊಂಡು ಬಂದರು. ಬರುವ ಮುಂಚೆ ಅಮೆರಿಕದ ಶಾಮಲಾ (ಮಾವಿಸ್) ಎಂಬುವವರನ್ನು ಮದುವೆಯಾಗಿದ್ದರು. ಎರಡು ಮಕ್ಕಳು ಎಲ್ಲರೂ ಸೇರಿಯೇ ಬಂದರು. ಭಾರತ ಅಭ್ಯುದಯ ಸೇವಾ ಸಂಸ್ಥೆ, ಸಮಾಜ ಪರಿವರ್ತನ ಸಮುದಾಯಗಳಂಥ ಸರಕಾರೇತರ ಸಂಸ್ಥೆಗಳನ್ನು ಆರಂಭಿಸಿದರು. ಈಗ ಜನ ಸಂಗ್ರಾಮ ಪರಿಷತ್ ಮೂಲಕ ಜನಾಂದೋಲನ ನಡೆಸಿದ್ದಾರೆ. ಈ ಮೂರೂ ಸಂಸ್ಥೆ ಮತ್ತು ಸಂಘಟನೆಗಳ ಮೂಲಕ ಅವರು ನಡೆಸಿದ ಚಟುವಟಿಕೆಗಳು ಜನಜಾಗೃತಿಯಿಂದ ಜನಾಂದೋಲನವರೆಗೂ ವ್ಯಾಪಿಸಿವೆ. ಎಸ್. ಆರ್. ಹಿರೇಮಠ ಅವರ ಈ ಬಹುಮುಖಿ ಚಿಂತನೆ, ಚಟುವಟಿಕೆಗಳನ್ನು ಹೊಸತು ಓದುಗರಿಗೆ ಪರಿಚಯಿಸಲು ಡಾ|| ಸಿದ್ದನಗೌಡ ಪಾಟೀಲ ಮತ್ತು ಶ್ರೀ ಬಸವಪ್ರಭು ಹೊಸಕೇರಿಯವರು ಈ ಸಂದರ್ಶನವನ್ನು ನಡೆಸಿಕೊಟ್ಟಿದ್ದಾರೆ.

---

**ಹೊಸತು :** ನಿಮ್ಮ ಹೋರಾಟಗಳ ಕುರಿತು ಮಾಧ್ಯಮಗಳ ಮೂಲಕ ಸಾರ್ವಜನಿಕರಿಗೆ ಮಾಹಿತಿ ಇದೆ. ನಿಮ್ಮ ಖಾಸಗಿ ಬದುಕಿನ ಕುರಿತು ಸ್ವಲ್ಪ ಮಾಹಿತಿ ಕೊಡಿ.

**ಎಸ್. ಆರ್. ಹಿರೇಮಠ :** ನಾನು ಐದು ವರ್ಷದವನಿದ್ದಾಗ ನನ್ನ ತಂದೆಯವರ ನಿಧನದಿಂದಾಗಿ ನಾನು ತಾಯಿಯ ಊರಾದ ವಿಜಯಪುರದಲ್ಲಿಯೇ ಬೆಳೆದೆ. ನನ್ನ ತಾಯಿ ಸಾತ್ವಿಕ ಮನಸಿನವಳು. ವಿಜಯಪುರದ ಮಲ್ಲಿಕಾರ್ಜುನ ಸ್ವಾಮಿಗಳು, ಬಂಥನಾಳದ ಶಿವಯೋಗಿಗಳ ಭಕ್ತೆ. ತಾಯಿಯ ಜೊತೆ ಹೋದಾಗ ಆ ಮಹಾಪುರುಷರ ಉದಾತ್ತ ಮಾತುಗಳು ನನ್ನ ಮೇಲೆ ಪ್ರಭಾವ ಬೀರಿದವು. ಅವರ ಪ್ರವಚನಗಳಿಂದಾಗಿ ಸತ್ಯ, ನ್ಯಾಯಪರವಾದ ಭಾವನೆಗಳು, ಅನ್ಯಾಯವನ್ನು ಪ್ರತಿರೋಧಿಸಬೇಕೆಂಬ ಆಸಕ್ತಿ ನನ್ನಲ್ಲಿ ಮೂಡಿತು. ಅಂದುಕೊಂಡಿದ್ದನ್ನು ಸಾಧಿಸಬೇಕೆಂಬ ಛಲ ಬೆಳೆಯಿತು. ವಿಜಯಪುರದ ಹೈಸ್ಕೂಲ್‌ನಲ್ಲಿ ಗಣಿತ ಶಿಕ್ಷಕರು ನೂರಕ್ಕೆ ನೂರು ಅಂಕ ಪಡೆಯಬೇಕೆಂದು ಬೆಟ್ ಕಟ್ಟಿದ್ದರು. ನಾನು ನೂರಕ್ಕೆ ನೂರು ಅಂಕ ಪಡೆದು ಉತ್ತೀರ್ಣನಾಗಿದ್ದೆ. ನಾನು ಯಾವಾಗಲೂ ಪ್ರಶ್ನಿಸುವ ಮನೋಭಾವ ಹೊಂದಿದ್ದರಿಂದ ಆ ಶಿಕ್ಷಕರು ನನಗೆ ಈ ಸವಾಲು ಹಾಕಿದ್ದರು. ೧೯೬೧ರಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಎರಡನೇ ರ್‍ಯಾಂಕ್ ಪಡೆದಿದ್ದೆ. ಪರಿಣಾಮ ನನಗೆ ಸ್ಕಾಲರ್‌ಶಿಪ್ ಲಭ್ಯವಾಯಿತು. ವಿಜಯಪುರದ ವಿಜಯಾ ಕಾಲೇಜ್‌ನಲ್ಲಿ ಪಿ.ಯು.ಸಿ. ಅಭ್ಯಾಸ ಮಾಡಿದೆ. ಅಲ್ಲಿ ಬಂಥನಾಳ ಶಿವಯೋಗಿಗಳ ಮಾತುಗಳು, ಬಸವಣ್ಣನವರ ವಚನಗಳು ನನ್ನ ಮೇಲೆ ತೀವ್ರವಾದ ಪ್ರಭಾವ ಬೀರಿದವು. ಮುಂದೆ ಹುಬ್ಬಳ್ಳಿಯ ಇಂಜಿನಿಯರಿಂಗ್ ಕಾಲೇಜ್‌ನಲ್ಲೂ ನಾನು ಪ್ರಥಮ ರ್‍ಯಾಂಕ್‌ನಲ್ಲೇ ಪಾಸಾದೆ. ಇವೆಲ್ಲ ನನಗೆ ದೇಶದಲ್ಲೂ ವಿದೇಶದಲ್ಲೂ ಮೆರಿಟ್ ಸ್ಕಾಲರ್‌ಶಿಪ್ ಪಡೆಯಲು ಸಹಾಯಕವಾದವು.

**ಹೊಸತು :** ನೀವು ಅಮೆರಿಕಕ್ಕೆ ಹೋಗಿದ್ದೇಕೆ? ಅಲ್ಲಿನ ನಿಮ್ಮ ಚಟುವಟಿಕೆಗಳೇನಾಗಿದ್ದವು?

**ಎಸ್. ಆರ್. :** ನಾನು ವಿಜಯಪುರದ ಹೈಸ್ಕೂಲ್‌ನಲ್ಲಿದ್ದಾಗ ನಮ್ಮ ಶಾಲೆಗೆ ಅಂದಿನ ಮುಖ್ಯಮಂತ್ರಿ ಬಿ. ಡಿ. ಜತ್ತಿಯವರು ಬಂದಿದ್ದರು. ಅದೇ ಸಂದರ್ಭದಲ್ಲಿ ಮುಂಬೈನ ಐ.ಐ.ಟಿ.ಯಿಂದ ಶರಣ ನಂದಿಯವರೂ ಬಂದಿದ್ದರು. ಪರಿಚಯವಾಗಿತ್ತು. ನಾನು ಹುಬ್ಬಳ್ಳಿಯಲ್ಲಿ ಇಂಜಿನಿಯರಿಂಗ್ ಮುಗಿಸಿ ಅದೇ ಕಾಲೇಜ್‌ನಲ್ಲಿ ಉಪನ್ಯಾಸಕನಾಗಿದ್ದೆ. ಆಗ ನಂದಿಯವರು ಅಮೆರಿಕದಲ್ಲಿದ್ದರು. ಅವರ ಪ್ರೋತ್ಸಾಹ ಮತ್ತು ಪ್ರಯತ್ನದಿಂದ ನಾನು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಅಮೆರಿಕಕ್ಕೆ ಹೋದೆ. ೧೯೬೯ರಿಂದ ೧೯೭೭ರವರೆಗೆ ಅಲ್ಲಿ ಎಂ.ಎಸ್. ಮತ್ತು ಎಂ.ಬಿ.ಎ. ಪದವಿ ಪಡೆದೆ. ವಿದ್ಯಾಭ್ಯಾಸ ಮಾಡುವಾಗಲೇ

೧೯೬೯ರಲ್ಲಿ ಕಾನ್ಸಾಸ್ ಸ್ಟೇಟ್ ಯೂನಿವರ್ಸಿಟಿಯಲ್ಲಿ ಇಂಡಿಯಾ ವಿದ್ಯಾರ್ಥಿಗಳ ಸಂಘಟನೆಯ ಕಾರ್ಯದರ್ಶಿಯಾದೆ. ೧೯೭೦-೭೨ರ ಅವಧಿಯಲ್ಲಿ ಫೆಡರೇಶನ್ ಆಫ್ ಇಂಡಿಯಾ ಸ್ಟೂಡೆಂಟ್ಸ್ ಅಸೋಸಿಯೇಶನ್ ಆಫ್ ಅಮೆರಿಕದ ಕಾರ್ಯದರ್ಶಿಯಾದೆ. ಅದು ಚಿಕಾಗೊದಲ್ಲಿ. ಮುಂದೆ ಇಂಡಿಯಾ ಲೀಗ್ ಆಫ್ ಅಮೆರಿಕ ಹೀಗೆ ಹಲವಾರು ಸಂಘಟನೆಗಳಲ್ಲಿ ತೊಡಗಿಸಿಕೊಂಡೆ. ೧೯೭೪-೧೯೭೭ರ ಅವಧಿಯಲ್ಲಿ ನಾವು ಕೆಲವು ಸ್ನೇಹಿತರು ಸೇರಿ ಇಂಡಿಯಾ ಡೆವಲಪ್‌ಮೆಂಟ್ ಸರ್ವೀಸ್ (ಐ.ಡಿ.ಎಸ್.) ಸಂಸ್ಥೆಯನ್ನು ಚಿಕಾಗೊದಲ್ಲಿ ಆರಂಭಿಸಿದೆವು. ಅದರ ಆರಂಭಿಕ ಅಧ್ಯಕ್ಷನಾಗಿದ್ದೆ. ಈ ಸಂದರ್ಭದಲ್ಲಿ ಅಮೆರಿಕದ ಭಾರತೀಯರ ಜೊತೆ ಮತ್ತು ಇತರ ಸರಕಾರಿ, ಸರಕಾರೇತರ ಸಂಘ ಸಂಸ್ಥೆಗಳ ಜೊತೆ ಸಂಪರ್ಕ ಬಂದಿತು. ಭಾರತದ ಹಲವಾರು ಸಂಸ್ಥೆಗಳೊಂದಿಗೂ ಸಂಪರ್ಕ ಉಂಟಾಯಿತು. ಆಗ ಕ್ಯಾಲಿಫೋರ್ನಿಯಾದಲ್ಲಿದ್ದ ಪ್ರೊ॥ ಪಿ. ಕೆ. ಮೆಹತಾ ಮತ್ತು ಇಂಗ್ಲೆಂಡಿನಲ್ಲಿದ್ದ 'ಸ್ಮಾಲ್ ಈಸ್ ಬ್ಯೂಟಿಫುಲ್' ಕೃತಿಯ ಲೇಖಕ ಡಾ॥ ಇ. ಎಫ್. ಶೂಮಾಕರ್ ಅವರ ಜೊತೆ ಒಡನಾಟ ಬೆಳೆಯಿತು. ಇದೇ ಸಂದರ್ಭದಲ್ಲಿ ನಾನು ಅಮೆರಿಕದ ಹಲವಾರು ಸಂಸ್ಥೆಗಳಲ್ಲಿ ರಿಸರ್ಚ್ ಅನಲಿಸ್ಟ್ ಆಗಿ, ಮ್ಯಾನೇಜರ್ ಆಗಿ, ನಿರ್ದೇಶಕನಾಗಿ ಕೆಲಸ ಮಾಡುತ್ತಿದ್ದೆ. ಮುಖ್ಯವಾಗಿ ನನ್ನದು ಇಂಜಿನಿಯರಿಂಗ್ ಮ್ಯಾನೇಜ್‌ಮೆಂಟ್ ಬ್ಯಾಕ್‌ಗ್ರೌಂಡ್.

**ಹೊಸತು :** ನೀವು ಅಮೆರಿಕದಲ್ಲಿದ್ದಾಗ ಭಾರತೀಯ ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳ ಕುರಿತು ಅಲ್ಲಿನ ಭಾರತೀಯರ ಚಿಂತನೆ ಹೇಗಿತ್ತು ?

**ಎಸ್. ಆರ್ :** ಭಾರತದಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ತುರ್ತುಪರಿಸ್ಥಿತಿ ಘೋಷಿಸಿದಾಗ ಅಮೆರಿಕದಲ್ಲಿನ ಬಹುತೇಕ ಭಾರತೀಯರಿಗೆ ಆತಂಕ, ಆಕ್ರೋಶ ಉಂಟಾಗಿತ್ತು. ನಾವು ನಿರಂತರವಾಗಿ ಭಾರತದಲ್ಲಿನ ವಿದ್ಯಮಾನಗಳ ಬಗ್ಗೆ ಮಾಹಿತಿ ತರಿಸಿಕೊಳ್ಳುತ್ತಿದ್ದೆವು. ೧೯೭೫ ಏಪ್ರಿಲ್‌ನಲ್ಲಿ ಯು. ಆರ್. ಅನಂತಮೂರ್ತಿ ಅಲ್ಲಿಗೆ ಬಂದಿದ್ದರು. ಹಯವದನ ನಾಟಕ ಪ್ರದರ್ಶನ ಹಾಗೂ ಭಾರತದಲ್ಲಿನ ಸ್ಥಿತಿಗತಿಗಳ ಕುರಿತು ಚರ್ಚೆ ಏರ್ಪಡಿಸಿದ್ದೆವು. ಸುಮಾರು ೨೦ ಜನ ಭಾರತೀಯರು ಚರ್ಚೆಯಲ್ಲಿ ಭಾಗವಹಿಸಿದ್ದರು. ಆನಂದಕುಮಾರ, ರವಿ ಛೋಪ್ರಾ, ಶರಣ ನಂದಿ ಎಲ್ಲರೂ ಸೇರಿ ಭಾರತದಲ್ಲಿ ಮಾನವ ಹಕ್ಕು ಉಲ್ಲಂಘನೆ ಎಂಬ ೧೧೦ ಪುಟದ ಮಾಹಿತಿ ಪುಸ್ತಕ ಸಿದ್ಧಪಡಿಸಿ ಪ್ರಚಾರ ಮಾಡಿದೆವು. ಕರಪತ್ರ, ಜಾಥಾ ಮುಂತಾದ ಕಾರ್ಯಕ್ರಮ ಹಮ್ಮಿಕೊಂಡಿದ್ದೆವು. ಭಾರತದ ಅಂಬಾಸಿಡರ್ ಆಗಿದ್ದ ಪಿ. ಎನ್. ಕೌಲ್ ನಮ್ಮ ಚಟುವಟಿಕೆಗಳನ್ನು ವಿರೋಧಿಸಿದರು. ಜನವರಿ ೨೬, ೧೯೭೬ರಂದು ಅಮೆರಿಕಾದ ವಿವಿಧ ನಗರಗಳಲ್ಲಿ ಭಾರತದ ತುರ್ತುಪರಿಸ್ಥಿತಿಯ ವಿರುದ್ಧ ಪ್ರಚಾರ ಮಾಡಿದೆವು. ಕುಲದೀಪ ನಯ್ಯರ್ ಬಂಧನ, ನ್ಯಾಯಾಧೀಶರ



*ಸಂದರ್ಶಕರೊಂದಿಗೆ ಶ್ರೀ ಎಸ್. ಆರ್. ಹಿರೇಮಠ*

ವರ್ಗಾವಣೆ ಇಂಥ ಹಲವಾರು ವಿಷಯ ಕುರಿತು ಬಹಿರಂಗ ಪ್ರತಿಭಟನೆಗಿಳಿದೆವು. ನ್ಯೂಯಾರ್ಕ್ ಟೈಮ್ಸ್‌ನಲ್ಲಿ ಮೂರು ನಾಲ್ಕು ಸಲ ನಮ್ಮ ಪ್ರತಿಭಟನೆಯ ಸುದ್ದಿ ಪ್ರಕಟವಾಯಿತು. ಭಾರತದಲ್ಲಿನ ಮಾನವ ಹಕ್ಕುಗಳ ಉಲ್ಲಂಘನೆ ಕುರಿತು ಪ್ರಚಾರ ಮಾಡಲು ನಾನು ಲಂಡನ್, ಹಾಲೆಂಡ್, ಜರ್ಮನಿ, ಇಟಲಿ ಮುಂತಾದ ದೇಶಗಳಿಗೆ ಹೋಗಿದ್ದೆ. ಅಮೆರಿಕದಲ್ಲಿನ ಭಾರತದ ದೂತಾವಾಸದಿಂದ ನನ್ನ ಪಾಸ್‌ಪೋರ್ಟ್ ಇಂಪೌಂಡ್ ಮಾಡಲಾಗಿದೆ. ಅದನ್ನು ಸರೆಂಡರ್ ಮಾಡಬೇಕೆಂಬ ನೊಟೀಸ್ ಬಂದಿತು. ನಾನು ಸರೆಂಡರ್ ಮಾಡಲಿಲ್ಲ.

**ಹೊಸತು :** ನೀವು ಅಮೆರಿಕದ ಯುವತಿಯನ್ನು ಮದುವೆಯಾದದ್ದು ಹೇಗೆ ?

**ಎಸ್. ಆರ್.:** ಶಾಮಲಾ ಹಿರೇಮಠ ಅದು ನಾವು ಇಟ್ಟ ಹೆಸರು. ಅವಳ ಮೂಲ ಹೆಸರು ಮಾವಿಸ್. ೧೯೬೯ರಲ್ಲಿ ಸ್ನೇಹಿತನೊಬ್ಬನ ಮೂಲಕ ಪರಿಚಯವಾಯಿತು. ಅಮೆರಿಕದ ಕೃಷಿಕ ಕುಟುಂಬದ ಹುಡುಗಿ. ಎಂ.ಎಸ್.ಡಬ್ಲ್ಯೂ. ಓದಲು ಬಂದಿದ್ದಳು. ಸ್ನೇಹ ಬೆಳೆಯಿತು. ನನ್ನ ತಾಯಿಯನ್ನು ಕೇಳಿದೆ, ಒಪ್ಪಿದರು. ಅವರ ಆಸೆ ಇಂಡಿಯಾದಲ್ಲಿಯೇ ಮದುವೆ ಆಗಬೇಕೆಂದಿತ್ತು. ಹಾಗೇ ಆದೆವು. ಇಬ್ಬರು ಮಕ್ಕಳಿದ್ದಾರೆ.

**ಹೊಸತು :** ನೀವು ಭಾರತಕ್ಕೆ ಬಂದ ಮೇಲೆ ಮೊದಲು ಆರಂಭಿಸಿದ್ದು ವಿಧಾಯಕ ಕಾರ್ಯಕ್ರಮಗಳನ್ನು.

**ಎಸ್. ಆರ್.:** ಇದಕ್ಕೆ ಹೌದು ಮತ್ತು ಅಲ್ಲ ಎಂದು ಹೇಳಬಹುದು. ೧೯೭೯ ಜುಲೈ ೧ರಂದು ನಾನು, ಶಾಮಲಾ ಭಾರತಕ್ಕೆ ಬಂದೆವು. ಬಂದ ತಕ್ಷಣ ಧಾರವಾಡದಲ್ಲಿ ನೆಲೆಸಿ ಮೊದಲು ಮಾಡಿದ ಕೆಲಸವೇ ಭಾರತ ಅಭ್ಯುದಯ ಸೇವಾಸಂಸ್ಥೆ (ಇಂಡಿಯಾ ಡೆವಲಪ್‌ಮೆಂಟ್ ಸರ್ವೀಸ್ – ಐ.ಡಿ.ಎಸ್.) ಸ್ಥಾಪನೆ. ಇದೇ ಹೆಸರಿನ ಸಂಸ್ಥೆಯನ್ನು ೧೯೭೪ರಲ್ಲಿ ಚಿಕಾಗೊದಲ್ಲಿಯೂ ಮಾಡಿದ್ದೆವು. ಧಾರವಾಡದಲ್ಲಿ ನಾನು, ಶಾಮಲಾ, ಎಸ್. ಎಲ್. ಪೊಲೀಸ ಗೌಡರ, ಡಾ॥ ಕಬ್ಬೂರ, ಡಾ॥ ಎಸ್. ಎಲ್. ಪೂಜಾರ, ಡಾ॥ ಬಸವಯ್ಯ ಮುಂತಾದವರು ಸೇರಿ ಆರಂಭಿಸಿದೆವು. ನಮ್ಮ ಮುಂದಿನ ಗುರಿ ಕಷ್ಟಕರ ಜೀವನವಿರುವ ಹಳ್ಳಿಗಳ ಆಯ್ಕೆಯಾಗಿತ್ತು. ೧೯೮೦ ಫೆಬ್ರವರಿಯಲ್ಲಿ ಅಂದಿನ ಧಾರವಾಡ ಜಿಲ್ಲೆಯ ರಾಣೆಬೆನ್ನೂರ ತಾಲೂಕಿನ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡೆವು. ಮೆಡ್ಲೇರಿ, ಹಲಗೇರಿ ಹೀಗೆ ಸುತ್ತಮುತ್ತಲ ೨೧ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ಆರೋಗ್ಯ, ಹೈನುಗಾರಿಕೆ, ಶಿಕ್ಷಣ ಮುಂತಾದ ಕಾರ್ಯಕ್ರಮಗಳನ್ನು ಮಹಿಳೆಯರನ್ನು ಕೇಂದ್ರವಾಗಿಟ್ಟುಕೊಂಡು ಆರಂಭಿಸಿದೆವು. ನೇಕಾರಿಕೆ, ಕುರಿ ಸಾಕಾಣಿಕೆಯಂಥ ಕ್ಷೇತ್ರಗಳಲ್ಲಿ ಪುರುಷರನ್ನೂ ಒಳಗೊಂಡು ಚಟುವಟಿಕೆ ಮುಂದುವರಿಯಿತು. ಇದೇನೂ ಸುಲಭದ ಕೆಲಸವಾಗಿರಲಿಲ್ಲ. ಆರಂಭದಲ್ಲಿ ಸ್ಥಳೀಯ ಪುಢಾರಿಗಳಿಂದ ತೀವ್ರ ಪ್ರತಿರೋಧ ಎದುರಿಸಬೇಕಾಯಿತು. ನಮ್ಮದು ಕೇವಲ ಚಟುವಟಿಕೆಯಾಗಿರಲಿಲ್ಲ. ಅದೊಂದು ಜಾಗೃತಿ ಆಂದೋಲನವಾಗಿತ್ತು. ಮಹಿಳೆ ಆ ಆಂದೋಲನದ ಕೇಂದ್ರಬಿಂದುವಾಗಿದ್ದಳು. ಸ್ಥಳೀಯ ರಾಜಕಾರಣಿಗಳಿಗೆ ಇದು ಸಹಿಸಲಸಾಧ್ಯವಾದ ಬೆಳವಣಿಗೆಯಾಗಿತ್ತು. ಪ್ರಗತಿ ನಮ್ಮ ನಿರೀಕ್ಷೆಗೆ ಮೀರಿದ್ದಾಗಿತ್ತು. ಅಲ್ಲಿನ ಪರಿಸ್ಥಿತಿ ಕೇವಲ ಚಟುವಟಿಕೆಗೆ ಮಾತ್ರವಲ್ಲ ಚಳುವಳಿಗಳಿಗೆ ಪಕ್ವವಾಗಿತ್ತು.

**ಹೊಸತು :** ಅಂಥ ಚಳುವಳಿಗಾಗಿಯೇ ಸಮಾಜ ಪರಿವರ್ತನ ಸಮುದಾಯ ಆರಂಭಿಸಿದಿರಾ ?

**ಎಸ್. ಆರ್.:** ಹೌದು. ಜನರ ವ್ಯಾಪಕವಾದ ಇತರ ಸಮಸ್ಯೆಗಳ ಕುರಿತು ಜಾಗೃತಿ ಮತ್ತು ಪರಿಹಾರ ಕಾರ್ಯಕ್ಕಾಗಿ, ರಾಜ್ಯದ ಮತ್ತು ದೇಶದ ಇತರ ಭಾಗಗಳಿಗೆ ಜಾಗೃತಿ ಆಂದೋಲನ ವಿಸ್ತರಿಸಲು ೧೯೮೪ರಲ್ಲಿ ಸಮಾಜ ಪರಿವರ್ತನ ಸಮುದಾಯ ಸ್ಥಾಪಿಸಿದೆವು. ಪ್ರಕೃತಿ, ಸಮಾಜ, ಸಂಸ್ಕೃತಿಯ ಮಧ್ಯೆ ಸಾಮರಸ್ಯ ಉಳ್ಳ ಸಂಬಂಧವೇರ್ಪಡಿಸುವುದು ಇದರ ಉದ್ದೇಶವಾಗಿತ್ತು. ಅಹಿಂಸೆ, ಪಾರದರ್ಶಕತೆ, ಸ್ವಾವಲಂಬನೆ ಗ್ರಾಮಸ್ವರಾಜ್ಯ, ಪಂಚಾಯತ್ ರಾಜ್, ಪರಿಸರ ಮತ್ತು ಪ್ರಜೆ ಈ ಸಂಸ್ಥೆಯ ಕಾಳಜಿಯಾಗಿದ್ದವು. ಇದರ ಭಾಗವಾಗಿ ಹರಿಹರ ಪಾಲಿಫೈಬರ್ಸ್‌ನ ತ್ಯಾಜ್ಯದಿಂದ ಕಲುಷಿತವಾಗಿದ್ದ

ತುಂಗಭದ್ರ ಉಳಿಸಿ ಹೋರಾಟ, ಸಮುದಾಯ ಭೂಮಿಗಾಗಿ ಸರಕಾರ ಹಾಗೂ ಕೆ.ಪಿ.ಎಲ್. ವಿರುದ್ಧ ಕಿತ್ತಿಕೋ ಹಚ್ಚಿಕೋ ಚಳುವಳಿ, ಪಶ್ಚಿಮಘಟ್ಟ ಉಳಿಸಿ ಚಳುವಳಿ ಇಂಥ ಹಲವಾರು ಚಳುವಳಿಗಳಲ್ಲಿ ಜನರನ್ನು ತೊಡಗಿಸುತ್ತಲೇ ಸ್ಥಳೀಯ ನ್ಯಾಯಾಲಯಗಳನ್ನೂ ಒಳಗೊಂಡು ಸರ್ವೋಚ್ಚ ನ್ಯಾಯಾಲಯದಲ್ಲಿ ಹಲವಾರು ಸಾರ್ವಜನಿಕ ಹಿತಾಸಕ್ತಿ ವಿವಾದ ಗಳನ್ನೂ ಹೂಡಿದೆವು. ಎಸ್.ಪಿ.ಎಸ್.ನ ಈ ಹೋರಾಟ ೧೯೭೦ರಲ್ಲಿ ಮಧ್ಯಪ್ರದೇಶದ ಬಸ್ತಾರ ಅರಣ್ಯ ಪ್ರದೇಶದ ಟಿಂಬರ್ ಮಾಫಿಯಾ ವಿರುದ್ಧವೂ ನಡೆಯಿತು. ಒಂದೆಡೆ ಜನಾಂದೋಲನ ಇನ್ನೊಂದೆಡೆ ಪಿ.ಐ.ಎಲ್. ಮೂಲಕ ನ್ಯಾಯಾಂಗ ಹೋರಾಟ ನಡೆದು ಮಾಫಿಯಾಗಳು, ಸರಕಾರಗಳು ಜನದನಿ, ನ್ಯಾಯಾಲಯ ಆದೇಶಗಳಿಗೆ ತಲೆಬಾಗ ಬೇಕಾಯಿತು. ಇಂಥ ಹೋರಾಟಗಳಿಗೆ ಶಿವರಾಮ ಕಾರಂತ, ಜಸ್ಟಿಸ್ ಭಗವತಿ, ಡಿ. ಎಂ. ಚಂದ್ರಶೇಖರ, ಕುಲದೀಪ ನಯ್ಯರ್, ಎಸ್. ಪಿ. ಶುಕ್ಲಾ, ಎಲ್. ಸಿ. ಜೈನ್, ಅಜಿತ್ ಭಟ್ಟಾಚಾರ್ಯರಂಥವರು ನಮಗೆ ಮಾರ್ಗದರ್ಶನ ಮಾಡಿದರು. ೧೯೮೦ರಿಂದ ಇಂದಿನವರೆಗಿನ ಇಂಥ ಹಲವಾರು ಹೋರಾಟಗಳ ಅನುಭವವೇ ಇಂದು ಕರ್ನಾಟಕದ ಗಣಿಮಾಫಿಯಾ ವಿರುದ್ಧ, ಭ್ರಷ್ಟರಾಜಕಾರಣಿಗಳ ಹಾಗೂ ಅಧಿಕಾರಿಗಳ ವಿರುದ್ಧ ಹೋರಾಡಲು ಸಾಮರ್ಥ್ಯ ತಂದಿದೆ.



**ಹೊಸತು :** ಪ್ರಸ್ತುತ ದೇಶದ ರಾಜಕಾರಣವನ್ನು ಹೇಗೆ ವಿಶ್ಲೇಷಿಸುತ್ತೀರಿ.

**ಎಸ್. ಆರ್ :** ಮೂರ್ಖರು ಇತಿಹಾಸದಿಂದ ಪಾಠ ಕಲಿಯುವುದಿಲ್ಲ. ಇಂದಿನ ರಾಜಕಾರಣ ಜನಕೇಂದ್ರಿತವಾಗಿಲ್ಲ. ಆಳುವವರು ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿ ಕಾಪಾಡುತ್ತಿದ್ದಾರೆ. ಮೋದಿಯನ್ನು ತಂದವರು ಕಾರ್ಪೊರೇಟ್ ವಲಯದವರು. ಮನಮೋಹನ ಸಿಂಗ್, ಮೋದಿಗೆ ವ್ಯತ್ಯಾಸ ಇಲ್ಲ. ಪ್ರಭು ತತ್ವಜ್ಞಾನಿಯಾಗಿರಬೇಕು. ಜಲ, ಜಂಗಲ್, ಜಮೀನು, ಖನಿಜ, ಬೀಜ ಇವು ಮೂಲ ರಕ್ಷಣೆಗೆ ಒಳಪಡಬೇಕು. ನೈಸರ್ಗಿಕ ಸಂಪತ್ತು ನಿಜವಾದ ಬಂಡವಾಳ. ಅವುಗಳು ಕೇಂದ್ರ, ರಾಜ್ಯ ಸರಕಾರದ ಅಧಿಕಾರದ ವ್ಯಾಪ್ತಿಗೊಳಪಡಬಾರದು. ಗ್ರಾಮ, ನಗರ, ವಾರ್ಡ್‌ಗಳ ಜನತೆ ಸಾಮುದಾಯಿಕವಾಗಿ ಅವುಗಳನ್ನು ನಿಯಂತ್ರಿಸಬೇಕು. ಇಂದು ೧೭.೪ ಮಿಲಿಯನ್ ಹೆಕ್ಟೇರ್ ಜಮೀನು ಕೃಷಿಯೇತರ ಉದ್ದೇಶಕ್ಕೆ ಬಳಕೆಯಾಗುತ್ತಿದೆ. ಆರ್ಥಿಕ ವಸಾಹತೀಕರಣಕ್ಕೆ ನಮ್ಮ ದೇಶ ಬಲಿಯಾಗುತ್ತಿದೆ. ಇತಿಹಾಸದಲ್ಲಿ ನಮ್ಮನ್ನು ನಾವೇ ಆಡಳಿತಕ್ಕೊಳಪಡಿಸಿ ಕೊಂಡಿಲ್ಲ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಪ್ರಭುಗಳಾಗಬೇಕು. ಧನಶಕ್ತಿ ಮತ್ತು ಸಂಘಟಿತಧರ್ಮ ರಾಜಕಾರಣದಿಂದ ದೂರವಿರಬೇಕು. ಕಂಪನಿಗಳು ರಾಜಕಾರಣಕ್ಕೆ ಬರಬಾರದು. ಯಾಂತ್ರೀಕರಣ ಎಲ್ಲಿ ಮಾಡಬೇಕು, ಹೇಗೆ ಮಾಡಬೇಕು ಎಂಬ ವಿವೇಚನೆ ಆಳುವವರಿಗಿರಬೇಕು. ಜನಸಂಖ್ಯೆ ಕಡಿಮೆ ಇರುವಲ್ಲಿ ತಂತ್ರಜ್ಞಾನ ಪ್ರೇರಿತ ಕೈಗಾರಿಕೆಗಳು ಬೇಕು. ನಮ್ಮ ದೇಶದಲ್ಲಿ ಜನ ಜಾಸ್ತಿ, ಇಲ್ಲಿ ಶ್ರಮ ಕೇಂದ್ರಿತ ತಂತ್ರಜ್ಞಾನದ ಅವಶ್ಯಕತೆ ಇದೆ. ಕಾರ್ಪೊರೇಟ್ ಕಂಪನಿಗಳು ಈಗ ದೇಶವನ್ನಾಳುತ್ತಿವೆ. ಇದನ್ನು ಮಾರ್ಕ್ಸ್ ಮೊದಲೇ ಹೇಳಿದ್ದರು. ಬಿ.ಜೆ.ಪಿ., ಕಾಂಗ್ರೆಸ್ ಎರಡೂ ಭ್ರಷ್ಟರ ಪಕ್ಷಗಳೇ. ಭ್ರಷ್ಟಾಚಾರ ಕಾಂಗ್ರೆಸ್‌ನಲ್ಲಿ ನೆಹರು ಕಾಲದಿಂದಲೇ ಆರಂಭವಾಯಿತು. ನೆಹರು ವೈಯಕ್ತಿಕವಾಗಿ ಪ್ರಾಮಾಣಿಕರಿದ್ದರು. ಆದರೆ ಕೇರಳದಲ್ಲಿ ಜನರಿಂದ ಆಯ್ಕೆಯಾದ ಕಮ್ಯುನಿಸ್ಟ್ ಸರಕಾರವನ್ನೇ ವಜಾ ಮಾಡಿ ಸರ್ವಾಧಿಕಾರಿ ಮನೋಭಾವ ತೋರಿದ್ದರು. ಇಂಥ ಮನೋಭಾವವೇ ಇಂದಿರಾ ಗಾಂಧಿಯಲ್ಲಿತ್ತು. ಈಗ ಅದೇ ದಾರಿಯಲ್ಲಿ ಮೋದಿ ನಡೆಯುತ್ತಿದ್ದಾರೆ. ಅಭಿವೃದ್ಧಿಯ ನೀತಿ ಎಂದರೆ ಪ್ರಕೃತಿ – ಸಮಾಜ – ಸಂಸ್ಕೃತಿಯ ಮಧ್ಯೆ ಸಾಮರಸ್ಯವನ್ನು ಏರ್ಪಡಿಸುವುದು. ಬುದ್ಧ ಧರ್ಮದ ಮಹತ್ವ ತಿಳಿದು ಕೊಂಡಿದ್ದರು. ಶಂಕರಾಚಾರ್ಯರ ವಾಕ್‌ಚಾತುರ್ಯ ಹೊಟ್ಟೆ ತುಂಬಿಸುವುದಿಲ್ಲ. ಇಂದು ಪುರೋಹಿತಶಾಹಿಗಳು ವ್ಯವಸ್ಥೆಯ ರಾಯಭಾರಿಗಳಾಗಿದ್ದಾರೆ.

**ಹೊಸತು :** ಜನತೆ ಮತ್ತು ಹೋರಾಟಗಾರರ ಮುಂದಿರುವ ಪರ್ಯಾಯಗಳೇನು ?

**ಎಸ್. ಆರ್. :** ಇಂದಿನ ಸ್ಥಿತಿ ಬದಲಾಗಬೇಕಾದರೆ ಹಳ್ಳಿಗಳಿಂದಲೇ ಆಗಬೇಕು. ಪ್ರಜೆಗಳು ಸಶಕ್ತರಿದ್ದಾರೆ. ಅವರಿಗೆ ಆಡಳಿತ ಹಾಗೂ ಸಂವಿಧಾನದ ತಿಳುವಳಿಕೆ ಕೊಡಬೇಕು. ಯುವಕರು, ಭೂರಹಿತ ಕಾರ್ಮಿಕರು, ಸಣ್ಣ ರೈತರು, ಮಹಿಳೆಯರು ಸಂಘಟಿತರಾಗಬೇಕು. ಕೃಷಿ ಸಹಕಾರಿ ಸಂಘಗಳನ್ನು ಆರಂಭಿಸ ಬೇಕು. ಕಾರ್ಪೊರೇಟ್ ಕೃಷಿಯನ್ನು ಎದುರಿಸಲು ಇದು ಮುಖ್ಯ ದಾರಿ. ಕೋಟ್ಯಾಧಿಪತಿಗಳು ಎನ್ನುವುದು ನಮ್ಮ ಪ್ರಜಾಪ್ರಭುತ್ವಕ್ಕೆ ಕಪ್ಪುಚುಕ್ಕೆ. ಸಂಪತ್ತಿನ ವಿಕೇಂದ್ರೀಕರಣವಾಗಬೇಕು. ಕಾರ್ಪೊರೇಟ್ ಕಂಪನಿಗಳನ್ನು ಧ್ವಂಸ ಮಾಡಬೇಕು. ನಮ್ಮ ಜನತೆಗೆ ಶಕ್ತಿ ಇದೆ. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ, ಬೋಫೋರ್ಸ್ ಹಗರಣದ ಸಂದರ್ಭದಲ್ಲಿ ಕೇಂದ್ರ ಸರಕಾರವನ್ನಾಳಿದ ಪಕ್ಷಗಳನ್ನೇ ಜನ ಕಿತ್ತೆಸೆದಿದ್ದಾರೆ. ಜನತೆಯ ಶಕ್ತಿಯನ್ನು ಅಂಡರ್‌ಎಸ್ಟಿಮೇಟ್ ಮಾಡಬಾರದು. ಅವರನ್ನು ಸಂಘಟಿಸಿ ಹೋರಾಟಕ್ಕಿಳಿಸಬೇಕು. ಸಂಘರ್ಷ ಮತ್ತು ರಚನಾತ್ಮಕತೆ ಒಂದಾಗಿರಬೇಕು. ದೇಶದ ಐಕ್ಯತೆ ಮಹತ್ವದ್ದು. ಭಿನ್ನಾಭಿಪ್ರಾಯಗಳಿರಲಿ, ದೇಶದ ಐಕ್ಯತೆ ಎಲ್ಲರ ಗುರಿಯಾಗಬೇಕು. ಗ್ರಾಮಸಭಾ, ಪಂಚಾಯತ್ ರಾಜ್ಯ ವ್ಯವಸ್ಥೆಯನ್ನು ಬಲಪಡಿಸಿ ಜನರ ಭಾಗವಹಿಸುವಿಕೆಯತ್ತ ಗಮನಕೊಡಬೇಕು.



ಪತ್ನಿ ಶಾಮಲಾ ಹಿರೇಮಠ, ಮಗಳು ಶೀಲಾ ಮತ್ತು ಮೊಮ್ಮಕ್ಕಳೊಂದಿಗೆ

ನಿಸರ್ಗ ಕೊಟ್ಟ ಸಮಾನತೆ, ಸಲಕರಣೆಗಳ ಮೇಲೆ ಮಾಲಿಕತ್ವ ಪಡೆದು ಜನರ ಶೋಷಣೆ ಮಾಡುತ್ತಿದ್ದಾರೆ. ಇದನ್ನು ಜನತೆಗೆ ತಿಳಿಸಿ ಅವರನ್ನು ಸಂಘಟಿಸಬೇಕು.

**ಹೊಸತು :** ಪರ್ಯಾಯ ರಾಜಕಾರಣದ ಬಗ್ಗೆ ನಿಮ್ಮ ನಿಲುವೇನು ?

**ಎಸ್. ಆರ್. :** ೨೦೧೩ರ ಕರ್ನಾಟಕ ವಿಧಾನಸಭಾ ಹಾಗೂ ೨೦೧೪ರ ಲೋಕಸಭಾ ಚುನಾವಣೆಯಲ್ಲಿ ಜನಸಂಗ್ರಾಮ ಪರಿಷತ್ ಮತ್ತು ಸಮಾಜ ಪರಿವರ್ತನ ಸಮುದಾಯದಿಂದ ನಮ್ಮ ನಿಲುವು ಸ್ಪಷ್ಟಪಡಿಸಿದ್ದೇವೆ. ಭ್ರಷ್ಟಾಚಾರ ಮುಕ್ತ ಭಾರತ, ಕೋಮುವಾದ ಮುಕ್ತ ನಾಡು, ವಿದೇಶಿ ಬಂಡವಾಳ ಮುಕ್ತ ಕೈಗಾರಿಕೀಕರಣ ಇವು ನಮ್ಮ ಪ್ರಮುಖ ಆಶಯಗಳಾಗಿದ್ದವು. ಇಂಥ ಜನಪರ ಧೋರಣೆಗಳನ್ನು ಚುನಾವಣೆಯಲ್ಲಿ ಪ್ರಚಾರ ಮಾಡಿದೆವು.

**ಹೊಸತು :** ನೀವೂ ಚುನಾವಣೆಗೆ ನಿಲ್ಲುತ್ತೀರಿ ಎಂಬ ಸುದ್ದಿ ಇತ್ತು.

**ಎಸ್. ಆರ್. :** ಹೌದು. ನನಗೆ ಆಮ್ ಆದ್ಮಿ ಪಕ್ಷದಿಂದ ಚುನಾವಣೆಗೆ ನಿಲ್ಲಲು ಒತ್ತಡ ಬಂದಿತ್ತು. ಆದರೆ ಆ ಹುಡುಗ (ಕೇಜ್ರೀವಾಲ)ನ ಧ್ಯೇಯ–ಧೋರಣೆಗಳು ಸ್ಪಷ್ಟವಾಗಿರಲಿಲ್ಲ. ಆದರೆ ಕಳೆದ ಪಾರ್ಲಿಮೆಂಟ್ ಚುನಾವಣೆಯಲ್ಲಿ ಬೆಂಗಳೂರು, ಚಿಕ್ಕಬಳ್ಳಾಪುರ, ಕೋಲಾರ ಕ್ಷೇತ್ರಗಳಲ್ಲಿ ನಾನು ಆಮ್ ಆದ್ಮಿ ಪರವಾಗಿ ಪ್ರಚಾರ ಮಾಡಿದೆ. ಅಲ್ಲಿ ಡಿ. ಕೆ. ಸುರೇಶ, ಅನಿತಾ ಕುಮಾರಸ್ವಾಮಿ, ವೀರಪ್ಪ ಮೊಯ್ಲಿಯಂಥ ಭ್ರಷ್ಟರ ವಿರುದ್ಧ ಬಾಬು ಮ್ಯಾಥ್ಯೂ, ರವಿಕೃಷ್ಣಾ ರೆಡ್ಡಿ, ಕೋಟಗಾನಹಳ್ಳಿ ರಾಮಯ್ಯ ಅವರಂಥ ಪ್ರಾಮಾಣಿಕರು ಸ್ಪರ್ಧಿಸಿದ್ದರು. ಅವರನ್ನು ಬೆಂಬಲಿಸಿ ಪ್ರಚಾರ ಮಾಡಿದೆವು.

**ಹೊಸತು :** ಚಳುವಳಿ ರಾಜಕಾರಣದ ಕುರಿತು ನಿಮ್ಮ ಅಭಿಪ್ರಾಯವೇನು ?

**ಎಸ್. ಆರ್. :** ಚಳುವಳಿಯ ರಾಜಕಾರಣ ಬಲಗೊಳ್ಳಬೇಕು. ಪ್ರಾಮಾಣಿಕವಾದ ಜನಪರ ಚಳುವಳಿಯ ಸಂಘಟನೆಗಳ ಜೊತೆ ಕೂಡಿ ಕೆಲಸ ಮಾಡಲು ನನ್ನ ಭಿನ್ನಾಭಿಪ್ರಾಯವೇನೂ ಇಲ್ಲ. ಅದು ಇಂದಿನ ಅವಶ್ಯಕತೆ. ಜನಸಂಗ್ರಾಮ ಪರಿಷತ್ತು ಸಂಘಟನೆಯ ಮೂಲಕ ನಾವೂ ಪ್ರಯತ್ನ ಮಾಡುತ್ತಿದ್ದೇವೆ.

**ಹೊಸತು :** ಧನ್ಯವಾದಗಳು. ಹೊಸತು ಪತ್ರಿಕೆಯಿಂದ ನಿಮ್ಮ ಎಲ್ಲ ಚಟುವಟಿಕೆ, ಹೋರಾಟಗಳಿಗೆ ಶುಭ ಕೋರುತ್ತೇವೆ.

**ಎಸ್. ಆರ್. :** ನಿಮಗೂ ಧನ್ಯವಾದಗಳು.

**ಡಾ॥ ಸಿದ್ದನಗೌಡ ಪಾಟೀಲ**
ಸಿಪಿಐ ಆಫೀಸ್, ಘಾಟೆಭವನ, ಜಿ. ಡಿ. ಪಾರ್ಕ್ ಬಡಾವಣೆ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩




# ಒಂದರೊಳಗಿನ್ನೊಂದು ಒಂದಾಗಿ



'ಭವತಿ ಭಿಕ್ಷಾಂದೇಹಿ'

ಭಿಕ್ಷಾಪಾತ್ರೆ ಹಿಡಿದು
ಮನೆ ಮನೆಯಿಂದಲೂ
ಬೇಡಿ ತಂದಿದ್ದು
ಕರಗದ ದಾರುಣ ಸಂಕಟವನ್ನೇ

ಅಗಿದು ಜಗಿದರೂ ತೀರದ ನೋವು
ಸುಮ್ಮನೇ ಪಚನವಾದೀತೇ ?
ಬೊಗಸೆಯಲಿ ಆಪೋಷಿಸಿ
ನೀಗಿಕೊಂಡ ಬೋಧಿಸತ್ವನೇನೋ
ಬುದ್ಧನಾಗಿಹೋದ !

ಆದರೆ ಒಳಗಿಳಿದದ್ದು ಸುಮ್ಮನುಳಿದೀತೆ ?
ಹೃದಯ ತುಂಬಿ ಕುಡಿದದ್ದು
ಕರುಳೇ ಬಿರಿದು
ನೊಂದ ನೋವೇ ಕಾರುಣ್ಯ ರಸವಾಗಿ

ಕಣ್ಣು ತುಂಬಿ
ತಣ್ಣಗೆ ಹರಿದು ನೀರಾಗಿ
ಕಣ್ಣೀರ ಸರೋವರವೇ ಮಡುಗಟ್ಟಿತು.

ಸುಡು ಕಾವಿಗೂ ಆವಿಯಾಗದೇ
ಉಳಿದ ದ್ರವರೂಪಿ ನೋವೆಲ್ಲ
ಕಾರುಣ್ಯವೇ ತಾನಾಗಿ
ಸೋಸಿ ಸೋಸಿ ತಿಳಿಯಾದ
ಸ್ವಚ್ಛ ನೀರಿನೊಳಗೆ
ಅಚ್ಚ ಬಿಳಿ ಕಮಲ ಬಿರಿದು
ಅದರೊಳಗೆ
ಅರಳಿಕೊಂಡವಳು ತಾರಾ ಬುದ್ಧ !
ಆ ಬುದ್ಧನದೇ ಹೆಣ್ಣುರೂಪ !

ಗಂಡಿನೊಳಗಿಂದ ಹೆಣ್ಣಾಗಿ ಹರಿದ ತಾರಾ
ಹೆಣ್ಣಿನೊಳಗಿನ ಗಂಡಾಗಿ ಮಿಡುಕಿದ ಬುದ್ಧ
ಒಂದರೊಳಗಿನ್ನೊಂದು ಒಂದಾಗಿ !

*[ಟಿಬೇಟಿಯನ್ ಬೌದ್ಧಧರ್ಮದ ಪರಿಕಲ್ಪನೆಯಲ್ಲಿ ನೋವು ನುಂಗಿದ ಬುದ್ಧನ ಕಣ್ಣಿನಿಂದ ಸಂಕಟ ತಾಳಲಾಗದೇ ಕಣ್ಣೀರು ಉಕ್ಕಲಾರಂಭಿಸುತ್ತದೆ. ಉಕ್ಕಿ ಹರಿದ ನೀರಿನಿಂದ ಉಂಟಾದ ಸರೋವರದಲ್ಲಿ ಅರಳಿದ ಕಮಲದಿಂದ ಬುದ್ಧನ ಸ್ತ್ರೀರೂಪವೊಂದು ಬಿಡುಗಡೆ ಹೊಂದಿ ತಾರಾ ಬುದ್ಧಳಾಗಿ ಹೊರಹೊಮ್ಮಿದ ಕಥೆಯಿದೆ.]*

**ರೂಪ ಹಾಸನ,** 'ಪ್ರೇರಣ', ಸೇಂಟ್ ಜೋಸೆಫ್ ಶಾಲೆ ರಸ್ತೆ, ಉತ್ತರ ಬಡಾವಣೆ, ಹಾಸನ – ೫೭೩ ೨೦೧



# ಲಂಕೇಶ್ ಪ್ರಕಾಶನ

## ನಮ್ಮ ಪ್ರಕಾಶನದಿಂದ ಈವರೆಗೆ ಪ್ರಕಟವಾಗಿರುವ ಪುಸ್ತಕಗಳು

ಪ್ರತಿಗಳಿಗಾಗಿ ಸಂಪರ್ಕಿಸಿ:
**ಲಂಕೇಶ್ ಪ್ರಕಾಶನ**
ನಂ.9, ಇ.ಎ.ಟಿ.ರಸ್ತೆ, ಬಸವನಗುಡಿ
ಬೆಂಗಳೂರು-4 080-26676427
9880302817



| | ಶೀರ್ಷಿಕೆ | ಬೆಲೆ | ಮಾಧ್ಯಮ | ಲೇಖಕರು |
|---|---|---|---|---|
| 1. | ನೀಲು ಕಾವ್ಯ -ಸಂಗ್ರಹ 1 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 2. | ನೀಲು ಕಾವ್ಯ -ಸಂಗ್ರಹ 2 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 3. | ನೀಲು ಕಾವ್ಯ -ಸಂಗ್ರಹ 3 | 200.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 4. | ಚಿತ್ರ ಸಮೂಹ | 90.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 5. | ಅಕ್ಷರ ಹೊಸ ಕಾವ್ಯ | 250.00 | ಕಾವ್ಯ ಸಂಗ್ರಹ | ಪಿ. ಲಂಕೇಶ್ |
| 6. | ಮರೆಯುವ ಮುನ್ನ-ಸಂಗ್ರಹ 1 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 7. | ಮರೆಯುವ ಮುನ್ನ-ಸಂಗ್ರಹ 2 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 8. | ಮರೆಯುವ ಮುನ್ನ-ಸಂಗ್ರಹ 3 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 9. | ಮರೆಯುವ ಮುನ್ನ-ಸಂಗ್ರಹ 4 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 10. | ಪಾಂಚಾಲಿ | 150.00 | 1974ರ ದೀಪಾವಳಿ ಸಂಚಿಕೆ | ಪಿ. ಲಂಕೇಶ್ |
| 11. | ಮನಕೆ ಕಾರಂಜಿಯ ಸ್ಪರ್ಶ | 150.00 | ಪಾಶ್ಚಿಮಾತ್ಯ ಬರಹಗಳು | ಪಿ. ಲಂಕೇಶ್ |
| 12. | ಈ ನರಕ ಈ ಪುಲಕ | 125.00 | ಸಿನಿಮಾ ಬರಹಗಳು | ಪಿ. ಲಂಕೇಶ್ |
| 13. | ಆಟ-ಜೂಜು-ಮೋಜು! | 150.00 | ಕ್ರೀಡಾ ಬರಹಗಳು | ಪಿ. ಲಂಕೇಶ್ |
| 14. | ಟೀಕೆ-ಟಿಪ್ಪಣಿ 1 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 15. | ಟೀಕೆ-ಟಿಪ್ಪಣಿ 2 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 16. | ಟೀಕೆ-ಟಿಪ್ಪಣಿ 3 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 17. | ಸಾಹಿತಿ-ಸಾಹಿತ್ಯ | 300.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 18. | ರೂಪಕ ಲೇಖಕರು | 70.00 | ಪ್ರಸಿದ್ಧ ಲೇಖಕರ ಬದುಕು-ಬರಹ | ಪಿ. ಲಂಕೇಶ್ |
| 19. | ಕಂಡದ್ದು ಕಂಡಹಾಗೆ | 100.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 20. | ಪ್ರಸ್ತುತ | 80.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 21. | ಹುಳಿಮಾವಿನ ಮರ | 250.00 | ಆತ್ಮಕಥೆ | ಪಿ. ಲಂಕೇಶ್ |
| 22. | ಮುಸ್ಸಂಜೆಯ ಕಥಾ ಪ್ರಸಂಗ | 250.00 | ಕಾದಂಬರಿ | ಪಿ. ಲಂಕೇಶ್ |
| 23. | ಬಿರುಕು | 60.00 | ಕಾದಂಬರಿ | ಪಿ. ಲಂಕೇಶ್ |
| 24. | ಅಕ್ಕ | 80.00 | ಕಾದಂಬರಿ | ಪಿ. ಲಂಕೇಶ್ |
| 25. | ಮಂಜು ಕವಿದ ಸಂಜೆ | 85.00 | ಕಥಾ ಸಂಕಲನ | ಪಿ. ಲಂಕೇಶ್ |
| 26. | ಉಮಾಪತಿ ಸ್ಕಾಲರ್‌ಶಿಪ್ ಯಾತ್ರೆ | 70.00 | ಕಥಾ ಸಂಕಲನ | ಪಿ. ಲಂಕೇಶ್ |
| 27. | ಕಲ್ಲು ಕರಗುವ ಸಮಯ | 125.00 | ಕಥಾ ಸಂಕಲನ | ಪಿ. ಲಂಕೇಶ್ |
| 28. | ನಾನಲ್ಲ | 60.00 | ಕಥಾ ಸಂಕಲನ | ಪಿ. ಲಂಕೇಶ್ |
| 29. | ಕೆರೆಯ ನೀರನು ಕೆರೆಗೆ ಚೆಲ್ಲಿ | 50.00 | ಕಥಾ ಸಂಕಲನ | ಪಿ. ಲಂಕೇಶ್ |
| 30. | ಉಲ್ಲಂಘನೆ | 80.00 | ಕಥಾ ಸಂಕಲನ | ಪಿ. ಲಂಕೇಶ್ |
| 31. | ಪಾಪದ ಹೂಗಳು | 60.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 32. | ಬಿರುಕು | 40.00 | ನಾಟಕ | ಪಿ. ಲಂಕೇಶ್ |
| 33. | ಸಂಕ್ರಾಂತಿ | 45.00 | ನಾಟಕ | ಪಿ. ಲಂಕೇಶ್ |
| 34. | ತೆರೆಗಳು | 50.00 | ನಾಟಕ | ಪಿ. ಲಂಕೇಶ್ |
| 35. | ಈಡಿಪಸ್ ಮತ್ತು ಅಂತಿಗೊನೆ | 60.00 | ನಾಟಕ | ಪಿ. ಲಂಕೇಶ್ |
| 36. | ಟಿ. ಪ್ರಸನ್ನನ ಗೃಹಸ್ಥಾಶ್ರಮ | 50.00 | ನಾಟಕ | ಪಿ. ಲಂಕೇಶ್ |
| 37. | ಗುಣಮುಖ | 30.00 | ನಾಟಕ | ಪಿ. ಲಂಕೇಶ್ |
| 38. | ಕ್ರಾಂತಿ ಬಂತು ಕ್ರಾಂತಿ | 40.00 | ನಾಟಕ | ಪಿ. ಲಂಕೇಶ್ |
| 39. | ಕಪ್ಪು ಮಲ್ಲಿಗೆ | 75.00 | ಅನುವಾದಿತ ಕತೆಗಳು | ಗೌರಿ ಲಂಕೇಶ್ |
| 40. | ಕಂಡಹಾಗೆ – 1 | 125.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 41. | ಕಂಡಹಾಗೆ – 2 | 150.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 42. | ದರವೇಶಿ ಕತೆಗಳು | 90.00 | ಕತೆಗಳು | ಅನು: ಗೌರಿ ಲಂಕೇಶ್ |
| 43. | ಬಸವರಾಜಮಾರ್ಗ | 40.00 | ಲೇಖನಗಳು | ಸಂ: ಗೌರಿ ಲಂಕೇಶ್ |
| 44. | ಬೆನಜೀರ್ | 25.00 | ಜೀವನ ಚರಿತ್ರೆ | ಗೌರಿ ಲಂಕೇಶ್ |
| 45. | ಆವರಣ ಎಂಬ ವಿ-ಕೃತಿ | 100.00 | ವಿಮರ್ಶೆಗಳು | ಸಂ: ಗೌರಿ ಲಂಕೇಶ್ |
| 46. | ಜೈಲೆಂಬ ಲೋಕದಲ್ಲಿ | 75.00 | ಸರಳುಗಳ ಹಿಂದಿನ ಸತ್ಯಗಳು | ಕುಮಾರ್ ಸಮತಳ |
| 47. | ವೇದಾಂತ ರೆಜಿಮೆಂಟ್ | 60.00 | ವೈಚಾರಿಕ ಲೇಖನಗಳು | ಬಿ.ವಿ.ವೀರಭದ್ರಪ್ಪ |

| | ಶೀರ್ಷಿಕೆ | ಬೆಲೆ | ಮಾಧ್ಯಮ | ಲೇಖಕರು |
|---|---|---|---|---|
| 48. | ಕಳೆದುಕೊಂಡವಳು | 45.00 | ಕತೆಗಳು | ಜಾಹ್ನವಿ |
| 49. | ನೂರುಸ್ವರ | 60.00 | ಕತೆಗಳು | ಉಮಾ ರಾವ್ |
| 50. | ಟ್ರೇನ್ ಟು ಪಾಕಿಸ್ತಾನ್ | 125.00 | ಕಾದಂಬರಿ | ಖುಷ್ವಂತ್ ಸಿಂಗ್; ಅನು: ಡಾ. ಎಂ.ಬಿ. ರಾಮಮೂರ್ತಿ |
| 51. | ಮಿಡತೆಗಳ ಬರವಿಗೆ.... | 100.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 52. | ಡಿಸೆಂಬರ್ 13 | 150.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 53. | ಮನುಸ್ಮೃತಿ | 20.00 | ಸಂಘಪರಿವಾರದ ಸಂವಿಧಾನ | ಏಕಲವ್ಯ |
| 54. | ಆರೋಗ್ಯ ಮತ್ತು ಜೀವನ | 125.00 | ವೈದ್ಯಕೀಯ ಸಾಹಿತ್ಯ | ಡಾ. ಎಂ.ಬಿ. ರಾಮಮೂರ್ತಿ |
| 55. | ತೇಜಸ್ವಿ ನೆನಪು | 100.00 | ಬರಹಗಳ ಸಂಗ್ರಹ | ಸಂ.: ಬಿ. ಚಂದ್ರೇಗೌಡ |
| 56. | ಜಬೀವುಲ್ಲಾ ಕೊಟ್ಟ ಕೋಳಿ | 100.00 | ಹಾಸ್ಯಲೇಖನಗಳು | ಬಿ. ಚಂದ್ರೇಗೌಡ |
| 57. | ಮುತ್ತುರಾಜನ ಮುತ್ತು | 175.00 | ಶಿವರಾಜ್‌ಕುಮಾರ್ ಆತ್ಮಕಥೆ | ಸದಾಶಿವ ಶೆಣೈ |
| 58. | ವಿಷ್ಣು-ನೂರೊಂದು ನೆನಪು | 150.00 | ವಿಷ್ಣುವರ್ಧನ್ ಆತ್ಮಕಥೆ | ಸದಾಶಿವ ಶೆಣೈ |
| 59. | ಓ ಈಳಂ | 250.00 | ಎಲ್‌ಟಿಟಿಇ ಕಥನ | ಕುಮಾರ್‌ಬುರಡಿಕಟ್ಟಿ |
| 60. | ಖೈರ್ಲಾಂಜಿ | 200.00 | ದಲಿತ ಭಾರತದ ಕಥನ | ಆನಂದ್ ತೇಲ್‌ತುಂಬ್ಡೆ |
| 61. | ಕಮಲಾ ದಾಸ್ ಕಥೆಗಳು | 60.00 | ಸಣ್ಣ ಕಥೆಗಳು | ಅನು: ಗಂಗಾಧರನ್ |
| 62. | ಮಾಂಟೊ ಕಥೆಗಳು | 80.00 | ಸಣ್ಣ ಕಥೆಗಳು | ಅನು: ಜೆ.ಬಾಲಕೃಷ್ಣ |
| 63. | ಕೋಮುವಾದ | 60.00 | ವೈಚಾರಿಕ ಬರಹಗಳು | ರಾಮ ಪುಲಿಯಾನಿ |
| 64. | ಜಾತಿ ಪದ್ಧತಿ | 125.00 | | ರಾಮ್‌ಮನೋಹರ್ ಲೋಹಿಯಾ |
| 65. | ರಾಮಾಯಣ ವಿಷವೃಕ್ಷ | 75.00 | ವೈಚಾರಿಕ ಬರಹಗಳು | ಡಾ.ಬಂಜಗೆರೆ ಜಯಪ್ರಕಾಶ್ |
| 66. | ಅರೇಬಿಯನ್ ನೈಟ್ಸ್ | 150.00 | ಕಥೆಗಳು | ಪಂಜು ಗಂಗೊಳ್ಳಿ |
| 67. | ಜಿಮ್‌ಕಾರ್ಬೆಟ್-ಶಿಕಾರಿ ಕತೆಗಳು | 80.00 | ಕಥೆಗಳು | ಟಿ. ಎಸ್ .ವಿವೇಕಾನಂದ |
| 68. | ಚೆಕ್‌ಪೋಸ್ಟ್ | 100.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| 69. | Some-ಪದ | 80.00 | ಅನ್ಯಭಾಷಾ ಪದಗಳ ಪ್ರವಾಸ ಕಥನ | ಪಾರ್ವತೀಶ್ |
| 70. | ಬಿಡಿಚಿತ್ರಗಳು | 60.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| 71. | ಗೋವು ಪವಿತ್ರ ಎಂಬ ಮಿಥ್ಯೆ | 80.00 | ವೈಚಾರಿಕ ಬರಹಗಳು | ಡಿ.ಎನ್.ಝಾ |
| 72. | ಕರ್ಕರೆಯನ್ನು ಕೊಂದವರ್‍ಯಾರು? | 200.00 | | ಎಸ್. ಎಂ. ಮುಶ್ರಿಫ್ |
| 73. | ಅಸ್ಪೃಶ್ಯ ವಸಂತ | 200.00 | ಕಾದಂಬರಿ | ಕಲ್ಯಾಣ್ ರಾವ್ |
| 74. | ಬಾಲಗೋಪಾಲ್ ಬರಹಗಳು | 150.00 | ವೈಚಾರಿಕ ಬರಹಗಳು | ಬಾಲಗೋಪಾಲ್ |
| 75. | ಬದುಕು-ಬಯಲು | 200.00 | ಹಿಜ್ರಾ ಒಬ್ಬಳ ಆತ್ಮಕತೆ | ಎ. ರೇವತಿ |
| 76. | ಚಾರ್ವಾಕ | 250.00 | ಸಮಕಾಲೀನ ಬರಹಗಳು | ಶಿವಸುಂದರ್ |
| 77. | ಜಂಗಲ್‌ನಾಮಾ | 175.00 | ಗೆರಿಲ್ಲಾ ವಲಯದೊಳಗೆ | ಸತ್ನಾಮ್ |
| 78. | ತಾಜುಮಾ ಕವಿತೆಗಳು | 75.00 | ಕವನಗಳು | ತಾಜುಮಾ |
| 79. | ಅಂತ್ಯಜರ ತತ್ವ ಚಿಂತನೆ | 100.00 | | ಬಂಜಗೆರೆ ಜಯಪ್ರಕಾಶ್ |
| 80. | ಪ್ರೀತಿ ಮತ್ತು ಕ್ರಾಂತಿ | 125.00 | ಕವನಗಳು | ಫೈಜ್ ಮಹಮ್ಮದ್ ಫೈಜ್ |
| 81. | ಲೋಕಾಯುಕ್ತ ತನಿಖಾ ವರದಿ | 100.00 | | ಸಂತೋಷ್ ಹೆಗ್ಡೆ |
| 82. | ಕೇಸರಿ ಭಯೋತ್ಪಾದನೆ | 100.00 | | ಸುರೇಶ್ ಭಟ್ ಬಾಕ್ರಬೈಲ್ |
| 83. | ಹೇಳುತ್ತೇನೆ ಕೇಳು | 175.00 | ಹೆಣ್ಣಿನ ಆತ್ಮಕತೆ | ಸುಕನ್ಯಾ ಕನಾರಳ್ಳಿ |
| 84. | ನನ್ನ ಪ್ರೀತಿಯ ಭಾರತ | 125.00 | ಸಾಹಸ ಕಥೆಗಳು | ಜಿಮ್‌ಕಾರ್ಬೆಟ್ |
| 85. | ಒಂದು ಶಹರದ ಸುತ್ತ | 85.00 | ನಾಟಕ | ಎಸ್. ಎಫ್. ಯೋಗಪ್ಪನವರ್ |
| 86. | ಮಂಗನ ಬ್ಯಾಟೆ | 250.00 | ಮಲೆನಾಡಿನ ಪರಿಸರ ಕಥನ | ಕಲ್ಕುಳಿ ವಿಠಲ್ ಹೆಗ್ಡೆ |
| 87. | ಭಾರತದಲ್ಲಿ ಮಾವೋ ಚಳುವಳಿ | 250.00 | ಮಲೆನಾಡಿನ ಪರಿಸರ ಕಥನ | ಕಲ್ಕುಳಿ ವಿಠಲ್ ಹೆಗ್ಡೆ |
| 88. | ನನ್ನ ಪ್ರೀತಿಯ ಭಾರತ | | | 125.00 |
| 89. | ಮಧ್ಯಯುಗೀನ ಭಾರತ ಅಂತರ್‌ರಾಜ್ಯ ತತ್ವಚಿಂತನೆ | | | 100.00 |
| 90. | ಬಿಡಿಚಿತ್ರಗಳು | | | I 60.00 :: II 100.00 |
| 91. | ಭಾರತದಲ್ಲಿ ಕ್ರಾಂತಿ ಮತ್ತು ಮಾವೋವಾದಿ ಚಳವಳಿ – ಶ್ರೀಧರ | | | 150.00 |
| 92. | ಬೆಳಕಿನಡೆಗೆ | | | 125.00 |
| 93. | ಹುಳಿ ಮಾವು ಮತ್ತು ನಾನು | 150.00 | | ಇಂದಿರಾ ಲಂಕೇಶ್ |
| 94. | ಬಿಟ್ಟು ಹೋದ ಪುಟಗಳು | 250.00 | | ಪಿ. ಲಂಕೇಶ್ |
| 95. | ನೇತುಬಿದ್ದ ನವಿಲು | 225.00 | | ರಹಮತ್ ತರೀಕೆರೆ |

# ಶೋಷಿತರಿಗೆ ದನಿಕೊಟ್ಟ ಮಹಾನ್ ಚೇತನ
# ದಿ|| ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್
# ಅವರಿಗೆ ಭಾವಪೂರ್ಣ ನಮನ

ಮುರಳೀಧರ ಚಿಕ್ಕಮಗಳೂರು

ನವೆಂಬರ್ ೧೫, ೨೦೧೪ರಂದು ವಿಶ್ರಾಂತ ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್ ೯೯ ವಸಂತಗಳನ್ನು ದಾಟಿ ತಮ್ಮ ೧೦೦ನೇ ವರ್ಷಕ್ಕೆ ಕಾಲಿಟ್ಟಾಗ ಅವರ ಅಭಿಮಾನಿಗಳು ದೇಶದಾದ್ಯಂತ ಇಡೀ ವರ್ಷ ಅವರ ವಿಚಾರಧಾರೆಗಳನ್ನು ಕುರಿತು ಸಭೆ, ವಿಚಾರಸಂಕಿರಣಗಳನ್ನು ನಡೆಸಿ ಅವರ ಜನ್ಮಶತಾಬ್ದಿಯನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುವ ಯೋಜನೆ ಹಮ್ಮಿಕೊಳ್ಳುವ ಸಡಗರದಲ್ಲಿರುವಂತೆಯೇ ಅವರ ಮರಣದ ಸುದ್ದಿ ಎಲ್ಲರನ್ನೂ ದಿಙ್ಮೂಢಗೊಳಿಸಿತು. ಬಹಳಷ್ಟು ಅಭಿಮಾನಿಗಳಲ್ಲಿ ಅವರು ಮಹಾಭಾರತದ ಭೀಷ್ಮನಂತೆ ಇಚ್ಛಾಮರಣಿಗಳೆಂಬ ಭಾವನೆ ಬೆಳೆದುಬಿಟ್ಟಿತ್ತು. ಹಾಗಾಗಿ ಅವರು ಇನ್ನಿಲ್ಲವೆಂಬ ಸುದ್ದಿ ಅವರ ಅಭಿಮಾನಿಗಳಿಗೆ ಆಘಾತಕರವಾಗಿತ್ತು. ಹುಟ್ಟಿನೊಂದಿಗೆ ನೆರಳಾಗಿ ಬೆಳೆವ ಸಾವು ಒಂದು ರೀತಿಯಲ್ಲಿ ಸಮಾಜವಾದಿಯೇ ಸರಿ.

**ಜಗತ್ತಿನಲ್ಲಿ ಹಾದುಹೋದ ಅಪರೂಪದ ಪಯಣಿಗ**

ಭಾರತದಲ್ಲಿ ಅಧಿಕಾರ ಪಡೆದ ರಾಜಕಾರಣಿಗಳು, ಅಧಿಕಾರಿಗಳು ಮತ್ತು ನ್ಯಾಯಾಧೀಶರು ಅಧಿಕಾರವನ್ನು ತಮ್ಮ ಹಿತಕ್ಕಾಗಿ ದುರುಪಯೋಗಪಡಿಸಿಕೊಳ್ಳುವುದನ್ನು ಯಥೇಚ್ಛವಾಗಿ ಕಂಡಿದ್ದೇವೆ. ಆದರೆ ಸಮಾಜ ನೀಡಿದ ಅಧಿಕಾರವನ್ನು ಸಂವಿಧಾನಬದ್ಧವಾಗಿ, ನಿರ್ಭೀತಿಯಿಂದ ಮತ್ತು ಸಮಾಜಮುಖಿಯಾಗಿ ಬಳಸುವವರು ಬಹು ವಿರಳ. ಅದರಲ್ಲೂ ತಮ್ಮ ನಡೆ–ನುಡಿಗಳಿಂದ ಇಡೀ ಸಮಾಜವನ್ನು ಹೊಸ ಚಿಂತನೆ, ಹೊಸ ಆಯಾಮ, ಹೊಸ ಹಾದಿ ಮತ್ತು ಹೊಸ ಆಶಯಗಳತ್ತ ಕೊಂಡೊಯ್ಯುವ ವ್ಯಕ್ತಿಗಳಂತೂ ಅಪರೂಪ. ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಈ ಜಗತ್ತಿನಲ್ಲಿ ಹಾದುಹೋದ ಅಪರೂಪದ ಪಯಣಿಗರೆಂಬುದು ಸರ್ವಜನ ಮಾನ್ಯ ಅಭಿಪ್ರಾಯ. ನಾವು ಈ ಕಾಲಘಟ್ಟದಲ್ಲಿದ್ದೆವೆಂಬುದೇ ಹೆಮ್ಮೆಯ ವಿಷಯ.

ಭಾರತದಲ್ಲಿ ಅಧಿಕಾರ ಪಡೆದ ರಾಜಕಾರಣಿಗಳು, ಅಧಿಕಾರಿಗಳು ಮತ್ತು ನ್ಯಾಯಾಧೀಶರು ಅಧಿಕಾರವನ್ನು ತಮ್ಮ ಹಿತಕ್ಕಾಗಿ ದುರುಪಯೋಗಪಡಿಸಿಕೊಳ್ಳುವುದನ್ನು ಯಥೇಚ್ಛವಾಗಿ ಕಂಡಿದ್ದೇವೆ. ಆದರೆ ಸಮಾಜ ನೀಡಿದ ಅಧಿಕಾರವನ್ನು ಸಂವಿಧಾನಬದ್ಧವಾಗಿ, ನಿರ್ಭೀತಿಯಿಂದ ಮತ್ತು ಸಮಾಜಮುಖಿಯಾಗಿ ಬಳಸುವವರು ಬಹು ವಿರಳ. ಅದರಲ್ಲೂ ತಮ್ಮ ನಡೆ–ನುಡಿಗಳಿಂದ ಇಡೀ ಸಮಾಜವನ್ನು ಹೊಸ ಚಿಂತನೆ, ಹೊಸ ಆಯಾಮ, ಹೊಸ ಹಾದಿ ಮತ್ತು ಹೊಸ ಆಶಯಗಳತ್ತ ಕೊಂಡೊಯ್ಯುವ ವ್ಯಕ್ತಿಗಳಂತೂ ಅಪರೂಪ. ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಈ ಜಗತ್ತಿನಲ್ಲಿ ಹಾದುಹೋದ ಅಪರೂಪದ ಪಯಣಿಗರೆಂಬುದು ಸರ್ವಜ್ಞನ ಮಾನ್ಯ ಅಭಿಪ್ರಾಯ. ನಾವು ಈ ಕಾಲಘಟ್ಟದಲ್ಲಿದ್ದೆವೆಂಬುದೇ ಹೆಮ್ಮೆಯ ವಿಷಯ.

**ಹೋರಾಟದ ಪರಿಸರ – ರೂಪುಗೊಂಡ ಪ್ರಜ್ಞೆ**

ಕೃಷ್ಣ ಅಯ್ಯರ್ ಅವರ ತಂದೆ ರಾಮ ಅಯ್ಯರ್ ತೆಲಿಚೇರಿಯಲ್ಲಿ ವಕೀಲ ವೃತ್ತಿಯಲ್ಲಿದ್ದವರು. ಈ ಕಾರಣಕ್ಕೋ ಏನೋ ಕೃಷ್ಣ ಅಯ್ಯರ್ ಕೂಡ ಕಾನೂನು ಪದವಿ ಪಡೆದು ತಮ್ಮ ತಂದೆಯೊಡನೆ ೧೯೩೮ರಲ್ಲಿ ವಕೀಲ ವೃತ್ತಿ ಆರಂಭಿಸಿದರು. ತಮ್ಮ ತಂದೆ ನ್ಯಾಯಾಲಯಗಳಿಗೆ ಬರಲಾಗದಿದ್ದ ಸಂದರ್ಭಗಳಲ್ಲಿ ಕೃಷ್ಣ ಅಯ್ಯರ್ ಎಳೆಯ ವಯಸ್ಸಿನವರಾದರೂ ನ್ಯಾಯಾಧೀಶರುಗಳ ಮುಂದೆ ಪ್ರಕರಣಗಳನ್ನು ಮತ್ತು ಮೊಕದ್ದಮೆಗಳನ್ನು ಧೈರ್ಯದಿಂದ ನಡೆಸಿ ಎಲ್ಲರನ್ನೂ ಬೆರಗುಗೊಳಿಸಿದ್ದರು. ಉತ್ತರ ಮಲಬಾರ್ ಇವರ ವೃತ್ತಿಗೆ ಕಾರ್ಯಕ್ಷೇತ್ರವಾಗಿತ್ತು. ಅಂದಿನ ಸಂದರ್ಭದಲ್ಲಿ ಈ ಪ್ರದೇಶ ಕಾರ್ಮಿಕರ ಮತ್ತು ಕೃಷಿಕರ ಹೋರಾಟಗಳ ಬೀಡಾಗಿತ್ತು ಮತ್ತು ರಾಜಕೀಯ ಪರಿಸ್ಥಿತಿಯನ್ನು ಉದ್ದೀಪನಗೊಳಿಸಿತ್ತು. ಪೊಲೀಸರು ದಿನನಿತ್ಯ ಹೇರುತ್ತಿದ್ದ ಕ್ರಿಮಿನಲ್ ಮೊಕದ್ದಮೆಗಳನ್ನು ನಡೆಸುವಲ್ಲಿ ಕೃಷ್ಣ ಅಯ್ಯರ್ ನಡೆಸುತ್ತಿದ್ದ ಅಭ್ಯಾಸ, ಅಧ್ಯಯನ ಮತ್ತು ತೋರುತ್ತಿದ್ದ ಬದ್ಧತೆ ಎಳೆಯ ವಯಸ್ಸಿನಲ್ಲೇ ಅವರನ್ನು ಪ್ರಬುದ್ಧರನ್ನಾಗಿಸಿತ್ತು. ಜೊತೆಗೆ, ರೈತ–ಕಾರ್ಮಿಕರ ಹೋರಾಟಗಳ ಅವಿಭಾಜ್ಯ ಅಂಗವಾಗಿಬಿಟ್ಟಿದ್ದರು. ಹಾಗಾಗಿ ಕೃಷ್ಣ ಅಯ್ಯರ್ ಶೋಷಿತ ಜನರ ರಾಜಕೀಯ, ಸಾಮಾಜಿಕ ಮತ್ತು ನ್ಯಾಯಿಕ ದನಿಯಾಗಿ ಬೆಳೆದುನಿಂತರು. ಅಂದಿನ ಪರಿಸರ ಅವರ ಪ್ರಜ್ಞೆಯನ್ನು ರೂಪಿಸಿತ್ತು. ಹೀಗೆ ರೂಪುಗೊಂಡ ಅವರ ಪ್ರಜ್ಞೆಯೇ ಅವರ ರಾಜಕೀಯ ರಂಗಪ್ರವೇಶಕ್ಕೆ ಕಾರಣವಾಯಿತೆಂದರೆ ತಪ್ಪಾಗಲಾರದು.

**ಸೆರೆಮನೆ ಸೇರಿದ ಕೃಷ್ಣ ಅಯ್ಯರ್**

೧೯೪೭ರಲ್ಲಿ ಭಾರತ ಸ್ವಾತಂತ್ರ್ಯವನ್ನು ಗಳಿಸಿದರೂ ಬಡಜನರ ಮೇಲಿನ ದೌರ್ಜನ್ಯ ಮಾತ್ರ ನಿರಂತರವಾಗಿ ನಡೆದಿತ್ತು. ಅದರಲ್ಲೂ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರ ಮೇಲೆ ಪೊಲೀಸರ ದಬ್ಬಾಳಿಕೆ ಮಿತಿಮೀರಿತ್ತು. ಪಕ್ಷದ ಕಾರ್ಯಕರ್ತರನ್ನು ಹಿಂಸೆಗೊಳಪಡಿಸಲಾಗುತ್ತಿದ್ದುದು ಸಾಮಾನ್ಯವಾಗಿತ್ತು. ೧೯೪೮ರಲ್ಲಿ ಮುಷ್ಕರ ನಿರತ ಅಂಚೆ ನೌಕರರನ್ನುದ್ದೇಶಿಸಿ ಭಾಷಣ ಮಾಡಿ ಅವರಿಗೆ ಬೆಂಬಲ ಸೂಚಿಸಿದ ಆರೋಪದ ಮೇಲೆ ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕರಾದ ಎ. ಕೆ. ಗೋಪಾಲನ್‌ರವರನ್ನು ಬಂಧಿಸಿ, ೧೮ ತಿಂಗಳ ಕಠಿಣ ಸಜೆ ವಿಧಿಸಿದ ಪ್ರಕರಣದಲ್ಲಿ ಎ. ಕೆ. ಗೋಪಾಲನ್ ಮತ್ತಿತರ ಕಮ್ಯುನಿಸ್ಟ್ ಕಾರ್ಯಕರ್ತರಿಗೆ ನೆರವು ನೀಡುತ್ತಿದ್ದರೆಂಬ ಆರೋಪದ ಮೇಲೆ ಕೃಷ್ಣ ಅಯ್ಯರ್ ಬಂಧನಕ್ಕೊಳಗಾಗಿ ಒಂದು ತಿಂಗಳು ಕಾರಾಗೃಹ ಸೇರಬೇಕಾಯಿತು. ಕಾರಾಗೃಹದಲ್ಲಿದ್ದ ಈ ಅನುಭವ ಅವರ ಚಿಂತನೆಗೆ ಹೊಸ ಆಯಾಮ ಕೊಟ್ಟಿತು. ೩೦ ವರ್ಷಗಳ ನಂತರ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ಕೃಷ್ಣ ಅಯ್ಯರ್ ಸುನೀಲ್ ಬತ್ರ ಪ್ರಕರಣದಲ್ಲಿ (ಎ.ಐ.ಆರ್. ೧೯೭೮ – ಪುಟ ೧೬೭೫) ನೀಡಿದ ಚಾರಿತ್ರಿಕ ತೀರ್ಪು ಅವರ ಕಾರಾಗೃಹವಾಸದ ಅನುಭವದ ಪರಿಣಾಮವೇ ಎನ್ನಬಹುದು. ಹೀಗೆ ಎಲ್ಲ ಅನುಭವಗಳೂ ಕೃಷ್ಣ ಅಯ್ಯರ್‌ರವರನ್ನು ಮಾನಸಿಕವಾಗಿ ಹಾಗೂ ಸೈದ್ಧಾಂತಿಕವಾಗಿ ಗಟ್ಟಿಗೊಳಿಸಿ ಅವರ ಚಿಂತನಾಶೀಲತೆಯನ್ನು ಹರಿತಗೊಳಿಸಿದವು.

**ಆದರ್ಶ ರಾಜಕಾರಣಿ**

೧೯೫೨ರಲ್ಲಿ ಮದ್ರಾಸ್ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಜಯ ಗಳಿಸಿದ ಕೃಷ್ಣ ಅಯ್ಯರ್ ವಿಧಾನಸಭೆಯಲ್ಲಿ ಮುಖ್ಯಮಂತ್ರಿ ರಾಜಗೋಪಾಲಾಚಾರಿಯವರನ್ನು ಬಿಡದೆ ಕಾಡಿದ್ದರು. ವಿಧಾನಸಭೆಗೆ ಹೋಗುವ ಮುನ್ನ ಅವರು ಕೈಗೊಳ್ಳುತ್ತಿದ್ದ ತಯಾರಿ, ಮಂಡಿಸುತ್ತಿದ್ದ ವಿಷಯ ಪ್ರಸ್ತಾವನೆ, ವಾದ ಎಲ್ಲರ ಮೆಚ್ಚುಗೆ ಗಳಿಸಿತ್ತು. ಈ ಬಗೆಯಲ್ಲಿ ಒಬ್ಬ ತೀಕ್ಷ್ಣಮತಿಯ ಹೋರಾಟಗಾರ, ನ್ಯಾಯವಾದಿ ಆದರ್ಶ ಜನಪ್ರತಿನಿಧಿಯಾದದ್ದು ಸಹಜವೇ. ಕೃಷ್ಣ ಅಯ್ಯರ್ ಜನಪ್ರತಿನಿಧಿಯಾಗಿ ಉತ್ತುಂಗಕ್ಕೇರುವ ಎಲ್ಲ ಲಕ್ಷಣಗಳೂ ಮದ್ರಾಸ್ ವಿಧಾನಸಭೆಯಲ್ಲಿ ಪ್ರಕಟಗೊಂಡಿದ್ದವು. ೧೯೫೬ರಲ್ಲಿ ರಾಜ್ಯ ಪುನರ್ವಿಂಗಡನೆಗೊಂಡನಂತರ ೧೯೫೭ರಲ್ಲಿ ಕೇರಳ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಜಯಗಳಿಸಿ ಇ. ಎಂ. ಎಸ್. ನಂಬೂದರಿಪಾದ್ ಸರ್ಕಾರ

ರಚಿಸಿದ್ದು ಪ್ರಪಂಚದ ರಾಜಕೀಯ ಇತಿಹಾಸದಲ್ಲಿ ಚುನಾವಣೆಯ ಮೂಲಕ ಜನಮನ್ನಣೆ ಗಳಿಸಿದ ಪ್ರಥಮ ಕಮ್ಯುನಿಸ್ಟ್ ಪಕ್ಷವೆಂದು ದಾಖಲಾಯಿತು, ಕೃಷ್ಣ ಅಯ್ಯರ್ ಗೃಹ ಮಂತ್ರಾಲಯದ ಜೊತೆಗೆ, ಕಾನೂನು, ಜೈಲು ಮತ್ತು ಸಮಾಜ ಕಲ್ಯಾಣ, ನೀರಾವರಿ ಇಲಾಖೆಗಳ ಸಚಿವರಾಗಿ ಕೈಗೊಂಡ ಸುಧಾರಣೆಗಳು ಇಂದಿಗೂ ಚಿರಸ್ಥಾಯಿಗಳಾಗಿ ಉಳಿದಿವೆ. ಇಡೀ ರಾಷ್ಟ್ರಕ್ಕೆ ಮಾದರಿಯಾಗಿವೆ. ಬಡಜನರಿಗೆ ಉಚಿತ ಕಾನೂನಿನ ನೆರವು, ಜೈಲುಗಳ ಸುಧಾರಣೆ, ಭೂಸುಧಾರಣೆ ಹೀಗೆ ಹಲವಾರು ಪ್ರಗತಿಶೀಲ ಸುಧಾರಣೆಗಳು ಕೃಷ್ಣ ಅಯ್ಯರ್‌ರವರ ಕ್ರಿಯಾಶೀಲತೆ, ದಕ್ಷತೆ ಮತ್ತು ಅವರಲ್ಲಿದ್ದ ಜನಪರ ಕಾಳಜಿಗೆ ಸಾಕ್ಷಿಗಳಾದವು.



**ನ್ಯಾಯಮೂರ್ತಿಯಾಗಿ ನೇಮಕ**

ಕಮ್ಯುನಿಸ್ಟ್ ಸರ್ಕಾರದ ಜನಪ್ರಿಯತೆ ದಿನೇ ದಿನೇ ಹೆಚ್ಚುತ್ತಿದ್ದಂತೆಯೇ ಪಟ್ಟಭದ್ರ ಹಿತಾಸಕ್ತಿಗಳ ಕಿಚ್ಚೂ ಹೆಚ್ಚಾಗಿ ಅಂದು ಕಾಂಗ್ರೆಸ್ ಪಕ್ಷದ ರಾಷ್ಟ್ರೀಯ ಅಧ್ಯಕ್ಷರಾಗಿದ್ದ ಇಂದಿರಾ ಗಾಂಧಿ ಮತ್ತು ರಾಷ್ಟ್ರದ ಪ್ರಧಾನ ಮಂತ್ರಿಯಾಗಿದ್ದ ಜವಾಹರ್‌ಲಾಲ್ ನೆಹರು ಸಂವಿಧಾನದ ಅನುಚ್ಛೇದ ೩೫೬ರನ್ನು ದುರ್ಬಳಕೆ ಮಾಡಿ ಇ. ಎಂ. ಎಸ್. ನಂಬೂದರಿಪಾದ್ ಸರ್ಕಾರವನ್ನು ವಜಾಗೊಳಿಸಿದ್ದು ಪ್ರಜಾಪ್ರಭುತ್ವದ ಬುನಾದಿಗೇ ಕೊಟ್ಟ ಕೊಡಲಿ ಪೆಟ್ಟಾಗಿತ್ತು. ಈ ಹಿನ್ನೆಲೆಯಲ್ಲಿ ಕೇರಳ ರಾಜ್ಯಾದ್ಯಂತ ನಡೆದ ಪ್ರತಿಭಟನೆ ಮತ್ತು ಉದ್ವಿಗ್ನ ಪರಿಸ್ಥಿತಿಯನ್ನು ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಕೇರಳದ ಗೃಹಮಂತ್ರಿಯಾಗಿದ್ದ ಕೃಷ್ಣ ಅಯ್ಯರ್ ಅತ್ಯಂತ ಜವಾಬ್ದಾರಿಯುತವಾಗಿ ಹಾಗೂ ಮಾನವೀಯತೆಯಿಂದ ನಿಭಾಯಿಸಿದ್ದು ಶ್ಲಾಘನೀಯವಾಗಿತ್ತು. ನಂತರ ವಕೀಲ ವೃತ್ತಿಗೆ ಹಿಂದಿರುಗಿದ ಕೃಷ್ಣ ಅಯ್ಯರ್‌ರವರು ೧೯೬೮ರಲ್ಲಿ ಕೇರಳದ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ನೇಮಕಗೊಂಡರು. ೧೯೭೧–೭೩ರ ಅವಧಿಯಲ್ಲಿ ಲಾ–ಕಮಿಷನ್‌ನ ಸದಸ್ಯರಾಗಿ ಅನೇಕ ಕಾನೂನುಗಳಿಗೆ ಸುಧಾರಣೆ ತರುವಲ್ಲಿ ಪ್ರಮುಖ ಪಾತ್ರವಹಿಸಿದರು. ಕೃಷ್ಣ ಅಯ್ಯರ್‌ರವರ ಈ ಬಹುಮುಖ ಪ್ರತಿಭೆಯ ಫಲವಾಗಿಯೇ ೧೯೭೩ರಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯ ಅವರನ್ನು ಸೆಳೆದುಕೊಂಡದ್ದು ಮತ್ತು ದೇಶದ ನ್ಯಾಯಾಂಗದ ಚರಿತ್ರೆಯಲ್ಲಿ ಹೊಸ ಅಧ್ಯಾಯವೊಂದು ಆರಂಭಗೊಂಡದ್ದು.

**ಸರ್ವೋಚ್ಚ ನ್ಯಾಯಾಲಯ – ಅಗ್ನಿಪರೀಕ್ಷೆ**

ಕೃಷ್ಣ ಅಯ್ಯರ್ ೧೯೭೩ರಿಂದ ೧೯೮೦ರವರೆಗೆ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದ ಅವಧಿಯನ್ನು ಸುವರ್ಣ ವರ್ಷಗಳೆಂದು ಕರೆದರೆ ಅತಿಶಯೋಕ್ತಿಯಲ್ಲ. ಅವರು ಸರ್ವೋಚ್ಚ ನ್ಯಾಯಾಲಯವನ್ನು ಅಲಂಕರಿಸಿದ ಎರಡು ವರ್ಷದ ಅವಧಿಯಲ್ಲೇ ಅಗ್ನಿಪರೀಕ್ಷೆಯೊಂದು ಕಾದಿತ್ತು. ಪ್ರಧಾನ ಮಂತ್ರಿ ಇಂದಿರಾ ಗಾಂಧಿಯವರ ಚುನಾವಣೆಯನ್ನು ರಾಜ್‌ನಾರಾಯಣ್ ಪ್ರಶ್ನಿಸಿದ್ದ ಪ್ರಕರಣದಲ್ಲಿ ಅಲಹಾಬಾದ್ ಉಚ್ಚ ನ್ಯಾಯಾಲಯ ಅಸಿಂಧು ಎಂದು ಮತ್ತು ಅವರನ್ನು ಮುಂದಿನ ಆರು ವರ್ಷಗಳು ಚುನಾವಣೆಗೆ ಅನರ್ಹರೆಂದು ತೀರ್ಪು ನೀಡಿತು. ದಿಕ್ಕೆಟ್ಟ ಕಾಂಗ್ರೆಸ್ ಪಕ್ಷ ಅಧೀರಗೊಂಡಿತು. ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪಿನ ವಿರುದ್ಧ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ ಸಮಯದಲ್ಲಿ ನ್ಯಾಯಾಲಯಕ್ಕೆ ಬೇಸಿಗೆ ರಜಾ. ರಜೆಯ ಅವಧಿಯಲ್ಲಿ ವಿಶೇಷ ನ್ಯಾಯಪೀಠದಲ್ಲಿದ್ದವರು ನ್ಯಾಯಮೂರ್ತಿ ಕೃಷ್ಣ ಅಯ್ಯರ್. ಅಂದಿನ ಕೇಂದ್ರ ಕಾನೂನು ಮಂತ್ರಿ ಎಚ್. ಆರ್. ಗೋಖಲೆ ಕೃಷ್ಣ ಅಯ್ಯರ್‌ರವರನ್ನು ಭೇಟಿ ಮಾಡಲು ಕಾಲಾವಕಾಶ ಕೇಳಿದ್ದನ್ನು ಯಾವ ಹಿಂಜರಿಕೆಯೂ ಇಲ್ಲದೆ ನಿರಾಕರಿಸಿದ್ದು ಇವರ ನಿರ್ಭೀತ ಮತ್ತು ನಿಷ್ಪಕ್ಷಪಾತ ಧೋರಣೆಗೊಂದು ನಿದರ್ಶನ. ಕೇಂದ್ರ ಕಾನೂನು ಮಂತ್ರಿಯನ್ನು ಭೇಟಿ ಮಾಡಲು ನಿರಾಕರಿಸಿದ ಕೃಷ್ಣ ಅಯ್ಯರ್ ಬಗ್ಗೆ ಇಂದಿರಾ ಗಾಂಧಿ ಅಸಮಾಧಾನ ಮತ್ತು ಕೋಪ ವ್ಯಕ್ತಪಡಿಸಿದರೆಂಬುದು ನಂತರ ಬೆಳಕಿಗೆ ಬಂದ ವಿಷಯ.

**ಮಧ್ಯಂತರ ಆದೇಶ – ತುರ್ತುಪರಿಸ್ಥಿತಿ**

ತಮ್ಮ ಪ್ರಿಯ ಪತ್ನಿಯನ್ನು ಕಳೆದುಕೊಂಡ ಅತೀವ ದುಃಖ ನ್ಯಾಯಮೂರ್ತಿ ಕೃಷ್ಣ ಅಯ್ಯರ್‌ರವರನ್ನು ಗಾಢವಾಗಿ ಆವರಿಸಿಕೊಂಡಿತ್ತು. ೨೪, ಜೂನ್ ೧೯೭೫ರಂದು ಇಂದಿರಾ ಗಾಂಧಿ ಸಲ್ಲಿಸಿದ್ದ ಅರ್ಜಿ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಪೀಠದ ಮುಂದೆ ಬಂದು, ದೀರ್ಘ ವಾದ ನಡೆದ ಮರುದಿನವೇ ತನ್ನ ಮಧ್ಯಂತರ ಆದೇಶದಲ್ಲಿ ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪನ್ನು ಬೇಷರತ್ತಾಗಿ ತಡೆಯಾಜ್ಞೆ ಕೊಡಲು ಪೀಠ ನಿರಾಕರಿಸಿತು, ಇಂದಿರಾ ಗಾಂಧಿ ಪ್ರಧಾನ ಮಂತ್ರಿಯಾಗಿ ಮುಂದುವರಿಯಬಹುದು, ಆದರೆ ಮತದಾನದ ಹಕ್ಕಿಲ್ಲವೆಂಬ ಆದೇಶ ಇಂದಿರಾ ಗಾಂಧಿಯವರನ್ನು ಕೆರಳಿಸಿತ್ತು. ಇದೇ ೨೫, ಜೂನ್ ೧೯೭೫ರಂದು ರಾಷ್ಟ್ರಾದ್ಯಂತ ತುರ್ತುಪರಿಸ್ಥಿತಿ ಘೋಷಣೆಯ ಹಿನ್ನೆಲೆ ಆಗಿತ್ತು. ಬಹುಶಃ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ತಮ್ಮ ಆದೇಶವು ಈ ಪ್ರಮಾಣದ ಭೀಕರ ಪರಿಣಾಮ ತರಬಹುದೆಂಬುದನ್ನು ಕಲ್ಪಿಸಿಕೊಂಡಿರಲಿಲ್ಲವೆನಿಸುತ್ತದೆ. ಆದರೆ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಕೊಟ್ಟ ಆದೇಶವನ್ನು ಅನೇಕಾನೇಕ ನ್ಯಾಯಮೂರ್ತಿಗಳು ಮತ್ತು ಕಾನೂನು ಪಂಡಿತರು ನ್ಯಾಯಾಂಗ ಪರಂಪರೆಯಲ್ಲಿ ಅತ್ಯಂತ ವಿವೇಚನೆಯಿಂದ ಕೊಟ್ಟಂತಹ ಆದೇಶವೆಂದೂ ಅದು ಸರ್ವೋಚ್ಚ ನ್ಯಾಯಾಲಯದ ಘನತೆ ಹಾಗೂ ಗೌರವವನ್ನು ಹೆಚ್ಚಿಸಿತೆಂದೂ ಶ್ಲಾಘಿಸಿದ್ದಾರೆ.

**ಸರ್ವೋಚ್ಚ ನ್ಯಾಯಾಲಯದ ಸುವರ್ಣ ವರ್ಷಗಳು**

ತುರ್ತುಪರಿಸ್ಥಿತಿಯ ಮತ್ತು ನಂತರದ ಅವಧಿಯಲ್ಲಿ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ನೀಡಿದಂತಹ ಮಹತ್ವದ ತೀರ್ಪುಗಳು ಸಾಮಾಜಿಕ ನ್ಯಾಯ, ಮಾನವ ಹಕ್ಕುಗಳು ಮತ್ತು ಮಾನವೀಯ ಮೌಲ್ಯಗಳನ್ನು ತುಂಬಿಕೊಂಡಂತಹ ದ್ದಾಗಿವೆ. ೧೯೭೦ರ ದಶಕದಲ್ಲಿ ನ್ಯಾಯಮೂರ್ತಿ ಪಿ. ಎನ್. ಭಗವತಿ, ನ್ಯಾಯಮೂರ್ತಿ ಡಿ. ಎ. ದೇಸಾಯಿ ಮತ್ತು ನಂತರ ನ್ಯಾಯಮೂರ್ತಿ ಒ. ಚಿನ್ನಪ್ಪ ರೆಡ್ಡಿ. ಇವರೊಡನಿದ್ದ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಸರ್ವೋಚ್ಚ ನ್ಯಾಯಾಲಯದ ಬಾಗಿಲನ್ನು ಜನಸಾಮಾನ್ಯರಿಗೆ ತೆರೆದಿಟ್ಟ ಧೀಮಂತ ನ್ಯಾಯಮೂರ್ತಿಗಳು. ಸಾರ್ವಜನಿಕ ಹಿತಾಸಕ್ತಿ ಪ್ರಕರಣಗಳಿಗೆ ಉತ್ತೇಜನ ನೀಡಿ ದನಿಯಿಲ್ಲದ ಜನರಿಗೆ ದನಿ ನೀಡಿ ನ್ಯಾಯಾಂಗದ ಉದ್ದೇಶಗಳನ್ನು ಸಾರ್ಥಕಗೊಳಿಸಿದವರು, ನ್ಯಾಯಾಂಗದ ಇತಿಹಾಸದಲ್ಲೊಂದು ಹೊಸ ಹಾದಿ ಸೃಷ್ಟಿಸಿದವರು. ಇವರು ಸಂವಿಧಾನದ ಪ್ರಸ್ತಾವನೆ, ಮೂಲಭೂತ ಹಕ್ಕುಗಳು ಮತ್ತು ರಾಜ್ಯನೀತಿ ನಿರ್ದೇಶಕ ತತ್ವಗಳನ್ನು ಸಾಕಾರಗೊಳಿಸಲು ಅವಿರತವಾಗಿ ಶ್ರಮಿಸಿದ ಅಪರೂಪದ ನ್ಯಾಯಾಧೀಶರೆಂಬುದು ನಿರ್ವಿವಾದ. ಅನುಚ್ಛೇದ ೨೧ರ ಮೂಲಭೂತ ಹಕ್ಕು–ಜೀವಸಂರಕ್ಷಣೆ ಮತ್ತು ವ್ಯಕ್ತಿ ಸ್ವಾತಂತ್ರ್ಯದ ಸಂರಕ್ಷಣೆಯ ಅರ್ಥವ್ಯಾಪ್ತಿಯನ್ನು ವಿಶಾಲಗೊಳಿಸಿ ಸಂವಿಧಾನಕ್ಕೆ ಹೊಸ ಜೀವಕಳೆ ನೀಡಿದ ಹಿರಿಮೆ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಅವರದ್ದು. ಬೆಂಗಳೂರು ಜಲಮಂಡಲಿಯು ಕೈಗಾರಿಕಾ ವಿವಾದಗಳ ಕಾಯ್ದೆಯಡಿಯಲ್ಲಿ "ಕೈಗಾರಿಕೆ" ಎಂಬ ಅರ್ಥವ್ಯಾಪ್ತಿಗೆ ಒಳಪಡುವುದೇ ಎಂಬ ವಿವಾದದ ಬಗ್ಗೆ ಏಳು ಜನ ನ್ಯಾಯಮೂರ್ತಿಗಳ ನ್ಯಾಯಪೀಠದಲ್ಲಿದ್ದ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ನೀಡಿದ ತೀರ್ಪು ಕಾರ್ಮಿಕ ಕಾನೂನುಗಳಿಗೆ ಹೊಸ ತಿರುವನ್ನು ಕೊಟ್ಟಿತು (ಎ.ಐ.ಆರ್. ೧೯೭೮, ಪುಟ ೫೪೮) ಹಾಗೆಯೇ ಆರೋಪಿಗಳಿಗೆ ಜಾಮೀನು ನೀಡುವುದು ನ್ಯಾಯಾಲಯಗಳ ಸಾಮಾನ್ಯ ನಿಯಮವಾಗಿರಬೇಕು. ಜಾಮೀನು ನಿರಾಕರಿಸಿ ಜೈಲಿಗೆ ಕಳುಹಿಸುವುದು ಅಸಾಧಾರಣ ಸಂದರ್ಭಗಳಲ್ಲಿ ಮಾತ್ರವಾಗಿರಬೇಕೆಂಬ ತೀರ್ಪು ಅವರ ಮಾನವೀಯ ಮೌಲ್ಯಗಳಿಗೊಂದು ನಿದರ್ಶನ. ಅವರು ನೀಡಿದ ತೀರ್ಪುಗಳನ್ನು ಓದುವುದು ಮತ್ತು ಅರ್ಥ ಮಾಡಿಕೊಳ್ಳುವುದೇ ಒಂದು ದೊಡ್ಡ ಸಾಹಸವೆಂಬುದು ಕೆಲವರ ಅಭಿಪ್ರಾಯ.

ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಯಾವ ಸಾಹಸವನ್ನೂ ಮಾಡದೆ ನಿರ್ಭಿಡೆಯಿಂದ ತೀರ್ಪುಗಳನ್ನು ನೀಡಿದವರು, ಲೇಖನಗಳನ್ನು ಬರೆದವರು. ಈ ಹಿನ್ನೆಲೆಯಲ್ಲಿ ಅಸಾಧಾರಣ ಪಾಂಡಿತ್ಯ ಮತ್ತು ಪ್ರತಿಭೆ ಹೊಂದಿದ್ದ ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಅವರ ಚಿಂತನೆ ಮತ್ತು ಲೇಖನಿ ಹರಿತವಾಗಿದ್ದುದು ಸಹಜವೇ. ಹೀಗೆ ಅನಾಯಾಸವಾಗಿ ಬರೆದ ತೀರ್ಪುಗಳು, ಲೇಖನಗಳು ಮತ್ತು ಪುಸ್ತಕಗಳನ್ನು ಓದುವುದೆಂದರೆ ಕವಿತೆಗಳನ್ನು ಓದಿದ ಅನುಭವವೇ ಸರಿ. ಕಾನೂನಿನ ಒಳಾರ್ಥಗಳನ್ನು ಮತ್ತು ಸೂಕ್ಷ್ಮಗಳನ್ನು ತೆರೆದಿಡುವ ಇವರ ಶೈಲಿಯಂತೂ ಅಪ್ರತಿಮ.

**ಸಾಮಾಜಿಕ ನ್ಯಾಯದ ಕಾಳಜಿ**

ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರು ನಿವೃತ್ತರಾಗುತ್ತಿದ್ದಂತೆಯೇ ಸರ್ಕಾರದ ಯಾವುದಾದರೂ ಆಯೋಗದ ಸದಸ್ಯರಾಗುವುದು, ಇಲ್ಲವೇ ರಾಜ್ಯಪಾಲರ ಹುದ್ದೆಯನ್ನು ಗಿಟ್ಟಿಸಿಕೊಳ್ಳುವುದು ಸಾಮಾನ್ಯ. ಆದರೆ ಕೃಷ್ಣ ಅಯ್ಯರ್ ನಿವೃತ್ತರಾದ ನಂತರ ಇಂತಹ ಯಾವ ಆಸೆ–ಆಮಿಷಗಳಿಗೂ ಒಳಗಾಗದೆ ಸಮಾಜದ ದುರ್ಬಲರ ಜೊತೆ ಕೈಜೋಡಿಸಿ ಅವಿಶ್ರಾಂತವಾಗಿ ತಮ್ಮ ಕೊನೆಯ ದಿನಗಳವರೆಗೂ ದುಡಿದದ್ದು ಸಾಮಾಜಿಕ ನ್ಯಾಯದ ಬಗ್ಗೆ ಅವರಲ್ಲಿದ್ದ ಕಳಕಳಿ ಮತ್ತು ಬದ್ಧತೆಯ ಪ್ರತಿಫಲನವಾಗಿದೆ. ೧೯೮೭ರಲ್ಲಿ ರಾಷ್ಟ್ರಪತಿ ಚುನಾವಣೆಯಲ್ಲಿ ಸ್ಪರ್ಧಿಸಿ ಸೋತರೂ, ಅದು ಅವರ ತಾತ್ವಿಕ ನೆಲಗಟ್ಟನ್ನೇನೂ ಅಲುಗಾಡಿಸಲಿಲ್ಲ. ೨೦೦೨ರಲ್ಲಿ ಗುಜರಾತ್ ರಾಜ್ಯದಲ್ಲಿ ನಡೆದ ಹತ್ಯಾಕಾಂಡಕ್ಕೆ ನರೇಂದ್ರ ಮೋದಿ ಮತ್ತು ಗುಜರಾತ್ ಸರ್ಕಾರವೇ ಕಾರಣ ಎಂದು ತಮ್ಮ ತನಿಖಾ ವರದಿಯಲ್ಲಿ ನಿಖರವಾಗಿ ಆರೋಪಿಸಿದರು. ಕೃಷ್ಣ ಅಯ್ಯರ್ ಅನೇಕ ಅಂಕಣಗಳು, ಅದರಲ್ಲೂ ಹೆಚ್ಚಾಗಿ 'ದಿ ಹಿಂದು' ಪತ್ರಿಕೆಯಲ್ಲಿ ಬರೆದ ಲೇಖನಗಳಿಗಂತೂ ಲೆಕ್ಕವಿಲ್ಲ. ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಕ್ಕೆ ಅರ್ಹರಲ್ಲದಂತಹ ವ್ಯಕ್ತಿಗಳನ್ನು ನ್ಯಾಯಾಧೀಶರ ಹುದ್ದೆಗೆ



ನೇಮಿಸಿದಾಗೆಲ್ಲ, ಅದರ ಬಗ್ಗೆ ಕೃಷ್ಣ ಅಯ್ಯರ್ ತೀವ್ರ ಅಸಮಾಧಾನ ಮತ್ತು ನಿರಾಶೆಯನ್ನು ವ್ಯಕ್ತಪಡಿಸುತ್ತಿದ್ದರು. ನ್ಯಾಯಾಂಗದ ವರ್ಚಸ್ಸು ಕ್ರಮೇಣ ಕುಂದುತ್ತಿರುವ ಬಗ್ಗೆ ಆತಂಕ ಮತ್ತು ವಿಷಾದವನ್ನು ವ್ಯಕ್ತಪಡಿಸಿದ್ದರು. ತಮ್ಮ ೯೯ನೇ ವಯಸ್ಸಿನಲ್ಲೂ ಪೊಲೀಸರ ಹಿಂಸೆಗೊಳಪಟ್ಟ ಬಾಲಕಿಯನ್ನು ಭೇಟಿ ಮಾಡಿ ಸಾಂತ್ವನಗೊಳಿಸಲು ಎರ್ನಾಕುಳಂನ ಆಸ್ಪತ್ರೆಗೆ ಹೋದದ್ದು ಅವರಲ್ಲಿದ್ದ ಮಾನವೀಯತೆಯ ಅಭಿವ್ಯಕ್ತಿ ಮಾತ್ರವಲ್ಲ, ಅದು ಪೊಲೀಸರ ವಿರುದ್ಧ ವ್ಯಕ್ತಪಡಿಸಿದ ಪ್ರತಿಭಟನೆಯೂ ಆಗಿತ್ತು.

**ಇಂಡಿಯನ್ ಅಸೋಸಿಯೇಷನ್ ಆಫ್ ಲಾಯರ್ಸ್**

ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ ನಡೆಸುತ್ತಿದ್ದ ಸಂಘ–ಸಂಸ್ಥೆಗಳಲ್ಲಿ ಕೃಷ್ಣ ಅಯ್ಯರ್ ತಮ್ಮನ್ನು ಸದಾ ತೊಡಗಿಸಿಕೊಂಡಿದ್ದರು. ಅವರ ಮಾರ್ಗದರ್ಶನಕ್ಕೆ ಮತ್ತು ಒಡನಾಟಕ್ಕೆ ಹಾತೊರೆದು ನಿಲ್ಲುತ್ತಿದ್ದ ಸಂಸ್ಥೆಗಳು ಅಸಂಖ್ಯಾತ. ಇಂಡಿಯನ್ ಅಸೋಸಿಯೇಷನ್ ಆಫ್ ಲಾಯರ್ಸ್ ಸರ್ವೋಚ್ಚ ನ್ಯಾಯಾಲಯದ ಹಲವಾರು ಧೀಮಂತ ನ್ಯಾಯಮೂರ್ತಿಗಳು, ನ್ಯಾಯವಾದಿಗಳು ಮತ್ತು ಕಾನೂನು ತಜ್ಞರನ್ನು ಒಳಗೊಂಡ ಒಂದು ಸಂಸ್ಥೆ. ನ್ಯಾಯಮೂರ್ತಿ ಕೃಷ್ಣ ಅಯ್ಯರ್‌ರವರು ಸುಮಾರು ೩೦ ವರ್ಷಗಳ ಕಾಲ ಈ ಸಂಸ್ಥೆಯ ಅಧ್ಯಕ್ಷರಾಗಿದ್ದು, ಸಹಸ್ರಾರು ಯುವ ವಕೀಲರಿಗೆ ಮಾರ್ಗದರ್ಶಿಯಾಗಿದ್ದರು. ಹಾಗೆಯೇ ಭಾರತ–ಸೋವಿಯತ್ ಒಕ್ಕೂಟ ಸಾಂಸ್ಕೃತಿಕ ಸಂಘ, ನಂತರ ಇಂಡಿಯನ್ ಸೊಸೈಟಿ ಫಾರ್ ಕಲ್ಚರಲ್ ಕೋಆಪರೇಷನ್ ಅಂಡ್ ಫ್ರೆಂಡ್‌ಶಿಪ್ ಸಂಘಟನೆಯ ರಾಷ್ಟ್ರೀಯ ಗೌರವಾಧ್ಯಕ್ಷರಾಗಿದ್ದರು. ಎಲ್ಲರನ್ನೂ ಅತ್ಯಂತ ಆತ್ಮೀಯತೆಯಿಂದ ಕಾಣುತ್ತಿದ್ದ ಕೃಷ್ಣ ಅಯ್ಯರ್‌ರವರನ್ನು ಎಲ್ಲರೂ ಅಭಿಮಾನ ಮತ್ತು ಗೌರವದಿಂದ ಕಾಣುತ್ತಿದ್ದರು. ಖ್ಯಾತ ಹಿರಿಯ ವಕೀಲರಾದ ಸೋಲಿ ಸೊರಾಬ್ಜೀ ೧೯೭೩ರಲ್ಲಿ ಕೃಷ್ಣ ಅಯ್ಯರ್‌ರವರನ್ನು ಸರ್ವೋಚ್ಚ ನ್ಯಾಯಾಲಯ ನ್ಯಾಯಮೂರ್ತಿಗಳಾಗಿ ನೇಮಕ ಮಾಡಿದ್ದನ್ನು ಪ್ರತಿಭಟಿಸಿ ಅವರೊಬ್ಬ ಎಡಪಂಥೀಯ ರಾಜಕಾರಣಿ ಎಂದು ವಿರೋಧಿಸಿದ್ದರು. ಆದರೆ ಕೃಷ್ಣ ಅಯ್ಯರ್‌ರವರ ಪ್ರತಿಭೆ, ಘನತೆ ನಿಷ್ಪಕ್ಷಪಾತ ತೀರ್ಪುಗಳನ್ನು ಕಂಡ ಸೋಲಿ ಸೊರಾಬ್ಜೀ ಕೃಷ್ಣ ಅಯ್ಯರ್ ನಿವೃತ್ತರಾದ ಸಂದರ್ಭದಲ್ಲಿ ತಾವು ಮಾಡಿದ ತಪ್ಪನ್ನು ಒಪ್ಪಿಕೊಂಡು ಅವರನ್ನು ಪ್ರಶಂಸಿಸಿದ್ದು ಅವಿಸ್ಮರಣೀಯ ಘಟನೆ. ಹೀಗೆ ಪರ್ವತವನ್ನು ಏರುತ್ತಾ ಏರುತ್ತಾ ತಾವೇ ಪರ್ವತವಾಗಿಬಿಟ್ಟರು ಕೃಷ್ಣ ಅಯ್ಯರ್. ಇಂತಹ ಅತ್ಯಂತ ಮಾನವೀಯತೆಯಿಂದ ಬದುಕು ಸಾಗಿಸಿದ, ಅಪರೂಪದ ಪ್ರಗತಿಪರ ವ್ಯಕ್ತಿಯಾಗಿದ್ದ ಕೃಷ್ಣ ಅಯ್ಯರ್ ಮತ್ತೆ ಸಮಾಜಕ್ಕೆ ಸಿಗುವರೇ? 'ಹೊಸತು' ಬಳಗ ಅಗಲಿದ ಈ ಮಹಾನ್ ಚೇತನಕ್ಕೆ ಭಾವಪೂರ್ಣ ನಮನ ಸಲ್ಲಿಸುತ್ತದೆ.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ಡಯಗನಲ್ ರಸ್ತೆ, ಕೆನರಾ ಬ್ಯಾಂಕ್ ಮಹಡಿ ಮೇಲೆ
ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪

# ಅತ್ಯಂತ ವಿಶ್ವಾಸಾರ್ಹ ದಿನಪತ್ರಿಕೆ

1948 ಕನ್ನಡ ದಿನಪತ್ರಿಕೆಗಳ ಇತಿಹಾಸದಲ್ಲಿ ಹೊಸ ಮೈಲಿಗಲ್ಲನ್ನು ಕಂಡ ವರ್ಷ, ಕನ್ನಡ ಪ್ರಜೆಗಳವಾಣಿ  ಪ್ರಜಾವಾಣಿ ಸಂಸ್ಥೆ, ದಿ ಪ್ರಿಂಟರ್ಸ್ (ಮೈಸೂರು) ಪ್ರೈವೇಟ್ ಲಿಮಿಟೆಡ್ ಉದಯಿಸಿದ ವರ್ಷ. ಅಂದಿನಿಂದ ಇಂದಿನವರೆಗೆ ಸಂಸ್ಥೆ ಬರೇ ಪತ್ರಿಕೆಗಳನ್ನು ಪ್ರಕಟಿಸುವ ಸಂಸ್ಥೆಯಾಗಿರದೆ ಕರ್ನಾಟಕದ ಜನರ ಮನೆ ಮನಗಳಲ್ಲಿ ಹಾಸುಹೊಕ್ಕಾಗಿ ಅವರ ಜೀವನದ ಒಂದು ಭಾಗವಾಗಿ ಬೆಳೆದಿದೆ.

ಸಂಸ್ಥೆಯ ಮುಖ್ಯ ಪ್ರಕಟಣೆಗಳಲ್ಲಿ ಇಂಗ್ಲಿಷ್ ದಿನಪತ್ರಿಕೆ ಡೆಕ್ಕನ್ ಹೆರಾಲ್ಡ್, ಕನ್ನಡ ದಿನಪತ್ರಿಕೆ ಪ್ರಜಾವಾಣಿ ಕರ್ನಾಟಕದ ಜನರ ಅತ್ಯಂತ ವಿಶ್ವಾಸಾರ್ಹ ಪತ್ರಿಕೆಗಳಾಗಿ ಜನಮನದಲ್ಲಿ ನೆಲೆಸಿದ್ದು ಅವರ ಜೀವನ ಶೈಲಿಯನ್ನೇ ಬದಲಿಸುವಷ್ಟು ಶಕ್ತಿಶಾಲಿಯಾಗಿ ಬೆಳೆದಿವೆ. ವಾರ ಪತ್ರಿಕೆ ಸುಧಾ ಪ್ರಕಟಣೆಯ ದಿನಕ್ಕಾಗಿ ಇಡೀ ಕುಟುಂಬ ತುದಿಗಾಲಲ್ಲಿ ಕಾದಿರುತ್ತದೆ. ಕನ್ನಡ ಸಾಹಿತ್ಯಾಸಕ್ತರ ಮೆಚ್ಚಿನ ಮಾಸ ಪತ್ರಿಕೆ ಮಯೂರ ಕೂಡ ನಮ್ಮ ಸಂಸ್ಥೆಯ ಹೆಮ್ಮೆಯ ಕಾಣಿಕೆ.

ನಮ್ಮ ನಾಲ್ಕೂ ಪ್ರಕಟಣೆಗಳು ಹಿಂದೆಂದಿಗಿಂತಲೂ ಅತಿ ಶೀಘ್ರವಾಗಿ ಕರ್ನಾಟಕ ರಾಜ್ಯಾದ್ಯಂತ ಓದುಗರಿಗೆ ತಲುಪುತ್ತಿವೆ. ವಿಶ್ವದ, ದೇಶದ, ರಾಜ್ಯದ ಸುದ್ದಿಗಳನ್ನಷ್ಟೇ ಅಲ್ಲದೆ ಓದುಗರ ಜ್ಞಾನ ಭಂಡಾರವನ್ನು ಹೆಚ್ಚಿಸುವ ಲೇಖನಗಳನ್ನೂ ಹೊಂದಿರುತ್ತವೆ. ಆರು ದಶಕಗಳಿಗೂ ಮೀರಿ ಓದುಗರು ನಮ್ಮ ಪ್ರಕಟಣೆಗಳ ಮೇಲಿಟ್ಟಿರುವ ವಿಶ್ವಾಸ ಮತ್ತು ನಂಬಿಕೆಗಳಿಗೆ ಸ್ವಲ್ಪವೂ ಕುಂದುಬಾರದಂತೆ ಮುನ್ನಡೆಯುತ್ತಿವೆ.






**The Printers (Mysore) Private Limited**

ಪ್ರಜಾವಾಣಿ

DECCAN HERALD

ಸುಧಾ

ಮಯೂರ

No. 75, M.G. Road, Bangalore-560 001 Phone: 2588 0000
Fax: 2588 0205 E-mail: Circulation-Blore@deccanherald.co.in




ನಾನೇಕೆ ಈ ಊರಿಗೆ ಬಂದೆ. ಬಂದರೂ ಮಗುವನ್ನಷ್ಟೇ ಏಕೆ ತವರಿಗೆ ಕಳಿಸಿದೆ. ನನ್ನ ಬುದ್ಧಿಗೆ ಅದೇನು ಮಂಕು ಕವಿದಿತ್ತು? ಇನ್ನೆಲ್ಲಿಯ ಜೀವನೋತ್ಸಾಹ? ಕಲ್ಲೂ ಕರಗುವಂಥ ಘಟನೆ ನಡೆದರೂ ಈತನೇಕೆ ಇನ್ನೂ ಬಂದು ಒಂದೆರಡು ಹನಿ ಕಣ್ಣೀರನ್ನು ಮಗುವಿಗಾಗಿ ಸುರಿಸಿಲ್ಲ? ಏನು ಈ ಲೋಕದ ಸಂಬಂಧಗಳು? ಮಗುವನ್ನು ಮಣ್ಣು ಮಾಡಲು ಜಾಗಕ್ಕೆ ಆಸೆಪಟ್ಟೆನೆ? ಕಣ್ಣೀರು ಕೋಡಿ ಹರಿಯಿತು. ಏನಾಗಿದೆ ಎಂಬ ಅರಿವಿಲ್ಲದೆ ಗರ ಬಡಿದವಳಂತೆ ಭಯಭೀತಳಾದ ಪುಷ್ಪಾಳನ್ನು ಕಂಡು ದುಃಖ ಇನ್ನಷ್ಟು ಒತ್ತರಿಸಿ ಬಂತು. ಈ ಮಧ್ಯೆ ಶೃಂಗೇರಿಯಿಂದ ಚಿಕ್ಕಪ್ಪ - ಗಂಡನ ಅಣ್ಣ ಬಂದು ನೋಡಿಕೊಂಡು ಹೋದರು. ಯಾರು ಬಂದರಿನ್ನೇನು? ತನ್ನ ಮಗು ಬಾರದು! ಎಂಥ ಅಪಮೃತ್ಯು ಬಂತು ತನ್ನ ಕಂದನಿಗೆ. ಪಾಪಿ ಚಿರಾಯು, ಸುಕೃತಿ ಗತಾಯ. ಏನು ಹಲುಬಿದರೂ ಎಷ್ಟು ಅತ್ತರೂ ಅದು ಅರಣ್ಯರೋದನ. ದಿನಗಳು ಕಳೆದು ವಾರಗಳೂ ಕಳೆದುವು. ತಿಂಗಳು ಕಳೆಯುತ್ತವೆ. ಯಾರಿಗೆ ಯಾರೂ ಇಲ್ಲ. ತಂದೆಗೆ ಬೇಕಿಲ್ಲದ ಈ ಪುಷ್ಪಾಳನ್ನೇನು ಮಾಡುವುದು? ಹೌದು. ತನಗೆ ಅವಳು ಬೇಕು. ಅವಳಿಗೆ ತಾನು ಬೇಕು.



# ಸಂಭಾವನೆ

ಮೀನಾಕುಮಾರಿ

ಆತನ ಸಂಪಾದನೆ ಎಂದರೆ ಸಂಭಾವನೆ ಎಂಬ ಗೌರವಯುತ ಹೆಸರಿರುವ ಭಿಕ್ಷಾಟನೆ. ಶಾಂತಂ ಪಾಪಂ! ಹಾಗೆ ಹೇಳಿದವರ ನಾಲಗೆ ಬಿದ್ದುಹೋಗ! ಬ್ರಹ್ಮಶಾಪ ಬಡಿದೀತು. ಯಾವ ಗೃಹಸ್ಥನ ಮನೆಗೆ ಹೋದರೂ ದಂಪತಿ ಕಾಲಿಗೆ ಬಿದ್ದು ಉಪಚರಿಸಿ ಆ ಹೊತ್ತಿನ ಊಟ, ಎಲೆಅಡಿಕೆ, ಒಂದು ಜೊತೆ ಪಂಚೆ, ದಕ್ಷಿಣೆ ಕೊಟ್ಟು ಪುನೀತರಾಗುವರು. ಇವಳೂ ಜೊತೆಗಿದ್ದರೆ ರವಿಕೆ ಖಣ, ಕುಂಕುಮ, ಒಂದು ಪಾವು ಅಕ್ಕಿ ಸಿಗುತ್ತದೆ. ಅವರನ್ನು ಆಶೀರ್ವದಿಸುವುದೇನು ಮಹಾಖರ್ಚಿನ ಬಾಬತ್ತೇ? ಕಣ್ಣುಮುಚ್ಚಿ ಅಭಯಹಸ್ತ ತೋರಿಸಿದ ರಾಯಿತು. ಇವನ ಜೊತೆ ತಿರುಗಾಡುವಾಗ ತಾನು ಇದನ್ನೆಲ್ಲ ಕಂಡಿಲ್ಲವೇ? ಅಂಥ ದೇಶಾಟನೆಯ ಸಂಪಾದನೆ ತನಗೆ ಬೇಕಿಲ್ಲ. ಅದು ಕೈಲಾಗದವರು ಮಾಡುವ ಕೆಲಸ. ಒಂದು ರೀತಿ ಮೋಸ! ಅದರಲ್ಲೇನೋ ಜಿಗುಪ್ಸೆ ಆಕೆಗೆ. ಅದಕ್ಕೆ ಬಲವಾದ ಕಾರಣವೂ ಇದೆ. ನಿಜ ಹೇಳಬೇಕೆಂದರೆ ತಾನು ಈತನೊಡನೆ ಮದುವೆಯೆಂಬ ಹೆಸರಿನಲ್ಲಿ ಬಂದುದು ಒಂದು ರೀತಿಯ ಸಂಭಾವನೆ ಯಾಗಿಯೇ ಅಲ್ಲವೆ! ಆ ಕಥೆ ಕೇಳುತ್ತೀರಾ?

ಮೂವತ್ತೈದು ದಾಟಿದ ಈತ ಸಂಭಾವನೆಗೆಂದು ಹೆಣ್ಣುಮಕ್ಕಳೇ ತುಂಬಿದ ಈಕೆಯ ಅಪ್ಪನ ಮನೆಗೆ ಹೋದನಂತೆ. ಇವಳ ಅಪ್ಪನಿಗೆ ಯಾರು ಅಷ್ಟ ಪುತ್ರೀ ಭವ ಎಂಬ ವರ ನೀಡಿ ಆಶೀರ್ವದಿಸಿದ್ದರೋ ಗೊತ್ತಿಲ್ಲ! ಈ ಮನೆಯ ಮೊದಲ ಮಗಳು ಮದುವೆಯಾಗಿ ಮೊದಲ ಹೆರಿಗೆಗೆ ತವರಿಗೆ ಬಂದರೆ ಇವಳಮ್ಮನೂ ಹೆಣ್ಣು ಮಗು ಹೆತ್ತು ಮಲಗಿದ್ದರಂತೆ. ಮೊದಲು ಅಮ್ಮ ಮತ್ತೆ ಮಗಳು. ಇಂಥ ಮನೆಗೆ ಹೋದ ಈ ಅತಿಥಿಯನ್ನು ಬರಮಾಡಿಕೊಂಡು ಊಟಹಾಕಿ ಉಪಚರಿಸಿ "ನೋಡು ಅತಿಥಿ ಅಭ್ಯಾಗತನೇ, ದುಡ್ಡುಕಾಸು ನನ್ನಲ್ಲಿಲ್ಲ. ಎಲ್ಲರೂ ಕೊಡುವಂತೆ ಕೈತುಂಬ ನಾನು ಕೊಡಲಾರೆ. ಮನೆ ತುಂಬ ಹೆಣ್ಣುಮಕ್ಕಳು ನನಗೆ. ಮೂವರ ಮದುವೆಯಾಯ್ತು. ನಾಲ್ಕನೆಯವಳು ಲಗ್ನದ ವಯಸ್ಸು ಮೀರುತ್ತಿದ್ದಾಳೆ. ನೀನು ಊರೂರು ಸುತ್ತುತ್ತೀಯಾ ಯಾರಾದರೂ ನಿಮ್ಮ ಶೃಂಗೇರಿ ಕಡೆ, ಬೇರೆಲ್ಲಾದರೂ ಯೋಗ್ಯ ವರ ಇದ್ದಾನೇನು? ನಿನ್ನ ಗಮನಕ್ಕೆ ಬಂದರೆ ತಿಳಿಸುವೆಯಾ? ಅವಳಿಗೆ ಹದಿನೈದು ತುಂಬಿದೆ. ಅವಳ ಬೆನ್ನಿಗೆ ಇನ್ನಿಬ್ಬರು ಮದುವೆಗೆ ತಯಾರಾಗುತ್ತಾರೆ" ಥೇಟ್ ಕನ್ಯಾಪಿತೃವಿನ ಯಾಚನೆ-ಯಾತನೆ ಎಲ್ಲವೂ ಎದ್ದುಕಾಣುತ್ತಿತ್ತು ಇವಳ ಅಪ್ಪನ ದನಿಯಲ್ಲಿ. ಸತ್ಕಾರದಿಂದ ಸಂತೃಪ್ತನಾಗಿದ್ದ ಈತ "ಹಾಂ ಹಾಂ, ನೋಡೋಣ, ನೋಡೋಣ. ಜಾತಕ ಕೊಟ್ಟಿರಿ. ಋಣಾನುಬಂಧವಿದ್ದರೆ ಮದುವೆ ಎಷ್ಟು ಹೊತ್ತಿನದು. ಇರಲಿ, ಇರಲಿ" ಎನ್ನುತ್ತಾ ಊಟ ಮಾಡಿ ಎದ್ದು ಬಾಯ್ತುಂಬ ತಾಂಬೂಲ ಹಾಕಿಕೊಂಡು ಜಾತಕ ಹಿಡಿದು ಮೆಟ್ಟಿಲಿಳಿದು ಹೆಜ್ಜೆ ಹಾಕುತ್ತ ಮುಂದೆ ಸಾಗಿದನು. ಮುಂದಿನ ವರ್ಷ ಮದುವೆ ಸೀಸನ್‌ನಲ್ಲಿ ವರನಾಗಿ ಬಂದಿದ್ದು ಈತನೇ ಅಂತೆ! ವಿಚಾರಿಸಲಾಗಿ ತಿಳಿದುಬಂದದ್ದೇನೆಂದರೆ – ಬಹಳ ಕಡೆ ಹುಡುಗರ ಜಾತಕದೊಂದಿಗೆ ಹೋಲಿಸಿ ನೋಡಿದರೂ ಕೂಡಿ

ಬಂದಿಲ್ಲವಂತೆ. ಕಡೆಗೊಬ್ಬ ಜೋತಿಷಿಗೆ ತೋರಿಸಲಾಗಿ ಆತ ಜಾತಕ ನೋಡಿ "ಇದು ಎರಡನೇ ಮದುವೆ ಆಗುವವರಿಗೆ ಭಾಗ್ಯದೇವತೆಯಾಗಿ ಕೂಡಿ ಬರುವಂಥ ಪ್ರಶಸ್ತ ಜಾತಕ" ಎಂದು ತಿಳಿಸಿ "ಅಲ್ಲಾ ಸ್ವಾಮಿ, ನೀವೇ ಯಾಕೆ ಲಗ್ನವಾಗಬಾರ್ದು, ನಿಮ್ಮದೂ ಒಂದು ಮದುವೆ ಆಗಿ ಪತ್ನೀ ವಿಯೋಗವಾದದ್ದಲ್ಲವೇ ? ತನ್ನೀನಿಂ ಜಾತ್ಕಾನ" ಅಂದನಂತೆ. ತಾಳೆ ನೋಡಲಾಗಿ ಸರಿಯಾಗಿ ಹೊಂದಿತಂತೆ. ಅಬ್ಬಾ ಋಣಾನು ಸಂಬಂಧವೇ. ದೇವರು ದೊಡ್ಡವನು ? ಯಾವ ಕಾಲಕ್ಕೆ ಯಾವಾಗ ಎಲ್ಲಿ ಏನು ನಡೆಯಬೇಕೆಂದು ನಿರ್ಧರಿಸುವವನು ಆ ಕರುಣಾಮಯಿಯೇ ಅಲ್ಲವೆ ? ನಾವು ಹುಲುಮಾನವರು ಎಷ್ಟರವರು ! ಜಾತಕ ಕೂಡಿ ಬಂತೆಂದರೆ ವಾಲಗ ಊದಿಸುವುದೇ. ಈಕೆಯ ಅಪ್ಪನ ಮುಖಾರವಿಂದ ಅರಳಿತು. ಸವತಿ, ಮಕ್ಕಳು ಅಂತ ರಗಳೆ ಇಲ್ಲ. ಮೂವತ್ತಾರು ಏನು ಭಾರಿ ವಯಸ್ಸೆ? ನನ್ನ ತಮ್ಮ ನಲ್ವತ್ತರ ನಂತರವಲ್ಲವೇ ಮದುವೆ ಆದದ್ದು ? ಅವನ ಸಂಸಾರ ನೆಟ್ಟಗಿಲ್ಲವೇ? ಹೆಣ್ಣು ಮಕ್ಕಳು ಬಹಳ ಬೇಗ ಬೆಳೆಯುತ್ತಾರೆ. ತಡಮಾಡ ಬಾರದು. ಚಾವಡಿಯಲ್ಲಿ ನಡೆದ ಇಂತಹ ಮಾತುಕತೆಗಳಿಂದ ಈಕೆಯ ಅಮ್ಮನಿಗೆ ತಲೆಸುತ್ತಿ ಬವಳಿ ಬಂದಂತಾಯಿತು. ಬೇಡ ಎಂದು ಒಂದು ಮಾತು ಹೇಳಿ ನೋಡಲೇ ಎನಿಸಿತು. ಸಾಲಾಗಿ ಹೆಣ್ಣು ಹೆತ್ತು ಅಪರಾಧ ಮಾಡಿರುವ ತನ್ನ ಮಾತಿಗೇನು ಬೆಲೆ ಬಂದೀತು ! ಹೆಂಗಸರ ನಿರ್ಧಾರಗಳೆಲ್ಲ ಮೊಣಕಾಲ ಕೆಳಗೇ ಗೊತ್ತಿಲ್ಲವೆ ? ಮದುವೆಯ ನೆಪದಲ್ಲಿ ಎಂದೂ ಮುಖವನ್ನೇ ನೋಡಿರದ ಗಂಡಿನ ಜೊತೆ ಕಳಿಸಿ ಕೊಡುವ ಈ ಸಂಪ್ರದಾಯಕ್ಕಿಷ್ಟು ಬೆಂಕಿ ಹಾಕಲೆಂದು ಮನದಲ್ಲೇ ಶಪಿಸಿದಳು. ಅತ್ತಳು, ಹೆಣ್ಣು ಜನ್ಮವೇ ಇಷ್ಟು ಎಂದು ಮರುಗಿದಳು. ತಾಯಿಕರುಳು ಅದು. ಮಿಡಿಯದಿರುತ್ತದೆಯೇ. ಈಗಾಗಲೇ ಮೂವರನ್ನು ಹೊಸಿಲು ದಾಟಿಸಿ ಕಳಿಸಿದ್ದಾಗಿದೆ. ಆ ಅಳಿಯಂದಿರೇನೂ ಘನಂದಾರಿ ಕುಳಗಳಲ್ಲ. ತವರಿಗೆ ಬಂದಾಗ ಹೇಳಿ ಹೇಳಿ ಅಳುತ್ತಾರೆ ಮಗಳಂದಿರು. ನಾನು ಏನು ಮಾಡಬಲ್ಲೆ ಎಂದುಕೊಂಡು ಕಣ್ಣೀರು ಒರೆಸಿಕೊಂಡಳು. ಮಾಂಗಲ್ಯ ಕಟ್ಟಿ ಅಗ್ನಿಸಾಕ್ಷಿಯಾಗಿ ಕೈ ಹಿಡಿದರಾಯಿತು. ಧಾರೆ ಎರೆದ ಮೇಲೆ ಸಕಲ ಅಧಿಕಾರವೂ ಗಂಡನದೇ. ದಾನ ಕೊಟ್ಟಮೇಲೆ ಆತನ ಸೊತ್ತು ಆಕೆ. ಅವನೊಂದಿಗೆ ಹೊರಡಬೇಕು. ಹತ್ತು ತಿಂಗಳು ಹೊತ್ತು, ಹೆತ್ತು ಸಾಕಿದ ತಾಯಿ ಏನೇನೂ ಅಲ್ಲ. ಗುಡಿಸಲೋ ಮರದ ಕೆಳಗೋ ಆತನಿದ್ದಲ್ಲಿ ಈಕೆಯೂ ಇರಬೇಕು. ಅಬ್ಬಾ ಸಂಪ್ರದಾಯದ ಸಂಕೋಲೆಯೇ !

ಕಣ್ಣೀರಿನ ಕೊಡವನ್ನು ತುಂಬಿಕೊಂಡು ಆತನನ್ನು ಈಕೆ ಹಿಂಬಾಲಿಸಿದಳು. ಈಗ ಅವನು ನನ್ನ ಗಂಡ. ಆತನೊಡನೆ ಹೊರಟರೆ ನನಗೆ ಹೆಸರು. ಅವರವರ ಪುಣ್ಯ ವಿಶೇಷದಿಂದ ಒಳ್ಳೆಯ ಗಂಡನೂ ಪಾಪಕರ್ಮಗಳಿಂದ ದುಷ್ಟ ಗಂಡನೂ ಸಿಕ್ಕುತ್ತಾನೆಂದು ಹಿರಿಯರು ಮಾತನಾಡಿಕೊಳ್ಳುವಾಗ ಈಕೆ ಕೇಳಿಸಿಕೊಂಡಿದ್ದಾಳೆ. ತಾನೇನೂ ಪಾಪ ಮಾಡಿಲ್ಲವಾದ್ದರಿಂದ ಈತ ದುಷ್ಟ ಆಗಿರಲಾರ. ಮದುವೆಯ ನಂತರ ತವರಿನಲ್ಲಿದ್ದರೆ ಚಿಕ್ಕಾಸು ಬೆಲೆ ಇಲ್ಲ. ಮದುಮಕ್ಕಳು ಶೃಂಗೇರಿಯಲ್ಲಿರುವ ಗಂಡನ ಅಣ್ಣನ ಮನೆಗೆ ಬಂದಿಳಿದರು. ಅವರೂ ಸಂಸಾರಸ್ಥರು. ಮನೆ ತುಂಬ ಮಕ್ಕಳು. ಕೆಲ ವರ್ಷಗಳ ಹಿಂದೆ ಅಣ್ಣ ತಮ್ಮಂದಿರಿಗೆ ಏನೋ ಜಗಳ ಬಂದು, ವಿಪರೀತಕ್ಕೆ ಹೋಗಿ "ನಿನ್ನ ಮನೆ ಹೊಸಿಲು ತುಳಿಯುವುದಿಲ್ಲ" ಎಂದು ಹೊರಟ ತಮ್ಮ ಈಗ ಯಾರೋ ಹೆಣ್ಣುಮಗಳೊಂದಿಗೆ ? ತಲೆಬುಡ ತಿಳಿಯದಂತಾದಾಗ ಇಬ್ಬರೂ ಬಂದು ಕಾಲಿಗೆರಗಿದರು. "ಏನೋ ಇದು, ನಮಗೆಲ್ಲಾ ಹೇಳದೆ ಕೇಳದೆ ? ನಾವು ಸತ್ತುಹೋಗಿದ್ವಾ? ನಿನ್ನದು ಅತಿಯಾಯ್ತು" ಎಂದು ಗದರಿದ ಅಣ್ಣನಿಗೆ ಸಂಭಾವನಾರ್ಥ ಗಟ್ಟದ ಕೆಳಗೆ ಹೋಗಿದ್ದೆ... ಎಂದು ನಡೆದದ್ದನ್ನೆಲ್ಲಾ ಚಾಚೂತಪ್ಪದೆ ಸಂಭಾವಿತನಂತೆ ತನ್ನ ತಪ್ಪೇನೂ ಇದರಲ್ಲಿಲ್ಲವೆಂದು ಹೇಳಿದ್ದಾಯ್ತು. ಇವರು ಕೇಳಿದ್ದಾಯ್ತು. ಪಿಳಿ ಪಿಳಿ ಕಣ್ಣುಬಿಡುತ್ತ ನಿಂತೇ ಇದ್ದ ಈಕೆಯನ್ನು ಆತನ ಅತ್ತಿಗೆ ಕನಿಕರಿಸಿ ಒಳಗೆ ಕರೆದು ಹಾಲು ಹಣ್ಣು ಕೊಟ್ಟು ಆಶೀರ್ವದಿಸಿ ಕಣ್ಣೀರು ತಂದುಕೊಂಡರಂತೆ. ಸಂತೋಷಕ್ಕಿಂತ ಪಶ್ಚಾತ್ತಾಪ ಮಿಗಿಲಾಗಿತ್ತು. ಯಾಕೆ ಗೊತ್ತೇ ? ಆ ಮನೆಯಲ್ಲಿ ಈಕೆಗಿಂತ ನಾಲ್ಕು ವರ್ಷ ದೊಡ್ಡವನಾದ ಮಗ ಮದುವೆಗಿದ್ದ ! ಇಂಥ ಅತಿರೇಕಗಳು ಅಂದು ತೀರಾ ಸಾಮಾನ್ಯ. ಯಾರದೇ ಮನೆಯಲ್ಲಿ ಹೆಂಡತಿ ತೀರಿಕೊಂಡರೆ, ಮದುವೆಗೆ ಮಗಳಿದ್ದರೆ ವರ್ಷದೊಳಗೆ ಮಗಳನ್ನು ಕನ್ಯಾದಾನ ಮಾಡಿ ಧಾರೆಯೆರೆಯುತ್ತಿದ್ದರು.

ವರ್ಷ ಕಳೆದ ನಂತರ ಮನೆಗೊಂದು ಹೆಣ್ಣು ತರುತ್ತಿದ್ದರು. ಆರು ತಿಂಗಳು ಅಣ್ಣನ ಮನೆಯಲ್ಲಿ ಠಿಕಾಣಿ. ಮುಗ್ಧಳಾಗಿದ್ದು ಅಚ್ಚುಕಟ್ಟಾಗಿ ಮನೆಗೆಲಸ – ಇತರ ಕೆಲಸಗಳಲ್ಲಿ ನೆರವಾಗುತ್ತಿದ್ದ ಈಕೆ ಎಲ್ಲರಿಗೂ ಅಚ್ಚುಮೆಚ್ಚಾದಳು. ಸುತ್ತಮುತ್ತಲಿನವರಿಗೂ ಪರಿಚಯವಾದಳು. ಎಲ್ಲರ ಬಾಯಲ್ಲಿ ಇವಳ ಸುದ್ದಿಯೇ. ಹೆಂಡತಿ ತುಂಬಾನೇ ಚಿಕ್ಕೋಳು. ಅಯ್ಯೋ ಇವನಿಗೇನು, ನಿಂತಲ್ಲಿ ನಿಲ್ಲಲಾರ, ಇವತ್ತು ಇಲ್ಲಿದ್ದರೆ ನಾಳೆ ಬೇರೆ ಊರು. ಕೈಗೊಂದು ಕಸುಬಿಲ್ಲ, ನಿಲ್ಲಲು ನೆಲೆ ಇಲ್ಲ. ಏನು ನೋಡಿ ಕೊಟ್ಟರೋ – ಶುದ್ಧ ಉಂಡಾಡಿ. ಈತನೊಂದಿಗೆ ಇನ್ನು ಏಗಬೇಕು ಈಕೆ. ಇಂಥವೇ ತಲೆಗೊಂದರಂತೆ ಸಾವಿರಾರು ಮಾತುಗಳು. ಸಾಲದ್ದಕ್ಕೆ "ಚಿಕ್ಕಪ್ಪಾ, ಚಿಕ್ಕಮ್ಮ ನನಗಿಂತ ಚಿಕ್ಕವಳು." ಗೇಲಿ ಮಾಡುವ ಅಣ್ಣನ ಮಗನನ್ನು "ಏ ನಿನ್ಕೆಲ್ಸ ನೋಡ್ ಹೋಗೋ" ಎಂದು ಬಾಯಿತುಂಬ ತಾಂಬೂಲ ತುಂಬಿಕೊಂಡು ಗದರುತ್ತಾರೆ ಈಕೆಯ ಗಂಡ. ಬೆಳಗಿನ ಫಲಾಹಾರ ಮುಗಿಸಿ ಹೊರ ಹೊರಟರೆ ಮಠದಲ್ಲಿ ಊಟ ಮುಗಿಸಿ ಊರೆಲ್ಲ ಹರಟೆ ಹೊಡೆದು ಸಂಜೆಗೆ ವಾಪಸಾಗುತ್ತಿದ್ದ ಗಂಡನನ್ನು ಎಲ್ಲಿ ಹೋಗಿದ್ದೆಂದು ಕೇಳುವ ಧೈರ್ಯ ಈಕೆಗೆಲ್ಲಿ ಬರಬೇಕು! ಮತ್ತೂ ಆರು ತಿಂಗಳು ಕಳೆಯಿತು. ಈ ವರ್ಷ ಮತ್ತೆ ಸಂಭಾವನೆಗೆ ಹೊರಟವನು ವಾಪಸ್ಸು ಬಂದಿದ್ದು ಇನ್ನೂ ಆರು ತಿಂಗಳ ನಂತರ. ಈ ಸಲ ಊರಿಗೆ ಬಂದವ ಒಂದು ದಿನ ಹೆಂಡತಿಯನ್ನೂ ಹೊರಡಿಸಿದ. ಕೇಳಿದ್ದಕ್ಕೆ – ಹೋದಲ್ಲೆಲ್ಲ ಕೇಳುತ್ತಾರೆ – 'ಮದುವೆಯಾಗಿದ್ದೀಯಂತೆ, ಹೆಂಡ್ತೀನ ಕರ್ಕೊಂಡು ಬಂದಿಲ್ವೇ? ನಮ್ಮನೆಗೊಮ್ಮೆ ಇಬ್ಬರೂ ಬನ್ನಿ ಎನ್ನುತ್ತಾರೆ. ಈವತ್ತು ಶಂಕರ ಭಟ್ರ ಮನೆಯಲ್ಲಿ ಪಾರಾಯಣ. ಸುಮಂಗಲಿ ಪೂಜೆಗೆ ಕರ್ದಿದ್ದಾರೆ' ಎಂದು ಹೇಳಿ ಕರೆದುಕೊಂಡು ಹೋದ. ಇದೇ ನೆಪವಾಗಿ ಊರವರು ಕರೆಯುವುದು, ಈಕೆ ಅವನೊಂದಿಗೆ ಹೊರಡುವುದು ಮಾಮೂಲಾಯ್ತು. ಕಾಲ್ನಡಿಗೆ. ಬೆಳಗ್ಗೆ ಹೋದರೆ ಸಂಜೆಗೆ ಬರುವುದು. ತುಂಬ ದೂರ ಹೋದರೆ ಮಾರನೆ ದಿನ ಬರುವುದು ಶುರುವಾಯ್ತು. ಇವಳಿಗೇಕೋ ಮನಸ್ಸಿಲ್ಲ. ಕರೆದು ಊಟ ಹಾಕಿ ಉಡುಗೊರೆ ಕೊಟ್ಟು ಹಗುರವಾಗಿ ಮಾತನಾಡುವುದು ಹಿಡಿಸುತ್ತಿರಲಿಲ್ಲ. ಈತ ಹೋಗುವುದೆಲ್ಲ ದೊಡ್ಡ ದೊಡ್ಡ ಸಾಹುಕಾರರ ಮನೆಗೆ. "ಅಯ್ಯೋ ಯಾಕೆ ಹೆಣ್ಣುಮಗಳನ್ನು ನಿನ್ನೊಂದಿಗೆ ಸುತ್ತಿಸುತ್ತಿ? ಕೆಲದಿನ ನಮ್ಮಲ್ಲಿರಲಿ, ನನ್ನಾಕೆಗೆ ಸಹಾಯವಾಗುತ್ತೆ. ಮತ್ತೆ ಬಂದು ಕರಕೊಂಡು ಹೋಗು" ಎಂದಾಗ ಈಕೆಗೆ ಅಳುವೇ ಬರುತ್ತಿತ್ತು. ಮನೆಗೆ ಬಂದವಳೇ ವಾರಗಿತ್ತಿಯೊಡನೆ ಹೇಳಿ ಅತ್ತಳು. ವಿಷಯ ಭಾವನಿಗೂ ತಿಳಿಯಿತು. ಈಸಲ ಹೊರಟು ನಿಂತಾಗ ಅಣ್ಣ ರೇಗುತ್ತ ಹೇಳಿಯೇಬಿಟ್ಟ. "ತಮ್ಮ, ತಮ್ಮನ ಹೆಂಡ್ತೀನ ಸುತ್ತೋಕೆ ಬಿಟ್ಟಿದ್ದಾನೆಂಬ ಅಪವಾದ ನನಗೆ ಬೇಡ. ನಾವು ಮರ್ಯಾದಸ್ಥರು. ನೀನು ಇಲ್ಲಿರುವುದಾದರೆ ನಂಜೊತೆ ತೋಟ ಗದ್ದೆ ಕೆಲ್ಸದಲ್ಲಿ ಸಹಾಯ ಮಾಡು. ಆಕೆ ಮಾಡ್ತಾಳೆ. ದುಡಿದ್ರೆ ಭೂಮಿ ತಾಯಿ ಹೊಟ್ಟೆ ತುಂಬಿಸ್ತಾಳೆ. ಊರು ಸುತ್ತೋದೆಲ್ಲ ಕಡಿಮೆ ಮಾಡು. ಹೋಗೋದಾದ್ರೆ ನೀನೊಬ್ನೇ ಹೋಗು. ಆಕೆಗೆ ಮುಜುಗರವಾಗುತ್ತೆ. ಅವಳಿನ್ನೂ ಚಿಕ್ಕವಳು. ಮುಂದಿನ ವರ್ಷ ನನ್ನ ಮಗನಿಗೆ ಮದ್ವೆ ಮಾಡ್ಬೇಕು. ಮನೇಲಿ ರಾಶಿ ಕೆಲ್ಸ ಬಿದ್ದಿರುತ್ತೆ." ಈ ಬುದ್ಧಿವಾದ ಈಕೆಗೇನೋ ಹಿಡಿಸಿತು. ಆದರೆ ಇಷ್ಟು ವರ್ಷ ನೆಟ್ಟಗೆ ನಡೆದೇ ಅಭ್ಯಾಸವಿದ್ದ ಈತನ ಸೊಂಟ ಬಗ್ಗುತ್ತದೆಯೇ? ಮತ್ತೆ ಮನಸ್ತಾಪ. ಏನಾಗುತ್ತಿದೆಯೆಂದು ಈಕೆಗೆ ಸ್ವಲ್ಪ ಸ್ವಲ್ಪವಾಗಿ ಅರ್ಥವಾಗತೊಡಗಿತು. ತಾನು ನಾಲ್ಕಾರು ಜನರ ಮಧ್ಯೆ ಹಗುರವಾಗುತ್ತಿರುವೆನೆನ್ನಿಸಿ ಬೇಸರವಾಗತೊಡಗಿತು. ಮದುವೆ ಮಾಡಿ ಕಳಿಸಿದ ಅಪ್ಪ ಒಮ್ಮೆಯೂ ಬರಲಿಲ್ಲ, ಕರೆದುಕೊಂಡೂ ಹೋಗಿಲ್ಲ. ನನ್ನಮ್ಮ ಹೇಗಿದ್ದಾರೋ – ಮೊದಲ ಬಾರಿಗೆ ಅವಳ ಕಣ್ಣು ತುಂಬಿ ಬಂತು. ಭಾವನೊಡನೆ ಶೃಂಗೇರಿಗೆ ಹತ್ತಿರದಲ್ಲಿರುವ ತನ್ನ ಚಿಕ್ಕಪ್ಪನ ಮನೆಗೆ ಒಮ್ಮೆ ಕಳಿಸೆಂದು ವಿನಂತಿಸಿದಳು. ಇವಳ ಬಗ್ಗೆ ಮರುಕ ಹುಟ್ಟಿತು. "ನಾವು ನಿನ್ನನ್ನೇನೂ ಅಂದಿಲ್ಲ. ಇದು ನಿನ್ನ ಮನೇನೇ. ಈಗ ನೀನು ಹೊರಗಿನವಳಲ್ಲ. ಇಲ್ಲಿರಲು ನಮ್ಮ ಅಭ್ಯಂತರ ಇಲ್ಲ" ಸಮಾಧಾನಪಡಿಸಿದರು ಭಾವನ ಹೆಂಡತಿ. ಆದರೂ ಕೆಲವು ದಿನ ನೆಮ್ಮದಿಯಾಗಿರಲಿ, ಆಕೆಗೆ ಅದೂ ತವರೇ ಅಲ್ಲವೇ ಎಂದು ಕನಿಕರಿಸಿ ಸ್ವತಃ ಭಾವನೇ ಕರಕೊಂಡು ಹೋಗಿಬಿಟ್ಟರು. ಬರುವಾಗ ತನ್ನ ಮಗನ ಮದುವೆ ಸದ್ಯವೇ ಇದೆಯೆಂದೂ ಇವಳನ್ನು ಮುಂಚಿತವಾಗಿ ಕಳಿಸಿ ಮದುವೆಗೆ ಎಲ್ಲರೂ ಬರಬೇಕೆಂದು ತಿಳಿಸಿಬಂದರು.




* * *

ದಿನಗಳು ಉರುಳಿದವು. ಚಿಕ್ಕಪ್ಪನ ಮನೆಯಲ್ಲಿ ಈಕೆಗೇನೂ ಕೊರತೆ ಇರಲಿಲ್ಲ. ತೆಂಗು, ಬಾಳೆ, ಅಡಿಕೆ ತೋಟ, ಗದ್ದೆ ಇತ್ತು. ಮನೆಗೆಲಸ ತೋಟದ ಕೆಲಸ ಎಲ್ಲದರಲ್ಲೂ ಈಕೆ ಮುಂದು. ದುಡಿದರೆ ಎಲ್ಲಿ ಯಾದರೂ ಅನ್ನ ಹುಟ್ಟುತ್ತದೆ. ಇವಳ ಮದುವೆಯನ್ನು ತನಗೆ ಹೇಳದೆ ಮಾಡಿದ ಅಣ್ಣನ ಬಗ್ಗೆ ಇವಳ ಚಿಕ್ಕಪ್ಪನಿಗೆ ಭಲೇ ಕೋಪವಿತ್ತು. ಅದೂ ಎಂಥ ಬೇಜವಾಬ್ದಾರಿ ಮನುಷ್ಯನಿಗೆ ಕೊಟ್ಟಿದ್ದು! ಸಂಭಾವನೆ ಅಂತ ಊರೂರು ಸುತ್ತುವುದು. ರಾತ್ರಿಯಾದಲ್ಲಿ ತಂಗುವುದು. ಬೆಳಗೆದ್ದು ಹೊರಡುವುದು. ಇಂಥ ದಾಸಯ್ಯನಿಗೆ ಸಂಸಾರ ಬೇರೆ ಕೇಡು! ನಿಧಾನವಾಗಿ ತನ್ನ ಬಾಳು ಏನೆಂದು ಈಕೆ ಚಿಂತಿಸತೊಡಗಿದಳು. ಮುಖ್ಯವಾಗಿ ಮನೆಯೇ ಇಲ್ಲ. ಹುಡುಗಾಟವೆಲ್ಲ ಇಷ್ಟುದಿನ ನಡೆಯಿತು. ಮಗಳೆಲ್ಲಿ ಎಂದು ಕೇಳದ ಅಪ್ಪನ ಮೇಲೆ ಮೊದಲ ಬಾರಿಗೆ ಸಿಟ್ಟು ಬಂದಿತ್ತು. ಆದದ್ದು ಆಗಿ ಹೋಯಿತು. ತಾನೂ ಎಲ್ಲರಂತೆ ತಲೆಯೆತ್ತಿ ನಿಲ್ಲಬೇಕು. ಆತ್ಮೀಯವಾಗಿ ಚಿಕ್ಕಮ್ಮ-ಚಿಕ್ಕಪ್ಪರೊಂದಿಗೆ ದುಃಖ ತೋಡಿಕೊಂಡಳು. "ಹೆದರಬೇಡ, ನಿನ್ನ ಸಂಸಾರ ಸರಿ ಮಾಡೋಣ. ಅವನನ್ನು ಕರೆಸುತ್ತೇನೆ. ಈಸಲ ಈ ಉಡಾಳನಿಗೆ ಬುದ್ಧಿ ಕಲಿಸಬೇಕು. ಏನಾದರೂ ವ್ಯವಸ್ಥೆ ಮಾಡೋಣ" ಚಿಕ್ಕಪ್ಪನ ಭರವಸೆ. ಇವನನ್ನು ಹುಡುಕಿಸುವುದು ಸ್ವಲ್ಪ ಕಷ್ಟವೇ. ಚಿಕ್ಕಮಗಳೂರು, ತೀರ್ಥಹಳ್ಳಿ ಮುಂತಾದ ಎಸ್ಟೇಟ್ ಮಾಲೀಕರಲ್ಲಿ ಹೋದರೆ ಬರಿಗೈಲಿ ಬರೋ ಮಾತೇ ಇಲ್ಲ. ದೊಡ್ಡ ದೊಡ್ಡ ಕುಳಗಳು. ಬ್ರಾಹ್ಮಣನನ್ನು ಬರಿಗೈಲಿ ಕಳಿಸುವವರೇ ಅಲ್ಲ. ಹೊರಲಾರದಷ್ಟು ಅಡಿಕೆ ಹೋಳು. ಯಾರಾದರೂ ಕೂಲಿಯನ್ನು ಕರೆದು ಹತ್ತಿರದ ಪೇಟೆಗೆ ಕೊಂಡೊಯ್ದರಾಯ್ತು. ಊಟ ಉಪಾಹಾರ ಹೋದಕಡೆಯಲ್ಲಿ ಆಗುತ್ತದೆ. ಈ ದೇಶಾವರದ ಬ್ರಾಹ್ಮಣ ಎಲ್ಲರಿಗೂ ಗೊತ್ತು. ಕೆಲ ಮನೆಗಳಲ್ಲಿ ಪೂಜೆ, ವ್ರತ, ಗಣ ಹೋಮ ಮಾಡಿಸಿಕೊಟ್ಟು ಹೋಗಿ ಭಟ್ಟರೇ, ಹೇಗೂ ಪೌರೋಹಿತ್ಯ ಗೊತ್ತಿರುವ ಮನೆತನ ನಿಮ್ಮದು ಎನ್ನುತ್ತಾರೆ. ಆದರೆ ಶೃಂಗೇರಿಯ ನವರಾತ್ರಿಯೆಂದರೆ ಆಸಾಮಿ ಎಲ್ಲಿದ್ದರೂ ಹಾಜರು. ಶೃಂಗೇರಿಯ ಶಾರದಾ ದೇಗುಲದಲ್ಲಿ ಏನಾದರೊಂದು ಜಪ-ಅನುಷ್ಠಾನಕ್ಕೆ ಅವಕಾಶ ಇರುತ್ತದೆ. ಮಣ ಮಣ ಮಂತ್ರ ಹೇಳಿಕೊಂಡು ಕೂತರಾಯಿತು. ಪುರೋಹಿತರೊಂದಿಗೆ ಭೂರಿ ಭೋಜನ. ಹೀಗೆ ಬಂದ ಈತನನ್ನು ನವರಾತ್ರೆ ಮುಗಿದೊಡನೆ ಮನೆಗೆ ಎಳೆದುತಂದರು ಈಕೆಯ ಚಿಕ್ಕಪ್ಪ. ಹೆಣ್ಣು ಕೊಟ್ಟ ಮಾವನ ತಮ್ಮನ ಮನೆ. ಚಿಕ್ಕಪ್ಪನ ಕೆಲಸವೂ ಅವರ ಅಣ್ಣನಂತೆಯೇ ಝುಟ್‌ಪಟ್. ಒಂದು ದಿನ ಇರಿಸಿಕೊಂಡು ಯಾವ ಸೂಚನೆ ಕೊಡದೆ ನಾಲ್ಕಾರು ಗೃಹಸ್ಥರನ್ನು ಕರೆದು ಪಂಚಾಯಿತಿ ನಡೆಯಿತು. ನಡೆದ ಕಥೆ ತಿಳಿಸಿ ಏನು ಮಾಡುವುದೆಂದು ನ್ಯಾಯ ಇಟ್ಟರು. ಮದುವೆಯಾಗಿ ಚಿಕ್ಕಪ್ರಾಯದ ಹೆಂಡತಿಯೊಡನೆ ಊರೂರು ಸುತ್ತುವುದು ಗೃಹಸ್ಥರ ಕೆಲಸ ಅಲ್ಲವೆಂದೂ ಹಾಗೆಯೇ ಎಲ್ಲೋ ಬಿಟ್ಟುಹೋಗುವುದೂ ಸಲ್ಲದೆಂದು ತೀರ್ಮಾನವಾಯಿತು. "ನನಗೆ ಅದೊಂದೇ ದಾರಿ, ಅದೇ ಸಂಪಾದನೆ. ಮೊದಲ ಹೆಂಡತಿ ಸದಾ ನನ್ನೊಂದಿಗೇ ಇರುತ್ತಿದ್ದಳು. ಇವಳದ್ದೇ ನನಗೆ ಸಮಸ್ಯೆ! ಬೇರೆ ಏನು ಮಾಡಲಿ? ನೀವೇ ದಾರಿ ಮಾಡಿಕೊಡಿ. ಇರುತ್ತೇನೆ" ಇದು ಆತನ ಅಹವಾಲು. ಪಂಚಾಯ್ತಿದಾರರಲ್ಲೊಬ್ಬ "ನೀನು ಹತ್ತು ವರ್ಷದ ಕೆಳಗೆ ಮಾಸ್ತರಿಕೆ ಮಾಡ್ತಿದ್ದದ್ದಲ್ಲವೇ. ಅದನ್ನೇ ಸರಕಾರಕ್ಕೆ ಬರೆದು ಮತ್ತೆ ಮಂಜೂರು ಮಾಡಿ ನಾನು ಕೊಡಬಲ್ಲೆ. ಇರುತ್ತೀಯಾ? ಊರೂರು ಸುತ್ತಾಟ ಬಿಡು, ಬಿಡಾರ ಹೂಡು. ನಿಂಜತೆ ತಿರುಗಾಟ ಆಕೆಗೆ ಆಗದು. ಏನು?" ಎಂದರು. ಬಲವಂತದ ಮಾಘಸ್ನಾನ. ಈತ

ಒಪ್ಪಲೇಬೇಕಾಯ್ತು. ಮುಂದಿನ ಶಾಲಾರಂಭಕ್ಕೆ ಮುನ್ನ ಹೇಳಿದ ಮಾತಿನಂತೆ ಮಾಸ್ತರಿಕೆ ದೊರಕಿಸಿಕೊಟ್ಟರು. ಶೃಂಗೇರಿ ಪೇಟೆಯಲ್ಲಿ ಚಿಕ್ಕ ಮನೆಯನ್ನೂ ಗೊತ್ತು ಮಾಡಿಕೊಟ್ಟರು. ಪಂಚಾಯಿತಿ ಫಲಿಸಿ ಸದ್ಗೃಹಸ್ಥನ ವೇಷ ಹಾಕಿದ್ದಾಯ್ತು. ಸ್ವತಃ ಚಿಕ್ಕಪ್ಪ ಚಿಕ್ಕಮ್ಮ ಬಿಡಾರಕ್ಕೆ ಬಂದು ಇವಳನ್ನು ಬಿಟ್ಟುಹೋದರು. ಈತ ದುರುದುರು ನೋಡುತ್ತ ವೀಳ್ಯ ಹಾಕಿ ಶತಪಥ ತಿರುಗಾಡತೊಡಗಿದ. ಸಂಸಾರ ಬಂಧನವಲ್ಲವೇ ಬೇಕಿತ್ತೆ ಈ ವಯಸ್ಸಿನಲ್ಲಿ? ಮುಂದಿನ ತಿಂಗಳೇ ಶಾಲೆಗೆ ಹೋಗಿ ಪಾಠ ಮಾಡಬೇಕಿತ್ತು. ನವರಾತ್ರಿ ರಜೆ ಕಳೆದು ಮಕ್ಕಳು ಶಾಲೆಗೆ ಮರಳಿದ್ದರು. ಇನ್ನೊಬ್ಬ ಮಾಸ್ತರರೂ ಅಟೆಂಡರರೂ ಇದ್ದರು. ಹೊಸ ಮಾಸ್ತರ ಕೈಯಲ್ಲಿ ಬೆತ್ತ ನೋಡಿ ಮಕ್ಕಳು ದಂಗಾಗಿದ್ದರು. ಹೆಂಡತಿ, ಚಿಕ್ಕಪ್ಪ, ಅಣ್ಣ, ಪಂಚಾಯ್ತಿದಾರರ ಮೇಲಣ ಸಿಟ್ಟನ್ನು ಬಡಪಾಯಿ ಮಕ್ಕಳ ಮೇಲೆ ಪ್ರಯೋಗಿಸಲಾಯಿತು. ಅವು ಅತ್ತವು. ಮೂಗೊರಸಿಕೊಂಡವು. ಕೆಲವು ಹೊರಗೋಡಿ ಅಡಗಿಕೊಂಡವು. ಇನ್ನು ಕೆಲವು ಮನೆಯ ದಾರಿ ಹಿಡಿದವು. ಮನೆಗೆ ದೂರು ಕೊಂಡೊಯ್ದವು. ಅವರಲ್ಲಿ ಈತನಿಗೆ ಮಾಸ್ತರಿಕೆ ಕೊಡಿಸಿದ ಪಂಚಾಯ್ತಿದಾರನ ಮೊಮ್ಮಗನೂ ಇದ್ದನೆಂದು ಪಾಪ ಈ ಮಾಸ್ತರನಿಗೇನು ಗೊತ್ತು! ಆ ಹುಡುಗನಿಗೆ ಮನೆಯಲ್ಲೂ ಎರಡೇಟು ಬಿತ್ತು – ಗುರುಗಳ ದೂರು ಹೇಳಿದ್ದಕ್ಕೆ!

ಅಂತೂ ತನ್ನದೇ ಬಿಡಾರದಲ್ಲಿ ಗಂಜಿ ಉಣ್ಣುವಂತಾಯಿತು. "ಪರಾನ್ನಂ ಪ್ರಾಣ ಸಂಕಟಂ" ಎನ್ನುವುದು ಆಕೆಗಷ್ಟೇ ಗೊತ್ತು. ಹಳಸಲೋ ಪಳಸಲೋ ಸ್ವಯಾರ್ಜಿತ ಅನ್ನ. ಗಂಡ ಮಾಸ್ತರು. ಬಿಡಾರದ ಪಕ್ಕದಲ್ಲೇ ಶಾಲೆ. ಹೆಚ್ಚಿನ ಮಕ್ಕಳು ಬ್ರಾಹ್ಮಣೇತರರು. ಸರಕಾರಿ ಶಾಲೆ. ದೂರದಿಂದ ಬರುವ ಮಕ್ಕಳು ಶಾಲೆ ತಲುಪುವುದು ತಡವಾಗಿ. ಮತ್ತೆ ಊಟಕ್ಕೆ ಹೋಗಿ ಮತ್ತೆ ಬರುವುದು ಅವುಗಳಿಂದಾಗದು. ಹಾಗಾಗಿ ಊಟದ ಬೆಲ್ ಬಾರಿಸಿದೊಡನೆ ಮನೆಯ ದಾರಿ ಹಿಡಿಯುತ್ತಿದ್ದವು. ಇವಕ್ಕೆ ಏನು ಪಾಠ ಮಾಡುವುದು? ಬ್ರಾಹ್ಮಣರ ಮಕ್ಕಳಿಗೆ ಮಠದಿಂದ ಬೇರೆ ವೇದಪಾಠದ ವ್ಯವಸ್ಥೆ ಇತ್ತು. ಅವೆಲ್ಲಾ ಶ್ರೀಮಂತರ ಮಕ್ಕಳು. ಈ ಶಾಲೆಯ ನೆಪದಿಂದ ಈತನಿಗೆ ಮಠದ ಪುಷ್ಕಳ ಭೋಜನಕ್ಕೆ ಕತ್ತರಿ ಬಿತ್ತು. ಇನ್ನೊಬ್ಬ ಮಾಸ್ತರು ರಗಳೆ ಬೇಡವೆಂದು



ಬುತ್ತಿ ತರುತ್ತಿದ್ದರು. ಈತನಿಗೆ ಇದು ಬೇಕಿಲ್ಲದ ಚಾಕರಿ. ಆದರೂ ವಿಧಿ ಇಲ್ಲ. "ಉದರ ನಿಮಿತ್ತಂ ಬಹುಕೃತ ವೇಷ" ಸರಕಾರಿ ಸಂಬಳಕ್ಕೆ ಖೋತಾ ಇಲ್ಲ. ಮಕ್ಕಳು ಕಲಿತರೋ ಬಿಟ್ಟರೋ ಯಾರಿಗೇನು! ಶಾಲೆಗೆ ಇನ್ಸ್‌ಪೆಕ್ಟರ್ ತಪಾಸಣೆಗೆ ಬಂದರೆ ಅವರೂ ಶೃಂಗೇರಿಯೆಲ್ಲಾ ಸುತ್ತು ಹಾಕಿ ಮಹಾಮಂಗಳಾರತಿ ತೆಗೆದುಕೊಂಡು ಮಠದಲ್ಲಿ ಊಟಮಾಡಿ ಬಸ್ಸು ಹತ್ತುತ್ತಿದ್ದರು. ಈತನೇ ಬಸ್ಸಿನವರೆಗೂ ಕಳಿಸಿ ಬರುತ್ತಿದ್ದುದು. ವಿದ್ಯಾಭ್ಯಾಸಕ್ಕೆ ಸರಕಾರ ಶ್ರಮಿಸುತ್ತಿದ್ದದ್ದು ಹೀಗೆ.

ಈತನಿಗೋ ಕಳೆದ ಬೇಸಗೆಯಲ್ಲೂ ಸಂಭಾವನೆಗೆ ಹೋಗಲಾಗಿರಲಿಲ್ಲ. ಕಾಲು ತುರಿಕೆ ಉಂಟಾಯಿತು. ಎರಡು ತಿಂಗಳು ರಜೆ. ಈ ವರ್ಷ ಹೋದರೆ ಹೇಗೆ? ಚಿಕ್ಕ ಹೆಂಡತಿ ಮನೆಯಲ್ಲಿ. ಒಬ್ಬಳನ್ನು ಬಿಟ್ಟುಹೋಗುವುದು ಅಸಾಧ್ಯ. ಈಕೆ ತನ್ನೊಂದಿಗೆ ಬರಲಾರಳು. ಛೆ! ಗಂಡನೊಡನೆ ಬರಲು ಇವಳಿಗೇನು ಕಷ್ಟ? ನಾಲ್ಕು ಊರು ತಿರುಗಿದಂತಾಗದೆ? ಹೋದಲ್ಲೆಲ್ಲ ದೇವಸ್ಥಾನಗಳಿವೆ. ತುಂಬಿದ ವಠಾರ. ಅರ್ಚಕರ ಅಥವಾ ಸದ್ಗೃಹಸ್ಥರ ಮನೆಯಲ್ಲಿ ಉಳಿದುಕೊಂಡರಾಯಿತು. ಬಾರೇ ಎಂದು ಪರಿಪರಿಯಾಗಿ ಕರೆದ. ಒಲ್ಲೆ, ನಾನು ಕಕ್ಕನ ಮನೆಯಲ್ಲಿರುತ್ತೇನೆ. ನೀನು ತಿರುಗಾಟ ಮುಗಿದೊಡನೆ ಕರೆದುಕೊಂಡು ಬಾ. ನನಗೆ ಸೌಖ್ಯವಿಲ್ಲ. ಬರಲಾರೆ. ಎದುರುತ್ತರ ಕೊಡುವ ಹೆಂಡತಿಯೆಂದರೆ ಗಂಡಸರಿಗೆ ಯಾವಾಗಲೂ ತಲೆನೋವೇ. ಕರೆದಲ್ಲಿ ಬರದೆ ಚಂಡಿಹಿಡಿಯುವುದೆಂದರೇನು! ಪತಿಯನ್ನು ಅನುಸರಿಸುವುದು ಸತೀ ಧರ್ಮ. ಇಷ್ಟೊಂದು ಅಹಂಕಾರ ಹೆಂಗಸಿಗೆ ಇರಬಾರದು. ಎಲ್ಲ ನನ್ನ ಕರ್ಮ. ನನಗೆ ತಕ್ಕ ಹೆಂಡತಿ ಅಲ್ಲ. ಗೊಣಗುತ್ತಲೇ ಎರಡು ದಿನ ಕಳೆಯಿತು. ಮತ್ತೂ ಎರಡು ಕಳೆದವು. ಬರದೇ ಎಲ್ಲಿಗೆ ಹೋಗುತ್ತಾಳೆ. ಒಂಟಿ ಹೆಂಗಸು ಒಬ್ಬಳೇ ಇರುತ್ತಾಳೇನು? ಪಿತ್ತ ನೆತ್ತಿಗೇರಿತು. ಸೀದಾ ಬಿಡಾರ ಕೊಟ್ಟ ಮಾಲಿಕನ ಮನೆಗೆ ಹೋಗಿ – ನನಗೆ ಮೂರು ತಿಂಗಳು ಶಾಲೆಗೆ ರಜೆ. ದೇಶಾವರಕ್ಕೆ ಹೋಗುವೆ, ಮನೆಯ ಬಾಗಿಲು ಹಾಕಿಕೊಳ್ಳಿ – ಎಂದವನೇ ತನ್ನ ದೊಡ್ಡದಾದ ಬಗಲು ಚೀಲ (ಜೋಳಿಗೆ)ದೊಂದಿಗೆ ಮೆಟ್ಟಲಿಳಿದು ಇವಳಿಗಾಗಿ ಕಾದು ನಿಂತ. ಮನೆಯ ಒಡೆಯ ಬಂದು ಈಕೆಯೂ ಹೊರಡುವಳೆಂದೆನಿಸಿ ನಿಂತ. "ಬಟ್ಟೆ ಬರೆ ತಗೋಮ್ಮ ಬೀಗ ಹಾಕುತ್ತೇನೆ" ಎಂದಾಗ ನಿರ್ವಾಹವಿಲ್ಲದೆ ಹೊರಟು ಇವನೊಡನೆ ಹೆಜ್ಜೆ ಹಾಕಬೇಕಾಯ್ತು. ತಾನೇ ನೆಟ್ಟು ಬೆಳೆಸಿದ ಚೆಂದದ ಕೈತೋಟವನ್ನು ಕಣ್ತುಂಬಾ ನೋಡುತ್ತಾ ಕಂಬನಿದುಂಬಿದಳಂತೆ. ಅಂದೇ ಮನದಲ್ಲಿ ಮೊಳೆತಿರಬೇಕು. ಸ್ವಂತ ಮನೆ ಬೇಕೆಂಬಾಸೆ! ಸ್ವಲ್ಪ ದೂರ ಹೋದೊಡನೆ "ನನ್ನನ್ನು ಚಿಕ್ಕಪ್ಪನ ಮನೆಗೆ ಬಿಡು" ಎಂದು ಇವಳೂ 'ಬಾ, ನನ್ನ ಹಿಂದೆ' ಎಂದು ಇವನೂ ಒಟ್ಟಿನಲ್ಲಿ ಮಾತು ಬೆಳೆಯಿತು. ಎಷ್ಟು ಸಾರಿ ಹೇಳಿದರೂ ಆತ ಒಪ್ಪಲಿಲ್ಲ. ಕಡೆಗೆ ಒಂದು ಮರದ ಕೆಳಗೆ ಕುಳಿತಳಂತೆ. ಆತ ತಿರುಗಿಯೂ ನೋಡದೆ ತನ್ನ ಪಾಡಿಗೆ ಬಸ್ಸು ಹಿಡಿಯಲು ಹೋದನಂತೆ. ಹೆಣ್ಣುಮಕ್ಕಳೆಂದರೆ ನಾಯಿಗಿಂತಲೂ ತಾತ್ಸಾರ! ಸಂಜೆವರೆಗೂ ಈಕೆ ವಾಪಸ್ಸು ಬರಬಹುದು. ಬಿಟ್ಟುಹೋಗಲಾರನೆಂದು ಕಾದಳು. ಕೆಲಸ ಮುಗಿಸಿ ಮನೆಗೆ ತೆರಳುತ್ತಿದ್ದ ಗುರುತಿನವನೊಬ್ಬ ಆ ದಾರಿಯಾಗಿ ಬಂದವನು ವಿಚಾರಿಸಿದನಂತೆ. ಈಕೆ ನಡೆದದ್ದನ್ನು ಹೇಳಿದಳು. ಇಲ್ಲೇ ಎರಡು ಮೈಲಿದೂರ ನನ್ನ ಚಿಕ್ಕಪ್ಪನ ಮನೆಯಿದೆ. ಕರೆದುಕೊಂಡು ಹೋಗಿಬಿಡು ಎಂದು ಕಂಬನಿ ತುಂಬಿ ಕೇಳಿಕೊಂಡಾಗ ಅವನು ಕನಿಕರಿಸಿ ಮನೆಯ ಹೆಸರು ಹೇಳಿದಾಗ ಗೌರವದಿಂದ ಜತೆಗೆ ಬಂದು ಬಿಟ್ಟುಹೋದನಂತೆ. ಆಗ ಇವಳ ಹೊಟ್ಟೆಯಲ್ಲಿ ಮಗುವೊಂದು ಬೆಳೆಯಲು ಪ್ರಾರಂಭವಾಗಿ ಎರಡು ತಿಂಗಳಾಗಿತ್ತು.

ಈ ಸ್ಥಿತಿಯಲ್ಲಿ ಹೆಣ್ಣಿಗೆ ಆಶ್ರಯಬೇಕಲ್ಲವೇ. ಊರೂರು ಸುತ್ತಲು ಸಾಧ್ಯವೇ? ಮದುವೆಗಳೆಂದರೆ ಹುಡುಗಾಟವೇ? ದಿಕ್ಕಿಲ್ಲದ ದಾಸಯ್ಯನಿಗೆ ಊರೆಲ್ಲಾ ನೆಂಟರೇ. ಹಾಗೆಂದು ಹೆಣ್ಣು ಕೊಟ್ಟುಬಿಡುತ್ತಾರೆಯೇ. ತಮ್ಮನಿಗೆ ಅಣ್ಣನ ಮೇಲೆ ಅಸಾಧ್ಯ ಕೋಪ ಬಂತು. ತನಗೂ ಹೆಣ್ಣುಮಕ್ಕಳಿದ್ದಾರೆ. ಕೇಳಿದವರಿಗೆಲ್ಲ ಧಾರೆಯೆರೆಯುವುದೆ? ಆದದ್ದು ಆಗಿಹೋಯ್ತು. ನನಗೆ ಇನ್ನೊಬ್ಬಳು ಮಗಳು ಅಂದುಕೊಳ್ಳುವುದು. ಚಿಕ್ಕಪ್ಪನ ಮನೆಯಲ್ಲಿ ಮೂರು ತಿಂಗಳು ಆರಾಮಾಗಿ ಕಳೆದುಹೋದವು. ಆತನ ತಿರುಗಾಟವೆಲ್ಲ ಕಳೆದು ಸವಾರಿ ಊರಿಗೆ ಆಗಮಿಸಿತು. ಮನೆಗೆ ಬಂದರೆ ಆ ದಿನ ಹಾಕಿದ ಬೀಗ ಹಾಗೇ ಇದೆ. ಮಾಲಿಕನ ಮನೆಗೆ ಬೀಗ ಪಡೆದುಕೊಳ್ಳಲು ಹೋದರೆ ಆತ ಚೆನ್ನಾಗಿ ಬೈದುಬಿಟ್ಟನಂತೆ. "ನಾಲ್ಕು ಮಕ್ಕಳಿಗೆ ಪಾಠ ಹೇಳಬೇಕಾದ ನೀವೇ ಹೀಗಾದ್ರೆ ಹೇಗೆ? ಆ ಹೆಣ್ಣುಮಗೂನ ಯಾಕಯ್ಯಾ ಗೋಳುಹೊಯ್ಕೊತೀ. ಅವ್ರ ಕಣ್ಣೀರು ಒಳ್ಳೇದಲ್ಲಾ ತಿಳ್ಕಳಿ. ನಿಮ್ಗೆ ಯಾವ ಜನ್ಮಕ್ಕೂ ಹೆಂಡ್ತೀ ಮಕ್ಳು ಸಿಗೋಲ್ಲ"

ಬೀಗ ಕೊಡದೆ ದಬಾಯಿಸಿದನಂತೆ. ಇನ್ನೇನು, ಎಲ್ಲಿ ಹೋಗಿರ್ತಾಳೆ, ನಾನೇನು ತಪ್ಪು ಮಾಡಿದ್ದು? ಜೊತೆಗೆ ಕರ್ದಿಲ್ಲವೇ. ವಿಚಾರಿಸಿ ಪತ್ತೆ ಮಾಡಿ ಸೀದಾ ಚಿಕ್ಕಪ್ಪನ ಮನೆಗೆ ಹೋದ. ರಾಯರು ಬಂದ ಸುದ್ದಿ ಮನೆಯಲ್ಲೆಲ್ಲ ಹರಡಿತು. ಎಲ್ಲರೂ ಮಿಕಿ ಮಿಕಿ ನೋಡಿದರು. ಅಲ್ಲೇ ಎಂಟು ದಿನ ಠಿಕಾಣಿ. ಈಕೆ ಮಾತೇ ಆಡಿಸಿಲ್ಲವಂತೆ! ಚಿಕ್ಕಪ್ಪ-ಚಿಕ್ಕಮ್ಮ ಈಕೆಯ ಪರವಾಗಿ ಮಾತಾಡಿದ್ರು: ಅಳಿಯನನ್ನು ಕೂರಿಸಿಕೊಂಡು – "ನೀನು ಹೀಗೆ ಮಾಡಬಹುದೆ? ನಿನಗೆ ನಿಜವಾಗಿ ಎರಡನೇ ಸಂಸಾರ ಬೇಕಿತ್ತೇ? ಹೆಣ್ಣುಮಕ್ಕಳೆಂದರೆ ನಿನಗೆ ಅಷ್ಟು ಸದರವೇ? ಮರದ ಬುಡದಲ್ಲಿ ಬಿಟ್ಟುಹೋದೆಯಂತಲ್ಲಾ? ನೀನೊಬ್ಬ ಮನುಷ್ಯನೇ? ನಿನ್ನ ಮೂರು ತಿಂಗಳ ಸುತ್ತಾಟದಲ್ಲಿ ನೀನು ಹೋದಕಡೆಯಲ್ಲೆಲ್ಲಾ ಸಂಭಾವನೆಗೆ ಕೈಚಾಚಲು ಹೆಂಡ್ತೀನೂ ಬೇಕೇ? ಭಿಕ್ಷಾಟನೆಗೆ ತಿರುಗಿದಂತಲ್ವೇ ಅದು? ನನ್ನಣ್ಣನಿಗೆ ಮನೆ ತುಂಬಾ ಹೆಣ್ಮಕ್ಕಳು. ನಿನ್ನ ಮಾತಿಗೆ ಮರುಳಾಗಿ ಜೋತಿಷ್ಯ ಜಾತಕ ನಂಬ್ಕೊಂಡು ನಿನಗೆ ಮದುವೆ ಮಾಡಿಕೊಟ್ಟ. ನನಗೆ ನಂತರ ಗೊತ್ತಾಯ್ತು. ಆದದ್ದು ಆಗೋಯ್ತು. ಈಗ ಅಣ್ಣನಿಗೆ ಹೇಳಿಕಳಿಸಿದ್ದೇನೆ. ಆಕೆ ಬಸುರಿ. ಐದು ತಿಂಗಳು. ಅಣ್ಣ ಸಮಾಚಾರ ತಿಳಿದು ಕರೆದುಕೊಂಡು ಹೋದ್ರೆ ಸರಿ. ಇಲ್ಲದಿದ್ರೆ ಇಲ್ಲಿ ಇರ್ತಾಳೆ. ಈ ಸ್ಥಿತೀಲಿ ನಿಂಜತೆ ಕಳಿಸಲಾಗದು. ಇಲ್ಲಿ ನನ್ನ ಹೆಂಡ್ತಿ ಇದ್ದಾಳೆ. ಬಾಣಂತನ ಕಳೆದು ಆರು ತಿಂಗಳ ನಂತರವೇ ಕಳಿಸುವುದು. ಅಷ್ಟರೊಳಗೆ ನೀನು ಒಂದು ಕಡೆ ಬಿಡಾರ ಮಾಡಿ ಕಷ್ಟವೋ ಸುಖವೋ ಕರ್ಕೊಂಡು ಹೋಗು. ನಾನೂ ಕೈಲಾದ ಸಹಾಯ ಮಾಡ್ತೇನೆ. ಅವಳನ್ನು ಮಾತಾಡಿಸಿಕೊಂಡು ಹೋಗು..." ಮಳೆಗಾಲದ ಬಿರುಮಳೆಯಂತೆ ಬಿದ್ದ ಈ ಮಾತುಗಳು ಅವನ ನೆಮ್ಮದಿ ಕೆಡಿಸಿದವು. ಬಸುರಿ? ಮಗು? ಆತನ ಮೈಯೆಲ್ಲ ಬೆವತಿತ್ತು. ಮೊದಲ ಹೆಂಡತೀಯೂ ಬಸುರಿಯಿದ್ದಾಗಲೇ ಸತ್ತದ್ದು. ಅವಳೇನಾದರೂ ಪ್ರೇತವಾಗಿ ಕಾಟ ಕೊಡುತ್ತಿದ್ದಾಳೆಯೇ? ನನಗೋ ನಾಲ್ಕೂ ದಿಕ್ಕುಗಳೂ ನಿರಾಳ. ಮಗುವನ್ನೂ ಕಟ್ಟಿಕೊಂಡು ಸಂಸಾರ ನಿಭಾಯಿಸುವುದು ಹೇಗೆ? ಬಾರದ ನಗೆ ತಂದುಕೊಂಡು ಹೆಂಡತಿ ಬಳಿ ಹೋಗಿ ವಾರಬಿಟ್ಟು ಬರುತ್ತೇನೆಂದು ಸಮಜಾಯಿಸಿ ನೀಡಿ ಬಸುರಿಗೆ ಐದು ರೂಪಾಯಿ ಕೈಲಿಟ್ಟು ಹೋದ! ತನ್ನ ಸ್ಥಿತಿಗೆ ಆಕೆಗೆ ಕಣ್ಣೀರು ಕೋಡಿ ಹರಿಯಿತು. ಚಿಕ್ಕಮ್ಮ ಒಳಗೆ ಕರೆದು ಸಮಾಧಾನ ಮಾಡಿದರು.

ಈತ ಸುದ್ದಿ ತಿಳಿಸಲು ಅಣ್ಣನ ಮನೆಗೆ ಹೋದ. ಅಲ್ಲಿ ಮಗನಿಗೆ ಮದುವೆಯ ಗೌಜಿಯಲ್ಲಿದ್ದ ಅಣ್ಣನೊಡನೆ ಹೇಳಲಾಗದೆ ಅತ್ತಿಗೆ ಬಳಿ ಬಂದು ಸುತ್ತಿ ಬಳಸಿ ಮಾತು ಪ್ರಾರಂಭಿಸಿದ. ವಿಷಯವೇನೋ ಗೊತ್ತಾಯ್ತು. ಇನ್ನೊಂದು ನಿಟ್ಟುಸಿರು. ಕರ್ಕೊಂಡು ಬಂದಮೇಲೆ ಇಲ್ಲೇ ತಂದುಬಿಡು. ನಾ ನೋಡ್ಕೊಳ್ತೀನಿ. ಅತ್ತಿಗೆ ಅಭಯ ನೀಡಿದಳು. ಅವಳೂ ಹೆಣ್ಣೇ ಅಲ್ಲವೇ. ಮುಂದೆ ಶಾಲೆಯ ಕಡೆ ಪಯಣ. ಈತ ಬರುವುದು ತಡವಾಯ್ತೆಂದು ಬೇರೆ ಮಾಸ್ತರರನ್ನು ಗೊತ್ತು ಮಾಡಿದ್ದರು. ಬೇಕಾದ್ರೆ ಮಕ್ಕಳಿಗೆ ಮನೆ ಪಾಠ ಹೇಳು ಎಂದು ಸಲಹೆ ಬಂತು. ಮನೆಯೂ ಇಲ್ಲ – ಕೆಲಸವೂ ಇಲ್ಲ. ಇವನ ಸಿಟ್ಟು ಆಕೆಯ ಗರ್ಭದಲ್ಲಿದ್ದ ಪಿಂಡದ ಕಡೆ ತಿರುಗಿತು. ಥತ್ – ಇದು ಜನ್ಮಕ್ಕೆ ಬಂದ ಘಳಿಗೆಯೇ ಕಷ್ಟಗಳೇ ಶುರುವಾದ್ವು ಇದಕ್ಕೆ ಅದೃಷ್ಟ ಇಲ್ಲ. ತವರು ಮನೇಲೇ ಇರಲಿ! ಸಿಡುಕುತ್ತಲೇ ಸವಾರಿ ಮಠದ ಕಡೆ ತಿರುಗಿತು. ಮಧ್ಯಾಹ್ನ ಊಟ ಮಾಡ್ಕೊಂಡು ಮತ್ತೆ ಅಣ್ಣನ ಮನೆ ಕಡೆ ನಡೆದ. ಮನೆಯ ಮದುವೆ ಗೌಜಿ. ಎರಡು ತಿಂಗಳು ಆರಾಮವಾಗಿ ಕಳೆಯಬಹುದು. ಚಿಕ್ಕಪುಟ್ಟ ಕೆಲ್ಸ ಏನಾದ್ರೂ ಮಾಡುತ್ತ, ಮಾಡಿಸುತ್ತ ಇರಬಹುದು. ದಿನಗಳು ಕಳೆದವು. ಲಗ್ನ ಮಾಡಿಕೊಟ್ಟ ಮೇಲೆ ಸುದ್ದಿ ಬಿಟ್ಟಿದ್ದ ಅಪ್ಪನಿಗೆ ಮಗಳು ಬಸುರಿಯೆಂಬ ವರ್ತಮಾನ ಮೊದಲ ಬಾರಿ ಬಂತು. ಇನ್ನು ಸುದ್ದಿ ಬಿಟ್ಟರೆ ಅಪವಾದ ಹೊರಬೇಕಾದೀತೆಂದು ತನ್ನ ಹದಿನೈದು ವರ್ಷದ ಮಗನನ್ನು ಕರೆ ತರಲು ಕಳಿಸಿದ. ತಮ್ಮನನ್ನು ನೋಡಿ ಈಕೆಯ ಮುಖ ಊರಗಲವಾಯ್ತು. ಮೊದಲ ಹೆರಿಗೆಗೆ ಮೊದಲ ಬಾರಿ ಅಪ್ಪನ ಮನೆಗೆ! ಈ ತವರು ಎಂದರೆ ಏನು ಸೆಳೆತವೋ – ಎಲ್ಲ ಮರೆತು ಬಿಡುತ್ತಾರೆ! ಈ ಪೋರನೊಂದಿಗೆ ಕಳಿಸಲು ಧೈರ್ಯ ಸಾಲದೆ ಚಿಕ್ಕಪ್ಪನೂ ಚಿಕ್ಕಮ್ಮನೂ ಹೊರಟರು. ಮೂವರು ಹೊರಡಬಾರದಲ್ಲ ಅದಕ್ಕೆ. ಅಳಿಯನ ಘನಂದಾರಿ ಕೆಲಸಗಳನ್ನೆಲ್ಲ ಅಣ್ಣನಿಗೆ ವರದಿ ಒಪ್ಪಿಸಿ, ಗುಣಗಾನ ಮಾಡಿ ಹೀಗೇಕೆ ಮಾಡಿದ್ದೆಂದು ಕೇಳಿದ್ದಕ್ಕೆ ಅಣ್ಣ-ತಮ್ಮಂದಿರಿಗೆ ಜಗಳವೂ ಆಯ್ತು. ಮಗಳನ್ನು






## ನನ್ನ ನಮಾಜ್

ಎಂದಿನಂತೆ ಇಂದೂ ಸಹ
ನಾನು ನಮಾಜಿಗೆ ಹೋಗಲಿಲ್ಲ
ನಾಲ್ಕು ಗೋಡೆಗಳ ನಡುವೆ
ಅಲ್ಲಾಹನ ನೆನೆದು
ಬಗ್ಗಿ ಏಳುವುದು ನನಗೆ ಒಗ್ಗಿಲ್ಲ

ಅರ್ಥವಾಗದ
ಮಂತ್ರಗಳ ಪಠಿಸುವ
ಮೌಲ್ವಿಯ ಬೆನ್ನಹಿಂದೆ ನಿಂತು
ಮಾಡುವ ನಮಾಜಿನ
ಪುಣ್ಯಫಲಗಳು ನನಗೆ ದಕ್ಕಿಲ್ಲ

ನರಕದ ಭಯವಿಲ್ಲ ಸ್ವರ್ಗದ ಆಸೆಯೂ ಇಲ್ಲ
ಸಿರಿ ಸಂಪತ್ತು ಸುಖ ಭೋಗಗಳು
ಏನೋ ದೊರೆಯುತ್ತದೆ
ಎಂಬ ನಿರೀಕ್ಷೆಯೂ ನನಗಿಲ್ಲ

ನಮಾಜಿನ ವೇಳೆ, ಆದರೇನಂತೆ
ನನ್ನ ಕಾಯಕ ನನಗುಂಟು
ಅಮ್ಮನ ಔಷಧಿಗೆ ಅಪ್ಪನ ಗೋರಿಗೆ
ಹೆಂಡತಿ ಮಕ್ಕಳ ಹಸಿದ ಹೊಟ್ಟೆ ತುಂಬಲು
ನೀರಿನಂತೆ ಬೆವರು ಹರಿಸಲೇಬೇಕು
ಬಿಡುವು ಸಿಕ್ಕಾಗ
ಯಾವುದೋ ಮರದಡಿಯಲ್ಲಿ ಕುಳಿತು
ಪುಸ್ತಕದ ಪುಟಗಳ ತಿರುವಿ
ಮನೆಗೆ ಹೊರಟರೆ
ಅಮ್ಮನ ನೋಟಕ್ಕೆ ಕಿರುನಗೆ ಬೀರಿ
ಜೇಬಿನಲ್ಲಿದ್ದ ಟೋಪಿ ಹೊರತೆಗೆದು
ಗೂಟಕ್ಕೆ ನೇತುಹಾಕುತ್ತೇನೆ

ಮಗ ನಮಾಜಿಗೆ ಹೋಗಿದ್ದಾನೆ
ಎಂಬ ತೃಪ್ತಿ ಅಮ್ಮನಿಗೆ
ನೊಂದು ಬೆಂದ ಜೀವಕ್ಕೆ
ನೋವನುಂಟುಮಾಡದ
ಸಾರ್ಥಕತೆ ನನಗೆ

**ಕಾ. ಹು. ಚಾನ್‌ಪಾಷ**
ನಂ. ೧೫, ಭಾರತ್ ಪಾಲಿಟೆಕ್ನಿಕ್ ಎದುರು
ಕೆ. ಜಿ. ಎಫ್. ಮುಖ್ಯರಸ್ತೆ, ಬಂಗಾರಪೇಟೆ – ೫೬೩ ೧೬೨, ಕೋಲಾರ ಜಿಲ್ಲೆ

ಕಂಡು ಹರ್ಷಾತಿರೇಕದಿಂದ ತಾಯಿಗೆ ಮಾತೇ ಹೊರಡಲಿಲ್ಲ. ಅಪರೂಪಕ್ಕೆ ಬಂದ ಮಗಳು. ಇವಳ ನಂತರದ ಇನ್ನಿಬ್ಬರು ತಂಗಿಯರಿಗೂ ಮದುವೆ ಯಾಗಿತ್ತು. ಸುದ್ದಿ ತಿಳಿದ ಎಲ್ಲರೂ ಇವಳನ್ನು ನೋಡಲು ಬರುವವರೇ. ಆರಾಮವಾಗಿ ದಿನಗಳು ಕಳೆದುಹೋದವು. ಎಲ್ಲವೂ ಸುಸೂತ್ರ. ಇಲ್ಲಿದ್ದಷ್ಟು ದಿನ ಸಂಭ್ರಮದ ದಿನಗಳೇ. ತಾಯಿಯ ಆರೈಕೆ.

ಒಂದು ದಿನ ಈತನಿಗೆ ಮಾವನ ಮನೆಯಿಂದ ಕಾಗದ ಬಂತು. "ನಿನ್ನ ಚಿ. ಸೌ. ಹೆಣ್ಣು ಮಗುವಿಗೆ ಜನ್ಮ ನೀಡಿದ್ದಾಳೆ. ಮಗು ಬಾಣಂತಿ ಕ್ಷೇಮ. ಬಂದು ನೋಡಿಕೊಂಡು ಹೋಗುವುದು" ಕಾಗದ ನೋಡಿ ಭಲೇ ಹಾರಾಡಿದನಂತೆ. ಆ ವಂಶವೇ ಅಂಥದು. ಮನೆ ತುಂಬ ಹೆಣ್ಣುಮಕ್ಕಳು. ಪಾಪ ಅಂತ ಲಗ್ನವಾದರೆ ಇವಳೂ ಹೆಣ್ಣು ಹಡೆಯಲು ಪ್ರಾರಂಭ ಆಯ್ತು. ಇವಳ ಅಕ್ಕ-ತಂಗೀರಿಗೆ ಕಳೆದ ವರ್ಷ ಗಂಡುಮಕ್ಕಳು ಮೂವರಿಗೂ ಆದುವಂತೆ. ಹೆಣ್ಣುಗಳೆಲ್ಲಾ ಇವಳ ಪಾಲಿಗೇನೋ! ಪಿಂಡಪ್ರದಾನ ಮಾಡುವ ಗಂಡಾದರೂ ಆಗಿದ್ದರೆ... ಇನ್ನು ಊರವರದ್ದೆಲ್ಲಾ ಒಂದೇ ರಾಗ. ನನಗೆ ಯಾಕೆ ಬೇಕಿತ್ತು ಈ ಸಂಸಾರ ತಾಪತ್ರಯ ಅಂತ ಹಂಗಿಸೋರೆ. ಕೈಲಾಗದವರನ್ನು ಆಡಿಕೊಂಡು ನಗುವುದು ಈ ಲೋಕದ ಹಣೆಬರಹ, ಥತ್ -ಏನಾದರಾಗಲಿ. ಮನೆಗೆ ಬರಲಿ. ಸಮಯ ನೋಡಿ ಅವಳಿಗೆ ತಿಳಿಹೇಳಿ ಯಾವುದಾದರೂ ಅನಾಥಾಶ್ರಮಕ್ಕೆ ಸೇರಿಸಿದರಾಯಿತು. ಮಕ್ಕಳನ್ನು ನೋಡಿಕೊಂಡು ಚೆನ್ನಾಗಿ ವಿದ್ಯೆ ಕಲಿಸುತ್ತಾರಂತೆ. ಏನು, ಯಾರೂ ಎರಡನೇ ಮದುವೆ ಮಾಡಿಕೊಳ್ಳುವುದೇ ಇಲ್ಲವೇ? ನಂದು ಮಾತ್ರ ಹೇಗೆ ತಪ್ಪು? ತಪ್ಪನ್ನು ಸಮರ್ಥಿಸಿಕೊಳ್ಳುತ್ತ ಊಟದ ಹೊತ್ತು ಆಗಿದ್ದರಿಂದ ಸೀದಾ ಮಠದ ಕಡೆಗೆ ಹೆಜ್ಜೆ ಹಾಕಿದನು. ಸರಿ, ಮುಂದಿನ ನಾಲ್ಕೈದು ತಿಂಗಳು ಕಾದ ಮಾವ ಅಳಿಯದೇವರು ಬಂದು ಮಗು-ಬಾಣಂತಿಯನ್ನು ಕರೆದೊಯ್ಯುವಂತೆ ತಿಳಿಸಿ ಪತ್ರ ಬರೆಸಿ ಹಾಕಿದರು. ಈಕೆಗೆ ಇನ್ನೂ ನೋಡಲು ಸಹ ಬಂದಿಲ್ಲವೆಂಬ ಸಿಟ್ಟಿನೊಂದಿಗೆ ಇವನ ಜೊತೆ ಹೇಗಪ್ಪಾ ಎಂಬ ದಿಗಿಲು. ಕಡೆಗೂ ತನ್ನ ಅಣ್ಣನೊಂದಿಗೆ ಈತನ ಸವಾರಿ ಬಂತು. ಭಾವಯ್ಯ ಒಳ್ಳೆಯವರೇ, ಇವರು ಯಾಕೆ ಹೀಗೆ, ಈಕೆಗೆ ತಿಳಿಯದಾಯಿತು. ತವರಿನಲ್ಲೆ ಜಾತಕರ್ಮ, ನಾಮಕರಣಾದಿಗಳು ನಡೆದು ಮಗುವಿಗೆ ಪುಷ್ಪಾ ಎಂದು ಹೆಸರಿಟ್ಟರು. ಶುಭ ಮುಹೂರ್ತದಲ್ಲಿ ಮಗುವಿನೊಂದಿಗೆ ಎಲ್ಲರೂ ಹೊರಟುನಿಂತರು. ಮಗುವಿನೊಂದಿಗೆ ಕಳಿಸಿಕೊಡುವ ಸಂಭ್ರಮ ಒಂದು ಕಡೆ - ಈತನ ಅತಂತ್ರ ಸ್ಥಿತಿಯ ಬಗ್ಗೆ ಆತಂಕ ಒಂದು ಕಡೆ. ತಾಯಿ ಹೃದಯ ತುಂಬಿ ಕಂಬನಿಯೊಂದಿಗೆ ಹರಸಿ ಕಳಿಸಿದಳು. ಶೃಂಗೇರಿಯ ಅಣ್ಣನ ಮನೆಗೆ ಬಂದಿದ್ದಾಯ್ತು. ಅಲ್ಲಿ ತಿಂಗಳು ಕಳೆದು ಮತ್ತೆ ಚಿಕ್ಕಪ್ಪನ ಮನೆಗೆ. ಅಯ್ಯೋ ನನ್ನ ಬಾಳೇ, ನೋಡಿದವರು ಹಗುರವಾಗಿ ಕಾಣುತ್ತಾರೆ. ಬಂದಕೂಡಲೇ ಆತ ಮಾಡಿದ ಮೊದಲ ಕೆಲಸ ಎಂದರೆ ಜಾತಕ ಹಿಡಿದು ಜೋಯಿಸರಲ್ಲಿಗೆ ಓಡಿದ್ದು. ವಿಕೃತಿ ಸಂವತ್ಸರ - ಶುಕ್ರವಾರ - ಕನ್ಯಾ ರಾಶಿ - ಉತ್ತರಾ ನಕ್ಷತ್ರ - ಏಳರಾಟ ಶನಿ ಜನ್ಮದಲ್ಲೇ ಪ್ರಾರಂಭ - ಅಲ್ಲದೆ ಅಪ್ಪನ ರಾಶಿ ಮತ್ತು ನಕ್ಷತ್ರವೂ ಅದೇ. ಆದ್ದರಿಂದ ಅಪ್ಪನಿಗೂ ಏಳರಾಟ. ಏನೇನೂ ಶುಭ ಅಲ್ಲ. ಮುಗಿದೇ ಹೋಯಿತು. ಜಾತಕ ಚೆನ್ನಾಗಿಲ್ಲ. ಯಾರೇ ನೋಡಿದರೂ ಈ ಜಾತಕವನ್ನು ಪಕ್ಕಕ್ಕೆ ಇಡುತ್ತಿದ್ದರು. ಸರಿ ಇಷ್ಟಾದ ಮೇಲೆ ಸಂಭ್ರಮವೆಲ್ಲಿ? ಎಲ್ಲರೂ ಅವರವರ ಕೆಲಸ ನೋಡಿಕೊಂಡು ಅವರವರ ಪಾಡಿಗೆ. ಬಾಣಂತಿ ಎದ್ದು ಎಲ್ಲ ಕೆಲಸ ಮಾಡಲು ಪ್ರಾರಂಭಿಸಿದಳು. ಮನೆಯವರ ಜತೆಗೆ ಚಿಕ್ಕಪ್ಪ ಈಕೆಗೂ ಮಗುವಿಗೂ ಬಟ್ಟೆಬರೆ ತಂದರು. ಪುಷ್ಪಾಗೆ ಅಂದರೆ ಮಗುವಿಗೆ ಬಣ್ಣ ಬಣ್ಣದ ಹೂಗಳಿದ್ದ ಅಂಗಿ. ದಿನಗಳು ಉರುಳುತ್ತಿದ್ದವು. ದಿನ ಕಳೆದಂತೆ ಈಕೆ ಸಿಡುಕಲಾರಂಭಿಸಿದಳು. ಮನೆಗೆ ಬಂದವರೆಲ್ಲ ಇವಳ ಕಥೆ ಕೇಳಿ ಅಯ್ಯೋ ಪಾಪ ಎನ್ನುವವರೇ. ಈಗ ಎಲ್ಲಿದ್ದಾರಂತೆ ಎಂದು ಕೇಳಿದವರಿಗೆ ಈಕೆ ಏನು ಹೇಳಿಯಾಳು? ಯಾಕೆ ಬೇಕು ಈ ಬದುಕು? ನನಗೆ ಮದುವೆ ಮಾಡುವ ಬದಲು ಹಾಳುಬಾವಿಗಾದರೂ ನೂಕಬಾರದಿತ್ತೇ! ವಿದ್ಯೆ ಇಲ್ಲ - ಹಣ ಇಲ್ಲ - ಸ್ವಾತಂತ್ರ್ಯ ಇಲ್ಲ. ಜವಾಬ್ದಾರಿ ಕಳೆಯಲೆಂದು ಮದುವೆ ಮಾಡುತ್ತಾರೆ. ಜವಾಬ್ದಾರಿ ಮದುವೆಯಾಗಿ ಮಗುವಾದರೂ ಇವನಿಗಿಲ್ಲ. ಮಗುವಿಗೆ ವರ್ಷದ ಹುಟ್ಟುಹಬ್ಬವೇ ಬಂತು. ಯಾವ ಊರಲ್ಲಿದ್ದಾರೋ... ಚಿಕ್ಕಪ್ಪ ಅನ್ನವೇನೋ ಹಾಕ್ತಾರೆ. ಇನ್ನೇನು ಮಗುವಿನ ಎಲ್ಲ ಜವಾಬ್ದಾರಿ ತಾನು ಹೊರಬಲ್ಲಳೇ? ಶೃಂಗೇರಿಯ ಪೇಟೆಯಲ್ಲಿ ಸುತ್ತುತ್ತಿದ್ದ ಈತನನ್ನು ಪತ್ತೆ ಹಚ್ಚಿ ಚಿಕ್ಕಪ್ಪ

ಎಳೆದುಕೊಂಡೇ ಬಂದರು. ಆ ದಿನ ಅತಿಥಿ ಸತ್ಕಾರ ಮಾಡಿ ಮರುದಿನ ಮಾತಿಗೆ ಎಳೆದರು. – "ನೋಡು, ನಿನ್ನ ಹೆಂಡತಿ ನನಗೂ ಮಗಳೇ. ನನಗೇನೂ ಭಾರವಾಗಲ್ಲ. ದುಡಿಯುತ್ತಾಳೆ. ಉಣ್ಣುತ್ತಾಳೆ. ನಾನು ಅನ್ನ, ವಸ್ತ್ರ ಕೊಟ್ಟು ಕಾಪಾಡಿಯೇನು. ಅದಲ್ಲ ಪ್ರಶ್ನೆ. ಆದರೆ ಲೋಕಾರೂಢಿ ಇರುವುದು ನಿನಗೂ ಗೊತ್ತಿದೆ. ಸಂಸಾರ ಒಟ್ಟಿಗಿದ್ದರೆ ಚೆನ್ನ. ಇಲ್ಲದಿದ್ದರೆ ಗಂಡ ಕರಕೊಂಡು ಹೋಗಿಲ್ವಂತೆ ಇನ್ನೂ. ಏನೋ, ಎಂತೋ ಎಂದು ಆಡಿಕೊಳ್ಳುವವರಿಗೆ ದಾರಿ. ನಮಗೂ ನಾಲ್ಕು ಜನರಿಗೆ ಉತ್ತರಿಸಲು ಕಷ್ಟ ಆಗ್ತದೆ. ಮೊಮ್ಮಗಳ ಖರ್ಚಿನ ಭಾರ ನನಗಿರಲಿ. ಸಹಾಯ ಅಂತ ಏನಾದ್ರೂ ಮಾಡೋಣ. ಯಾವಾಗ ಕರಕೊಂಡು ಹೋಗ್ತಿ??" ಇವನಿಗೆ ಪೀಕಲಾಟಕ್ಕಿಟ್ಟುಕೊಂಡಿತು. ಸೀದಾ ಹೋಗಿ ಜಗದ್ಗುರುಗಳ ಕಾಲಿಗೆ ಬಿದ್ದು ಉದ್ಧಾರ ಮಾಡಬೇಕೆಂದು ಕೇಳಿಕೊಂಡನಂತೆ. ದೇವಸ್ಥಾನದ ಅಂಗಣದ ಒಳಗೊಂದು ಪೂಜಾಸಾಮಗ್ರಿ ಮಾರುವ ಪುಟ್ಟ ಅಂಗಡಿ+ಮುರುಕು ಮನೆಯೊಂದು ಮಂಜೂರಾಯ್ತು. ಮತ್ತೆ ಬಂಡಿ ಸಾಗತೊಡಗಿತು. ಊಟ ಮಠದಲ್ಲಿ. ಈಕೆಯೂ ಹೋಗಬಹುದು. ಆದಾಯ ಬರ ತೊಡಗಿತು. ಮಗು–ಮನೆಗೆಲಸ, ಬಿಡುವೆಲ್ಲಿಯದು? ಆತನೂ ವಿಧಿಯಿಲ್ಲದೆ ಸ್ವಾಮಿಗಳ ಮಾತೆಂದು ಹೆದರಿ–ಬೆದರಿ, ತಗ್ಗಿಬಗ್ಗಿ ನಡೆಯಲೇಬೇಕಾಯ್ತು. ಇಲ್ಲದಿದ್ದರೆ ಶೃಂಗೇರಿಯಲ್ಲಿ ಇರಲಾದೀತೇ? ಒಂದೆರಡು ವರ್ಷ ಸಂಭಾವನೆಗೆ ಕತ್ತರಿ ಬಿತ್ತು. ಮುಂದೆ ತುಂಗೆಯಲ್ಲಿ ಎಷ್ಟೋ ನೀರು ಹರಿಯಿತು. ಈ ವರ್ಷದ ನವರಾತ್ರಿಗೆ ಈಕೆಯ ಅಮ್ಮ ಬಂದರು. ಪುಷ್ಪಾಗೆ ನಾಲ್ಕು ವರ್ಷ ತುಂಬಿತು. ಇವಳಿಗೆ ಈ ಸಲದ ನವರಾತ್ರಿಗೆ ಸುಮಂಗಲಿ ಪೂಜೆ, ಪುಷ್ಪಾಗೆ ಕುಮಾರಿ ಪೂಜೆಯೆಂದು ಎರಡು ಸೀರೆಗಳು ದೇವಸ್ಥಾನದ ಪ್ರಸಾದವೆಂದು ಲಭಿಸಿದುವು. ತಾಯಿ ಮಗಳು ಮೊಮ್ಮಗಳು ನವರಾತ್ರಿ ನೋಡಿದ್ದೇ ನೋಡಿದ್ದು. ತನ್ನದೂ ಸಂಸಾರ ನೆಲೆಯಾಯಿತು ಎಂದು ಸಡಗರ. ಒಳ್ಳೆಯ ದಿನಗಳು ಬರುವ ಸೂಚನೆಯೋ ಎಂಬಂತೆ ಈಕೆ ಮತ್ತೆ ಬಸುರಿ. ತಾಯಿ ಒಂದೆರಡು ತಿಂಗಳು ಇಲ್ಲಿ ನಿಲ್ಲಬೇಕಾಯ್ತು. ನಿಂತಳು. ಮೂರನೇ ತಿಂಗಳಲ್ಲಿ ತಾಯಿಯೊಂದಿಗೆ ಮತ್ತೆ ತವರಿಗೆ ಹೊರಟಳು. ಅದೇನು ಮೋಹವೋ ತವರೆಂದರೆ ಹೆಣ್ಣುಮಕ್ಕಳಿಗೆ! ಅವರೇನು ಮಾಡಿದ್ದರೂ ಮರೆಯುತ್ತಾರೆ! ಈತ ಕೆಂಡಾಮಂಡಲನಾದ. ಯಾರನ್ನು ಕೇಳಿ ಹೊರಟದ್ದು? ನನಗೆ ಒಬ್ಬನಿಗೆ ಮನೆ ಬೇಕೇ? ಏನೋ ನನ್ನ ಮೇಲೆ ತಪ್ಪು ಹೊರೆಸಿ ಪಂಚಾಯ್ತಿ ಮಾಡಿಸಿ ಮನೆ ಮಾಡಿದೊಡನೆ ಚಿಕ್ಕಪ್ಪನ ಮನೆಗೋ ತವರಿಗೋ ಹೋಗುವುದು ಸರಿಯೆ? ಈ ಹೆಂಗಸರೇ ಹೀಗೆ. ನನ್ನನ್ನೊಂದು ಮಾತು ಕೇಳಬೇಕು, ಯಜಮಾನ ಎಂಬ ಭಯ ಭೀತಿ ಇದೆಯೇ ಇವರಿಗೆ! ಹೋಗಲಿ, ತವರಲ್ಲೇ ಇರಲಿ ನನಗೇನು. ಈ ಸಲವೂ ಹೆಣ್ಣುಮಗುವೇ ಆದರೆ ಬಿಟ್ಟೇಬಿಡುತ್ತೇನೆ. ಈಕೆ ಚಿಕ್ಕಪ್ಪನ ಮನೆಗೊಮ್ಮೆ ಹೋಗಿ ಎರಡು ದಿನ ಇದ್ದು ತಾಯಿಯೊಂದಿಗೆ ಊರಿಗೆ ನಡೆದಳು. ದೂರು ಅಣ್ಣನ ಮನೆಗೂ ತಲುಪಿತು. ಹೆರಿಗೆಗೆ ತವರಿಗೆ ಹೋದರೆ ನಿಂದೇನಯ್ಯಾ ಹಾರಾಟ ಎಂದು ಅಣ್ಣ ಗದರಿದರು.

ತವರಿನಲ್ಲಿ ದಿನ ಕಳೆದುದೇ ತಿಳಿಯಲಿಲ್ಲ. ಈ ಸಲದ ಹೆರಿಗೆ ಆಸ್ಪತ್ರೆಯಲ್ಲಿ. ವಂಶೋದ್ಧಾರಕ ಜನ್ಮತಾಳಿದ್ದ. ಪತ್ರಮುಖೇನ ತಿಳಿಸಲಾಯ್ತು. ಈತನಿಗೆ ಸಂಭ್ರಮವೇನೋ ಆಯಿತು. ಆದರೆ ಸಂಸಾರ ನಿಭಾಯಿಸುವುದು ಹೇಗೆ? ತನಗೇನೂ ಆದಾಯ ಇಲ್ಲ. ಸರಿ, ಯಾರನ್ನಾದರೂ ಸಲಹೆ ಕೇಳೋಣ. ಕೇಳಿದಾಗ ಹೋಗಿ ನೋಡಿಕೊಂಡು ಬಾರಯ್ಯ ಎಂದರು. ಇನ್ನು ಸಂಸಾರಸ್ಥನ ಸೋಗು ಹಾಕಲೇಬೇಕು. ಈ ಹೆಂಗಸರಿಗೇನು! ಹೆಂಡತಿ ಮಕ್ಕಳನ್ನು ಸಾಕಲಾರದವ ಎಂದು ನನ್ನನ್ನೇ ಅನ್ನುತ್ತಾರೆ. ಎಲ್ಲ ನನ್ನ ಕರ್ಮ. ನಾಮಕರಣ ನಡೆದು 'ಅನಂತ' ಎಂದು ಮಗುವಿಗೆ ಹೆಸರಿಟ್ಟರು. ಈ ಸಂಸಾರ ಬಂಧನ! ಎಲ್ಲ ಆ ಜ್ಯೋತಿಷಿಯಿಂದ ಆದದ್ದು! ಈಸಲ ಆತನ ಅಣ್ಣ, ಈಕೆಯ ಚಿಕ್ಕಪ್ಪ, ಈಕೆಯ ತವರಿನವರೆಲ್ಲ ಸೇರಿ ಗ್ರಾಮದ ಹಿರಿಯರನ್ನು ಸೇರಿಸಿ ಪಂಚಾಯಿತಿ ಮಾಡಿದರು. "ಇನ್ನು ಊರೂರು ಅಲೆಯುವುದು




ಬೇಡ. ಪಕ್ಕದ ಊರಿನಲ್ಲಿ ಮಾಧ್ಯಮಿಕ ಶಾಲೆ ಇದೆ. ಮ್ಯಾನೇಜರ್ ಸ್ಕೂಲು. ಈತನನ್ನು ಪಾಠ ಹೇಳಲು ನೇಮಿಸುವುದು. ತುಂಬಿದ ಗ್ರಾಮ. ಶಾಲಾ ಕೆಲಸದ ನಂತರ ಚಿಕ್ಕ ಅಂಗಡಿ ಮಾಡಿಕೊಡುವುದು. ವ್ಯಾಪಾರದ ಲಾಭ+ಸಂಬಳ ಜೀವನಕ್ಕೆ ಸಾಕು. ಯಾರಲ್ಲೂ ಯಾಚಿಸುವುದು ಬೇಡ. ಗ್ರಾಮದ ಎಲ್ಲರೂ ಸೇರಿದರೆ ಇದನ್ನು ಮಾಡುವುದು ದೊಡ್ಡದೇನೂ ಅಲ್ಲ. ನಾನು ಪಂಚಾಯತ್ ಆಫೀಸು ಕಟ್ಟಿಸುತ್ತಿದ್ದೇನೆ. ಅದರಲ್ಲಿ ಚಿಕ್ಕ ಮನೆಯನ್ನು ಸೇರಿಸಿ ಕಟ್ಟುತ್ತೇನೆ. ಅದರಲ್ಲಿ ಇವರು ಇರಲು ಅಭ್ಯಂತರ ಇಲ್ಲ. ಮತ್ತೆ ಒಂದು ಜಾಗ ಮಂಜೂರು ಮಾಡಿಸಿಕೊಡುವುದು. ಅವರಾಗಿ ಮನೆ ಕಟ್ಟಿ ಹೋಗುವವರೆಗೆ ನಾನು ಹೋಗೆಂದು ಹೇಳುವುದಿಲ್ಲ. ಮಕ್ಕಳು ದೊಡ್ಡವರಾಗಿ ನೆಲೆ ಕಂಡು ಕೊಳ್ಳಲಿ. ಏನಂತೀರಾ?" ಗ್ರಾಮದ ಪಟೇಲರು–ಶಾನುಭಾಗರು ತೀರ್ಮಾನ ಹೇಳಿದರು. ಈಕೆಯನ್ನು ಕೇಳಲಾಯಿತು. ಒಂದು ಜಾಗ ಮಾಡಿಕೊಡುವುದನ್ನು ಮಾತ್ರ ಮರೆಯದೇ ಈಡೇರಿಸಬೇಕೆಂದು ಕೇಳಿಕೊಂಡಳು. ಎಲ್ಲರೂ ಒಪ್ಪಿದರು. ಮಗುವಿಗೆ ಆರು ತಿಂಗಳು ಆಗುವಷ್ಟರಲ್ಲಿ ಪಟೇಲರು ಹೇಳಿದಂತೆ ಕಟ್ಟಡ ಕೆಲಸ ಮುಗಿದು ಆಫೀಸ್ ತೆರೆಯಲ್ಪಟ್ಟಿತು. ಇವರಿಗೆ ಹೇಳಿದಂತೆ ಮನೆ. ಇಲ್ಲಿಯೂ ಸುತ್ತಲೂ ಜಾಗ. ಸರಕಾರಿ ಬಾವಿ. ಈತನಿಗೆ ಮತ್ತೆ ಮಾಸ್ತರಿಕೆ. ಬಿಡುವಿನ ಸಮಯದಲ್ಲಿ ಅಂಗಡಿ. ಜೀವನ ಸಾಗುತ್ತಿತ್ತು. ಮಕ್ಕಳು ದೊಡ್ಡವರಾದರು. ಪುಷ್ಪಾ–ಅನಂತ ಶಾಲೆ ಕಲಿತರು. ಐದು ವರ್ಷಗಳಲ್ಲಿ ಜಾಗ ಮಂಜೂರು ಆಯಿತು. ಅಲ್ಲಿ ಹೊಸ ಮನೆ ಕಟ್ಟಿಸಿದರು. ತನಗೆ ನೆರವಾದವರನ್ನು ಕೃತಜ್ಞತೆಯಿಂದ ನೆನೆದು ಪಟೇಲರಿಗೆ ನಮಸ್ಕರಿಸಿ ಹೊಸ ಜಾಗಕ್ಕೆ ತೆರಳಿದರು. ನೆಮ್ಮದಿಯಿಂದ ಕಾಲ ಕಳೆಯಬಹುದೆಂದು ಈಕೆಗೆ ಸಂಭ್ರಮ. ಬರೀ ಜಾಗ ಇದ್ದರೆ ಸಂಪಾದನೆ ಆಗುವುದೇ? ಹಣ ಬೇಕು ಕೃಷಿ ಮಾಡಲು, ಈಕೆ ಸ್ವತಃ ದುಡಿಯಲು ಆರಂಭಿಸಿದಳು. ಸದ್ಯ ಹೊಟ್ಟೆ ತುಂಬಿದರೆ ಸಾಕಾಗುವಷ್ಟು ದುಡಿಮೆ. ದಿನ ಕಳೆದಂತೆ ಈಕೆಯ ಧೈರ್ಯ ಹೆಚ್ಚಾಯ್ತು. ತಾನಿನ್ನು ಪ್ರೌಢೆ. ಇರಲು ಜಾಗ ಇದೆ. ಈತನನ್ನು ನಂಬಿದರಾಗಲಿಲ್ಲ. ಗಂಡಸರಂತೆಯೇ ಸಣ್ಣ ಪುಟ್ಟ ಕೃಷಿ ಮಾಡಲಾರಂಭಿಸಿದಳು. ಯಾರ ಹಂಗಿನ ನೆರವೂ ಬೇಡ. ವೀಳ್ಯದೆಲೆ ಬಳ್ಳಿ ನೆಟ್ಟಳು. ಹನ್ನೆರಡು ಮೈಲಿ ಪೇಟೆಗೆ ಕೊಂಡೊಯ್ದು ಮಾರಿ ಅಕ್ಕಿ ತಂದಳು. ಮುಂದಿನ ವಾರ ಬಾಳೆಗೊನೆ. ಇನ್ನೊಂದು ವಾರಕ್ಕೆ ತರಕಾರಿ. ಮತ್ತೆ ಗೇರುಬೀಜ. ಛೆ, ಭೂಮಿ ತಾಯಿ ಕೈ ಬಿಡುತ್ತಾಳೆಯೇ? ಅಮ್ಮನದು ಕೈತೋಟವಾದರೆ ಮಕ್ಕಳದು ಹೂತೋಟ. ವಿಧ ವಿಧ ಹೂಗಳು. ಮನೆಯ ಮುಂದೆ ಅನಂತ ಪುಷ್ಪವೆಂಬ ಶ್ವೇತ ವರ್ಣದ ಹೂಗಳ ಗಿಡ. ಮನೆಯೊಳಗೂ ಅನಂತ–ಪುಷ್ಪ. ಈಗ ಈತನ ಸಂಭಾವನೆ ಜೋರಾಯಿತು. ಜಾಗ ಮಾಡಿದ್ದೇನೆ, ಕೃಷಿ ಮಾಡಬೇಕು, ಮಕ್ಕಳು ಚಿಕ್ಕವರು, ಹೆಂಡತಿ ಬೇರೆ, ಜೀವನಕ್ಕೆ ಉತ್ಪತ್ತಿ ಇನ್ನೂ ಇಲ್ಲ... ಈಗ ಒಂದೂರಲ್ಲ, ನಾಲ್ಕು ಊರು ತಿರುಗಿ ಸಂಭಾವನೆ ಇದ್ದಿದ್ದು ಸಂಪಾದನೆ ಪ್ರಾರಂಭವಾಯ್ತು. ಉದರ ನಿಮಿತ್ತಂ ಬಹುಕೃತ ವೇಷ. ಜಾಗದ ಮೇಲೆ ಕಣ್ಣಿದ್ದವರು ಈಗ ಈತನನ್ನು ಹೆಚ್ಚು ಹೆಚ್ಚು ಆದರಿಸ ಲಾರಂಭಿಸಿದರು. ದಾನ ಅಷ್ಟೇ ಅಲ್ಲ, ಸಾಲವನ್ನೂ ಕೊಡಲಾರಂಭವಾಯ್ತು. ಮಂಗನ ಕೈಗೆ ಮಾಣಿಕ್ಯ ಸಿಕ್ಕಿದರೆ ಏನಾಗುತ್ತದೆ? ಈಕೆ ತನ್ನಿಬ್ಬರು ಮಕ್ಕಳು ಮತ್ತು ತನ್ನ ಹೊಟ್ಟೆಗೆ ಸಾಲುವಷ್ಟು ದುಡಿದಳು. ಕಡಿಮೆಯಾದರೆ ತನ್ನದನ್ನು ಮಕ್ಕಳಿಗೆರೆದಳು. ದಿನ ಕಳೆದವು. ವರ್ಷಗಳು ಕಳೆದವು. ಸುತ್ತಲ ಜನರ ಕಣ್ಣು ಕೆಂಪಾದವು. ಇವಕ್ಕೇಕೆ ಇಂಥ ಜಾಗ! ಹೆಣ್ಣುಮಕ್ಕಳು ದುಡಿದು ಏನು ಊರ್ಜಿತವಾದೀತು ನೆಲ? ನಮಗೆ ಸಿಗಬೇಕಿತ್ತು! ಕಿರುಕುಳ ಜಾಸ್ತಿಯಾಯಿತು. ದುಡಿಮೆ ಫಲ ಬಿಟ್ಟದ್ದೆಲ್ಲ ಒಂದೊಂದೇ ಕಳ್ಳತನವಾಗ ಲಾರಂಭಿಸಿತು. ಕೃಷಿ ಒಬ್ಬೊಬ್ಬರಿಗಲ್ಲ. ಅದು ಸಾಮೂಹಿಕ ದುಡಿತ. ಈತನಿಗೆ ಮನೆಯಲ್ಲಿದ್ದು ನೋಡಿಕೋ ಎಂದರೆ – ನನಗೆ ಗೊತ್ತಿತ್ತು, ಇದು ಹೀಗೇ ಆಗುತ್ತದೆಂದು. ನಿನಗೆ ಜಾಗಬೇಕಲ್ಲವೇ.

ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ ಎಂದ. ಸ್ವಾಭಿಮಾನ ಬಡವರಿಗಲ್ಲ ಎಂದು ಬುದ್ಧಿ ಹೇಳಿದ. ಈಕೆಗೆ ಈರ್ಷೆ ಕಾಲಿನಿಂದ ನೆತ್ತಿಯವರೆಗೇರಿತು. ತವರಿಗೆ ಹೋಗಿ ಅಪ್ಪನ ಕಾಲು ಹಿಡಿದುಕೊಂಡಳು. ಅಲ್ಲಿ ಮಗನೀಗ ಪ್ರೌಢ ವಯಸ್ಸಿಗೆ ಬಂದಿದ್ದ. ವ್ಯವಹಾರ ನೋಡಿಕೋ ಎಂದು ಹೇಳಿ ಒಂದೆರಡು ವರ್ಷದ ಮಟ್ಟಿಗೆ ಮಗಳ ಮನೆಗೆ ಹೊರಟುಬಂದರು. ಅರವತ್ತೈದು ದಾಟಿತ್ತು. ಆದರೂ ಕೃಷಿಯೆಂದರೆ ವಿಪರೀತ ಹುಮ್ಮಸ್ಸು. ಬಂದರು. ಸ್ವತಃ ಬಾಳೆಗಿಡ ನೆಟ್ಟರು. ತೆಂಗಿನ ಸಸಿ ನೆಟ್ಟರು. ದೊಡ್ಡ ಮಟ್ಟದಲ್ಲಿ ತರಕಾರಿ ಕೃಷಿ ನಡೆಯಿತು. ಭಾರೀ ಕೃಷಿಕ ಅವರು. ಹದಿನಾರೆಕರೆ ಕಾಡು ಭೂಮಿಯನ್ನು ತನ್ನ ಶ್ರಮದಿಂದ ಊರ್ಜಿತ ಮಾಡಿದವರು. ಹತ್ತು ಮಕ್ಕಳ ತಂದೆ. ಈ ಮಗಳಿಗೇ ಅನ್ಯಾಯವಾಗಿದ್ದು. ತಾನೇ ದುಡುಕಿದ್ದು. ಈಗ ಅರ್ಥವಾಗಿತ್ತು. ಸರಿ, ಕಾಲ ಬದಲಾಗಿತ್ತು. ಜನರ ಮನಸ್ಸುಗಳು ಬದಲಾಗಿದ್ದುವು. ಮೂರು ವರ್ಷ ಅಪ್ಪ ಇಲ್ಲೇ ಉಳಿದರು. ಬದುಕಲು ಮಗಳಿಗೆ ಪಾಠ ಹೇಳಿಕೊಟ್ಟರು. ಬೆಳೆದ ಬೆಳೆ ಕೈಹತ್ತಿ ಹಂತಕ್ಕೆ ಬಂದಾಗ ಮನೆಗೆ ಮರಳಿದರು. ಅವರಿಗೆ ಅನಾರೋಗ್ಯ ಕಾಡುತ್ತಿತ್ತು. ಮತ್ತೆರಡು ವರ್ಷ ಕಳೆದವು. ಅಪ್ಪನಿಂದ ಗಂಡು ಮಗಳು ಎಂಬ ಬಿರುದು ಈಕೆಗೆ ಸಿಕ್ಕಿತ್ತು. ಭೇಷ್ ಎಂದರು ಜನರು. ಇನ್ನೇನು ಬಡತನದಲ್ಲಾದರೂ ಸುಖದ ಬಟ್ಟಲು ತುಂಬುತ್ತಿದೆ ಎನ್ನುವಾಗ ಘೋರ ದುರಂತವೊಂದು ಕಾದಿತ್ತು. ಬೇಸಗೆಯ ರಜೆಯಲ್ಲಿ ಅಜ್ಜನ ಮನೆಗೆ ಹೋದ ಅನಂತನಿಗೆ ಜ್ವರ ಬಂದಿತಂತೆ. ಭಾರೀ ಜ್ವರವಂತೆ. ಕೇವಲ ಹತ್ತು ವರ್ಷದ ಮಗು. ತಾಯಿಗೆ ತಿಳಿಸದೆ ಪೇಟೆಗೆ ಕರೆದುಕೊಂಡು ಹೋಗಿ ಆಸ್ಪತ್ರೆಗೆ ಸೇರಿಸಿದರಂತೆ. ಅದು ಸರಕಾರಿ ಆಸ್ಪತ್ರೆ. ಅನಂತ ಹುಟ್ಟಿದ್ದು ಅದೇ ಆಸ್ಪತ್ರೆಯಲ್ಲಿ. ಮರುದಿನ ಅಮಾವಾಸ್ಯೆ. ರಾತ್ರೆ ಇಡೀ ಜ್ವರವಂತೆ. ಇವನ ಕಡೆ ಯಾರೂ ಇದ್ದಿರಲಿಲ್ಲ. ಡಾಕ್ಟರರು ಕಣ್ಣೀರಿನ ಮಧ್ಯೆ ಚಿಕಿತ್ಸೆ ನಡೆಸಿದರಂತೆ. ಮದ್ದುಗಳು ಇಂಜೆಕ್ಷನ್‌ಗಳು ಇದ್ದವೋ ಇಲ್ಲವೋ ಗೊತ್ತಿಲ್ಲ. ಬೆಳಗ್ಗೆಗೆ ಅನಂತ ಅನಂತದಲ್ಲಿ ಲೀನವಾದ. ದುರ್ಘಟನೆಯ ದುರ್ವಾರ್ತೆ ತಾಯಿಗೆ ತಲುಪಿತು. ಪುಷ್ಪಾಗೆ ಹಾಗೆಂದರೇನೆಂದು ಇನ್ನೂ ಅರಿವಾಗದ ವಯಸ್ಸು. ಈಕೆಗೆ ಜೀವನದಲ್ಲಿ ಸಂಪೂರ್ಣ ಸೋತುಹೋದ ಆಘಾತ. ಮನಸ್ಸು ತಡೆಯದಾಯಿತು. ಅಪ್ಪ ಕೃಷಿಗೆ ಸಿಂಪಡಿಸಲು ತಂದಿಟ್ಟ ಕೀಟನಾಶಕ ಲೋಟಕ್ಕೆ ಬಗ್ಗಿಸಿ ಕುಡಿದಳು. ಬಿದ್ದು ಹೊರಳಾಡುತ್ತಿದ್ದ ಅಮ್ಮನನ್ನು ಪುಷ್ಪಾ ನೋಡಿ ಗಾಬರಿಯಾಗಿ ಸ್ವಲ್ಪವೇ ದೂರದಲ್ಲಿದ್ದ ಬೀದಿಗೆ ಹೋಗಿ ಅಲ್ಲಿ ನಡೆದುಹೋಗುತ್ತಿದ್ದ ಇಬ್ಬರನ್ನು ಕರೆದುತಂದಳು. ಅವರು ವಿಷ ಕಕ್ಕಿಸುವವನನ್ನು ಕರೆತಂದರು. ಕುಂಬಳಕಾಯಿ ನೀರು ಕುಡಿಸಿದರು. ಮದ್ದು ಅರೆದು ಕುಡಿಸಿದರು. ವಾಂತಿ ಮಾಡಿಸಿದರು. ಪೇಟೆಯ ವೈದ್ಯರಿಗೆ ಮಗುವನ್ನು ಬದುಕಿಸಲಾಗಲಿಲ್ಲ. ಹಳ್ಳಿಯ ನಾಟಿವೈದ್ಯರು ಈಕೆಯನ್ನು ಬದುಕಿಸಿದರು. ಸುದ್ದಿ ತಿಳಿದ ಈಕೆಯ ಅಪ್ಪ ಓಡೋಡಿ ಬಂದರು. ಮಗಳಿಗೆ ಸಮಾಧಾನ ಹೇಳಿದರು. ಬೇರೆ ಊರಲ್ಲಿದ್ದ ಈಕೆಯ ಗಂಡನಿಗೆ ಸುದ್ದಿ ತಲುಪಲು ಒಂದು ವಾರ ಆಯಿತಂತೆ. ಎಲ್ಲಾ ದೇವರಿಚ್ಛೆ ಎಂದನಂತೆ. ಪುಷ್ಪಾಳ ಹಾಳು ಜಾತಕದಿಂದ ಇಷ್ಟೆಲ್ಲಾ ಆದದ್ದೆಂದು ಮನಸಾರೆ ಶಪಿಸಿದನಂತೆ. ಹೆಂಡತಿಯನ್ನಾಗಲೀ ಮಗಳನ್ನಾಗಲೀ ಈ ಸಂದರ್ಭದಲ್ಲಿ ನೋಡಬೇಕೆಂಬ ಹಂಬಲ ಮೂಡದಿರುವುದು ಈ ಜಗತ್ತಿನ ಕೆಲವು ಅದ್ಭುತ ಗಳಲ್ಲೊಂದು. ಇಷ್ಟಕ್ಕೂ ಸಮಾಧಾನವಾಗದೆ ಇನ್ನು ನಮಗೇಕೆ ಜಾಗವೆಂದು ಅದನ್ನು ಮುಂದೆ ಮೂರುಕಾಸಿಗೆ ಮಾರಿದ್ದು ಇನ್ನೊಂದು ಅದ್ಭುತ–ಪರಮಾದ್ಭುತ. ಇವರಿಬ್ಬರಿಗೆ ಇನ್ನು ಸದ್ಯಕ್ಕೆ ತವರುಮನೆಯೇ ಗತಿ. ಇನ್ನೆಲ್ಲಿ ಹೋದಾಳು ಈ ಹಾಳು ಮುಖ ಹೊತ್ತುಕೊಂಡು ? ಸಿಡಿಲಿನಂತೆ ಬಂದೆರಗಿದ ಜೋಡಿ ಆಘಾತಗಳು ! ನಾನೇಕೆ ಈ ಊರಿಗೆ ಬಂದೆ. ಬಂದರೂ ಮಗುವನ್ನಷ್ಟೇ ಏಕೆ ತವರಿಗೆ ಕಳಿಸಿದೆ. ನನ್ನ ಬುದ್ಧಿಗೆ ಅದೇನು ಮಂಕು ಕವಿದಿತ್ತು ? ಇನ್ನೆಲ್ಲಿಯ ಜೀವನೋತ್ಸಾಹ ? ಕಲ್ಲೂ ಕರಗುವಂಥ ಘಟನೆ ನಡೆದರೂ ಈತನೇಕೆ ಇನ್ನೂ ಬಂದು ಒಂದೆರಡು ಹನಿ ಕಣ್ಣೀರನ್ನು ಮಗುವಿಗಾಗಿ ಸುರಿಸಿಲ್ಲ ? ಏನು ಈ ಲೋಕದ ಸಂಬಂಧಗಳು ? ಮಗುವನ್ನು ಮಣ್ಣು ಮಾಡಲು ಜಾಗಕ್ಕೆ ಆಸೆಪಟ್ಟೆನೆ ? ಕಣ್ಣೀರು ಕೋಡಿ ಹರಿಯಿತು. ಏನಾಗಿದೆ ಎಂಬ ಅರಿವಿಲ್ಲದೆ ಗರಬಡಿದವಳಂತೆ ಭಯಭೀತಳಾದ ಪುಷ್ಪಾಳನ್ನು ಕಂಡು ದುಃಖ ಇನ್ನಷ್ಟು ಒತ್ತರಿಸಿ ಬಂತು. ಈ ಮಧ್ಯೆ ಶೃಂಗೇರಿಯಿಂದ ಚಿಕ್ಕಪ್ಪ – ಗಂಡನ ಅಣ್ಣ ಬಂದು ನೋಡಿಕೊಂಡು ಹೋದರು. ಯಾರು ಬಂದರಿನ್ನೇನು ? ತನ್ನ ಮಗು ಬಾರದು ! ಎಂಥ ಅಪಮೃತ್ಯು ಬಂತು ತನ್ನ ಕಂದನಿಗೆ. ಪಾಪಿ ಚಿರಾಯು, ಸುಕೃತಿ ಗತಾಯ. ಏನು ಹಲುಬಿದರೂ ಎಷ್ಟು ಅತ್ತರೂ ಅದು ಅರಣ್ಯರೋದನ. ದಿನಗಳು ಕಳೆದು ವಾರಗಳೂ ಕಳೆದುವು. ತಿಂಗಳು ಕಳೆಯುತ್ತವೆ. ಯಾರಿಗೆ ಯಾರೂ ಇಲ್ಲ. ತಂದೆಗೆ ಬೇಕಿಲ್ಲದ ಈ ಪುಷ್ಪಾಳನ್ನೇನು ಮಾಡುವುದು ? ಹೌದು. ತನಗೆ ಅವಳು ಬೇಕು. ಅವಳಿಗೆ ತಾನು ಬೇಕು. ಅವನಿಗೇನು ಆಸ್ತಿ ಮಾರಿ ಅಣ್ಣನ ಮನೆಗೆ ಹೋಗಿ ನೀವೇ ಗತಿ ಎಂದಿದ್ದಾನೆ. ನನ್ನನ್ನೂ ಕರೆಯುತ್ತಿದ್ದಾನೆ. ಕೇಳಿದ್ದಕ್ಕೆ ಪಿಂಡ ಪ್ರದಾನ ಮಾಡುವ ಮಗನಿಲ್ಲ, ನಮ್ಮಿಬ್ಬರಿಗೂ ಇವರೇ ಪಿಂಡ ಹಾಕಬೇಕು. ಬಾ ಎಂದು ಕರೆದ. ಮಗಳಿಗೆ ಮದುವೆ ಮಾಡುತ್ತಾರಂತೆ. ಆತನ ಅಣ್ಣನ ಮಕ್ಕಳು ವಯಸ್ಸಿಗೆ ಬಂದಿದ್ದಾರೆ. ಪುಷ್ಪಾಗೆ ಗಂಡು ನೋಡಿದ್ದಾರಂತೆ... ಹುಡುಗನೂ ಒಪ್ಪಿದ್ದಾನಂತೆ... ವರದಕ್ಷಿಣೆ ಅಂತ ಸ್ವಲ್ಪ ಕೊಡ್ತಾರಂತೆ... ಈಕೆಯ ತಮ್ಮ ಶೃಂಗೇರಿಗೆ ಹೋಗಿಬಂದವನು ಇಷ್ಟು ಸುದ್ದಿ ಹೇಳಿದ. ಪುಷ್ಪಾಳೂ ಅರಳಿದ ಕಣ್ಣಗಳಿಂದ ಕೇಳಿಸಿಕೊಂಡಳು. ಅನಂತ ಎಲ್ಲಿ ? ಇವರೆಲ್ಲಾ ಯಾಕಿಷ್ಟು ಗೊಂದಲದಲ್ಲಿದ್ದಾರೆ ? ಆಕೆಗೇನೂ ತಿಳಿಯಲಿಲ್ಲ. ಸುದ್ದಿ ಕೇಳಿದ ಈಕೆ ಮಾತ್ರ ಧಿಗ್ಗನೆ ಎದ್ದುನಿಂತಳು. ತಮ್ಮನೊಡನೆ ತಾನೊಮ್ಮೆ ಜಾಗ ಕೊಡಿಸಿದ ಪಟೇಲರನ್ನೊಮ್ಮೆ ನೋಡಬೇಕೆಂದಳು. ಆತ ಕರೆದೊಯ್ದ. ಪಟೇಲರಿಗೆ ಸುದ್ದಿ ತಿಳಿದಿತ್ತು. ತುಂಬ ನೊಂದರಂತೆ. ಸಮಾಧಾನಿಸಿದರು. “ನನ್ನ ತಂಗಿ–ಭಾವ ಪೇಟೆಯಲ್ಲಿದ್ದಾರೆ. ದುಃಖ ಮರೆಯಲು ಸ್ವಲ್ಪ ದಿನ ಅಲ್ಲಿ ಇರಿ. ಜಾಗ ಬದಲಿಸಿ. ಸಣ್ಣಪುಟ್ಟ ಕೆಲಸ ಮಾಡಿಕೊಂಡು ಪುಷ್ಪಾಳನ್ನು ಶಾಲೆಗೆ ಕಳಿಸಿ. ನೀವೂ ಇರಿ ಏನು ಹೇಳುತ್ತೀರಿ ?” ಈಕೆ ಒಪ್ಪಿದಳು. ಈ ಊರೂ ಬೇಡ–ಬಂಧುಗಳೂ ಬೇಡ ನನ್ನ ಪಾಡಿಗೆ ಎಲ್ಲಾದರೂ ದುಡಿದು ಹೊಟ್ಟೆ ಹೊರೆಯುತ್ತೇನೆ. ಪುಷ್ಪಾಳನ್ನು ಓದಿಸಿ ಒಂದು ದಾರಿಗೆ ತರುತ್ತೇನೆ. ಹೌದು ಅದೇ ಸರಿ, ಈ ಮದುವೆಗಳೇ ಇಷ್ಟು ಬೇಗ ಬೇಡ. ಈಕೆ ದೃಢನಿರ್ಧಾರ ಮಾಡಿದಳು. ಯಾರ ಮಾತೂ ಕೇಳದೆ ಪುಷ್ಪಾಳೊಂದಿಗೆ ಮುಂದಿನ ಆಕೆಯ ಭವಿಷ್ಯಕ್ಕಾಗಿ ಪಟೇಲರೊಡನೆ ನಡೆದಳು. ಈಗ ಪುಷ್ಪಾ ಶಾಲೆಗೆ. ಈಕೆ ಯಾರದೋ ಮನೆಯಲ್ಲಿ ಚಾಕರಿ ಮಾಡುತ್ತ ಮಗಳನ್ನು ಓದಿಸುತ್ತಿದ್ದಾಳೆ.

ಮೀನಾಕುಮಾರಿ
೩೪/೧೧, ೨ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ, ಯಶವಂತಪುರ, ಬೆಂಗಳೂರು – ೫೬೦ ೦೨೨




ಎಂ. ಅಬ್ದುಲ್ ರೆಹಮಾನ್ ಪಾಷ

# ಧ್ವನಿಯಿಲ್ಲದವರ ಧ್ವನಿ ಸಮುದಾಯ ರೇಡಿಯೋ

ದೇಶದಲ್ಲಿ ೮೫೦ಕ್ಕೂ ಹೆಚ್ಚು ಟಿ. ವಿ. ಚಾನಲುಗಳಿವೆ, ಆಕಾಶವಾಣಿಯ ೪೧೪ ಕೇಂದ್ರಗಳೂ ಸೇರಿದಂತೆ ಒಟ್ಟು ೬೬೦ಕ್ಕೂ ಹೆಚ್ಚು ರೇಡಿಯೋ ನಿಲಯಗಳಿವೆ, ೮೨,೦೦೦ಕ್ಕೂ ಹೆಚ್ಚು ದಿನಪತ್ರಿಕೆಗಳಿವೆ. ಗಣತಂತ್ರ ಸೌಧಕ್ಕೆ ಮಾಧ್ಯಮವು ನಾಲ್ಕನೇ ಸ್ತಂಭ ಇದ್ದಂತೆ ಎಂದು ಹೇಳಲಾಗುತ್ತದೆ. ಗಣತಂತ್ರದ ಇತರ ಮೂರು ವಿಭಾಗಗಳ ನಡೆವಳಿಯ ಮೇಲೆ ಕಣ್ಣಿಟ್ಟು ವಿದ್ಯಮಾನಗಳನ್ನು ಜನರವರೆಗೆ ತಲುಪಿಸುತ್ತವೆ ಎಂಬುದು ನಿಜವಾದರೂ, ಜನಪ್ರಿಯ ಮಾಧ್ಯಮಗಳು ಎಷ್ಟರಮಟ್ಟಿಗೆ ಜನರ ಧ್ವನಿಯನ್ನು ಪ್ರತಿನಿಧಿಸುತ್ತವೆ; ಮುಖ್ಯವಾಹಿನಿ ಮಾಧ್ಯಮಗಳಲ್ಲಿ ಅಭಿವ್ಯಕ್ತವಾಗುವುದು ಯಾರ ಅಭಿಪ್ರಾಯ ; ಜನರ ಅಭಿಪ್ರಾಯಕ್ಕೆ ಇಲ್ಲಿ ಅವಕಾಶವಿದೆಯೇ ಎಂಬ ಪ್ರಶ್ನೆಗಳು ಇಂದು ಹೆಚ್ಚಿನ ಮಹತ್ವವನ್ನು ಪಡೆಯುತ್ತವೆ.

ಈಗಿರುವ ವ್ಯವಸ್ಥೆಯಲ್ಲಿ ಮುಖ್ಯವಾಹಿನಿಯ ಮಾಧ್ಯಮಗಳು, ಅದರಲ್ಲೂ ಟಿ. ವಿ. ಮತ್ತು ರೇಡಿಯೋದಂಥ ಇಲೆಕ್ಟ್ರಾನಿಕ್ ವಾಹಿನಿಗಳು ಅಪ್ಪಟ ಬಂಡವಾಳಶಾಹಿ ಉದ್ಯಮಗಳಾಗಿರುವುದು ಅನಿವಾರ್ಯವಾಗಿದೆ. ಸಾಮಾಜಿಕ ಕಾಳಜಿ ಎಂಬುದು ಏನಾದರೂ ತಿಲಮಾತ್ರವೂ ಕಂಡು ಬಂದರೆ ಅದು ಕೇವಲ ಆಕಸ್ಮಿಕ, ಅಥವಾ ಅದರ ಹಿಂದೆಯೂ ಗ್ರಾಹಕರ ಸಂಖ್ಯೆಯನ್ನು ಹೆಚ್ಚಿಸಿಕೊಂಡು ಲಾಭಾಂಶವನ್ನು ಅಧಿಕಗೊಳಿಸುವ ಹುನ್ನಾರವೇ ಎದ್ದು ಕಾಣುತ್ತವೆ. ಸಾಮಾಜಿಕ ಅಭಿವೃದ್ಧಿ ಎಂಬುದು ಮಾಧ್ಯಮಗಳ ಮುಖ್ಯ ಕಾರ್ಯನೀತಿಯಲ್ಲ. ಏನಾದರೂ ಮಾಡು, ಎಂತಾದರೂ ಮಾಡು, ಹಣಗಳಿಸುವುದೊಂದೇ ಗುರಿ. ಕೋಟಿಗಟ್ಟಲೆ ಹಣ ಹೂಡಿ, ದಶಕೋಟಿ ಗಟ್ಟಲೆ ಲಾಭ ಗಳಿಸುವ ಅಗತ್ಯವಿರುವ ಮಾಧ್ಯಮಗಳಿಗೆ ಇದು ಅನಿವಾರ್ಯವಾಗಿಬಿಡುತ್ತದೆ.

ದೇಶದಲ್ಲಿ ಬಹುಸಂಖ್ಯೆಯಲ್ಲಿರುವ ಗ್ರಾಮೀಣ ಬಡಜನ, ಯುವಜನ, ರೈತರು, ಗುಡಿ ಕಸಬುದಾರರು, ಮಹಿಳೆಯರು, ದಲಿತರು, ಜಾತಿ, ಸಂಪ್ರದಾಯ ಇತ್ಯಾದಿ ಕಾರಣಕ್ಕಾಗಿ ತಲತಲಾಂತರಗಳಿಂದ ಉಪೇಕ್ಷೆಗೆ ಒಳಗಾಗಿರುವ ಜನರಿಗೂ ಒಂದು ಧ್ವನಿ ಇದೆ ಎಂಬುದನ್ನು ನಾವು ಮರೆಯಬಾರದು. ಸಾಮಾಜಿಕ, ಆರ್ಥಿಕ ವ್ಯವಸ್ಥೆ ಆ ದುರ್ಬಲ ಧ್ವನಿಯನ್ನು ದಮನಿಸಿರುತ್ತದೆ; ಈ ಜನ ತಮಗೆ ಧ್ವನಿ ಇರುವುದನ್ನೇ ಮರೆತುಬಿಟ್ಟಿರುತ್ತಾರೆ. ಉಳ್ಳವರು ಹೇಳುವುದನ್ನು ಕೇಳಿಸಿಕೊಂಡು, ಅದರಂತೆ ನಡೆಯುವುದರಲ್ಲೆ ತಮ್ಮ ಹಿತ ಎಂದು ಭಾವಿಸಿಬಿಟ್ಟಿರುತ್ತಾರೆ.

ಗಣತಂತ್ರ ವ್ಯವಸ್ಥೆ ಸಾರ್ಥಕವಾಗಬೇಕೆಂದರೆ, ಸಬಲವಾಗಬೇಕು ಎಂದರೆ ದೇಶದ ಕೊಟ್ಟ ಕೊನೆಯ ನಾಗರಿಕನಿಗೂ ತನಗೂ ಒಂದು ಧ್ವನಿಯಿದೆ ಎಂಬ ಅರಿವು ಮೂಡಬೇಕು; ತನ್ನ ಆ ಒಳಧ್ವನಿಯನ್ನು ಹೊರತಂದು ತನ್ನ ಅಭಿಪ್ರಾಯವನ್ನೂ ವ್ಯಕ್ತಪಡಿಸಬೇಕು; ಗಣತಂತ್ರದ ಆಗುಹೋಗುಗಳಲ್ಲಿ ವಿವೇಚನಾ ಸಹಿತವಾಗಿ ಭಾಗವಹಿಸಬೇಕು. ಇದಕ್ಕೆ ಸಮೂಹ ಸಂಪರ್ಕ ಮಾಧ್ಯಮಗಳು ಅವಕಾಶ, ಉತ್ತೇಜನವನ್ನು ನೀಡಬೇಕಾಗುತ್ತದೆ. ಈವರೆಗೆ ಸಾಧ್ಯವಾಗದೇ ಇರುವ ಒಂದು ಅವಕಾಶ ಈಗ ಲಭಿಸಿದೆ, 'ಸಮುದಾಯ ರೇಡಿಯೋ' ಮೂಲಕ.

**ಸಮುದಾಯ ರೇಡಿಯೋ**

ಭಾರತದಲ್ಲಿ ಇದೀಗ ಮೂರು ಬಗೆಯ ರೇಡಿಯೋ ವಾಹಿನಿಗಳು ಇವೆ. ಒಂದು, ಕೇಂದ್ರ ಸರಕಾರದ ಸಾರ್ವಜನಿಕ ಪ್ರಸಾರ ಸಂಸ್ಥೆಯಾದ ಆಕಾಶವಾಣಿ. ಎರಡನೆಯದು, ಖಾಸಗಿ ವಾಣಿಜ್ಯೋದ್ದೇಶದ ಎಫ್‌ಎಮ್ ಚಾನಲುಗಳು. ಮೂರನೆಯದು, ಸಮುದಾಯ ರೇಡಿಯೋ. ಫೆಬ್ರವರಿ ೧೯೯೫ರಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪೊಂದರ ಟಿಪ್ಪಣಿಯಲ್ಲಿ, 'ವಾಯುತರಂಗಗಳು ಸಾರ್ವಜನಿಕ ಆಸ್ತಿಯಾಗಿವೆ ಮತ್ತು ಇವು ನಾಗರಿಕ ಅಭ್ಯುದಯಕ್ಕಾಗಿ ಬಳಕೆಯಾಗಬೇಕು' ಎಂದಿತು. ಕೇಂದ್ರ ಸರಕಾರವು ರೇಡಿಯೋ ಮತ್ತು ಟೆಲಿವಿಷನ್ ಪ್ರಸಾರಕ್ಕೆ ಪೂರಕವಾಗಿರುವ ಪ್ರಸಾರ ತರಂಗಗಳ ಬಳಕೆಯ ಏಕಸ್ವಾಮ್ಯವನ್ನು ಹೊಂದುವಂತಿಲ್ಲ ಎಂಬುದು ಅದರ ಅಭಿಪ್ರಾಯವಾಗಿತ್ತು. ಇದನ್ನು ಅನುಸರಿಸಿ ನಡೆದ ಕೆಲವು ಜನಾಂದೋಲನಗಳ ಫಲವಾಗಿ ಕೇಂದ್ರ ಸರಕಾರವು ರೇಡಿಯೋ ಪ್ರಸಾರದಲ್ಲಿ ಖಾಸಗಿಯವರಿಗೂ ಅವಕಾಶವನ್ನು ಕೊಡುವ ಯೋಜನೆಯನ್ನು ಜಾರಿಗೆ ತಂದಿತು. ಅದರ ಪ್ರಕಾರ ಮೊದಲು ೨೦೦೦ದಲ್ಲಿ ಖಾಸಗಿ ವಾಣಿಜ್ಯ ಎಫ್‌ಎಮ್ ರೇಡಿಯೋ ನಿಲಯಗಳು ಬಂದವು; ೨೦೦೩ರಲ್ಲಿ ಸರಕಾರವು 'ಸುಸ್ಥಿರವಾದ ಶೈಕ್ಷಣಿಕ ಸಂಸ್ಥೆಗಳಿಗೆ' ಲೈಸೆನ್ಸ್‌ಅನ್ನು ನೀಡುವ ಉದಾರತೆಯನ್ನು ತೋರಿತು. ಕೊನೆಯಲ್ಲಿ, ೨೦೦೬ರ ನವೆಂಬರ್ ೧೬ರಂದು, ಕೇಂದ್ರ ಸರಕಾರವು ಸಾಂಸ್ಕೃತಿಕ, ಸಾಮಾಜಿಕ, ಜನಾಭಿವೃದ್ಧಿ ಕೆಲಸಗಳಲ್ಲಿ ತೊಡಗಿರುವ ಇತರ ಸರಕಾರೇತರ, ಸಮುದಾಯ ಆಧಾರಿತ, ಸಾಮಾಜಿಕ ಟ್ರಸ್ಟ್ ಇತ್ಯಾದಿ ನಾಗರಿಕ ಸಂಸ್ಥೆಗಳಿಗೂ ತಮ್ಮದೇ ಆದ ರೇಡಿಯೋವನ್ನು ಇಟ್ಟುಕೊಳ್ಳಲು ಅವಕಾಶ ನೀಡಿತು. ಈಗ ಶೈಕ್ಷಣಿಕ ಸಂಸ್ಥೆಗಳು ಮತ್ತು ಸರಕಾರೇತರ ಅಭಿವೃದ್ಧಿ ಸಂಸ್ಥೆಗಳು ನಡೆಸುವ ರೇಡಿಯೋಗಳನ್ನು ಒಟ್ಟಾಗಿ 'ಸಮುದಾಯ ರೇಡಿಯೋ' ಎಂದು ಕರೆಯಲಾಗುತ್ತದೆ. ಸಮುದಾಯ ರೇಡಿಯೋ ಆಂದೋಲನದಲ್ಲಿ ಕಳೆದ ಹದಿನೈದು ವರ್ಷಗಳಿಂದ ತೊಡಗಿಸಿಕೊಂಡಿರುವ ಸಮುದಾಯ ರೇಡಿಯೋ ಸಂಪೂರ್ಣ ಸಾರ್ಥಕವಾಗುವುದು

> ರಾಜ್ಯದಲ್ಲಿಯೂ ಈಗ ಕಾರ್ಯನಿರತವಾಗಿರುವ ೧೪ ನಿಲಯಗಳಲ್ಲಿ ೧೨ ನಗರ/ಪಟ್ಟಣಗಳಲ್ಲಿರುವ ಶೈಕ್ಷಣಿಕ ಸಂಸ್ಥೆಗಳು ನಡೆಸುತ್ತಿರುವ ನಿಲಯಗಳಾಗಿವೆ. ಇದು ಉಳ್ಳವರಿಗೇ ಇನ್ನೊಂದು ಮಾಧ್ಯಮ ಕೊಟ್ಟಂತಾಗುತ್ತದೆ. ಸಮುದಾಯ ರೇಡಿಯೋನ ಮೂಲ ಆಶಯವಿರುವುದು ಧ್ವನಿಯಿಲ್ಲದ, ಉಪೇಕ್ಷಿತ ಜನರಿಗೆ ಧ್ವನಿಯನ್ನು ಕೊಡುವುದು; ಅವರ ಅಭಿಪ್ರಾಯಗಳಿಗೂ ಸಮೂಹ ಮಾಧ್ಯಮದ ವೇದಿಕೆಯನ್ನು ಒದಗಿಸುವುದು.

ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಗಳು, ವಿಶ್ವವಿದ್ಯಾಲಯಗಳಿಗಿಂತ ಹೆಚ್ಚಾಗಿ ಗ್ರಾಮೀಣ ಜನಸಮುದಾಯಗಳೊಂದಿಗೆ ಕೆಲಸ ಮಾಡುತ್ತಿರುವ ಸಮುದಾಯ ಸಂಸ್ಥೆಗಳು ಸ್ಥಾಪಿಸುವ ರೇಡಿಯೋ ನಿಲಯಗಳಿಂದ. ಆದ್ದರಿಂದ ಮುಂದಿನ ಚರ್ಚೆ ಇದನ್ನೇ ಅನುಸರಿಸಿ ಇರುತ್ತದೆ.

**ಸಮುದಾಯ ರೇಡಿಯೋ ವೈಶಿಷ್ಟ್ಯ**

ನಿರ್ದಿಷ್ಟ ಸಮುದಾಯದ ಅಭ್ಯುದಯಕ್ಕಾಗಿ, ಸಮುದಾಯದ ಸದಸ್ಯರೇ ನಡೆಸಿಕೊಂಡು ಹೋಗುವ ರೇಡಿಯೋ, ಸಮುದಾಯ ರೇಡಿಯೋ. ಇದೊಂದು ಸಾಮಾಜಿಕ ಪ್ರಕ್ರಿಯೆ. ಸಮುದಾಯದವರು ಒಗ್ಗಟ್ಟಾಗಿ ತಮ್ಮ ಸಮಸ್ಯೆಗಳನ್ನು ಹಂಚಿಕೊಂಡು, ತಮ್ಮದೇ ಆದ ಪರಿಹಾರಗಳನ್ನು ಕಂಡುಕೊಳ್ಳಲು ಪೂರಕವಾಗುವ ಒಂದು ಸಾಧನ. ಇಲ್ಲಿ ಕೇಳುಗರೇ ಭಾಗಿಗಳು, ಅವರೇ ನಿಲಯದ ಸಾಮೂಹಿಕ ಮಾಲೀಕರೂ ಕೂಡ. ಇದನ್ನು ನಡೆಸಲು ಪರವಾನಗಿಯನ್ನು ಪಡೆಯುವ ಸಮುದಾಯ ಸಂಸ್ಥೆಯು ಎಷ್ಟು ಜನಸತ್ತಾತ್ಮಕವಾಗಿರುತ್ತದೆಯೋ ಸಮುದಾಯ ರೇಡಿಯೋ ಅಷ್ಟೊಂದು ಸಾರ್ಥಕವಾಗುತ್ತದೆ. ಸೊಸೈಟಿ ಅಧಿನಿಯಮ ಅಥವಾ ಇನ್ನಾವುದೇ ತತ್ಸಮ ಕಾನೂನಿನ ಅಡಿಯಲ್ಲಿ ನೋಂದಾಯಿತವಾಗಿದ್ದು, ಮೂರು ವರ್ಷಕ್ಕೂ ಹೆಚ್ಚು ಕಾಲ ಸಮುದಾಯ ಸೇವೆಯಲ್ಲಿ ತೊಡಗಿರುವ ಸರಕಾರೇತರ ಸಂಸ್ಥೆಗಳು ಇಂಥ ರೇಡಿಯೋ ನಿಲಯವನ್ನು ನಡೆಸಲು ಪರವಾನಗಿಯನ್ನು ಕೇಂದ್ರ ಸರಕಾರದಿಂದ ಪಡೆಯಬಹುದಾಗಿದೆ.

ಇದೊಂದು ಚಿಕ್ಕ ರೇಡಿಯೋ. ನಿಲಯದಿಂದ ಸುತ್ತಲೂ ಸುಮಾರು ೧೦–೧೫ ಕಿ.ಮೀ. ದೂರದವರೆಗೆ ಇದು ತಲುಪುತ್ತದೆ. ಇದರ ವ್ಯಾಪ್ತಿಯಲ್ಲಿ ಬರುವ ಇಡೀ ಜನಸಂಖ್ಯೆ ನಿಲಯದ ಸಮುದಾಯ. ಮಾಧ್ಯಮದ ಗರಿಷ್ಠ ಪ್ರಯೋಜನವನ್ನು ಪಡೆಯುವ ಸಲುವಾಗಿ ಈ ಪ್ರಾದೇಶಿಕ ಸಮುದಾಯವನ್ನು ರೈತರು, ಒಂದು ಕಾರ್ಯಯೋಜನೆಯ ಸಹಭಾಗಿಗಳು, ಯುವಕರು, ಮಹಿಳೆಯರು, ಮಕ್ಕಳು ಹೀಗೆ ಉಪಸಮುದಾಯಗಳಾಗಿ ವಿಂಗಡಿಸಿಕೊಳ್ಳಬಹುದು. ಸ್ಥಳೀಯ ಸಮಸ್ಯೆಗಳ ವಿಚಾರ ವಿಮರ್ಶೆಗೆ, ಪರಿಹಾರವನ್ನು ಸ್ಥಳೀಯವಾಗಿ ಸಹಭಾಗಿಯಾಗಿ ಕಂಡುಕೊಳ್ಳುವುದಕ್ಕೆ ಇದನ್ನು ವೇದಿಕೆಯನ್ನಾಗಿ ಬಳಸಬಹುದು.

**ಸಮುದಾಯ ರೇಡಿಯೋ ಸ್ಥಾಪನೆ**

ಅರ್ಹ ಸರಕಾರೇತರ ಸಂಸ್ಥೆ ಕೇಂದ್ರ ಸರಕಾರದ ವಾರ್ತಾ ಮತ್ತು ಪ್ರಸಾರ ಇಲಾಖೆಯಿಂದ ಪರವಾನಗಿಯನ್ನು ಪಡೆದು ಸಮುದಾಯ ರೇಡಿಯೋವನ್ನು ನಡೆಸಬಹುದು. ಪರವಾನಗಿಯನ್ನು ಪಡೆಯಲು ಸುಮಾರು ಒಂದು ವರ್ಷ ಕಾಲ ಹಿಡಿಯುತ್ತದೆ. ಸೂಕ್ತ ಕಟ್ಟಡವನ್ನು ನಿಲಯವನ್ನಾಗಿ ಪರಿವರ್ತಿಸಿ, ಅಗತ್ಯವಾದ ಉಪಕರಣಗಳನ್ನು ಸ್ಥಾಪಿಸಿ, ನಿಲಯದಿಂದ ರೇಡಿಯೋ ಪ್ರಸಾರವನ್ನು ಆರಂಭಿಸುವವರೆಗೆ ಸುಮಾರು ೧೦ರಿಂದ ೧೫



*ರೇಡಿಯೋ ತರಂಗಗಳು*

ಲಕ್ಷ ರೂಪಾಯಿ ಬೇಕಾಗುತ್ತದೆ. ನಂತರ ನಿಲಯವನ್ನು ನಡೆಸಿಕೊಂಡು ಹೋಗಲು ತಿಂಗಳಿಗೆ ಸುಮಾರು ೭೫ ಸಾವಿರ ರೂಪಾಯಿ ಬೇಕು. ಸಮುದಾಯ ರೇಡಿಯೋ ನಿಲಯವನ್ನು ಲಾಭ ಗಳಿಸುವ ಉದ್ದಿಮೆಯನ್ನಾಗಿ ಭಾವಿಸುವಂತಿಲ್ಲ. ಭಾರತ ಸರಕಾರವು ದೇಶದಲ್ಲಿ ಒಟ್ಟು ೧೦೦೦ ಸಮುದಾಯ ರೇಡಿಯೋಗಳಿಗೆ ಪರವಾನಗಿಯನ್ನು ನೀಡುವ ಅವಕಾಶವನ್ನು ಮಾಡಿಕೊಂಡಿದೆ. ಆದರೂ ನಿಲಯಗಳ ಸ್ಥಾಪನೆ ನಿರೀಕ್ಷಿಸಿದಷ್ಟು ದರದಲ್ಲಿ ಆಗುತ್ತಿಲ್ಲ. ದೇಶದಲ್ಲಿ ಈಗಿರುವುದು ಸುಮಾರು ೧೭೦ ಮಾತ್ರ. ಇದನ್ನು ಗಮನಿಸುತ್ತಾ ಇದರ ಸ್ಥಾಪನೆ ಮತ್ತು ನಿರ್ವಹಣೆಯಲ್ಲಿ ಈಗೀಗ ಸರಕಾರಗಳ ಅನೇಕ ಯೋಜನೆಗಳು ನೆರವಿಗೆ ಬರುತ್ತಿವೆ.

**ಕರ್ನಾಟಕ ಸರಕಾರದ 'ನಮ್ಮ ಬಾನುಲಿ'**

ಸಮುದಾಯ ರೇಡಿಯೋದ ಜನಪರತೆಯನ್ನು ಗುರುತಿಸಿ ಅದರ ನೆರವಿಗೆ ಬಂದ ಸರಕಾರಗಳಲ್ಲಿ ಮೊಟ್ಟಮೊದಲನೆಯದು ಎಂದರೆ ಕರ್ನಾಟಕ ಸರಕಾರ. ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ 'ನಮ್ಮ ಬಾನುಲಿ' ಯೋಜನೆಯ ಅಡಿಯಲ್ಲಿ ಸರಕಾರವು ಸ. ರೇ. ನಿಲಯದ ಸ್ಥಾಪನೆಗೆ ರೂ. ೧೦,೦೦,೦೦೦ ನೆರವನ್ನು ನೀಡುತ್ತದೆ. ಈಗಾಗಲೇ ರಾಜ್ಯದಲ್ಲಿರುವ ೧೪ ಸ. ರೇ. ನಿಲಯಗಳಲ್ಲಿ ಇಲಾಖೆಯು ಒಂಭತ್ತು ಸಮುದಾಯ ರೇಡಿಯೋಗಳಿಗೆ ಇಂಥ ಧನಸಹಾಯವನ್ನು ನೀಡಿದೆ. ಇದಲ್ಲದೇ ಬಹಳ ಬೇಗನೆ ಕರ್ನಾಟಕ ಸರಕಾರದ ಅಭಿವೃದ್ಧಿ ಇಲಾಖೆಗಳ ವತಿಯಿಂದ ಜಾಹಿರಾತುಗಳು ಮತ್ತು ಪ್ರಾಯೋಜಿತ ಕಾರ್ಯಕ್ರಮಗಳನ್ನೂ ನೀಡುವ ಯೋಜನೆಯನ್ನು ಜಾರಿಗೊಳಿಸಲಿದೆ.

**ಕೇಂದ್ರ ಸರಕಾರದ ನೆರವು**

ಹನ್ನೆರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಕೇಂದ್ರ ಸರಕಾರವು ದೇಶದಲ್ಲಿ ಸಮುದಾಯ ರೇಡಿಯೋ ಅಭಿವೃದ್ಧಿಗಾಗಿ, 'ಕಮ್ಯುನಿಟಿ ರೇಡಿಯೋ ಸಪೋರ್ಟ್ ಸ್ಕೀಮ್' ಅಡಿಯಲ್ಲಿ ನೂರು ಕೋಟಿ ರೂಪಾಯಿಯನ್ನು ಮೀಸಲಾಗಿಟ್ಟಿದೆ. ಇದರಡಿಯಲ್ಲಿ ಉಪಕರಣಗಳ ಖರೀದಿ, ಸುಧಾರಣೆ, ತರಬೇತಿ, ಸಂಶೋಧನೆ ಇತ್ಯಾದಿ ವರ್ಗಗಳಲ್ಲಿ ಭಾರತ ಸರಕಾರವು ನೆರವನ್ನು ನೀಡುತ್ತಿದೆ.

ಈ ಯೋಜನೆಯಡಿಯಲ್ಲಿ ಸಮುದಾಯ ರೇಡಿಯೋ ನಿಲಯದಲ್ಲಿ ಅಳವಡಿಸಲಾಗುವ ಉಪಕರಣಗಳು, ಜೆನೆರೇಟರ್ ಇತ್ಯಾದಿಗಾಗಿ ತಗಲುವ ವೆಚ್ಚದಲ್ಲಿ ಅರ್ಧ ಭಾಗ, ರೂ. ೭.೫೦ ಲಕ್ಷ ಮೀರದಂತೆ ನೀಡಲಾಗುವುದು. ಉಳಿದರ್ಧ ವೆಚ್ಚವನ್ನು ಸಂಸ್ಥೆಯೇ ಭರಿಸುವ ಬಗ್ಗೆ ಪುರಾವೆಗಳನ್ನು ಒದಗಿಸಬೇಕು. ಪ್ರತಿ ವರ್ಷ ೧೦೦ ಹೊಸ ಮತ್ತು ೩೦ ಈಗಾಗಲೇ ಇರುವ ನಿಲಯಗಳಿಗೆ ಅನುದಾನ ನೀಡಲಾಗುವುದು.

**ಆತ್ಮಾ ಯೋಜನೆ:** ಕೇಂದ್ರ ಕೃಷಿ ಮತ್ತು ಸಹಕಾರ ಸಚಿವಾಲಯದ ಆತ್ಮಾ (ಅಗ್ರಿಕಲ್ಚರ್ ಟೆಕ್ನಾಲಜಿ ಮ್ಯಾನೇಜ್‌ಮೆಂಟ್ ಏಜೆನ್ಸಿ) ಯೋಜನೆಯ ಅಡಿಯಲ್ಲಿ, ಇದಕ್ಕೆ ಅರ್ಹವಾದ ಸಂಸ್ಥೆಗಳಿಗೆ ಸಮುದಾಯ ರೇಡಿಯೋ ನಿಲಯವನ್ನು ಸ್ಥಾಪಿಸಲು ರೂ. ೧೪,೫೫,೦೦೦/– ವರೆಗೆ ಧನ ಸಹಾಯವನ್ನು ನೀಡುತ್ತದೆ. ಅಲ್ಲದೇ ಮೂರು ವರ್ಷಗಳ ಕಾಲ ಕೃಷಿ, ತೋಟಗಾರಿಕೆ,

## ಯಾರು ಬಲ್ಲರು ?

ಭೋರ್ಗರೆವ
ಸಾಗರದಲ್ಲಿ
ಎಷ್ಟೊಂದು ವೇದನೆ
ಗಳಿವೆಯೆಂದು
ಯಾರು ಬಲ್ಲರು ?

ಎಂ. ಜಿ. ದೇಶಪಾಂಡೆ
ಬೀದರ್

ಹೈನುಗಾರಿಕೆ, ಮೀನುಗಾರಿಕೆ, ಕೋಳಿಸಾಕಣೆ, ಹಂದಿಸಾಕಣೆ ಮುಂತಾದ ಚಟುವಟಿಕೆಗಳ ಅಭಿವೃದ್ಧಿಗಾಗಿ ನೆರವಾಗುವ ಕಾರ್ಯಕ್ರಮಗಳನ್ನು ಸ್ಥಳೀಯರ ಸಹಭಾಗಿತ್ವದಲ್ಲಿ ರೂಪಿಸಿ ಪ್ರಸಾರ ಮಾಡಲೂ ಧನಸಹಾಯವನ್ನು ನೀಡಲಾಗುತ್ತದೆ.

ಕೇಂದ್ರ ಸರಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ರಾಜ್ಯದಲ್ಲಿ ಆರೋಗ್ಯ, ಎಚ್‌ಐವಿ/ಏಡ್ಸ್ ತಡೆಗಟ್ಟುವಿಕೆ ಕೆಲಸ ಮಾಡುತ್ತಿರುವ ಸ್ವಾಯತ್ತ ಸಂಸ್ಥೆಗಳು ಹೀಗೆ ವಿವಿಧ ಸಂಸ್ಥೆಗಳು ಅಭಿವೃದ್ಧಿ ವಿಚಾರಗಳ ಕುರಿತು ಕಾರ್ಯಕ್ರಮ ಸರಣಿಗಳನ್ನು ನಿರ್ಮಿಸಿ ಪ್ರಸಾರಮಾಡಲು ಸಮುದಾಯ ರೇಡಿಯೋ ನಿಲಯಗಳಿಗೆ ಧನಸಹಾಯವನ್ನು ನೀಡುತ್ತಿವೆ.

ಇದಲ್ಲದೇ ನೆಬಾರ್ಡ್, ಯುನೆಸ್ಕೋ, ಯುಎನ್‌ಡಿಪಿ ಮುಂತಾದ ಅಂತರರಾಷ್ಟ್ರೀಯ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿ ಸಮುದಾಯ ರೇಡಿಯೋ ನಿಲಯಗಳನ್ನು ಸ್ಥಾಪಿಸುವ ನಿಟ್ಟಿನಲ್ಲಿ ವಿವಿಧ ರೀತಿಯ ನಿಧಿ ಸಹಾಯಗಳನ್ನು ನೀಡಿರುವ ಉದಾಹರಣೆಗಳಿವೆ. ಸಂಸ್ಥೆ ಆದಾಯ ತೆರಿಗೆ ಇಲಾಖೆಯಿಂದ ೧೨ ಎ ಮತ್ತು ೮೦ ಜಿ ಪತ್ರವನ್ನು ಪಡೆದಿದ್ದರೆ ಖಾಸಗಿ ದಾನಿಗಳು ನಿಲಯದ ಸ್ಥಾಪನೆಗೆ ಕೊಡುಗೆಗಳನ್ನು ನೀಡಿ, ಆ ಮೊತ್ತಕ್ಕೆ ಆದಾಯ ತೆರಿಗೆ ವಿನಾಯಿತಿಯನ್ನು ಪಡೆಯ ಬಹುದು. ಇನ್‌ಫೋಸಿಸ್, ವಿಪ್ರೋ ಮುಂತಾದ ದೊಡ್ಡ ದೊಡ್ಡ ಉದ್ದಿಮೆಗಳು, ಕಾರ್ಖಾನೆಗಳು ಕಾರ್ಪೊರೇಟ್ ಸೋಶಿಯಲ್ ರೆಸ್ಪಾನ್ಸಿಬಿಲಿಟಿ ಎಂಬ ಪರಿಕಲ್ಪನೆಯ ಅಡಿಯಲ್ಲಿ ಇಂಥ ಅಭಿವೃದ್ಧಿಗೆ ಪ್ರೇರಕವಾದ ಕಾರ್ಯಗಳಿಗೆ ನೆರವನ್ನು ನೀಡ ಬಹುದು. ಶಾಸಕರು ಮತ್ತು ಸಂಸದರೂ ತಮ್ಮ ಸ್ಥಳೀಯ ಪ್ರದೇಶ ಅಭಿವೃದ್ಧಿ ನಿಧಿಯ ಅಡಿಯಲ್ಲಿ ಸ. ರೇ. ನಿ.ಗಳ ಸ್ಥಾಪನೆಗೆ ನೆರವನ್ನು ನೀಡಬಹುದು. ಹಲವು ಕಡೆ ಇಂಥ ನಿದರ್ಶನಗಳು ಇವೆ.

**ಬೆಸಿಲ್ ನೆರವು**

ಬ್ರಾಡ್‌ಕಾಸ್ಟ್ ಇಂಜಿನಿಯರಿಂಗ್ ಕನ್‌ಸಲ್ಟೆಂಟ್ಸ್ ಇಂಡಿಯಾ ಲಿಮಿಟೆಡ್, ಬೆಸಿಲ್, ಭಾರತ ಸರಕಾರದ ಸಾರ್ವಜನಿಕ ಉದ್ದಿಮೆ. ರೇಡಿಯೋ ಟೆಲಿವಿಷನ್ ನಿಲಯಗಳನ್ನು ಸುಸಜ್ಜಿತವಾಗಿ ಸ್ಥಾಪಿಸಿಕೊಡುವ ಸೇವೆಗಳಲ್ಲಿ ಅಂತರರಾಷ್ಟ್ರೀಯ ಮನ್ನಣೆಯನ್ನು ಪಡೆದಿರುವ ಈ ಸಂಸ್ಥೆಯ ಒಂದು ಪ್ರಾದೇಶಿಕ ಶಾಖೆ ಬೆಂಗಳೂರಿನಲ್ಲಿಯೂ ಇದೆ. ಕರ್ನಾಟಕ ರಾಜ್ಯದಲ್ಲಿ ಸಮುದಾಯ ರೇಡಿಯೋ ಅಭಿವೃದ್ಧಿ ಯಲ್ಲಿ ಬೆಸಿಲ್ ಪಾತ್ರ ಅನನ್ಯವಾಗಿದೆ.

ಬೆಸಿಲ್ ತನ್ನ ಕಾರ್ಪೊರೇಟ್ ಸೋಶಿಯಲ್ ರೆಸ್ಪಾನ್ಸಿಬಿಲಿಟಿ ಯೋಜನೆಯ ಅಡಿಯಲ್ಲಿ, ೨೦೧೧-೧೨ ರಲ್ಲಿ, ಮೈಸೂರು ಜಿಲ್ಲೆಯ ಎಚ್. ಡಿ. ಕೋಟೆ ತಾಲೂಕಿನ ಸರಗೂರಿನಲ್ಲಿರುವ ವಿವೇಕಾನಂದ ಸ್ಕೂಲ್ ಆಫ್ ಎಕ್ಸಲೆನ್ಸ್ ಸಂಸ್ಥೆಗೆ ಸಂಪೂರ್ಣ ಸಮುದಾಯ ರೇಡಿಯೋ ನಿಲಯವನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ರೂ. ೧೩,೫೦,೦೦೦/- ನಿಧಿಯನ್ನು ನೀಡಿದೆ. ೨೦೧೧ - ೧೨ರಲ್ಲಿ




ನೀಲಗಿರಿಯ ಕೋಟಗಿರಿಯ ಕೀಸ್ಟೋನ್ ಫೌಂಡೇಷನ್ ಮತ್ತು ಕಾಕಿನಾಡದ ಎಂ. ಸಿ. ಟ್ರಸ್ಟ್ ಎಂಬ ಸಂಸ್ಥೆಗೆ ಇಂಥ ಧನಸಹಾಯವನ್ನು ನೀಡಿದೆ.

ಇದಲ್ಲದೇ, ಸಮುದಾಯ ರೇಡಿಯೋ ಸ್ಥಾಪನೆ ಮಾಡಲು ಬಯಸುವ ಸಂಸ್ಥೆಗಳಿಗೆ, ಅದಕ್ಕಾಗಿ ಸ್ಥಳ ನಿಗದಿ ಮಾಡಿ ಭಾರತ ಸರಕಾರಕ್ಕೆ ಸಮರ್ಪಕವಾಗಿ ಅರ್ಜಿ ಸಲ್ಲಿಸುವುದರಿಂದ ಹಿಡಿದು, ಪರವಾನಗಿ ಯನ್ನು ಪಡೆಯುವವರೆಗೂ ಸಲಹೆ, ಮಾರ್ಗದರ್ಶನವನ್ನು ಉಚಿತವಾಗಿ ನೀಡುತ್ತದೆ. ಅಲ್ಲದೇ, ಸಂಪೂರ್ಣ ಜವಾಬ್ದಾರಿಯೊಂದಿಗೆ, ಸೂಕ್ತ ಸಮಾಲೋಚನಾ ಶುಲ್ಕವನ್ನು ಪಡೆದು, ಸ್ಟುಡಿಯೋ ಸ್ಥಾಪನೆ ಮತ್ತು ಉಪಕರಣಗಳ ವ್ಯವಸ್ಥೆ ಎಲ್ಲವನ್ನೂ ಮಾಡಿ, ಸಿಬ್ಬಂದಿಗೆ ತಾಂತ್ರಿಕ ತರಬೇತಿಯನ್ನು ನೀಡಿ, ನಿಲಯವು ವಿಧ್ಯುಕ್ತವಾಗಿ ಪ್ರಸಾರವನ್ನು ಆರಂಭವಾಗುವವರೆಗೂ ಅತ್ಯಂತ ಪರಿಣತವಾದ ಸೇವೆಯನ್ನು ಒದಗಿಸುತ್ತದೆ.

**ಸಮುದಾಯ ರೇಡಿಯೋ ಸಾಹಿತ್ಯ**

ಇತ್ತೀಚೆಗೆ ಸಮುದಾಯ ರೇಡಿಯೋ ಬಗ್ಗೆ ಕೇಂದ್ರ ವಾರ್ತಾ ಮತ್ತು ಪ್ರಸಾರ ಇಲಾಖೆ ಮತ್ತು ಹಲವಾರು ಇತರ ವೆಬ್‌ಸೈಟ್‌ಗಳಲ್ಲಿ ಹೇರಳವಾದ ಮಾಹಿತಿ ಲಭ್ಯವಿದೆ. ಆದರೂ ಅದು ಒಂದೇ ಕಡೆ, ಒಂದು ಕೈಪಿಡಿಯ ರೂಪದಲ್ಲಿ ಲಭ್ಯವಾಗದೇ ಇರುವುದಕ್ಕಾಗಿ ಸಂಬಂಧಿತ ಸಂಸ್ಥೆಗಳಿಗೆ ಇದರ ಕುರಿತು ಮಾಹಿತಿ, ಪ್ರೇರಣೆ ಕಡಿಮೆ. ೧೯೯೭ರಷ್ಟು ಹಿಂದೆಯೇ 'ಕಮ್ಯುನಿಟಿ ರೇಡಿಯೋ: ವಾಯ್ಸ್ ಆಫ್ ದ ಪೀಪಲ್' ಮತ್ತು 'ಆಡಿಯೋ ಅಪ್ರೋಚ್ ಟು ಡೆವಲಪ್‌ಮೆಂಟ್ ಕಮ್ಯುನಿಕೇಷನ್' (೨೦೦೨) ಎಂಬ ಪ್ರಥಮವಾಗಿ ಭಾರತದ ದೃಷ್ಟಿನೆಲೆಯಿಂದ ಬರೆದ ಪುಸ್ತಕಗಳನ್ನು ಬೆಂಗಳೂರಿನ ವಾಯ್ಸಸ್ ಎಂಬ ಸಂಸ್ಥೆ ಪ್ರಕಟಿಸಿತು. ಕನ್ನಡದಲ್ಲಿ ಮಾಹಿತಿ ಯನ್ನು ಒದಗಿಸುವ ಸಲುವಾಗಿ ಪ್ರತಿ ವರ್ಷ ಕಾರ್ಯ ಶಿಬಿರಗಳನ್ನು ಮಾಡುತ್ತಾ ಬಂದಿರುವ ಕರ್ನಾಟಕ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ 'ಸಮುದಾಯ ರೇಡಿಯೋ: ಅಭಿವೃದ್ಧಿ ಸಂವಹನದ ಸಮರ್ಥ ಸಾಧನ' (೨೦೦೭), 'ಸಮುದಾಯ ರೇಡಿಯೋ: ಹೆಜ್ಜೆಗಳು ಮತ್ತು ಗುರಿಗಳು' (೨೦೧೨) ಮತ್ತು 'ಸಮುದಾಯ ರೇಡಿಯೋ: ಸುಗಮ ಸ್ಥಾಪನೆ, ನಿರ್ವಹಣೆ ಮತ್ತು ಸುಸ್ಥಿರತೆ' (೨೦೧೪) ಎಂಬ ಕೃತಿಗಳನ್ನು ಪ್ರಕಟಿಸಿದೆ. ಬೆಸಿಲ್ ಸಂಸ್ಥೆಯು, 'ಸಮುದಾಯ ರೇಡಿಯೋ: ಕಾರ್ಯಕ್ರಮ ನಿರ್ಮಾಣ, ನಿರ್ವಹಣೆ ತಂತ್ರಗಳು' ಎಂಬ ಕೃತಿಯನ್ನು ಪ್ರಕಟಿಸಿದೆ. ಮೇಲೆ ಉಲ್ಲೇಖಿಸಿದ ಎಲ್ಲಾ ಆರೂ ಪುಸ್ತಕಗಳನ್ನು ಬರೆಯುವ ಅವಕಾಶ ನನಗೇ ಸಿಕ್ಕಿದ್ದಕ್ಕಾಗಿ ನನಗೆ ಹೆಮ್ಮೆಯಿದೆ.

**ಆಶಯ ಫಲಕಾರಿಯಾಗಬೇಕು ಎಂದರೆ**

ಈವರೆಗೆ ದೇಶದಲ್ಲಿ ಸ್ಥಾಪಿತವಾಗಿರುವ ಸಮುದಾಯ ರೇಡಿಯೋ ನಿಲಯಗಳಲ್ಲಿ ಹೆಚ್ಚಿನವು ನಗರಗಳಲ್ಲಿರುವ ವಿಶ್ವವಿದ್ಯಾಲಯ ಅಥವಾ ಅಷ್ಟೇ ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಗಳಿಗೆ ಸೇರಿದವು. ರಾಜ್ಯ ದಲ್ಲಿಯೂ ಈಗ ಕಾರ್ಯನಿರತವಾಗಿರುವ ೧೪ ನಿಲಯಗಳಲ್ಲಿ ೧೨ ನಗರ/ಪಟ್ಟಣಗಳಲ್ಲಿರುವ ಶೈಕ್ಷಣಿಕ ಸಂಸ್ಥೆಗಳು ನಡೆಸುತ್ತಿರುವ ನಿಲಯ ಗಳಾಗಿವೆ. ಇದು ಉಳ್ಳವರಿಗೇ ಇನ್ನೊಂದು ಮಾಧ್ಯಮ ಕೊಟ್ಟಂತಾಗುತ್ತದೆ. ಸಮುದಾಯ ರೇಡಿಯೋನ ಮೂಲ ಆಶಯವಿರುವುದು ಧ್ವನಿಯಿಲ್ಲದ, ಉಪೇಕ್ಷಿತ ಜನರಿಗೆ ಧ್ವನಿಯನ್ನು ಕೊಡುವುದು; ಅವರ ಅಭಿಪ್ರಾಯಗಳಿಗೂ ಸಮೂಹ ಮಾಧ್ಯಮದ ವೇದಿಕೆಯನ್ನು ಒದಗಿಸುವುದು.

ರಾಜ್ಯದಲ್ಲಿ ಅನೇಕ ಸಮುದಾಯ ಆಧಾರಿತ ಸಂಸ್ಥೆಗಳಿವೆ. ಅನೇಕ ಸರಕಾರೇತರ ಸಂಸ್ಥೆಗಳು ತಮ್ಮ ಯೋಜನೆಗಳನ್ನು ಅದರಲ್ಲಿ ಒಳಗೊಳ್ಳುವ ಜನರ ಸಶಕ್ತ ಸಹಭಾಗಿತ್ವದಿಂದಲೇ ನಡೆಸುತ್ತಿದ್ದಾರೆ. ಹಾಗೆ ಮಾಡಿದರೆ ಮಾತ್ರ ಅಭಿವೃದ್ಧಿ ಯೋಜನೆಗಳು ಸಾರ್ಥಕವಾಗುತ್ತವೆ ಎಂದು ಅವರಿಗೂ, ಸರಕಾರ ಗಳಿಗೂ ಗೊತ್ತಾಗಿದೆ. ಹಾಗೆಯೇ ಸಮೂಹ ಸಂವಹನ ಮಾಧ್ಯಮದ ಮಾಲೀಕತ್ವ, ಸಬಲ ಸಹಭಾಗಿತ್ವ ಜನರಲ್ಲಿ ಎಂಥ ಆತ್ಮವಿಶ್ವಾಸವನ್ನು, ಅಭ್ಯುದಯದ ಆಸೆಯನ್ನು, ಪ್ರಜಾಸತ್ತಾತ್ಮಕ ಗುಣಗಳನ್ನು ತುಂಬುತ್ತದೆ ಎಂಬುದು ಹಲವು ನಿದರ್ಶನಗಳಿಂದ ಸಾಬೀತಾಗಿದೆ. ಇಂಥ ಸಬಲೀಕರಣಕ್ಕೆ ರೇಡಿಯೋ ಮಾಧ್ಯಮ ಹೇಳಿ ಮಾಡಿಸಿದಂಥ ಸಾಧನವಾಗಿದೆ. ರಾಜ್ಯದಲ್ಲಿ, ಗ್ರಾಮೀಣ ಪ್ರದೇಶಗಳಲ್ಲಿ ಜನ ರೊಂದಿಗೆ ಕೆಲಸ ಮಾಡುತ್ತಿರುವ ಸಂಸ್ಥೆಗಳು ಇದನ್ನು ಅರಿತು, ಸಮುದಾಯ ರೇಡಿಯೋಗಳ ಸ್ಥಾಪನೆಗೆ ಮುಂದಾಗಬೇಕು; ಸಮಾನಾಂತರ ಮತ್ತು ಕೆಳಗಿನಿಂದ ಮೇಲಕ್ಕೆ ಆಗುವ ಸಂವಹನದ ಕ್ರಾಂತಿಯಲ್ಲಿ ಭಾಗವಹಿಸಬೇಕು.

**ಎಂ. ಅಬ್ದುಲ್ ರೆಹಮಾನ್ ಪಾಷ**
ನಂ. ೮೧/೩೭ - ೩, ೧೨ನೇ 'ಡಿ' ಮುಖ್ಯರಸ್ತೆ
ಶಿವನಗರ, ಬೆಂಗಳೂರು - ೫೬೦ ೦೧೦

# ಕ್ರಿಕೆಟ್ ಮತ್ತು ಆರ್ಥಿಕತೆ

**ಟೆಸ್ಟ್ ಮತ್ತು ಏಕದಿನ ಪಂದ್ಯಗಳು ನಡೆಯುತ್ತಿದ್ದ ಕಾಲದಲ್ಲಿ ಕ್ರಿಕೆಟ್ ಬಗ್ಗೆ ಕೆಲವು ಸಭ್ಯರು ಆಸಕ್ತಿಯನ್ನು ಹೊಂದಿದ್ದರು. ಆದರೆ ಟ್ವೆಂಟಿ-20 ಮತ್ತು ಐಪಿಎಲ್ ಬಂದ ನಂತರ ಇದೊಂದು ಜೂಜಾಟವಾಯಿತು. 2011ರಲ್ಲಿ ಭಾರತ ಟ್ವೆಂಟಿ-20 ವಿಶ್ವಕಪ್ ಗಳಿಸಿದ ನಂತರ ಭಾರತದಲ್ಲಿ ಇದರ ಗುಂಗು ಇನ್ನಷ್ಟು ಹೆಚ್ಚಾಯಿತು. ಈ ಚುಟುಕು ಕ್ರಿಕೆಟ್ ಹುಟ್ಟಿಕೊಂಡಿದ್ದೂ ಕೂಡ ಆಟದ ಕಾರಣಕ್ಕಾಗಿ ಅಲ್ಲ. ಅವೂ ಕೂಡ ವ್ಯಾಪಾರದ ಹುನ್ನಾರವನ್ನು ಒಡಲಲ್ಲಿ ಇಟ್ಟುಕೊಂಡೇ ಹುಟ್ಟಿದವು.**

ಇತ್ತೀಚೆಗೆ ಮ್ಯಾಚ್ ಫಿಕ್ಸಿಂಗ್ ಮತ್ತು ಸ್ಪಾಟ್ ಫಿಕ್ಸಿಂಗ್ ಪ್ರಕರಣದ ವಿಚಾರಣೆ ನಡೆಸುತ್ತಿರುವ ಸುಪ್ರೀಂಕೋರ್ಟ್ "ಕ್ರಿಕೆಟ್ ಆಟವನ್ನು ಸಭ್ಯರ ಆಟವನ್ನಾಗಿಯೇ ಇಡಲು ಕ್ರಮ ಕೈಗೊಳ್ಳಿ" ಎಂದು ಭಾರತೀಯ ಕ್ರಿಕೆಟ್ ಸಂಸ್ಥೆಗೆ ಹೇಳಿದೆ. ಅಂದರೆ ಕ್ರಿಕೆಟ್ ಈಗ ಭಾರತದಲ್ಲಿ ಸಭ್ಯರ ಆಟವಾಗಿ ಉಳಿದಿಲ್ಲ ಎನ್ನುವುದು ಸುಪ್ರೀಂಕೋರ್ಟ್‌ಗೆ ಮನವರಿಕೆಯಾಗಿದೆ. ಹೌದು. ಈಗ ಕ್ರಿಕೆಟ್ ಸಭ್ಯರ ಆಟವಾಗಿಯೂ ಉಳಿದಿಲ್ಲ. ಕೇವಲ ಆಟವಾಗಿಯೂ ಉಳಿದಿಲ್ಲ. ಭಾರತದ ಮಟ್ಟಿಗೆ ಅದು ಹಣ ತರುವ ದಂಧೆಯಾಗಿದೆ. ಐಪಿಎಲ್ ಮತ್ತು ಟ್ವೆಂಟಿ-೨೦ ಎಂಬ ಚುಟುಕು ಕ್ರಿಕೆಟ್ ಬಂದ ಮೇಲೆ ಇದೆಲ್ಲವೂ ಜೂಜಾಟವಾಗಿದೆ.

ಐಪಿಎಲ್‌ನಲ್ಲಿ ಬಿಸಿಸಿಐ ೨೦೧೧-೧೨ರ ವಹಿವಾಟು ೮೪೯.೪೪ ಕೋಟಿ ರೂಪಾಯಿ. ಇದರಲ್ಲಿ ಐಪಿಎಲ್‌ನಿಂದ ಬಂದ ಹಣ ೨೬೫.೪ ಕೋಟಿ ರೂಪಾಯಿ. ಜಾಹೀರಾತುಗಳಿಂದ ಬಂದ ಹಣ ೪೩೭.೭೫ ಕೋಟಿ ರೂಪಾಯಿ. ಅಂದರೆ ಇಲ್ಲಿ ಆಟಕ್ಕಿಂತ ಜಾಹೀರಾತು ಮುಖ್ಯವಾಗಿದೆ. ಅದಕ್ಕೇ ಕ್ರಿಕೆಟ್ ಎಂಬುದು ಈಗ ಆಟಕ್ಕಿಂತ ಜಾಹೀರಾತಿಗೇ ಹೆಚ್ಚಿನ ಮಾನ್ಯತೆಯನ್ನು ಕೊಡುತ್ತಿದೆ. ಯಾಕೆ ಹೀಗಾಯ್ತು ?

೧೯೯೦ರ ದಶಕದವರೆಗೂ ಭಾರತದಲ್ಲಿ ಕ್ರಿಕೆಟ್ ಸಭ್ಯರ ಆಟವೇ ಆಗಿತ್ತು. ಜನಪ್ರಿಯತೆ ಇದ್ದರೂ ಇಷ್ಟೊಂದು ಮೋಸದಾಟ ನಡೆಯುತ್ತಿರಲಿಲ್ಲ. ಆದರೆ ಭಾರತದಲ್ಲಿ ಜಾಗತೀಕರಣ, ಖಾಸಗೀಕರಣದ ಪರ್ವ ಆರಂಭವಾದ ನಂತರ ಕ್ರಿಕೆಟ್ ಆಟವನ್ನು ಉದ್ಯಮವನ್ನಾಗಿ ಬದಲಾಯಿಸಲಾಯಿತು. ದೃಶ್ಯ ಮಾಧ್ಯಮಗಳು ಬಂದ ನಂತರ ಇದು ಇನ್ನೊಂದು ಮಟ್ಟಕ್ಕೆ ಏರಿತು. ಜಾಹೀರಾತು ಪ್ರಸಾರಕ್ಕೆ ಕ್ರಿಕೆಟ್‌ನಷ್ಟು ಒಳ್ಳೆಯ ಆಟ ಇನ್ನೊಂದಿಲ್ಲ. ಭಾರತದಂತಹ ದೇಶದಲ್ಲಿ ಜನಸಂಖ್ಯೆ ಜಾಸ್ತಿ. ಕ್ರಿಕೆಟ್ ಹುಚ್ಚು ಇರುವ ಜನರೂ ಹೆಚ್ಚು. ಇದನ್ನು ಅರಿತ ಉದ್ಯಮಿಗಳು ಕ್ರಿಕೆಟ್‌ಅನ್ನು ಜನಪ್ರಿಯಗೊಳಿಸುವ ಯತ್ನಕ್ಕೆ ಮುಂದಾದರು.

ಕ್ರಿಕೆಟ್‌ನಲ್ಲಿ ಪ್ರತಿ ಓವರ್ ನಂತರ ಇನ್ನೊಂದು ಓವರ್ ಆಟದ ನಡುವೆ ಒಂದಿಷ್ಟು ಬಿಡುವು ಇದ್ದೇ ಇರುತ್ತದೆ. ಅದನ್ನು ಜಾಹೀರಾತಿಗೆ ಬಳಸಿಕೊಳ್ಳಲು ಅವಕಾಶವಿದೆ. ಈ ಅವಕಾಶ ಹಾಕಿ ಅಥವಾ ಫುಟ್ಬಾಲ್‌ನಲ್ಲಿ ಇಲ್ಲ. ಇವು ೧.೩೦ ಗಂಟೆಯ ಆಟ. ಕನಿಷ್ಠ ೪೫ ನಿಮಿಷದವರೆಗೆ ಇಲ್ಲಿ ವಿಶ್ರಾಂತಿ ಸಿಗುವುದೇ ಇಲ್ಲ. ೪೫ ನಿಮಿಷಗಳ ನಂತರ ಜಾಹೀರಾತು ಪ್ರಸಾರ ಮಾಡಿದರೆ ಯಾವ ಮಜಾ ಸಿಗುತ್ತದೆ. ಪ್ರತಿ ೫ ನಿಮಿಷಕ್ಕೆ ಒಮ್ಮೆ ಜಾಹೀರಾತು ಪ್ರಸಾರ ಮಾಡಲು ಅವಕಾಶ ಇರುವ ಕ್ರಿಕೆಟ್ ಬೆಸ್ಟ್. ಅದಕ್ಕೇ ಎಲ್ಲ ಉದ್ಯಮಗಳೂ ಕ್ರಿಕೆಟ್ ಆಟಕ್ಕೆ ಹೆಚ್ಚಿನ ಆದ್ಯತೆ ನೀಡುತ್ತವೆ. ಆ ಮೂಲಕ ತಮ್ಮ ಆದಾಯವನ್ನೂ ಹೆಚ್ಚಿಸಿಕೊಳ್ಳುತ್ತವೆ.

ಭಾರತ ಕ್ರಿಕೆಟ್ ತಂಡದ ನಾಯಕ ಮಹೇಂದ್ರ ಸಿಂಗ್ ಧೋನಿ ಅವರ ವಾರ್ಷಿಕ ಆದಾಯ ೧೮೦ ಕೋಟಿ ರೂಪಾಯಿ. ಇದರಲ್ಲಿ ಅವರಿಗೆ ಕ್ರಿಕೆಟ್ ಆಟ ಆಡಿದ್ದರಿಂದ ಬರುವ ಆದಾಯ ಕೇವಲ ೨೦ ಕೋಟಿ ಮಾತ್ರ. ಉಳಿದ ೧೬೦ ಕೋಟಿ ರೂಪಾಯಿ ಬೇರೆ ಬೇರೆ ಜಾಹೀರಾತು ಕಂಪೆನಿಗಳಿಂದ ಬರುತ್ತದೆ. ಅಂದ ಮೇಲೆ ಅವರ ವಿಶ್ವಾಸ ಇರಬೇಕಾದದ್ದು ಯಾವುದರ ಮೇಲೆ ?

ಫೋಬ್ಸ್ ನಿಯತಕಾಲಿಕೆ ಪ್ರಕಟಿಸಿದ ವಿಶ್ವದ ಅತ್ಯಂತ ಶ್ರೀಮಂತ ಆಟಗಾರರ ಪಟ್ಟಿಯಲ್ಲಿ ಧೋನಿಗೆ ೧೬ನೇ ಸ್ಥಾನ ಲಭಿಸಿದೆ. ಅವರು ಈ ಪಟ್ಟಿಯಲ್ಲಿ ಸ್ಥಾನ ಪಡೆದಿರುವುದು ಇದೇ ಮೊದಲು ಏನೂ ಅಲ್ಲ. ೨೦೧೨ರಲ್ಲಿ ಅವರು ೩೧ನೇ ಸ್ಥಾನದಲ್ಲಿದ್ದರು. ಈಗ ೧೬ಕ್ಕೆ ಏರಿದ್ದಾರೆ. ಭಾರತದಲ್ಲಿ ಕ್ರಿಕೆಟ್ ಜನಪ್ರಿಯತೆ ಹೆಚ್ಚಾಗುತ್ತಿರುವುದನ್ನು ನೋಡಿದರೆ ಅವರ ಸ್ಥಾನ ಇನ್ನೂ ಮೇಲಕ್ಕೆ ಏರಿದರೆ ಅಚ್ಚರಿಯಲ್ಲ.

ವಿಶ್ವದ ಬೇರೆ ಯಾವುದೇ ದೇಶದಲ್ಲಿ ಕ್ರಿಕೆಟ್ ಹೆಚ್ಚು ಹಣ ತರುವ ಆಟ ಅಲ್ಲ. ೨೦೧೫ರಲ್ಲಿ ಕ್ರಿಕೆಟ್ ವಿಶ್ವಕಪ್ ಸಾರಥ್ಯ ವಹಿಸಿಕೊಂಡಿರುವ ಆಸ್ಟ್ರೇಲಿಯ-ನ್ಯೂಜಿಲೆಂಡ್‌ನಲ್ಲಿಯೂ ಕ್ರಿಕೆಟ್ ಜನಪ್ರಿಯ ಆಟವಲ್ಲ. ಆಸ್ಟ್ರೇಲಿಯದಲ್ಲಿ ಯಾವುದೇ ಕ್ರೀಡಾಂಗಣ ಕ್ರಿಕೆಟ್ ಕ್ರೀಡಾಂಗಣವಲ್ಲ. ಅತ್ಯಂತ

■ ಸೂರ್ಯದೇವ



ಐತಿಹಾಸಿಕ ಮಹತ್ವವನ್ನು ಹೊಂದಿದ ಮೆಲ್ಬೋರ್ನ್ ಮತ್ತು ಅಡಿಲೇಡ್ ಕ್ರೀಡಾಂಗಣಗಳೂ ಕೇವಲ ಕ್ರಿಕೆಟ್ ಕ್ರೀಡಾಂಗಣಗಳಲ್ಲ. ಅಲ್ಲಿ ಫುಟ್ಬಾಲ್ ಮತ್ತು ರಗ್ಬಿಯನ್ನೂ ಆಡಲಾಗುತ್ತದೆ. ಆಸ್ಟ್ರೇಲಿಯದಲ್ಲಿ ಕ್ರಿಕೆಟ್‌ಗಿಂತ ಫುಟ್ಬಾಲ್ ಮತ್ತು ರಗ್ಬಿ ಜನಪ್ರಿಯ ಕ್ರೀಡೆಗಳು.

ಫೋಬ್ಸ್ ನಿಯತಕಾಲಿಕೆ ಪ್ರಕಟಿಸಿದ ವಿಶ್ವದ ಅತ್ಯಂತ ಶ್ರೀಮಂತ ಆಟಗಾರರ ಪಟ್ಟಿಯಲ್ಲಿ ಸ್ಥಾನ ಪಡೆದ ಬಹುತೇಕರು ಕ್ರಿಕೆಟ್ ಆಟಗಾರರಲ್ಲ. ಮಹೇಂದ್ರ ಸಿಂಗ್ ಧೋನಿಗೆ ಇದರಲ್ಲಿ ೧೬ನೇ ಸ್ಥಾನವಾದರೆ ಸಚಿನ್ ತೆಂಡೂಲ್ಕರ್ ಅವರಿಗೆ ೫೧ನೇ ಸ್ಥಾನ ದೊರಕಿದೆ. ಅವರೂ ಕೂಡ ಕಳೆದ ಬಾರಿ ೭೮ನೇ ಸ್ಥಾನದಲ್ಲಿದ್ದರು. ಈ ಬಾರಿ ಅವರ ಆದಾಯ ೧೨೫ ಕೋಟಿ ದಾಟಿದ್ದರಿಂದ ಸ್ಥಾನ ಪಡೆದಿದ್ದಾರೆ. ಈ ಪಟ್ಟಿಯಲ್ಲಿ ಸ್ಥಾನ ಪಡೆದ ಭಾರತೀಯ ಕ್ರಿಕೆಟ್ ಆಟಗಾರರು ಇವರಿಬ್ಬರು ಮಾತ್ರ. ಅಂದರೆ ಭಾರತದಲ್ಲಿ ಕ್ರಿಕೆಟ್ ಎಂಬುದು ಹಣ ಗಳಿಸುವ ಆಟ ಎನ್ನುವುದು ಮತ್ತೊಮ್ಮೆ ಸಾಬೀತಾಗಿದೆ.

ಈ ಪಟ್ಟಿಯಲ್ಲಿ ಮೊದಲ ಸ್ಥಾನವನ್ನು ಪಡೆದ ಬಹುತೇಕ ಮಂದಿ ಬೇಸ್ ಬಾಲ್ ಆಟಗಾರರು. ಈ ಆಟ ಆಡುವ ೨೭ ಮಂದಿ ಪಟ್ಟಿಯಲ್ಲಿ ಸ್ಥಾನ ಪಡೆದಿದ್ದಾರೆ. ಬಾಸ್ಕೆಟ್ ಬಾಲ್ ಆಡುವ ೨೧ ಮಂದಿಗೂ ಸ್ಥಾನ ಸಿಕ್ಕಿದೆ. ೧೪ ಮಂದಿ ಫುಟ್ಬಾಲ್ ಆಟಗಾರರೂ ಈ ಪಟ್ಟಿಯಲ್ಲಿದ್ದಾರೆ. ಅಂದರೆ ವಿಶ್ವದಲ್ಲಿ ಕ್ರಿಕೆಟ್ ಶ್ರೀಮಂತ ಆಟ ಅಲ್ಲ. ವಿಶ್ವದಲ್ಲಿ ಜನಪ್ರಿಯತೆ ಹೊಂದಿರುವ ಆಟದಲ್ಲಿ ಇನ್ನೂ ಭಾರತೀಯರು ಸಾಧನೆಯನ್ನೇ ಮಾಡಿಲ್ಲ. ಟೆನಿಸ್, ಗಾಲ್ಫ್, ರೇಸಿಂಗ್, ಬಾಕ್ಸಿಂಗ್ ಮುಂತಾದ ಕ್ರೀಡೆಗಳಲ್ಲಿಯೂ ಭಾರತ ಹಿಂದೆ ಇದೆ. ಫುಟ್ಬಾಲ್, ಬಾಸ್ಕೆಟ್ ಬಾಲ್ ಮುಂತಾದ ತಂಡದ ಆಟಗಳಲ್ಲಿ ಭಾರತ ಸಾಧನೆ ಮಾಡುವುದು ದೂರದ ಮಾತು.

ಟೆಸ್ಟ್ ಮತ್ತು ಏಕದಿನ ಪಂದ್ಯಗಳು ನಡೆಯುತ್ತಿದ್ದ ಕಾಲದಲ್ಲಿ ಕ್ರಿಕೆಟ್ ಬಗ್ಗೆ ಕೆಲವು ಸಭ್ಯರು ಆಸಕ್ತಿಯನ್ನು ಹೊಂದಿದ್ದರು. ಆದರೆ ಟ್ವೆಂಟಿ–೨೦ ಮತ್ತು ಐಪಿಎಲ್ ಬಂದ ನಂತರ ಇದೊಂದು ಜೂಜಾಟವಾಯಿತು. ೨೦೧೧ರಲ್ಲಿ ಭಾರತ ಟ್ವೆಂಟಿ–೨೦ ವಿಶ್ವಕಪ್ ಗಳಿಸಿದ ನಂತರ ಭಾರತದಲ್ಲಿ ಇದರ ಗುಂಗು ಇನ್ನಷ್ಟು ಹೆಚ್ಚಾಯಿತು. ಈ ಚುಟುಕು ಕ್ರಿಕೆಟ್ ಹುಟ್ಟಿಕೊಂಡಿದ್ದೂ ಕೂಡ ಆಟದ ಕಾರಣಕ್ಕಾಗಿ ಅಲ್ಲ. ಅವೂ ಕೂಡ ವ್ಯಾಪಾರದ ಹುನ್ನಾರವನ್ನು ಒಡಲಲ್ಲಿ ಇಟ್ಟುಕೊಂಡೇ ಹುಟ್ಟಿದವು.

ಚುಟುಕು ಕ್ರಿಕೆಟ್ ಕೇವಲ ಹೊಡಿ ಬಡಿ ಆಟ. ಇದು ಕ್ರಿಕೆಟ್‌ನ ಧರ್ಮಕ್ಕೆ ವಿರುದ್ಧ. ಇಲ್ಲಿ ಶೈಲಿ, ಕಲಾತ್ಮಕತೆಗೆ ಅವಕಾಶವೇ ಇಲ್ಲ. ಈಗ ಕ್ರಿಕೆಟ್ ಉದ್ದಿಮೆಗಳ ಕೈಲಿ ಸಿಕ್ಕು ನರಳಾಡುತ್ತಿದೆ. ಮ್ಯಾಚ್ ಫಿಕ್ಸಿಂಗ್, ಬೆಟ್ಟಿಂಗ್, ಸ್ಪಾಟ್ ಫಿಕ್ಸಿಂಗ್‌ಗಳೂ ಬಂದಿವೆ. ಹಣದ ಆಸೆಗೆ ಸಿಲುಕಿ ಹಲವಾರು ಆಟಗಾರರು ಶಾಶ್ವತ ನಿಷೇಧಕ್ಕೆ ಒಳಗಾಗಿದ್ದಾರೆ. ಕ್ರಿಕೆಟ್ ಎಂಬುದು ನಮ್ಮ ದೇಶದಲ್ಲಿ ಈಗ ಕೇವಲ ಮನರಂಜನೆಯ ಸಾಧನವಾಗಿದೆ. ಚುಟುಕು ಕ್ರಿಕೆಟ್‌ನಲ್ಲಿ ಒಬ್ಬ ಆಟಗಾರ ಎಷ್ಟು ಮನರಂಜನೆ ನೀಡುತ್ತಾನೆ ಎನ್ನುವುದರ ಮೇಲೆ ಆತನ ಹಣದ ಚೀಲ ತುಂಬುತ್ತದೆ. ಇಲ್ಲಿ ಆಟಗಾರ ಕೇವಲ ಪ್ರದರ್ಶನ ಕಾರನೇ ವಿನಾ ಕಲಾತ್ಮಕ ಆಟದ ಮೋಡಿಗಾರ ಅಲ್ಲ. ಒಬ್ಬ ಆಟಗಾರ ತನ್ನ ಸಾಮರ್ಥ್ಯದ ಮೂಲಕ ಮನರಂಜಕನಾಗಿ ಬದಲಾದರೆ ತಪ್ಪಲ್ಲ. ಆದರೆ ಆಟಕ್ಕಿಂತ ಮನರಂಜನೆಯೇ ಮುಖ್ಯವಾದರೆ ಆಟ ಸೊರಗುತ್ತದೆ. ತನ್ನ ಅಸ್ತಿತ್ವವನ್ನೂ ಕಳೆದುಕೊಳ್ಳುತ್ತದೆ. ಕ್ರಿಕೆಟ್‌ನಲ್ಲಿ ಮೋಸದಾಟ ಹೊಸದೇನೂ ಅಲ್ಲ. ದಶಕಗಳಷ್ಟು ಹಿಂದೆಯೇ ದಕ್ಷಿಣ ಆಫ್ರಿಕಾದ ಕೆಲವು ಆಟಗಾರರು ಈ ಮೋಸದಾಟದಲ್ಲಿ ಸಿಲುಕಿ ತಮ್ಮ ಭವಿಷ್ಯ ಹಾಳುಮಾಡಿಕೊಂಡಿದ್ದರು. ಪಾಕಿಸ್ತಾನದ ಕೆಲವರೂ ಸಿಕ್ಕಿಬಿದ್ದಿದ್ದರು. ಭಾರತದ ಕೆಲವು ಆಟಗಾರರ ಹೆಸರೂ ಕೇಳಿಬಂದಿತ್ತು. ಚುಟುಕು ಕ್ರಿಕೆಟ್ ಜನಪ್ರಿಯವಾದ ನಂತರ ಅದು ಇನ್ನಷ್ಟು ಹೆಚ್ಚಾಗಿದೆ. ಈಗ ಆಟದ ಬಗ್ಗೆ ನಂಬಿಕೆಯೇ ಹೊರಟುಹೋಗಿದೆ.




ಒಂದು ರೂಪಾಯಿ ತೊಡಗಿಸಿ ೧೦ ರೂಪಾಯಿ ಅಥವಾ ನೂರು ರೂಪಾಯಿ ಗಳಿಸುವುದು ವ್ಯಾಪಾರ ಧರ್ಮ. ಅದು ಸಂಪೂರ್ಣವಾಗಿ ತಪ್ಪು ಎಂದು ಹೇಳಲಾಗದು. ಉದ್ದಿಮೆಗಳು ತಮ್ಮ ವ್ಯಾಪಾರ ಹೆಚ್ಚಿಸಿಕೊಳ್ಳಲು ಕ್ರಿಕೆಟ್ ಬಳಸಿಕೊಂಡಿದ್ದಾರೆ ಎಂದರೆ ಅಷ್ಟರಮಟ್ಟಿಗೆ ಅದನ್ನು ಒಪ್ಪಿಕೊಳ್ಳಬಹುದು. ಆದರೆ ಇಲ್ಲಿ ಕೇವಲ ವ್ಯಾಪಾರ ನಡೆಯುತ್ತಿಲ್ಲ. ಲೂಟಿಯೂ ನಡೆಯುತ್ತಿದೆ. ಜೊತೆಗೆ ಕಪ್ಪು ಹಣವನ್ನು ತೊಡಗಿಸಿ ಅದನ್ನು ಬಿಳಿ ಹಣವನ್ನಾಗಿ ಮಾಡುವ ಹುನ್ನಾರವೂ ನಡೆಯುತ್ತಿದೆ. ಇದೇ ಕಾರಣಕ್ಕಾಗಿ ಆಟಗಾರರ ಹರಾಜು ನಡೆಯುತ್ತದೆ. ಇಂತಹ ಹರಾಜಿನಲ್ಲಿ ಹೆಚ್ಚಿನ ಹಣ ಸಿಗುತ್ತದೆ ಎನ್ನುವುದು ಗೊತ್ತಾದ ನಂತರ ಆಟಗಾರರು ದೇಶಕ್ಕಾಗಿ ಆಡುವುದನ್ನು ಮರೆತು ಇಲ್ಲಿಯೇ ಆಟವಾಡುತ್ತಾರೆ. ವೆಸ್ಟ್‌ಇಂಡೀಸ್‌ನ ಕ್ರಿಸ್ ಗೇಲ್ ತಮ್ಮ ತಂಡದ ಪರವಾಗಿ ಆಡುವುದನ್ನು ಬಿಟ್ಟು ಐಪಿಎಲ್ ಆಡಿದ ಉದಾಹರಣೆ ನಮ್ಮ ಮುಂದೆ ಇದೆ. ಜಾಹೀರಾತುಗಳಿಗೆ ಅವಕಾಶ ನೀಡುವುದಕ್ಕಾಗಿಯೇ ಟೈಮ್ ಔಟ್ ಪದ್ಧತಿ ಜಾರಿಗೆ ತರಲಾಗಿದೆ. ಪಂದ್ಯ ಮುಗಿದ ನಂತರ ಪಾರ್ಟಿ ನಡೆಸುವ ಪದ್ಧತಿಯನ್ನೂ ಜಾರಿಗೆ ತರಲಾಗಿದೆ. ಇವೆಲ್ಲವೂ ಕಳ್ಳಾಟದ ಮುನ್ನುಡಿಗಳೇ ಆಗಿವೆ. ಇವೆಲ್ಲ ನಡೆಯುವುದು ಹಣದಾಸೆಗೇ ಹೊರತು ಇದರಲ್ಲಿ ಆಟದ ಔಚಿತ್ಯ ಏನೂ ಇಲ್ಲ. ಇದರಿಂದ ಯಾವ ರೀತಿಯಲ್ಲಿಯೂ ಆಟಕ್ಕೆ ಅನುಕೂಲವಾಗುವುದಿಲ್ಲ.

ಈಗಲೂ ನಾವು ಕ್ರಿಕೆಟ್ ಎಂದರೆ ಸಚಿನ್ ತೆಂಡೂಲ್ಕರ್, ಕಪಿಲ್‌ದೇವ್, ಗಾವಸ್ಕರ್, ಅನಿಲ್ ಕುಂಬ್ಳೆ, ಶ್ರೀನಾಥ್, ಜಿ. ಆರ್. ವಿಶ್ವನಾಥ್, ರಾಹುಲ್ ದ್ರಾವಿಡ್ ಅವರನ್ನು ನೆನಪಿಸಿಕೊಳ್ಳುತ್ತೇವೆ. ಇದಕ್ಕೆ ಮುಖ್ಯ ಕಾರಣ ಅವರ ಆಟದ ಶೈಲಿ. ಆಟದ ಮೈದಾನಗಳಲ್ಲಿ ಅವರು ಬಿಡಿಸಿದ ಚಿತ್ತಾರ ಏನು ಎನ್ನುವುದು ನಮ್ಮ ನೆನಪಿನ ಮೂಸೆಯಲ್ಲಿ ಯಾವಾಗಲೂ ಇರುತ್ತದೆ. ಅಲ್ಲದೆ ಇವರೆಲ್ಲಾ ದೇಶಕ್ಕಾಗಿ ಆಡಿದವರು. ಬಹಳಷ್ಟು ಕ್ರೀಡಾಪಟುಗಳು ಮೈದಾನದಲ್ಲಿ ಕೇವಲ ಮಿಂಚು ಹರಿಸಿರಬಹುದು. ಗುಡುಗು ಸಿಡಿಲುಗಳಂತೆ ಅಬ್ಬರಿಸಿರಬಹುದು. ಆದರೆ ಇವು ಕೇವಲ ಅಬ್ಬರಗಳೇ ವಿನಾ ನಮ್ಮ ಹೃದಯಗಳಲ್ಲಿ ಸ್ಥಾನ ಗಿಟ್ಟಿಸುವುದಿಲ್ಲ.

೨೦೧೩ರ ಐಪಿಎಲ್‌ನಲ್ಲಿ ಶ್ರೀಶಾಂತ್, ಅಜಿತ್ ಚಾಂಡಿಲ, ಅಂಕಿತ್ ಚೌಹಾಣ್ ಬೆಟ್ಟಿಂಗ್ ಸುಳಿಯಲ್ಲಿ ಸಿಕ್ಕಿಬಿದ್ದರು. ತಂಡದ ಮಾಲೀಕರಾದ ರಾಜ್ ಕುಂದ್ರಾ, ಮೇಯಪ್ಪನ್ ಮುಂತಾದವರೂ ಸಿಕ್ಕಿಬಿದ್ದಿದ್ದಾರೆ. ಭೂಗತ ದೊರೆಗಳೂ ಕ್ರಿಕೆಟ್ ಆಟವನ್ನು ನಿಯಂತ್ರಿಸತೊಡಗಿದ್ದಾರೆ. ಬ್ರಿಟಿಷ್ ನಾಡಿನಲ್ಲಿ ಹುಟ್ಟಿದ ಆಟ ಅವರೊಂದಿಗೇ ಭಾರತಕ್ಕೂ ಬಂದು ಇಲ್ಲಿ ಜನಪ್ರಿಯವಾಗಿದೆ. ಜಾಗತೀಕರಣದ ಮೂಲಕ ಈಗ ಅದೂ ಕೂಡ ಒಂದು ಸರಕಾಗಿದೆ. ೨೦೦೮ರಲ್ಲಿ ಆರಂಭವಾದ ಐಪಿಎಲ್ ಬಂಡವಾಳಗಾರರ, ಭೂಗತ ದೊರೆಗಳ, ತೆರಿಗೆ ವಂಚಕರ ಅದೃಷ್ಟದ ಬಾಗಿಲನ್ನೂ ತೆರೆದಿದೆ. ತಂಡದ ಮಾಲೀಕರಿಗಾಗಿ ಆಟಗಾರರೂ ಬಿಕರಿಯಾಗುತ್ತಿದ್ದಾರೆ. ಒಂದು ಓವರ್‌ನಲ್ಲಿ ಇಷ್ಟೇ ರನ್ ನೀಡ ಬೇಕು. ಇಷ್ಟು ನೋಬಾಲ್ ಅಥವಾ ವೈಡ್ ಹಾಕಿದರೆ ಇಷ್ಟು ಹಣ ಎಂದೂ ನಿಗದಿ ಮಾಡುವ ಪ್ರಕ್ರಿಯೆಗಳೂ ನಡೆಯುತ್ತಿವೆ. ಒಂದು ಓವರ್‌ನಲ್ಲಿಯೇ ೫೦ ಲಕ್ಷ ರೂಪಾಯಿ ದುಡಿಯಬಹುದಾದರೆ ಮೈದಾನದಲ್ಲಿ ಬೆವರು ಹರಿಸಿ ದೇಶಕ್ಕಾಗಿ ಆಡುವುದು ಯಾಕೆ ಎಂದು ನಮ್ಮ ಆಟಗಾರರು ಅಂದುಕೊಂಡಿರಬಹುದು.

ಕ್ರಿಕೆಟ್ ಎಂಬ ಮಾಯಾಲೋಕದ ಆಟದಲ್ಲಿ ಭ್ರಷ್ಟಾಚಾರ, ವಂಚನೆ ಎಂಬುದು ಏಕಾಏಕಿ ಬಂದಿಲ್ಲ. ಜಾಗತೀಕರಣದ ಪರಿಣಾಮವಾಗಿ ಅವೆಲ್ಲವೂ ಮುತ್ತಿ ಕೊಂಡಿವೆ. ಈಗ ನಾವು ಅದನ್ನು ಸಹಿಸಿಕೊಳ್ಳ ಬೇಕಷ್ಟೆ. ಇಲ್ಲವಾದರೆ ಕ್ರಿಕೆಟ್ ಆಟಕ್ಕೆ ತಿಲಾಂಜಲಿ ನೀಡಬೇಕು ಅಷ್ಟೆ.

**ಸೂರ್ಯದೇವ**
ನಂ. ೧೪, ಪೈಪ್‌ಲೇನ್, ವೈಯ್ಯಾಲಿಕಾವಲ್
ಬೆಂಗಳೂರು – ೫೬೦ ೦೦೩

## ಮೇಲ್ಜಾತಿಯ ಹಿಂದೂ ಮಹಿಳೆ

*ಮೂಲ : ಪಂಡಿತಾ ರಮಾಬಾಯಿ ಸರಸ್ವತಿ, ಕನ್ನಡಕ್ಕೆ : ಡಾ॥ ಡಿ. ಎ. ಶಂಕರ್*

**ಪುಟ :** ೮೦ **ಬೆಲೆ : ರೂ.** ೬೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಮೇಲ್ಜಾತಿಯವರೆಂದು ಮುಂಚೂಣಿಸ್ಥಾನ ಗಿಟ್ಟಿಸಿದ ಬ್ರಾಹ್ಮಣವರ್ಗದ ಮಹಿಳೆಯೇ ಅಲ್ಲದೆ ಇತರ ಹಿಂದೂಧರ್ಮದ ಸ್ತ್ರೀಯರ ಸ್ಥಿತಿಗತಿ ಹೇಗಿತ್ತು? ಇತ್ತೀಚಿನವರೆಗೂ ಆಕೆಯ ಬಾಳು ನರಕಸದೃಶವೇ. ಬ್ರಾಹ್ಮಣ ವರನಿಗೆ ಅತ್ಯಂತ ಶ್ರೇಷ್ಠ ಎನ್ನಲಾದ ಕನ್ಯಾದಾನ ಮಾಡಿ ಮಗಳನ್ನು ಧಾರೆಯೆರೆದರೆ ಮಾತಾಪಿತೃಗಳಿಗೆ ಸ್ವರ್ಗದಲ್ಲಿ ಸ್ಥಾನ ನಿಶ್ಚಿತವಂತೆ! ಬಾಲ್ಯವಿವಾಹ ಮತ್ತು ವಧುವರರ ವಯಸ್ಸಿನ ಅಂತರದಿಂದಾಗಿ ಬಾಲವಿಧವೆಯರಾಗುವುದೂ ತೀರ ಸಾಮಾನ್ಯವಾಗಿತ್ತು. ಹೆಣ್ಣೆಂದರೆ – ತೀರ್ಥಯಾತ್ರೆಗೆ ಹೆಂಡತಿ ಮಕ್ಕಳೊಂದಿಗೆ ತೆರಳಿದ ಸದ್ಗೃಹಸ್ಥನೋರ್ವ ಅಲ್ಲೇ ನದಿಗೆ ಸ್ನಾನಕ್ಕೆಂದು ಬಂದ ಆಳು ವರ್ಷದ ಬ್ರಾಹ್ಮಣ ವಿಧುರನಿಗೆ ತನ್ನ ೯ ವರ್ಷದ ಬಾಲೆಯನ್ನು ಧಾರೆಯೆರೆದುಕೊಟ್ಟು ನಿರಾಳವಾಗಿ ಊರಿಗೆ ಮರಳಿದ್ದು ಈ ಕೃತಿಯಲ್ಲಿ ಉಲ್ಲೇಖವಾಗಿದೆ. ವಧು ಇನ್ನಾರೂ ಅಲ್ಲ, ಈ ಕೃತಿಯ ಲೇಖಕಿಯ ತಾಯಿ! ನೂರಿನ್ನೂರು ವರ್ಷಗಳ ಹಿಂದಿನ ಈ ಕಥೆಯನ್ನು ಇಂದಿನವರು ನಂಬಲಾರರು. ಹಿಂದುಗಳಲ್ಲಿ ಇಂಥ ಪ್ರಶ್ನಾತೀತ ನಡವಳಿಕೆಗಳು ಸಂಪ್ರದಾಯದ ಹೆಸರಿನಲ್ಲಿದ್ದವು. ಅಂದಿನ ಸಮಾಜದಲ್ಲಿದ್ದ ಬಾಲ್ಯವಿವಾಹ – ವಿಧವಾ ಕೇಶಮುಂಡನ – ಸತಿಸಹಗಮನ ಇವೆಲ್ಲಾ ಒಂದನ್ನು ಬಿಟ್ಟು ಇನ್ನೊಂದಿಲ್ಲ. ಇಂಥ ಅತಿರೇಕಗಳು ಅಂದು ಸಾಮಾನ್ಯ. ಆಕೆಗೆ ವಿಧಿಸಿದ ಕಟ್ಟುಪಾಡುಗಳಂತೂ ಸ್ವರ್ಗದಲ್ಲಿ ಸದ್ಗತಿ ಎಂಬ ಕನ್ನಡಿಯ ಗಂಟು ತೋರಿಸಿ ಈ ಲೋಕದ ಬದುಕನ್ನು ನರಕವಾಗಿಸಿದಂಥವು... ಹೀಗೆ ಭಾರತದ ಮಹಿಳೆಯರ ಬಗ್ಗೆ ಕಳಕಳಿಯಿಂದ ಸ್ತ್ರೀ ವಿದ್ಯಾಭ್ಯಾಸ, ವಿಧವಾವಿವಾಹಗಳಂಥ ಅಗತ್ಯದ ಬಗ್ಗೆ ಬರೆಯಲಾದ ಅಪರೂಪದ ಇಂಗ್ಲಿಷ್ ಕೃತಿಯ ಕನ್ನಡ ಅನುವಾದ.



## ಕನ್ನಡ ಪದಗಳ ಒಳರಚನೆ

ಡಿ. ಎನ್. ಶಂಕರ ಭಟ್

**ಪುಟ :** ೨೪೦

**ಬೆಲೆ : ರೂ.** ೧೬೦

**ಭಾಷಾ ಪ್ರಕಾಶನ,** ಗಡಿಕಲ್ಲು, ಕೊಪ್ಪ – ೫೭೭ ೧೨೬

ಕನ್ನಡಕ್ಕೆ ತನ್ನದೇ ಆದ ಒಂದು ಚಾರಿತ್ರಿಕ ಅಧ್ಯಯನ ಇದೆ. ಅದನ್ನು ಹಲವಾರು ಭಾಷಾವಿಜ್ಞಾನಿಗಳು ಅಧ್ಯಯನ ಮಾಡಿ ಬರವಣಿಗೆಯಲ್ಲಿ ಹಿಡಿದಿಟ್ಟಿದ್ದಾರೆ. ಅಂತಹವರಲ್ಲಿ ಡಿ. ಎನ್. ಶಂಕರಭಟ್ಟರು ಕನ್ನಡನಾಡಿನಲ್ಲಿ ಕನ್ನಡದ ಬಗ್ಗೆ ಅತ್ಯಂತ ಕಾಳಜಿಪೂರ್ವಕವಾಗಿ ಮತ್ತು ಸಂಶೋಧನಾತ್ಮಕವಾಗಿ ಅತೀ ಸೂಕ್ಷ್ಮದೃಷ್ಟಿಯಿಂದ ನೋಡಿದ ಘನವಿದ್ವಾಂಸರು. ಕನ್ನಡ ಭಾಷೆಯು ಅಂಟುಭಾಷೆಯಾದ್ದರಿಂದ ಅದರಲ್ಲಿ ಒಳರಚನೆಯಿರುವ ಮತ್ತು ಒಳರಚನೆಯಿಲ್ಲದ ಪದಗಳೂ (ಪದ ಮತ್ತು ಪದರೂಪ ಪ್ರತ್ಯಯಗಳು) ಇವೆ. ಕನ್ನಡದ ಪದಗಳ ರಚನೆಯನ್ನು ನಾನಾ ರೀತಿಯ ಪದವಿಂಗಡಣೆಯನ್ನು, ನಾಮಪ್ರಕೃತಿ ಮತ್ತು ಧಾತುವಿನೊಂದಿಗೆ ಪ್ರತ್ಯಯಗಳು ಅಂಟಿಕೊಂಡು ಪದಗಳನ್ನು ಸಾಧಿಸುವ ಬಗೆ, ಜೋಡುಪದಗಳು, ಕ್ರಿಯಾಪದಗಳ ಆಂತರಿಕ ಕಟ್ಟು, ಗುಣಪದಗಳ ಒಳರಚನೆ ಹಾಗೂ ಕನ್ನಡ ಭಾಷೆಯಲ್ಲಿ ಎರವಲಾಗಿ ಬಂದ ಸಂಸ್ಕೃತ, ಇಂಗ್ಲಿಷ್, ಹಿಂದಿ ಮತ್ತು ಪರ್ಷಿಯನ್ ಮೊದಲಾದ ಬೇರೆ ಬೇರೆ ಭಾಷೆಗಳಿಂದ ಬಂದಿರುವ ಪದಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಿದ್ದಾರೆ. ಈ ಪುಸ್ತಕವು ಭಾಷಾವಿಜ್ಞಾನವನ್ನು ಅಭ್ಯಸಿಸುವ ಮೊದಲ ಓದುಗರ ಆಲೋಚನಾ ಶಕ್ತಿಯನ್ನು ದೊಡ್ಡದು ಮಾಡುತ್ತದೆ. ಕನ್ನಡ ಭಾಷೆಯ ಬಗೆಗೆ ಸಂಶೋಧನಾಸಕ್ತಿ ಹೊಂದಿರುವವರಿಗೆ ಹಲವಾರು ಚಿಂತನೆಗಳ ದಾರಿಯನ್ನು ತೋರಿಸುತ್ತದೆ. ಆ ದಾರಿಯಲ್ಲಿ ಪಯಣಿಸ ಬಯಸುವವರಿಗೆ ಇದೊಂದು ಉತ್ತಮ ಆಕರ.

– **ಶ್ರೀ ಶಿವಲಿಂಗಪ್ಪ ಸಿ. ಬಸವಣ್ಣೂರ್,** ಕಲಬುರಗಿ



## ಗಾಳಿಪಟ

*ಜಿ. ಶ್ರೀನಿವಾಸಮೂರ್ತಿ*

**ಪುಟ :** ೫೬ **ಬೆಲೆ : ರೂ.** ೪೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಮಕ್ಕಳಿಗೆ ಗಾಳಿಪಟ ತಯಾರಿಸಿ ಹಾರಿಸುವುದೆಂದರೆ ಎಲ್ಲಿಲ್ಲದ ಆನಂದ. ಬಣ್ಣಬಣ್ಣದ ವಿವಿಧ ವಿನ್ಯಾಸದ ಪಟಗಳು ಆಗಸದಲ್ಲಿ ಹಾರುತ್ತಿದ್ದರೆ ಮಕ್ಕಳೇಕೆ, ನಾವೂ ಭೂಮಿಯನ್ನೇ ಮರೆಯುತ್ತೇವೆ! ನಯನ ಮನೋಹರವಾಗಿ ಹಾರಾಡುವ ಈ ಪಟಗಳಿಗೆ ಚಾರಿತ್ರಿಕ ಹಿನ್ನೆಲೆಯೂ ಇದೆ. ದೇಶ ದೇಶಗಳ ಮಧ್ಯೆ ಗಾಳಿಪಟದ ಸ್ಪರ್ಧೆಗಳೂ ಮನರಂಜನಾ ಕ್ರೀಡೆಗಳೂ ನಡೆಯುತ್ತವೆ. ಹಬ್ಬಹರಿದಿನಗಳಲ್ಲಿ, ಸಂತೋಷ ಸಮಾರಂಭಗಳಲ್ಲಿ ಸ್ಥಾನ ಪಡೆದುಕೊಂಡ ಈ ಗಾಳಿಪಟದ ರಚನೆಗಳಲ್ಲಿ ವೈಜ್ಞಾನಿಕ ತತ್ವಗಳಿವೆ. ಅತ್ಯುತ್ತಮವಾಗಿ ಹಾರಬೇಕಾದರೆ ಗಾಳಿಯ ಚಲನೆಯ ಅರಿವು ಅತ್ಯವಶ್ಯ. ಮೊತ್ತಮೊದಲು ಗಾಳಿಪಟ ಹಾರಿದ್ದು ಚೀನಾದಲ್ಲಿ ಎಂಬ ದಾಖಲೆಯೊಂದಿಗೆ ಇಂದಿನವರೆಗೂ ಸಾಗಿಬಂದ ಅದರ ದಾರಿ, ತಯಾರಿಕೆಯ ವಿವರಗಳನ್ನೂ ಈ ಕೃತಿ ದಾಖಲಿಸಿದೆ. ವಿಶ್ವದಲ್ಲಿನ ಗಾಳಿಪಟಗಳ ಹಾರಾಟದ ಹಲವಾರು ದಾಖಲೆಗಳೂ ಇದರಲ್ಲಿ ಸಿಗುತ್ತವೆ. ಸುಮಾರು ಎರಡು ಸಾವಿರ ವರ್ಷಗಳಿಗೂ ಹಿಂದಿನ ಚರಿತ್ರೆಯನ್ನು ಹೊಂದಿದ ಪಟಗಳು ರಾಜರ ಕಾಲದಿಂದಲೂ ಎಲ್ಲ ಕ್ಷೇತ್ರಗಳಲ್ಲಿ ಕಾಲಿರಿಸಿವೆ. ಗಗನವೊಂದೇ – ವಿಶ್ವ ಒಂದೇ ಎಂಬ ಸಂದೇಶವನ್ನು ಸಾರುವ ಇವು ಏಕತಾ ಪ್ರತೀಕವಾಗಿ ನಿಂತಿವೆ. ಹಾರಾಟದ ಬಗ್ಗೆ ಇದೇ ಲೇಖಕರ ಇನ್ನೆರಡು ಪುಸ್ತಕಗಳು 'ವಿಮಾನವಿಜ್ಞಾನ' ಹಾಗೂ 'ಪಕ್ಷಿಗಳ ಹಾರಾಟ'.

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨

## ಹಸಬಿ (ಕವನ ಸಂಕಲನ)

ವಿನಯಾ

**ಪುಟ :** ೧೦೮ **ಬೆಲೆ : ರೂ.** ೯೦

**ಅಭಿನವ,** ೧೭/೧೮–೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು – ೫೬೦ ೦೪೦



'ಬಾಯಾರಿಕೆ', 'ನೂರು ಗೋರಿಯ ದೀಪ' ಕವನ ಸಂಕಲನಗಳ ಮೂಲಕ ಕನ್ನಡ ಕಾವ್ಯಲೋಕದಲ್ಲಿ ಬೆಳೆದುನಿಂತ ಸಂವೇದನಾಶೀಲ ಕವಯಿತ್ರಿ ಡಾ॥ ವಿನಯಾ. ಈಗ ಅವರ ಮೂರನೇ ಕವನ ಸಂಕಲನ 'ಹಸಬಿ' ಪ್ರಕಟವಾಗಿದೆ. ಮನದ ಮೆಲಕುಗಳಿಗೆ ಭಾವ–ಭಾಷೆಯನ್ನು ಬೆಸೆದು ಸಮರ್ಥವಾಗಿ ಸಂವಹನಿಸುವ ಕಲೆ ವಿನಯಾಗೆ ಕರಗತವಾಗಿದೆ. ಪ್ರಸ್ತುತ 'ಹಸಬಿ' ಕವನ ಸಂಕಲನದಲ್ಲಿ ತಾಯಿತನದ ಮೂಲಕ, ಪುರಾಣ, ಇತಿಹಾಸ, ವರ್ತಮಾನಗಳ ಘಟನೆ, ವಿದ್ಯಮಾನ, ಪಾತ್ರಗಳನ್ನು ವಸ್ತುವನ್ನಾಗಿಸಿ, ಪ್ರತಿಮೆಗಳನ್ನಾಗಿಸಿ, ಭವಿಷ್ಯದ ಕನಸುಗಳನ್ನೂ ಹೊಸೆದು ಅಭಿವ್ಯಕ್ತಗೊಳಿಸಿದ ನಲವತ್ತಾರು ಕವನಗಳಿವೆ. ಅಕ್ಕನಂತೆ ವ್ಯವಸ್ಥೆಯ ದಾಳಿಗೆ ಸಿಲುಕಿದ ಹೆಣ್ಣಾಗಿ, ಬಯಲನ್ನೂ, ಬಯಲು ಒಳಗೊಂಡ ಎಲ್ಲವನ್ನೂ ಪ್ರಶ್ನಿಸುವ ಮಹಿಳೆ ಮಾತ್ರವಲ್ಲ, ಮಾನವಕುಲದ ವಕ್ತಾರೆಯಾಗಿದ್ದಾಳೆ ಈ ಕವನಗಳ ಹಿಂದಿರುವ ಕವಯಿತ್ರಿ.

ಪ್ರತಿ ಮುಂಜಾವಿಗೂ ನನ್ನ ಬಿನ್ನಹವಿದೆ
ಕಿರಣದೆಳೆಗಳು ಹರಕೆಯ ಕೈ ನೀರಾಗಲಿ
ಬರಿ ಉಡಿಗಳಲ್ಲಿ ಕಡೆಗೆ ಈ
ನಿರೀಕ್ಷೆಯಾದರೂ ತುಂಬಲಿ

ಮೇಲಿನ ಕವನದ ಸಾಲುಗಳು ಇಡೀ ಸಂಕಲನದ ಕವನಗಳ, ಕವಯಿತ್ರಿಯ ಆಶಯಗಳನ್ನು ಬಿಂಬಿಸುತ್ತವೆ. ಇದು ಅವರ ಆಶಯ ಮಾತ್ರವಲ್ಲ ಮಹಿಳೆಯೂ ಸೇರಿದಂತೆ ಒಟ್ಟಾರೆ ನೆಮ್ಮದಿಯ ನಾಳೆಗಳನ್ನು ಬಯಸುವ ದೇಶ, ಧರ್ಮಗಳ ಗಡಿ ಮೀರಿದ ಎಲ್ಲ ಮನುಜ ಮತದವರ ಆಶಯ. ಈ ಆಶಯದ ಹಿಂದಿರುವ ತಲ್ಲಣ, ತಹತಹಿಕೆಗಳನ್ನು ಇಲ್ಲಿನ ಕವನಗಳು ಸಮರ್ಥವಾಗಿ ಬಿಂಬಿಸುತ್ತವೆ.

– *ಶ್ರೀಸುಮಿತ್ರಾಸುತ, ಅಗಸಬಾಳ*





# ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ





ಶ್ರೀ ಸಿದ್ದರಾಮಯ್ಯ
ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

ಶ್ರೀ ಪಿ. ಟಿ. ಪರಮೇಶ್ವರ ನಾಯ್ಕ
ಮಾನ್ಯ ಕಾರ್ಮಿಕ ಸಚಿವರು
ಕರ್ನಾಟಕ ಸರ್ಕಾರ

## ಹಿನ್ನೆಲೆ

ಕಟ್ಟಡ ಮತ್ತು ಇತರೆ ನಿರ್ಮಾಣ ಕ್ಷೇತ್ರದಲ್ಲಿ ದುಡಿಯುವ ಕಾರ್ಮಿಕರು ಅಸಂಘಟಿತ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಇಂತಹ ಕಾರ್ಮಿಕರ ಅನುಕೂಲಕ್ಕಾಗಿ ಕೇಂದ್ರ ಸರ್ಕಾರವು 1996ರಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ, 1996 ಹಾಗೂ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆ, 1996 ಅನ್ನು ಜಾರಿಗೆ ತಂದಿರುತ್ತದೆ. ಸದರಿ ಕಾಯ್ದೆಗಳಿಗೆ ಕರ್ನಾಟಕ ಸರ್ಕಾರವು 2006ರಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕರ್ನಾಟಕ ನಿಯಮಗಳನ್ನು ರೂಪಿಸಿರುತ್ತದೆ.

ಸದರಿ ನಿಯಮಗಳನ್ನು ಅನುಷ್ಠಾನಕ್ಕೆ ತರಲು 2007ರಲ್ಲಿ ಕರ್ನಾಟಕ ಸರ್ಕಾರವು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯನ್ನು ರಚಿಸಿರುತ್ತದೆ.

**ವಯೋಮಿತಿ: 18 ರಿಂದ 60 ವರ್ಷದೊಳಗಿರಬೇಕು.**

**ನೋಂದಣಿಗಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳು:** (ಎ) ನಮೂನೆ–5ರಲ್ಲಿ ಅರ್ಜಿ, (ಬಿ) ನಮೂನೆ–6ರಲ್ಲಿ ನಾಮ ನಿರ್ದೇಶನ ಅರ್ಜಿ, (ಸಿ) ಮೂರು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರಗಳು, (ಡಿ) ಶಾಲಾ ದಾಖಲಾತಿ, ಜನನ ಪ್ರಮಾಣ ಪತ್ರ, ವಾಹನ ಚಾಲನಾ ಪರವಾನಗಿ, ಪಾಸ್‌ಪೋರ್ಟ್, ಎಪಿಕ್‌ಕಾರ್ಡ್, ಆಧಾರ್‌ಕಾರ್ಡ್, ಎಲ್‌ಐಸಿ ವಿಮೆ ಪಾಲಿಸಿ ಅಥವಾ ಅರ್ಜಿದಾರರಿಂದ ಸಲ್ಲಿಸಲ್ಪಡುವ ಅವರ ವಯಸ್ಸಿನ ಕುರಿತಾದ ಪ್ರಮಾಣ ಪತ್ರ, ಗ್ರಾಮ ಲೆಕ್ಕಿಗರು ಅಥವಾ ಕಂದಾಯ ನಿರೀಕ್ಷಕರು ಅಥವಾ ಸ್ಥಳೀಯ ಸಂಸ್ಥೆಯ ಅಧಿಕಾರಿಗಳಿಂದ ನೀಡಲ್ಪಡುವ ಜನನ ಪ್ರಮಾಣ ಪತ್ರ ಅಥವಾ ಸಹಾಯಕ ಶಸ್ತ್ರ ಚಿಕಿತ್ಸಕರು ಅಥವಾ ಅವರಿಗಿಂತ ಮೇಲ್ದರ್ಜೆಯ ಸರ್ಕಾರಿ ಆಸ್ಪತ್ರೆ/ಇಎಸ್‌ಐ ಆಸ್ಪತ್ರೆ/ಸ್ಥಳೀಯ ಸಂಸ್ಥೆಯ ಆಸ್ಪತ್ರೆಗಳ ವೈದ್ಯರಿಂದ ನೀಡಲ್ಪಡುವ ಜನನ ಮತ್ತು ಮರಣ ದೃಢೀಕರಣ ಪತ್ರ ಉದಾ: ಕಾರ್ಪೋರೇಷನ್, ಸಿಟಿ ಮುನಿಸಿಪಲ್ ಕಾರ್ಪೋರೇಷನ್, ಟೌನ್ ಮುನಿಸಿಪಲ್ ಕಾರ್ಪೋರೇಷನ್ ಮತ್ತು ಜಿಲ್ಲಾ ಪಂಚಾಯಿತ್ ಅಥವಾ ಎಂಬಿಬಿಎಸ್ ಪದವಿ ಪಡೆದು ವೈದ್ಯಕೀಯ ವೃತ್ತಿ ಅಭ್ಯಾಸ ಮಾಡುತ್ತಿರುವ ಅಥವಾ ಆಯುರ್ವೇದ, ಯುನಾನಿ ಅಥವಾ ಹೋಮಿಯೋಪತಿ ಪದವಿ ಪಡೆದ ನೋಂದಾಯಿತ ವೈದ್ಯರಿಂದ ದೃಢೀಕರಣ ಪತ್ರ, ನೋಂದಾಯಿತ ಖಾಸಗಿ ಬಿ.ಡಿ.ಎಸ್. ವಿದ್ಯಾರ್ಹತೆ ಹೊಂದಿದ ದಂತ ವೈದ್ಯರಿಂದ ನೀಡಲ್ಪಟ್ಟ ಪ್ರಮಾಣ ಪತ್ರ (ಇ) ಪ್ರಸ್ತುತ ಮಾಲೀಕರಿಂದ ಅಥವಾ ಟ್ರೇಡ್ ಯೂನಿಯನ್ ಕಾಯ್ದೆ, 1926ರಡಿ ನೋಂದಾಯಿತ ಕಾರ್ಮಿಕ ಸಂಘದಿಂದ ಅಥವಾ ಕಾರ್ಯ ವ್ಯಾಪ್ತಿಯುಳ್ಳ ಕಾರ್ಮಿಕ ನಿರೀಕ್ಷಕರು ಅಥವಾ ಅವರಿಗಿಂತ ಉನ್ನತ ಅಧಿಕಾರಿಗಳಿಂದ ನೀಡಲ್ಪಡುವ ಪ್ರಮಾಣ ಪತ್ರ, ಕ್ರೆಡಾಯ್‌ನ ಅಧ್ಯಕ್ಷರು/ಕಾರ್ಯದರ್ಶಿ ಅಥವಾ ನಾಮ ನಿರ್ದೇಶಿತರಿಂದ ಅಥವಾ ಬಿಲ್ಡರ್ಸ್ ಅಸೋಸಿಯೇಷನ್ ಆಫ್ ಇಂಡಿಯಾ ಅಥವಾ ಕರ್ನಾಟಕ ಸ್ಟೇಟ್ ಕಂಟ್ರಾಕ್ಟರ್ಸ್ ಅಸೋಸಿಯೇಷನ್ ಇವರುಗಳಿಂದ ನೀಡಲ್ಪಡುವ ಉದ್ಯೋಗ ದೃಢೀಕರಣ ಪತ್ರ ಇವುಗಳಲ್ಲಿ ಯಾವುದಾದರೊಂದು ದಾಖಲೆ.

**ನೋಂದಣಿ ಶುಲ್ಕ: ರೂ. 25/– ಹಾಗೂ ನವೀಕರಣ ಶುಲ್ಕ: ಪ್ರತಿ ಮೂರು ವರ್ಷಕ್ಕೊಮ್ಮೆ ರೂ. 150/–.**

**1. ಒಳರೋಗಿ ಚಿಕಿತ್ಸೆಗಾಗಿ ಧನಸಹಾಯ :** ಸರ್ಕಾರಿ, ಸರ್ಕಾರದಿಂದ ಅನುಮೋದಿತ ಖಾಸಗಿ ಆಸ್ಪತ್ರೆ ಮತ್ತು ಆರ್‌ಎಸ್‌ಬಿವೈರಡಿ ಮಾನ್ಯತೆ ಪಡೆದ ಆಸ್ಪತ್ರೆಗಳಲ್ಲಿ ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ರೂ. 400/– ರಿಂದ ರೂ. 6,000/–ಗಳವರೆಗೆ ಧನಸಹಾಯ.

**2. ಅಪಘಾತ ಪರಿಹಾರ :** (i) ನೋಂದಾಯಿತ ಫಲಾನುಭವಿಯು ಕೆಲಸ ಮಾಡುತ್ತಿದ್ದ ಸಮಯದಲ್ಲಿ ಮತ್ತು ಕೆಲಸದ ಸ್ಥಳದಿಂದ ಮನೆಗೆ ಹೋಗುವಾಗ ಅಥವಾ ಮನೆಯಿಂದ ಕೆಲಸಕ್ಕೆ ಹೋಗುವ ಮಾರ್ಗದ ಮಧ್ಯದಲ್ಲಿ ಅಪಘಾತಕ್ಕೀಡಾಗಿ ಮರಣ ಹೊಂದಿದ್ದಲ್ಲಿ ಅಥವಾ ಫಲಾನುಭವಿಯು ಸಂಪೂರ್ಣ ಶಾಶ್ವತ ದುರ್ಬಲತೆಗೊಂಡಲ್ಲಿ ಅವನ/ಅವಳ ಅವಲಂಬಿತರು ರೂ. 2,00,000/–ಗಳ ಪರಿಹಾರ ಪಡೆಯಬಹುದು. (ii) ಇಂತಹ ಅಪಘಾತಗಳಲ್ಲಿ ಭಾಗಶಃ/ಶಾಶ್ವತ ಅಂಗವಿಕಲರಾದಲ್ಲಿ, ಅಂಗವಿಕಲತೆಯ ಶೇಕಡಾವಾರು ಆಧಾರದ ಮೇಲೆ ಅನುಪಾತಕ್ಕನುಗುಣವಾಗಿ ಪರಿಹಾರಕ್ಕೆ ಅರ್ಹರು (ಉದಾ: ಶೇ. 40ರಷ್ಟು ಅಂಗವಿಕಲತೆ ಉಂಟಾದಲ್ಲಿ ಅಂತಹ ಫಲಾನುಭವಿಯು ರೂ. 80,000/–ಗಳ ಪರಿಹಾರಕ್ಕೆ ಅರ್ಹರು).

**3. ಪ್ರಮುಖ ವೈದ್ಯಕೀಯ ಧನಸಹಾಯ:** ನೋಂದಾಯಿತ ಫಲಾನುಭವಿಯ ಹೃದಯ ಶಸ್ತ್ರಚಿಕಿತ್ಸೆ, ಕಿಡ್ನಿ ಜೋಡಣೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು ಚಿಕಿತ್ಸೆ, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಆಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೋಕೇಶನ್ ಚಿಕಿತ್ಸೆ, ಸಾಮಾನ್ಯ ಶಸ್ತ್ರಚಿಕಿತ್ಸೆಗಳಿಗೆ ರೂ. 2,00,000/–ಗಳವರೆಗೆ ಸಿ.ಜಿ.ಎಚ್.ಎಸ್. ದರಗಳ ಮಿತಿಗೆ ಒಳಪಟ್ಟು ಧನಸಹಾಯ.

**4. ಅಂಗವಿಕಲತೆ ಪಿಂಚಣಿ:** *

**5. ಸ್ವಾಭಾವಿಕ ಮರಣ:** ನೋಂದಾಯಿತ ಫಲಾನುಭವಿಯು ಮೃತರಾದಾಗ ಅವನ/ಅವಳ ಅಂತ್ಯಕ್ರಿಯೆಗಾಗಿ ರೂ. 4,000/– ಮತ್ತು ಅವರ ಶಾಸನಬದ್ಧ ವಾರಸುದಾರರಿಗೆ ರೂ. 50,000/–ಗಳ ಎಕ್ಸ್‌ಗ್ರೇಷಿಯಾ ಧನಸಹಾಯ.

**6. ನೋಂದಾಯಿತರಲ್ಲದ ನಿರ್ಮಾಣ ಕಾರ್ಮಿಕರಿಗೆ ಎಕ್ಸ್‌ಗ್ರೇಷಿಯಾ:** ನೋಂದಾಯಿತರಲ್ಲದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ನಿರ್ಮಾಣ ಹಂತದಲ್ಲಿರುವ ಕಟ್ಟಡ ಕುಸಿತದಿಂದ ಅಪಘಾತ ಉಂಟಾಗಿ ಮೃತರಾದಲ್ಲಿ, ಅವರ ಅವಲಂಬಿತರು ರೂ. 50,000/–ಗಳ ಪರಿಹಾರ ಪಡೆಯಲು ಅರ್ಹರು. ಇಂತಹುದೇ ಅಪಘಾತದಲ್ಲಿ ನಿರ್ಮಾಣ ಕಾರ್ಮಿಕರು ಗಂಭೀರವಾಗಿ ಗಾಯಗೊಂಡಲ್ಲಿ ರೂ. 10,000/–ಗಳ ಎಕ್ಸ್‌ಗ್ರೇಷಿಯಾ ಪರಿಹಾರ ಪಡೆಯಲು ಅರ್ಹರಾಗುತ್ತಾರೆ.

**7. ಹೆರಿಗೆ ಸೌಲಭ್ಯ:** ನೋಂದಾಯಿತ ಮಹಿಳಾ ಫಲಾನುಭವಿಗೆ ಮೊದಲ ಎರಡು ಹೆರಿಗೆಗಳಿಗೆ ತಲಾ ರೂ. 15,000/–ಗಳ ಧನಸಹಾಯ.

**8. ಶೈಕ್ಷಣಿಕ ಧನಸಹಾಯ:*** ನೋಂದಾಯಿತ ಫಲಾನುಭವಿಯ ಇಬ್ಬರು ಮಕ್ಕಳ ವ್ಯಾಸಂಗಕ್ಕೆ ಅನುಗುಣವಾಗಿ ಈ ಕೆಳಕಂಡಂತೆ ಧನಸಹಾಯ:

i. 5, 6 ಹಾಗೂ 7ನೇ ತರಗತಿ ವ್ಯಾಸಂಗ ಮಾಡುತ್ತಿರುವವರಿಗೆ ಪ್ರತಿ ವರ್ಷಕ್ಕೆ ರೂ. 2,000/–
ii. 8 ಹಾಗೂ 9ನೇ ತರಗತಿ ವ್ಯಾಸಂಗ ಮಾಡುತ್ತಿರುವವರಿಗೆ ಪ್ರತಿ ವರ್ಷಕ್ಕೆ ರೂ. 3,000/–
i. ಎಸ್.ಎಸ್.ಎಲ್.ಸಿ. ವ್ಯಾಸಂಗ ಮಾಡುತ್ತಿರುವವರಿಗೆ ರೂ. 5,000/–
ii. ಪ್ರಥಮ ಅಥವಾ ದ್ವಿತೀಯ ಪಿ.ಯು.ಸಿ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ ರೂ. 5,000/–
iii.ಐಟಿಐ/ಡಿಪ್ಲೋಮಾ ವ್ಯಾಸಂಗ ಮಾಡುತ್ತಿರುವವರಿಗೆ ಪ್ರತಿ ವರ್ಷಕ್ಕೆ ರೂ. 5,000/–
iv.ಪದವಿ ವ್ಯಾಸಂಗ ಮಾಡುತ್ತಿರುವವರಿಗೆ ಪ್ರತಿ ವರ್ಷಕ್ಕೆ ರೂ. 5,000/–
v. ಸ್ನಾತಕೋತ್ತರ ಪದವಿ ವ್ಯಾಸಂಗ ಮಾಡುತ್ತಿರುವವರಿಗೆ ಪ್ರತಿ ವರ್ಷಕ್ಕೆ ರೂ. 15,000/–
vi.ವೈದ್ಯಕೀಯ/ಇಂಜಿನಿಯರಿಂಗ್ ಪದವಿ ವ್ಯಾಸಂಗ ಮಾಡುತ್ತಿರುವವರಿಗೆ ಸರ್ಕಾರವು ಅರ್ಹತೆಯ ಸ್ಥಾನಕ್ಕೆ ನಿಗದಿಪಡಿಸಿದ ಶುಲ್ಕ ಪಾವತಿ ಮತ್ತು ಪ್ರತಿ ತಿಂಗಳಿಗೆ ರೂ. 1,000/–ಗಳ ಹಾಜರಾತಿ ಭತ್ಯೆ.

**9. ವೈವಾಹಿಕ ಧನಸಹಾಯ:** ನೋಂದಾಯಿತ ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗಾಗಿ ತಲಾ ರೂ. 50,000/– ಗಳ ಧನಸಹಾಯ.

**10. ಉಪಕರಣ ಖರೀದಿ ಸಾಲ:** ನೋಂದಾಯಿತ ಫಲಾನುಭವಿಯು ನಿರ್ಮಾಣ ಕೆಲಸಗಳಿಗೆ ಸಂಬಂಧಿತ ಉಪಕರಣಗಳನ್ನು ಖರೀದಿಸಲು ರೂ. 5,000/–ಗಳವರೆಗೆ ಧನಸಹಾಯ.

**11. ಪಿಂಚಣಿ:** *

**12. ಮನೆ ಕಟ್ಟುವುದಕ್ಕೆ/ಖರೀದಿಸುವುದಕ್ಕೆ ಧನಸಹಾಯ:** *

(* ನೋಂದಾಯಿತ ಫಲಾನುಭವಿಗಳಿಗೆ ಮಂಡಳಿಯಿಂದ ಸಿಗುವ ಸೌಲಭ್ಯಗಳಲ್ಲಿ ಕೆಲವು ತಿದ್ದುಪಡಿ ಹಂತದಲ್ಲಿರುತ್ತದೆ.)

**ನೋಂದಣಿ ಹಾಗೂ ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಬೇಕಾದ ಕಛೇರಿಗಳು:** ಉಪಕಾರ್ಮಿಕ ಆಯುಕ್ತರು/ಸಹಾಯಕ ಕಾರ್ಮಿಕ ಆಯುಕ್ತರು/ ಕಾರ್ಮಿಕ ಅಧಿಕಾರಿ/ಹಿರಿಯ ಕಾರ್ಮಿಕ ನಿರೀಕ್ಷಕರು/ಕಾರ್ಮಿಕ ನಿರೀಕ್ಷಕರು/ಬೆಂಗಳೂರು ಮೆಟ್ರೋರೈಲು ನಿಗಮ ನಿಯಮಿತದ ಮುಖ್ಯ ಅಭಿಯಂತರರು.

**ಅಥವಾ**

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ,** ಕೌಶಲ್ಯ ಭವನ, ಡೈರಿ ಸರ್ಕಲ್, ಸರ್ಕಾರಿ ಐ.ಟಿ.ಐ. ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560 029.

✆ 080–26644312/13/14/15. ಫ್ಯಾಕ್ಸ್ : 080–22453646. ವೆಬ್‌ಸೈಟ್ : www.karbwwb.com ಇ–ಮೇಲ್ : karbuildworkerswelfare@gmail.com



ಮುಕ್ತ ಮಾರುಕಟ್ಟೆ ವ್ಯವಸ್ಥೆಯಲ್ಲಿ ಗಂಡು, ಹೆಣ್ಣುಗಳು ಲಿಂಗಾತೀತವಾಗಿ ಎಡೆಬಿಡದೆ ದುಡಿಯುವ ಅನಿವಾರ್ಯತೆ ಎದುರಾಗಿರುವಾಗ ಕಲಿಯುವುದು ಮಾತ್ರ ಪ್ರತ್ಯೇಕವೆಂದರೆ ಸಾಧ್ಯವೆ ?

ಡಾ॥ ಮೀನಾಕ್ಷಿ ಬಾಳಿ

# ಹೆಣ್ಣುಮಕ್ಕಳಿಗೆ ಪ್ರತ್ಯೇಕ ಶಿಕ್ಷಣ ವ್ಯವಸ್ಥೆ ಅನಗತ್ಯ

*ವೈವಾಹಿಕೋ ವಿಧಿಃ ಸ್ತ್ರೀಣಾಂ ಸಂಸ್ಕಾರೋ ವೈದಿಕಃ ಸ್ಮೃತಃ ।*
*ಪತಿಸೇವಾ ಗುರೌ ವಾಸೋ ಗೃಹಾರ್ಥೋಗ್ನಿ ಪರಿಕ್ರಿಯಾ ॥*

ಸ್ತ್ರೀಯರಿಗೆ ವಿಧಿಪೂರ್ವಕವಾದ ವಿವಾಹವೇ ಸಂಸ್ಕಾರವು. ಈ ವಿವಾಹ ವಿಧಿಯು ಮಂತ್ರೋಕ್ತವಾಗಿ ಮಾಡಲ್ಪಡುತ್ತದೆ. ಸ್ತ್ರೀಯರಿಗೆ ಪತಿಸೇವೆಯೆ ಗುರುಕುಲವಾಸವಿದ್ದಂತೆ. ಗೃಹಕೃತ್ಯವೆ ಅಗ್ನಿಕಾರ್ಯವಿದ್ದಂತೆ. ಅವರಿಗೆ ಗುರುಕುಲವಾಸ ಅಗ್ನಿಹೋತ್ರಾದಿಗಳು ಇಲ್ಲ. – ಹೀಗೆಂದು ಮನುಸ್ಮೃತಿಯ ಎರಡನೆ ಅಧ್ಯಾಯದ ೬೭ನೇ ಶ್ಲೋಕದಲ್ಲಿ ಹೇಳಲಾಗಿದೆ. ಗುರುಕುಲವಾಸ ಎಂದರೆ ಪ್ರಾಚೀನ ಕಾಲದಲ್ಲಿ ವಿದ್ಯೆ ಪಡೆಯುವ ವ್ಯವಸ್ಥೆಯಾಗಿತ್ತು. ಇಲ್ಲಿ ತುಂಬ ಸ್ಪಷ್ಟವಾಗಿ ಮಹಿಳೆಯರು ಅಕ್ಷರಲೋಕದಿಂದ ದೂರವೆ ಇರಬೇಕೆಂದು ವಿಧಿಸಲಾಗಿದೆ. ಸಾವಿರಾರು ವರ್ಷಗಳವರೆಗೆ ಅಕ್ಷರಜ್ಞಾನದಿಂದ ಉದ್ದೇಶಪೂರ್ವಕವಾಗಿಯೇ ದೂರ ಉಳಿಸಿದ್ದ ದುಡಿಯುವ ವರ್ಗ ಬ್ರಿಟಿಷ್ ಭಾರತದಲ್ಲಿಯೆ ಸಾರ್ವಜನಿಕ ಶಿಕ್ಷಣ ಪದ್ಧತಿಗೆ ತೆರೆದುಕೊಂಡದ್ದು ಚಾರಿತ್ರಿಕ ವ್ಯಂಗ್ಯವೆ ಸರಿ.

ಕ್ರಿ. ಶ. ೧೮೪೮ ಆಗಸ್ಟ್ ತಿಂಗಳಲ್ಲಿ ಭಾರತದ ಸ್ತ್ರೀ ಶಿಕ್ಷಣದ ಪಿತಾಮಹ ಮಹಾತ್ಮ ಜ್ಯೋತಿಬಾ ಫುಲೆಯವರು ಪುಣೆಯಲ್ಲಿ ಪ್ರಪ್ರಥಮ ಬಾರಿಗೆ ಮಹಿಳೆಯರಿಗೆಂದು, ಅದೂ ದಲಿತ ಮಹಿಳೆಯರಿಗೆಂದು ಶಾಲೆ ಪ್ರಾರಂಭಿಸಿದಾಗ ಹಿಂದೂ ಸನಾತನವಾದಿಗಳು ಮೈಮೇಲೆ ಬೆಂಕಿ ಬಿದ್ದಂತೆ ಬೊಬ್ಬೆ ಹಾಕಿದ್ದರು. ಶಾಸ್ತ್ರದ ಪ್ರಕಾರ ಶೂದ್ರರಿಗೆ ಮತ್ತು ಮಹಿಳೆಯರಿಗೆ ವಿದ್ಯೆಯನ್ನು ಪಡೆಯುವ ಅಧಿಕಾರವಿಲ್ಲ; ಅವರಿಗೆ ಶಿಕ್ಷಣ ನೀಡುವುದೆಂದರೆ ದೇವರು, ಧರ್ಮ, ಸಮಾಜಗಳ ವಿರುದ್ಧ ವರ್ತಿಸಿದಂತೆ; ಹುಡುಗಿಯರಿಗೆ ಕಲಿಸುವುದೆಂದರೆ ಹಿಂದೂ ಧರ್ಮದ ಮೇಲೆ ಭಯಂಕರ ಅನ್ಯಾಯ ಮತ್ತು ಪಾತಕವೆಸಗಿದಂತೆ; ಪುರುಷರು ಕಲಿಸುವ ಶಾಲೆಗಳಿಗೆ ಹುಡುಗಿಯರನ್ನು ಕಳಿಸುವುದು ಬಹು ದೊಡ್ಡ ಅಪರಾಧ ಎಂದು ಅಂದಿನ ಸನಾತನವಾದಿಗಳು ಹುಯಿಲೆಬ್ಬಿಸಿದ್ದರು. ಶತಶತಮಾನಗಳಿಂದ ದೇವರು, ಧರ್ಮ, ಸಂಸ್ಕೃತಿಗಳ ನೆವದಲ್ಲಿ ಮಹಿಳೆಯರ ಮೇಲೆ ನಡೆಯುತ್ತಿದ್ದ ಹಿಂಸೆ, ಕ್ರೌರ್ಯಗಳನ್ನು ಕಣ್ಣಾರೆ ಕಂಡು ನಲುಗಿದ್ದ ಜ್ಯೋತಿಬಾ ಈ ಎಲ್ಲ ಸಂಕಟಗಳಿಂದ ಮಹಿಳೆಯನ್ನು ಬಿಡುಗಡೆಗೊಳಿಸುವ ದಾರಿಗಾಗಿ ಹುಡುಕಾಟ ನಡೆಸಿದ್ದರು. ತಕ್ಷಣಕ್ಕೆ ಅವರಿಗೆ ವಸಾಹತುಶಾಹಿ ಶಿಕ್ಷಣ ಪದ್ಧತಿಯಲ್ಲಿ ಒಂದು ಸಣ್ಣ ಪರಿವರ್ತನೆಯ ಎಳೆ ಕಾಣಿಸಿಕೊಂಡಿತು. ಮಹಿಳೆಯರಿಗೆ ಶಿಕ್ಷಣ ದಿಂದಾದರೂ ಕನಿಷ್ಠ ಬಿಡುಗಡೆ ಸಿಕ್ಕೀತು ಎಂದು ಆಶಿಸಿದ್ದರು. ಆ ಸಂದರ್ಭದ ಚಾರಿತ್ರಿಕ ಸಂಗತಿಗಳನ್ನು ವಿಶ್ಲೇಷಣೆಗೊಳಪಡಿಸಿಯೇ ಸ್ತ್ರೀ ಶಿಕ್ಷಣ ಕುರಿತು ಗಟ್ಟಿಯಾದ ನಿಲುವು ತಾಳಿದ್ದರು. ಪ್ರಾಣ ತೆತ್ತಾದರೂ ಸರಿಯೆ, ಮಹಿಳೆಯರಿಗೆ ವಿದ್ಯೆ ಕಲಿಸಬೇಕೆಂದು ಹಟತೊಟ್ಟರು. ಆ ಹೊತ್ತು ಅಕ್ಷರ ಪಡೆದವರ ಸಂಖ್ಯೆಯೆ ಬೆರಳೆಣಿಕೆಯಷ್ಟಿತ್ತು. ಅಂಥದರಲ್ಲಿ ಮೇಲ್ವರ್ಗದ, ಮೇಲ್ಜಾತಿಯ ಪುರುಷರು ಮಾತ್ರ ಪರಂಪರಾಗತ ವಿದ್ಯೆ ದಕ್ಕಿಸಿಕೊಂಡು ಎಲ್ಲ ಬಗೆಯ ಸೌಲಭ್ಯಗಳನ್ನು ಹೊಂದಿದ್ದರು. ಈ ವರ್ಗವು ಇತರರಿಗೆ ವಿದ್ಯೆಯು ದಕ್ಕದಂತೆ ಕಾವಲು ಕಾಯುವುದನ್ನು ರೂಢಿಸಿಕೊಂಡಿತ್ತು. ಆದರೆ ಬ್ರಿಟಿಷ್ ಸಾಮ್ರಾಜ್ಯಶಾಹಿಯು ತನ್ನ ವ್ಯವಹಾರದ ಅನುಕೂಲಕ್ಕಾಗಿ ಭಾರತದಲ್ಲಿ ಸಾರ್ವಜನಿಕ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿತು. ಬ್ರಿಟಿಷರ ಈ ಸ್ವಾರ್ಥವು ದೇಶೀ ಜನತೆಯ ಬದುಕಿನಲ್ಲಿ ಪರಿವರ್ತನೆಗೆ ನಾಂದಿ ಹಾಡಿತು. ಆಧುನಿಕ ವಿಚಾರವಾದದತ್ತ ಯುವಜನತೆ ಮುಖ ಮಾಡಲು ಸುರುವಿಟ್ಟುಕೊಂಡರು. ಜ್ಯೋತಿಬಾರಂಥ ತರುಣರು ತಮಗೆ ಸಿಕ್ಕ ಈ ಅವಕಾಶಗಳನ್ನು ಸಮರ್ಥವಾಗಿ ಬಳಸಿಕೊಳ್ಳಲು ಮುಂದಾದರು. ಅವರಿಗೆ ಶೂದ್ರಾದಿ ದಲಿತ ಮತ್ತು ಮಹಿಳೆಯರನ್ನು ಅಕ್ಷರಲೋಕಕ್ಕೆ ಎಳೆದು ತರುವ ಮೂಲಕವೆ ಶೋಷಿತರಲ್ಲಿ ಎಚ್ಚರ ಮೂಡಿಸಬಹುದೆಂಬ ನಂಬಿಕೆ ಇತ್ತು. ಆದ್ದರಿಂದಲೆ ಜ್ಯೋತಿಬಾ ಅಂದಿನ ಮಡಿವಂತ ಸಮಾಜವನ್ನು ಎದುರು ಹಾಕಿಕೊಂಡು ದಲಿತರು ಮತ್ತು ಮಹಿಳೆಯರಿಗಾಗಿ ಶಾಲೆಗಳನ್ನು ತೆರೆದರು. ಮಹಿಳೆಯರಿಗೆ ಶಾಲೆ ಪ್ರಾರಂಭಿಸುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಏಕೆಂದರೆ ಹೆಣ್ಣುಮಕ್ಕಳಿಗೆ ವಿದ್ಯೆಯೇ ವರ್ಜ್ಯ ಎಂದು ನಂಬಿದ್ದ ಸಮಾಜದಲ್ಲಿ

ಅವರನ್ನು ಓದಿಸಲು ಮುಂದೆ ಬರುವವರಾದರೂ ಎಲ್ಲಿದ್ದರು ? ಯಾರಿದ್ದರು ? ಹೆಣ್ಣುಮಕ್ಕಳನ್ನು ಮನೆಯ ಗಂಡಸರೇ ಕಣ್ಣೆತ್ತಿ ನೋಡುವಂತಿರಲಿಲ್ಲ. ಮಹಿಳೆಯರಾರೂ ವರಿಸಿದ ಗಂಡನನ್ನಲ್ಲದೆ ಇತರ ಪುರುಷರನ್ನು ನೋಡಬಾರದು; ಸ್ವಂತ ಸಹೋದರನೆ ಇರಲಿ, ಅವನೊಂದಿಗೆ ಮುಕ್ತವಾಗಿ ಮಾತಾಡಬಾರದು; ಸಾಧ್ಯವಾದಷ್ಟು ಮಹಿಳೆಯರು ಮನೆಯ ನಾಲ್ಕು ಗೋಡೆಗಳ ಮಧ್ಯೆ ಮರ್ಯಾದೆಯಿಂದ ಇರಬೇಕು; ಅನಿವಾರ್ಯ ಕಾರಣಗಳಿಂದ ಹೊರಬರಬೇಕಾದಾಗಲೂ ಅವರು ಪರದೆಯಿಂದ ಮುಖ ಮುಚ್ಚಿಕೊಂಡಿರಬೇಕು; ತಮ್ಮ ಮನೆಯ ಹೆಣ್ಣುಮಕ್ಕಳ ಪಾದದ ಕಿರುಬೆರಳಿನ ಉಗುರನ್ನು ಕೂಡ ಯಾರೂ ನೋಡಬಾರದು; – ಎಂಬ ಅಲಿಖಿತ ನಿಯಮಗಳನ್ನೆ ಮೌಲ್ಯವೆಂದು ಪಾಲಿಸಿಕೊಂಡು ಬರಲಾಗುತ್ತಿತ್ತು. ಇಂಥ ಸಂದಿಗ್ಧ ವಾತಾವರಣದಲ್ಲಿ ಮಹಿಳೆಯರಿಗೆ ಪುರುಷರಿಂದ ಶಿಕ್ಷಣ ಕೊಡಿಸುವುದು ಅಥವಾ ಪುರುಷರೊಟ್ಟಿಗೆ ಕುಳ್ಳಿರಿಸಿ ಪಾಠ ಹೇಳುವುದು ಸಾಧ್ಯವೆ ಇರಲಿಲ್ಲ.

ಜ್ಯೋತಿಬಾ ಮಾತ್ರ ಛಲ ಬಿಡದ ತ್ರಿವಿಕ್ರಮನಂತೆ ಸೋಲೊಪ್ಪಿಕೊಳ್ಳಲು ತಯಾರಿರಲಿಲ್ಲ. ಆದ್ದರಿಂದ ಅವರು ತಮ್ಮ ಹೆಂಡತಿ ಸಾವಿತ್ರಿಬಾಯಿಗೆ ಮೊದಲು ಶಿಕ್ಷಣ ಕೊಡಿಸಿ ಆಕೆಯನ್ನು ದೇಶದ ಪ್ರಥಮ ಶಿಕ್ಷಕಿಯನ್ನಾಗಿ ರೂಪಿಸುತ್ತಾರೆ. ಕ್ರಿ.ಶ. ೧೮೪೮ರ ಆಗಸ್ಟ್ ತಿಂಗಳಲ್ಲಿ ಪುಣೆಯ ಬುಧವಾರ ಪೇಟೆಯಲ್ಲಿ ಹುಡುಗಿಯರಿಗಾಗಿ ಶಾಲೆ ಪ್ರಾರಂಭಿಸುತ್ತಾರೆ. ಹಾಗೆ ನೋಡಿದರೆ ಕ್ರಿ.ಶ. ೧೮೯೯ರಲ್ಲಿಯೆ ಮಹಿಳೆಯರಿಗಾಗಿ ಕಲಕತ್ತಾದ ಅಮೆರಿಕನ್ ಮಿಶನ್ನಿನವರು ಮೊಟ್ಟಮೊದಲು ಶಾಲೆ ತೆರೆದಿದ್ದರು. ಆದರೆ ಅವೆಲ್ಲವೂ ಉಚ್ಚ ವರ್ಗದವರ ಕುಲೀನ ಮಕ್ಕಳಿಗಾಗಿ ನಡೆಸಲಾಗುತ್ತಿದ್ದವು. ದಲಿತ ಹೆಣ್ಣುಮಕ್ಕಳಿಗಾಗಿಯೇ ಮೊದಲ ಸ್ವತಂತ್ರ ಶಾಲೆ ತೆರೆದ ಮೊದಲ ಭಾರತೀಯ ವ್ಯಕ್ತಿ ಜ್ಯೋತಿಬಾ. ಈ ಕಾರಣಕ್ಕಾಗಿಯೆ ದಂಪತಿಗಳಿಬ್ಬರೂ ಅಸದಳ ಕಷ್ಟ–ನಷ್ಟ, ಅಪಮಾನಗಳನ್ನು ಎದುರಿಸುತ್ತಾರೆ. ಪ್ರಾಣಾಪಾಯವನ್ನು ಎದುರಿಸಿಯೂ ಅವರು ಮಹಿಳೆಯರಿಗೆ ವಿದ್ಯೆ ನೀಡುವಲ್ಲಿ ಯುಗ ಪ್ರವರ್ತಕರಾಗಿ ಚರಿತ್ರೆಯನ್ನೆ ನಿರ್ಮಿಸುತ್ತಾರೆ.

ಸಾವಿತ್ರಿಬಾಯಿ ಮತ್ತು ಜ್ಯೋತಿಬಾ ಅವರ ಈ ಶ್ರಮ ಭಾರತೀಯ ಸ್ತ್ರೀ ಶಿಕ್ಷಣದ ಇತಿಹಾಸದಲ್ಲಿಯೆ ಒಂದು ಮೈಲಿಗಲ್ಲು. ಮುಂದೆ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಮಹಿಳಾ ಶಿಕ್ಷಣಕ್ಕೆ ಅಸ್ತಿಭಾರವಾಗಿ ಈ ನಡೆಗಳು ಪ್ರಾಮುಖ್ಯ ಪಡೆದುಕೊಳ್ಳುತ್ತವೆ. ದೀರ್ಘಕಾಲದ ಸಂಘರ್ಷದ ನಂತರ ಸ್ವತಂತ್ರ ಸಂವಿಧಾನವನ್ನು ರಚಿಸಿಕೊಂಡ ನಾವು ಸಾರ್ವತ್ರಿಕ ಸಮಾನ ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಘೋಷಿಸಿಕೊಂಡೆವು. ಸಮಾನ ಶಿಕ್ಷಣ ನೀತಿಯನ್ನು ಅನುಸರಿಸಿ ದೇಶದಾದ್ಯಂತ ೧೪ ವರ್ಷ ವಯಸ್ಸಿನ ಎಲ್ಲಾ ಮಕ್ಕಳಿಗೂ ಸಂವಿಧಾನ ಅಸ್ತಿತ್ವಗೊಂಡು ಹತ್ತು ವರ್ಷಗಳ ಒಳಗಾಗಿ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂದು ನಿರ್ಧರಿಸಲಾಯಿತು. ಇದನ್ನು ಸಂವಿಧಾನದ ಪರಿಚ್ಛೇದ ೪೫ರ ಭಾಗವಾಗಿ ನಿರ್ದೇಶಕ ತತ್ವಗಳಡಿ ಸೇರಿಸಲಾಯಿತು. ಈ ಆಶಯದಂತೆ ೧೯೬೦ರ ಹೊತ್ತಿಗೆ ಸರ್ವರಿಗೂ ಸಂಪೂರ್ಣ ಉಚಿತ ಹಾಗೂ ಕಡ್ಡಾಯ ಶಿಕ್ಷಣ ದೊರಕಿಸುವ ಕಾರ್ಯ ಮುಗಿದುಹೋಗಬೇಕಿತ್ತು. ಏಕೆಂದರೆ ಸಂವಿಧಾನದಲ್ಲಿದ್ದ ಒಂದೇ ಒಂದು ಕಾಲಬದ್ಧ ಕಾರ್ಯಕ್ರಮ ಇದಾಗಿತ್ತು. ಆದರೆ ದೇಶದ ಅರ್ಧದಷ್ಟು ಜನರಿಗೂ ಕನಿಷ್ಠ ಸಾಕ್ಷರರನ್ನಾಗಿ ಮಾಡುವುದು ಸಾಧ್ಯವಾಗಲಿಲ್ಲ. ತತ್ಪರಿಣಾಮವಾಗಿ ಒಟ್ಟಿನಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಂಟರ್ ಕಮಿಷನ್ ನಂತರ ಡಾ|| ಎಸ್. ಕೊಠಾರಿ ಕಮಿಷನ್‌ಅನ್ನು ನೇಮಿಸಲಾಯಿತು. ಈ ಆಯೋಗವು ವಿಸ್ತೃತ ಅಧ್ಯಯನ ನಡೆಸಿ ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿರುವ ದೋಷಗಳನ್ನು ಪಟ್ಟಿ ಮಾಡಿತ್ತು. ಆ ಆಯೋಗವು ಅಸಮಾನ ಶಿಕ್ಷಣವು ಸಮಾಜದಲ್ಲಿರುವ ಅಸಮಾನತೆಯನ್ನು ಇನ್ನಷ್ಟು ಹೆಚ್ಚಿಸುತ್ತದೆ ಎಂದು ಹೀಗೆ ಎಚ್ಚರಿಸಿತ್ತು: “ಇಂಥ ಶಿಕ್ಷಣ ವ್ಯವಸ್ಥೆಯು ಕೇವಲ ಬಡವರ್ಗದ ಮಕ್ಕಳಿಗೆ ಮಾತ್ರ ಕೆಡುಕಾಗದೆ ಶ್ರೀಮಂತ ಮತ್ತು ಸೌಲಭ್ಯಗಳುಳ್ಳ ಮಕ್ಕಳಿಗೂ ಮಾರಕವಾಗುತ್ತದೆ. ಹೇಗೆಂದರೆ ಮಕ್ಕಳನ್ನು ಪ್ರತ್ಯೇಕ ವರ್ಗಗಳಾಗಿ ಪ್ರತ್ಯೇಕ ಶಾಲೆಗಳಲ್ಲಿ ಕಲಿಯುವಂತೆ ಮಾಡುವುದರಿಂದ ಶ್ರೀಮಂತ ಮತ್ತು ಸೌಲಭ್ಯಗಳುಳ್ಳ ಮಕ್ಕಳಿಗೆ ಬಡವರ್ಗದ ಮಕ್ಕಳ ಜೀವನದ ಅನುಭವ ಮತ್ತು

ಅವರಿಗಿರುವ ಜೀವನಾಧಾರಿತ ಕೌಶಲ್ಯಗಳ ಜ್ಞಾನದ ಪರಸ್ಪರ ವಿನಿಮಯ ದೊರೆಯುವುದಿಲ್ಲ." ಇದೇ ಮಾತನ್ನು ಅನುಸರಿಸಿ ವೈಜ್ಞಾನಿಕ ವಾದವನ್ನು ಮಂಡಿಸುವುದಾದರೆ ಮಕ್ಕಳನ್ನು ಗಂಡು, ಹೆಣ್ಣು ಎಂದು ಪ್ರತ್ಯೇಕಿಸಿ ಶಿಕ್ಷಣ ನೀಡುವುದಾದರೆ ಅದು ಕೂಡ ಮಕ್ಕಳ ನಡುವೆ ಅನೈಸರ್ಗಿಕ ಕಂದರವನ್ನು ನಿರ್ಮಿಸುತ್ತದೆ. ಲಿಂಗತಾರತಮ್ಯ ಭಾವವನ್ನು ನಿರ್ನಾಮ ಮಾಡಲು ಸಾಧ್ಯವಾಗುವುದೇ ಇಲ್ಲ. ಶಿಕ್ಷಣದ ಮೂಲಭೂತ ಉದ್ದೇಶವಾಗಿರುವ ವರ್ಗ-ವರ್ಣರಹಿತ ಲಿಂಗಭೇದರಹಿತ ಸರ್ವ ಸಮಾನತೆಯಿರುವ ಸಮಾಜವನ್ನು ನಿರ್ಮಿಸಲು ಸಾಧ್ಯವಾಗುವುದೇ ಇಲ್ಲ. ಈ ತಥ್ಯವನ್ನು ಮನಗಂಡೇ ಶಿಕ್ಷಣತಜ್ಞರು ಹೆಣ್ಣು ಮತ್ತು ಗಂಡುಮಕ್ಕಳ ಸಹಶಿಕ್ಷಣ ನೀತಿಯನ್ನು ಶಿಫಾರಸ್ಸು ಮಾಡಿದರು. ಸಹಶಿಕ್ಷಣದ ಪರವಾಗಿ ಬಲವಾದ ವೈಜ್ಞಾನಿಕ ವಾದಗಳನ್ನು ಮಂಡಿಸಿದಾಗಲೂ ಮಡಿವಂತ ಸಮಾಜ ತನ್ನ ಮೂಲಭೂತ ವ್ಯಾಧಿಗೆ ಅಂಟಿಕೊಂಡು ಸ್ತ್ರೀಯರಿಗಾಗಿ ಪ್ರತ್ಯೇಕ ಶಾಲಾ, ಕಾಲೇಜುಗಳನ್ನು ಪ್ರಾರಂಭಿಸತೊಡಗಿತು.




ಭಾರತದ ಪರಂಪರಾಗತ ಸಮಾಜವು ಸನಾತನವಾದಿಗಳ ಬಿಗಿಹಿಡಿತದಲ್ಲಿ ಸಿಕ್ಕಿ ನರಳುತ್ತಿದ್ದಾಗ ಜ್ಯೋತಿಬಾ – ಸಾವಿತ್ರಿಬಾಯಿ ದಂಪತಿ ಬಾಲಕಿಯರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯುವುದು ಅನಿವಾರ್ಯವಾಗಿತ್ತು. ಸ್ತ್ರೀಯರಿಗೆ ಶಿಕ್ಷಣವನ್ನೆ ನೀಡಬಾರದು ಎಂಬ ಕರ್ಮಠ ನಿಲುವು ಹೊಂದಿದ್ದ ಸಂದರ್ಭದಲ್ಲಿ ಕ್ರಿ. ಶ. ೧೮೫೧ರಲ್ಲಿ ಪುಣೆಯ ಚಿಪಳೂಣಕರ ವಾಡೆಯಲ್ಲಿ ಹೆಣ್ಣುಮಕ್ಕಳಿಗಾಗಿ ಮತ್ತೊಂದು ಶಾಲೆ ತೆರೆದರು. ಆ ಸಮಯದಲ್ಲಿ ಶಿಕ್ಷಣ ಇಲಾಖೆಯ ಅಧ್ಯಕ್ಷರಾಗಿದ್ದ ಜಾನ್ ವಾರ್ಡನ್ ಅವರು **ರಿಪೋರ್ಟ್ ಆಫ್ ದಿ ಬೋರ್ಡ್ ಆಫ್ ದಿ ಇಯರ್, ೧೮೫೩-೫೪'** ಎಂಬ ತಮ್ಮ ವರದಿಯಲ್ಲಿ ಸದರಿ ಶಾಲೆಯನ್ನು ಕುರಿತು, "ಆ ಶಾಲೆಯನ್ನು ಜನರ ಕಣ್ಣುತಪ್ಪಿಸಿ ನಡೆಸಲಾಗುತ್ತಿತ್ತು. ಅಲ್ಲಿ ಜ್ಯೋತಿಬಾ ಅವರು ಸಂಬಳವಿಲ್ಲದೆ ದಿನಕ್ಕೆ ನಾಲ್ಕು ತಾಸು ಕಲಿಸುತ್ತಿದ್ದರು. ಅವರು ತಮ್ಮ ಪತ್ನಿಗೆ ಅಧ್ಯಾಪಕಿಯ ಶಿಕ್ಷಣವನ್ನು ಕೊಡಿಸಿದ್ದರು" ಎಂದು ವರದಿ ಮಾಡಿದ್ದಾರೆ. ಸನಾತನವಾದಿಗಳ ವಕ್ರದೃಷ್ಟಿಯಿಂದ ಪಾರಾಗಲು ಜ್ಯೋತಿಬಾ ಸ್ತ್ರೀಯರಿಗೆ ಪ್ರತ್ಯೇಕ ಶಾಲೆಗಳನ್ನು ನಡೆಸಿದ್ದರೇ ಹೊರತು ಹೆಣ್ಣು, ಗಂಡುಮಕ್ಕಳ ನಡುವೆ ಅಂತರ ಉಳಿಸುವುದು ಅವರ ಉದ್ದೇಶವಾಗಿರಲಿಲ್ಲ.

ಸ್ತ್ರೀ ಶಿಕ್ಷಣವನ್ನು ಕುರಿತು ಮಹಾತ್ಮ ಗಾಂಧಿಯವರು ೧೯೩೭ರಲ್ಲಿಯೇ ಅಂದಿನ ಸರಕಾರವನ್ನು ಒತ್ತಾಯಿಸಿದ್ದರು. ಈ ಪ್ರಯತ್ನಗಳ ನಡುವೆಯೂ ಮಹಿಳಾ ಶಿಕ್ಷಣವು ಮರಿಚೀಕೆಯಾಗಿಯೆ ಉಳಿಯಿತು. ಈ ಹೊತ್ತಿಗೂ ಹೆಣ್ಣು, ಗಂಡುಗಳಿಗೆ ದೊರೆಯುವ ಶಿಕ್ಷಣ ಪ್ರಮಾಣದಲ್ಲಿ ಗಮನಾರ್ಹ ಅಂತರವಿದೆ. ಸಾಕ್ಷರತೆಯ ಪ್ರಮಾಣದಿಂದ ಹಿಡಿದು ಉನ್ನತ ಪದವಿಗಳಲ್ಲಿ, ತಾಂತ್ರಿಕ, ವೈದ್ಯಕೀಯ ಪದವಿಗಳಲ್ಲಿ ಸ್ತ್ರೀ – ಪುರುಷರ ನಡುವೆ ತಾರತಮ್ಯ ತಾನೇ ತಾನಾಗಿ ವಿಜೃಂಭಿಸುತ್ತಿದೆ.

ಸ್ತ್ರೀಯರಿಗೆ ಶಿಕ್ಷಣ ನೀಡಬೇಕೆಂಬ ಪ್ರಜ್ಞೆಯೇ ತುಂಬ ತಡವಾಗಿ ಗೋಚರವಾದದ್ದು ಒಂದೆಡೆಯಾದರೆ, ಇನ್ನೊಂದೆಡೆ ಅವರಿಗೆ ಎಂಥ ಶಿಕ್ಷಣ ನೀಡಬೇಕು ? ಹೇಗೆ ಮತ್ತು ಯಾವ ಬಗೆಯ ವಿಧಾನಗಳನ್ನು ಬಳಸಿಕೊಂಡು ವಿದ್ಯೆ ನೀಡಬೇಕು ? ಅವರಿಗೆ ಬೋಧಿಸಬೇಕಾದ ಪಠ್ಯಗಳಾದರೂ ಯಾವ ಬಗೆಯಲ್ಲಿ ಇರಬೇಕು ? – ಎಂಬಿತ್ಯಾದಿ ಪ್ರಶ್ನೆಗಳನ್ನು ಕುರಿತು ನಾವು ಈವರೆಗೂ ಗಂಭೀರವಾದ ಚರ್ಚೆಯನ್ನು ಮಾಡಿಯೇ ಇಲ್ಲ. ಸ್ತ್ರೀ ಶೋಷಣೆ ವಿರುದ್ಧ ಜಾಗೃತಿ ಮೂಡಬಲ್ಲ ಅಥವಾ ಸ್ತ್ರೀ ಅಸ್ಮಿತೆ ಸ್ಫುರಿಸಬಲ್ಲ ಶಿಕ್ಷಣವನ್ನು ನಾವು ನೀಡಿಯೇ ಇಲ್ಲ. ಸಾಮಾಜಿಕ ನ್ಯಾಯದ ವಿಷಯ ಪ್ರಸ್ತಾಪವಾದಾಗ ಸ್ತ್ರೀಯರಿಗಾಗಿ ಒಂದಷ್ಟು ಶುಲ್ಕ ವಿನಾಯಿತಿ ಮತ್ತು ಸೈಕಲ್ ವಿತರಣೆಯಂಥ ಕೆಲವು ಜನಪ್ರಿಯ ಯೋಜನೆಗಳನ್ನು ಮಾತ್ರ ಘೋಷಿಸಲಾಯಿತು. ಶಿಕ್ಷಣ ನೀಡುವಲ್ಲಿ ಆಯ್ಕೆ ಪ್ರಶ್ನೆ ಬಂದರೆ ವಿದ್ಯೆ ಪಡೆಯುವುದು ತೀರ ದುಬಾರಿಯಾಗುತ್ತಿರುವ ಇಂದಿನ ಖಾಸಗೀಕರಣದ ದಿನಮಾನಗಳಲ್ಲಿ ಮತ್ತೆ ಮಹಿಳೆಯರು ಕನಿಷ್ಠ ಅಕ್ಷರದ ಬೆಳಕಿನಿಂದಲೂ ವಂಚಿತರಾಗುತ್ತಿದ್ದಾರೆ. ಪ್ರಾರಂಭಿಕ ಹಂತದಲ್ಲಿ ಸರಕಾರಿ ಶಾಲೆಗಳು ಸಹಶಿಕ್ಷಣವನ್ನು ನೀಡುವುದನ್ನು ರೂಢಿಸಿಕೊಂಡವಾದರೂ ಖಾಸಗಿ ಸಂಸ್ಥೆಗಳು ಮಾತ್ರ ತಮ್ಮ ಮಡಿವಂತ ದೃಷ್ಟಿ-ಧೋರಣೆಗೆ ಅನುಸಾರವಾಗಿ ಹುಡುಗಿಯರಿಗಾಗಿ ಪ್ರತ್ಯೇಕ ಶಾಲಾ-ಕಾಲೇಜುಗಳನ್ನು ತೆರೆಯತೊಡಗಿದವು. ನಾಗರಿಕರು ದುಬಾರಿಯಾದರೂ ಪರವಾಗಿಲ್ಲ, ತಮ್ಮ ಮನೆಯ ಹೆಣ್ಣುಮಕ್ಕಳು ಗಂಡುಮಕ್ಕಳ ಸೋಂಕಿಲ್ಲದಂತೆ ಶಿಕ್ಷಣವನ್ನಾದರೂ ಪಡೆಯಲಿ ಎಂದು ಆಶಿಸತೊಡಗಿದರು. ಸ್ತ್ರೀಯರಿಗೆ ಪ್ರತ್ಯೇಕ ಶಾಲಾ-ಕಾಲೇಜುಗಳನ್ನು ತೆರೆದಾಗ ಅಲ್ಲಿ ಕಲಿಯಲು ಬರುವವರ ಸಂಖ್ಯೆಯಲ್ಲಿ ಹೆಚ್ಚಳವೇನೋ ಆಯಿತು. ಆದರೆ ಅದು ಇನ್ನೊಂದು ಬಗೆಯ ಅವಘಡಕ್ಕೆ ದಾರಿ ಮಾಡಿತು. ಸ್ತ್ರೀ-ಪುರುಷರ ನಡುವಿನ ಅನವಶ್ಯಕ ಗೊಂದಲ, ಅನೈಸರ್ಗಿಕ ಭಾವನೆಗಳು ಮತ್ತಷ್ಟು ಉಲ್ಬಣಗೊಳ್ಳತೊಡಗಿದವು.

ಮಕ್ಕಳು ಹುಟ್ಟುವಾಗ ಕೇವಲ ಮಕ್ಕಳಾಗಿ ಮಾತ್ರ ಇರುತ್ತವೆ. ಅವುಗಳ ನಡುವೆ ಯಾವುದೇ ಭೇದಭಾವ, ಕೀಳರಿಮೆ-ಮೇಲರಿಮೆಗಳು ಇರುವುದಿಲ್ಲ. ಲಿಂಗ ವೈವಿಧ್ಯ ಬಿಂಬಿಸುವ ಅವಯವಗಳು ಸ್ಪಷ್ಟವಾಗಿ ಗೋಚರವಾಗಿ ಇರುವುದಿಲ್ಲ. ಆದರೆ ಈ ಸಮಾಜ ಮಾತ್ರ ಹುಟ್ಟಿನಿಂದಲೇ ನೀನು ಹೆಣ್ಣು, ಹೆಂಗಸು ಎಂದೋ ನೀನು ಗಂಡು, ಗಂಡಸು ಎಂದೋ ಮಕ್ಕಳಲ್ಲಿ ಭೇದ ಮೂಡಿಸುತ್ತಲೇ ಬರುತ್ತಿದೆ. ಆದ್ದರಿಂದಲೇ ಹೆಣ್ಣು, ಗಂಡು ಎಂಬ ಜೀವ ವೈವಿಧ್ಯಗಳು ನಿಸರ್ಗ ನಿರ್ಮಿತವಾದರೆ ಹೆಣ್ತನ, ಗಂಡಸುತನಗಳು ಮಾತ್ರ ಸಮಾಜ ನಿರ್ಮಿತ ಅಸಹಜ ಧೋರಣೆಗಳು ಎಂಬುದಾಗಿ ಸಮಾಜ ವಿಜ್ಞಾನಿಗಳು ವಿಶ್ಲೇಷಣೆಗೈದಿದ್ದಾರೆ. ಈ ತಥ್ಯವನ್ನೆ ೧೨ನೇ ಶತಮಾನದಲ್ಲಿ ಅಕ್ಕಮಹಾದೇವಿ ನಿಖರವಾಗಿ ಗುರುತಿಸಿದ್ದಳು. ಅವಳು ತನ್ನದೊಂದು ವಚನದಲ್ಲಿ ಹೀಗೆ ನುಡಿದಿದ್ದಾಳೆ :

*ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ*
*ಗಂಡು ಗಂಡಾದಡೆ ಹೆಣ್ಣಿನ ಸೂತಕ*
*ಮನದ ಸೂತಕ ಹಿಂಗಿದೊಡೆ*
*ತನುವಿನ ಸೂತಕಕ್ಕೆ ತೆರಹುಂಟೆ ?*
*ಮುನ್ನಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ.*
*ಎನ್ನ ದೇವ ಚೆನ್ನಮಲ್ಲಿಕಾರ್ಜುನನೆಂಬ ಗುರುವಂಗೆ*
*ಜಗವೆಲ್ಲ ಹೆಣ್ಣು ನೋಡಾ ಅಯ್ಯಾ.*

ಸಮಾಜ ನಿರ್ಮಿತವಾದ ಈ ಮನದ ಸೂತಕವನ್ನು ಅಳಿಸಲೆಂದೆ ನಮ್ಮ ಶಿಕ್ಷಣವನ್ನು ಉಪಕರಣದಂತೆ ಅಭಿವೃದ್ಧಿಪಡಿಸಬೇಕಾಗಿದೆ. ಚಾತುರ್ವರ್ಣ್ಯ ವ್ಯವಸ್ಥೆ ಸ್ಥಾಯಿಗೊಳಿಸಿದ್ದ ಸಂಕೀರ್ಣ ಅಸಮಾನತೆಯನ್ನು ಮೂಲೋತ್ಪಾಟನೆ ಮಾಡಲೆಂದೆ ಸರ್ವರಿಗೂ ಸಮಾನ ಶಿಕ್ಷಣ ಎಂಬ ಪರಿಕಲ್ಪನೆ ಇಟ್ಟುಕೊಂಡು ಸಂವಿಧಾನವನ್ನು ರೂಪಿಸಲಾಯಿತಾದರೂ ವಾಸ್ತವದಲ್ಲಿ ಆ ಆಶಯ ಕಾರ್ಯಗತವಾಗಲಿಲ್ಲ. ಪ್ರಾಯಶಃ ಶಿಕ್ಷಣ ನೀತಿಯನ್ನು ರೂಪಿಸುವಾಗ ಇನ್ನಷ್ಟು ಎಚ್ಚರವಹಿಸಬೇಕಿತ್ತೇನೊ ! ಈಗ ಇದ್ದ ನೀತಿಯನ್ನು ಪ್ರಾಮಾಣಿಕವಾಗಿ

ಅನುಷ್ಠಾನಕ್ಕೆ ತಂದಿದ್ದರೂ ಸಂಭವನೀಯ ಗುರಿಯನ್ನು ಮುಟ್ಟಬಹುದಿತ್ತು. ಆದರೆ ನಿಜವಾದ ಕಳಕಳಿ, ಇಚ್ಛೆ ಇಲ್ಲದ ಸ್ವಾರ್ಥ ರಾಜಕಾರಣವು ನಮ್ಮ ಒಟ್ಟು ಶಿಕ್ಷಣದ ಆಶಯವನ್ನೆ ಮೂಲೆಗುಂಪಾಗಿಸಿತು.

ಈ ಕೆಟ್ಟ ರಾಜಕಾರಣದ ಕುಟಿಲ ಕಾರ್ಯತಂತ್ರಕ್ಕೆ ಸ್ತ್ರೀ ಶಿಕ್ಷಣವೆ ಮೊದಲ ಬಲಿ. ದೇಶದ ಅರ್ಧದಷ್ಟು ಜನಸಂಖ್ಯೆಗೆ ಹತ್ತಿರವಿದ್ದ ಮಹಿಳೆಯರಿಗೆ ಸಂಪೂರ್ಣ ಪ್ರಬುದ್ಧ ಶಿಕ್ಷಣ ನೀಡುವಲ್ಲಿ ಇಚ್ಛಾಶಕ್ತಿ ತೋರದ ಸರಕಾರಗಳು ಮೂಗಿಗೆ ತುಪ್ಪ ಸವರುವಂತೆ ಅವೈಜ್ಞಾನಿಕ ಶಿಕ್ಷಣ ನೀಡುವಲ್ಲಿ ಮಾತ್ರ ನಿರತವಾಗಿವೆ. ಸ್ತ್ರೀ ಪುರುಷರಿಗೆ ಪ್ರತ್ಯೇಕ ಶಿಕ್ಷಣ ನೀಡಬಾರದು, ಅದೊಂದು ಅವೈಜ್ಞಾನಿಕ, ಅತಾರ್ಕಿಕ ನಿಲುವು ಎಂದು ಹೇಳಲಾದರೂ ಈ ಕುರಿತು ಸಮಾಜ ಮತ್ತು ಸರಕಾರಗಳು ಎಚ್ಚೆತ್ತುಕೊಳ್ಳಲೆ ಇಲ್ಲ. ಸರಕಾರವು ತಾನೇ ಮುಂದಾಗಿ ನಿಂತು ಮಹಿಳೆಯರಿಗಾಗಿ ಪ್ರತ್ಯೇಕ ಶಾಲಾ ಕಾಲೇಜುಗಳನ್ನು ತೆರೆಯತೊಡಗಿತು. ಸರಕಾರಿ ಹೆಣ್ಣುಮಕ್ಕಳ ಶಾಲೆ, ಸರಕಾರಿ ಗಂಡುಮಕ್ಕಳ ಶಾಲೆ ಎಂದು ನಾಮಾಂಕಿತಗೊಳ್ಳುತ್ತ ಪ್ರಾಥಮಿಕದಿಂದ ಹಿಡಿದು ಪ್ರೌಢ, ಪದವಿಪೂರ್ವ, ಪದವಿ ಮಟ್ಟದವರೆಗೆ ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕ ಶಿಕ್ಷಣ ನೀಡುವ ಪದ್ಧತಿಯು ಅಪೇಕ್ಷಣೀಯ ಎನ್ನುವಂಥ ಸ್ಥಿತಿ ನಿರ್ಮಾಣವಾಯಿತು. ಈ ನಡೆಗಳು ಸಾಂಪ್ರದಾಯಿಕ, ಮಡಿವಂತ ಸಮಾಜದ ನಿಲುವು–ನಂಬಿಕೆಗಳನ್ನು ಇನ್ನಷ್ಟು ಗಟ್ಟಿಗೊಳಿಸತೊಡಗಿದವು.

ಸಾಂಪ್ರದಾಯಿಕ ಸಮಾಜವು ಸ್ತ್ರೀಯರು, ಪುರುಷರು ಒಟ್ಟಾಗಿ ಚಲಿಸುವುದನ್ನು ಅನೈತಿಕವೆಂದು ಭಾವಿಸುತ್ತದೆ. ಅವರ ಪ್ರಕಾರ ಬೆಣ್ಣೆಯನ್ನು ಬೆಂಕಿಯ ಸಮೀಪ ಇಡಬಾರದು. ಇಟ್ಟರೆ ಬೆಣ್ಣೆ ನೋಡ ನೋಡುವಷ್ಟರಲ್ಲಿಯೇ ಕರಗಿಹೋಗುತ್ತದೆ; ಅರ್ಥಾತ್ ಹೆಣ್ಣು, ಗಂಡುಗಳನ್ನು ಒಂದೆಡೆ ಬಿಟ್ಟರೆ ಅವರು ಪರಸ್ಪರ ಆಕರ್ಷಣೆಗೆ ಬಿದ್ದು ಹಾಳಾಗುತ್ತಾರೆ; ಹತ್ತಿರವಿದ್ದಷ್ಟೂ ಅವರಲ್ಲಿ ಲೈಂಗಿಕ ಭಾವಗಳು ಪ್ರಚೋದಿಸಲ್ಪಡುತ್ತವೆ; ಅದು ಅನೈತಿಕ ಸಂಬಂಧಕ್ಕೆ ಕಾರಣ ವಾಗುತ್ತದೆ – ಎಂಬ ಊಹೆಗಳು ನಮ್ಮಲ್ಲಿ ಮನೆಮಾಡಿಕೊಂಡಿವೆ. ಇಂಥ ನಂಬಿಕೆಗಳು ಅರ್ಥಹೀನ ಮತ್ತು ಹೆಣ್ಣನ್ನು ಕೇವಲ ಭೋಗದ ವಸ್ತುವಾಗಿ ನೋಡುವ ಮನೋವ್ಯಾಧಿಯಿಂದ ಹುಟ್ಟಿಬಂದವುಗಳು ಎಂಬುದರಲ್ಲಿ ಎರಡು ಮಾತಿಲ್ಲ. ಹೆಣ್ಣಿನ ದೇಹವನ್ನೆ ಪ್ರಧಾನವಾಗಿಸಿ ಅವಳ ಪ್ರತಿಭೆ, ವ್ಯಕ್ತಿತ್ವಗಳನ್ನು ಗಮನಿಸದ ಸಮಾಜವು ಈ ಬಗೆಯ ನಂಬಿಕೆಗಳನ್ನು ಉತ್ಪಾದಿಸುತ್ತದೆ. ಅಷ್ಟೆ ಅಲ್ಲ, ಅವುಗಳನ್ನು ಬಹು ಜನಾಭಿಪ್ರಾಯವನ್ನಾಗಿ ಬಿಂಬಿಸತೊಡಗುತ್ತದೆ. ನಿಸರ್ಗದಲ್ಲಿ ಮಾನವಪ್ರಾಣಿಯನ್ನು ಬಿಟ್ಟರೆ ಉಳಿದ ಯಾವುದೇ ಜೀವಿಗಳಲ್ಲಿ ಈ ಮಡಿವಂತಿಕೆ ಇಲ್ಲ. ವೈಜ್ಞಾನಿಕವಾಗಿ ಉಭಯ ಜೀವಿಗಳು ಒಟ್ಟಾಗಿ ಸಹಜವಾಗಿ ಬೆಳೆದಷ್ಟೂ ಪರಸ್ಪರರನ್ನು ಅರ್ಥೈಸಿಕೊಳ್ಳುತ್ತವೆ. ಪರಸ್ಪರ ದೂರವಾಗಿ ಬೆಳೆಸಿದಷ್ಟೂ ಅನವಶ್ಯಕ ಕುತೂಹಲ, ಗೊಂದಲ, ಹೆದರಿಕೆಯಂತಹ ಭಾವನೆಗಳು ಮೂಡುತ್ತವೆ. ವ್ಯತಿರಿಕ್ತವಾಗಿ ಹಲವು ತಪ್ಪು ಅಭಿಪ್ರಾಯ ಮತ್ತು ಪರಸ್ಪರ ಮೇಲರಿಮೆ ಕೀಳರಿಮೆಗಳು ಹುಟ್ಟಿಕೊಳ್ಳುತ್ತವೆ. ಪ್ರತ್ಯೇಕವಾಗಿ ವಿದ್ಯಾಭ್ಯಾಸ ಮಾಡಿದ ಹೆಣ್ಣು–ಗಂಡುಗಳಲ್ಲಿ ಇರುವ ಗೊಂದಲವು ಕೂಡಿ ಕಲಿತವರಲ್ಲಿ ಕಂಡುಬಂದಿಲ್ಲ. ಈ ಕುರಿತು ನಡೆದ ಸಂಶೋಧನೆಗಳು ಈ ಸಂಗತಿಯನ್ನು ಎತ್ತಿತೋರಿಸಿವೆ. ಚಿಕ್ಕಂದಿನಿಂದಲೂ ಸಹಶಿಕ್ಷಣ ಪಡೆದ ಹುಡುಗಿಯರಲ್ಲಿ ಇದ್ದ ಸ್ಥೈರ್ಯ, ಸಹಜ ನಡೆಗಳು ಪ್ರತ್ಯೇಕ ಕಲಿತವರಲ್ಲಿ ಕಾಣಿಸಿಕೊಳ್ಳಲಾರವು. ಗಂಡುಹುಡುಗರಾದರೂ ಅಷ್ಟೆ ಅನವಶ್ಯಕವಾಗಿ ಹಿಂಜರಿಯುವುದುಂಟು. ಪ್ರತ್ಯೇಕವಾಗಿಯೆ ಸಂಪೂರ್ಣ ವಿದ್ಯಾಭ್ಯಾಸವನ್ನು ಪೂರೈಸಿದ ಯುವಕ–ಯುವತಿಯರು ದಾಂಪತ್ಯ ಜೀವನ ದಲ್ಲಿಯೂ ತುಂಬ ಆತಂಕಕ್ಕೆ ಒಳಗಾದ ಸಂಗತಿಗಳು ಬೆಳಕಿಗೆ ಬಂದಿವೆ. ತನ್ನ ತಾಯಿಯನ್ನಲ್ಲದೆ ಬೇರೆ ಸ್ತ್ರೀಯರನ್ನು ಒಮ್ಮೆಯೂ ಮುಖಕ್ಕೆ ಮುಖ ಕೊಟ್ಟು ಮಾತಾಡಿಸಿರದ ಗಂಡುಹುಡುಗರು ಒಮ್ಮೆಲೆ ಹದಿಹರೆಯದ ಹೆಂಡತಿ ಯೊಂದಿಗೆ ಬೆರೆಯುವಲ್ಲಿ ಗಾಬರಿ ಬಿದ್ದದ್ದೂ ಇದೆ. ಹುಡುಗಿಯರಂತೂ ವಯಸ್ಸಿಗೆ ಬಂದೊಡನೆ ಅಪ್ಪನೊಂದಿಗೂ ನೇರವಾಗಿ ಮಾತಾಡಿರದ ಪರಿಸ್ಥಿತಿಯಲ್ಲಿ ಬೆಳೆದಿದ್ದರೆ, ಅವರು ಮದುವೆ ನಂತರ ಒಮ್ಮೆಲೆ ಪುರುಷನನ್ನು ನೋಡಿ ಹೆದರಿ ಮುದ್ದೆಯಾಗಿ ದಾಂಪತ್ಯ ಬದುಕನ್ನೇ ನರಕಮಯವಾಗಿಸಿಕೊಂಡ ಅನೇಕ ಪ್ರಸಂಗಗಳು ನಮ್ಮ ಮುಂದಿವೆ. ಕಲಬುರ್ಗಿಯಲ್ಲಿ ಪ್ರಜ್ಞಾ ಕಾನೂನು ಸಲಹಾ ಸಮಿತಿಯ ಅಡಿಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಕುರಿತು ಕೌನ್ಸೆಲಿಂಗ್ ನಡೆಸುವಾಗ ಇಂಥ ಅನೇಕ ಪ್ರಸಂಗಗಳು ಗಮನಕ್ಕೆ ಬಂದಿವೆ.

ಶಿಕ್ಷಣವು ಖಾಸಗೀಕರಣಕ್ಕೆ ತೆರೆದುಕೊಳ್ಳುವ ಮುಂಚೆ ಸ್ನಾತಕೋತ್ತರ ಹಂತದಲ್ಲಿಯಾದರೂ ಸಹ ಅಧ್ಯಯನದ ಅವಕಾಶಗಳು ಇದ್ದವು. ಏಕೆಂದರೆ ಪದವಿ ಹಂತದವರೆಗೆ ಶಿಕ್ಷಣದಲ್ಲಿ ಸ್ವಲ್ಪ ಪ್ರಮಾಣದಲ್ಲಿ ಖಾಸಗಿಯವರ ಸಹಭಾಗಿತ್ವ ಇದ್ದು ವಿಶ್ವವಿದ್ಯಾಲಯಗಳು ಸಂಪೂರ್ಣವಾಗಿ ಸರಕಾರದ ಸುಪರ್ದಿನಲ್ಲಿ ಇದ್ದವು. ವಿಶ್ವವಿದ್ಯಾಲಯಗಳಲ್ಲಿ ಸಾಮಾನ್ಯವಾಗಿ ಸಹಶಿಕ್ಷಣವೆ ಇತ್ತು. ಆ ಹಂತದಲ್ಲಿಯೂ ಬೆಳಕಿಗೆ ಬಂದ ಅಂಶವೇನೆಂದರೆ ಬಾಲ್ಯದಿಂದ ಹಿಡಿದು ಪದವಿವರೆಗೆ ಸಹಶಿಕ್ಷಣ ಕಲಿತು ಬಂದ ಯುವತಿಯರಲ್ಲಿ ಇದ್ದ ಎಕ್ಸ್‌ಪೋಷರ್ ಗುಣವು ಪ್ರತ್ಯೇಕವಾಗಿ ಅಧ್ಯಯನ ಮಾಡಿಬಂದವರಲ್ಲಿ ಇರಲಿಲ್ಲ. ಪ್ರತ್ಯೇಕವಾಗಿ ಓದಿ ಬಂದ ವಿದ್ಯಾರ್ಥಿನಿಯರು ವಿಷಯಜ್ಞಾನದಲ್ಲಿ ಪರಿಣತರಾಗಿದ್ದರೂ ಅದನ್ನು ಸಾದರಪಡಿಸುವಲ್ಲಿ ಸೋಲುವುದು ಸರ್ವೇ ಸಾಮಾನ್ಯವಾಗಿತ್ತು. ಇದಕ್ಕೆ ಅಪವಾದಗಳು ಇದ್ದಿರಬಹುದಾದರೂ ಅದು ನಗಣ್ಯವಾಗಿತ್ತು. ಸಂಪ್ರದಾಯಸ್ಥ ಕುಂಟುಂಬಗಳಲ್ಲಂತೂ ಹುಡುಗಿಯರಿಗೆ ಎಲ್ಲಿಯವರೆಗೆ ಪ್ರತ್ಯೇಕ ಅಧ್ಯಯನದ ಅವಕಾಶಗಳು ಲಭ್ಯವಾಗಿದ್ದವೊ ಅಲ್ಲಿಯವರೆಗೆ ಓದಿಸಿ, ಮುಂದೆ ಸಹಅಧ್ಯಯನ ಮಾಡಿಸಬೇಕಾದ ಹಂತ ಬಂದಾಗ ಅವರನ್ನು ಉನ್ನತ ವ್ಯಾಸಂಗದಿಂದ ದೂರವಿಟ್ಟದ್ದೂ ಇದೆ. ಪ್ರಾಯಶಃ ಪದವಿವರೆಗೆ ಪ್ರತ್ಯೇಕ ಶಿಕ್ಷಣ ದೊರೆತದ್ದೆ ಪಾಲಕರಿಗೆ ಈ ಬಗೆಯ ನಿರ್ಧಾರಕ್ಕೆ ಬರಲು ಪ್ರಚೋದನೆಯಾಗಿರಲು ಸಾಕು. ಪ್ರಾರಂಭದಿಂದಲೂ ಸಹಶಿಕ್ಷಣಕ್ಕೆ ಒತ್ತು ನೀಡಿದ್ದಲ್ಲಿ ಸಾಮಾಜಿಕರಲ್ಲಿ ಮನೆಮಾಡಿಕೊಂಡಿರುವ ಈ ಬಗೆಯ ಮಡಿವಂತ ಭಾವನೆಗಳನ್ನು ಉಚ್ಚಾಟಿಸುವಲ್ಲಿ ಒಂದಿಷ್ಟಾದರೂ ದಾರಿ ಕ್ರಮಿಸಬಹುದಿತ್ತು. ದುರಂತವೆಂದರೆ, ಇತ್ತೀಚೆಗೆ ಸರಕಾರವೆ ಪ್ರತ್ಯೇಕ ಶಿಕ್ಷಣಕ್ಕೆ ಅವಕಾಶ ನೀಡುತ್ತಿರುವುದು. ಕರ್ನಾಟಕ ಸರಕಾರವು ೨೦೦೩–೦೪ನೇ ಸಾಲಿನಲ್ಲಿ ಬಿಜಾಪೂರದಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿತು. ಇದೆಂಥ ಅವೈಜ್ಞಾನಿಕ ಮತ್ತು ಅಸಂಬದ್ಧ ನೀತಿ ಎಂದರೆ ಈ ವಿಶ್ವವಿದ್ಯಾಲಯವು

ಮಹಿಳೆಯರಿಗೆ ವರವಾಗುವ ಬದಲು ಶಾಪವಾಗಿ ಪರಿಣಮಿಸಿತು. ದೇಶದಾದ್ಯಂತ ಸ್ತ್ರೀವಾದ, ಮಹಿಳಾಪರ ಚಿಂತನೆಗಳು ಮುಂಚೂಣಿಗೆ ಬರುತ್ತಿರುವ ಹಂತದಲ್ಲಿ ಕರ್ನಾಟಕ ಸರಕಾರವು ಮಹಿಳಾ ವಿ.ವಿ. ಹೆಸರಲ್ಲಿ ತನ್ನ ಬೇಜವಾಬ್ದಾರಿತನವನ್ನು ಪ್ರದರ್ಶಿಸಿತು. ಬಿಜಾಪೂರ ಮಹಿಳಾ ವಿ.ವಿ.ಯು ಯಾವುದೇ ಹೊಸ ಕೋರ್ಸುಗಳನ್ನು ಪ್ರಾರಂಭಿಸದೆ ಅದೇ ಸಾಂಪ್ರದಾಯಿಕ ಪದವಿಗಳನ್ನು ಕೇವಲ ಮಹಿಳೆಯರಿಗಾಗಿ ತೆರೆಯಿತು. ಹೀಗೆ ಪ್ರಾರಂಭವಾದ ವಿ.ವಿ.ಗೆ ರಾಜ್ಯದಲ್ಲಿರುವ ಎಲ್ಲ ಮಹಿಳಾ ಪದವಿ ಮಹಾವಿದ್ಯಾಲಯಗಳು ಸಂಲಗ್ನತೆ ಪಡೆದುಕೊಳ್ಳಬೇಕೆಂದು ವಿಧಿಸಿತು. ಪ್ರಾಯೋಗಿಕವಾಗಿ ಸಹ್ಯವಲ್ಲದ ಈ ಕ್ರಮವನ್ನು ದಕ್ಷಿಣ ಕರ್ನಾಟಕದ ಯಾವುದೇ ಮಹಿಳಾ ಪದವಿ ಕಾಲೇಜುಗಳೂ ಒಪ್ಪಿಕೊಳ್ಳಲೇ ಇಲ್ಲ. ಭೌಗೋಳಿಕ ದೂರದ ನೆಪವೊಡ್ಡಿ ದಕ್ಷಿಣ ಕರ್ನಾಟಕದ ಕಾಲೇಜುಗಳು ತಮ್ಮ ದತ್ತವಾದ ವಿ.ವಿ.ಗಳ ಅಡಿಯಲ್ಲಿಯೆ ಈವರೆಗೂ ಉಳಿದುಕೊಂಡಿವೆ. ತತ್ಪರಿಣಾಮ ಕೇವಲ ಉತ್ತರ ಕರ್ನಾಟಕದ ಮಹಿಳಾ ಕಾಲೇಜುಗಳನ್ನು ಮಾತ್ರ ಅವರ ನಿರಾಕರಣೆಯ ವಿರುದ್ಧವಾಗಿ ಮಹಿಳಾ ವಿ.ವಿ.ಗೆ ಸೇರಿಸಲಾಯಿತು. ಹೈದ್ರಾಬಾದ್ ಕರ್ನಾಟಕದವರಿಗಂತೂ ಇದು ಗಾಯದ ಮೇಲೆ ಬರೆ ಎಳೆದಂತೆ ಮತ್ತಷ್ಟು ಹಾನಿಯನ್ನುಂಟುಮಾಡಿತು. ಏಕೆಂದರೆ ಈ ಭಾಗದ ಮಹಿಳಾ ಕಾಲೇಜುಗಳನ್ನು ಬಿಜಾಪೂರ ವಿ.ವಿ.ಗೆ ಸೇರಿಸಿದ್ದರಿಂದ ಅವರು ಗುಲಬರ್ಗಾ ವಿ.ವಿ.ಗೆ ಹೊರಗಿನವರಾದರು. ಇದರಿಂದಾಗಿ ಗುಲಬರ್ಗಾ, ಯಾದಗೀರ, ಬಳ್ಳಾರಿ, ಬೀದರ, ಕೊಪ್ಪಳಗಳಲ್ಲಿ ಮಹಿಳಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿನಿಯರು ಅದೇ ಸಾಂಪ್ರದಾಯಿಕ ಎಂ.ಎ., ಎಂ.ಕಾಂ., ಎಂ.ಎಸ್ಸಿ. ಪದವಿಗಳಿಗಾಗಿ ತಮಗೆ ಹತ್ತಿರವಿದ್ದ ವಿ.ವಿ.ಯನ್ನು ಬಿಟ್ಟು ದೂರದ ಬಿಜಾಪೂರಕ್ಕೆ ಹೋಗಬೇಕಾದ ಅನಿವಾರ್ಯಕ್ಕೆ ಬಿದ್ದರು. ಅಷ್ಟಕ್ಕೂ ಉನ್ನತ ವ್ಯಾಸಂಗ ಕುರಿತು ೨೦೦೪ರಲ್ಲಿ ಹೊರಡಿಸಲಾದ ಟಾಸ್ಕ್ ಫೋರ್ಸ್ ವರದಿಯಲ್ಲಿ ಮಹಿಳಾ ಶಿಕ್ಷಣದ ಬಗೆಗೆ ಸ್ಪಷ್ಟವಾದ ನಿರ್ದೇಶನ ನೀಡಲಾಗಿತ್ತು. ಸದರಿ ವರದಿಯ "ಜೆಂಡರ್ ಆ್ಯಕ್ಸೆಸ್ ಆಂಡ್ ಈಕ್ವಿಟಿ" ಎಂಬ ಹತ್ತನೆ ಅಧ್ಯಾಯದ ೧೦.೪.೦ ಉಪ ಟಿಪ್ಪಣಿಯಲ್ಲಿ ಮಹಿಳಾ ವಿ.ವಿ.ಯನ್ನು ಕುರಿತು;

"ಈ ಮಹಿಳಾ ವಿಶ್ವವಿದ್ಯಾಲಯವು ತನ್ನ ಗುರಿ ಮತ್ತು ಕರ್ತವ್ಯಗಳ ಕುರಿತಂತೆ, ಇದೇ ಶತಮಾನದಲ್ಲಿ ಸ್ಥಾಪಿಸಿದ ವಿಶ್ವವಿದ್ಯಾಲಯಕ್ಕಿಂತ ಭಿನ್ನವಾದ ಹಾಗೂ ನಿರ್ದಿಷ್ಟವಾದ ಮುನ್ನೋಟ, ದೃಷ್ಟಿಕೋನಗಳನ್ನು ಹೊಂದಿರುವುದು ಸೂಕ್ತ. ಇತರ ವಿಶ್ವವಿದ್ಯಾಲಯಗಳಲ್ಲಿ ಬೋಧಿಸಲಾಗುತ್ತಿರುವ ಸಾಂಪ್ರದಾಯಿಕ ಮಾದರಿಯ ಕಲೆ, ವಿಜ್ಞಾನ ಮತ್ತು ಕಾಮರ್ಸ್ ಕೋರ್ಸುಗಳನ್ನು ಅನುಕರಿಸಬಾರದು. ಅವಕ್ಕೆ ಬದಲು, ಈ ಜ್ಞಾನ ಶಾಖೆಗಳಲ್ಲಿ ಈ ೨೧ನೆಯ ಶತಮಾನದ ಅವಶ್ಯಕತೆಗಳನ್ನು ಪೂರೈಸುವಂತಹ ಹೊಸ ಅಧ್ಯಯನ ಕ್ಷೇತ್ರಗಳನ್ನು ಗುರುತಿಸಿ ಅವನ್ನು ಪಠ್ಯಕ್ರಮದಲ್ಲಿ ಅಳವಡಿಸಿಕೊಳ್ಳಬೇಕು."

– ಎಂದು ಸ್ಪಷ್ಟಪಡಿಸಿದೆ. ಈ ಎಲ್ಲ ಅಂಶಗಳನ್ನು ಗಾಳಿಗೆ ತೂರಿ ಮತ್ತದೆ ಹಳಸಲು ಪದವಿಗಳನ್ನು ನೀಡುವ ಚಾಳಿಗೆ ಜೋತುಬಿದ್ದು ಅಂದು ಆಡಳಿತದಲ್ಲಿದ್ದ ಕಾಂಗ್ರೆಸ್ ಸರಕಾರವು ಇನ್ನಿಲ್ಲದ ತರಾತುರಿಯಲ್ಲಿ ರಾಜ್ಯದಲ್ಲಿಯೆ ಮಹಿಳೆಯರಿಗಾಗಿ ಪ್ರಥಮ ವಿ.ವಿ. ಪ್ರಾರಂಭಿಸುತ್ತಿದ್ದೇವೆ ಎಂದು ಬೊಗಳೆ ಕೊಚ್ಚಿಕೊಂಡಿತು. ವೈದ್ಯಕೀಯ ಶಿಕ್ಷಣ, ತಾಂತ್ರಿಕ ಶಿಕ್ಷಣ, ಕಾನೂನು ಶಿಕ್ಷಣ, ಸಂಗೀತ ಹೀಗೆ ಪ್ರತ್ಯೇಕವಾದ ಭಿನ್ನ ವಿ.ವಿ.ಗಳು ಪ್ರಾರಂಭಿಸಿದಂತೆ ಮಹಿಳಾಪರವಾದ ಫ್ಯಾಕಲ್ಟಿಯನ್ನು ಅಸ್ತಿತ್ವಗೊಳಿಸದೆ ಮಹಿಳೆಯರು ಪ್ರತ್ಯೇಕ ಕುಳಿತು ಓದುವ ಜನಾನಾ (ಸ್ತ್ರೀಯರ ಕೋಣೆ) ತೆರೆದದ್ದು ಮೂರ್ಖತನದ ಪರಮಾವಧಿಯಲ್ಲದೆ ಮತ್ತೇನೂ ಅಲ್ಲ. ಹಂಪಿಯಲ್ಲಿ ಕನ್ನಡಕ್ಕಾಗಿಯೇ ವಿ.ವಿ.ಯನ್ನು ತೆರೆದಂತೆ ಸಮಾಜದ ಎಲ್ಲ ಜನವರ್ಗಗಳಲ್ಲಿ ಲಿಂಗ ಸಂವೇದನಾಶೀಲತೆ ಮೂಡಿಸುವಂಥ ಜ್ಞಾನಶಿಸ್ತನ್ನು ಅಭಿವೃದ್ಧಿಪಡಿಸುವ ದಿಶೆಯಲ್ಲಿ ಬಿಜಾಪೂರ ವಿ.ವಿ.ಯನ್ನು ಮುರಿದು ಕಟ್ಟಬೇಕಾಗಿದೆ. ಸ್ತ್ರೀಯರಲ್ಲಿ ನಾಯಕತ್ವ ಗುಣ ಮೂಡಿಸುವ, ಸ್ತ್ರೀ ಅಸ್ಮಿತೆ ಹುಟ್ಟಿಸುವ ಹೊಸ ಕೋರ್ಸುಗಳನ್ನು ಪ್ರಾರಂಭಿಸುವುದಲ್ಲದೆ ನಾಡಿನಲ್ಲಿರುವ ಎಲ್ಲ ಇಲಾಖೆಗಳ ನೌಕರರಲ್ಲಿ ಲಿಂಗ ಸಂವೇದನೆಗೊಳಿಸಲು ಬೇಕಾಗುವ ಸರ್ಟಿಫಿಕೇಟ್ ಕೋರ್ಸುಗಳನ್ನು ಪ್ರಾರಂಭಿಸಬೇಕು. ಸ್ತ್ರೀವಾದವನ್ನು ಕೇವಲ ಮಹಿಳೆಯರು ಮಾತ್ರ ಮನನಮಾಡಿಕೊಂಡರೆ ಸಾಲದು. ಸ್ತ್ರೀಪುರುಷರಾದಿಯಾಗಿ ಸಮಸ್ತರೂ ಈ ವಾದವನ್ನು ಕಲಿಯಬೇಕಿದೆ. ಏಕೆಂದರೆ ಸ್ತ್ರೀವಾದವೆಂದರೆ ಮಹಿಳೆಯರು ಮಾತ್ರ ಅನುಭವಿಸಬೇಕಾದ ಪ್ರಸೂತಿ ಮನೆಯಲ್ಲ. ಅದು ಒಟ್ಟು ಜೀವಪರ, ಜನಪರ ದೃಷ್ಟಿ–ಧೋರಣೆ ರೂಢಿಸುವ ಮಾನವತಾವಾದವಾಗಿದೆ, ಜೀವಪರವಾದವಾಗಿದೆ. ಮಹಿಳಾ ವಿ.ವಿ.ಯಲ್ಲಿ ಸ್ತ್ರೀ–ಪುರುಷರು ಒಟ್ಟಿಗೆ ಸೇರಿ ಲಿಂಗ ಸಂವೇದನಾಶೀಲತೆಗೆ ಬೇಕಾದ ಪಠ್ಯವನ್ನು ತಯಾರಿಸುವಂತಾಗಬೇಕು. ಪೊಲೀಸ್, ಆರೋಗ್ಯ, ಕಾನೂನು, ಸಮಾಜ ಕಲ್ಯಾಣ, ಸಾರ್ವಜನಿಕ ಶಿಕ್ಷಣ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮುಂತಾದ ಎಲ್ಲ ಇಲಾಖೆಗಳಲ್ಲಿ ಕೆಲಸ ಮಾಡುತ್ತಿರುವ ನೌಕರರಿಗೆ ಲಿಂಗ ಸಂವೇದನೆಯ ತರಬೇತಿಗಳನ್ನು ನಡೆಸಲು ಸಾಧ್ಯವಾಗಬೇಕು. ಮಹಿಳೆಯರ ಬದುಕಿಗೆ ಕಂಟಕವಾಗಿರುವ ಸಾಮಾಜಿಕ ಅನಿಷ್ಟಗಳ ಉಚ್ಚಾಟನೆ ಕುರಿತು ಸಂಶೋಧನೆ, ವಿಚಾರ ಸಂಕಿರ್ಣ, ಕಮ್ಮಟಗಳು ನಡೆಯಬೇಕು. ನಿಜವಾದ ಅರ್ಥದಲ್ಲಿ ಒಟ್ಟು ಸಮಾಜದಲ್ಲಿ ಲಿಂಗ ಸಂವೇದನಾಶೀಲತೆಯನ್ನು ಮೂಡಿಸುವಂಥ ಜ್ಞಾನಶಿಸ್ತನ್ನು ಅಭಿವೃದ್ಧಿಪಡಿಸುವಂತಾಗಬೇಕು. ಆಗ ಮಾತ್ರ ಅದು ಮಹಿಳಾ ವಿ.ವಿ. ಅನಿಸಿಕೊಂಡೀತು. ಈಗ ನಡೆಯುತ್ತಿರುವುದು ಮಹಿಳಾ ವಿ.ವಿ. ಅಲ್ಲ. ಅದು ಉತ್ತರ ಕರ್ನಾಟಕದ ಮಹಿಳೆಯರ ಉನ್ನತ ವ್ಯಾಸಂಗಕ್ಕೆ ಅಡ್ಡಿಯಾಗುತ್ತಿರುವ ಒತ್ತಾಯದ ಸೂತಕದ ಮನೆಯಾಗಿದೆ. ಮೇಲಿನ ಈ ಪರಿಕಲ್ಪನೆ ಕುರಿತು ಬಿಜಾಪೂರ ವಿ.ವಿ. ಪ್ರಾರಂಭವಾಗುವಾಗಲೆ ಅನೇಕ ಶಿಕ್ಷಣತಜ್ಞರು, ಮಹಿಳಾ ಚಳುವಳಿಗಾರರು ಸರಕಾರದ ಗಮನ ಸೆಳೆಯಲು ಪ್ರಯತ್ನಪಟ್ಟರಾದರೂ ದೃಷ್ಟಿಹೀನ ಸರಕಾರಿ ಅಧಿಕಾರಿಗಳು, ಅಕ್ಷರದ್ರೋಹಿಗಳಾದ ರಾಜಕಾರಣಿಗಳು ಮಾತ್ರ ತಮ್ಮ ಮೂಗಿನ ನೇರಕ್ಕೆ ಒಂದು ಹಳಸಲು ವಿ.ವಿ.ಯನ್ನು ಪ್ರಾರಂಭಿಸಿಯೇ ಬಿಟ್ಟರು. ಈ ಕ್ಷಣಕ್ಕೂ ಅದು ಎಲ್ಲ ಬಗೆಯ ಬಾಲಾರಿಷ್ಟ ರೋಗಗಳಿಂದ ನರಳುತ್ತಿದೆ.




ಹೀಗೆ ಮಹಿಳಾ ಶಿಕ್ಷಣವು ಮಹಿಳೆಯರು ಪ್ರತ್ಯೇಕ ಕುಳಿತು ಕಲಿಯುವುದಲ್ಲ. ಹೆಣ್ಣು, ಗಂಡುಗಳಿಬ್ಬರೂ ಒಂದೇ ಸೂರಿನಡಿ ಕುಳಿತು ಪರಸ್ಪರ ಸೌಹಾರ್ದತೆ, ಆತ್ಮೀಯತೆ, ಗೌರವ ಮೂಡುವಂತೆ ಕಲಿಯುವಂತಾಗಬೇಕು. ಭಿನ್ನ ಲಿಂಗಿಗಳು ಪರಸ್ಪರ ಅರಿತುಕೊಂಡು ಸಹಜವಾಗಿ ಬದುಕು ನಿರ್ವಹಿಸಲು ಶಾಲಾ ಕಾಲೇಜುಗಳಿಗಿಂತ ಬೇರೆ ತರಬೇತಿ ಕೋಣೆಗಳು ಬೇಕಾಗಿಲ್ಲ. ಮಹಿಳೆಯರು ಸಾಂಪ್ರದಾಯಿಕ ಘೋಷಾ ಪದ್ಧತಿಯಿಂದ ಬಿಡುಗಡೆ ಪಡೆಯಬೇಕಾದ ಈ ಹೊತ್ತಲ್ಲಿ ಪ್ರತ್ಯೇಕ ಶಿಕ್ಷಣವು ಅಪ್ರಸ್ತುತವಷ್ಟೇ ಅಲ್ಲ, ಅವೈಜ್ಞಾನಿಕವೂ ಹೌದು. ಮುಕ್ತ ಮಾರುಕಟ್ಟೆ ವ್ಯವಸ್ಥೆಯಲ್ಲಿ ಗಂಡು, ಹೆಣ್ಣುಗಳು ಲಿಂಗಾತೀತವಾಗಿ ಎಡೆಬಿಡದೆ ದುಡಿಯುವ ಅನಿವಾರ್ಯತೆ ಎದುರಾಗಿರುವಾಗ ಕಲಿಯುವುದು ಮಾತ್ರ ಪ್ರತ್ಯೇಕವೆಂದರೆ ಸಾಧ್ಯವೆ ?

**ಡಾ॥ ಮೀನಾಕ್ಷಿ ಬಾಳಿ**
ಅಧ್ಯಕ್ಷರು, ಪ್ರಜ್ಞಾ ಕಾನೂನು ಸಲಹಾ ಸಮಿತಿ, ಕಲಬುರಗಿ

# ತರವಲ್ಲ ಬಿಡಿ ಇದು ತರವಲ್ಲ



ಎಚ್. ಎಲ್. ಕೇಶವಮೂರ್ತಿ

ಮಾನ್ಯ ಮಂತ್ರಿಗಳದ್ದು ತುಂಬಿದ ಸಂಸಾರ. ಮನೇಲಿ ಎಳೆ ಎಳೆ ಮೊಮ್ಮಕ್ಕಳಿದ್ದೊ. ಒಂದು ದಿವಸ ಮೊಮ್ಮಗನ್ನ ಕರ್‍ಕೊಂಡು ಅಂಗಡೀಗೆ ಹೋಗಿದ್ರಂತೆ. ಅಲ್ಲಿ ರೂಪಾಯಿ ಎಣಿಸೋ ಮಿಷಿನ್ನು ಮಗುವಿನ ಕಣ್ಣಿಗೆ ಬಿದ್ದಿದೆ. ಅದು ಬೇಕು ಅಂದದೆ. ಬ್ಯಾಡ ಕಣಪ್ಪ ಅದು. ಅದು ಮನೇಲಿದ್ರೆ ಜನ ತಪ್ಪು ತಿಳ್ಕೊತಾರೆ ಅಂದ್ರಂತೆ. ಈಚಲ ಮರದ ಕೆಳಗೆ ಮಜ್ಜಿಗೆ ಕುಡಿದ ಸಮಾಚಾರ ಆದಂಗಾಯ್ತದೆ ಅಂತಾನೂ ಹೇಳಿದ್ರಂತೆ. ಪಾಪ ಈ ಸೂಕ್ಷ್ಮಗಳೆಲ್ಲ ಆ ಹೈದನಿಗೆ ಅರ್ಥವಾಗಬೇಕಲ್ಲ. ಇದೇ ಬೇಕು ಅಂತ ಚಂಡಿ ಹಿಡೀತಂತೆ. ತಾತನ ಕರುಳೂ ಚುರುಕ್ ಅಂತಂತೆ. ತಗೋ ಅತ್ಲಾಗಿ ಅಂದ್ರಂತೆ ಅವ್ರು. ಇದು ಸತ್ಯಸಂಗತಿ ಅಂತ ಮಂತ್ರಿವರ್ಯರೇ ಹೇಳಿದರು. ಅಲ್ಲಾ ಮೊಮ್ಮಗನ ಮೇಲಿನ ಪ್ರೀತಿಗೆ ಅದು ಕೇಳ್ತಲ್ಲ ಅಂತ ನೋಟು ಎಣಿಸೋ ಮಿಷಿನ್ನು ತೆಗೆದುಕೊಟ್ರೆ ಅದ್ಕೇ ಹಿಂಗೆಲ್ಲ ಕತೆ ಕಟ್ಟೋದು ನ್ಯಾಯ ಅಲ್ಲ ಬಿಡಿ.

"ರಾಜಕಾರಣಿಗಳ ನಡವಳಿಕೆ ನೋಡಿ ಜನರು ಇತ್ತೀಚೆಗೆ ಅವರಿಗೆ ಗೌರವವನ್ನೇ ಕೊಡುತ್ತಾ ಇಲ್ಲ." ಹೀಗೆ ಮುಂದುವರೆದರೆ ನಮ್ಮನ್ನು ಕಂಡರೆ ಅಸಹ್ಯಪಟ್ಟುಕೊಳ್ಳುವ ದಿನಗಳು ದೂರ ಇಲ್ಲ ಎಂದೆಲ್ಲ ಯಾವುದೋ ಪಕ್ಷದ ನಾಯಕರು ಅಲವತ್ತುಕೊಳ್ಳುತ್ತಿದ್ದರು. ಅವರ ತೊಳಲಾಟ ನೋಡಿ ಸಂಕಟಾನೆ ಆಯಿತು. ಶಾಸಕರು ಹಳ್ಳಿಗಳಿಗೆ ಹೋದರೆ 'ಶಾಸಕರು ಬಂದ್ರು ಶಾಸಕರು ಬಂದ್ರು' ಅಂತ ದಡಗುಟ್ಟಿಕೊಂಡು ಓಡಾಡುತ್ತಿದ್ದ ದಿನಗಳು ಮಾಯ ಆಗಿದ್ದವು. 'ಬಂದ್ರೆ ಬರ್‍ತಾನೆ' ಅಂತ ಧಿಮಾಕಲ್ಲಿ ಜಗಲಿ ಮೇಲೆ ಕುಂತು ಬೀಡಿ ಎಳೆಯುವವರ ಸಂಖ್ಯೆ ಹೆಚ್ಚುತ್ತಿತ್ತು. ಚುನಾವಣೆ ಸಮಯದಲ್ಲಿ ಇಂತಹ ವರಸೆ ಇದ್ದಿದ್ದೇಯ. ಇತರ ದಿನಗಳಲ್ಲೂ ಇಂತಹ ದೃಶ್ಯಗಳು ಎದುರಾದರೆ ಎಂತಹವರಿಗಾದರೂ ಸಂಕಟ ಆಗೋದೇಯ. ಜನ ಯಾಕೆ ಹಿಂಗೆ ಬದಲಾದರು ಅಂತ ಹಂಗೇ ಯೋಚಿಸುತ್ತಾ ಕುಂತೆ. ನೆನಪಿನ ಸುರುಳಿ ಬಿಚ್ಚಿಕೊಳ್ಳುತ್ತಾ ಹೋಯ್ತು.

ತಾಲ್ಲೂಕು ಕೇಂದ್ರದಲ್ಲಿ ತುರ್ತು ಕೆಲಸ ಇತ್ತು, ಹೋದೆ. ಹಿಂದೆಲ್ಲ ಸಂಬಂಧಿಸಿದವರಿಗೆ ಇಷ್ಟು ಹಣ ಸಂದಾಯ ಮಾಡಿದರೆ ಕೆಲಸ ಆಗ್ತಿತ್ತು. ಈಗ ಹಂಗಿಲ್ಲ. ಮಾಮೂಲಿನಂತೆ ಹಣ ಕೊಡೋದು ಇದ್ದೇ ಇರುತ್ತೆ. ಜೊತೆಗೆ 'ಶಾಸಕರ ಕೈಲಿ ಒಂದು ಮಾತ ಹೇಳಿಸ್ಬಿಡಿ' ಅಂತಾರೆ. ಯಾಕೆ ಅಂದರೆ ಕೆಲಸ ಮಾಡಿಕೊಟ್ಟ ನಂತರ ಶಾಸಕರ ಬಳಿ ನೀವು ಹೇಳಿದ ಕೆಲಸ ಮಾಡ್ಕೊಟ್ಟಿದ್ದೀನಿ ಸಾ ಅಂತ ಕೈ ಹಿಸುಕೊಂದು, ಹಲ್ಲು ಗಿಂಜೋದು ಕೇಸ್ ವರ್ಕರ್ ಆರೋಗ್ಯ ದೃಷ್ಟಿಯಿಂದ ಒಳ್ಳೇಯದು ಅನ್ನೋದನ್ನ ಅವರ ಅನುಭವ ಕಲಿಸಿಕೊಟ್ಟಿರುತ್ತೆ. ಹಣ ಕೊಟ್ಟಿದ್ದು ತಗಂಡದ್ದು ಎಲ್ಲನೂ ಅವರ ಹತ್ತಿರ ಹೇಳಲ್ಲ ಅನ್ನೋದರಲ್ಲಿ ವಿಶೇಷವೇನೂ ಇಲ್ಲ ಬಿಡಿ. ಇದರ ಅಂತರಾಳ ಗೊತ್ತು. ಶಾಸಕರ ಮನೆಗೆ ಸೀದ ಹೋದೆ. 'ಬೆಂಗಳೂರಿಗೆ ಹೋಗವ್ರೆ' ಅಂದ್ರು ಮನೆಯೋರು. ಬೆಂಗಳೂರು ಹತ್ತಿದೆ. ಶಾಸಕರ ಭವನಕ್ಕೆ ಹೋದೆ. ಸೋಮಾರಿಕಟ್ಟೆ ಅಂತಾರಲ್ಲ ಹಂಗಿತ್ತು ಅವರ ರೂಮು. ಯಾರೋ ಒಬ್ಬ 'ಏನು ಬೇಕಿತ್ತು' ಅಂತ ಕೇಳಿದ. 'ಶಾಸಕರು' ಅಂದೆ. 'ಅವರು ಸಿಗಾಕಿಲ್ಲ' ಅಂದ. ಯಾಕೆ ಅಂದೆ. 'ರೆಸಾರ್ಟ್‍ಗೋಗವ್ರೆ' ಅಂದ. ಅಲ್ಲಿ ಶಾಸಕರಿಗೆ ಯಾವ ತೊಂದರೆಯೂ ಆಗಬಾರದು ಅಂತ ಶಾಸಕರ ಭವನ ನಿರ್ಮಿಸಿದ್ದಾರೆ. ಅಷ್ಟು ಮಾತ್ರ ಅಲ್ಲ. ಅವರಿಗೆ ಯಾವುದೇ ರೀತಿಯ ಅನಾನುಕೂಲ ಆಗಬಾರದು ಅಂತಾನೆ ಎರಡು ಕೊಠಡಿಗಳ ಮಧ್ಯದ ಗೋಡೆಯಿಕ್ಕಿ ಬಾಗಿಲ ಇಡಿಸವ್ರೆ. ಅಚ್ಚುಕಟ್ಟಾದ ಮನೆ ರೀತಿನೇ



ಎಲ್ಲಾ ಮಾರ್ಪಾಡುಗಳಿದ್ದರೂ ಈ ಇಂತಹ ಪೋಟಿ ಪಟಾಲಂಗೆ ಅದನ್ನು ಬಿಟ್ಟುಕೊಟ್ಟು ರೆಸಾರ್ಟ್‌ಗೆ ಹೋಗಿದಾರಲ್ಲ ಅಂತ ಮನಸ್ಸಿಗೆ ಒಂದು ರೀತಿಯ ಬೇಸರಾನೆ ಆಯ್ತು. ಯಾವಾಗ ಬರ್ತಾರೆ ಅಂದೆ. ಪಾರ್ಟಿ ಮೀಟಿಂಗದೆ, ಏನೂ ಹೇಳಕ್ಕಾಗಲ್ಲ ಅಂದ. ಪಕ್ಷದ ಸಭೆ ನಡೆಸೋಕೆ ಪಕ್ಷದ ಕಛೇರಿ ಇಲ್ಲವಾ ? ವಿಧಾನಸೌಧ, ಶಾಸಕರ ಭವನ ಅಲ್ಲೆಲ್ಲಾ ಸಭಾಂಗಣ ಇಲ್ಲವಾ ? ಏನೋ ದೊಡ್ ದೊಡ್ಡೋರ್ ಸಮಾಚಾರ ಅಂದುಕೊಂಡೆ. 'ಯಾವ ರೆಸಾರ್ಟು ಅಂದೆ' ಹೇಳಿದ. ಅನ್ಯ ಮಾರ್ಗ ಇರಲಿಲ್ಲ. ರೆಸಾರ್ಟ್ ಹತ್ತಿದೆ. ಅಲ್ಲಿ ನೋಡ್ತೀನಿ ಸಂತೆ ಕಟ್ಟೋಕೆ ಮುಂಚೆ ಗಂಟು ಕಳ್ಳರು ಬಂದರು ಅಂತಾರಲ್ಲ ಹಂಗೆ ಸುದ್ದಿ ಮಾಧ್ಯಮದೋರು ತುಂಬಿಕೊಂಡಿದ್ದರು. ಯಾರನ್ನೂ ಒಳಕ್ಕೆ ಬಿಡುತ್ತಿರಲಿಲ್ಲ. ಅವರೆಲ್ಲ ಅಲ್ಲೇ ಠಳಾಯಿಸುತ್ತಾ ಇದ್ದರು. ಶಾಸಕ ಆದೋನು ಕ್ಷೇತ್ರದ ಜನರ ಕಷ್ಟಸುಖ ವಿಚಾರಿಸದೆ ಇಲ್ಲಿ ಠಿಕಾಣಿ ಹೂಡಿದ್ದಾರಲ್ಲ ಅಂತ ಅವರಿಗೂ ಶಾಸಕರ ಬಗ್ಗೆ ತಿರಸ್ಕಾರದ ಭಾವನೆ ಬಂದಿರಬೇಕು. ಯಾರೋ ಒಬ್ಬ ಮಂತ್ರಿ ಅಂತೆ. ತಡವಾಗಿ ಬಂದ. ಅವೆಲ್ಲ ಅವನಿಗೆ ಅಟಕಾಯಿಸಿಕೊಂಡೂ. ಇಲ್ಲಿಗ್ಯಾಕೆ ಬಂದ್ರಿ? ಮುಖ್ಯಮಂತ್ರಿ ಬುಡಕ್ಕೆ ನೀರು ಬಿಡುವ ಕಾರ್ಯಕ್ರಮ ಏನಾದರೂ ಇದೆಯೆ ಅಂತ ಏನೇನೋ ಕೇಳ್ತಿದ್ದೊ. ಮಂತ್ರಿವರ್ಯರು ಇವರೆಲ್ಲರ ಪ್ರಶ್ನೆಗಳಿಗೂ ಏನ್ ದಿವಿನಾಗಿ ಉತ್ತರ ಕೊಟ್ಟರು ಅಂತೀರಿ. ಕ್ಷೇತ್ರಕ್ಕೆ ಹೋದರೆ ಹಗಲೂ ರಾತ್ರಿ ಕೆಲಸ. ಅದಿಲ್ಲ, ಇದಿಲ್ಲ ಹಿಂಗಾಗಬೇಕು, ಹಂಗಾಗಬೇಕು ಅನ್ನೊ ನೂರೆಂಟು ಗೋಳು ಕೇಳಿ ಕೇಳಿ ತಲೆಚಿಟ್ಟು ಹಿಡಿದು ಹೋಗಿತ್ತು. ಅದಕ್ಕೆ ಒಂದು ನಾಲ್ಕು ದಿನ ರೆಸ್ಟ್ ತಗೋಳಾಕೆ ಬಂದಿದೀನಿ ಅಂದ್ರು!

ಪಾಪ ವರ್ಷವೆಲ್ಲ ಗೇದು ರೆಸ್ಟ್ ತಗೋಳೋಕೆ ಬಂದಿರೋ ಇವರುಗಳನ್ನು ನಾನು ನಮ್ಮ ಕಷ್ಟ ಹೇಳಿಕೊಳ್ಳೋಣ ಅಂತ ಬಂದ್ರೆ ಶಾಸಕ ಆದೋನು ರೆಸಾರ್ಟಲಿ ಮಜ ಮಾಡ್ತ ಕುಂತವನಲ್ಲ ಅಂತ ತಿಳ್ಕೊಂಡುಬಿಟ್ಟೆನಲ್ಲ. ತೋಬಾ ತೋಬಾ ಅಂತ ಕೆನ್ನೆಗೆ ಹೊಡೆದುಕೊಂಡೆ.



ಚುನಾಯಿತ ಪ್ರತಿನಿಧಿಗಳ ರೆಸಾರ್ಟ್ ವಾಸ ಸಾಧುವಾದದ್ದೇ ಅನ್ನಿಸಿತು. ಅವರ ಬಗ್ಗೆ ಗೌರವ ಮೂಡಿತು.

ನನಗೆ ಹಣ ಎಣಿಸೋಕೂ ಮಿಷಿನ್ ಅದೆ ಅನ್ನೋದೆ ಗೊತ್ತಿರಲಿಲ್ಲ. ಪ್ರಭಾವಿ ಮಂತ್ರಿ ಮನೆ ಮೇಲೆ ಲೋಕಾಯುಕ್ತ ದಾಳಿಯಾಯಿತಲ್ಲ. ಆಗ ಜನಾದಜನ ಎಲ್ಲ ಅಷ್ಟು ಸಿಗ್ತಂತೆ, ಇಷ್ಟು ಸಿಗ್ತಂತೆ, ಅದು ಸಿಗ್ತಂತೆ ಇದು ಸಿಗ್ತಂತೆ ಅಂತ ಪಟಾಕಿ ಹಾರಿಸ್ತಾನೆ ಇತ್ತು. ಆಗ ಅಂತೋರ ಬಾಯಲ್ಲಿ 'ನೋಟು ಎಣಿಸೋ ಮಷಿನ್ನೂ ಇತ್ತಂತೆ' ಅನ್ನುವ ಮಾತು ಕೇಳಿಬಂತು. ಇಂತಹ ಸುದ್ದಿ ಅಂದರೆ ಜನ ಕಿವಿ ತೆರ್ಕೊಂಡು ಕುಂತಿರ್ತಾರಲ್ಲವಾ. ಅವನ್ನ ನೊಚ್ಚಗೆ ಮಾಡಬೇಕು ಅಂತ ಹೊಸ ಹೊಸ ಕತೇನ ಬಿಡುತ್ತಿದ್ದರಂತೆ. ಅಂತಹದ್ದದಲ್ಲಿ ಒಂದು ಎಂದರೆ,

ಹಣ ಅಂದರೆ ಲಕ್ಷ್ಮಿ ಅಲ್ವೇನಯ್ಯ, ಅವನಿಗೆ ಅವಳ ಮೇಲೆ ಬಹಳ ಭಕ್ತಿ. ಲಂಚ ಕೊಡೋರೂ ಅವಳ ಭಕ್ತರೇಯ. ಮಾತನಾಡಿದಷ್ಟು ಕೊಟ್ಟರೆ ಲಕ್ಷ್ಮೀನ ಮನೆ ಬಿಟ್ಟು ಹೋಗು ಅಂದಂಗೆ. ಅದು ಅವಳಿಗೆ ಅವಮಾನ ಅಲ್ವಾ. ಅದಕ್ಕೆ ವಸಿ ಗುಳುಂ ಮಾಡಿರ್ತಾರೆ. ಇವನೇನು ದಡ್ಡನಾ. ನಿಯತ್ತಿಲ್ಲದ ಜನ ಹಿಂಗೆ ಮಾಡ್ತಾರೆ ಅನ್ನೋದ ತಿಳಿದಿರೋನೇಯ. ಅದೇ ಲಂಚದ ಹಣ ಆದರೇನು ಅವಳೂ ಲಕ್ಷ್ಮೀನೆ. ಎಣಿಸಿ ತಗೋತಾನೆ. ಹಿಂಗೆ ತಗೊಳೋದು ವಸಿ ದುಡ್ಡೇನಯ್ಯ ಕೈಲಿ ಎಣಿಸೋಕೆ. ಅದ್ಕೆ ಮಿಷಿನ್ ಇಟ್ಕಂಡವ್ನೆ. ಇಂತಹ ಕತೆಗಳ ಕೇಳಿ ಕೇಳಿ ಅಲ್ವಾ ದುಡ್ಡೆಣಿಸೋಕೆ ಮಿಷಿನ್ ಇಟ್ಟವ್ನೆ ಅಂದಮೇಲೆ ಅವ್ನು ಎಷ್ಟು ಗೋರಿ ಗುಡ್ಡೆ ಹಾಕಿರ್ಬೇಕು ಅನ್ನೊ ಕೊಶ್ಚನ್ನು ಜನಾದಜನರ ಬಾಯಲ್ಲಿ ಹರಿದಾಡಹತ್ತಿತು.

ಸತ್ಯ ಏನು ಅಂದ್ರೆ ಮಾನ್ಯ ಮಂತ್ರಿಗಳದ್ದು ತುಂಬಿದ ಸಂಸಾರ. ಮನೇಲಿ ಎಳೆ ಎಳೆ ಮೊಮ್ಮಕ್ಕಳಿದ್ದೊ. ಒಂದು ದಿವಸ ಮೊಮ್ಮಗನ್ನ ಕರ್ಕೊಂಡು ಅಂಗಡೀಗೆ ಹೋಗಿದ್ರಂತೆ. ಅಲ್ಲಿ ರೂಪಾಯಿ ಎಣಿಸೋ ಮಿಷಿನ್ನು ಮಗುವಿನ ಕಣ್ಣಿಗೆ ಬಿದ್ದಿದೆ. ಅದು ಬೇಕು ಅಂದದೆ. ಬ್ಯಾಡ ಕಣಪ್ಪ ಅದು. ಅದು ಮನೇಲಿದ್ರೆ ಜನ ತಪ್ಪು ತಿಳ್ಕೊತಾರೆ ಅಂದ್ರಂತೆ. ಈಚಲ ಮರದ ಕೆಳಗೆ ಮಜ್ಜಿಗೆ ಕುಡಿದ ಸಮಾಚಾರ ಆದಂಗಾಯ್ತದೆ ಅಂತಾನೂ ಹೇಳಿದ್ರಂತೆ. ಪಾಪ ಈ ಸೂಕ್ಷ್ಮಗಳೆಲ್ಲ ಆ ಹೈದನಿಗೆ ಅರ್ಥವಾಗಬೇಕಲ್ಲ. ಇದೇ ಬೇಕು ಅಂತ ಚಂಡಿ ಹಿಡೀತಂತೆ. ತಾತನ ಕರುಳೂ ಚುರುಕ್ ಅಂತಂತೆ. ತಗೋ ಅತ್ಲಾಗಿ ಅಂದ್ರಂತೆ ಅವ್ರು. ಇದು ಸತ್ಯಸಂಗತಿ ಅಂತ ಮಂತ್ರಿವರ್ಯರೇ ಹೇಳಿದರು.

ಅಲ್ಲಾ ಮೊಮ್ಮಗನ ಮೇಲಿನ ಪ್ರೀತಿಗೆ ಅದು ಕೇಳ್ತಲ್ಲ ಅಂತ ನೋಟು ಎಣಿಸೋ ಮಿಷಿನ್ನು ತೆಗೆದುಕೊಟ್ರೆ ಅದ್ಕೇ ಹಿಂಗೆಲ್ಲ ಕತೆ ಕಟ್ಟೋದು ನ್ಯಾಯ ಅಲ್ಲ ಬಿಡಿ.

ಹಾಳಾದ ಮೊಬೈಲ್‌ಗಳ ಸಹವಾಸವೇ ಬ್ಯಾಡ ಅನ್ನಿಸುತ್ತೆ. ಎಂತೆಂತಹವೋ ಮೊಬೈಲ್‌ಗಳು ಬಂದಿವೆ. ಮುಟ್ಟಿದರೆ ಸಾಕು ಏನೇನನ್ನೋ ತೋರಿಸ್ತವೆ. ಓರ್ವ ಶಾಸಕರು ಏನು ಮಾಡಿದರಪ್ಪ ಅಂದರೆ ಶಾಸನ ಸಭೆಗೆ ಇಂತಹ ಮುಟ್ಟಿದರೆ ಮುನಿ ಮೊಬೈಲ್ ತಗೊಂಡೋಗಿದ್ರಂತೆ. ಅದು ಹೊಸಾನ ಹೊಸ ಇನ್ಸ್ಟ್ರುಮೆಂಟ್ ಅಂತೆ. ಕುತೂಹಲ ಅವರಿಗೆ. ತಿರುಗಿಸಿ ಮುರುಗಿಸಿ ನೋಡಿದ್ರಂತೆ. ಅದೆಲ್ಲಿ ಮುಟ್ಟಿದರೂ ಏನು ಕತೆಯೋ ಸ್ಕ್ರೀನ್ ಮೇಲೆ ಸುಂದರವಾದ ಮಹಿಳೆಯ ಚಿತ್ರ ಬಂದಿದೆ. ಯಾರಾದರೂ ಕಂಡರೇನಪ್ಪ ಗತಿ ಅಂತ ಭಯ ಆಯಿತಂತೆ. ಗಾಬರೀಲಿ ಸ್ಕ್ರೀನ್ ಎಲ್ಲಿ ಹೇಗೆ ಮುಟ್ಟಿದನೋ ಏನು ಕತೆಯೋ ಮಹಿಳೆಯ ಎದೆ ಭಾಗ ಝೂಮ್ ಆಯಿತಂತೆ. ಕಾಕತಾಳೀಯ ಅಂತಾರಲ್ಲ ಹಂಗೆ ಟೀವಿಯೋರೂ ಕ್ಯಾಮರಾನ ಅದರ ಮೇಲೆ ಫೋಕಸ್ ಮಾಡಿದರಂತೆ. ಶಾಸಕರ ಪಕ್ಷದ ಮುಖಂಡರೇ ಹಿಂಗಿಂಗಾಯ್ತು ಅಂತ ಹೇಳಿದ್ರೂ ಯಾರೂ ನಂಬ್ತಾನೆ ಇಲ್ಲ! ಮಾಧ್ಯಮ ದವರಿಗೆ ಇಂತಹ ಬಕ್ರಗಳು ಸಿಕ್ಕಿದರೆ ಬನ್ನೂರ ಕುರಿಬಾಡು ಸಿಕ್ಕಿದಂಗಲ್ಲವಾ. ಹಗಲೂ ರಾತ್ರಿ ತೋರಿಸಿದ್ನೆ ತೋರಿಸಿ ಪಾಪ ಶಾಸಕರ ಮಾನ ಮೂರ್‍ಕಾಸಿಗೂ ಬೇಡದಂಗೆ ಮಾಡಿದರು. ತರವಲ್ಲ ಬಿಡಿ ಇದು ತರವಲ್ಲ.


**ಎಚ್. ಎಲ್. ಕೇಶವಮೂರ್ತಿ**
ನಂ. ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್ಸ್, ಗುತ್ತಲು, ಮಂಡ್ಯ – ೫೭೧ ೪೦೩

# ವೇದಿಕ್ ಮ್ಯಾಥಮ್ಯಾಟಿಕ್ಸ್ ವೈದಿಕವೇ? ಗಣಿತವೇ??



*ಯಥಾ ಶಿಖಾ ಮಯೂರಾಣಾಂ ನಾಗಾನಾಂ ಮಣಯೋ ಯಥಾ ।*
*ತದ್ವದ್ ವೇದಾಂಗಶಾಸ್ತ್ರಾಣಾಂ ಗಣಿತಂ(ಜ್ಯೋತಿಷಂ) ಮೂರ್ಧನಿ ಸ್ಥಿತಮ್ ॥*
*– ಋ.ವೇ.ಜ್ಯೋ., ೪, ಯ.ವೇ.ಜ್ಯೋ., ೩೫.*

**"ನವಿಲುಗಳ ಶಿರದಲ್ಲಿ ಶಿಖೆಯಿರುವಂತೆ, ಸರ್ಪಗಳ ಹೆಡೆಯಲ್ಲಿ ಮಣಿಯಿರುವಂತೆ, ಗಣಿತ (ಖಗೋಳ) ವೇದಾಂಗಶಾಸ್ತ್ರಗಳ ಶಿರೋಮಣಿಯಾಗಿದೆ."**

**ಭಾರತೀಯ ಜ್ಞಾನಪದ್ಧತಿಯಲ್ಲಿ ಗಣಿತ ಮತ್ತು ಖಗೋಳ**

ಇದು ಬಹಳ ಪ್ರಾಚೀನವೂ, ಭಾರತೀಯ ಖಗೋಳ ವಿಜ್ಞಾನದ ಆದ್ಯಗ್ರಂಥವೂ ಆದ 'ವೇದಾಂಗ ಜ್ಯೋತಿಷ' ಗ್ರಂಥದಲ್ಲಿ ಗಣಿತ ಮತ್ತು ಖಗೋಳ ವಿಜ್ಞಾನ ಶಾಖೆಗಳಿಗೆ ಕೊಟ್ಟಿರುವ ಪ್ರಾಶಸ್ತ್ಯ ಮತ್ತು ಅಗ್ರಸ್ಥಾನ. ಇಲ್ಲಿ ಬಳಸಿರುವ 'ಜ್ಯೋತಿಷ' ಎಂಬ ಪದದ ಬಗ್ಗೆ ಸ್ಪಷ್ಟನೆ ಅಗತ್ಯ. ಈಗಿನ ಪರಿಭಾಷೆಯಲ್ಲಿ 'ಜ್ಯೋತಿಷ' ಎಂದರೆ ಜಾತಕ ನೋಡಿ ಭವಿಷ್ಯವನ್ನು ಹೇಳುವ ಒಂದು ಪದ್ಧತಿ ಎಂದು ಸಾಮಾನ್ಯವಾಗಿ ಅರ್ಥೈಸಲಾಗುತ್ತಿದೆ. ಆದರೆ ಪ್ರಾಚೀನ ಭಾರತದ ಜ್ಞಾನ ಸಮುಚ್ಚಯದಲ್ಲಿ 'ಜ್ಯೋತಿಷ' ಎಂದರೆ ಆಕಾಶಕಾಯಗಳ ಚಲನೆ, ನಕ್ಷತ್ರಗಳನ್ನು ಗುರುತಿಸುವುದು ಮತ್ತು ಅವುಗಳ ಸ್ಥಾನಗಳ ಮತ್ತು ಗ್ರಹಣಗಳ ಲೆಕ್ಕಾಚಾರಗಳು, ಆಕಾಶಕಾಯಗಳ ಉದಯಾಸ್ತಗಳು ಇತ್ಯಾದಿಗಳನ್ನು ಹೊಂದಿರುವ ಖಗೋಳ ವಿಜ್ಞಾನ. ಕಾಲಕ್ರಮೇಣ, ಸುಮಾರು ಕ್ರಿ. ಶ. 3–4ನೇ ಶತಮಾನಗಳ ಹೊತ್ತಿಗೆ ಕಣಿ ಹೇಳುವ ಫಲಜ್ಯೋತಿಷವೂ ಹೊರದೇಶಗಳಿಂದ ಆಮದು ಆಗಿ ಖಗೋಳ ವಿಜ್ಞಾನದೊಂದಿಗೆ ಅನೈತಿಕವಾಗಿ ಸೇರಿಕೊಂಡು ಇಂದಿನ 'ಜ್ಯೋತಿಷಶಾಸ್ತ್ರ'ವೆಂದು ಮಾರ್ಪಾಡಾಯಿತು. ನಮ್ಮ ಸಂಸ್ಕೃತ ಪಾಠಶಾಲೆಗಳಲ್ಲಿ ಮತ್ತು ಸಂಸ್ಕೃತ ವಿ. ವಿ.ಗಳಲ್ಲಿ ಜ್ಯೋತಿಷಶಾಸ್ತ್ರದಲ್ಲಿ ಅದರ ನಿಜಕ್ಕೂ ಅರ್ಥಪೂರ್ಣವಾದ ಮತ್ತು ವೈಜ್ಞಾನಿಕ ಚಿಂತನೆಯನ್ನು ಬೆಳೆಸುವ ಗಣಿತ ಮತ್ತು ಖಗೋಳವಿಜ್ಞಾನ ಶಾಖೆಗಳನ್ನು ಕಾಟಾಚಾರಕ್ಕೆ ಬೋಧಿಸಿ (35% ಅಂಕಗಳು ಬಂದರೆ ಸಾಕು!) ಉದರಂಭರಣಕ್ಕೆ ಹೇಳಿಮಾಡಿಸಿದಂತಿರುವ ಫಲಜ್ಯೋತಿಷಕ್ಕೆ ಎಲ್ಲಿಲ್ಲದ ಮನ್ನಣೆ! ಇನ್ನು ಈ ವಿಷಯದಲ್ಲಿ ಯಾರು ಬೇಕಾದರೂ ಪಿಎಚ್.ಡಿ. ಪದವಿಯನ್ನು ಗಳಿಸಬಹುದು. ಈಗಾಗಲೇ ಶ್ರೀಲಂಕೆಯ 'ಅಂತಾರಾಷ್ಟ್ರೀಯ ವಿ. ವಿ.'ಗಳಂಥ ಸಂಸ್ಥೆಗಳು ಇಂತಹ ಬೋಗಸ್ ಪಿಎಚ್.ಡಿ. ಗಳಿಗೆ ಹೆಸರು ವಾಸಿಯಾಗಿವೆ! ಕೆಲವು ಕಡೆ ಮಹಾಪ್ರಬಂಧದ (thesis) ಆವಶ್ಯಕತೆಯೂ ಇಲ್ಲ. ಮೋಜಿನ ಸಂಗತಿಯೆಂದರೆ ಬಹಳಷ್ಟು ಪಿಎಚ್.ಡಿ.ಗಳ ಗಹನವಾದ ವಿಷಯವೆಂದರೆ **"ಕುಜದೋಷ"**! (ತಮಿಳು ಭಾಷೆಯಲ್ಲಿ 'ಜ' ಮತ್ತು 'ಚ' ವ್ಯಂಜನಗಳಿಗೆ ವ್ಯತ್ಯಾಸವಿಲ್ಲ ಎಂಬುದು ಪ್ರಾಸಂಗಿಕ!)

ಈ ಲೇಖನದ ಮೊದಲಿಗೆ ಉಲ್ಲೇಖಿಸಿದ ಶ್ಲೋಕದಲ್ಲಿ 'ಗಣಿತ' ಮತ್ತು 'ಜ್ಯೋತಿಷ' ಎಂಬ ಎರಡು ಪಾಠಾಂತರಗಳಿವೆ. ವೇದಾಂಗ ಜ್ಯೋತಿಷದ ಋಗ್ವೇದೀಯ ಪಠ್ಯದಲ್ಲಿ 'ಜ್ಯೋತಿಷ'ವೆಂದಿದ್ದರೆ ಯಜುರ್ವೇದ ಪಠ್ಯಾಂತರದಲ್ಲಿ 'ಗಣಿತ'ವೆಂದಿದೆ. ನಿಜಾಂಶವೆಂದರೆ ಪ್ರಾಚೀನಕಾಲದಲ್ಲಿ ಗಣಿತ ಕ್ಷೇತ್ರವನ್ನು ಖಗೋಳ ವಿಜ್ಞಾನದ ಒಂದು ಆವಶ್ಯಕ ಅಂಗವೆಂದೇ ಪರಿಗಣಿಸಿದ್ದಾರೆ. ಶುದ್ಧಗಣಿತದ ಕೃತಿಗಳು ಮತ್ತು ಕೃತಿಕಾರರು ಕೆಲವರು ಮಾತ್ರ – ಉದಾಹರಣೆ: ಭಕ್ಷಾಳಿ ಹಸ್ತಪ್ರತಿ, ಶ್ರೀಧರಾಚಾರ್ಯನ 'ಪಾಟೀಗಣಿತ', ಮಹಾವೀರಾಚಾರ್ಯನ 'ಗಣಿತಸಾರಸಂಗ್ರಹ'.

**ಡಾ॥ ಎಸ್. ಬಾಲಚಂದ್ರರಾವ್**

> "ಗಣಿತಶಾಸ್ತ್ರವು ಒಂದು ಮಹಾಸಾಗರದಂತೆ – ಮೇಲ್ಮೈನಲ್ಲಿ (ತೋರಿಕೆಗೆ) ಬಹಳ ಭೀಕರ ಮತ್ತು ಪ್ರಚಂಡವಾದ ಅಬ್ಬರವನ್ನು ಹೊಂದಿದೆ. ಆದರೆ ಆಳದಲ್ಲಿ ಶುದ್ಧವೂ, ಶಾಂತವೂ ಆದ ರಶ್ಮಿಗಳನ್ನು ಹೊರಸೂಸುವ ಅನರ್ಘ್ಯ ಮುತ್ತುರತ್ನಗಳನ್ನೇ ಹೊಂದಿದೆ"
> – *ಸ್ವಾಮೀ ರಾಮತೀರ್ಥ (1873–1906)*

**ವೇದಸಾಹಿತ್ಯದಲ್ಲಿ ಗಣಿತ – ಏನಿದೆ ?**

'ವೇದಿಕ್ ಮ್ಯಾಥಮ್ಯಾಟಿಕ್ಸ್' ಎಂದು ಇತ್ತೀಚೆಗೆ ಜನಪ್ರಿಯವಾಗಿರುವ ವಿಷಯದ ಬಗ್ಗೆ ಚರ್ಚಿಸುವ ಮೊದಲು ವೇದ ಸಮುಚ್ಚಯದಲ್ಲಿ ನಿಜಕ್ಕೂ ಏನು ಗಣಿತವಿದೆ ಎಂದು ಪರಿಚಯಿಸಿಕೊಳ್ಳೋಣ.

1. ಬಹಳ ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಎಣಿಕೆಗೂ ಹಾಗೂ ಲೆಕ್ಕಾಚಾರಗಳಿಗೂ ಹತ್ತನ್ನು ಆಧಾರಸಂಖ್ಯೆಯಾಗಿ (base) ಹೊಂದಿರುವ ದಾಶಮಾನಿಕ ಪದ್ಧತಿಯೇ ಬಳಕೆಯಲ್ಲಿದೆ. ಬ್ಯಾಬಿಲೋನಿಯಾ ಮುಂತಾದ ಪ್ರಾಚೀನ ನಾಗರಿಕತೆಗಳಲ್ಲಿ ಅರವತ್ತನ್ನು ಆಧಾರ ಸಂಖ್ಯೆಯಾಗಿ ಬಳಸುತ್ತಿದ್ದರು. ಯಜುರ್ವೇದ ಸಂಹಿತೆಯಲ್ಲಿ ಏಕ, ದಶ, ಶತ, ... ಇತ್ಯಾದಿಯಾಗಿ 1ರ ಹಿಂದೆ ಹನ್ನೆರಡು ಸೊನ್ನೆಗಳುಳ್ಳ ಸಂಖ್ಯೆಯವರೆಗೆ ಹತ್ತರ ಘಾತಗಳನ್ನು ($10^0$, $10^2$, $10^3$, ... $10^{12}$) ಹೆಸರಿಸಿ ಕೊನೆಯದನ್ನು 'ಪರಾರ್ಧ' ಎಂದು ಕರೆದಿದ್ದಾರೆ. ಪ್ರಾಚೀನ ಗ್ರೀಕರಿಗೆ ಪರಿಚಯವಿದ್ದ ಗರಿಷ್ಠ ಸಂಖ್ಯೆ ಎಂದರೆ $10^4$ (ಹತ್ತು ಸಾವಿರ, myriad)!

2. ಇಂದು ವಿಶ್ವದಾದ್ಯಂತ ಬಳಕೆಯಲ್ಲಿರುವ ಸಂಖ್ಯಾಪದ್ಧತಿ ನಮ್ಮ ಭಾರತದ ಕೊಡುಗೆಯಾದ 'ದಾಶಮಿಕ' ವ್ಯವಸ್ಥೆ. ಹಾಗೆಯೇ ಶೂನ್ಯವೂ ಸೇರಿದಂತೆ ಹತ್ತು ಅಂಕಿಗಳ ಚಿಹ್ನೆಗಳು ಕೂಡ ನಮ್ಮ ದೇಶದ ನಾಸಿಕ್, ಗ್ವಾಲಿಯರ್ ಮುಂತಾದ ಕಡೆಗಳಲ್ಲಿ ಸಿಕ್ಕಿರುವ ಶಿಲಾಶಾಸನಗಳಲ್ಲಿ ಬಳಸಿರುವ ಚಿಹ್ನೆಗಳ ಪರಿಷ್ಕೃತ ರೂಪಗಳಷ್ಟೆ. 'ಶೂನ್ಯ' ಮತ್ತು 'ರೂಪ' (ಒಂದು) ಸಂಖ್ಯೆಗಳ ಪರಿಕಲ್ಪನೆ ಮತ್ತು ಅವುಗಳ ಚಿಹ್ನೆಗಳ ಬಳಕೆಯನ್ನು ಕ್ರಿ. ಪೂ. 200ಕ್ಕೂ ಹಿಂದೆ ರಚಿತವಾದ ಪಿಂಗಳನ 'ಛಂದಸ್ಸೂತ್ರ'ದಲ್ಲಿ ಕಾಣಬಹುದು ('ರೂಪೇಶೂನ್ಯಂ, ದ್ವಿಃ ಶೂನ್ಯೇ' – ಛಂ.ಸೂ. viii, 29–30)

> "ಎಲ್ಲಾ ಸಂಖ್ಯೆಗಳನ್ನು ಹತ್ತು ಚಿಹ್ನೆಗಳ ಮೂಲಕ – ಪ್ರತಿಯೊಂದು ಚಿಹ್ನೆಗೂ ಅದರ ಸ್ಥಾನದಿಂದ (position) ಸಿಗುವ ಬೆಲೆಯಷ್ಟೇ ಅಲ್ಲದೆ ಅದರದೇ ಆದ ಸ್ವಂತ (ನಿರಪೇಕ್ಷ, absolute) ಬೆಲೆಯೂ ಇರುವಂತೆ ಅಭಿವ್ಯಕ್ತಿಸುವ ಚಾಮತ್ಕಾರಿಕ ವಿಧಾನವನ್ನು ನಮಗೆ ನೀಡಿರುವುದು ಭಾರತವೇ! ಈ ಪರಿಕಲ್ಪನೆ ಆರ್ಕಿಮಿಡಿಸ್ ಮತ್ತು ಅಪಲೋನಿಯಸ್ ಅಂಥವರ ಪ್ರತಿಭೆಗೂ ಮೀರಿದ್ದು" – ಲಾಪ್ಲಾಸ್ (Laplace, 1749–1827), ಪ್ರಖ್ಯಾತ ಫ್ರೆಂಚ್ ಗಣಿತಜ್ಞ.

3. ವೇದಸಾಹಿತ್ಯದಲ್ಲಿ ದಾಶಮಿಕ ಪದ್ಧತಿಯನ್ನೇ ಅನುಸರಿಸಿ, ಸಂಯುಕ್ತ ಸಂಖ್ಯೆಗಳಾದ 11, 27 ಮುಂತಾದವುಗಳನ್ನು ಸುಲಭವಾಗಿ 'ಏಕಾದಶ', 'ಸಪ್ತವಿಂಶತಿ' ಇತ್ಯಾದಿಯಾಗಿ ಕರೆದಿದ್ದಾರೆ. ಅದೇ ರೀತಿ ಒಂದು ಸಂಖ್ಯೆ ಹತ್ತರ ಘಾತದ (power of 10) ಅಥವಾ ಅದರ ಗುಣಕದ ಸಮೀಪದಲ್ಲಿದ್ದರೆ, ಆ ಹತ್ತರ ಘಾತದಿಂದ ಅಥವಾ ಗುಣಕದಿಂದ ಸೂಕ್ತ ಸಂಖ್ಯೆಯನ್ನು ಕಳೆಯುವ ವಿಧಾನವನ್ನು ಪ್ರಯೋಗಿಸಿದ್ದಾರೆ. ಉದಾಹರಣೆ: 19ಕ್ಕೆ 'ಏಕೋನವಿಂಶತಿ' (20ಕ್ಕಿಂತ 1 ಕಡಿಮೆ) ಎಂದೂ, ಆಪಸ್ತಂಬ ಸೂತ್ರದಲ್ಲಿ 972 ಸಂಖ್ಯೆಗೆ 'ಅಷ್ಟಾವಿಂಶತ್ಯೂನಂ ಸಹಸ್ರಂ' (1000ಕ್ಕೆ 28 ಕಡಿಮೆ) ಎಂದೂ ಪ್ರಯೋಗಿಸಿದ್ದಾರೆ.

4. ಸಂಖ್ಯೆಗಳನ್ನು ಬೆಸ (ವಿಷಮ) ಸಂಖ್ಯೆಗಳು (odd numbers) ಮತ್ತು ಸಮ ಸಂಖ್ಯೆಗಳು (even numbers) ಎಂದು ತೈತ್ತಿರೀಯ ಸಂಹಿತೆಯಲ್ಲಿ ವಿಂಗಡಿಸಿದ್ದಾರೆ. ಹಾಗೆಯೇ, 1/2, 1/4, 1/8 ಮತ್ತು 1/16 ಎಂಬ ಭಿನ್ನರಾಶಿಗಳನ್ನು ಋಗ್ವೇದದಲ್ಲಿ ಉಲ್ಲೇಖಿಸಿ ಅವುಗಳನ್ನು ಕ್ರಮವಾಗಿ ಅರ್ಧ, ಪಾದ, ಶಫ ಮತ್ತು ಕಲಾ ಎಂಬ ಹೆಸರುಗಳನ್ನೂ ಕೊಟ್ಟಿದ್ದಾರೆ.

> "ಇಂದಿನ ವಿಜ್ಞಾನದಲ್ಲಿ ಭಾರತೀಯ ಗಣಿತವು ಎಷ್ಟೊಂದು ಮಟ್ಟಿಗೆ ಪ್ರವೇಶಿಸಿದೆ ಎಂಬುದು ನಿಜಕ್ಕೂ ಆಶ್ಚರ್ಯವನ್ನು ಉಂಟುಮಾಡುತ್ತದೆ. ಇಂದಿನ ಅಂಕಗಣಿತ ಹಾಗೂ ಬೀಜಗಣಿತಗಳ ಸ್ವರೂಪ ಹಾಗೂ ಅಂತರಾಳ ಎರಡೂ ಭಾರತೀಯವೇ!" – ಫ್ಲೋರಿಯನ್ ಕೆಜೋರಿ, ಪ್ರಪಂಚದ ಗಣಿತ ಇತಿಹಾಸದ ಪ್ರಸಿದ್ಧ ತಜ್ಞ.

**5. ಶುಲ್ವಸೂತ್ರಗಳಲ್ಲಿ ಗಣಿತ :** ವೇದಗಳ ಅಧ್ಯಯನದಲ್ಲಿ ಅವಿಭಾಜ್ಯ ಅಂಗಗಳಾಗಿ ಬೆಳೆದ 'ವೇದಾಂಗ'ಗಳು ಆರು :– ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ. ಜ್ಯೋತಿಷ ವೇದಾಂಗವನ್ನು ಪ್ರತಿನಿಧಿಸುತ್ತ ನಮಗೆ ಲಭ್ಯವಾಗಿರುವ ಕೃತಿ ಲಗಧನ **'ವೇದಾಂಗ ಜ್ಯೋತಿಷ'**. ಅದರಲ್ಲಿ ಖಗೋಳ ಉಲ್ಲೇಖಗಳನ್ನು ಆಧರಿಸಿ ಆ ಗ್ರಂಥದ ಕಾಲ ಸುಮಾರು ಕ್ರಿ. ಪೂ. 12ನೇ ಶತಮಾನವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಆ ಕೃತಿಯ ಭಾಷೆ ಮತ್ತು ಶೈಲಿ ವೇದಸಾಹಿತ್ಯದ್ದಾಗಿರದೆ, ಮುಂದಿನ ರಾಮಾಯಣ–ಮಹಾಭಾರತಗಳ ಕಾಲದ ಶೈಲಿಯಾಗಿದೆ. ಆದ್ದರಿಂದ ವಸ್ತುನಿಷ್ಠವಾಗಿ ಹೇಳುವುದಾದರೆ ವೇದಾಂಗ ಜ್ಯೋತಿಷದಲ್ಲಿ ಪ್ರತಿಪಾದಿಸಲಾದ ಜ್ಞಾನವು ಸುಮಾರು ಕ್ರಿ. ಪೂ. 12ನೇ ಶತಮಾನದ್ದೇ ಆದರೂ ಕೃತಿಯ ರಚನೆ 'ಕ್ಲಾಸಿಕಲ್' ಶೈಲಿಯಲ್ಲಿ ಮುಂದಿನ ಶತಮಾನಗಳಲ್ಲಿ ಕೈಗೊಳ್ಳಲಾಗಿದೆ.

ಆರು ವೇದಾಂಗಶಾಸ್ತ್ರಗಳ ಪೈಕಿ ವಿಶೇಷವಾಗಿ 'ಕಲ್ಪ' ವೇದಾಂಗದ ಶ್ರೌತವಿಭಾಗಕ್ಕೆ ಸೇರಿದ 'ಶುಲ್ವ' (ಅಥವಾ 'ಶುಲ್ಬ') ಸೂತ್ರಗಳಲ್ಲಿ ಬಹಳ ಉತ್ಕೃಷ್ಟವಾದ ಗಣಿತದ ಫಲಿತಾಂಶಗಳನ್ನು ಕಾಣಬಹುದು. ಹಾಗೆಯೇ ಇನ್ನೊಂದು ವೇದಾಂಗಶಾಸ್ತ್ರವಾದ 'ಜ್ಯೋತಿಷ'ದಲ್ಲಿ ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದ ಹಲವು ವಿಷಯಗಳು ಚರ್ಚಿತವಾಗಿವೆ.

ವಿದ್ವಾಂಸರಿಂದ ಹೆಸರಿಸಲಾದ ಒಂಬತ್ತು ಶುಲ್ವಸೂತ್ರ ಕೃತಿಗಳ ಪೈಕಿ ಬೌಧಾಯನ, ಆಪಸ್ತಂಬ ಮತ್ತು ಕಾತ್ಯಾಯನ ಸೂತ್ರಗಳು ಭಾರತದಲ್ಲಿ ಗಣಿತಶಾಸ್ತ್ರದ ಬೆಳವಣಿಗೆಯ ದೃಷ್ಟಿಯಿಂದ ಬಹಳ ಮಹತ್ವದ್ದಾಗಿವೆ. ವೇದಕಾಲೀನ ಭಾರತೀಯರ ಪ್ರಮುಖವಾದ ಧಾರ್ಮಿಕ ಆಚರಣೆಗಳೆಂದರೆ ಯಜ್ಞ–ಯಾಗಾದಿ ವೈದಿಕ 'ಕರ್ಮ'ಗಳು. ಇವುಗಳಿಗೋಸ್ಕರ 'ಯಜ್ಞಭೂಮಿಕೆ' ಅಥವಾ ಅಗ್ನಿಕುಂಡಗಳನ್ನು ನಿರ್ದಿಷ್ಟ ಆಕಾರ ಮತ್ತು ಗಾತ್ರಗಳನ್ನು ಹೊಂದಿರುವಂತೆ ವಿಶೇಷವಾದ ಇಟ್ಟಿಗೆಗಳಿಂದ ರಚಿಸಬೇಕಾಗಿತ್ತು. ಈ ಗಣಿತಪ್ರಧಾನವಾದ ಪ್ರಕ್ರಿಯೆಗಳಿಗಾಗಿ ರೇಖಾಗಣಿತ, ಅಂಕಗಣಿತ, ಕ್ಷೇತ್ರಗಣಿತ ಮತ್ತು ಬೀಜಗಣಿತ (geometry, arithmetic, mensuration and algebra) – ಈ ವಿಷಯಗಳ ಆವಿರ್ಭಾವ ಉಂಟಾಯಿತು.

ಇಂದು ನಾವು 'ರೇಖಾಗಣಿತ' ಎಂದು ಕರೆಯುವ ಗಣಿತವಿಭಾಗಕ್ಕೆ ವೇದಾಂಗಗಳ ಕಾಲದಲ್ಲಿ 'ರಜ್ಜುಶಾಸ್ತ್ರ' ಮತ್ತು 'ಶುಲ್ವಶಾಸ್ತ್ರ' ಎಂದು ಕರೆಯುತ್ತಿದ್ದರು. ರಜ್ಜು ಎಂದರೆ ಹಗ್ಗ ಮತ್ತು 'ಶುಲ್ವ್' ಎಂಬ ಧಾತುವಿನ ಅರ್ಥ ಅಳೆಯುವುದು ಎಂದು. ಕಾತ್ಯಾಯನ ಶುಲ್ವಸೂತ್ರವು 'ರಜ್ಜುಸಮಾಸಂ ವಕ್ಷ್ಯಾಮಃ' ಎಂದೇ ಆರಂಭವಾಗುತ್ತದೆ. ಕಾತ್ಯಾಯನ ಶುಲ್ವಸೂತ್ರಗಳು ಶುಕ್ಲ ಯಜುರ್ವೇದಕ್ಕೂ ಮತ್ತು ಆಪಸ್ತಂಬ ಸೂತ್ರಗಳು ಕೃಷ್ಣ ಯಜುರ್ವೇದಕ್ಕೂ ಸೇರಿವೆ. ಈ ಶುಲ್ವಸೂತ್ರಗಳ ರಚನೆ ಸುಮಾರು ಕ್ರಿ. ಪೂ. 8–9ನೇ ಶತಮಾನಗಳಷ್ಟು ಪ್ರಾಚೀನವೆಂದು ಅಂದಾಜು ಮಾಡಲಾಗಿದೆ.

**(i) ಶುಲ್ವ ಪ್ರಮೇಯ :** ಪೈಥಾಗರಸ್ ಪ್ರಮೇಯವೆಂದು ಪ್ರಸಿದ್ಧವಾಗಿರುವ ಲಂಬಕೋನ ತ್ರಿಕೋಣಕ್ಕೆ ('ಜಾತ್ಯ', right-angled triangle) ಸಂಬಂಧಿಸಿದ ಪ್ರಮೇಯವನ್ನು ಪೈಥಾಗರಸ್‌ಗಿಂತ ( ಕ್ರಿ. ಪೂ. 6ನೇ ಶತಮಾನಕ್ಕಿಂತ) ಅನೇಕ ಶತಮಾನಗಳ ಹಿಂದೆಯೇ ಬೌಧಾಯನ ಮತ್ತು ಆಪಸ್ತಂಬ ಸೂತ್ರಗಳಲ್ಲಿ ಉಲ್ಲೇಖಿಸಿದ್ದಾರೆ. ಈ ಪ್ರಖ್ಯಾತ ಫಲಿತಾಂಶವನ್ನು 'ಶುಲ್ವ ಪ್ರಮೇಯ' ಎಂದು ಕರೆಯುವುದು ಐತಿಹಾಸಿಕ ನ್ಯಾಯ. ಮುಂದಿನ ಭಾರತೀಯ ಗಣಿತ ಗ್ರಂಥಗಳಲ್ಲಿ ಈ ಪ್ರಮೇಯವನ್ನು 'ಭುಜ–ಕೋಟಿ–ಕರ್ಣ ನ್ಯಾಯ' ಎಂದು ಕರೆದಿದ್ದಾರೆ.




**ಚಿತ್ರ ೧. ಶುಲ್ವ ಪ್ರಮೇಯ**

ಈ ಪ್ರಮೇಯವನ್ನು ಬೌಧಾಯನ ಮತ್ತು ಆಪಸ್ತಂಬ ಸೂತ್ರಗಳಲ್ಲಿ ಹೀಗೆ ಉಲ್ಲೇಖಿಸಿದ್ದಾರೆ :–

**ದೀರ್ಘ ಚತುರಸ್ರಸ್ಯಾಕ್ಷ್ಣಯಾ ರಜ್ಜುಃ ಪಾರ್ಶ್ವಮಾನೀ ತಿರ್ಯಙ್ಮಾನೀ ।**
**ಚ ಯತ್ ಪೃಥಗ್ಭೂತೇ ಕುರುತಸ್ತದುಭಯಂ ಕರೋತಿ ॥**

**– ಆಪ. (i)4; ಬೌಧಾ.(i) 48.**

**(ii) ಅಭಾಜ್ಯ ಸಂಖ್ಯೆ** (irrational number) ಆಗಿರುವ $\sqrt{2}$ (2ರ ವರ್ಗಮೂಲ) ಸಂಖ್ಯೆಗೆ ಬಹಳ ಹತ್ತಿರದ ಭಾಜ್ಯ ಬೆಲೆಯನ್ನು (rational value) ಈ ಕೆಳಕಂಡಂತೆ ಕೊಟ್ಟಿದೆ :–

**ಸಮಸ್ಯ ದ್ವಿಕರಣೀ । ಪ್ರಮಾಣಂ ತೃತೀಯೇನ ವರ್ಧಯೇತ್**
**ತಚ್ಚತುರ್ಥೇನಾತ್ಮ ಚತುಸ್ತ್ರಿಂಶೋನೇನ ಸವಿಶೇಷಃ ।**

***– ಬೌಧಾ. (i)61–2; ಆಪ. (i)6.***

ಅಂದರೆ,

$$\sqrt{2} \approx 1 + \frac{1}{3} + \frac{1}{3\times4} - \frac{1}{3\times4\times34}$$

**(iii) ವೃತ್ತವನ್ನು ಚಚ್ಚೌಕಿಸುವ ಸಮಸ್ಯೆ** (Squaring the circle)

ಗಣಿತಶಾಸ್ತ್ರದಲ್ಲಿ ಬಹಳ ಶತಮಾನಗಳಿಂದ ಇತ್ತೀಚಿನ ತನಕ ಕೆಲವು ಬಿಡಿಸಲಾಗದ ಸಮಸ್ಯೆಗಳು ಗಣಿತಜ್ಞರನ್ನು ಬಹಳ ಕಾಡುತ್ತಿದ್ದವು. ಅವುಗಳಲ್ಲಿ ಒಂದು ಬಹಳ ಮುಖ್ಯವಾದ ಸಮಸ್ಯೆ ಎಂದರೆ ಒಂದು ವೃತ್ತದ ಕ್ಷೇತ್ರಫಲಕ್ಕೆ (area) ಸಮವಾದ ಕ್ಷೇತ್ರಫಲದ ಚಚ್ಚೌಕವನ್ನು ಅಳತೆಪಟ್ಟಿ ಮತ್ತು ಕೈವಾರಗಳನ್ನು (ruler and compasses) ಬಳಸಿ ರಚಿಸುವುದು.

ಬಹಳ ಸೋಜಿಗದ ಮತ್ತು ಹೆಮ್ಮೆಯ ಸಂಗತಿಯೆಂದರೆ ಗಣಿತದ ಇತಿಹಾಸದಲ್ಲಿ ಪ್ರಸಿದ್ಧವಾದ ಈ ಸಮಸ್ಯೆ ಹಾಗೂ ಅದರ ವ್ಯಾವಹಾರಿಕ




ಚಿತ್ರ ೨ : ಚಚ್ಚೌಕದ ವಿಸ್ತಾರಕ್ಕೆ ಸಮನಾದ ವಿಸ್ತಾರದ ವೃತ್ತ

ಪರಿಹಾರ ಮೊಟ್ಟಮೊದಲು ಕಂಡುಬರುವುದು ಪ್ರಾಚೀನ ಭಾರತದ ಶುಲ್ವಸೂತ್ರಗಳಲ್ಲಿಯೇ! ಬೌಧಾಯನ ಶುಲ್ವಸೂತ್ರದಲ್ಲಿ ಇಂತಹ ಒಂದು ವ್ಯಾವಹಾರಿಕ ರಚನೆಯನ್ನು ಕೊಟ್ಟಿದೆ.

ಹಾಗೆಯೇ, ಈ ಮೇಲಿನ ಸಮಸ್ಯೆಯ ವಿಲೋಮ (converse) ಸಮಸ್ಯೆಯಾದ ಚಚ್ಚೌಕವನ್ನು ವೃತ್ತವಾಗಿಸುವ (circling the square) ರಚನೆಯನ್ನು ಶುಲ್ವಸೂತ್ರಗಳಲ್ಲಿ ಸವಿಸ್ತಾರವಾಗಿ ನೀಡಲಾಗಿದೆ.

ಈ ರಚನೆಯಿಂದ π (ಪೈ) ಎಂಬ ಸುಪರಿಚಿತ ಸ್ಥಿರಾಂಕದ ಬೆಲೆ $\pi = 9(2 - \sqrt{2})^2 = 9(6 - 4\sqrt{2}) \approx 3.088$. ಎಂದಾಗುತ್ತದೆ.

ಸಾಮಾನ್ಯವಾಗಿ ಪ್ರಾಚೀನ ನಾಗರಿಕತೆಗಳಲ್ಲಿ π ಸಂಖ್ಯೆಗೆ 3 ಎಂಬ ಪೂರ್ಣಾಂಕ ಬೆಲೆಯನ್ನು ತೆಗೆದುಕೊಳ್ಳುವ ಪದ್ಧತಿ ಇತ್ತು. ಶುಲ್ವಸೂತ್ರಗಳ ಅನಂತರ ಬಹಳಷ್ಟು ಶತಮಾನಗಳಾದ ಮೇಲೆ ಬಂದ 'ಹಳೆ ಒಡಂಬಡಿಕೆ'ಯಲ್ಲೂ *(Old Testament)* ಕೂಡ π=3 ಎಂದೇ ತೆಗೆದುಕೊಂಡಿದೆ. ಮುಂದೆ ಆರ್ಯಭಟನು (ಕ್ರಿ. ಶ. 499) ನಾಲ್ಕು ದಶಮಾಂಶ ಸ್ಥಾನಗಳವರೆಗೆ ನಿಖರವಾಗಿರುವ π=62832/ 20000=3.1416 ಎಂಬ ಬೆಲೆಯನ್ನು ಕೊಟ್ಟಿದ್ದಾನೆ. ಇಲ್ಲಿ ಮುಖ್ಯವಾಗಿ ತಾತ್ವಿಕವಾಗಿ ಹಾಗೂ ಪರಿಕಲ್ಪನೆಯ ಮಹತ್ವದ ದೃಷ್ಟಿಯಿಂದ ಗಮನಿಸಬೇಕಾದ ಅಂಶವೆಂದರೆ ಈ ಮೇಲೆ ಹೇಳಿದ ರಚನೆ 'ಅನಿತ್ಯ' (impermanent, approximate) ಎಂದು ಬೌಧಾಯನ ಸೂತ್ರವು ಸ್ಪಷ್ಟಪಡಿಸುತ್ತದೆ. 'ಪೈ' ಬೆಲೆಯನ್ನು ಇನ್ನೂ ಹೆಚ್ಚು ನಿಖರವಾಗಿ ಕೊಟ್ಟಿರುವ




ಚಿತ್ರ ೩ : ಪರಿಚಾಯ್ಯ – ಚಿತ್ (ಮೊದಲನೇ ಪದರು)

ಆರ್ಯಭಟನು ಕೂಡ ಆ ಬೆಲೆಯು "ಆಸನ್ನ" (ಹತ್ತಿರದ್ದು, approximate) ಎಂದು ಹೇಳುತ್ತಾನೆ. ಇದಕ್ಕೆ ಮುಖ್ಯ ಕಾರಣವೆಂದರೆ π ಸ್ಥಿರಸಂಖ್ಯೆಯು 'ಅಭಾಗಲಬ್ಧ' (irrational) ಆಗಿದ್ದು ಅದನ್ನು ಎರಡು ಪೂರ್ಣಾಂಕ ಸಂಖ್ಯೆಗಳ ಪ್ರಮಾಣವಾಗಿ ತೆಗೆದುಕೊಳ್ಳಲು ಸಾಧ್ಯವಿಲ್ಲ. ಉದಾಹರಣೆ : ಶಾಲಾಮಟ್ಟದಲ್ಲಿ ಪರಿಚಿತವಾದ 22/7 ಎಂಬ ಬೆಲೆಯು π ಸ್ಥಿರಾಂಕದ ಒಂದು ಸನ್ನಿಹಿತ ಬೆಲೆಯೇ ಹೊರತು ನಿಖರವಾದದ್ದಲ್ಲ! 'ಪೈ' ಸಂಖ್ಯೆಯು 'ಅಭಾಜ್ಯ' ಎಂದು ಸಪ್ರಮಾಣವಾಗಿ ಸಾಧಿಸಿದ್ದು ಆರ್ಯಭಟನಿಗಿಂತ 13 ಶತಮಾನಗಳ ಅನಂತರ ಕ್ರಿ. ಶ. 1761ರಲ್ಲಿ ಲ್ಯಾಂಬರ್ಟ್ (Lambert) ಎಂಬ ಗಣಿತಜ್ಞ.

ಶುಲ್ವಸೂತ್ರಗಳಲ್ಲಿ ಕೆಲವು ಕ್ಲಿಷ್ಟವಾದ ಯಜ್ಞಭೂಮಿಕೆಗಳನ್ನು ನಿರ್ದಿಷ್ಟ ಸಂಖ್ಯೆಗಳ ಇಟ್ಟಿಗೆಗಳನ್ನು ಬಳಸಿ ನಿರ್ದಿಷ್ಟಪಡಿಸಿದ ಗಾತ್ರಗಳಲ್ಲಿ ಮತ್ತು ಆಕಾರಗಳಲ್ಲಿ ರಚಿಸುವ ವಿಧಾನಗಳನ್ನು ವಿವರಿಸಿದ್ದಾರೆ.

(iv) ಒಟ್ಟು 202 ಇಟ್ಟಿಗೆಗಳನ್ನು ಬಳಸಿ "ಪರಿಚಾಯ್ಯ-ಚಿತ್" ಎಂಬ ಅಗ್ನಿಭೂಮಿಕೆಯ ಮೊದಲನೇ ಪದರನ್ನು ಚಿತ್ರ 3ರಲ್ಲಿ ತೋರಿಸಿದೆ.

(v) ಹಾಗೆಯೇ ಒಟ್ಟು 159 ಇಟ್ಟಿಗೆಗಳಿಂದ ಆಮೆಯಾಕಾರದ "ಕೂರ್ಮ-ಚಿತ್" ಎಂಬ ಅಗ್ನಿಭೂಮಿಕೆಯ ಎರಡನೇ ಪದರನ್ನು ಚಿತ್ರ 4ರಲ್ಲಿ ತೋರಿಸಿದೆ.




*ಚಿತ್ರ ೪: ಕೂರ್ಮ-ಚಿತ್ (ಎರಡನೇ ಪದರು)*

6. ವೇದ ಸಮುಚ್ಚಯದಲ್ಲಿ **ಬೀಜಗಣಿತಕ್ಕೆ** ಸಂಬಂಧಿಸಿದಂತೆ ಬಹಳ ಮಹತ್ವದ ಕೊಡುಗೆಗಳನ್ನು ಕಾಣಬಹುದು.

(i) ಶುಲ್ವಸೂತ್ರಗಳಲ್ಲಿ $ax^2=c$ ಮತ್ತು $ax^2+bx=c$ ಮಾದರಿಯ ವರ್ಗಸಮೀಕರಣಗಳನ್ನು ಬಿಡಿಸುವ ಸಮಸ್ಯೆಗಳಿವೆ.

(ii) ಬಹಳಷ್ಟು 'ಸಮಾಂತರ ಶ್ರೇಢಿಗಳು' (arithmetic progressions, A.P.) ಮತ್ತು 'ಗುಣೋತ್ತರ ಶ್ರೇಢಿ'ಗಳನ್ನು (geometric progressions, G.P.) ತೈತ್ತಿರೀಯ ಸಂಹಿತೆ, ವಾಜಸನೇಯ ಸಂಹಿತೆ, ಶತಪಥ ಬ್ರಾಹ್ಮಣ, ಬೌಧಾಯನ ಶುಲ್ವಸೂತ್ರ ಹಾಗೂ ಪಿಂಗಳನ 'ಛಂದಸೂತ್ರ'ಗಳಲ್ಲೂ ಕಾಣಬಹುದು.

(iii) ಬೌಧಾಯನ ಮತ್ತು ಆಪಸ್ತಂಬ ಶುಲ್ವಸೂತ್ರಗಳಲ್ಲಿ $x+y=21$ ಹಾಗೂ $(x/p^2)+(y/q^2)=1$ ಎಂಬ ಮಾದರಿಯ ಒಂದನೇ ದರ್ಜೆಯ 'ಅನಿರ್ದಿಷ್ಟ ಸಮೀಕರಣ'ಗಳನ್ನು (first order indeterminate equations) ಬಿಡಿಸಲಾಗಿದೆ. ಅಂತಹ ಸಮೀಕರಣಗಳನ್ನು ಹಾಗೂ ಅವುಗಳನ್ನು ಬಿಡಿಸುವ ವಿಧಾನವನ್ನು ಮುಂದಿನ ಭಾರತೀಯ ಗಣಿತಜ್ಞರು 'ಕುಟ್ಟಕ' ಎಂದು ಹೆಸರಿಸಿದ್ದಾರೆ.

ಹೀಗೆ, ವೇದ-ವೇದಾಂಗಗಳಲ್ಲಿ ಬಹಳಷ್ಟು ನಿಜಕ್ಕೂ ಮಹತ್ವದ ಗಣಿತ-ಫಲಿತಾಂಶಗಳನ್ನು ಮತ್ತು ವಿಧಾನಗಳನ್ನು ಕಾಣಬಹುದು. ಆ ಕಾಲಘಟ್ಟದಲ್ಲಿ ಐರೋಪ್ಯ ದೇಶಗಳಲ್ಲಿ ಯುಕ್ಲಿಡ್‌ನ ರೇಖಾಗಣಿತವನ್ನು ಬಿಟ್ಟರೆ ಏನೇನೂ ಬೆಳವಣಿಗೆ ಇರಲಿಲ್ಲ. ವಿಶೇಷವಾಗಿ ಸಂಖ್ಯಾಪದ್ಧತಿ, ಅಂಕಗಣಿತ ಮತ್ತು ಬೀಜಗಣಿತ ಕ್ಷೇತ್ರಗಳ ಆದ್ಯ ಪ್ರವರ್ತಕರೇ ಪ್ರಾಚೀನ ಭಾರತೀಯರು ಹಾಗೂ ಅನಂತರ ಸಹಸ್ರಮಾನದಷ್ಟು ಕಾಲವೂ ಅವರದೇ ಮೇಲುಗೈ!

**'ವೇದಿಕ್ ಮ್ಯಾಥಮ್ಯಾಟಿಕ್ಸ್' – ಸ್ಥೂಲ ಪರಿಚಯ**

| No. | Sūtra | No. | Sūtra |
|---|---|---|---|
| १. | एकाधिकेन पूर्वेण | ९ | चलनकलनाभ्याम् |
| २. | निखिलं नवतश्चरमं दशतः | १० | यावदूनम् |
| ३. | ऊर्ध्वतिर्यग्भ्याम् | ११ | व्यष्टिषष्टिः |
| ४. | परावर्त्य योजयेत् | १२ | शेषान्यङ्केन चरमेण |
| ५. | शून्यं साम्यसमुच्चये | १३ | सोपान्त्यद्वयमन्त्यम् |
| ६. | (आनुरूप्ये) शून्यमन्यत् | १४ | एकन्यूनेन पूर्वेण |
| ७. | संकलनव्यवकलनाभ्याम् | १५ | गुणितसमुच्चयः |
| ८. | पूरणपूरणाभ्याम् | १६ | गुणकसमुच्चयः |

*ಚಿತ್ರ ೫*

ಈ ಹೆಸರಿನ ಪುಸ್ತಕವು ಪುರಿಯ ಗೋವರ್ಧನಮಠದ ಶಂಕರಾಚಾರ್ಯರಾಗಿದ್ದ ಶ್ರೀ ಭಾರತೀಕೃಷ್ಣತೀರ್ಥ ಸ್ವಾಮೀಜಿ (1884–1960) ಅವರ ರಚನೆಯಾಗಿದ್ದು, ಅದನ್ನು ಅವರ ಮರಣಾನಂತರ 1965ರಲ್ಲಿ ಪ್ರಕಟಿಸಲಾಯಿತು. ಸ್ವಾಮಿಗಳು 1960ರಲ್ಲಿ ನಿಧನರಾಗುವ ತನಕ ಬಹಳಷ್ಟು ವರ್ಷ ಕಾಲ ಅವರ ಕೃತಿಯಲ್ಲಿ ಪ್ರತಿಪಾದಿಸಿದ ಸೂತ್ರಗಳ ಹಾಗೂ ವಿಧಾನಗಳ ಬಗ್ಗೆ ತರಗತಿಗಳನ್ನು ಮತ್ತು ಉಪನ್ಯಾಸಗಳನ್ನು ನಡೆಸಿಕೊಂಡು ಬಂದಿದ್ದರು. ಹಾಗೆಯೇ ವೇದಾಂತ ಮತ್ತು ಧರ್ಮದ ಬಗ್ಗೆಯೂ ಪ್ರಚಾರಕಾರ್ಯವನ್ನು ಕೈಗೊಂಡಿದ್ದರು.

ಸ್ವಾಮಿಗಳ ಈ ಕೃತಿಯಲ್ಲಿ ಕೇವಲ ಎರಡು-ಮೂರು ಪದಗಳಿರುವ ಸಂಕ್ಷಿಪ್ತವಾದ 16 'ಸೂತ್ರ'ಗಳು ಮತ್ತು ಅದೇ ಶೈಲಿಯ 13 'ಉಪ-ಸೂತ್ರ'ಗಳಿವೆ. ಉದಾಹರಣೆಗೆ, **"ಏಕಾಧಿಕೇನ ಪೂರ್ವೇಣ", "ಅನುರೂಪ್ಯೇ ಶೂನ್ಯಂ ಅನ್ಯತ್"**. ಇತ್ಯಾದಿ. ಈ 16 ಸೂತ್ರಗಳ ಬಳಕೆ ಹೇಗೆ? ತಮ್ಮ ಪುಸ್ತಕದ ಮೊದಲನೇ ಅಧ್ಯಾಯದಲ್ಲಿ 1/19, 1/29 ಮುಂತಾದ (ಛೇದದಲ್ಲಿ 9 ಕೊನೆಯಲ್ಲಿರುವಂಥ) ಭಿನ್ನರಾಶಿಗಳನ್ನು ದಶಮಾಂಶ ಮಾದರಿಗೆ (decimal form) ಮಾರ್ಪಡಿಸಲು **"ಏಕಾಧಿಕೇನ ಪೂರ್ವೇಣ"** ಎಂಬ ಸೂತ್ರದ ಬಳಕೆ. ಆ ಸೂತ್ರದ ಅರ್ಥ "ಹಿಂದಿನ ಅಂಕಿಗಿಂತ ಒಂದು ಹೆಚ್ಚು." ಈ ವಿಧಾನವು ಸಾಕಷ್ಟು ದೀರ್ಘವಾಗಿದ್ದು ಬರುವ ಅಂಕಿಗಳನ್ನು ಜೋಡಿಸಲು ಶ್ರಮ ಹಾಗೂ ಕಾಲ ವ್ಯಯವಾಗುತ್ತದೆ. ಅಷ್ಟಕ್ಕೂ ಭಿನ್ನರಾಶಿಗಳನ್ನು ದಶಮಾಂಶ ಸ್ಥಾನಗಳಿಗೆ ಮಾರ್ಪಡಿಸುವ ಪದ್ಧತಿ ಪ್ರಾಚೀನ ಭಾರತದಲ್ಲಿ ಇರಲೇ ಇಲ್ಲ!

ಹಾಗೆಯೇ ಎರಡನೇ ಅಧ್ಯಾಯದಲ್ಲಿ ವಿವರಿಸಿದಂತೆ ಈ ಮೇಲೆ ಉಲ್ಲೇಖಿಸಿದ ಸೂತ್ರವನ್ನೇ ಬಳಸಿ 5 ಎಂಬ ಅಂಕಿಯೊಂದಿಗೆ ಕೊನೆಗೊಳ್ಳುವ 5, 25, 35, ಇತ್ಯಾದಿಗಳ ವರ್ಗಗಳನ್ನು (squares) ಪಡೆಯಲು ಬಳಸಬಹುದು. ಉದಾಹರಣೆಗೆ, 35 ಸಂಖ್ಯೆಯ ವರ್ಗವು ಬೇಕಾದಲ್ಲಿ 5ರ ವರ್ಗವಾದ 25ಅನ್ನು ಕೊನೆಯ ಅಂಕಿಗಳಾಗಿ ಬರೆದು, ಕೊಟ್ಟಿರುವ ಮೊದಲನೇ ಅಂಕಿ 3ಅನ್ನು ಅದಕ್ಕಿಂತ ಒಂದರಷ್ಟು ಹೆಚ್ಚಿನ ಸಂಖ್ಯೆ 4ರಿಂದ ಗುಣಿಸಿ ಬರುವ $3x4=12$ ಸಂಖ್ಯೆಯನ್ನು ಈ ಮೊದಲು ಬರೆದ 25ರ ಹಿಂದೆ ಜೋಡಿಸಬೇಕು. ಅಂದರೆ, $35^2=1225$. ಹಾಗೆಯೇ, $15^2=225$, $25^2=625$ ಇತ್ಯಾದಿ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, 5ರಿಂದ ಕೊನೆಗೊಳ್ಳುವ ಸಂಖ್ಯೆಗಳ ವರ್ಗಗಳನ್ನು ಪಡೆಯುವ ವಿಧಾನವು ವಿಶ್ವದಾದ್ಯಂತ ಎಲ್ಲಾ ಗಣಿತಾಸಕ್ತರಿಗೆ ತಿಳಿದಿರುವ ವಿಷಯವಾಗಿದ್ದು, ಸ್ವಾಮಿಗಳ ಸೂತ್ರದ ಹೆಚ್ಚುಗಾರಿಕೆ ಏನೂ ಇಲ್ಲ.

ಇನ್ನೊಂದು ಸೂತ್ರ: **"ಯಾವದೂನಮ್"**. ಈ ಸೂತ್ರವನ್ನು ಬಳಸುವುದು 10ರ ಘಾತಗಳ ಅಥವಾ ಅವುಗಳ ಗುಣಕಗಳ ಸಮೀಪದಲ್ಲಿರುವ ಸಂಖ್ಯೆಗಳ ವರ್ಗಗಳನ್ನು ಕಂಡುಹಿಡಿಯಲು.

ಉದಾಹರಣೆ (1): 96ರ ವರ್ಗವನ್ನು ಕಂಡುಹಿಡಿಯುವುದು. ಕೊಟ್ಟಿರುವ ಸಂಖ್ಯೆ 96 ಹತ್ತರ ಘಾತ $10^2$ ಅಂದರೆ 100ಕ್ಕಿಂತ 4 ಕಡಿಮೆಯಿದೆ. 4ರ ವರ್ಗ, $4^2=16$. ಈ 4ಅನ್ನು 96ರಲ್ಲಿ ಕಳೆದಾಗ 92 ಬರುತ್ತದೆ. ಈ ಹಿಂದೆ ಬಂದ 16ಅನ್ನು 92ರ ಬಲ ಪಕ್ಕಕ್ಕೆ ಬರೆದಾಗ ಬರುವ 9216 ಸಂಖ್ಯೆಯೇ 96ರ ವರ್ಗ.

ಉದಾಹರಣೆ (2): ಅಂತೆಯೇ, 92ರ ವರ್ಗ: ಹತ್ತಿರದ ಹತ್ತರ ಘಾತ 100ಕ್ಕಿಂತ ದತ್ತಸಂಖ್ಯೆ 8ರಷ್ಟು ಕಡಿಮೆ ಇದೆ. ಇದರ ವರ್ಗ $8^2 = 64$. ದತ್ತಸಂಖ್ಯೆ 92ರಲ್ಲಿ 8ಅನ್ನು ಕಳೆದರೆ 84 ಬರುತ್ತದೆ. ಅದರ ಬಲಪಕ್ಕದಲ್ಲಿ 64 ಬರೆದಾಗ ಸಿಗುವ 8464 ಸಂಖ್ಯೆಯೇ 92ರ ವರ್ಗ.

ಹೀಗೆ 16 ಸೂತ್ರಗಳನ್ನು ಅಂಕಗಣಿತದ ಬೇರೆಬೇರೆ ಪರಿಕರ್ಮಗಳಿಗಾಗಿ ಬಳಸಲಾಗಿದೆ.

**"ವೇದಿಕ್ ಮ್ಯಾಥಮ್ಯಾಟಿಕ್ಸ್" ಹಾಗೂ ಕಂಪ್ಯೂಟರ್**

ಈ ಹಿಂದೆ, ಪ್ರಾಚೀನವೆಂದು ಹೇಳಲಾಗುತ್ತಿರುವ "ವೇದಿಕ್ ಮ್ಯಾಥಮ್ಯಾಟಿಕ್ಸ್" ವಿಷಯವನ್ನು ಆಧುನಿಕ ಕಂಪ್ಯೂಟರ್‌ಗೆ ಅನ್ವಯಿಸುವ ಸಾಧ್ಯತೆಯ ಬಗ್ಗೆ – ಮತ್ತು ಅಂತಹ ಒಂದು ಯೋಜನೆಗೆ ಬೇಕಾಗುವ ಧನ – ಸಹಾಯದ ಬಗ್ಗೆ – ಒಂದು ವರದಿಯನ್ನು ತಯಾರಿಸಲು 'ರಾಷ್ಟ್ರೀಯ ವೇದವಿದ್ಯಾ ಪ್ರತಿಷ್ಠಾನ'ವನ್ನು ಕೇಳಿಕೊಳ್ಳಲಾಗಿದೆ ಎಂದು ಅಂದಿನ ಕೇಂದ್ರ ಸರಕಾರ ಘೋಷಿಸಿತ್ತು. ನಮ್ಮ ಇಂದಿನ ಜನಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ – ಕಣಿ ಹೇಳುವ ಹಕ್ಕಿಪಿಕ್ಕಿ ಮತ್ತು ಬುಡುಬುಡುಕೆ ಹುಸಿಶಾಸ್ತ್ರದಲ್ಲೂ – ಕಂಪ್ಯೂಟರ್ ಸರ್ವವ್ಯಾಪಿಯಾಗಿದೆಯಷ್ಟೆ. ಆದರೆ ಒಂದು ಜವಾಬ್ದಾರಿಯುತ ಸರಕಾರವು ಕಂಪ್ಯೂಟರ್‌ಗೆ 'ವೇದಿಕ್ ಮ್ಯಾಥಮ್ಯಾಟಿಕ್ಸ್' ಎಂಬಂಥ ವಿಷಯವನ್ನು ಅನ್ವಯಿಸುವುದರ ಬಗ್ಗೆ ಮಾತನಾಡಿದಾಗ ಬಹಳ ಮೋಜೆನಿಸುತ್ತದೆ.

ವೇದ ಸಮುಚ್ಚಯದಲ್ಲಿ ನಿಜವಾಗಿಯೂ ಚರ್ಚಿಸಲಾದ ಗಣಿತ ವಿಷಯಗಳ ಬಗ್ಗೆ ಈ ಮೇಲೆ ಒಂದು ಸ್ಥೂಲ ಪರಿಚಯವನ್ನು ಮಾಡಿ ಕೊಂಡಿದ್ದೇವೆ. ಶುಲ್ವಸೂತ್ರಗಳಲ್ಲಿರುವ ಗಣಿತಶಾಸ್ತ್ರವು ಆಗಿನ ವಿಶ್ವಮಟ್ಟದಲ್ಲೇ ಶ್ರೇಷ್ಠಮಟ್ಟದ್ದು ಎಂದು ಗಣಿತದ ಇತಿಹಾಸಕಾರರು ಮೆಚ್ಚಿದ್ದಾರೆ. ಆದರೆ, ಆಧುನಿಕ ಗಣಿತಶಾಸ್ತ್ರದ ವಿಪುಲ ಬೆಳವಣಿಗೆಯ ದೃಷ್ಟಿಯಿಂದ ಹೇಳುವುದಾದರೆ, ಭಾರತೀ ಕೃಷ್ಣತೀರ್ಥರ "ವೇದಿಕ್ ಮ್ಯಾಥಮ್ಯಾಟಿಕ್ಸ್" ಕಂಪ್ಯೂಟರ್‌ಗೆ ಅನ್ವಯಿಸಲು ಸೂಕ್ತವಾಗಿದೆ ಎಂಬ ಮಾತು ನಿಜಕ್ಕೂ ಹಾಸ್ಯಾಸ್ಪದವೇ ಸರಿ! ಅಷ್ಟೇ ಅಲ್ಲದೆ, ಆಗಿನ ಕೇಂದ್ರ ಸರಕಾರದ ಹೇಳಿಕೆಯ ಪ್ರಕಾರ 1960–61ರ ಹೊತ್ತಿಗೆ ಪುರಿಯ ಗೋವರ್ಧನ ಪೀಠದ ಶಂಕರಾ ಚಾರ್ಯರು ವೇದಗಳಲ್ಲಿದ್ದ ಗಣಿತವನ್ನು "ವೇದಿಕ್ ಮ್ಯಾಥಮ್ಯಾಟಿಕ್ಸ್" ಎಂಬ ನವೀನ ಪ್ಯಾಕೇಜಿನಲ್ಲಿ "ಪುನಃ ಕಂಡುಹಿಡಿದರು" ಹಾಗೂ ಅವರ 16 ಸೂತ್ರಗಳಿಂದ ಗಣಿತದ "ಎಲ್ಲಾ" ಸಮಸ್ಯೆಗಳನ್ನೂ ಸುಲಭವಾಗಿ ಪರಿಹರಿಸ ಬಹುದಂತೆ! ಈ 'ಸರಕಾರಿ' ಹೇಳಿಕೆಯು ಬಹಳ ಉತ್ಪ್ರೇಕ್ಷೆಯದ್ದಾಗಿದ್ದು ಸತ್ಯಕ್ಕೆ ಬಹಳ ದೂರವಾಗಿದೆ. ಹಾಗೂ ಜನಸಾಮಾನ್ಯರನ್ನು ತಪ್ಪುದಾರಿಗೆ ಎಳೆಯುತ್ತದೆ.

**16 ಸೂತ್ರಗಳು ವೈದಿಕವೆ ?**

ಸ್ವಾಮಿಗಳ ಈ 16 ಸೂತ್ರಗಳನ್ನು ಅಥರ್ವ ವೇದದ 'ಪರಿಶಿಷ್ಟ'ದಿಂದ ಆಯ್ದವೆಂದು ಹೇಳಲಾಗಿದೆ. ನಿಜಕ್ಕೂ ಈ ಸೂತ್ರಗಳ ವಿಧಾನಗಳು ಗಣಿತದ ದೃಷ್ಟಿಯಿಂದ ಅಂತಹ ಉಚ್ಚಮಟ್ಟದ್ದೇನಲ್ಲ. ಅಂತಹವೇ 'ಟ್ರ್ಯಾಕ್ಟನ್‌ಬರ್ಗ್' ಎಂಬ ವಿಧಾನಗಳು ಐರೋಪ್ಯ ದೇಶಗಳಲ್ಲಿ ಜನಪ್ರಿಯವಾಗಿವೆ. ಅವುಗಳು ಬಹಳ ಪ್ರಾಚೀನವೆಂದಾಗಲೀ, ದಿವ್ಯಮೂಲದ್ದೆಂದಾಗಲೀ ಯಾರೂ ಹೇಳಿಕೊಂಡಿಲ್ಲ! ಶ್ರೀ ಭಾರತೀ ಕೃಷ್ಣತೀರ್ಥರು ತಮ್ಮ ಮುನ್ನುಡಿಯಲ್ಲಾಗಲೀ, ಬೇರೆಡೆಯಲ್ಲಾಗಲೀ ತಮ್ಮ 16 ಸೂತ್ರಗಳಿಗೆ ಅಥರ್ವವೇದದ (ಅದರ ಪರಿಶಿಷ್ಟಗಳ) ಆಧಾರ ಉಲ್ಲೇಖಗಳನ್ನು ಎಲ್ಲೂ ನೀಡಿಲ್ಲ. ಅಷ್ಟೇ ಅಲ್ಲದೆ, ಸ್ವಾಮಿಗಳ ಶಿಷ್ಯೆ ಶ್ರೀಮತಿ ಮಂಜುಳಾ ತ್ರಿವೇದಿಯವರು ತಮ್ಮ "ಪರಿಚಯ ನುಡಿಯಲ್ಲಿ," ಈ ಸೂತ್ರಗಳು ಈಗ ಸಿಗುವ (?) ಅಥರ್ವವೇದದ ಅಥವಾ ಪರಿಶಿಷ್ಟಗಳ ಪಾಠಾಂತರ ಗಳಲ್ಲಿ ಎಲ್ಲೂ ಕಾಣಲು ಸಿಗುವುದಿಲ್ಲ. ಅವುಗಳನ್ನು ಅಂತಃಸ್ಫೂರ್ತಿಯ (intuition) ಆಧಾರದ ಮೇಲೆ ಪುನಾರಚಿಸಲಾಗಿದೆ" ಎಂದು ಒಪ್ಪಿಕೊಂಡಿದ್ದಾರೆ.

ಸ್ವಾಮಿಗಳು ತಮ್ಮ ಎಂಟು ವರ್ಷಗಳಷ್ಟು ದೀರ್ಘಕಾಲದ ಮನಃಕೇಂದ್ರೀಕರಣ (ತಪಸ್ಸು)ದಿಂದ ಈ 16 ಅಸ್ಪಷ್ಟ ಸೂತ್ರಗಳನ್ನು ಆವಿಷ್ಕರಿಸಿ ಜೋಡಿಸಲು ಶಕ್ತರಾದರೆಂದರೆ ನಿಜಕ್ಕೂ ಶ್ರೇಷ್ಠಮಟ್ಟದ ಗಣಿತದ ಪ್ರವರ್ತಕರಾದ ಆರ್ಯಭಟ, ಬ್ರಹ್ಮಗುಪ್ತ, (ಎರಡನೇ) ಭಾಸ್ಕರಾಚಾರ್ಯ ಹಾಗೂ ಕೇರಳದ ಗಣಿತ ಚಕ್ರಚೂಡಾಮಣಿಗಳಿಗೆ ಅವಮಾನಿಸಿದಂತಾಗುವುದಿಲ್ಲವೆ? ಅಷ್ಟೇ ಅಲ್ಲದೆ, ಎಂಟು ವರ್ಷಗಳ ಸುದುಶ್ಚರ ತಪಸ್ಸಿನ ("ತಪಸ್ತೇಪೇ ಸುದುಶ್ಚರಂ"!) ಫಲಶ್ರುತಿಯು 'ಏಕಾಧಿಕೇನ ಪೂರ್ವೇಣ' ಮುಂತಾದ ಸೂತ್ರಗಳಷ್ಟೇ ಅಂದರೆ ಸ್ವಾಮಿಗಳ ಅದ್ವೈತ ಪರಂಪರೆಯ ಆದಿಪ್ರವರ್ತಕರಾದ ಆದಿ ಶಂಕರಾ ಚಾರ್ಯರ 'ಭಜಗೋವಿಂದ ಸ್ತೋತ್ರ'ದ **'ನಹಿ ನಹಿ ರಕ್ಷತಿ ಡುಕೃಞ್ ಕರಣೇ'** ಎಂಬುದು ಎಷ್ಟು ಅರ್ಥಪೂರ್ಣ ಎನಿಸುವುದಿಲ್ಲವೆ?

ಸ್ವಾಮೀ ಭಾರತೀ ಕೃಷ್ಣತೀರ್ಥರು ತಮ್ಮ ಕುತೂಹಲಕಾರಿಯೂ ಮತ್ತು ಎಂಟು ವರ್ಷಗಳ ತೀವ್ರ ಸಾಧನೆಯಿಂದ ರಚಿಸಿದ ಕೃತಿಗೆ ತಮಗಾಗಿ ಕೀರ್ತಿಯನ್ನು ಅಪೇಕ್ಷಿಸದೆ, ಬಹಳ ಧಾರಾಳವಾಗಿ ಮತ್ತು ವಿನಮ್ರವಾಗಿ ಆ ಕೀರ್ತಿಯನ್ನು ಪ್ರಾಚೀನವಾದ ಅಥರ್ವವೇದಕ್ಕೆ ಕೃಷ್ಣಾರ್ಪಣವೆಂದರು! ಪಾಶ್ಚಾತ್ಯ ಲೇಖಕರಲ್ಲಿ ಸಾಮಾನ್ಯವಾಗಿ 'ಕೃತಿಚೌರ್ಯ' (plagiarism) ಎಂಬುದು ಪಿಡುಗಾದರೆ, ಪ್ರಾಚೀನ ಭಾರತೀಯರಿಂದಲೂ ಬೆಳೆಸಿಕೊಂಡು ಬಂದಿರುವ ಒಂದು ಅಭ್ಯಾಸವೆಂದರೆ 'ನಾಮಚೌರ್ಯ'. ತಾವು ಬರೆದ ಕೃತಿಯನ್ನು ಪ್ರಸಿದ್ಧ ಪ್ರಾಚೀನ ಕೃತಿಕಾರರ ಹೆಸರಿನಲ್ಲಿ ಪ್ರಚಾರ ಮಾಡುವುದು! ಸ್ವಾಮಿಗಳ 'ವೇದಿಕ್ ಮ್ಯಾಥಮ್ಯಾಟಿಕ್ಸ್' ನಮ್ಮ ಪ್ರಾಥಮಿಕ ಶಾಲೆಗಳ ಮಕ್ಕಳಿಗೆ ಮೋಜಿನ ವಿಧಾನಗಳಷ್ಟೆ! ಇದು ಯಾವುದೇ ಆಳವಾದ ಗಣಿತವನ್ನಾಗಲೀ

ಅಥವಾ ಗಣಿತ–ತರ್ಕವನ್ನಾಗಲೀ ಕಲಿಸುವುದಿಲ್ಲ. ಇನ್ನು ಕ್ಯಾಲ್ಕುಲೇಟರ್‌ಗಳ ಈ ಯುಗದಲ್ಲಿ – 'ಲಾಗರ್ಥಮಿಕ್' ಕೋಷ್ಟಕಗಳೇ (logarithmic tables) ನಿರುಪಯುಕ್ತವಾಗಿರುವಾಗ – ಇಂತಹ ವಿಧಾನಗಳು ಅರ್ಥಹೀನ.

**ಪ್ರತಿಷ್ಠಿತ ವಿದ್ವಾಂಸರ ಅಭಿಪ್ರಾಯ**

ಅನೇಕ ಪ್ರತಿಷ್ಠಿತ ಗಣಿತಜ್ಞರು ಮತ್ತು ವಿದ್ವಾಂಸರು ಸ್ವಾಮೀ ಭಾರತೀ ಕೃಷ್ಣತೀರ್ಥರ ವಿದ್ವತ್ತು ಮತ್ತು ವೇದಾಂತ ಪ್ರಚಾರದ ಕ್ರಿಯಾಶೀಲತೆಗಳನ್ನು ಗೌರವಿಸುತ್ತಲೇ ಸ್ವಾಮಿಗಳ ತಥಾಕಥಿತ 'ವೇದಿಕ್ ಮ್ಯಾಥಮ್ಯಾಟಿಕ್ಸ್' ಬಗ್ಗೆ ತಮ್ಮ ಪೂರ್ವಗ್ರಹವಿಲ್ಲದ ವಿಚಾರಪೂರ್ಣವಾದ ನಿಶ್ಚಿತ ಅಭಿಪ್ರಾಯಗಳನ್ನು ತಿಳಿಸಿದ್ದಾರೆ :

(i) ಪ್ರೊ॥ ದೇಬಿಪ್ರಸಾದ್ ಚಟ್ಟೋಪಾಧ್ಯಾಯರು : "...ಅತ್ಯಂತ ವಂಚನಮಯವಾದದ್ದೆಂದರೆ (ಪುಸ್ತಕದ) ಹೆಸರು ಮತ್ತು ಐತಿಹಾಸಿಕ ಪ್ರಾಚೀನತೆಯ ಹೆಗ್ಗಳಿಕೆ."

(ii) ಜನಪ್ರಿಯ ಗಣಿತ ಇತಿಹಾಸಕಾರರಾದ ಪ್ರೊ॥ ಆರ್. ಸಿ. ಗುಪ್ತ ಅವರ ಹೇಳಿಕೆ : "...ಈ 16 ಸೂತ್ರಗಳ ಭಾಷೆಯಿಂದ ಸುಸ್ಪಷ್ಟವಾಗುವುದೇನೆಂದರೆ ಇವು ಲೇಖಕರ (ಸ್ವಾಮಿಗಳ) ಸ್ವಂತ ಕೃತಿ – ಇಂದಿನ ಸಂಸ್ಕೃತ ಭಾಷೆ ಮತ್ತು ಪ್ರಾಚೀನ ಸೂತ್ರಗಳ ಶೈಲಿಯಲ್ಲಿ ರಚಿತ."




(iii) ಪ್ರಖ್ಯಾತ ಸಂಸ್ಕೃತ ಮತ್ತು ಖಗೋಳ–ಗಣಿತಜ್ಞ ಪ್ರೊ॥ ಟಿ. ಎಸ್. ಕುಪ್ಪಣ್ಣ ಶಾಸ್ತ್ರಿಗಳ ವಿಮರ್ಶೆ: "ಸಾಮಾನ್ಯವಾಗಿ ಒಪ್ಪಿತವಾದ ಅರ್ಥದಲ್ಲಿ ಈ ಕೃತಿಯು ವೇದಮೂಲದ್ದಲ್ಲವೇ ಅಲ್ಲ. ತಥಾಕಥಿತ 'ಸೂತ್ರ'ಗಳಾಗಲೀ ಅಥವಾ ಅವುಗಳಲ್ಲಿ ಅಂತರ್ಗತವೆಂದು ಹೇಳಲಾದ ವಿಧಾನಗಳಾಗಲೀ ವೇದ ಸಾಹಿತ್ಯದಲ್ಲಿ ಎಲ್ಲೂ ಕಾಣಸಿಗುವುದಿಲ್ಲ. ಇಂತಹ ಹುಸಿ ಹೆಗ್ಗಳಿಕೆಯ ಮೂಲಕ ವೇದಗಳನ್ನು ಮತ್ತು ಹಿಂದೂ ಸಂಸ್ಕೃತಿಯನ್ನು ವೈಭವೀಕರಿಸುವ ಅವರ (ಸ್ವಾಮಿಗಳ) ಪ್ರಯತ್ನಗಳು ಸತ್ಯಾಂಶವು ತಿಳಿದಮೇಲೆ (ಅಂತಹ ಪ್ರಯತ್ನಗಳ ಬಗ್ಗೆ) ಅಸಹ್ಯ ಮತ್ತು ಉಪೇಕ್ಷೆಯ ಭಾವನೆ ಉಂಟಾಗುತ್ತದೆ. ದುಃಖದ ವಿಷಯವೆಂದರೆ, ಲೇಖಕರು ನೀಡಿರುವುದು ಪಾರಂಪರಿಕ ಭಾರತೀಯ ಗಣಿತವೂ ಅಲ್ಲ!"

ಇಲ್ಲಿ ಗಮನಿಸಬೇಕಾದ ಒಂದು ಕುತೂಹಲದ ಅಂಶವೆಂದರೆ ಭಾರತೀ ಕೃಷ್ಣತೀರ್ಥರು (ಪೂರ್ವಾಶ್ರಮದಲ್ಲಿ ವೆಂಕಟರಮಣ), ಹಾಗೂ ಟಿ. ಎಸ್. ಕುಪ್ಪಣ್ಣ ಶಾಸ್ತ್ರಿಗಳು ಇಬ್ಬರೂ ತಮಿಳುನಾಡಿನವರು, ಸಂಸ್ಕೃತ ವಿದ್ವಾಂಸರು ಮತ್ತು ಅದ್ವೈತವೇದಾಂತದ ಅನುಯಾಯಿಗಳಾಗಿದ್ದು ಸ್ಮಾರ್ತ ಸಂಪ್ರದಾಯಕ್ಕೆ ಸೇರಿದವರು ಎಂಬುದು ಪ್ರಾಸಂಗಿಕ!

(iv) ಪ್ರಸಿದ್ಧ ಗಣಿತ ಸಂಶೋಧಕರು ಮತ್ತು ಶಿಕ್ಷಣತಜ್ಞರಾಗಿದ್ದ ಪ್ರೊ॥ ಜೆ. ಎನ್. ಕಪೂರ್ ಅವರು ಈ 16 ಸೂತ್ರಗಳ ವಿಧಾನಗಳನ್ನು ಗಣಿತ–ತಾರ್ಕಿಕವಾಗಿ ವಿಶ್ಲೇಷಿಸಿ, ನೀಡಿರುವ ತೀರ್ಪು :

(ಅ) ಗುಣಾಕಾರದ ವಿಧಾನ : 'ವೇದಿಕ್ ಮ್ಯಾಥಮ್ಯಾಟಿಕ್ಸ್' ಪುಸ್ತಕದಲ್ಲಿ ಲೇಖಕರು ಕೊಟ್ಟಿರುವ ಸೂತ್ರವು (ಆ ಪರಿಕರ್ಮದ) ವಿಧಾನವನ್ನು ನೆನಪಿನಲ್ಲಿಡಲು ಮಾತ್ರ ಸಹಾಯ ಮಾಡುತ್ತದೆ. ಆದರೆ ಆ ಸೂತ್ರದಲ್ಲಿ 'ವೇದಿಕ್' ಏನೂ ಇಲ್ಲ. ನಿಜಾಂಶವೆಂದರೆ ಜ್ಞಾಪಕದಲ್ಲಿ ಇಟ್ಟುಕೊಳ್ಳಲೂ ಈ ಸೂತ್ರವು ಅಪೂರ್ಣವಾಗಿದೆ, ಏಕೆಂದರೆ ಅದು ಗುಣಾಕಾರದ ವಿಧಾನವನ್ನೇ ಸ್ಪಷ್ಟವಾಗಿ ವಿವರಿಸುವುದಿಲ್ಲ!"

(ಆ) ವೇದಿಕ್ ಮ್ಯಾಥಮ್ಯಾಟಿಕ್ಸ್ ಸೂತ್ರಗಳನ್ನು ಆಧರಿಸಿ ಸ್ವಾಮೀಜಿಯವರು ಪಡೆದ ಎಲ್ಲಾ ಫಲಿತಾಂಶಗಳನ್ನು ಹೈಸ್ಕೂಲಿನ ಬೀಜಗಣಿತದಿಂದ ಸುಲಭವಾಗಿ ಸಾಧಿಸಬಹುದು. ಇದಕ್ಕೆ ತಥಾಕಥಿತ 'ವೇದಿಕ್ ಸೂತ್ರ'ಗಳ ಆವಶ್ಯಕತೆ ಇಲ್ಲವೇ ಇಲ್ಲ. ಆದ್ದರಿಂದ, (ಹೀಗೆ) 'ವೇದಿಕ್ ಮ್ಯಾಥಮ್ಯಾಟಿಕ್ಸ್' ಎಂಬುವುದರ ನಿಗೂಢತೆಯನ್ನು ಅನಾವರಣಗೊಳಿಸಬಹುದು."

ಸುಮಾರು ಎರಡು ದಶಕಗಳ ಹಿಂದೆ ಉತ್ತರ ಪ್ರದೇಶ ರಾಜ್ಯ ಸರಕಾರ ಶಾಲಾ ಪಠ್ಯ–ಪುಸ್ತಕಗಳಲ್ಲಿ 'ವೇದಿಕ್ ಮ್ಯಾಥಮ್ಯಾಟಿಕ್ಸ್' ವಿಷಯವನ್ನು ತುರುಕಿದಾಗ ಅದರಲ್ಲಿ ಅಡಕವಾಗಿರುವ ಅಂಶಗಳು ನಿಜವಾಗಿಯೂ ವೇದಸಂಹಿತೆಗಳಿಂದಲೇ ಆಯ್ಕೆ ಮಾಡಿಕೊಂಡಂತೆ ಬಿಂಬಿಸಲಾಯಿತು. ಆ ಪಠ್ಯ ಪುಸ್ತಕದ ಶುರುವಿನಲ್ಲೇ 'ಭಾರತೀಯ ಗಣಿತದ ಸಂಕ್ಷಿಪ್ತ ಇತಿಹಾಸ' ಎಂಬ ಲೇಖನದಲ್ಲಿ 20ನೇ ಶತಮಾನದ ಗಣಿತಜ್ಞರಯಾದಿಯಲ್ಲಿ ಸ್ವಾಮೀಜಿಯವರ ವೈಭವೀಕರಣದ ಜೊತೆಯಲ್ಲಿ ಅವಕಾಶ ಪಡೆದ ಹೆಸರೆಂದರೆ ಶ್ರೀನಿವಾಸ ರಾಮಾನುಜನ್ ಒಬ್ಬನೇ–ಆತ ಪುಣ್ಯ ಮಾಡಿರಬೇಕು!

ಮುಂಬೈಯಲ್ಲಿರುವ ಟಾಟಾ ಮೂಲ ಸಂಶೋಧನ ಸಂಸ್ಥೆಯ (TIFR) ಪ್ರಖ್ಯಾತ ಹಾಗೂ ಜನಪ್ರಿಯ ಗಣಿತ ಪ್ರಾಧ್ಯಾಪಕರು ಹಾಗೂ ಸಂಶೋಧಕರಾದ ಪ್ರೊ॥ ಶ್ರೀಕೃಷ್ಣ ದಾನಿ ಅವರು ಈ 'ವೇದಿಕ್ ಮ್ಯಾಥಮ್ಯಾಟಿಕ್ಸ್' ಬಗ್ಗೆ ಸಾಕಷ್ಟು ವಾಸ್ತವಿಕ ವಿಶ್ಲೇಷಣೆಯನ್ನು ನಡೆಸಿ, ಆ ಪುಸ್ತಕದ ಅತಿವೈಭವೀಕರಣದ ವಿರುದ್ಧ ಪ್ರತಿಷ್ಠಿತ ಪತ್ರಿಕೆಗಳಲ್ಲಿ ಮತ್ತು ಸಂಶೋಧನ ನಿಯತಕಾಲಿಕೆಗಳಲ್ಲಿ ತಮ್ಮ ನಿಶ್ಚಿತ ನಿಲುವನ್ನು ವ್ಯಕ್ತಪಡಿಸಿದ್ದಾರೆ :–

"ಮಕ್ಕಳಲ್ಲಿ ರಾಷ್ಟ್ರೀಯ ಪ್ರೇಮವನ್ನು ಹುಟ್ಟಿಸುವ ತಮ್ಮ ಕಾಳಜಿಯ ಭರದಲ್ಲಿ 'ವೇದಿಕ್ ಮ್ಯಾಥಮ್ಯಾಟಿಕ್ಸ್'ಅನ್ನು ವೈಭವೀಕರಿಸಿ ಪ್ರಚಾರಕ್ಕೆ ಸಂಬಂಧಪಟ್ಟವರು ಸ್ವಲ್ಪವೂ ಕ್ಯಾರೆ ಅನ್ನದ ಮುಖ್ಯವಾದ ವಿಷಯವೆಂದರೆ ಸ್ವಾಮಿಗಳ (ಸಮಕಾಲೀನ) ಆಧುನಿಕ ಭಾರತವು ವಿಶ್ವಗಣಿತದ ಮಟ್ಟಕ್ಕೆ ನೀಡಿ ಖ್ಯಾತಿಯ ಶಿಖರವನ್ನೇ ಸೃಷ್ಟಿಸಲು ಕಾರಣರಾದ ನಿಜವಾದ ಪ್ರಖ್ಯಾತ ಗಣಿತಜ್ಞರನ್ನು ಕೈಬಿಟ್ಟಿರುವುದು! ಪ್ರೊ॥ ಹರೀಶ್‌ಚಂದ್ರ ಅವರ ಕೊಡುಗೆ ಗಣಿತಕ್ಷೇತ್ರದಲ್ಲಿ ವಿಶ್ವದಾದ್ಯಂತ ಮಾನ್ಯತೆಯನ್ನು ಪಡೆದಿದೆ. ಹಾಗೆಯೇ ವಿಶ್ವಮಟ್ಟದಲ್ಲಿ ಭಾರತಕ್ಕೆ ಗೌರವವನ್ನು ಗಳಿಸಿಕೊಟ್ಟ ಸಮಕಾಲೀನ ಗಣಿತವರೇಣ್ಯರೆಂದರೆ ಶ್ಯಾಮದಾಸ್ ಮುಖ್ಯೋಪಾಧ್ಯಾಯ, ಗಣೇಶ್–ಪ್ರಸಾದ್, ಕೆ. ಆನಂದ ರಾವ್, ಟಿ. ವಿಜಯ ರಾಘವನ್, ಎಸ್. ಎಸ್. ಪಿಳ್ಳೈ, ಎಸ್. ಮೀನಾಕ್ಷಿಸುಂದರಂ, ಹಂಸರಾಜ್ ಗುಪ್ತ, ಕೆ. ಜಿ. ರಾಮನಾಥನ್, ಬಿ. ಎಸ್. ಮಾಧವರಾವ್, ವಿ. ವಿ. ನಾರಳೀಕರ್, ಪಿ. ಎಲ್. ಭಟ್ನಾಗರ್, ಇನ್ನು ಮುಂತಾದವರು. ಇಂತಹವರ ಹೆಸರುಗಳನ್ನೆಲ್ಲಾ ನಿರ್ಲಕ್ಷಿಸಿ, ಸ್ವಾಮೀಜಿಯವರ ಹೆಸರನ್ನು ಮಾತ್ರ 'ಸಂಕ್ಷಿಪ್ತ ಇತಿಹಾಸ' ಎಂಬ ಶೀರ್ಷಿಕೆಯಡಿ ಉಲ್ಲೇಖಿಸಿರುವುದು ಮಕ್ಕಳ ಮನಸ್ಸಿನಲ್ಲಿ ಒಂದು ವಿಕೃತ ದೃಷ್ಟಿಕೋನವನ್ನು ಮೂಡಿಸುತ್ತದೆ.

**16 ಸೂತ್ರಗಳು ಶ್ರೇಷ್ಠ ಗಣಿತದ ಸೂಚಕವೆ ?**

ಸ್ವಾಮಿಗಳ ಸೂತ್ರಗಳನ್ನು ಬಳಸಿಕೊಂಡು ಮಾಡುವ ಲೆಕ್ಕಗಳು ಕೆಲವೇ ವಿಶಿಷ್ಟ ಸಂದರ್ಭಗಳಲ್ಲಿ ಶೀಘ್ರದಲ್ಲಿ ಉತ್ತರಗಳನ್ನು ಪಡೆಯುತ್ತವೆ. ಹೆಚ್ಚುವರಿ ಸಂದರ್ಭದಲ್ಲಿ ಸಾಮಾನ್ಯ ಪಠ್ಯಪುಸ್ತಕಗಳ ವಿಧಾನಗಳಷ್ಟೇ – ಅಥವಾ ಕೆಲವು ಕಡೆ ಇನ್ನೂ ಹೆಚ್ಚು ಸಮಯ ಹಾಗೂ ಹಂತಗಳು (steps) ಬೇಕಾಗುತ್ತವೆ.

ಉದಾಹರಣೆ : 98x76 ಎಂಬ ಗುಣಾಕಾರವನ್ನು ಪರಿಗಣಿಸೋಣ. ನಮ್ಮ ಮಾಮೂಲಿ ವಿಧಾನದಲ್ಲಿ ಚಿತ್ರ 6ರಲ್ಲಿ ತೋರಿಸಿದಂತೆ (i) ಮೊದಲು ಸಂಖ್ಯೆ 98ಅನ್ನು ಎರಡನೇ ಸಂಖ್ಯೆ 76ರ ಕೊನೆಯ ಅಂಕಿ 6ರಿಂದ ಗುಣಿಸಿದಾಗ ಬರುವ 588ಅನ್ನು ದತ್ತ ಸಂಖ್ಯೆ 98ರ ಕೆಳಗೆ, ಬಿಡಿ ಸ್ಥಾನಗಳಲ್ಲಿರುವ (8 ಮತ್ತು 8) ಒಂದೇ ಸಾಲಿನಲ್ಲಿ ಬರುವಂತೆ ಜೋಡಿಸುತ್ತೇವೆ.

| | |
|---|---|
| | 98 x 76 |
| (i) | 588 |
| (ii) | 6860 |
| (iii) | 7448 |

**ಚಿತ್ರ ೬**

(ii) ಅನಂತರ ಮೊದಲನೇ ಸಂಖ್ಯೆ 98ಅನ್ನು ಎರಡನೇ ಸಂಖ್ಯೆಯ (ಬಲದಿಂದ) ಎರಡನೇ (ದಶ) ಸ್ಥಾನದಲ್ಲಿರುವ 7ರಿಂದ ಗುಣಿಸಿದಾಗ 686 ಬರುತ್ತದೆ. ಇದನ್ನು ಈ ಮೇಲೆ ಹಂತ(i)ರಲ್ಲಿ ಬರೆದ 588ರ ಕೆಳಗೆ ಅದರ ಬಿಡಿಸ್ಥಾನದಲ್ಲಿರುವ 8ರ ಕೆಳಗಿನ ಬಿಡಿಸ್ಥಾನವನ್ನು ಖಾಲಿ ಬಿಟ್ಟು ಅದರ ಎಡಕ್ಕೆ ಬರೆಯಬೇಕು. ಅಂದರೆ, ಈ ಬರೆದ ಸಂಖ್ಯೆಯ ಬಿಡಿ (ಬಲಕೊನೆ) ಸ್ಥಾನದಲ್ಲಿ ಸೊನ್ನೆ (0) ಇರುತ್ತದೆ.

(iii) ಕೊನೆಯ ಹಂತದಲ್ಲಿ ಒಂದರ ಕೆಳಗೆ ಒಂದರಂತೆ ಬರೆದ 588 ಮತ್ತು 6860 ಸಂಖ್ಯೆಗಳನ್ನು ಕೂಡಿದಾಗ ಬರುವುದೇ **ಉತ್ತರ : *7448*.**

**ಮಳೆ**

ಮನದಂಗಳದಿ ಅರಳಿದ
ನೆನಪಿನ ಪಾರಿಜಾತವು
ನೆನೆಯಿತು ಮಳೆಯಿಂದ.
ಕನಸಿನ ಪಕಳೆಗಳು
ಅರಳಿದವು ಹನಿಯಿಂದ !

**ಶೋಭಾ ಪ್ರಮೋದ್**
ರಾಯಘಡ, ಮಹಾರಾಷ್ಟ್ರ

ಆದರೆ, ಸ್ವಾಮಿಗಳ ವಿಧಾನದಲ್ಲಿ ಸೂತ್ರವನ್ನು (**"ಊರ್ಧ್ವತಿರ್ಯಗ್‌ಭ್ಯಾಮ್"**) ಬಳಸಿ ಮಾಡುವ ಗುಣಾಕಾರದಲ್ಲಿ ಇನ್ನೂ ಹೆಚ್ಚು ಹಂತಗಳಿದ್ದು ಈ ಮೇಲಿನ ಮಾಮೂಲಿ ವಿಧಾನಕ್ಕಿಂತ ಸುಲಭವೂ ಅಲ್ಲ, ಶೀಘ್ರವೂ ಅಲ್ಲ! ಹಾಗೆ ನೋಡಿದರೆ ಬಹಳ ಅಂಕಿಗಳನ್ನು ಹೊಂದಿರುವ ದೊಡ್ಡ ದೊಡ್ಡ ಸಂಖ್ಯೆಗಳ ಗುಣಲಬ್ಧಗಳನ್ನು ಕ್ಷಣಮಾತ್ರದಲ್ಲಿ ನೀಡುತ್ತಿದ್ದ ಶಕುಂತಲಾದೇವಿಯ ಕಾರ್ಯವೈಖರಿ ಪವಾಡಸದೃಶವೆನ್ನಬೇಕಾಗುತ್ತದೆ. ಅವರು ಎಷ್ಟು ವರ್ಷ ಕಠಿಣ ತಪಸ್ಸು ಮಾಡಿದರೆಂದಾಗಲೀ, ಆ ವಿಧಾನಗಳನ್ನು ವೇದಮೂಲಗಳಿಂದ ಹೆಕ್ಕಿದರೆಂದಾಗಲೀ ಎಲ್ಲೂ ಹೇಳಿಕೊಂಡ ದಾಖಲೆಗಳಿಲ್ಲ! ಆದರೆ ಆಕೆಗೆ ಆ ವಿಧಾನಗಳನ್ನು ಕಲಿಸಿಕೊಟ್ಟ ತಂದೆಯವರಿಗೆ ಕೃತಜ್ಞತೆ ತೋರಿಸಿದ್ದಾಗಲೀ ಅಥವಾ ಆ ವಿಶಿಷ್ಟ ಮತ್ತು ನಿಗೂಢ ವಿಧಾನಗಳನ್ನು ಮುಂದಿನ ಪೀಳಿಗೆಗಳ ಅನುಕೂಲಕ್ಕಾಗಲೀ, ಗಣಿತ ಪರಿಕರ್ಮಗಳ ಬೆಳವಣಿಗೆಗಾಗಲೀ ಎಲ್ಲೂ ವಿವರಿಸಿ ಬೋಧಿಸಿದ ದಾಖಲೆಗಳೂ ಇಲ್ಲ!

ನ್ಯೂಟನ್, ಐನ್‌ಸ್ಟೈನ್, ಮೇಡಂ ಕ್ಯೂರಿ ಅಂತಹ ಪಾಶ್ಚಾತ್ಯ ವಿಜ್ಞಾನಿಗಳಾಗಲೀ ಭಾರತೀಯರಾದ ಆರ್ಯಭಟ, ಭಾಸ್ಕರ, ರಾಮಾನುಜನ್ ಅಂತಹ ವಿಜ್ಞಾನಿ ದಿಗ್ಗಜರು ತಮ್ಮ ಅಮೂಲ್ಯವಾದ ಆವಿಷ್ಕಾರಗಳನ್ನು ನಿಗೂಢವಾಗಿಸಿ ರಹಸ್ಯವಾಗಿ ಅವರೊಂದಿಗೇ ಮಣ್ಣುಸೇರುವಂತೆ ಮಾಡಿದ್ದರೆ ಜ್ಞಾನ-ವಿಜ್ಞಾನದ ಬೆಳವಣಿಗೆ ಶಿಲಾಯುಗದಲ್ಲೇ ಸ್ಥಾವರವಾಗಿ ಉಳಿಯುತ್ತಿತ್ತು!

**ಸರಕಾರಗಳ ಅಸಾಮಾನ್ಯ ಕಾಳಜಿ ಹಾಗೂ ವಿಜ್ಞಾನ ಪರಿಣತರ ಆಕ್ಷೇಪಣೆ**

ಈ ಹಿಂದೆ, 2001ರಲ್ಲಿ ಎನ್.ಸಿ.ಇ.ಆರ್.ಟಿ. ಪಠ್ಯಕ್ರಮದಲ್ಲಿ 'ವೇದಿಕ್ ಮ್ಯಾಥಮ್ಯಾಟಿಕ್ಸ್' ವಿಷಯವನ್ನೂ ಮತ್ತು ಯು.ಜಿ.ಸಿ. ಶಿಕ್ಷಣಕ್ರಮದಲ್ಲಿ ತಥಾಕಥಿತ 'ವೇದಿಕ್ ಆಸ್ಟ್ರಾಲಜಿ' ('ಜ್ಯೋತಿರ್ವಿಜ್ಞಾನ್'!) ಎಂಬ ಅರ್ಥಹೀನ ಹುಸಿಶಾಸ್ತ್ರವನ್ನು ಜಾರಿಗೆ ತರಲು ಕೇಂದ್ರ ಸರಕಾರ ಯೋಜಿಸುವ ಸಂದರ್ಭದಲ್ಲಿ ದೇಶದಾದ್ಯಂತ 100ಕ್ಕೂ ಹೆಚ್ಚು ಪ್ರತಿಷ್ಠಿತ ವಿಜ್ಞಾನಿಗಳು ಮುಂದೆ ಬಂದು ಅಂತಹ ಯೋಜನೆಯ ವಿರುದ್ಧ ಪ್ರತಿಭಟಿಸಿದರು. ಆ ವಿಜ್ಞಾನ ಶಿಕ್ಷಣತಜ್ಞರ ಪಟ್ಟಿಯಲ್ಲಿದ್ದ ಕೆಲವು ಪ್ರತಿಷ್ಠಿತರೆಂದರೆ ಪ್ರೊ॥ ಯಶಪಾಲ್, ಪ್ರೊ॥ ಜಯಂತ್ ನಾರಳೀಕರ್ (IUCAA., ಪುಣೆ), ಪ್ರೊ॥ ಆರ್. ಪಾರ್ಥಸಾರಥಿ (TIFR.), ಪ್ರೊ॥ ಅಲ್ಲಾಡಿ ಸೀತಾರಾಮ್ (ISI., ಬೆಂಗಳೂರು), ಪ್ರೊ॥ ಕಪಿಲ್ ಪರಾಂಜಪೆ, ಪ್ರೊ॥ ಟಿ. ಜಯರಾಮನ್ ಮುಂತಾದವರು.

ಪ್ರೊ॥ ಯಶಪಾಲ್‌ರ ಹೇಳಿಕೆ ಎಷ್ಟು ಖಚಿತ ಮತ್ತು ಅರ್ಥಪೂರ್ಣವಾಗಿದೆ : "ಈ ವಿಷಯಗಳ ಪಠ್ಯಕ್ರಮಗಳೇ ಸಾಮಾಜಿಕ ಬಿಕ್ಕಟ್ಟು ಮತ್ತು ಬಿಗು ವಾತಾವರಣ ಸೃಷ್ಟಿಸುತ್ತವೆ. ಯಾವ ಆತ್ಮಗೌರವ ಹೊಂದಿರುವ ವಿಶ್ವ ವಿದ್ಯಾಲಯವೂ ಈ ಕೋರ್ಸ್‌ಗಳನ್ನು ಆರಂಭಿಸುವುದಿಲ್ಲ." ನಮ್ಮ ಕರ್ನಾಟಕ ಸರಕಾರವು ನಿಜಕ್ಕೂ ತನ್ನ ಆತ್ಮಗೌರವವನ್ನು ಬಿಂಬಿಸಿತು! ಪ್ರೊ॥ ಯಶಪಾಲ್ ಅವರು ಮುಂದುವರಿಸುತ್ತ "ನಮ್ಮ ಶಿಕ್ಷಣ ಪದ್ಧತಿಯನ್ನು 'ತಾಲಿಬಾನಿಸಂ' ದಿಕ್ಕಿನಲ್ಲಿ ಕೊಂಡೊಯ್ಯುವುದು ಬೇಡ."

ವೇದಿಕ್ ಆಸ್ಟ್ರಾಲಜಿ (ಫಲಜ್ಯೋತಿಷ)ವನ್ನು 'ಜ್ಯೋತಿರ್ವಿಜ್ಞಾನ್' ಎಂಬ ಗೌರವಪೂರ್ಣ ಹೆಸರಿನಿಂದ ಬಿಹಾರ ರಾಜ್ಯದ ಒಂದು ವಿ.ವಿ.ಯಲ್ಲಿ ಸೇರಿಸಿದ ಸಂದರ್ಭದ ಅನುಭವ ಆ ವಿಷಯದ ಟೊಳ್ಳುತನ ಹಾಗೂ ಅದರ ಪ್ರತಿಪಾದಕರ ಮತ್ತು ಬೋಧಿಸುವ 'ಪ್ರೊಫೆಸರ್'ಗಳ ದಡ್ಡತನಕ್ಕೆ ದ್ಯೋತಕವಾಗಿದೆ. ಆ ವಿಭಾಗದ ಮುಖ್ಯಸ್ಥರೊಂದಿಗೆ ಹೈಸ್ಕೂಲು ಬೀಜಗಣಿತದ ಭಾಗವಾದ 'ವರ್ಗ ಸಮೀಕರಣ'ಗಳ ಪರಿಹಾರದ ಬಹಳ ಜನಪ್ರಿಯವಾಗಿರುವ ಸೂತ್ರವನ್ನು ಉಲ್ಲೇಖಿಸಿದಾಗ ಆ ಮಹಾಪ್ರಭೃತಿ ಕೇಳಿದ ಪ್ರಶ್ನೆ: "ಯಹ್ ತೋ ಕ್ಯಾ ಹೋಗಾ ?" ಜ್ಯೋತಿಷ ಶಾಸ್ತ್ರದಲ್ಲಿ ವಿದ್ವತ್ ಆದವರಿಗೆ ಫಲಜ್ಯೋತಿಷ ದೊಂದಿಗೆ ಖಗೋಲವಿಜ್ಞಾನದ ಸಿದ್ಧಾಂತಗ್ರಂಥಗಳಲ್ಲದೆ, 'ಲೀಲಾವತೀ', 'ಬೀಜಗಣಿತಂ' ಮುಂತಾದ ಶುದ್ಧ ಗಣಿತಗ್ರಂಥಗಳ ಅಧ್ಯಯನವೂ ಕಡ್ಡಾಯ !

ಗುಜರಾತ್ ರಾಜ್ಯದ ದೀನಾನಾಥ್ ಬಾತ್ರಾ ಅನ್ನುವವರ ಪಠ್ಯಪುಸ್ತಕಗಳನ್ನು ಅಲ್ಲಿಯ ಶಾಲಾ ಮಕ್ಕಳು ಕಡ್ಡಾಯವಾಗಿ ಅಭ್ಯಾಸಮಾಡಬೇಕು ಎಂದು ನಿರ್ಬಂಧಿಸಿದೆ.

ಸುದ್ದಿಗಳ ವರದಿಗಳ ಪ್ರಕಾರ ಒಂದು ಖಾಸಗಿ ಶಿಕ್ಷಣ ಆಯೋಗವನ್ನು ರಚಿಸಿ 'ವೇದಿಕ್ ಮ್ಯಾಥಮ್ಯಾಟಿಕ್ಸ್' ಮುಂತಾದವನ್ನು ಪಠ್ಯಕ್ರಮಗಳಲ್ಲಿ ಸೇರಿಸಿ ನಮ್ಮ ಶಿಕ್ಷಣಪದ್ಧತಿಯ 'ಭಾರತೀಕರಣ'ವನ್ನು ಕೈಗೊಳ್ಳಬೇಕೆಂದು ಶ್ರೀಮಾನ್ ಬಾತ್ರಾ ಅವರ ಸಲಹೆ. ಈ ಸಲಹೆಗೆ ಪ್ರಧಾನಮಂತ್ರಿಗಳ ಹಾಗೂ ಮಾನವ ಸಂಪನ್ಮೂಲ ಮಂತ್ರಿಗಳ 'ಅಸ್ತು'! ಈ ಹಿಂದೆ 'ಜ್ಯೋತಿರ್ವಿಜ್ಞಾನ್' (ಫಲಜ್ಯೋತಿಷ) ಮತ್ತು 'ಪೌರೋಹಿತ್ಯ' ಮುಂತಾದವುಗಳನ್ನು ನಮ್ಮ ವಿ.ವಿ.ಗಳ ಮೇಲೆ ಹೇರುವ ಹುನ್ನಾರದಂತೆಯೇ ಈ ಹೊಸ ಯೋಜನೆಯನ್ನು ಇನ್ನೂ ತೀವ್ರವಾಗಿ ಹಾಗೂ ಸರ್ವವ್ಯಾಪಿಯಾಗಿ ಆಚರಣೆಗೆ ತರುವ ಪ್ರಯತ್ನಗಳು ಸ್ಪಷ್ಟವಾಗಿವೆ.

ನಮ್ಮ ದೇಶದ ಪಾರಂಪರಿಕ ಮೌಲ್ಯಗಳನ್ನು ಗೌರವಿಸಿ ಸಾಂಸ್ಕೃತಿಕ ಹಾಗೂ ಜ್ಞಾನ-ವಿಜ್ಞಾನ ಪರಂಪರೆಯ ಬಗ್ಗೆ ಪರಿಚಯವನ್ನು ಮುಂದಿನ ಪೀಳಿಗೆಗಳಿಗೆ ಮಾಡಿಕೊಡಬೇಕಾದ್ದು ಅತ್ಯಾವಶ್ಯಕ. ಇದರ ಬಗ್ಗೆ ಯಾವ ತಕರಾರೂ ಇಲ್ಲ. ಆದರೆ ನಿಜವಾಗಿಯೂ ಮೌಲ್ಯಯುತವೂ ಮತ್ತು ವಿಶ್ವದ ಮನ್ನಣೆ ಪಡೆದ ಆರ್ಯಭಟ, ಬ್ರಹ್ಮಗುಪ್ತ, ಭಾಸ್ಕರಾಚಾರ್ಯ ಹಾಗೂ 20-21ನೇ ಶತಮಾನಗಳ ಶ್ರೇಷ್ಠಮಟ್ಟದ ಭಾರತೀಯ ಗಣಿತಜ್ಞರ ಮತ್ತು ಖಗೋಲ ವಿಜ್ಞಾನಿಗಳ ಸಾಧನೆಗಳ ಪರಿಚಯ ಮಾಡಿಕೊಡುವುದನ್ನು ಬಿಟ್ಟು, ಅವುಗಳನ್ನೆಲ್ಲಾ ಕಡೆಗಣಿಸಿ, ವೈದಿಕವೂ ಅಲ್ಲದ ಉಚ್ಚಮಟ್ಟದ ಗಣಿತವೂ ಅಲ್ಲದ ಬಾಲಿಶವಾದ ಒಂದು ಕೃತಿಯನ್ನು ಎತ್ತಿಹಿಡಿಯಲು ಹೊರಟಿರುವ ನಮ್ಮ ಆಳರಸರಿಗೆ ಬುದ್ಧಿ ಹೇಳುವವರಿಲ್ಲವೆ ?

ಇತ್ತೀಚೆಗೆ ನಡೆದ ಒಂದು ಸಭೆಯಲ್ಲಿ ಓರ್ವ ತಂತ್ರಜ್ಞಾನದ ಪ್ರಾಧ್ಯಾಪಕರ ಮಾತು "ವೇದಿಕ್ ಮ್ಯಾಥಮ್ಯಾಟಿಕ್ಸ್ ವೇದಗಳಲ್ಲಿ ಇಲ್ಲದಿದ್ದರೆ ಏನಂತೆ? ಆ ಸೂತ್ರಗಳನ್ನು ರಚಿಸಿದವರು ವೈದಿಕರು (ಪುರೋಹಿತವರ್ಗದವರು) ಅಲ್ಲವೆ ?" ಇದು ನಿಜಕ್ಕೂ ಆ ಪುಸ್ತಕದ ವೈಭವೀಕರಣದ 'ಆ್ಯಂಟಿಕ್ಲೈಮ್ಯಾಕ್ಸ್'!

**ಕರ್ತವ್ಯೇ ಸ್ಫುಟವಾಸನಾ ಪ್ರಕಥನೇ ಪೂರ್ವೋಕ್ತಿ ವಿಶ್ವಾಸಿನಾಂ**
**ತತ್ತದ್ದೂಷಣಮಂತರೇಣ ನಿತರಾಂ ನಾಸ್ತಿ ಪ್ರತೀತಿರ್ಯತಃ।**

– ಸಂಪ್ರದಾಯದಲ್ಲಿ (ಕುರುಡು) ನಂಬಿಕೆಯುಳ್ಳವರ ಮುಂದೆ ಸತ್ಯವನ್ನು ನಿರ್ದಾಕ್ಷಿಣ್ಯವಾಗಿ ಹೇಳಲೇಬೇಕಾಗುತ್ತದೆ. ಹಿಂದಿನವರ ಎಲ್ಲಾ ಹೇಳಿಕೆಗಳಲ್ಲಿರುವ ಪ್ರತಿಯೊಂದು ದೋಷವನ್ನು ಖಂಡಿಸದೆ ನಂಬಲು ಸಾಧ್ಯವಿಲ್ಲ.

– ಭಾಸ್ಕರಾಚಾರ್ಯರು

**ಡಾ॥ ಎಸ್. ಬಾಲಚಂದ್ರ ರಾವ್**
ಗೌರವ ನಿರ್ದೇಶಕರು, ಭವನದ ಗಾಂಧೀ ವಿಜ್ಞಾನ ಮತ್ತು
ಮಾನವೀಯ ಮೌಲ್ಯಗಳ ಕೇಂದ್ರ, ಬೆಂಗಳೂರು - ೫೬೦ ೦೦೧




# ವಸಂತ ಪ್ರಕಾಶನ

e-mail : vasantha_prakashana@rediffmail.com

## ಉತ್ತಮ ಪುಸ್ತಕ ಇಂದಿಗೂ ಎಂದೆಂದಿಗೂ




₹ 170




₹ 140




₹ 180




₹ 120




₹ 150




₹ 110




₹ 120




₹ 120




₹ 125




₹ 95




₹ 160




₹ 80




₹ 50

# 360, 10ನೇ 'ಬಿ' ಮುಖ್ಯರಸ್ತೆ, 3ನೇ ಬ್ಲಾಕ್, ಜಯನಗರ, ಬೆಂಗಳೂರು - 560 011. ✆ 22443996





# ಇತಿಹಾಸ ಮತ್ತು ಪುರಾಣಗಳ ಅಂತರ

*ಹುತ್ತಗಟ್ಟದೆ ಚಿತ್ತ ಮತ್ತೆ ಕೆತ್ತೀತೇನು*
*ಪುರುಷೋತ್ತಮನ ಆ ಅಂಥ ರೂಪ–ರೇಖೆ ?*
– ಎಂ. ಗೋಪಾಲಕೃಷ್ಣ ಅಡಿಗ
– *"ಶ್ರೀರಾಮ ನವಮಿಯ ದಿವಸ"*

ರಾಮಾಯಣ, ಮಹಾಭಾರತಗಳು ಭಾರತೀಯ ಜನಸಮುದಾಯದ ಸಾಂಸ್ಕೃತಿಕ ಪ್ರತೀಕಗಳು. ಜನಪ್ರಿಯವಾದ ಪೂಜ್ಯ ಪ್ರಾಚೀನ ಗ್ರಂಥಗಳು. ಅಕ್ಷರ ವಿದ್ಯೆಯನ್ನು ಬಲ್ಲವರು ಸಂದರ್ಭ ವೊದಗಿದಾಗೆಲ್ಲ ಪುರಾಣಗ್ರಂಥಗಳ ಪಾರಾಯಣ ಮಾಡುತ್ತಾರೆ; ಜನಸಾಮಾನ್ಯರು, ಅನಕ್ಷರಸ್ಥರು ಕೇಳಿ ಆನಂದಿಸುತ್ತಾರೆ, ಧನ್ಯಭಾವ ತಾಳುತ್ತಾರೆ. ನಮ್ಮ ದೇಶದಲ್ಲಿ ಮಾತ್ರವಲ್ಲ; ಪ್ರಾಚೀನ ಕಾಲದಿಂದ ಭಾರತೀಯ ಸಂಸ್ಕೃತಿಯ ಸಂಪರ್ಕವಿರುವ ಹಲವು ದೇಶಗಳಲ್ಲಿ ಕೂಡ ರಾಮ–ಸೀತೆಯರ, ಪಾಂಡವ–ಕೌರವರ ಕಥೆಗಳು ವಿಭಿನ್ನ ರೂಪಗಳಲ್ಲಿ ಪ್ರಚಲಿತವಿವೆ.

ಭರತಖಂಡದ ಯಾವ ಮೂಲೆಗೆ ಹೋದರೂ, ರಾಮ–ಸೀತೆಯರು ಮತ್ತು ಪಾಂಡವ–ಕೌರವರಿಗೆ ಸಂಬಂಧಿಸಿದ ಒಂದು ಸ್ಥಳವನ್ನು ತೋರಿಸುತ್ತಾರೆ. ಚಿತ್ರದುರ್ಗದ ಬಳಿಯ ಬೆಟ್ಟದ ಒಂದು ವಿಶಾಲವಾದ ಹಾಸುಗಲ್ಲನ್ನು ತೋರಿಸಿ, ಇದು ಏಕಚಕ್ರ ನಗರದಲ್ಲಿ ತಲೆಮರೆಸಿಕೊಂಡು ತಂಗಿದ್ದ ಪಾಂಡವರ ಭೀಮನು ರಾಗಿ ಬೀಸುತ್ತಿದ್ದ 'ಬೀಸುಕಲ್ಲು' ಎನ್ನುತ್ತಾರೆ. ಅರೆ ಮಲೆನಾಡು ಪ್ರದೇಶದ ಗುಡ್ಡ ಬೆಟ್ಟಗಳಲ್ಲಿ ಬೆಳೆಯುವ ಒಂದು ಜಾತಿಯ ಹುಲ್ಲನ್ನು ತೋರಿಸಿ ಇದು 'ಶುಂಠಿ ಹುಲ್ಲು' ಎನ್ನುತ್ತಾರೆ; ವನವಾಸ ಕಾಲದಲ್ಲಿ ಸೀತಮ್ಮನವರು ಮೊಸರನ್ನು ತಿಂದು ಕೈ ಒರಸಿ ಕೊಂಡದ್ದರಿಂದ ಇದಕ್ಕೆ ಈ ಸುವಾಸನೆ ಬಂದಿದೆ ಎನ್ನುತ್ತಾರೆ. ರಾಮ–ಸೀತೆಯರು, ಪಾಂಡವ–ಕೌರವರು ಯಾವ ಕಾಲದವರು, ಯಾವ ಸ್ಥಳದವರು, ಅವರು ಅಲ್ಲಿಂದ–ಇಲ್ಲಿಗೆ ಯಾವಾಗ, ಹೇಗೆ ಬಂದರು – ಎಂದು ಯಾರೂ ಪ್ರಶ್ನಿಸುವುದಿಲ್ಲ.

ರಾಮಾಯಣದ ಬಗೆಗೆ ಬಹುತೇಕ ವಿದ್ವಾಂಸರ ಅಭಿಪ್ರಾಯವೇನೆಂದರೆ, ಅನಾದಿ ಕಾಲದಿಂದಲೂ ಕಥೆಗಳ ರೂಪದಲ್ಲೋ, ಹಾಡುಗಳ ರೂಪದಲ್ಲೋ ಪ್ರಚುರವಾಗಿದ್ದ ಸೀತಾ–ರಾಮರ ದಾಂಪತ್ಯದ ಚರಿತೆಯನ್ನು 'ವಾಲ್ಮೀಕಿ' (ವಲ್ಮೀಕ – ಎಂದರೆ ಹುತ್ತ ಎಂಬ ಅರ್ಥವೂ ಇದೆ.) ಎಂಬ ಮಹಾ ಕವಿಯು ಧ್ಯಾನಸ್ಥನಾಗಿ 'ಚಿತ್ತ ಹೆಪ್ಪುಗಟ್ಟುವವರೆಗೂ' ತಪಸ್ಸಿನಲ್ಲಿ ಕುಳಿತು ಮಹಾಕಾವ್ಯವನ್ನು ರಚಿಸಿದನು – ಎಂಬುದು. 'ಚಿತ್ತ ಹೆಪ್ಪುಗಟ್ಟುವುದು' ಎಂಬುದು ಆಲಂಕಾರಿಕ ಪ್ರಯೋಗ. ಇದಕ್ಕೆ ಪೂರಕವಾಗಿ, "ಕಾಮಮೋಹಿತನಾಗಿದ್ದ ಕ್ರೌಂಚ ಮಿಥುನದಲ್ಲಿ ಒಂದು ಹಕ್ಕಿಯು ಬೇಡನ ಬಾಣದಿಂದ ಹತವಾದುದನ್ನು ಕಂಡು ಕವಿಯ ಮನಸ್ಸಿನಲ್ಲಿ ಉಕ್ಕಿದ ಶೋಕವೇ ಶ್ಲೋಕವಾಗಿ ಹೊರಹೊಮ್ಮಿತು (ಶೋಕಂ ಶ್ಲೋಕತ್ವಮಾಗತಃ)" – ಎಂಬುದು ರಾಮಾಯಣದ ಪ್ರಸ್ತಾವನೆಯಾಗಿದೆ.

ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಯೇನೆಂದರೆ, ಪ್ರತಿಭಾವಂತನಾದ ಕವಿಯು ಧ್ಯಾನಸ್ಥನಾಗಿ ತಪಸ್ಸಿನಲ್ಲಿ ಕುಳಿತಾಗ ಅವನ ಧ್ಯಾನದಲ್ಲಿ ಹೆಪ್ಪುಗಟ್ಟುವುದು ಕವಿಯ 'ವೈಯಕ್ತಿಕ ಚಿತ್ತ' ಮಾತ್ರವಲ್ಲ; ಅದೊಂದು ಸಮಷ್ಟಿ ಸುಪ್ತಚಿತ್ತದ ಪರಿಕಲ್ಪನೆ. ರಾಮಾಯಣ, ಮಹಾಭಾರತದಂಥ ಪುರಾಣ ಕೃತಿಗಳು ಸಮಷ್ಟಿ ಚಿತ್ತದ ಪ್ರತೀಕಗಳು.

ಪುರಾಣಗಳು 'ಸಮಷ್ಟಿ ಸುಪ್ತಚಿತ್ತದ ಪ್ರತೀಕಗಳು' ('ಆರ್ಕಿಟೈಪ್ಸ್') ಎನ್ನುತ್ತಾನೆ, ಪ್ರಸಿದ್ಧ ಮನಶ್ಶಾಸ್ತ್ರಜ್ಞ ನಾದ ಸಿ. ಜಿ. ಯೂಂಗ್. ಒಂದು ಜನಾಂಗವು ತಲೆತಲಾಂತರಗಳಲ್ಲಿ ಗಳಿಸಿದ ವಿಶೇಷ ಅನುಭವಗಳ ಅರ್ಕಸತ್ವವು ಸಮಷ್ಟಿಯ ಸುಪ್ತಚಿತ್ತದಲ್ಲಿ ಪ್ರತೀಕ ರೂಪವಾಗಿ ನೆಲೆಸಿರುತ್ತದೆ; ಆಯಾ ಜನಾಂಗದ ಸದಸ್ಯರು ಕಾವ್ಯ, ಸಾಹಿತ್ಯಾದಿ ಕಲೆಗಳಿಗೂ, ಜೀವನದ ವಿಶಿಷ್ಟ ಸಂದರ್ಭಗಳಿಗೂ ತೋರುವ ಪ್ರತಿಕ್ರಿಯೆಯನ್ನು ಬಹುತೇಕ ಇಂಥ ಪ್ರತೀಕಗಳೇ ನಿರ್ದೇಶಿಸುತ್ತವೆ – ಎನ್ನುವುದು 'ಆರ್ಕಿಟೈಪ್' – ಎನ್ನುವುದಕ್ಕೆ ಯೂಂಗ್ ಕೊಡುವ ವಿವರಣೆ. (ಯೂಂಗ್ ಬಳಸುವ Archetype ಎಂಬುದಕ್ಕೆ, ಆರ್ಷಪ್ರತೀಕಗಳು, ಆರ್ಕಪ್ರತೀಕಗಳು, ಮೂಲ ಪ್ರತೀಕಗಳು, ಪುರಾಣ ಪ್ರತೀಕಗಳು/ಪ್ರತಿಮೆಗಳು ಇತ್ಯಾದಿ ಪರ್ಯಾಯ ಪದಗಳನ್ನು ಬಳಸಲಾಗುತ್ತದೆ).

'ಪುರಾಣ' ಎಂಬುದನ್ನು ಬಹಳ ಹಳೆಯದು, ಕಟ್ಟುಕತೆ, ಅತಿಲಂಬಿತವಾದುದು – ಎಂಬ ಲಘುವಾದ ರೀತಿಯಲ್ಲಿ ಬಳಸುವುದು ಜನರಲ್ಲಿ ರೂಢಿಯಾಗಿದೆಯಾದರೂ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ, ಒಂದು ಪಾರಿಭಾಷಿಕ ಪದವಾಗಿ, 'ಪುರಾಣ'ವನ್ನು ಗಂಭೀರ ಅರ್ಥದಲ್ಲಿ ಬಳಸ ಬೇಕಾಗುತ್ತದೆ. ಪ್ರಪ್ರಾಚೀನವಾದ ನಂಬಿಕೆಗಳು, ಆದಿಮ ಜನರ ನಡವಳಿಕೆಗಳು, ಅತಿಮಾನುಷ ಸಂಗತಿಗಳ ಬಗೆಗಿನ ಕಲ್ಪನೆಗಳು, ಪ್ರಕೃತಿಯ ಗೋಚರ/ಅಗೋಚರ ಶಕ್ತಿಗಳ ಬಗೆಗಿನ, ಪ್ರಾಚೀನ ಜನರ ಅಭಿಪ್ರಾಯಗಳು – ಇವೆಲ್ಲವನ್ನೂ ಪುರಾಣವು ಒಳಗೊಳ್ಳುತ್ತದೆ.

ಸಂಸ್ಕೃತ ವಿದ್ವಾಂಸರಾದ ರಾಘವಾಚಾರ್ಯರು 'ಪುರಾಣ'ವನ್ನು ಪುರಾ+ನವ ಎಂದು ಬಿಡಿಸಿ ಪ್ರಾಚೀನವಾದರೂ ನಿತ್ಯನೂತನವಾದುದು ಎಂದು ಅರ್ಥೈಸಿದ್ದಾರೆ. ಪುರಾಣ ಪುರುಷರಿಗೆ ಸಂಬಂಧಿಸಿದ

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ಹಬ್ಬಹರಿದಿನಗಳನ್ನು ದೇಶದ ವಿವಿಧ ಭಾಗದ ಜನರು ಬೇರೆ ಬೇರೆ ಕಾಲದಲ್ಲಿ, ವಿವಿಧ ಬಗೆಗಳಲ್ಲಿ ಆಚರಿಸುತ್ತ ಬಂದಿದ್ದಾರೆ. "ಪುರಾಣವು ('ಮಿಥ್'–Myth) ಆಚರಣೆಗಳನ್ನಾಧರಿಸಿದ ಚಿರಂತನ ಸತ್ಯ" – ಎನ್ನುತ್ತಾನೆ ನಾರ್ಥ್‌ರೋಪ್ ಫ್ರೇ – ಎಂಬ ಸಂಸ್ಕೃತಿ ಶಾಸ್ತ್ರಜ್ಞ.

'ಪುರಾಣವು ಅತ್ಯಂತ ಸಂಕೀರ್ಣವಾದ ಸಾಂಸ್ಕೃತಿಕ ಸಂಗತಿ' (Myth is an extremely complex cultural reality) ಎಂಬುದು ಬ್ರಿಟಾನಿಯಾ ವಿಶ್ವಕೋಶವು ಕೊಡುವ ವಿವರಣೆ. ಆದ್ದರಿಂದ ಪುರಾಣಗಳನ್ನು ಒಂದು ಸಮುದಾಯದ ಸಾಂಸ್ಕೃತಿಕ ಪ್ರತೀಕಗಳು – ಎಂಬ ದೃಷ್ಟಿಯಿಂದ ಅಧ್ಯಯನ ಮಾಡುವುದು ಹೆಚ್ಚು ಪ್ರಯೋಜನಕರವಾಗುತ್ತದೆ.

ಹದಿನೆಂಟನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದ ಮಧ್ಯಭಾಗದವರೆಗೂ ಮಾನವರ ಸಾಂಘಿಕ ಜೀವನದ ಜ್ಞಾನಭಂಡಾರವನ್ನು ಖಚಿತವಾದ ಸಂಗತಿಗಳ ಮೂಲಕ ದಾಖಲಿಸುವ ಶಾಸ್ತ್ರ ಮತ್ತು ಇತರ ಸಾಮಾಜಿಕ ಶಾಸ್ತ್ರಗಳು ಮತ್ತು ಇತರ ಶಾಸ್ತ್ರಗಳು ಎಂಬ ರೂಪದಲ್ಲಿ ವಿಂಗಡಿಸುವ ಪ್ರಯತ್ನಗಳು ನಡೆದವು.

ಪ್ರತಿಯೊಂದಕ್ಕೂ ಪ್ರತ್ಯಕ್ಷ ಪ್ರಮಾಣವನ್ನು ಅಪೇಕ್ಷಿಸುವ ಐರೋಪ್ಯ ಮೂಲದ 'ಪಾಸಿಟಿವಿಸಂ' (Positivism – ಪ್ರತ್ಯಕ್ಷ ಪ್ರಮಾಣತತ್ವ) ಎಂಬುದು ಇತಿಹಾಸ ಮತ್ತು ಪುರಾಣಗಳ ನಡುವೆ 'ದ್ವಂದ್ವ' (Dichotomy)ವನ್ನು ಕಲ್ಪಿಸುತ್ತದೆ. ಈ ಎರಡರ ನಡುವೆ ಯಾವುದೇ ಸಂಬಂಧವಿಲ್ಲವೆಂದು ಪ್ರತಿಪಾದಿಸುತ್ತದೆ. ಆಧುನಿಕ ಸಮಾಜಶಾಸ್ತ್ರದ ಆದ್ಯಪ್ರವರ್ತಕನೆನ್ನುವ ಆಗಸ್ಟೆ ಕಾಮ್ಟೆ (Auguste Comte) ಎಂಬಾತನು ಪ್ರತಿಪಾದಿಸಿದ 'ದ್ವಂದ್ವಾತ್ಮಕತೆ'ಯು ಹದಿನೆಂಟರಿಂದ ಇಪ್ಪತ್ತನೆಯ ಶತಮಾನದ ನಡುವಿನ ಚಿಂತಕರಲ್ಲಿ ತುಂಬ ಪ್ರಭಾವಶಾಲಿಯಾಗಿತ್ತು. ಹೀಗಾಗಿ ಇತಿಹಾಸವು 'ಖಚಿತ ಸತ್ಯದ ದಾಖಲೆ' ಎಂದೂ, ಪುರಾಣಗಳು 'ಕವಿಕಲ್ಪನೆ'ಗಳೆಂದೂ ವರ್ಗೀಕರಿಸಲಾಯಿತು. ೧೮೩೦ರಲ್ಲಿ ಲಿಯಪೋಲ್ಡ್ ವಾನ್ ರಾಂಕೆ (Leopold Von Ranke) ಎಂಬ ವಿದ್ವಾಂಸನು, "ಇತಿಹಾಸವು ವಾಸ್ತವವಾಗಿ ಏನು ನಡೆಯಿತೋ ಅದನ್ನು (ಇತಿ+ಹಾಸ) ದಾಖಲಿಸುತ್ತದೆ" ಎಂದಿದ್ದಾನೆ. ಹತ್ತೊಂಬತ್ತನೆ ಶತಮಾನದ ಇತಿಹಾಸಕಾರರು ಬಹುಮಟ್ಟಿಗೆ ರಾಂಕೆಯ ಅಭಿಪ್ರಾಯವನ್ನೇ ಅನುಮೋದಿಸಿದರು. ಇತಿಹಾಸಕಾರನು ಪ್ರಾಚೀನ ದಾಖಲೆಗಳು, ಶಾಸನಗಳು, ಪುರಾತತ್ವ ಶೋಧನೆ, ಪ್ರಾಚೀನ ನಾಣ್ಯಗಳು, ಸ್ಮಾರಕಗಳು – ಇತ್ಯಾದಿಗಳಿಂದ ತನ್ನ ಬರವಣಿಗೆಗೆ ಅಗತ್ಯವಾದ ಮಾಹಿತಿಯನ್ನು ಸಂಗ್ರಹಿಸುವುದರಿಂದ ಇತಿಹಾಸಕಾರನು ಹೇಳುವುದು "ವಸ್ತುನಿಷ್ಠ ಸತ್ಯ"ವಾಗಿರುತ್ತದೆ – ಎಂಬುದು ಸಾಮಾನ್ಯವಾಗಿ ಜನರ ಅನಿಸಿಕೆ.

ಆದರೆ, ಇ. ಎಚ್. ಕಾರ್ (E. H. Carr) ಎಂಬ ವಿದ್ವಾಂಸನು ರಚಿಸಿರುವ 'ಇತಿಹಾಸವೆಂದರೇನು ?' ಎಂಬ ಅಮೂಲ್ಯ ಕೃತಿಯಲ್ಲಿನ ಇತಿಹಾಸಕಾರ ಮತ್ತು ಆತನ 'ವಸ್ತುನಿಷ್ಠ ಸತ್ಯ' – ಎಂಬ ಅಧ್ಯಾಯದ ಕೆಲವು ಮಾತುಗಳು ಗಮನಾರ್ಹವಾಗಿವೆ. "ಮೊದಲನೆಯದಾಗಿ, ಇತಿಹಾಸಕಾರನ ದಾಖಲೆಗಳು 'ಶುದ್ಧ' ರೂಪದಲ್ಲಿ ಆತನ ಕಣ್ಣಮುಂದೆ ಕಾಣಿಸಿಕೊಳ್ಳುವುದಿಲ್ಲ; ಅಂತಹ ದಾಖಲೆಗಳೇನಿದ್ದರೂ ಅವುಗಳನ್ನು ದಾಖಲಿಸಿದ ವ್ಯಕ್ತಿಯ ಮನಃಪಟಲದಲ್ಲಿ 'ವಕ್ರೀಭವನಗೊಂಡಿರುತ್ತವೆ.' (ಅಂದರೆ ಕೇಂದ್ರದಿಂದ ಒಂದಿಲ್ಲೊಂದು ಕಡೆಗೆ ವಾಲಿರುತ್ತವೆ.) ಎರಡನೆಯದಾಗಿ, ಇತಿಹಾಸಕಾರನು ಯಾವ ಒಲವು ನಿಲುವುಗಳಿಂದ ತನ್ನ ಮುಂದಿರುವ ದಾಖಲೆಗಳನ್ನು ಸ್ವೀಕರಿಸುತ್ತಾನೆಂಬುದೂ ಮುಖ್ಯವಾಗುತ್ತದೆ." ಹೀಗಿರುವುದರಿಂದ, ಇತಿಹಾಸದಲ್ಲಿರುವ ದಾಖಲೆಗಳೆಲ್ಲ 'ವಸ್ತುನಿಷ್ಠ ಸತ್ಯ'ವೆಂಬ ಮಾತು ಕೂಡ ಹುಸಿಯಾಗುತ್ತದೆ.

ಇತಿಹಾಸ ಮತ್ತು ಪುರಾಣಗಳ ಅಂತರವನ್ನು ಕುರಿತ ಪಾಶ್ಚಾತ್ಯ ಚಿಂತಕರ ಜಿಜ್ಞಾಸೆ ಹೇಗೂ ಇರಲಿ :

ಭಾರತೀಯ ಇತಿಹಾಸಕಾರರಿಗೆ ತಮ್ಮದೇ ಆದ ಚಿಂತನಾಕ್ರಮವಿದೆ, ಇರಬೇಕು – ಎಂದು ಪ್ರತಿಪಾದಿಸುವ, ಭಾರತೀಯ ಇತಿಹಾಸ ಮತ್ತು ಸಂಶೋಧನಾ ಸಂಸ್ಥೆಯ (ICHR) ಅಧ್ಯಕ್ಷರಾದ, ಪ್ರೊ॥ ಯಲ್ಲಾಪ್ರಗಡ ಸುದರ್ಶನರಾವ್ ಅವರು ನಮ್ಮ ಪಾಶ್ಚಾತ್ಯ ಚಿಂತನಾ ಕ್ರಮವನ್ನೇ ಅನುಸರಿಸಿ, ಇತ್ತೀಚೆಗೆ ರಾಮಾಯಣ ಮತ್ತು ಮಹಾಭಾರತಗಳ ಬಗೆಗೆ ವ್ಯಕ್ತಪಡಿಸಿರುವ ಅಭಿಪ್ರಾಯವು ಪ್ರಸ್ತುತ ಸಂದರ್ಭದಲ್ಲಿ ನಮ್ಮ ಚರ್ಚೆಗೆ ಅವಕಾಶ ಮಾಡಿಕೊಟ್ಟಿದೆ.

ಪ್ರೊ॥ ರಾವ್ ಅವರ ಪ್ರಕಾರ – "ರಾಮಾಯಣ ಮತ್ತು ಮಹಾಭಾರತಗಳು ಪುರಾಣಕೃತಿಗಳಲ್ಲ : ಸಾಕ್ಷ್ಯಾಧಾರಗಳೊಡನೆ ಹೋಲಿಸಿ ನೋಡಬಹುದಾದ (ದೇಶಕಾಲಬದ್ಧವಾದ) ಐತಿಹಾಸಿಕ ದಾಖಲೆಗಳು."

– ಹೀಗೆ ಹೇಳಿದರೆ, ರಾಮಾಯಣ ಮಹಾಭಾರತ ಗಳನ್ನು ಐತಿಹಾಸಿಕ ಕೃತಿಗಳಂತೆ ಪರಿಗಣಿಸಿ ಇವುಗಳ ಕಾಲದೇಶಗಳನ್ನು ನಿರ್ಣಯಿಸುವ ಪ್ರಯತ್ನಗಳು ಹಿಂದೆ ನಡೆದಿಲ್ಲವೆಂದಲ್ಲ. ಹತ್ತೊಂಬತ್ತು, ಇಪ್ಪತ್ತನೆಯ ಶತಮಾನದ ಜರ್ಮನ್, ಅಮೆರಿಕನ್, ಇಂಗ್ಲಿಷ್ ಮತ್ತು ಫ್ರೆಂಚ್ ವಿದ್ವಾಂಸರೂ, ಭಾರತದ ಕೆಲವು ವಿದ್ವಾಂಸರೂ ಸಂಶೋಧನೆಗಳನ್ನು ನಡೆಸಿ ಈ ಮಹಾನ್ ಕೃತಿಗಳ ದೇಶ–ಕಾಲಗಳನ್ನು ನಿರ್ಣಯಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಸರ್ವಸಮ್ಮತವಾದ ಒಂದು ತೀರ್ಮಾನಕ್ಕೆ ಬರುವುದು ಈವರೆಗೂ ಸಾಧ್ಯವಾಗಿಲ್ಲ; ಮುಂದೆ ಸಾಧ್ಯವಾಗುವಂತೆಯೂ ತೋರುವುದಿಲ್ಲ. ನಿದರ್ಶನಕ್ಕೆ; ಭಾರತಶಾಸ್ತ್ರ ಹಾಗೂ ಪುರಾತತ್ವಶಾಸ್ತ್ರಗಳಲ್ಲಿ ಆಳವಾದ ಪಾಂಡಿತ್ಯವುಳ್ಳ ಎಚ್. ಡಿ. ಸಂಕಾಲಿಯಾ ಅವರು, ರಾಮಾಯಣದಲ್ಲಿ ಪ್ರಸ್ತಾಪವಾಗಿರುವ ಪ್ರಮುಖ ಸ್ಥಳಗಳನ್ನು ಕುರಿತು ಹೇಳುವುದು ಹೀಗೆ : "ಗೋಪಥ ಬ್ರಾಹ್ಮಣದಲ್ಲಿ ಕೋಸಲ ರಾಜ್ಯದ ಪ್ರಸ್ತಾಪವಿದ್ದರೂ, ಸರಯೂ ತೀರದಲ್ಲಿ ಆರ್ಯಕುಲಕ್ಕೆ ಸೇರಿದ ಚಿತ್ರರಥನು ವಾಸವಾಗಿದ್ದನೆಂದು ಋಗ್ವೇದವು ತಿಳಿಸಿದರೂ ಕೋಸಲದಲ್ಲಿ ಯಾವುದೇ ನಗರ – ಕಡೆಗೆ ಅಯೋಧ್ಯೆ ಕೂಡ – ಇತ್ತು ಎಂಬ ಪ್ರಸ್ತಾಪವಿಲ್ಲ ... ದಶರಥ ಜಾತಕದ ಪ್ರಕಾರ ದಶರಥ ಮತ್ತು ರಾಮ ಇಬ್ಬರೂ ವಾರಣಾಸಿಯ ರಾಜರು; ಸೀತೆಗೆ ಜನಕನೊಂದಿಗೆ ಯಾವ ಸಂಬಂಧವೂ ಇಲ್ಲ ... ರಾಮನು ವಾನರ ಸೇನೆಯೊಂದಿಗೆ ವಿಂಧ್ಯವನ್ನಾಗಲಿ, ನರ್ಮದೆಯನ್ನಾಗಲಿ ದಾಟಲಿಲ್ಲ ... ಮೂಲ ಲಂಕೆಯು ಹಿಂದೂಸಾಗರದ ದ್ವೀಪವಲ್ಲ ... ಅದು ಮಧ್ಯಪೂರ್ವ ದೇಶದ ಪೂರ್ವಭಾಗದಲ್ಲಿದೆ" ಎಂದು ಉಲ್ಲೇಖಿಸುತ್ತಾರೆ. (ನೋಡಿ : ಎಚ್. ಡಿ. ಸಂಕಾಲಿಯ, ನವಕರ್ನಾಟಕ ಪ್ರಕಾಶನ–೧೯೯೦ ಇತಿಹಾಸದ ಕಣ್ಣಲ್ಲಿ ರಾಮಾಯಣ ಪು. ೧೦, ೧೬, ೧೭). ಡಾ॥ ಶಂಕರ ಮೊಕಾಶಿ ಅವರು "ಶ್ರೀರಾಮಚಂದ್ರನ ೪೨ನೇ ತಲೆಮಾರಿನ ಪೂರ್ವಜರು ವಾಸಿಸುತ್ತಿದ್ದ ಅಯೋಧ್ಯೆಯು ಈಗ ನಾವು ಅಯೋಧ್ಯೆಯೆಂದು ಗುರುತಿಸುವ ಸ್ಥಳದಲ್ಲಿರಲಿಲ್ಲ; ಪ್ರಾಚೀನ ಕಾಲದಲ್ಲಿ 'ಅವಧಪುರಿ' ಎಂಬ ಹೆಸರಿದ್ದ ಆ ನಗರಿಯು ಬೇರೆಯೆ ಸ್ಥಳದಲ್ಲಿತ್ತು" ಎಂದು ಅಭಿಪ್ರಾಯಪಡುತ್ತಾರೆ. (ನೋಡಿ : ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತ ಕಾದಂಬರಿ "ಅವಧೇಶ್ವರಿ" – ಪ್ರೊ॥ ಶಂಕರ ಮೊಕಾಶಿ ಪುಣೇಕರ)

ಹೀಗೆಯೇ, ಮಹಾಭಾರತದ ಕಾಲ ಮತ್ತು ಕೃತಿಕಾರನ ಬಗೆಗೆ ಹೇಳುವ ಮಾತುಗಳನ್ನು ಗಮನಿಸಬೇಕು : "ಸುಮಾರು ಒಂದು ಶತಮಾನದಿಂದ, ಜರ್ಮನ್, ಇಂಗ್ಲಿಷ್, ಫ್ರೆಂಚ್ ವಿದ್ವಾಂಸರೂ, ಭಾರತೀಯ ವಿದ್ವಾಂಸರೂ ಸಂಶೋಧನೆ ನಡೆಸಿ ಮಹಾಭಾರತದ ಕಾಲವನ್ನು ನಿರ್ಣಯಿಸಲು ಪ್ರಯತ್ನಿಸಿದ್ದಾರೆ... (ಆದರೆ) ಇಂದು ಉಪಲಬ್ಧವಾಗಿರುವ ಮಹಾಭಾರತದ ಕಾಲವನ್ನು ಒಂದು ನೂರು ವರ್ಷ ಹೆಚ್ಚು ಕಡಿಮೆಯಾಗಿರುವಂತೆ ಸ್ಥೂಲವಾಗಿ ಹೇಳುವುದಕ್ಕೂ ಆಗುವುದಿಲ್ಲ... ಸದ್ಯ ಲಭ್ಯವಿರುವ ಮಹಾಭಾರತವು (ಕೂಡ) ಏಕಮೇವಾದ್ವಿತೀಯ ಗ್ರಂಥವಲ್ಲ. (...ಮಹಾಭಾರತದ ಮೂಲಪಾಠವನ್ನು ಸಂಶೋಧಿಸಿ ಪ್ರಕಟಿಸಬೇಕೆಂಬ ಪ್ರಯತ್ನದಲ್ಲಿ ಸುಮಾರು ಒಂದು ಶತಮಾನಕ್ಕಿಂತ ಹಿಂದಿನಿಂದಲೂ ವಿ. ಎಸ್. ಸುಕ್ತಂಕರ್ (ಸುಕಥನಕರ) ಅದರ ನೇತೃತ್ವದಲ್ಲಿ 'ಭಂಡಾರ್‌ಕರ್ ಓರಿಯಂಟಲ್ ಸಂಶೋಧನಾ ಸಂಸ್ಥೆ'ಯು ಕೈಗೊಂಡಿದೆ.)

**ಹಲವು ರೂಪಾಂತರಗಳು :** ರಾಮಾಯಣ ಮಹಾಭಾರತಗಳ ಮೂಲರೂಪದ ದೇಶ, ಕಾಲ ಮತ್ತು ಕರ್ತೃಗಳ ಬಗೆಗೆ ಭಿನ್ನಾಭಿಪ್ರಾಯಗಳಿರುವ ಹಾಗೆ, ಈ ಪುರಾಣ ಕೃತಿಗಳ ಹಲವು ರೂಪಾಂತರಗಳೂ ಲಭ್ಯವಿವೆ. "ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ; ಕಾಲಿಡಲು ತೆರಹಿಲ್ಲ" – ಎನ್ನುತ್ತಾನೆ ೧೫ನೇ ಶತಮಾನದ ಪ್ರಸಿದ್ಧ ಕನ್ನಡ ಕವಿ ಕುಮಾರವ್ಯಾಸ. ಭಾರತದ ಹಲವು ದೇಶಭಾಷೆಗಳಲ್ಲಿ ಮಾತ್ರವಲ್ಲದೆ ಅನ್ಯದೇಶಗಳ ಭಾಷೆಗಳಲ್ಲಿಯೂ ರಾಮಾಯಣ, ಮಹಾಭಾರತಗಳ ರೂಪಾಂತರಗಳು ಲಭ್ಯವಿವೆ. ಪಾಲ್ ರಿಚ್‌ಮನ್ (Paul Richman) ಎಂಬಾತ ತನ್ನ ಗ್ರಂಥಕ್ಕೆ 'ಹಲವು ರಾಮಾಯಣಗಳು' ಎಂದು ಹೆಸರಿಟ್ಟಿದ್ದಾನೆ. ಪ್ರೊ॥ ಎ. ಕೆ. ರಾಮಾನುಜನ್ ಅವರ "ಮುನ್ನೂರು ರಾಮಾಯಣಗಳು" ಎಂಬುದು ಒಂದು ಸ್ವಾರಸ್ಯಕರ ಕೃತಿ. (ದೆಹಲಿ ವಿಶ್ವವಿದ್ಯಾನಿಲಯವು ಈ ಗ್ರಂಥದ ಕೆಲವು ಅಧ್ಯಾಯಗಳನ್ನು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಪಠ್ಯ ಭಾಗವಾಗಿ ಗೊತ್ತುಪಡಿಸಿದಾಗ, ಕೆಲವು ಸಂಕುಚಿತ ಮನಸ್ಸುಗಳ ಒತ್ತಾಯಕ್ಕೆ ಮಣಿದು, ಪಠ್ಯವನ್ನು ಹಿಂಪಡೆಯ ಬೇಕಾಗಿ ಬಂದುದು ವಿಷಾದದ ಸಂಗತಿ.)

ಫ್ರಾನ್ಸ್ ದೇಶದ ರಂಗಕರ್ಮಿಯಾದ ಪೀಟರ್ ಬ್ರೂಕ್ (Peter Brook) ಎಂಬಾತನು ಮಹಾಭಾರತ ಪುರಾಣ ಕಥೆಯನ್ನು ತನ್ನದೇ ಆದ ರೀತಿಯಲ್ಲಿ ರೂಪಾಂತರ ಗೊಳಿಸಿ, ಪುನರ್ರಚಿಸಿದ್ದಾನೆ. ಮೊದಲಿನಲ್ಲಿ ದೀರ್ಘಾವಧಿಯ ನಾಟಕವಾಗಿದ್ದ ಪಠ್ಯವನ್ನು ನಾಲ್ಕು–ಐದು ಗಂಟೆಗಳ ಚಲನಚಿತ್ರವಾಗಿಸಿದ್ದಾನೆ; ಜಗತ್ತಿನ ನಾನಾ ಭಾಗಗಳಿಂದ ಪಾತ್ರಧಾರಿಗಳನ್ನು ಆಯ್ಕೆಮಾಡಿಕೊಳ್ಳುವ ಮೂಲಕ ಪುರಾಣಕತೆಗೆ ಒಂದು ಜಾಗತಿಕ ಆಯಾಮವನ್ನು ನೀಡಿದ್ದಾನೆ.

ಹಾಗೆ ನೋಡಿದರೆ, ಆಧುನಿಕ ಇತಿಹಾಸ ಲೇಖಕರಲ್ಲಿ ಅಸಭ್ಯರಾದ ಕೆಲವು ವಿದ್ವಾಂಸರು ಬಹುಬಗೆಯ ರಾಮಾಯಣಗಳು ಮತ್ತು ಮಹಾಭಾರತಗಳನ್ನು ಗುರುತಿಸುವುದಕ್ಕಿಂತ ಬಹು ಹಿಂದೆಯೇ, ಹದಿಮೂರನೆಯ ಶತಮಾನದ ತತ್ವಚಿಂತಕರಾದ ಮಾಧವಾಚಾರ್ಯರು ಮಹಾಭಾರತದ ಹಲವು ವ್ಯಾಖ್ಯಾನಗಳು, ಪ್ರಕ್ಷಿಪ್ತಗಳು, ರೂಪಾಂತರಗಳು ಲಭ್ಯವಿರುವುದಾಗಿ ಹೇಳಿದ್ದಾರೆ. ಅಂದಮೇಲೆ, ರಾಮಾಯಣ, ಮಹಾಭಾರತಗಳಂಥ ಪೂಜ್ಯ ಪ್ರಾಚೀನ ಗ್ರಂಥಗಳ ಯಾವ ಪಠ್ಯವು ಏಕಮೇವಾದ್ವಿತೀಯವಾದುದು, ಇತಿಹಾಸದೊಡನೆ ಹೋಲಿಸಿ ನೋಡಬಹುದಾದುದು, ಅಧಿಕೃತವಾದುದು ಎಂದು ಹೇಗೆ ಹೇಳಲಾದೀತು ?

ರಾಮಾಯಣ ಮತ್ತು ಮಹಾಭಾರತಗಳು ಪುರಾಣ ಕೃತಿಗಳಲ್ಲ; ಕಾಲ ದೇಶಬದ್ಧವಾದ, ಐತಿಹಾಸಿಕ ಸಾಕ್ಷ್ಯಗಳೊಡನೆ ಹೋಲಿಸಿ ನೋಡಬಹುದಾದ (historical veracity) ಕೃತಿಗಳು ಎಂಬ ಹೇಳಿಕೆಯ ಹಿನ್ನೆಲೆಯು, ಪ್ರಾಯಶಃ – "ಪುರಾಣಗಳಲ್ಲಿ ವಸ್ತುನಿಷ್ಠತೆಯಿರುವುದಿಲ್ಲ; ಅದರಲ್ಲಿರುವುದು ಕಥನಸಾಹಿತ್ಯ ಸ್ವರೂಪದ ಕಾಲ್ಪನಿಕ ಸೃಷ್ಟಿ. ಪುರಾಣಗಳನ್ನು ವೈಚಾರಿಕ, ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸಲಾಗುವುದಿಲ್ಲ. ಪುರಾಣಗಳ ಸತ್ಯತೆಯು ವೈಯಕ್ತಿಕ ನಂಬಿಕೆ ಮತ್ತು ವಿಶ್ವಾಸಕ್ಕೆ ಸಂಬಂಧಪಟ್ಟುದು. ಈ ವಿಚಾರವನ್ನು ಅಲಕ್ಷಿಸಿ ಪುರಾಣಗಳನ್ನು ಇತಿಹಾಸಕ್ಕೆ ಸರಿಸಮಾನವೆಂದು ಭಾವಿಸಿದರೆ ಪುರಾಣಗಳನ್ನು ಕೆಳದರ್ಜೆಗೆ ತಳ್ಳಿದಂತಾಗುತ್ತದೆ" – ಎಂದಿರಬಹುದು. ಆದರೆ ಇದೊಂದು ತಪ್ಪು ಕಲ್ಪನೆ. ಈ ರೀತಿಯ ತಪ್ಪು ಕಲ್ಪನೆಯಿಂದ ಇತಿಹಾಸ ಮತ್ತು ಪುರಾಣಗಳೆರಡರ ಸ್ವಸ್ವರೂಪಗಳನ್ನು ಅರ್ಥಮಾಡಿಕೊಳ್ಳಲೂ ಅಡ್ಡಿಯಾಗುತ್ತದೆಂಬುದನ್ನು ಮರೆಯಬಾರದು.

ಹಾಗೆ ನೋಡಿದರೆ, ಇತಿಹಾಸ ಮತ್ತು ಪುರಾಣಗಳೆರಡೂ ಮಾನವಚಿತ್ತದ ನಿರ್ಮಾಣಗಳೇ ಆಗಿವೆ. (ಒಬ್ಬ ಇತಿಹಾಸಕಾರನಿಗೂ ಮತ್ತು ಇನ್ನೊಬ್ಬ ಇತಿಹಾಸಕಾರನಿಗೂ ನಡುವೆ ಇರುವ ಭಿನ್ನಾಭಿಪ್ರಾಯಗಳ ಬಗೆಗೆ ಈ ಹಿಂದೆ ಪ್ರಸ್ತಾಪಿಸಲಾಗಿದೆ.) ಇತಿಹಾಸವು ಸಾಕ್ಷ್ಯಾಧಾರಗಳ ಮೂಲಕ ಕಾಲದೇಶಬದ್ಧವಾದ ಪ್ರಾಚೀನತೆಯನ್ನು ಪುನರ್ ಸೃಷ್ಟಿಸಿಕೊಳ್ಳುವುದಕ್ಕೆ

## ಲಂಚ ತಂದ ಆಪತ್ತು !

ಲಂಚದಿಂದ  
ಬಂದಿದ್ದ  
ಝಣ ಝಣ  
ಕಾಂಚಾಣವು  
ಲೋಕಾಯುಕ್ತರು  
ದಾಳಿ ಮಾಡಿದಾಗ  
ವಿಷದ ನಂಜಾಯ್ತು !!

ಕಾ. ಗಿ. ಹತ್ತಳ್ಳಿ  
ಸಿಂದಗಿ

ಸೀಮಿತವಾಗಿರುತ್ತದೆ. ಪುರಾಣಗಳಿಗೆ ಈ ಬಗೆಯ ಇತಿಮಿತಿಗಳಿಲ್ಲ. ಪುರಾಣಗಳ ದೇಶಕಾಲಗಳನ್ನು ಪಾಠಕನ ಚಿತ್ತವು ತನ್ನಷ್ಟಕ್ಕೆ ತಾನೇ ಸೃಷ್ಟಿಸಿಕೊಳ್ಳುತ್ತದೆ. ಕಥಾಸಾಹಿತ್ಯ, ಜಾನಪದ ಸಾಹಿತ್ಯಗಳ ರೀತಿಯು ಕೂಡ ಇದೇ ಬಗೆಯದು.

ಇತಿಹಾಸ ಮತ್ತು ಪುರಾಣಗಳ ದ್ವಂದ್ವಾತ್ಮಕ ಸಂಬಂಧವು ಪರಸ್ಪರ ವಿರುದ್ಧವಾದುದಲ್ಲ; ಒಂದಕ್ಕೊಂದು ಪೂರಕವಾದುದು. ಶ್ರೀರಾಮಚಂದ್ರನ ವ್ಯಕ್ತಿತ್ವವು ಭಾರತೀಯರಿಗೆ ಅಷ್ಟೊಂದು ಪೂಜನೀಯವೂ, ಪ್ರಖ್ಯಾತವೂ ಆಗಿರುವುದಕ್ಕೆ ಕಾರಣ ಅವನೊಬ್ಬ ಪುರಾಣಪುರುಷನಾಗಿರುವುದು. ಶ್ರೀರಾಮನನ್ನು ಒಬ್ಬ ಇತಿಹಾಸದ ವ್ಯಕ್ತಿಯಾಗಿ, ಅಯೋಧ್ಯೆಯಂಥ ಒಂದು ಚಿಕ್ಕ ರಾಜ್ಯದ ಅಧಿಪತಿಯಾಗಿ ಪರಿಗಣಿಸಿದರೆ, ಆತನ ಚರಿತೆಯು ಇತಿಹಾಸದ ಪುಸ್ತಕಗಳಲ್ಲಿ ಒಂದು ಸಣ್ಣ ಟಿಪ್ಪಣಿಯ ರೂಪದಲ್ಲಿ, ನಾಲ್ಕಾರು ವಾಕ್ಯಗಳಲ್ಲಿ ಕಾಣಿಸಿಕೊಂಡೀತು, ಅಷ್ಟೆ. ಅಯೋಧ್ಯೆಗಿಂತ ಬಹು ವಿಸ್ತಾರವಾದ, ಭೂಭಾಗವನ್ನು ಆಳಿದ ಸಾಮ್ರಾಟ್ ಅಶೋಕ ಚಕ್ರವರ್ತಿಯ ಹೆಸರು ಕೂಡ ಭಾರತದ ಜನಮಾನಸದಲ್ಲಿ ಶ್ರೀರಾಮನ ಹೆಸರಿನಷ್ಟು ಸ್ಥಿರವಾಗಿ ನೆಲೆಸಿಲ್ಲ! ಶ್ರೀರಾಮನು ಅಯೋಧ್ಯೆಯನ್ನಾಳಿದ ಒಬ್ಬ ಸಾಮಾನ್ಯ ದೊರೆಯಾಗಿದ್ದು, ಎಲ್ಲ ರಾಜರೂ ವಾಸ್ತವ ಜೀವನದಲ್ಲಿ ಮಾಡಬಹುದಾದ ಸಾಹಸ ಕಾರ್ಯಗಳನ್ನಷ್ಟೇ ಮಾಡಿದವನಾಗಿದ್ದರೆ ಆತನಿಗೆ ಈಗಲೂ ದೊರೆಯುತ್ತಿರುವ ಕೀರ್ತಿ, ಪೂಜ್ಯತೆಗಳು ಖಂಡಿತ ದೊರೆಯುತ್ತಿರಲಿಲ್ಲ. ಒಬ್ಬ ಪುರಾಣಪುರುಷನಾಗಿ, ಪವಾಡ ಸದೃಶವಾದ ಅದ್ಭುತಗಳನ್ನು, ಇತೋಪ್ಯತಿಶಯ ವಾದ ಮಹತ್ಕಾರ್ಯಗಳನ್ನು ಸಾಧಿಸಿದನೆಂಬ ಭಾವನೆಯಿಂದಲೇ ಆತನ ವ್ಯಕ್ತಿತ್ವವು, ಪ್ರಸಿದ್ಧವೂ ಪೂಜನೀಯವೂ ಆಗಿದೆ ಯೆಂಬುದನ್ನು ಯಾರೂ ಅಲ್ಲಗಳೆಯಲಾರರಲ್ಲವೆ?

ಪುರಾಣಗಳನ್ನು ಭೌತಸಾಕ್ಷ್ಯಗಳ ಮೂಲಕ ತಾಳೆ ಹಾಕಿ ನೋಡಬಹುದಾದ ಇತಿಹಾಸದ ದಾಖಲೆಗಳೆಂದು ತಿಳಿಯುವುದಕ್ಕಿಂತ ಇವು ಸಾಂಸ್ಕೃತಿಕ ಪ್ರತೀಕಗಳೆಂದು ಪರಿಭಾವಿಸಿ ಅಧ್ಯಯನ ಮಾಡಿದಾಗ ಪುರಾಣಗಳ ಅಧ್ಯಯನವು ಹೆಚ್ಚು ಶ್ರೀಮಂತವಾಗುತ್ತದೆ. ಅಲ್ಲದೆ, ಪುರಾಣಗಳೆಂದರೆ ಅಸತ್ಯದ ಕಂತೆಗಳು ಎಂಬ ತಾತ್ಸಾರಕ್ಕೆ ಗುರಿಯಾಗುವುದೂ ತಪ್ಪುತ್ತದೆ.

ಆದರೆ, ಪುರಾಣದ ಪಾತ್ರಗಳು ಇತಿಹಾಸದ ವ್ಯಕ್ತಿಗಳೇ ಆಗಿರಬೇಕಿಲ್ಲವೆಂದು ಹೇಳಿದೊಡನೆ ಸಂಘಪರಿವಾರ ರಾಜಕೀಯದ ಬೆಂಕಿಗೆ ತುಪ್ಪ ಸುರಿದಂತಾಗುತ್ತದೆ. ಸಂಘಪರಿವಾರದವರು, ಹಿಂದುತ್ವವಾದಿಗಳು ಕುಪಿತರಾಗಲು ಕಾರಣವಿದೆ.

ಕೇಂದ್ರದ ಎನ್.ಡಿ.ಎ. ಆಡಳಿತದ ಮೊದಲ ಅವಧಿಯ ಉದ್ದಕ್ಕೂ ಹಿಂದುತ್ವವಾದಿ ಸಂಘ ಪರಿವಾರವು ಶ್ರೀರಾಮನ ಹೆಸರಿನಲ್ಲಿ ರಾಜಕಾರಣವನ್ನು ನಡೆಸುತ್ತ, ೧೯೯೨ರಲ್ಲಿ ಬಾಬ್ರಿ ಮಸೀದಿಯನ್ನು ಉರುಳಿಸಿತು. ಬಾಬ್ರಿ ಮಸೀದಿಯಿದ್ದ ಜಾಗದಲ್ಲಿಯೇ ಹಿಂದೆ ರಾಮಲಲ್ಲಾನ ದೇವಾಲಯ ವಿತ್ತೆಂದೂ, ಇದೇ ರಾಮಜನ್ಮ ಭೂಮಿ ಎಂದೂ ಘೋಷಿಸಿತು. ಪುನಃ ಅದೇ ಸ್ಥಳದಲ್ಲಿ ವಿಶಾಲವೂ ಭವ್ಯವೂ ಆದ ರಾಮ ದೇವಾಲಯವನ್ನು ನಿರ್ಮಿಸುವ ಭರವಸೆಯೊಂದಿಗೆ ಬಿ.ಜೆ.ಪಿ.ಯ ಹಿರಿಯ ನಾಯಕ ಎಲ್. ಕೆ. ಅದ್ವಾನಿ ಯವರ ನೇತೃತ್ವದಲ್ಲಿ, ಅಬ್ಬರದ ಪ್ರಚಾರದೊಂದಿಗೆ 'ಇಟ್ಟಿಗೆ ಯಾತ್ರೆ' (ದೇವಾಲಯದ ನಿರ್ಮಾಣಕ್ಕಾಗಿ ಅಪಾರ ಪ್ರಮಾಣದ ಇಟ್ಟಿಗೆಗಳನ್ನು ಸಂಗ್ರಹಿಸುವ ಯಾತ್ರೆ)ಯನ್ನು ನಡೆಸಿತು. ಆದರೆ, ಹಿಂದಿನ ಎನ್.ಡಿ.ಎ. ಸರ್ಕಾರದ ಕಾಲದಲ್ಲಿ ವಿಶಾಲವಾದ ಭವ್ಯ ದೇವಾಲಯ ನಿರ್ಮಾಣ ಸಾಧ್ಯವಾಗಲಿಲ್ಲ. ತಾತ್ಕಾಲಿಕವಾದ ಮಂದಿರವೊಂದನ್ನು ಅಲ್ಲಿ ಕಟ್ಟಿ, ಶ್ರೀರಾಮನ ವಿಗ್ರಹವನ್ನಿಟ್ಟು, ಮಂದಿರದ ಸುತ್ತ ಬೇಲಿ ಹಾಕಿ, ದಿನದ ಇಪ್ಪತ್ನಾಲ್ಕು ಗಂಟೆಗಳ ಕಾಲವೂ ನೂರಾರು ಪೊಲೀಸರ ಭದ್ರತೆಯನ್ನು ಏರ್ಪಡಿಸಲಾಗಿದೆ. ಇದರಿಂದ ಸಂಘಪರಿವಾರದ ಮಹತ್ವಾಕಾಂಕ್ಷೆಗೆ ಧಕ್ಕೆಯಾಗಿರುವುದರಿಂದ ಪರಿವಾರದವರಿಗೆ ಕೋಪ ಬಂದಿರುವುದು ಸಹಜ.

ಬಾಬ್ರಿ ಮದೀಸಿಯ ಸುತ್ತಲಿನ ಪ್ರದೇಶದ ಒಡೆತನದ ವಿಚಾರವು ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಾಗ, ನ್ಯಾಯಾಲಯವು ವಿವಾದಗ್ರಸ್ತ ಭೂಮಿಯನ್ನು ಮೂರು ತುಂಡುಗಳಾಗಿ ವಿಭಜಿಸಿ ಒಂದು ತುಂಡನ್ನು ಮಾತ್ರ ಸಂಘಪರಿವಾರದ ವಶಕ್ಕೆ ನೀಡಿದೆ.

ಬಾಬ್ರಿ ಮಸೀದಿ ಸುತ್ತಲಿನ ಸಮಗ್ರ ಭೂಮಿಯನ್ನು ತನ್ನ ವಶಪಡಿಸಿಕೊಳ್ಳಬೇಕಾದರೆ, ನ್ಯಾಯಾಲಯದ ಮುಂದೆ, ಈ ದೇಶದ ಬಹುಸಂಖ್ಯಾತ ಜನರ ನಂಬಿಕೆ, ಪೂಜ್ಯ ಭಾವನೆಗಳಂತಹ ಭಾವನಾತ್ಮಕ ವಿಷಯಗಳನ್ನಷ್ಟೇ ಪ್ರಸ್ತಾಪಿಸಿದರೆ ಸಾಲದು, ನ್ಯಾಯಾಲಯವು ನಂಬಲರ್ಹವಾದ ಐತಿಹಾಸಿಕ ದಾಖಲೆ, ಪುರಾವೆಗಳನ್ನು ಅಪೇಕ್ಷಿಸುತ್ತದೆ. ಅಂತಹ ಐತಿಹಾಸಿಕ ಪುರಾವೆಗಳನ್ನು ಒದಗಿಸಿಕೊಡುವ ಸಲುವಾಗಿ ಪ್ರೊ॥ ಯಲ್ಲಾಪ್ರಗಡ ರಾವ್ ಅವರನ್ನು ಐ.ಸಿ.ಎಚ್.ಆರ್. ಅಧ್ಯಕ್ಷರಾಗಿ ನೇಮಿಸಲಾಗಿದೆಯೆಂಬುದು ಈ ದೇಶದ ವಿಚಾರವಂತರ ಗುಮಾನಿ.



ಹೊಸ ಸರ್ಕಾರವು ಪ್ರೊ॥ ರಾವ್ ಅವರನ್ನು ಐ.ಸಿ.ಎಚ್.ಆರ್. ಅಧ್ಯಕ್ಷರಾಗಿ ನೇಮಿಸಿದ ಹೊಸತರಲ್ಲಿಯೆ ಪ್ರಖ್ಯಾತ ಇತಿಹಾಸ ತಜ್ಞರೂ, ವಿಚಾರವಾದಿಯೂ ಆದ ರೋಮಿಲಾ ಥಾಪರ್ ಅವರು ಇಂತಹ ಉನ್ನತ ಸ್ಥಾನವನ್ನು ಪಡೆಯಲು ಪ್ರೊ॥ ರಾವ್ ಅವರಿಗಿರುವ ಅರ್ಹತೆಯನ್ನು ಪ್ರಶ್ನಿಸಿದರು. ಪ್ರೊ॥ ರಾವ್ ಅವರ ನೇಮಕವು, ಎನ್.ಡಿ.ಎ. ಸರ್ಕಾರದ ಮೊದಲ ಅವಧಿಯ ಕಾಲದಲ್ಲಿ ಪ್ರಾರಂಭವಾದ, ಉನ್ನತ ವಿದ್ಯಾಸಂಸ್ಥೆಗಳ ಕೇಸರೀಕರಣ ತಂತ್ರದ ಮತ್ತೊಂದು ಹೆಜ್ಜೆಯಾಗಿದೆಯೆಂದು ಆಕ್ಷೇಪಿಸಿದರು.

ಹಲವು ವರ್ಷಗಳಿಂದ ಒಬ್ಬ 'ಬ್ಲಾಗ್‌ಕಾರ' (blogger – ಯಾವುದೇ ವಿಷಯದ ಸಂಕ್ಷಿಪ್ತ ಟಿಪ್ಪಣಿ ಬರೆದು ಪ್ರಚಾರ ಮಾಡುವಾತ)ರಾಗಿದ್ದ, ಇತಿಹಾಸತಜ್ಞರ ವಲಯದಲ್ಲಿ ಅಷ್ಟೇನೂ ಪರಿಚಿತರಲ್ಲದ, ಕಾಕತೀಯ ವಿಶ್ವವಿದ್ಯಾನಿಲಯದ ಇತಿಹಾಸ ಮತ್ತು ಪ್ರವಾಸೋದ್ಯಮ ನಿರ್ವಹಣಾ ವಿಭಾಗದ ಮುಖ್ಯಸ್ಥರಾಗಿದ್ದ ಪ್ರೊ॥ ರಾವ್ ಅವರು ಐ.ಸಿ.ಎಚ್.ಆರ್.ನ ಜಾಲತಾಣದ 'ಅಧ್ಯಕ್ಷರ ದಿನಚರಿ'ಯ ಮೂಲಕ ತಮ್ಮ ಪ್ರಾಪಂಚಿಕ ದೃಷ್ಟಿಯನ್ನು ಅಭಿವ್ಯಕ್ತಿಸುತ್ತಿದ್ದರು. ತಮ್ಮ ಜ್ಞಾನಭಂಡಾರವು "ಪೂಜ್ಯಶ್ರೀ ಮಹಾಮಹೋಪಾಧ್ಯಾಯ ಶಿವಾನಂದ ಮೂರ್ತಿಜಿಯವರ ಕೃಪೆ"ಯೆಂದೂ ಹೇಳುತ್ತಿದ್ದರು. ಐ.ಸಿ.ಎಚ್.ಆರ್.ನಿಂದ ಪ್ರಾಯೋಜಿತವಾಗುವ ಮತ್ತು ನಡೆಯುತ್ತಿರುವ ಸಂಶೋಧನೆಯೆಲ್ಲವೂ ಪಾಶ್ಚಿಮಾತ್ಯ ಇತಿಹಾಸ ಲೇಖಕರ ಮಾರ್ಗದರ್ಶನದಲ್ಲಿ ನಡೆಯುತ್ತಿದೆಯೆಂದು ಆಪಾದಿಸುತ್ತಿದ್ದರು. ಇವರು

(ಪ್ರೊ॥ ರಾವ್) ತಾವು ಯಾವತ್ತೂ ಆರ್.ಎಸ್.ಎಸ್. ಸದಸ್ಯರಾಗಿರಲಿಲ್ಲವೆಂದು ಒತ್ತಿ ಹೇಳುತ್ತಾರಾದರೂ, ಡಾ॥ ಡಿ. ಎನ್. ಝಾ ಎಂಬ ಇತಿಹಾಸತಜ್ಞರು, "ಭಾರತದ ಬೌದ್ಧಿಕ ಸಾಮರ್ಥ್ಯವು ಅದ್ವಿತೀಯವಾದುದೆಂದೂ, ಅದಕ್ಕೆ ಸರಿಸಮಾನವಾದುದು ಮತ್ತೆಲ್ಲಿಯೂ ಇಲ್ಲ"ವೆಂದೂ ಘೋಷಿಸುವ ವಿಚಾರದಲ್ಲಿ ಪ್ರೊ॥ ರಾವ್ ಅವರು ಸಂಘಪರಿವಾರದ ದೃಷ್ಟಿ ಕೋನವನ್ನೇ ಅನುಸರಿಸುತ್ತಾರೆಂದು ಸ್ಪಷ್ಟಪಡಿಸುತ್ತಾರೆ.

ಮಹಾಭಾರತದ ಕಾಲನಿರ್ಣಯದ ವಿಚಾರದಲ್ಲಿ ಪ್ರೊ॥ ರಾವ್ ಅವರು ತೋರುತ್ತಿರುವ ಅತ್ಯುತ್ಸಾಹವನ್ನು ಪ್ರಸ್ತಾಪಿಸಿ ಪ್ರೊ॥ ಡಿ. ಎನ್. ಝಾ ಅವರು ಸದ್ಯಕ್ಕೆ ಲಭ್ಯವಿರುವ "ಮಹಾಭಾರತ ಗ್ರಂಥದ ಐತಿಹಾಸಿಕತೆಯನ್ನು ಪ್ರಶ್ನಿಸಿದವರು ಮಾರ್ಕ್ಸ್‌ವಾದಿ ಚರಿತ್ರಕಾರರು ಮಾತ್ರವೇ ಅಲ್ಲ; ನಮ್ಮ ಪೂರ್ವಾಚಾರ್ಯರಾದ ಮಾಧವಾಚಾರ್ಯರಂತಹ ತತ್ವಜ್ಞಾನಿಗಳು ಬಹು ಹಿಂದೆಯೇ ಅದನ್ನು ಪ್ರಶ್ನಿಸಿದ್ದಾರೆ" ಎಂಬುದನ್ನು ಎತ್ತಿ ತೋರಿಸಿದ್ದಾರೆ. (ಈ ವಿಚಾರವು ಪ್ರಸ್ತುತ ಲೇಖನದಲ್ಲಿ ಮೊದಲೇ ಪ್ರಸ್ತಾಪವಾಗಿದೆ.) ಪ್ರೊ॥ ರಾವ್ ಅವರು ತಮ್ಮ ೨೦೦೭ರ ಬ್ಲಾಗ್‌ನಲ್ಲಿ, (ಪ್ರಾಚೀನ) ಭಾರತದ ವರ್ಣ ವ್ಯವಸ್ಥೆಯ 'ಹಿತಾನುಭವ' (vintage) ವನ್ನು ಕುರಿತು ಬರೆಯುವಾಗ ಆ ವ್ಯವಸ್ಥೆಯು ಪುನಃ ಬರಬೇಕೆಂದು ಹೇಳಿದ್ದಾರೆ. ಪ್ರೊ॥ ರಾವ್ ಅವರ ಈ ಅಪೇಕ್ಷೆಯನ್ನು ಪ್ರೊ॥ ಡಿ. ಎನ್. ಝಾ ಛೇಡಿಸುತ್ತಾರೆ. ಒಂದು ವೇಳೆ ಪ್ರೊ॥ ರಾವ್ ಅವರ ಅಪೇಕ್ಷೆಯು ಈಡೇರಿದರೆ ನರೇಂದ್ರ ಮೋದಿಯವರು ಭಾರತದ ಪ್ರಧಾನ ಮಂತ್ರಿಯಾಗುವಂತಿರಲಿಲ್ಲ, ಅಲ್ಲವೆ? (ಪ್ರಾಚೀನ ಭಾರತದ ವರ್ಣ ವ್ಯವಸ್ಥೆಯ ಪ್ರಕಾರ ಕ್ಷತ್ರಿಯ ವರ್ಣದವರಿಗೆ ಮಾತ್ರ ದೇಶದ ಆಡಳಿತ ನಡೆಸುವ ಅಧಿಕಾರವಿದೆ!) ಪ್ರೊ॥ ರಾವ್ ಅವರು ವರ್ಣವ್ಯವಸ್ಥೆಯನ್ನು ಒಂದು ಸಾಮಾಜಿಕ ಪಿಡುಗು ಎಂದು ಒಪ್ಪುವುದಿಲ್ಲ; ವರ್ಣವಿಭಜನೆಯ ಕಟ್ಟುನಿಟ್ಟು, ಧಾಷ್ಟ್ಯ, ವಿಕೃತರೂಪಗಳೇನಿದ್ದರೂ ಈ ದೇಶದ ಮೇಲೆ ಮುಸಲ್ಮಾನರು ದಾಳಿಮಾಡಿ, ಆಳ್ವಿಕೆ ನಡೆಸಿದ ಅನಂತರ ಸೇರಿಕೊಂಡಿತ್ತು – ಎನ್ನುತ್ತಾರೆ, ಪ್ರೊ॥ ರಾವ್.

೧೯೯೮ರಲ್ಲಿ ಎನ್.ಡಿ.ಎ. ಮೂಲಕ ಐ. ಸಿ. ಎಚ್. ಆರ್. ನ ಕಾರ್ಯ ನಿರ್ವಾಹಕ ಸದಸ್ಯರಾಗಿ ನೇಮಕಗೊಂಡ ಇತಿಹಾಸ ಪ್ರಾಧ್ಯಾಪಕರಾದ ಪ್ರೊ॥ ವೆಂಕಟಸುಬ್ರಮಣಿಯನ್ ಅವರು, ಪ್ರೊ॥ ರಾವ್ ಅವರಿಗೆ ಇತಿಹಾಸದ ಬಗೆಗೆ ತಮ್ಮದೇ ಅಭಿಪ್ರಾಯಗಳನ್ನಿಟ್ಟುಕೊಳ್ಳುವ ಸ್ವಾತಂತ್ರ್ಯವಿದೆ; ಆದರೆ ಅವರ ಅಭಿಪ್ರಾಯಗಳು ವಿಷಯತಜ್ಞರ ವಿಮರ್ಶೆಗೆ ಒಳಪಟ್ಟಿಲ್ಲವೆಂಬುದೇ ಸದ್ಯದ ಸಮಸ್ಯೆ ಎನ್ನುತ್ತಾರೆ. ಈ ಮಾತು ನಿಜ. ಮಾನವ ಸಂಪನ್ಮೂಲ ಸಚಿವಾಲಯವು ಯುಜಿಸಿ ಮತ್ತು ದೆಹಲಿ ವಿಶ್ವವಿದ್ಯಾನಿಲಯದ ನಡುವಿನ ಸಂಘರ್ಷದಲ್ಲಿ ತೊಡಗಿಕೊಂಡಿದ್ದಾಗ ವಿವಾದಾಸ್ಪದ ವ್ಯಕ್ತಿಯೊಬ್ಬರನ್ನು ಆತುರಾತುರದಲ್ಲಿ ಐ.ಸಿ.ಎಚ್.ಆರ್. ಅಧ್ಯಕ್ಷರಾಗಿ ನೇಮಿಸುವುದರ ಅಗತ್ಯವೇನಿತ್ತು? ಇದರ ಹಿಂದಿರುವ ರಾಜಕೀಯ ಹುನ್ನಾರದ ಪರಿಣಾಮಗಳೇನು? – ಎಂಬುದು ಈ ದೇಶದ ಮತಧರ್ಮಾತೀತ ರಾಜಕಾರಣದಲ್ಲಿ ನಂಬಿಕೆಯಿಟ್ಟಿರುವ ವಿಚಾರವಂತರ ಆತಂಕಕ್ಕೆ ಕಾರಣ.

ಭಾರತದ ಪ್ರಧಾನಿ ನರೇಂದ್ರ ಮೋದಿ ಸದ್ಯಕ್ಕೆ ರಾಮಮಂದಿರ ನಿರ್ಮಾಣದ ಪ್ರಸ್ತಾಪವನ್ನು ಹಿನ್ನೆಲೆಗೆ ಸರಿಸಿದ್ದಾರೆಂಬುದು ನಿಜ. ಆದರೆ, ಆರ್.ಎಸ್.ಎಸ್. ಪ್ರಾಯೋಜಿತ ಚಾಣಾಕ್ಷ ರಾಜಕಾರಣಿಯಾದ ನಮ್ಮ ಪ್ರಧಾನಿ ತಮ್ಮ ಮುಂದಿನ ರಾಜಕೀಯ ದಾಳವನ್ನು ಹೇಗೆ ಉರುಳಿಸುತ್ತಾರೆಂಬ ಬಗೆಗೆ ಯಾರು ತಾನೆ ಊಹಿಸಲು ಸಾಧ್ಯ?

*– ಈ ಲೇಖನದ ಹಲವು ಮಾಹಿತಿಗಳನ್ನು 'ದಿ ಹಿಂದು' ಪತ್ರಿಕೆಯಿಂದ ಸ್ವೀಕರಿಸಲಾಗಿದೆ.*

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೭೦

# ಅಭಿವೃದ್ಧಿ ಮತ್ತು ಭೂಸುಧಾರಣೆ

**ಡಾ॥ ಎಂ. ಚಂದ್ರ ಪೂಜಾರಿ**

ಒಂದು ಕಾಲದಲ್ಲಿ ಅಭಿವೃದ್ಧಿಗೂ ಭೂಸುಧಾರಣೆಗೂ ನೇರ ಸಂಬಂಧ ಹೆಣೆಯಲಾಗಿತ್ತು. ದೊಡ್ಡ ದೊಡ್ಡ ಭೂಮಾಲೀಕರು ಎಕರೆಗಟ್ಟಲೆ ಭೂಮಿ ಹೊಂದುವುದು ಹಾಗೂ ದುಡಿಯುವ ಜನರನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳುವುದು ಎರಡೂ ಅಭಿವೃದ್ಧಿಗೆ ಪೂರಕವಲ್ಲ ಎನ್ನುವ ನಿಲುವಿತ್ತು. ಕೃಷಿ ಉತ್ಪಾದನೆ ಹೆಚ್ಚಾಗ ಬೇಕಾದರೆ ಭೂಸುಧಾರಣೆ ತಂದು ಉಳುವವರನ್ನೇ ಹೊಲದೊಡೆಯರನ್ನಾಗಿ ಮಾಡಬೇಕೆನ್ನುವ ವಾದವಿತ್ತು. ಭೂ ಮಾಲೀಕರ ಹಿಡಿತದಲ್ಲಿದ್ದ ಕೂಲಿಕಾರ್ಮಿಕರನ್ನು ಬಿಡುಗಡೆ ಗೊಳಿಸಿದರೆ ಪೇಟೆ ಪಟ್ಟಣಗಳ ಉದ್ದಿಮೆಗಳಿಗೆ ಶ್ರಮ ಪೂರೈಕೆಯಾಗುತ್ತದೆ, ಕೃಷಿಯೇತರ ಚಟುವಟಿಕೆಗಳು ಅಭಿವೃದ್ಧಿ ಗೊಳ್ಳುತ್ತವೆ, ಹೀಗೆ ಭೂಸುಧಾರಣೆಯು ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳ ಉತ್ಪಾದನೆ ಹೆಚ್ಚಿಸುತ್ತದೆ. ಜೊತೆಗೆ ದುಡಿದು ತಿನ್ನುವವರು ಮುಕ್ತರಾಗಿ ತಮ್ಮ ಶ್ರಮವನ್ನು ಹೆಚ್ಚಿನ ಕೂಲಿಗೆ ಮಾರಿಕೊಂಡು ಉತ್ತಮ ಜೀವನ ಸಾಗಿಸಲು ಅವಕಾಶ ಮಾಡಿಕೊಡುತ್ತದೆ ಎಂದು ನಂಬಲಾಗಿತ್ತು. ಈ ಕಾರಣದಿಂದಲೇ ನಮ್ಮಲ್ಲೂ 1948ರಿಂದಲೇ ಹಲವು ಭೂಸುಧಾರಣೆ ಮಸೂದೆಗಳು ಜಾರಿಗೆ ಬಂದಿವೆ. 1955ರಲ್ಲಿ ಇನಾಂ ರದ್ಧತಿ ಮಸೂದೆ, 1961ರಲ್ಲಿ ಭೂಸುಧಾರಣೆ ಮಸೂದೆ ಮತ್ತು 1974ರಲ್ಲಿ ಮತ್ತೊಂದು ಭೂಸುಧಾರಣೆ ಮಸೂದೆ... ಹೀಗೆ ಸಾಲುಸಾಲಾಗಿ ಭೂಸುಧಾರಣೆ ಮಸೂದೆಗಳು ಜಾರಿಗೆ ಬಂದಿವೆ.

## ರಿವರ್ಸ್ ಭೂಸುಧಾರಣೆ

ಇಂದು ಅಭಿವೃದ್ಧಿಗೂ ಭೂಸುಧಾರಣೆಗೂ ನೇರ ಸಂಬಂಧವಿಲ್ಲ. ಅಷ್ಟು ಮಾತ್ರವಲ್ಲ, ರಿವರ್ಸ್ ಭೂಸುಧಾರಣೆ ಕೂಡ ನಡೆದಿದೆ. ಅಂದರೆ ಹಿಂದೆ ಕೃಷಿಕರು ಪಡೆದ ಅಲ್ಪಸ್ವಲ್ಪ ಭೂಮಿಯನ್ನು ಕೂಡ ಹಿಂದಕ್ಕೆ ಪಡೆಯುವ ಕೆಲಸ ನಡೆಯುತ್ತಿದೆ. 1974ರ ಭೂಸುಧಾರಣೆ ಮಸೂದೆ ಕೃಷಿ ಭೂಮಿಯ ಕೃಷಿಯೇತರ ಬಳಕೆ ಹಾಗೂ ಪರಭಾರೆಗಳನ್ನು ನಿಷೇಧಿಸಿತ್ತು. ಇದೇ ಭೂಸುಧಾರಣೆ ಮಸೂದೆ 1996ರಲ್ಲಿ ತಿದ್ದುಪಡಿಗೊಂಡಿದೆ. ತಿದ್ದುಪಡಿಗೊಂಡ ಮಸೂದೆ ಭೂಮಿ ಪರಭಾರೆಗೆ ಹಾಗೂ ಕೃಷಿಯೇತರ ಬಳಕೆಗೆ ಅವಕಾಶ ಕಲ್ಪಿಸಿದೆ. ಇವಿಷ್ಟೇ ಬದಲಾವಣೆಗಳಲ್ಲ. ಉದ್ದಿಮೆಗಳಿಗೆ ಭೂಮಿ ನೀಡಲು ಸರಕಾರ ಒಂದು ಲಕ್ಷ ಐವತ್ತು ಸಾವಿರ ಎಕರೆಗಳ ಭೂ ಬ್ಯಾಂಕ್ ಸ್ಥಾಪಿಸಿದೆ. ಈ ಭೂ ಬ್ಯಾಂಕ್‌ಗಾಗಿ ರೈತರ ಭೂಮಿಯನ್ನು ಸರಕಾರವೇ ಸ್ವಾಧೀನಪಡಿಸಿಕೊಳ್ಳುತ್ತಿದೆ. ವಿಶೇಷ ಆರ್ಥಿಕ ವಲಯದ ಹೆಸರಲ್ಲಿ, ಮೂಲ ಸೌಕರ್ಯಗಳ ಹೆಸರಲ್ಲಿ, ವಸತಿ ಸಮುಚ್ಚಯಗಳ ನೆಪದಲ್ಲಿ ಲಕ್ಷಾಂತರ ಎಕರೆ ಕೃಷಿಭೂಮಿ ಕೃಷಿಯೇತರ ಉದ್ದೇಶಗಳಿಗೆ ಹೋಗುತ್ತಿದೆ. ಇದಕ್ಕೆ ಬಹುಮುಖ್ಯ ಕಾರಣ ಇಂದು ಸರಕಾರ ಅನುಸರಿಸುತ್ತಿರುವ ಅಭಿವೃದ್ಧಿ ನೀತಿ. ಈ ಅಭಿವೃದ್ಧಿ ನೀತಿಯ ತಳಹದಿ ಅಂತರರಾಷ್ಟ್ರೀಯ ವ್ಯಾಪಾರ ಸಿದ್ಧಾಂತ.

ಈ ಸಿದ್ಧಾಂತದ ಅನುಸಾರ ವಿವಿಧ ರಾಷ್ಟ್ರಗಳು ತಾವು ಯಾವ ಕ್ಷೇತ್ರದಲ್ಲಿ ಹೆಚ್ಚು ನೈಪುಣ್ಯತೆಯನ್ನು ಹೊಂದಿವೆಯೋ ಆ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಉತ್ಪಾದನೆ ಹೆಚ್ಚಿಸಿಕೊಳ್ಳಬೇಕು. ಮಿಗತೆ ಉತ್ಪಾದನೆಯನ್ನು ಪರದೇಶಕ್ಕೆ ರಫ್ತು ಮಾಡಬೇಕು. ತಮ್ಮಲ್ಲಿ ಯಾವುದು ಕಡಿಮೆ ವೆಚ್ಚದಲ್ಲಿ ಉತ್ಪಾದನೆಯಾಗುವುದಿಲ್ಲವೋ ಅವುಗಳನ್ನು ಮತ್ತೊಂದು ರಾಷ್ಟ್ರದಿಂದ ಆಮದುಮಾಡಿಕೊಳ್ಳಬೇಕು. ಪ್ರತಿಯೊಂದು ರಾಷ್ಟ್ರವೂ ಕೂಡ ತನ್ನ ನೈಪುಣ್ಯ ಕ್ಷೇತ್ರಗಳಲ್ಲಿ ತೊಡಗಿಕೊಂಡು ಉತ್ಪಾದನೆ ಹೆಚ್ಚಿಸುವುದರಿಂದ ಒಟ್ಟಾರೆ ಉತ್ಪಾದನಾ ವೆಚ್ಚ ಕಡಿಮೆಯಾಗುತ್ತದೆ. ವೆಚ್ಚ ಕಡಿಮೆಯಾದರೆ ಸರಕಿನ ಬೆಲೆಯೂ









ಕಡಿಮೆಯಾಗುತ್ತದೆ. ಈ ಎಲ್ಲದರ ಅಂತಿಮ ಲಾಭ ಕಟ್ಟಕಡೆಯ ವ್ಯಕ್ತಿಗೆ, ಅಂದರೆ ಗ್ರಾಹಕರಿಗೆ ಸಿಗುತ್ತದೆ. ಇದು ಹೊಸ ಅಭಿವೃದ್ಧಿ ದೃಷ್ಟಿಕೋನ. ಕಡಿಮೆ ವೆಚ್ಚದಲ್ಲಿ ಉತ್ಪಾದಿಸುವುದು, ಉತ್ಪಾದಿಸಿದ್ದನ್ನು ರಫ್ತು ಮಾಡಿ ವಿದೇಶಿ ವಿನಿಮಯ ಗಳಿಸುವುದು, ಗಳಿಸಿದ್ದನ್ನು ಪುನಃ ವಿನಿಯೋಗಿಸಿ ಇನ್ನೂ ಹೆಚ್ಚು ಉತ್ಪಾದಿಸುವುದು ಇವೆಲ್ಲ ಇಂದಿನ ಅಭಿವೃದ್ಧಿಯ ಆದ್ಯತೆಗಳು.

ಉತ್ಪಾದನೆಯ ವೆಚ್ಚ ಕಡಿಮೆ ಮಾಡುವ ದೃಷ್ಟಿಯಿಂದ ಸಣ್ಣಪುಟ್ಟ ಹೊಲಗಳ ಬದಲು ಎಕರೆಗಟ್ಟಲೆ ಹೊಲಗಳನ್ನು ಒಟ್ಟು ಸೇರಿಸಿ ಕೃಷಿ ಮಾಡುವುದು ಅನುಕೂಲ ಎನ್ನುವ ವಾದ ಇಂದು ಹೆಚ್ಚು ಪ್ರಚಲಿತದಲ್ಲಿದೆ. ಹಸಿರು ಕ್ರಾಂತಿಯ ಸಂದರ್ಭದಲ್ಲೇ ಕೃಷಿ ಭೂಮಿಯ ಗಾತ್ರದ ಪ್ರಶ್ನೆ ಅಭಿವೃದ್ಧಿ ತಜ್ಞರನ್ನು ಕಾಡಿದೆ. ಕೆಲವರು ಹಸಿರು ಕ್ರಾಂತಿಯು ಪರಿಣಾಮಕಾರಿಯಾಗಿ ಜಾರಿಗೆ ಬರ ಬೇಕಾದರೆ ಕೃಷಿಭೂಮಿಯ ಗಾತ್ರ ದೊಡ್ಡದಿರ ಬೇಕೆಂದು ವಾದಿಸಿದರು. ಇನ್ನು ಕೆಲವರು ಕೃಷಿ ಭೂಮಿಯ ಗಾತ್ರಕ್ಕೂ ಹಸಿರು ಕ್ರಾಂತಿಗೂ ಸಂಬಂಧವಿಲ್ಲ, ಯಾವುದೇ ಗಾತ್ರದ ಭೂಮಿಯಲ್ಲೂ ಹಸಿರು ಕ್ರಾಂತಿ ಸಾಧ್ಯ ಎಂದು ವಾದಿಸಿದರು. ಆದರೆ ಈಗ ಹಾಗಿಲ್ಲ. ಉತ್ಪಾದನಾ ವೆಚ್ಚದ ಮೇಲೆ ಹಿಡಿತ ಸಾಧಿಸುವ ದೃಷ್ಟಿಯಿಂದ ಕೃಷಿಭೂಮಿಯ ಗಾತ್ರ ಹೆಚ್ಚಿರುವುದು ಅನಿವಾರ್ಯವೆಂದು ತಿಳಿಯ ಲಾಗಿದೆ. ಇದು ಏಕೆಂದರೆ ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಿಸಬೇಕಾದರೆ ವೆಚ್ಚದ ಮೇಲೆ ಹಿಡಿತ ಸಾಧಿಸುವುದು ಅನಿವಾರ್ಯವಾಗಿದೆ ಎಂದು ಹೆಚ್ಚಿನ ಪ್ರಚಾರ ಮಾಡಲಾಗುತ್ತಿದೆ.

ಈ ಎಲ್ಲ ಬದಲಾವಣೆಗಳಿಂದ ಇಂದು ಕೃಷಿ ಮೂರು ಹೊತ್ತಿನ ಊಟದ ಸಾಧನವಾಗಿ ಉಳಿದಿಲ್ಲ. ಕೃಷಿ ಕೂಡ ಇನ್ಯಾವುದೇ ಉದ್ದಿಮೆಯಂತೆ ಬಂಡವಾಳ ಹಾಕಿ ಬಂಡವಾಳ ತೆಗೆಯುವ ಒಂದು ಉದ್ದಿಮೆ. ಇಂತಹ ಕೃಷಿ ಉದ್ದಿಮೆಗೆ ಕರಾವಳಿ ಪ್ರದೇಶಗಳಲ್ಲಿನ ಸೀಗಡಿ ಉದ್ದಿಮೆದಾರರಿಗೆ ಎಕರೆಗಟ್ಟಲೆ ನೀರಾವರಿ ಭೂಮಿ ಬೇಕು. ಅದೇ ರೀತಿಯಲ್ಲಿ ಬೆಂಗಳೂರು, ಮೈಸೂರು ಕಡೆಯ ಕೃಷಿ ಉದ್ದಿಮೆದಾರರಿಗೆ ಫಲಪುಷ್ಪಗಳ ಉದ್ದಿಮೆಗಳಿಗೆ ಎಕರೆಗಟ್ಟಲೆ ಭೂಮಿ ಬೇಕು. ಉತ್ತರ ಕರ್ನಾಟಕ ಪ್ರದೇಶಗಳಲ್ಲಿ ತೋಟಗಾರಿಕೆ ಬೆಳೆಗಳಿಗೆ ಭೂಮಿ ಬೇಕು. ಸ್ಥಳೀಯ ಉದ್ದಿಮೆಗಳ ಜತೆಗೆ ವಿದೇಶಿ ಉದ್ದಿಮೆ ದಾರರು ಕೂಡ ಬೀಜ ಉತ್ಪಾದನೆ ಅಥವಾ ತರಕಾರಿ ಉತ್ಪಾದನೆ ಅಥವಾ ಇನ್ಯಾವುದೋ ಕೃಷಿಗೆ ಎಕರೆಗಟ್ಟಲೆ ಭೂಮಿ ಕೇಳುತ್ತಾರೆ. ಇವರೆಲ್ಲರಿಗೆ ಸರಕಾರವೇ ಭೂಮಿ ಕೊಡಲು ಸಾಧ್ಯವಿಲ್ಲ. ಸಣ್ಣ ಮತ್ತು ಅತೀ ಸಣ್ಣ ರೈತರು ತಮ್ಮ ಭೂಮಿಯನ್ನು ಇಂತಹ ಉದ್ದಿಮೆಗಳಿಗೆ ಗೇಣಿಗೆ ನೀಡುವುದರಿಂದ ಇಬ್ಬರಿಗೂ ಲಾಭ ಸಾಧ್ಯ ಎನ್ನುವುದು ನೇರ ವಾದ. ಎಷ್ಟೋ ಸಂದರ್ಭದಲ್ಲಿ ಸಣ್ಣಪುಟ್ಟ ಭೂಮಿ ಹೊಂದಿದವರಲ್ಲಿ ಉದ್ಯಮತ್ವ ಇರುವುದಿಲ್ಲ. ಉದ್ಯಮತ್ವ ಹೊಂದಿದವರಲ್ಲಿ ಭೂಮಿ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಭೂಮಿ ಪರಭಾರೆಗೆ ಅವಕಾಶ ಮಾಡಿಕೊಡುವುದು ಒಟ್ಟಾರೆ ಅಭಿವೃದ್ಧಿಯ ದೃಷ್ಟಿಯಿಂದ ಅನಿವಾರ್ಯ ಎನ್ನುವುದು ಪರೋಕ್ಷ ವಾದ.

**ಹಿಂದಿನ ಭೂಸುಧಾರಣೆ**

ಹೆಚ್ಚು ಕಡಿಮೆ ರೈತರು ಕೂಡ ಮಾರುಕಟ್ಟೆಯತ್ತ ಮುಖ ಮಾಡಿದ್ದಾರೆ ಎಂದು ಕೆಲವರು ವಾದಿಸುತ್ತಾರೆ. ಈ ಬದಲಾವಣೆಗೆ ಅವರು ಕೊಡುವ ಪುರಾವೆಗಳೆಂದರೆ ಆರಂಭದಲ್ಲಿ ಅಂತರರಾಷ್ಟ್ರೀಯ ಕೃಷಿ ಉದ್ದಿಮೆಗಳ ವಿರುದ್ಧ ನಡೆಯುತ್ತಿದ್ದ ಚಳವಳಿಯ ಪರವಾಗಿ ರೈತರಿದ್ದರು. ಆದರೆ ಬರಬರುತ್ತಾ ರೈತರು ಉದ್ದಿಮೆ ಪ್ರೇರಿತ ಕೃಷಿಪರ ಒಲವು ತೋರಿಸಲು ಆರಂಭಿಸಿದರು. ಈ ಬೆಳವಣಿಗೆಯಿಂದಾಗಿ ಉದ್ದಿಮೆ ಪ್ರೇರಿತ ಕೃಷಿಯ ವಿರುದ್ಧ ಹೋರಾಟ ನಡೆಸಿದರೆ ರೈತರು ಸೇರುವುದಿಲ್ಲ ಎಂದು ವಾದಿಸುವವರಿದ್ದಾರೆ. ಈ ವಾದಗಳಲ್ಲೂ ಸತ್ಯಾಂಶ ಇರಬಹುದು. ಇವುಗಳನ್ನು ಅಲ್ಲಗಳೆಯುವ ಅಗತ್ಯವಿಲ್ಲ. ಏಕೆಂದರೆ ಮೇಲಿನ ಯಾವುದೇ ಬೆಳವಣಿಗೆಗಳು ಭೂಸುಧಾರಣೆಯ ಮಹತ್ವವನ್ನು ಕುಗ್ಗಿಸುವುದಿಲ್ಲ. ಈ ವಾದಗಳನ್ನು ಒಂದೊಂದಾಗಿ ಪರಿಶೀಲಿಸುವಾ. ಮೊದಲಿಗೆ, ಹಿಂದೆ ಅಭಿವೃದ್ಧಿಗೂ ಭೂಸುಧಾರಣೆಗೂ ನೇರ ಸಂಬಂಧ ಇತ್ತು. ಹಾಗೆಂದು ಭೂಸುಧಾರಣೆ ಮಾಡಲಾಗಿದೆ ಎಂದು ವಾದಿಸಲಾಗುತ್ತಿದೆ.

ಬಹುದೊಡ್ಡ ಸಮಸ್ಯೆ ಇರುವುದೇ ಇಲ್ಲಿ. ಏಕೆಂದರೆ ಹಿಂದೆ ಭೂಸಂಬಂಧವನ್ನು ಅಡಿಮೇಲು ಮಾಡುವ ಭೂಸುಧಾರಣೆ ನಡೆದಿಲ್ಲ. ಆದರೆ ಭೂಸಂಬಂಧಗಳು ಅಡಿಮೇಲು ಮಾಡುವ ಭೂಸುಧಾರಣೆ ನಡೆದಿದೆ ಎನ್ನುವ ಪ್ರಚಾರ ನಡೆದಿದೆ ಮತ್ತು ಬಹುತೇಕರು ಅದನ್ನು ಯಥಾರೂಪದಲ್ಲಿ ನಂಬಿದ್ದಾರೆ. ಹಿಂದೆ ನಡೆದಿರುವ ಭೂಸುಧಾರಣೆಯ ಕೊರತೆಗಳನ್ನು ಪಟ್ಟಿ ಮಾಡುವ ಸಾಕಷ್ಟು ಅಧ್ಯಯನಗಳು ನಡೆದಿವೆ. ಅವುಗಳ ಪ್ರಕಾರ ಹಿಂದೆ ನಡೆದಿರುವ ಭೂಸುಧಾರಣೆ ಭೂಮಿಯನ್ನು ರೈತರಿಗೆ ಹಂಚಲಿಲ್ಲ. ಅದರ ಬದಲು ಗೇಣಿಗೆ ನೀಡಿದ ಭೂಮಿಯನ್ನು ಪುನರ್‌ಸ್ವಾಧೀನಪಡಿಸಿ ಕೊಳ್ಳಲು ಭೂಮಾಲೀಕರಿಗೆ ಅವಕಾಶ ನೀಡಲಾಯಿತು.

೧೯೫೫ರ ಇನಾಂ ರದ್ದತಿ ಮಸೂದೆ ಅರ್ಧದಷ್ಟು ಇನಾಂ ಭೂಮಿಯನ್ನು ರದ್ದುಗೊಳಿಸಲು ವಿಫಲವಾಯಿತು. ಅಲ್ಲದೆ, ಇನಾಂ ರದ್ದತಿಯಿಂದ ಯಾರಿಗೆ ಲಾಭವಾಗಿದೆಯೆಂದು ನಿಖರವಾಗಿ ಹೇಳುವುದು ಕಷ್ಟ. ಆದಾಗ್ಯೂ ಇನಾಂ ರದ್ದತಿ ಮಸೂದೆಯ ಅನುಷ್ಠಾನಕ್ಕೆ ಬಲಾಢ್ಯ ಸಮುದಾಯಗಳು ತೋರಿದ ಆದ್ಯತೆಯನ್ನು ಗಮನಿಸಿದರೆ ಇಂತಹ ಸಮುದಾಯಗಳ ಭೂಮಾಲೀಕರೇ ಹೆಚ್ಚಿನ ಸಂಖ್ಯೆಯಲ್ಲಿ ಇನಾಂ ಭೂಮಿಯನ್ನು ಗೇಣಿಗೆ ಕೃಷಿ ಮಾಡುತ್ತಿದ್ದರು ಎನ್ನುವ ತೀರ್ಮಾನಕ್ಕೆ ಬರಬಹುದು. ೧೯೬೧ರ ಕಾಯಿದೆಯಂತೂ ಗೇಣಿದಾರರ ಸ್ಥಿತಿಯನ್ನು ಭದ್ರಗೊಳಿಸುವ ಬದಲು ಅಭದ್ರಗೊಳಿಸಿದೆ. ಈ ಕಾಯಿದೆಯ ಅನುಷ್ಠಾನದಿಂದ ಕರ್ನಾಟಕದ ಕೆಲವು ಭಾಗಗಳಲ್ಲಿ ಶೇ. ೮೦ರಷ್ಟು ಗೇಣಿದಾರರು ಭೂಮಿ ಕಳೆದುಕೊಂಡು ಕೃಷಿಕಾರ್ಮಿಕರಾಗ ಬೇಕಾಯಿತು. ಅದನ್ನೊಂದು ಭೂಸುಧಾರಣೆ ಕಾಯಿದೆ ಎಂದು ಕರೆಯಲು ಸಾಧ್ಯವೇ ಇಲ್ಲ. ಕನಿಷ್ಠ ಅದನ್ನೊಂದು ಗೇಣಿ ಸುಧಾರಣೆ ಕಾಯಿದೆ ಎನ್ನಬಹುದೇ ? ಎಂದು ಕೇಳಿದರೆ ಅದೂ ಕಷ್ಟವೇ. ಏಕೆಂದರೆ ಗೇಣಿಸುಧಾರಣೆ ಕಾಯಿದೆ ಗುತ್ತಿಗೆಯ ಪ್ರಮಾಣ ಮತ್ತು ಅವಧಿಯನ್ನು ನಿಗದಿಗೊಳಿಸಿ ಗುತ್ತಿಗೆಗೆ ನೀಡಿದ ಭೂಮಿಯನ್ನು ಪುನರ್‌ಸ್ವಾಧೀನಪಡಿಸಿಕೊಳ್ಳದಂತೆ ಕ್ರಮವಹಿಸಿ ಗುತ್ತಿಗೆದಾರರ ಸ್ಥಿತಿಯನ್ನು ಸುಭದ್ರಗೊಳಿಸಬೇಕು. ಆದರೆ ೧೯೬೧ರ ಕಾಯಿದೆಯ ದೊಡ್ಡ ಸಾಧನೆಯೆಂದರೆ ಅದು ಅನುಷ್ಠಾನಕ್ಕೆ ಬಂದ ನಂತರ ಗೇಣಿದಾರರ ಸಂಖ್ಯೆ ಏರಲಿಲ್ಲ; ಕೃಷಿಕಾರ್ಮಿಕರ ಸಂಖ್ಯೆ ಏರಿದೆ. ಅಂದರೆ ಗೇಣಿಗೆ ನೀಡಿದ ಭೂಮಿಯನ್ನು ಪುನರ್‌ಸ್ವಾಧೀನಪಡಿಸಿಕೊಳ್ಳಲು ಭೂಮಾಲೀಕರನ್ನು ಎಚ್ಚರಿಸಿದ ಕಾಯಿದೆ ಅದು.

೧೯೬೧ರ ಕಾಯಿದೆಗೆ ಹೋಲಿಸಿದರೆ ೧೯೭೪ರ ಕಾಯಿದೆ ಮತ್ತು ಅನುಷ್ಠಾನ ಎರಡೂ ಕೂಡ ಉತ್ತಮವಾಗಿತ್ತು ಎನ್ನುವ ಚಿತ್ರಣ ಇದೆ. ಡಿಕ್ಲರೇಶನ್ ಸಲ್ಲಿಸಿದ ಕೃಷಿಕರಿಗೆ ದೊರೆತ ಭೂಮಿ ಮೇಲಿನ ಅಂಕಿಅಂಶಗಳಿಂದ ಈ ಚಿತ್ರಣ

## ಗಾಂಧಿ ಮತ್ತು ಮೋದಿ !

ಗಾಂಧಿ
ಪತಣ
ಶಾಂತಿ
ಶಾಂತಿ !
ಮೋದಿ
ಪತಣ
ಕ್ರಾಂತಿ
ರಕ್ತ ಕ್ರಾಂತಿ !!

ಕಾ. ಗಿ. ಹತ್ತಳ್ಳಿ
ಸಿಂದಗಿ

ಲಭ್ಯವಾಗಿದೆ. ಮುಂದೆ ೧೯೭೪ರ ಕಾಯಿದೆಯ ಸಾಧನೆಯನ್ನು ಲೆಕ್ಕಹಾಕುವಾಗ ೧೯೬೧ರ ಕಾಯಿದೆಯಿಂದ ಭೂಮಿ ಕಳೆದುಕೊಂಡವರ ಸಂಖ್ಯೆಯನ್ನು ಪರಿಗಣಿಸಿದರೆ ೧೯೭೪ರ ಕಾಯಿದೆ ದೊಡ್ಡ ಸಾಧನೆ ಮಾಡಿಲ್ಲ ಎನ್ನುವುದು ಸಾಬೀತಾಗುತ್ತದೆ. ಗೇಣಿದಾರರು ಭೂಮಿ ಪಡೆಯುವ ವಿಚಾರದಲ್ಲಿ, ಘೋಷಿತ ಹೆಚ್ಚುವರಿ ಭೂಮಿ ಪ್ರಮಾಣದಲ್ಲಿ, ಸ್ವಾಧೀನಪಡಿಸಿಕೊಂಡ ಹೆಚ್ಚುವರಿ ಭೂಮಿ, ವಿತರಿಸಿದ ಹೆಚ್ಚುವರಿ ಭೂಮಿ ಈ ಎಲ್ಲ ವಿಚಾರಗಳಲ್ಲೂ ೧೯೭೪ರ ಕಾಯಿದೆ ವಿಶೇಷ ಸಾಧನೆ ಮಾಡಿಲ್ಲ. ಇನ್ನೂ ಭೂರಹಿತರಿಗೆ ಮತ್ತು ಕೃಷಿ ಕಾರ್ಮಿಕರಿಗೆ ಭೂಮಿ ಒದಗಿಸುವಲ್ಲಿ ೧೯೭೪ರ ಕಾಯಿದೆಯ ಸಾಧನೆ ಏನೇನೂ ಸಾಲದು. ಹಿಂದಿನ ಯಾವುದೇ ಮಸೂದೆಯಲ್ಲೂ ಕೃಷಿಕೂಲಿಗಳಿಗೆ ದೊಡ್ಡ ಮಟ್ಟಿನ ಲಾಭವಾಗಿಲ್ಲ.

**ಕೃಷಿ ಉದ್ದಿಮೆ**

ಎರಡನೇ ವಾದದ ಪ್ರಕಾರ ತೊಂಬತ್ತರ ನಂತರ ಅಭಿವೃದ್ಧಿ ದೃಷ್ಟಿಕೋನಗಳು ಬದಲಾಗಿವೆ. ಇಂದು ಭೂಸುಧಾರಣೆಯನ್ನು ಕೃಷಿಕರಿಗೆ ಮಾರುಕಟ್ಟೆಯಲ್ಲಿ ವ್ಯವಹರಿಸಲು ನೆರವಾಗುವ ದೃಷ್ಟಿಯಿಂದ ನೋಡಬೇಕು. ಈ ದೃಷ್ಟಿಯಿಂದ ಭೂಸುಧಾರಣೆಯನ್ನು ನೋಡಿದರೆ ಇಂದು ಬೇಕಾಗಿರುವುದು ಸಣ್ಣ ಸಣ್ಣ ತುಂಡುಗಳಾಗಿ ಹಂಚುವ ಭೂಸುಧಾರಣೆಯಲ್ಲ. ಎಕರೆಗಟ್ಟಲೆ ಭೂಮಿಯನ್ನು ಒಂದು ಕಡೆ ಸೇರಿಸುವ ಭೂಸುಧಾರಣೆ ಇಂದು ಬೇಕಾಗಿದೆ ಎನ್ನುವ ವಾದ ಇದು. ಇದು ಎಷ್ಟು ಸರಿಯೆಂದು ಪರಿಶೀಲಿಸೋಣ. ಭೂಮಿ ಗಾತ್ರ ಮತ್ತು ಮಾರುಕಟ್ಟೆಯಲ್ಲಿ ವ್ಯವಹರಿಸುವ ಶಕ್ತಿ ಇವೆರಡರ ನಡುವೆ ಸಂಬಂಧ ಕಲ್ಪಿಸಲಾಗಿದೆ. ಸಣ್ಣ ಮತ್ತು ಅತೀ ಸಣ್ಣ ರೈತರು ಮಾರುಕಟ್ಟೆಯಲ್ಲಿ ನೇರವಾಗಿ ವ್ಯವಹರಿಸುವುದು ಕಷ್ಟ. ಅಂಥವರು ತಮ್ಮ ಸಣ್ಣ ಭೂಮಿಯನ್ನು ಮಾರುಕಟ್ಟೆಯಲ್ಲಿ ವ್ಯವಹರಿಸುವ ದೊಡ್ಡ ರೈತರಿಗೆ ಪರಭಾರೆ ಮಾಡಿದರೆ ಸಣ್ಣ ರೈತರಿಗೆ ವಿಶೇಷ ರಿಸ್ಕ್ ಇಲ್ಲದೆ ಮಾರುಕಟ್ಟೆಯ ಲಾಭಗಳು ಹರಿದುಬರುತ್ತವೆ ಎನ್ನುವ ಗ್ರಹಿಕೆ ಈ ವಾದದ ಹಿಂದೆ ಇದೆ. ಆದರೆ ವಾಸ್ತವದಲ್ಲಿ ರೈತರಿಗೆ ಮಾರುಕಟ್ಟೆಯಲ್ಲಿ ವ್ಯವಹರಿಸಲು ಕಷ್ಟವಾಗುತ್ತಿರುವುದು ಕೃಷಿ ಭೂಮಿಯ ಗಾತ್ರದಿಂದ ಅಲ್ಲ. ಸಣ್ಣ ಮತ್ತು ಅತೀ ಸಣ್ಣ ರೈತರು ಕೂಡ ಮಾರುಕಟ್ಟೆಯಲ್ಲಿ ವ್ಯವಹರಿಸಬಹುದು.

ಕರ್ನಾಟಕದ ರೈತರ ಆತ್ಮಹತ್ಯೆಯನ್ನು ಅಧ್ಯಯನ ಮಾಡಿದವರ ಪ್ರಕಾರ ಆತ್ಮಹತ್ಯೆಗೂ ಕೃಷಿ ಭೂಮಿಯ ಗಾತ್ರಕ್ಕೂ ಸಂಬಂಧ ಇಲ್ಲ. ಅಂದರೆ ಸಣ್ಣ ರೈತರು ಹೆಚ್ಚು ಸಂಖ್ಯೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಿಲ್ಲ. ಎಲ್ಲ ಗಾತ್ರದ ರೈತರು ಆತ್ಮಹತ್ಯೆ ಮಾಡಿಕೊಂಡವರಲ್ಲಿ ಕಂಡುಬರುತ್ತಾರೆ. ಅದೇ ರೀತಿಯಲ್ಲಿ ಆತ್ಮಹತ್ಯೆ ಮಾಡಿಕೊಂಡವರಲ್ಲಿ ಮಾರುಕಟ್ಟೆ ಆಳವಾಗಿ ಬೇರೂರಿದ ಪ್ರದೇಶಗಳ ರೈತರ ಸಂಖ್ಯೆ ಕಡಿಮೆ ಇದೆ. ಆದರೆ ಮಾರುಕಟ್ಟೆ ವಿಶೇಷವಾಗಿ ಬೆಳೆಯದಿರುವ ಪ್ರದೇಶಗಳ ರೈತರು ಹೆಚ್ಚು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಆದುದರಿಂದ ಮಾರುಕಟ್ಟೆ ವ್ಯವಹಾರ ಮತ್ತು ರೈತರ ಕೃಷಿ ಭೂಮಿಯ ಗಾತ್ರಕ್ಕೂ ಸಂಬಂಧ ಕಲ್ಪಿಸುವುದು ಸರಿಯಲ್ಲ. ಭೂಮಿಯ ಗಾತ್ರಕ್ಕಿಂತ ಸಣ್ಣ ರೈತರನ್ನು ಕಾಡುವ ದೊಡ್ಡ ಸಮಸ್ಯೆಗಳೆಂದರೆ ಬೇಡಿಕೆ ಮತ್ತು ಪೂರೈಕೆ ಲೆಕ್ಕಚಾರ ಇಲ್ಲದಿರುವುದು, ಗ್ರಾಮೀಣ ಪ್ರದೇಶಗಳಲ್ಲಿ ಸಾರಿಗೆ ಸಂಪರ್ಕಗಳ ಕೊರತೆ, ಬೆಳೆದಿರುವುದನ್ನು ಬೇಡಿಕೆ ಬರುವ ತನಕ ಕಾಯ್ದಿರಿಸಲು ಬೇಕಾಗಿರುವ ಕೋಲ್ಡ್ ಸ್ಟೋರೇಜ್ ಸೌಲಭ್ಯಗಳ ಕೊರತೆ, ನೀರಾವರಿಯ ಕೊರತೆ, ಮಾರುಕಟ್ಟೆ ಮಾಹಿತಿ ಕೊರತೆ, ಅಧಿಕೃತ ಹಣಕಾಸು ಸಂಸ್ಥೆಗಳಿಂದ ದೊರೆಯದಿರುವ ಹಣಕಾಸು ಸೌಲಭ್ಯ ಇತ್ಯಾದಿ ಸಣ್ಣ ರೈತರು ಮಾರುಕಟ್ಟೆಯಲ್ಲಿ ವ್ಯವಹರಿಸುವಲ್ಲಿ ದೊಡ್ಡ ತೊಡಕಾಗಿವೆ. ಮೇಲಿನ ಎಲ್ಲ ಕೊರತೆಗಳು ವ್ಯವಹಾರದ ವೆಚ್ಚವನ್ನು ಹೆಚ್ಚಿಸುತ್ತವೆ. ವ್ಯವಹಾರದ ವೆಚ್ಚ ಹೆಚ್ಚಿದಂತೆ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಶಕ್ತಿ ಕಡಿಮೆಯಾಗುತ್ತದೆ.

ಇವುಗಳ ಜತೆಗೆ ಗ್ರಾಮೀಣ ಪ್ರದೇಶಗಳಲ್ಲಿ ಇಂದು ಕೂಡ ಒಪ್ಪಂದಗಳು ಏರ್ಪಡುವುದು ಸರಕಾರದ ನಿಯಮಗಳನುಸಾರ ಅಲ್ಲ. ರಾಜ್ಯದಲ್ಲಿ ಕನಿಷ್ಠ ಕೂಲಿ ಕಾಯಿದೆ ಇದೆ. ಆದರೆ ಎಷ್ಟು ಗ್ರಾಮೀಣ ಪ್ರದೇಶಗಳಲ್ಲಿ ಮಸೂದೆ ಸೂಚಿಸುವ ಕನಿಷ್ಠ ಕೂಲಿ ನೀಡುತ್ತಾರೆ ? ಅದೇ ಕಾಯಿದೆಯಲ್ಲಿ ಕೆಲಸದ ಅವಧಿಯನ್ನು ಸೂಚಿಸಲಾಗಿದೆ (ಕೆಲಸದ ಅವಧಿ, ವಾರದ ರಜೆ ಇತ್ಯಾದಿಗಳು). ಆದರೆ ಕಾಯಿದೆಯಲ್ಲಿರುವ ಪ್ರಕಾರ ಕೆಲಸದ ಅವಧಿಗಳು ಇರುವುದಿಲ್ಲ. ಇದೇ ಪ್ರಕಾರ ತೂಕ, ಅಳತೆ, ಬಡ್ಡಿ ವ್ಯವಹಾರ ಇತ್ಯಾದಿಗಳನ್ನು ನಿಯಂತ್ರಿಸುವ ಕಾಯಿದೆಗಳಿವೆ. ಆದರೆ ಈ ಕಾಯಿದೆಗಳನುಸಾರ ವ್ಯವಹಾರಗಳು ನಡೆಯುವುದೇ ಇಲ್ಲ. ಇಂದು ಕೂಡ ಸ್ಥಳೀಯ ಬಲಾಢ್ಯರು (ದೊಡ್ಡ ಭೂಮಾಲೀಕರು, ಲೇವಾದೇವಿ ವ್ಯವಹಾರದವರು,

ದೊಡ್ಡ ವ್ಯಾಪಾರಿಗಳು) ಗ್ರಾಮೀಣ ಪ್ರದೇಶಗಳಲ್ಲಿ ನಡೆಯುವ ವ್ಯವಹಾರಗಳ ನೀತಿ ನಿಯಮಗಳನ್ನು ನಿರ್ಧರಿಸುತ್ತಾರೆ. ಈ ಎಲ್ಲ ಕಾರಣಗಳಿಂದ ಗ್ರಾಮೀಣ ಪ್ರದೇಶದ ಶೇಕಡ ಎಂಬತ್ತಕ್ಕಿಂತಲೂ ಹೆಚ್ಚಿನ ವ್ಯವಹಾರಗಳು ಸರಕಾರದ ನೀತಿ ನಿಯಮ ಗಳನುಸಾರ ನಡೆಯುವುದಿಲ್ಲ. ಅದೇನಿದ್ದರೂ ಸ್ಥಳೀಯ ಬಲಾಢ್ಯರ ಮರ್ಜಿಗನುಸಾರ ನಡೆಯುತ್ತವೆ.

ಇವರಿಗೆ ಇಂತಹ ಶಕ್ತಿ ಎಲ್ಲಿಂದ ಬಂದಿದೆ? ದೊಡ್ಡ ಪ್ರಮಾಣದಲ್ಲಿ ಭೂಮಿ ಹೊಂದಿರುವುದು ಮತ್ತು ಭೂಮಿ ಜತೆಗೆ ಜಾತಿ/ಧರ್ಮಗಳನ್ನು ಬೆರೆಸಿಕೊಂಡು ರಾಜಕೀಯ ಮಾಡುವುದರಿಂದ ಇವರಿಗೆ ಈ ಶಕ್ತಿ ಬಂದಿದೆ, ಇವರುಗಳು ತಮ್ಮ ಆಸಕ್ತಿಗಳಿಗೆ ವಿರುದ್ಧವಾದ ಮಸೂದೆಗಳು ಬರದಂತೆ ತಡೆಯುತ್ತಾರೆ. ಒಂದು ವೇಳೆ ಮಸೂದೆಗಳು ಬಂದರೂ ಅವುಗಳು ಮಸೂದೆಗಳ ಮೂಲ ಉದ್ದೇಶಕ್ಕನುಗುಣವಾಗಿ ಜಾರಿಗೆ ಬರದಂತೆ ನೋಡಿಕೊಳ್ಳುತ್ತಾರೆ. ಇಂತಹ ಸ್ಥಿತಿ ಬದಲಾಗಿ ಸಣ್ಣ ಮತ್ತು ಅತೀ ಸಣ್ಣ ರೈತರು ಕೂಡ ಮಾರುಕಟ್ಟೆಯಲ್ಲಿ ವ್ಯವಹರಿಸಬೇಕಾದರೆ ಮಾರುಕಟ್ಟೆ ಬೆಳವಣಿಗೆಗೆ ಪೂರಕವಾದ ಮೂಲಸೌಕರ್ಯಗಳು ಗ್ರಾಮೀಣ ಪ್ರದೇಶದಲ್ಲಿ ಧಾರಾಳವಾಗಿ ಸಿಗಬೇಕು. ಜೊತೆಗೆ ಒಪ್ಪಂದಗಳು ಸರಕಾರಿ ನಿಯಮಗಳನುಸಾರ ನಡೆಯಬೇಕಾಗಿದೆ. ಇದು ಸಾಧ್ಯವಾಗಬೇಕಾದರೆ ಭೂಸಂಬಂಧಗಳು ಬದಲಾಗಬೇಕಾಗಿವೆ.

**ಅಭಿವೃದ್ಧಿಯ ಹಂತಗಳು**

ಭೂಸುಧಾರಣೆ ಇಂದಿನ ಅನಿವಾರ್ಯತೆಯಲ್ಲ ಎಂದು ಸಾಧಿಸಲು ಬಳಸುವ ಮೂರನೇ ವಾದ ಅಭಿವೃದ್ಧಿಯ ವಿವಿಧ ಹಂತಗಳಿಗೆ ಸಂಬಂಧಿಸಿದೆ. ಶ್ರೀಮಂತ ದೇಶಗಳ ಅನುಭವದ ಹಿನ್ನೆಲೆಯಲ್ಲಿ ಅಭಿವೃದ್ಧಿಯ ಹಂತಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

ಮೊದಲಿಗೆ, ಕೃಷಿಯ ಬೆಳವಣಿಗೆ–ನಂತರ ಕೈಗಾರಿಕೆ – ಕೊನೆಗೆ ಸೇವಾವಲಯದ ಅಭಿವೃದ್ಧಿ – ಈ ಕ್ರಮದಲ್ಲಿ ಪಶ್ಚಿಮದ ಶ್ರೀಮಂತ ದೇಶಗಳು ಅಭಿವೃದ್ಧಿಯನ್ನು ಸಾಧಿಸಿವೆ. ಇದೇ ಕ್ರಮದಲ್ಲಿ ಪ್ರಪಂಚದ ಉಳಿದ ದೇಶಗಳು ತಮ್ಮ ಅಭಿವೃದ್ಧಿಯನ್ನು ಸಾಧಿಸಲಿವೆ ಎಂದು ಅಭಿವೃದ್ಧಿ ಸಿದ್ಧಾಂತಗಳು ಹೇಳುತ್ತವೆ. ಆದರೆ ಹಲವಾರು ಅಭಿವೃದ್ಧಿಶೀಲ ದೇಶಗಳು ಶ್ರೀಮಂತ ದೇಶಗಳ ಅಭಿವೃದ್ಧಿ ಹಂತಗಳನ್ನು ಯಥಾರೂಪದಲ್ಲಿ ಅನುಸರಿಸಿಲ್ಲ. ಬಹುತೇಕ ದೇಶಗಳಲ್ಲಿ ಕೈಗಾರಿಕೆ ಅಥವಾ ಕೃಷಿ ಸರಿಯಾಗಿ ನೆಲೆಯೂರುವ ಮೊದಲೇ ಸೇವಾವಲಯಗಳು ಬೆಳೆದು ತಮ್ಮ ಅಭಿವೃದ್ಧಿಯನ್ನು ಸಾಧಿಸಿಕೊಂಡಿವೆ. ನಮ್ಮದೇ ರಾಜ್ಯದ ಉದಾಹರಣೆ ತೆಗೆದುಕೊಂಡರೆ ಕಾಲಕ್ರಮೇಣ ರಾಜ್ಯದ ಒಟ್ಟು ಉತ್ಪಾದನೆಯಲ್ಲಿ ಕೃಷಿಯ ಪಾಲು ಸತತ ಕುಸಿತ ಕಂಡಿದೆ. ಹಾಗೆಂದು ಕೃಷಿಯ ಕುಸಿತವನ್ನು ಕೈಗಾರಿಕೆ ತುಂಬಲಿಲ್ಲ. ಬದಲಿಗೆ ಸೇವಾ ವಲಯ ತುಂಬಿದೆ.

ರಾಜ್ಯದ ಒಟ್ಟು ಉತ್ಪನ್ನದ ಶೇಕಡ ೫೮ರಷ್ಟು ಸೇವಾವಲಯದಿಂದ ಬಂದರೆ ಕೃಷಿಯಿಂದ ಶೇಕಡ ೧೫ ಮತ್ತು ಕೈಗಾರಿಕೆಯಿಂದ ಶೇಕಡ ೨೫ರಷ್ಟು ಬಂದಿದೆ. ಕೃಷಿಗೆ ಹೋಲಿಸಿದರೆ ಕೈಗಾರಿಕೆ ಮತ್ತು ಸೇವಾವಲಯದಿಂದ ಶೇಕಡ ೮೫ರಷ್ಟು ರಾಜ್ಯದ ಉತ್ಪನ್ನ ಬರುತ್ತಿದೆ. ಅಂದರೆ ಪರೋಕ್ಷವಾಗಿ ಕೃಷಿಯೇತರ ಚಟುವಟಿಕೆಗಳೇ ಇಂದು ರಾಜ್ಯದ ಒಟ್ಟಾರೆ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸುತ್ತಿವೆ. ಜತೆಗೆ ಕೃಷಿಯೇತರ ಚಟುವಟಿಕೆ ರಾಜ್ಯದ ಜನರಿಗೆ ಉತ್ತಮ ಬದುಕನ್ನು ನೀಡಿದೆ ಎನ್ನುವ ಚಿತ್ರಣವೂ ಇದೆ. ಇದರ ಸಮರ್ಥನೆಯಾಗಿ ಗ್ರಾಮೀಣ ಹಾಗೂ ನಗರ ಪ್ರದೇಶಗಳ ಜನರ ಆದಾಯ, ಶಿಕ್ಷಣ, ಆರೋಗ್ಯ, ವಸತಿ ಇತ್ಯಾದಿ ಸವಲತ್ತುಗಳಿಗೆ ಸಂಬಂಧಿಸಿದ ಅಂಕಿ–ಅಂಶಗಳೇ ಸಾಕ್ಷಿ ಎನ್ನುವ ಅಭಿವೃದ್ಧಿ ತಜ್ಞರಿದ್ದಾರೆ. ಉತ್ಪಾದನೆ ಮತ್ತು ಅನುಭೋಗ ಎರಡರಲ್ಲೂ ಕರ್ನಾಟಕದ ಗ್ರಾಮೀಣ ಪ್ರದೇಶದ ಜನರು ತಮ್ಮದೇ ರಾಜ್ಯದ ನಗರ ಪ್ರದೇಶದ ಜನರಿಗಿಂತ ಗಾವುದ ದೂರ ಇದ್ದಾರೆ. ಕರ್ನಾಟಕದ ಗ್ರಾಮೀಣ ಮತ್ತು ನಗರ ಪ್ರದೇಶಗಳ ನಡುವೆ ಕೇವಲ ಆರ್ಥಿಕ ಕ್ಷೇತ್ರದಲ್ಲಿ ಮಾತ್ರ ಈ ಕ್ರಮದ ವ್ಯತ್ಯಾಸ ಇರುವುದಿಲ್ಲ; ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳಲ್ಲೂ ಇದೇ ಕ್ರಮದ ವ್ಯತ್ಯಾಸ ಇದೆ.

ಶೇಕಡ ೬೦ರಿಂದ ೬೫ ಜನ ವಾಸವಿರುವ ಗ್ರಾಮೀಣ ಪ್ರದೇಶದಲ್ಲಿ ಕೇವಲ ಶೇಕಡ ೨೫ರಷ್ಟು ವೈದ್ಯರು ಸೇವೆ ಸಲ್ಲಿಸಿದರೆ ಶೇಕಡ ೩೫ರಷ್ಟು ಜನಸಂಖ್ಯೆ ಇರುವ ಪೇಟೆ ಪಟ್ಟಣಗಳಲ್ಲಿ ಸೇವೆ ಸಲ್ಲಿಸಲು ಶೇಕಡ ೭೫ರಷ್ಟು ವೈದ್ಯರು ತುದಿಗಾಲಲ್ಲಿ ನಿಂತಿದ್ದಾರೆ. ಈ ರೀತಿಯ ವೈದ್ಯಕೀಯ ನೆರವಿನ ಅಂತರ ಜನರ ಆರೋಗ್ಯ ಸ್ಥಿತಿಯನ್ನು ಪ್ರಭಾವಿಸುತ್ತದೆ. ಈ ಎಲ್ಲ ಅಂಶ ಗಳನ್ನು ಮುಂದಿಟ್ಟುಕೊಂಡು ಜನರ ಅಭಿವೃದ್ಧಿ ಅಥವಾ ಉತ್ತಮ ಬದುಕು ಅಡಗಿರುವುದು ಕೈಗಾರಿಕೆ ಹಾಗೂ ಸೇವಾ ವಲಯಗಳ ಬೆಳವಣಿಗೆಯಲ್ಲೆಂದು ರಾಜಕೀಯ ಪಕ್ಷಗಳು, ಸಂಶೋಧಕರು, ಅಧ್ಯಯನಗಳು ವಾದಿಸುತ್ತವೆ. ಅದಕ್ಕನುಸಾರ ನಮ್ಮಲ್ಲಿ ಇಂದು ಅಭಿವೃದ್ಧಿಯೆಂದರೆ ನಗರೀಕರಣ, ಕೈಗಾರಿಕೆ ಹಾಗೂ ಸೇವಾ ವಲಯಗಳ ಬೆಳವಣಿಗೆ ಎಂದಾಗಿದೆ. ಹಾಗೆಂದ ಕೂಡಲೇ ಕೃಷಿಗೆ ಮಹತ್ವ ಇಲ್ಲವೇ ಇಲ್ಲ ಎಂದಲ್ಲ. ಅವುಗಳು ಕೂಡ ಉದ್ದಿಮೆಗಳ ರೂಪದಲ್ಲಿ ಕಾರ್ಯ ನಿರ್ವಹಿಸುವುದಾದರೆ ಅವುಗಳಿಗೆ ಬೆಂಬಲ ಇದೆ. ಅದು ಬಿಟ್ಟು ಅವುಗಳು ಮೂರು ಹೊತ್ತಿನ ಊಟ ಗಳಿಸುವ ಒಂದು ಅಲ್ಪ ಸಾಧನವಾಗುವುದಾದರೆ ಅವುಗಳಿಗೆ ವಿಶೇಷ ಬೆಂಬಲ ಇಲ್ಲವೆಂದು ವಿವಿಧ ಕಾರ್ಯಕ್ರಮಗಳ ಮೂಲಕ ಮಾಡಿ ತೋರಿಸುತ್ತಿದ್ದಾರೆ.

ಮೇಲಿನ ವಾದವನ್ನು ಅಲ್ಲಗಳೆಯುವುದು ಅಷ್ಟು ಸರಳವಲ್ಲ. ಮೇಲ್ನೋಟಕ್ಕೆ ಆ ವಾದಗಳಲ್ಲಿ ಶಕ್ತಿ ಇರುವಂತೆ ಕಾಣುತ್ತದೆ. ಆದರೆ ಅವುಗಳನ್ನು ವಿಮರ್ಶೆಗೆ ಒಡ್ಡಿದರೆ ಅವುಗಳ ಒಳಗಿನ ಟೊಳ್ಳುತನ ಬೆಳಕಿಗೆ ಬರುತ್ತದೆ. ಮೊದಲಿಗೆ, ಬೆಳೆದು ನಿಂತಿರುವ ಇದೇ ಕೈಗಾರಿಕೆ ಹಾಗೂ ಸೇವಾವಲಯಗಳು ಎಷ್ಟು ಜನರಿಗೆ ಊಟ ಕೊಡುತ್ತಿವೆ ಎಂದು ನೋಡುವ. ಅವುಗಳು ಜನಸಾಮಾನ್ಯರಿಗೆ ಸೃಷ್ಟಿಸಿರುವ ಉದ್ಯೋಗಗಳು ಎಂಥವು ಎನ್ನುವುದನ್ನು ನಂತರ ಪರಿಶೀಲಿಸುವ. ಇವತ್ತು ಕೂಡ ರಾಜ್ಯದ ಶೇಕಡ ೬೦ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿದ್ದಾರೆ. ಶೇಕಡ ೩೮ರಷ್ಟು ಜನರು ಪೇಟೆ ಪಟ್ಟಣಗಳಲ್ಲಿದ್ದಾರೆ. ಈ ಎರಡು ಅಂಕಿ–ಅಂಶಗಳನ್ನು ವಿಮರ್ಶಿಸದೆ ಅವುಗಳ ಮುಖ ಬೆಲೆಯಲ್ಲಿ ತೆಗೆದುಕೊಂಡರೂ ಕೈಗಾರಿಕೆ ಮತ್ತು ಸೇವಾವಲಯಗಳು ನೇರವಾಗಿ ಉದ್ಯೋಗ ಒದಗಿಸುತ್ತಿರುವುದು ಕೇವಲ ಮೂರನೇ ಒಂದರಷ್ಟು

ಜನರಿಗೆ ಮಾತ್ರ. ಇವತ್ತು ಕೂಡ ರಾಜ್ಯದ ಮೂರನೇ ಎರಡರಷ್ಟು ಜನರು ತಮ್ಮ ಮೂರು ಹೊತ್ತಿನ ಊಟಕ್ಕೆ ಕೃಷಿಯನ್ನೇ ನಂಬಿದ್ದಾರೆ. ಹಲವು ಕಾರಣಗಳಿಂದ ಕೃಷಿ ಉತ್ಪಾದನೆ ಕಡಿಮೆ ಇದೆ. ರಾಜ್ಯದ ಒಟ್ಟು ಉತ್ಪನ್ನದ ಶೇಕಡ ೧೫ರಷ್ಟು ಮಾತ್ರ ಕೃಷಿಯಿಂದ ಬರುತ್ತಿದೆ. ಇಂತಹ ಕನಿಷ್ಠ ಉತ್ಪಾದನೆ ಕೃಷಿಕರ ಮತ್ತು ಕೃಷಿ ಕಾರ್ಮಿಕರ ಆದಾಯವನ್ನು ಕುಂಠಿತಗೊಳಿಸುತ್ತಿದೆ.

**ಪೇಟೆಪಟ್ಟಣಗಳು**

ಇನ್ನು ಶೇಕಡ ೩೮ರಷ್ಟು ಪೇಟೆ–ಪಟ್ಟಣ ಎನ್ನುವ ಅಂಕಿ–ಅಂಶವನ್ನು ಪರೀಕ್ಷಿಸಿದರೆ, ಅದರಲ್ಲಿ ಒಂದನೇ ವರ್ಗದ ಸಿಟಿಯಿಂದ (ಬೆಂಗಳೂರು, ಮೈಸೂರು, ಮಂಗಳೂರು ಮುಂತಾದ ದೊಡ್ಡ ನಗರಗಳು) ಆರಂಭಗೊಂಡು ಐದನೇ ವರ್ಗದ ಪಟ್ಟಣ ಪಂಚಾಯಿತಿಗಳು ಸೇರುತ್ತವೆ. ಒಂದು ಮತ್ತು ಎರಡನೇ ವರ್ಗದ ಸಿಟಿಗಳನ್ನು ನಾವು ಅರ್ಬನ್ ಎಂದು ಭಾವಿಸಿಕೊಂಡರೆ ನಮ್ಮಲ್ಲಿ ಇಂದು ಕೂಡ ಶೇಕಡ ೮೦ರಷ್ಟು ಜನರು ಗ್ರಾಮೀಣ ಜನರೇ. ಯಾಕೆಂದರೆ ಮೂರು, ನಾಲ್ಕು ಮತ್ತು ಐದನೇ ವರ್ಗದ ಸಿಟಿಗಳಲ್ಲಿ ಬಹುತೇಕದ ತಾಲ್ಲೂಕು ಕೇಂದ್ರಗಳು ಹಾಗೂ ಪಟ್ಟಣ ಪಂಚಾಯಿತಿಗಳು. ಇವೆಲ್ಲ ಸಣ್ಣಪುಟ್ಟ ಕಟ್ಟಡದ ಕೆಲಸಗಳು, ಹೊಟೇಲು, ಗ್ಯಾರೇಜ್, ಸಣ್ಣಪುಟ್ಟ ಅಂಗಡಿಗಳು ಕೃಷಿಯೇತರ ಉದ್ಯೋಗ ಕೊಡುವ ತಾಣಗಳು. ಇವುಗಳನ್ನು ಹೊರತುಪಡಿಸಿದರೆ ಇಲ್ಲಿ ದೊಡ್ಡ ಕೈಗಾರಿಕೆಗಳು ಅಥವಾ ಸೇವಾ ವಲಯದ ದೊಡ್ಡ ಉದ್ದಿಮೆಗಳಿಲ್ಲ. ಇವುಗಳು ಕೊಡುವ ಮೂರು ಕಾಸಿಗೆ ಯಾವುದೇ ಉದ್ಯೋಗದ ಅವಕಾಶಗಳಿಲ್ಲದವರು, ಭೂಮಿ ಇಲ್ಲದವರು ಮಾತ್ರ ದುಡಿಯಬಹುದು. ಸೇವಾ ವಲಯ ಹಾಗೂ ಕೈಗಾರಿಕೆಗಳು ಸೃಷ್ಟಿಸುವ ಉದ್ಯೋಗದ ಗುಣಮಟ್ಟವಂತೂ ಊಹಿಸಲು ಅಸಾಧ್ಯ. ಇವುಗಳು ನೀಡುವ ಬಹುಪಾಲು (ಶೇಕಡ ೯೦ರಷ್ಟು) ಉದ್ಯೋಗಗಳು ಅಸಂಘಟಿತ ಉದ್ಯೋಗಗಳು. ಅಂದರೆ ಸರಕಾರಿ ನಿಯಮಾನುಸಾರ ಕೊಡಬೇಕಾಗಿರುವ ಸಂಬಳ, ರಜೆ, ಶಿಕ್ಷಣ, ಆರೋಗ್ಯ, ವಸತಿ ಇತ್ಯಾದಿ ಯಾವ ಸವಲತ್ತುಗಳಿಲ್ಲದ ಉದ್ಯೋಗಗಳು.

ಉದ್ದಿಮೆದಾರರು ವ್ಯಾಪಾರ ಹೆಚ್ಚಿರುವಾಗ ನೇಮಕ ಮಾಡಿಕೊಂಡು, ವ್ಯಾಪಾರ ಕಡಿಮೆ ಇರುವ ಸಂದರ್ಭದಲ್ಲಿ ಮನೆಗೆ ಕಳುಹಿಸುವ ಉದ್ಯೋಗಗಳು ಇವು. ಕೆಲಸದ ಸಂದರ್ಭದಲ್ಲಿ ಒಂದುವೇಳೆ ಅಪಘಾತವಾಗಿ ಕೆಲಸಗಾರರು ಕೈಕಾಲು ಕಳೆದುಕೊಂಡರೆ ಮಾಲೀಕರು ನೋಡಿಕೊಳ್ಳುವುದಿಲ್ಲ; ಸಣ್ಣಪುಟ್ಟ ಆಸ್ಪತ್ರೆ ಖರ್ಚುಗಳನ್ನು ಭರಿಸಿ ಮಾಲೀಕರು ತಮ್ಮ ಜವಾಬ್ದಾರಿಯಿಂದ ಕಳಚಿಕೊಳ್ಳುತ್ತಾರೆ. ಕೆಲಸಗಾರರು ಗುಣಮುಖವಾಗುವವರೆಗೆ ಅವರ ಮನೆಯವರೇ ನೋಡಿಕೊಳ್ಳಬೇಕು. ಒಂದು ವೇಳೆ ಕೆಲಸಗಾರರು ದುಡಿಯುವ ಸಾಮರ್ಥ್ಯವನ್ನೇ ಕಳೆದುಕೊಂಡರೆ ಜೀವನಪರ್ಯಂತ ಅವರ ಕುಟುಂಬದವರೇ ನೋಡಿಕೊಳ್ಳಬೇಕು. ಇವನ್ನೆಲ್ಲ ಹೇಳಿದ ಕೂಡಲೇ ಅವರಿಗೆ ಇನ್ಶೂರೆನ್ಸ್ ಇದೆ, ಈ ಸವಲತ್ತಿದೆ, ಆ ಸವಲತ್ತಿದೆಯೆಂದು ಕಾರ್ಯಕ್ರಮಗಳ ದೊಡ್ಡ ಪಟ್ಟಿಯನ್ನು ನೀಡುವ ಅಭಿವೃದ್ಧಿ ಸಿದ್ಧಾಂತಿಗಳಿದ್ದಾರೆ. ಆದರೆ ಈ ಎಲ್ಲ ಸವಲತ್ತುಗಳು ಎಷ್ಟು ಅಸಂಘಟಿತ ವಲಯದ ಕಾರ್ಮಿಕರನ್ನು ತಲುಪಿದೆ ಎಂದು ನೋಡಿದರೆ ದೊಡ್ಡ ಸಾಧನೆ ಕಾಣುವುದಿಲ್ಲ. ಅಂಗಡಿಗಳು, ಹೋಟೇಲುಗಳು, ಟೆಲಿಫೋನ್ ಬೂತ್‌ಗಳು, ಗ್ಯಾರೇಜ್‌ಗಳು, ಎಲ್ಲ ವಾಹನಗಳ ಚಾಲಕರು, ಕಂಡಕ್ಟರ್‌ಗಳು, ಕ್ಲೀನರ್‌ಗಳು, ಆಯಾಗಳು, ಮನೆಕೆಲಸದವರು ಇವರೆಲ್ಲ ಸೇವಾ ವಲಯಗಳಲ್ಲಿ ದುಡಿಯುವವರು. ಇವರುಗಳಲ್ಲಿ ಬಹುತೇಕರ ತಿಂಗಳ ಸಂಬಳ ಎರಡರಿಂದ ಮೂರು ಸಾವಿರ ದಾಟಿದರೆ ಪುಣ್ಯ.

ಕನಿಷ್ಠ ಕೂಲಿಗೆ ದುಡಿಯುವ ಇವರ್‍ಯಾರು ? ಹಲವು ಭೂಸುಧಾರಣೆಗಳ ನಂತರವೂ ಗ್ರಾಮೀಣ ಪ್ರದೇಶದ ಶೇಕಡ ೩೩ ಕುಟುಂಬಗಳಿಗೆ ಸ್ವಂತ ಭೂಮಿ ಇಲ್ಲ. ಭೂಮಿ ಇಲ್ಲದವರಲ್ಲಿ ಬಹುಪಾಲು ಜನರು ದಲಿತರು, ಬುಡಕಟ್ಟು ಜನರು ಹಾಗೂ ಹಿಂದುಳಿದ ವರ್ಗದ ಜನರು. ಭೂಮಿ ಇರುವ ಕುಟುಂಬಗಳಲ್ಲಿ ಶೇಕಡ ೭೫ ಕುಟುಂಬಗಳು ಸಣ್ಣ ಮತ್ತು ಅತೀ ಸಣ್ಣ ಭೂ ಹಿಡುವಳಿದಾರರು. ಶೇಕಡ ೨೪ರಷ್ಟಿರುವ ಮಧ್ಯಮ ಮತ್ತು ಅರೆ ಮಧ್ಯಮ ಹಿಡುವಳಿದಾರರಲ್ಲಿ ಶೇಕಡ ೫೩ರಷ್ಟು ಭೂಮಿ ಇದೆ. ಇನ್ನುಳಿದ ಶೇಕಡ ೧ರಷ್ಟು ಕುಟುಂಬಗಳಲ್ಲಿ ಶೇಕಡ ೯ರಷ್ಟು ಭೂಮಿ ಇದೆ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ರಾಜ್ಯದ ಶೇಕಡ ೨೫ರಷ್ಟು ಹಿಡುವಳಿದಾರರಲ್ಲಿ ಶೇಕಡ ೬೩ರಷ್ಟು ಭೂಮಿ ಇದೆ. ಈ ಅಂಕಿ–ಅಂಶಗಳ ಪ್ರಕಾರ ಪೇಟೆ ಪಟ್ಟಣಗಳ ಅಸಂಘಟಿತ ಕಾರ್ಮಿಕರಲ್ಲಿ ಭೂಮಿ ಇಲ್ಲದವರು ಮತ್ತು ಸಣ್ಣ ಮತ್ತು ಅತೀ ಸಣ್ಣ ರೈತರು ಹೆಚ್ಚಿರಲೇಬೇಕು. ನೀರಾವರಿ ಪ್ರದೇಶದ ಅರೆಮಧ್ಯಮ, ಮಧ್ಯಮ ಮತ್ತು ದೊಡ್ಡ ಕೃಷಿಕರು ಈ ಕಡೆ ಕಣ್ಣು ಹಾಯಿಸಿಯೂ ನೋಡಲಾರರು. ಏಕೆಂದರೆ ಅವರ ಕೃಷಿಭೂಮಿಯಿಂದ ಈ ವಲಯಗಳು ನೀಡುವ ಕೂಲಿಗಿಂತ ಹೆಚ್ಚಿನ ಆದಾಯ ಪಡೆಯಬಹುದು. ಇನ್ನು ನೀರಾವರಿ ಪ್ರದೇಶದ ಸಣ್ಣ ಮತ್ತು ಅತೀ ಸಣ್ಣ ರೈತರು ಕೃಷಿಕೆಲಸ ಇಲ್ಲದ ಸಂದರ್ಭದಲ್ಲಿ ಈ ಕೆಲಸಗಳಲ್ಲಿ ತೊಡಗಿಕೊಳ್ಳಬಹುದು.

ಒಣ ಭೂಪ್ರದೇಶದ ಅರೆ ಮಧ್ಯಮ ಮತ್ತು ಮಧ್ಯಮ ರೈತರು ಕೂಡ ತಮ್ಮ ಕೃಷಿ ಚಟುವಟಿಕೆಯನ್ನು ಮುಗಿಸಿ ದೂರದ ಪಟ್ಟಣಗಳಿಗೆ ವಲಸೆ ಹೋಗಿ ಕಟ್ಟೋಣ ಕೆಲಸಗಳಲ್ಲಿ ಅಥವಾ ಇತರ ಕೆಲಸಗಳಲ್ಲಿ ತೊಡಗಿಸಿಕೊಳ್ಳುವ ಸಾಧ್ಯತೆ ಇದೆ. ಹೀಗೆ ಗ್ರಾಮೀಣ ಪ್ರದೇಶಗಳ ಭೂರಹಿತರು, ಸಣ್ಣ ಮತ್ತು ಅತೀ ಸಣ್ಣ ರೈತರು ಪೇಟೆ ಪಟ್ಟಣಗಳ ಅಸಂಘಟಿತ ವಲಯದಲ್ಲಿ ಹೆಚ್ಚಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿನ ಮೂಲಭೂತ ಸೌಕರ್ಯಗಳ ಕೊರತೆ ಹಾಗೂ ಕೃಷಿಯೇತರ ಚಟುವಟಿಕೆಗಳ ಕೊರತೆಗಳು ಇವರನ್ನು ನಗರ ಪ್ರದೇಶಗಳ ಕನಿಷ್ಠ ಕೂಲಿ ಹಾಗೂ ಅಸಹನೀಯ ಬದುಕಿಗೆ ಒಡ್ಡಿಕೊಳ್ಳುವಂತೆ ಒತ್ತಾಯಿಸುತ್ತಿವೆ. ನಮ್ಮ ನಗರಗಳು ಗ್ರಾಮೀಣ ಪ್ರದೇಶದಿಂದ ವಲಸೆ ಬರುವ ಎಲ್ಲರಿಗೂ ಉತ್ತಮ ಬದುಕು ನೀಡಲು ಸಾಧ್ಯವಿಲ್ಲ. ಆದುದರಿಂದ ಗ್ರಾಮೀಣ ಜನರಿಗೆ ಉತ್ತಮ ಬದುಕು ನೀಡುವ ದೃಷ್ಟಿಯಿಂದ ಮತ್ತೊಂದು ಭೂಸುಧಾರಣೆ ಬಗ್ಗೆ ಚರ್ಚಿಸಲು ಇದು ಸೂಕ್ತ ಸಮಯ. ಭೂಸುಧಾರಣೆ ಗ್ರಾಮೀಣ ಜನರ ಎಲ್ಲ ಸಮಸ್ಯೆಗಳನ್ನು ಪರಿಹರಿಸುವುದಿಲ್ಲ. ಗ್ರಾಮೀಣ ಪ್ರದೇಶದ ಮೂಲಸೌಕರ್ಯಗಳ ಪೂರೈಕೆ ಕೂಡ ಗಣನೀಯವಾಗಿ ಸುಧಾರಿಸಬೇಕಾಗಿದೆ. ಈ ಎಲ್ಲದರ ಹಿನ್ನೆಲೆಯಲ್ಲಿ ತೀರ್ಮಾನಿಸುವುದಾದರೆ ಭೂಸುಧಾರಣೆ ಮುಗಿದುಹೋದ ಕತೆ; ಈಗ ಆ ಕುರಿತು ಚರ್ಚಿಸುವುದು ಅನಗತ್ಯ ಎನ್ನುವ ನಿಲುವು ಸರಿಯಲ್ಲ. ಇಂದು ಕೂಡ ಕುಟುಂಬವೊಂದರ ಬದುಕನ್ನು ಸಕರಾತ್ಮಕವಾಗಿ ಪರಿವರ್ತಿಸುವ ಸಾಧನ ವೊಂದಿದ್ದರೆ ಅದು ಭೂಮಿ ಮಾತ್ರ ಎನ್ನುವುದು ಈ ಲೇಖನದ ವಾದ.


ಡಾ|| ಎಂ. ಚಂದ್ರ ಪೂಜಾರಿ
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ
ವಿದ್ಯಾರಣ್ಯ, ಬಳ್ಳಾರಿ – ೫೮೩ ೨೭೬




## ಪಾಠಶಾಲೆಗಳು

ಚಂಡ ಮಾರುತದ
ಸಮಯದಿ
ಸಂತ್ರಸ್ತರಿಗೆ
ಸಾಮೂಹಿಕಾಶ್ರಯ
ನೀಡುವ
ಮಕ್ಕಳ
ಮಂಟಪಗಳು!


ಡಾ|| ವಿ. ಪುಗಳೇಂದಿ
ಸಿರುಗುಪ್ಪ – 583121, ಬಳ್ಳಾರಿ ಜಿಲ್ಲೆ

# ಕೇಂದ್ರದಲ್ಲಿ ಅಸ್ಥಿರತೆ, ಮಧ್ಯಂತರ ಚುನಾವಣೆ – ಆಡ್ವಾಣಿ ರಥಯಾತ್ರೆ

ಸಿ. ಆರ್. ಕೃಷ್ಣರಾವ್

ಅರವತ್ತೇಳು ವರ್ಷಗಳಲ್ಲಿ ಸ್ವತಂತ್ರ ಭಾರತ ಪೂರ್ಣವಾಗಿ ಬಂಡವಾಳಶಾಹಿ ವ್ಯವಸ್ಥೆಯನ್ನು ಸುಭದ್ರಗೊಳಿಸಿದೆ. ಪ್ರಾರಂಭದ ವರ್ಷಗಳಲ್ಲಿ ಭೂಸುಧಾರಣೆಗಳ ವಿಚಾರವಿದ್ದರೂ, ಅದಕ್ಕಾಗಿ ಕಾಯಿದೆಗಳನ್ನು ತಂದರೂ ಸಾಮಾನ್ಯ ರೈತನಿಗೆ ಪ್ರಯೋಜನವಾಗುವಂಥ ಸಮಗ್ರ ಭೂಸುಧಾರಣೆಗಳು ಜಾರಿಯಾಗಲೇ ಇಲ್ಲ. ಸಮಾಜವಾದಿ ಸಮಾಜ, ಸಮಾಜವಾದಿ ಮಾದರಿ ಸಮಾಜ ಕಾಂಗ್ರೆಸ್ ಪಕ್ಷದ ಘೋಷಣೆಗಳಾಗಿ ಉಳಿದವೇ ಹೊರತು ಮುಂದೆ ಸಾಗಲಿಲ್ಲ. ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಆಡಳಿತದ ಚುಕ್ಕಾಣಿ ಹಿಡಿದಿದ್ದ ಕಾಂಗ್ರೆಸ್ ಜನಪರ ನೀತಿಗಳನ್ನು ಅನುಷ್ಠಾನಕ್ಕೆ ತಂದದ್ದು ಕಡಿಮೆ. ಯೋಜನೆಗಳ ಫಲಾನುಭವಿಗಳೂ ಬಂಡವಾಳಗಾರರು, ಶ್ರೀಮಂತರೇ ಹೊರತು ಜನಸಾಮಾನ್ಯರಲ್ಲ. ಈ ಕಾಲಾವಧಿಯಲ್ಲಿ ಬಡವರು ಮತ್ತು ಶ್ರೀಮಂತರ ಮಧ್ಯೆ ಅಂತರ ಹೆಚ್ಚಿದೆಯೇ ವಿನಾ ಕಡಿಮೆಯಾಗಿಲ್ಲ. ಮೊದಲ ನಲವತ್ತು ವರ್ಷಗಳು ಇದ್ದ ಎಲ್ಲ ನಿರ್ಬಂಧಗಳೂ ಹೋಗಿ ಈಗ ವಿದೇಶಿ ಬಂಡವಾಳದ ಓಲೈಕೆಗೆ ಸರಕಾರ ನಡೆಮುಡಿ ಕಟ್ಟಿನಿಂತಿದೆ. ಸ್ವಾವಲಂಬನೆ ಸಾಧನೆಯ ಗುರಿಯನ್ನು ಕೈಬಿಟ್ಟು ಮೂರು ದಶಕಗಳೇ ಕಳೆದಿವೆ. ಕಾರ್ಪೊರೇಟ್ ವಲಯದ ಬೆಳವಣಿಗೆಯಿಂದ ಭಾರತ ಎತ್ತ ಸಾಗುತ್ತಿದೆ ಎನ್ನುವುದನ್ನು ಕಾಣಬಹುದು. ೧೯೫೭ರಲ್ಲಿ ದೇಶ ಔದ್ಯೋಗೀಕರಣದತ್ತ ಹೆಜ್ಜೆ ಇರಿಸಿದಾಗ ೩೦ ಸಾವಿರ ರಿಜಿಸ್ಟರ್ಡ್ ಕಂಪೆನಿಗಳು ಕಾರ್ಯನಿರತವಾಗಿದ್ದುವು. ಅವುಗಳ ಒಟ್ಟು ಬಂಡವಾಳ ೧೦೭೮ ಕೋಟಿ ರೂ.ಗಳು. ೨೦೧೨ರ ವೇಳೆಗೆ ಕಾರ್ಪೊರೇಟ್ ಕಂಪೆನಿಗಳ ಸಂಖ್ಯೆ ೭೮೯೮೮ ಆಗಿವೆ. ಅವುಗಳ ಒಟ್ಟು ಬಂಡವಾಳ ೧೨೫೭೨೪೦ ಕೋಟಿ ರೂ.ಗಳಿಗೂ ಅಧಿಕ. ಕಾರ್ಪೊರೇಟ್ ಪ್ರಾಬಲ್ಯ ಎಷ್ಟರಮಟ್ಟಿಗೆ ದೇಶದ ರಾಜಕೀಯ ಬೆಳವಣಿಗೆಯ ಮೇಲೆ ಪ್ರಭಾವ ಬೀರಬಲ್ಲದು ಎನ್ನುವುದನ್ನು ೨೦೧೪ರ ಲೋಕಸಭಾ ಚುನಾವಣೆಗಳಲ್ಲಿ ಕಂಡಿದ್ದೇವೆ.

ರಾಜೀವ ಗಾಂಧಿ ಅಧಿಕಾರದಲ್ಲಿದ್ದಾಗಲೇ ಮಾಹಿತಿ ತಂತ್ರಜ್ಞಾನ ಕ್ಷೇತ್ರ ತೀವ್ರವಾದ ಪ್ರಗತಿಯನ್ನು ಸಾಧಿಸಿತ್ತು. ಸರಕಾರ ಕೂಡ ಕಂಪ್ಯೂಟರೀಕರಣಕ್ಕೆ ಆದ್ಯತೆ ನೀಡತೊಡಗಿತ್ತು. ಸೇವಾಕ್ಷೇತ್ರವಾಗಿ ಬಹುಬೇಗನೆ ವಿಸ್ತಾರಗೊಂಡ ಮಾಹಿತಿ ತಂತ್ರಜ್ಞಾನ ದಿಢೀರ್ ಶ್ರೀಮಂತರನ್ನು, ಅಧಿಕ ವೇತನ ಪಡೆಯುವ ಮಧ್ಯಮವರ್ಗವನ್ನು ಸೃಷ್ಟಿಸಿತು. ಮುಖ್ಯವಾಗಿ ತಾಂತ್ರಿಕ ಶಿಕ್ಷಣಕ್ಕೆ ಪ್ರಾಶಸ್ತ್ಯ ಬಂದಿತು. ದೇಶಾದ್ಯಂತ ಇಂಜಿನಿಯರಿಂಗ್ ಶಿಕ್ಷಣಕ್ಕೆ ಬೇಡಿಕೆ ಅಧಿಕಗೊಂಡಿತು ೧೯೮೦ರ ನಂತರದ ಕಾಲದಲ್ಲಿ. ಅಮೆರಿಕದ



ಕ್ಯಾಲಿಫೋರ್ನಿಯ ಸಿಲಿಕಾನ್ ಸಿಟಿ ಎನಿಸಿಕೊಂಡು ಬೆಳೆದರೆ ಭಾರತದಲ್ಲಿ ಬೆಂಗಳೂರು ಅದೇ ಖ್ಯಾತಿಯನ್ನು ಗಳಿಸಿತು. ಅಮೆರಿಕದ ಪ್ರಮುಖ ಮಾಹಿತಿ ತಂತ್ರಜ್ಞಾನ ಕಂಪೆನಿಗಳು ಬೆಂಗಳೂರು ಮತ್ತು ಇತರ ಪ್ರಮುಖ ನಗರಗಳಲ್ಲಿ ತಮ್ಮ ಕಚೇರಿಗಳನ್ನು ಸ್ಥಾಪಿಸಿದುವು. ಇನ್ಫೋಸಿಸ್, ವಿಪ್ರೋ, ಸತ್ಯಮ್ ಕಂಪ್ಯೂಟರ್ಸ್, ಟಾಟಾ ಕನ್ಸಲ್ಟೆನ್ಸಿ, ಹಿಂದುಸ್ತಾನ್ ಕಂಪ್ಯೂಟರ್ಸ್ ಮುಂತಾದ ಹಲವು ಕಂಪೆನಿಗಳು ತಲೆ ಎತ್ತಿದುವು. ಲಕ್ಷಗಟ್ಟಲೆ ಭಾರತೀಯರಿಗೆ ಉದ್ಯೋಗ ಕಲ್ಪಿಸಿಕೊಟ್ಟ ಈ ಕ್ಷೇತ್ರ, ಅಮೆರಿಕ ಮತ್ತು ಇತರ ಯೂರೋಪಿಯನ್ ದೇಶಗಳಲ್ಲೂ ಉದ್ಯೋಗ ಕಲ್ಪಿಸಿತು. ಉದಾಹರಣೆಗೆ ಈಗ ಅಮೆರಿಕದಲ್ಲಿ ಹೆಚ್ಚು ಕಡಿಮೆ ಮೂರೂವರೆ ದಶಲಕ್ಷ ಭಾರತೀಯರು ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರ ಪೈಕಿ ಬಹುಪಾಲು ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿದ್ದಾರೆ. ಅರವತ್ತರ ದಶಕದಲ್ಲಿ ಅಮೆರಿಕಕ್ಕೆ ವೈದ್ಯರು ವಲಸೆ ಹೋದರೆ, ಎಂಬತ್ತರ ನಂತರ ಸಾಫ್ಟ್‌ವೇರ್ ಇಂಜಿನಿಯರುಗಳ ಸರದಿ. ಅನಿವಾಸಿ ಭಾರತೀಯರೆಂಬ ಹೊಸಪೀಳಿಗೆ ಸೃಷ್ಟಿಯಾಗಿದೆ. ಕಳೆದ ಮೂವತ್ತು ವರ್ಷ ಗಳಲ್ಲಿ. ಇದರಿಂದ ಭಾರತಕ್ಕೆ ಸಾಕಷ್ಟು ವಿದೇಶಿ ವಿನಿಮಯವೂ ಲಭ್ಯವಾಗಿದೆ.

ರಾಜೀವ ಗಾಂಧಿ ಪ್ರಧಾನಿಯಾಗಿದ್ದಾಗಲೇ ಟೆಲಿಸಂಪರ್ಕವನ್ನು ಆಧುನೀಕರಿಸಿದ್ದು. ಅದು ಅವರ ಸಾಧನೆಗಳಲ್ಲಿ ಒಂದು. ಅವರು ಇಸ್ಲಾಮಿಕ್ ಮೂಲಭೂತವಾದಿಗಳಿಗೆ ಮಣಿದಂತೆಯೇ ಹಿಂದೂವಾದಿಗಳ ಒತ್ತಡಕ್ಕೂ ಮಣಿದುದು ಒಂದು ಕೆಟ್ಟ ಬೆಳವಣಿಗೆ. ಉತ್ತರ ಪ್ರದೇಶದ ಅಯೋಧ್ಯೆ ಯಲ್ಲಿರುವ ವಿವಾದಗ್ರಸ್ತ ಬಾಬ್ರಿಮಸೀದಿಯ ಗೇಟಿನ ಬೀಗ ತೆಗೆಸಿ ಅಲ್ಲಿ ಇರಿಸಲಾಗಿದ್ದ ಶ್ರೀರಾಮನ ವಿಗ್ರಹಕ್ಕೆ ಪೂಜಾ ಕೈಂಕರ್ಯ ಮಾಡಲು ಅನುವು ಮಾಡಿಕೊಟ್ಟಿದ್ದು ರಾಜೀವ ಗಾಂಧಿ ಆಡಳಿತಾವಧಿಯಲ್ಲೇ. ಹಿಂದುತ್ವವಾದಿಗಳ ಪ್ರಕಾರ ವಿವಾದಿತ ಸ್ಥಳ ಶ್ರೀರಾಮ ಜನಿಸಿದ ನೆಲ. ಮುಂದೆ ಈ ಪ್ರಕರಣ ಬೃಹದಾಕಾರವಾಗಿ ಬೆಳೆದು ಭಾರಿ ದುರಂತಕ್ಕೆ ಕಾರಣವಾಯಿತು. ಸಂಘಪರಿವಾರದ ಅಂಗಸಂಸ್ಥೆಗಳಲ್ಲೊಂದಾದ ವಿಶ್ವ ಹಿಂದೂ ಪರಿಷತ್ತು ಈ ಮೊದಲು ಬಾಬ್ರಿಮಸೀದಿಯಲ್ಲಿ ಇರಿಸಿದ್ದ ರಾಮನ ಪೂಜೆಗಾಗಿ ಬೃಹತ್ ಪ್ರದರ್ಶನ ನಡೆಸಿತ್ತು.



೧೯೮೯ರಲ್ಲಿ ನಡೆದ ಚುನಾವಣೆಗಳಲ್ಲಿ ಬಹುಮತ ಗಳಿಸದಿದ್ದರೂ ಅತಿ ದೊಡ್ಡ ಪಕ್ಷವಾಗಿ ಮುಂದಿದ್ದ ಕಾಂಗ್ರೆಸ್ ಸರಕಾರ ರಚಿಸದಿರಲು ತೀರ್ಮಾನಿಸಿತು. ಇದರಿಂದಾಗಿ ಎರಡನೇ ಬಾರಿಗೆ ಕಾಂಗ್ರೆಸ್ಸೇತರ ಸರಕಾರವೊಂದು ಅಸ್ತಿತ್ವಕ್ಕೆ ಬಂದಿತು. ೧೪೩ ಸ್ಥಾನಗಳನ್ನು ಗಳಿಸಿದ್ದ ರಾಷ್ಟ್ರೀಯ ರಂಗಕ್ಕೆ ೮೫ ಸ್ಥಾನಗಳನ್ನು ಪಡೆದಿದ್ದ ಭಾಜಪ ಹಾಗೂ ೫೨ ಸ್ಥಾನಗಳನ್ನು ಹೊಂದಿದ್ದ ಎಡಪಕ್ಷಗಳೂ ಬೆಂಬಲ ನೀಡಲು ಮುಂದಾದುವು. ಹಾಗಾಗಿ ವಿ. ಪಿ. ಸಿಂಗ್ ನೇತೃತ್ವದಲ್ಲಿ ರಾಷ್ಟ್ರೀಯರಂಗದ ಸರಕಾರ ಅಸ್ತಿತ್ವಕ್ಕೆ ಬಂದಿತು. ಈ ಆಯ್ಕೆ ಒಮ್ಮತವಾಗೇನೂ ಇರಲಿಲ್ಲ. ಪ್ರಧಾನಿ ಆಕಾಂಕ್ಷಿಗಳಲ್ಲಿ ಒಬ್ಬರಾಗಿದ್ದ, ಒಂದು ಕಾಲದಲ್ಲಿ ಕಾಂಗ್ರೆಸ್ಸಿನಲ್ಲಿ ಸಕ್ರಿಯ ಪ್ರಗತಿಪರರ ಗುಂಪಿನ ನಾಯಕನೆಂದು ಗುರ್ತಿಸಲ್ಪಟ್ಟಿದ್ದ ಚಂದ್ರಶೇಖರ್ ವಿ. ಪಿ. ಸಿಂಗರ ಬದ್ಧ ವಿರೋಧಿಯಾಗಿದ್ದರು. ಹರಿಯಾಣದ ನಾಯಕ ದೇವಿಲಾಲ್ ಉಪ ಪ್ರಧಾನಿ ಪಟ್ಟಕ್ಕಾಗಿ ಪಟ್ಟು ಹಿಡಿದಿದ್ದರು. ಸಂಪುಟದ ಸದಸ್ಯರು ಪ್ರಮಾಣವಚನ ಸ್ವೀಕರಿಸಿದಾಗಲೇ ಅಪನಂಬಿಕೆಯ ಅಪಸ್ವರ ಕಾಣಿಸಿಕೊಂಡಿತ್ತು. ದೇವಿಲಾಲ್ ರಾಷ್ಟ್ರಪತಿಯವರ ಆದೇಶವನ್ನು ಕಡೆಗಣಿಸಿ ಉಪ ಪ್ರಧಾನಿ ಎಂದು ಹೇಳಿಕೊಂಡು ಪ್ರಮಾಣವಚನ ಸ್ವೀಕರಿಸಿದರು. ಸಂವಿಧಾನದ ಪ್ರಕಾರ ಸಂಪುಟದ ಸಚಿವರುಗಳು ಸಚಿವರು ಎಂದಷ್ಟೇ ಹೇಳಿ ಪ್ರಮಾಣವಚನ ಸ್ವೀಕರಿಸುತ್ತಾರೆ. ಉಪ ಪ್ರಧಾನಿ ನೇಮಕಾತಿ ಪ್ರಧಾನ ಮಂತ್ರಿಗೆ ಬಿಟ್ಟ ವಿಷಯ. ೧೯೮೯ರ ಡಿಸೆಂಬರ್ ೨ರಂದು ಪ್ರಧಾನಿಯಾಗಿ ಅಧಿಕಾರಕ್ಕೆ ಬಂದ ವಿ. ಪಿ. ಸಿಂಗ್ ಅಧಿಕಾರದಲ್ಲಿದ್ದುದು ಅಲ್ಪಕಾಲ, ಹನ್ನೊಂದು ತಿಂಗಳು ಮಾತ್ರ.

ಪಂಜಾಬಿನ ಸ್ವರ್ಣಮಂದಿರಕ್ಕೆ ಭೇಟಿ ನೀಡಿ ಸಿಖ್ಖರ ಮನವೊಲಿಕೆಗೆ ಮಾಡಿದ ಪ್ರಯತ್ನದಿಂದ ಪ್ರಾರಂಭವಾದ ಸಿಂಗ್ ಆಡಳಿತ ಕಾಶ್ಮೀರದ ವ್ಯವಹಾರದಲ್ಲಿ ತಲೆಹಾಕಿ ಕೈ ಸುಟ್ಟುಕೊಂಡಿತಾದರೆ, ಜಾತೀಯವಾದಿ ಭಾವನೆಗಳನ್ನು ಕೆದಕಿದ ಮಂಡಲ್ ಕಮಿಶನ್ ವರದಿಯನ್ನು ಕಾರ್ಯಗತ ಮಾಡಲು ಹೋಗಿ ಅಧಿಕಾರವನ್ನೇ ಕಳೆದುಕೊಂಡಿತು. ಪ್ರಧಾನಿಯಾಗಿ ಪಂಜಾಬಿಗೆ ನೀಡಿದ ಭೇಟಿಯಿಂದ ರಾಜಕೀಯವಾಗಿ ಹೆಚ್ಚಿನ ಪ್ರಯೋಜನ ಏನಾಗಲಿಲ್ಲ. ಕಾಶ್ಮೀರ ವ್ಯವಹಾರಗಳನ್ನು ಪರಿಶೀಲಿಸಲು ಜಾರ್ಜ್ ಫರ್ನಾಂಡಿಸ್ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಿದರೂ ಅದು ಕಾರ್ಯ ನಿರ್ವಹಿಸಲು ಸಾಧ್ಯವಾಗಲಿಲ್ಲ ಸಚಿವರುಗಳ ಕಿತಾಪತಿಯಿಂದ. ಆಗ ಕಾಶ್ಮೀರದ ಮುಖ್ಯಮಂತ್ರಿಯಾಗಿದ್ದುದು ಫರೂಕ್ ಅಬ್ದುಲ್ಲಾ. ಪ್ರಧಾನಿ ವಿ. ಪಿ. ಸಿಂಗ್ ಯಾರ ಜೊತೆಯೂ ಸಮಾಲೋಚನೆ ನಡೆಸದೆ ಜಗಮೋಹನ್ ಎಂಬುವರನ್ನು ಕಾಶ್ಮೀರದ ರಾಜ್ಯಪಾಲರಾಗಿ ನೇಮಕ ಮಾಡಿದರು. ಈತ ೧೯೮೪ರಲ್ಲಿ ಫರೂಕ್ ಅಬ್ದುಲ್ಲಾ ಸರಕಾರದ ಪತನಕ್ಕೆ ಕಾರಣರಾಗಿದ್ದರು. ಇವರ ನೇಮಕವನ್ನು ವಿರೋಧಿಸಿದ ಫರೂಕ್ ಅಬ್ದುಲ್ಲಾ ರಾಜೀನಾಮೆ ನೀಡಿದರು. ರಾಜ್ಯಪಾಲ ಜಗಮೋಹನ್ ಒಡನೆಯೇ ಕಾಶ್ಮೀರದ ವಿಧಾನಸಭೆಯನ್ನು ವಿಸರ್ಜಿಸಿ ರಾಜ್ಯವನ್ನು ರಾಷ್ಟ್ರಪತಿ ಆಳ್ವಿಕೆಗೆ ಒಳಪಡಿಸಿದರು. ಆತನನ್ನು ಹಿಂದಕ್ಕೆ ಕರೆಸಿಕೊಂಡ ಸಿಂಗ್ ಅವರನ್ನು ರಾಜ್ಯಸಭೆಗೆ ನಾಮಕರಣ ಮಾಡಿದರು. ಈ ಬೆಳವಣಿಗೆಗಳು ಪಕ್ಷದಲ್ಲಿ ಹಾಗೂ ಸಂಪುಟದಲ್ಲಿ ವಿರಸವನ್ನು ಮತ್ತಷ್ಟು ಉಲ್ಬಣಗೊಳಿಸಿತು. ಹರ್ಯಾಣಾದ ಹಲವು ಬೆಳವಣಿಗೆಗಳಿಂದಾಗಿ ಪ್ರಧಾನಿ ವಿ. ಪಿ. ಸಿಂಗ್ ೧೯೯೦ರ ಆಗಸ್ಟ್ ೧ರಂದು ದೇವಿಲಾಲ್ ಅವರನ್ನು ಸಂಪುಟದಿಂದ ವಜಾ ಮಾಡಿದರು. ಇದನ್ನು ಪ್ರತಿಭಟಿಸಿದ ದೇವಿಲಾಲ್ ಆಗಸ್ಟ್ ೯ರಂದು ದೆಹಲಿಯಲ್ಲಿ ಬೃಹತ್ ರ್‍ಯಾಲಿ ನಡೆಸಿ ತಮ್ಮ ಶಕ್ತಿ ಪ್ರದರ್ಶಿಸಿದರು. ಈ ಎಲ್ಲ ಬೆಳವಣಿಗೆಗಳ ಬೆನ್ನಲ್ಲೇ ಜನರ ಗಮನವನ್ನು ವಿಮುಖಗೊಳಿಸಲು, ಹಿಂದುಳಿದ ವರ್ಗಗಳನ್ನು ತೃಪ್ತಿಗೊಳಿಸಲು ಅತ್ಯಂತ ವಿವಾದಾತ್ಮಕವಾದ ಮಂಡಲ್ ಆಯೋಗದ ವರದಿಯನ್ನು ಅನುಷ್ಠಾನ ಗೊಳಿಸಲು ಸರಕಾರದ ತೀರ್ಮಾನವನ್ನು ಆಗಸ್ಟ್ ೭ರಂದು ಪಾರ್ಲಿಮೆಂಟಿನಲ್ಲಿ ಪ್ರಧಾನಿ ಸಿಂಗ್ ಪ್ರಕಟಿಸಿದರು. ೧೯೭೭–೭೯ರಲ್ಲಿ ಜನತಾ ಸರಕಾರ ಅಧಿಕಾರ ದಲ್ಲಿದ್ದಾಗ ರಚಿತವಾಗಿದ್ದ ಮಂಡಲ್ ಆಯೋಗ ಹಿಂದುಳಿದ ವರ್ಗಗಳಿಗೆ ಸರಕಾರದಲ್ಲಿ, ಸಾರ್ವಜನಿಕ ಉದ್ಯಮಗಳಲ್ಲಿ ಉದ್ಯೋಗದ ಮೀಸಲಾತಿ

ಪ್ರಮಾಣವನ್ನು ಮತ್ತಷ್ಟು ಹೆಚ್ಚಿಸಲು ಶಿಫಾರಸು ಮಾಡಿತ್ತು. ಇದಕ್ಕೆ ಮೊದಲು ಪರಿಶಿಷ್ಟ ಜಾತಿಗಳು, ಅಂದರೆ ದಲಿತರು ಮತ್ತು ಪರಿಶಿಷ್ಟ ಬುಡಕಟ್ಟುಗಳವರಿಗೆ ಶೇಕಡ ೨೨.೫ರಷ್ಟು ಮೀಸಲಾತಿ ಜಾರಿಯಲ್ಲಿತ್ತು. ಮಂಡಲ್ ಸಮಿತಿ ಹಿಂದುಳಿದ ಜಾತಿಗಳಿಗೆ ಶೇಕಡ ೨೭ರಷ್ಟು ಮೀಸಲಾತಿ ನೀಡಬೇಕೆಂದು ಹೇಳಿತು. ಅಂದರೆ ಒಟ್ಟು ಮೀಸಲಾತಿ ಪ್ರಮಾಣವು ಶೇಕಡ ೪೯.೫ರಷ್ಟು ಆಗಲಿತ್ತು. ಈ ವರದಿಯನ್ನು ಕಾಂಗ್ರೆಸ್ ಆಡಳಿತ ಸಂಪೂರ್ಣವಾಗಿ ಕಡೆಗಣಿಸಿತ್ತು. ಮಂಡಲ್ ಆಯೋಗದ ಶಿಫಾರಸುಗಳನ್ನು ಜಾರಿಗೊಳಿಸುವ ಸಿಂಗ್ ಸರಕಾರದ ನಿರ್ಧಾರವು ದೇಶಾದ್ಯಂತ ಸಾಕಷ್ಟು ವಿವಾದವನ್ನು ಹುಟ್ಟುಹಾಕಿತು. ವಿವಿಧ ಜನ ವಿಭಾಗಗಳಿಂದ ತೀವ್ರವಾದ ವಿರೋಧ ಪ್ರಕಟವಾಯಿತು. ವಿ. ಪಿ. ಸಿಂಗ್ ತಮ್ಮ ಆಪ್ತರನ್ನೂ, ಅಂದರೆ ಬಿಜುಪಟ್ನಾಯಕ್, ರಾಮಕೃಷ್ಣ ಹೆಗಡೆ, ಯಶವಂತ ಸಿನ್ಹಾ, ಅರುಣ್ ನೆಹರೂ ಮುಂತಾದವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ, ಸಮಾಲೋಚನೆ ನಡೆಸದೆ ಏಕಾಏಕಿಯಾಗಿ ನಿರ್ಧಾರವನ್ನು ಪ್ರಕಟಿಸಿದ್ದರು. ಸರಕಾರಕ್ಕೆ ಬಾಹ್ಯ ಬೆಂಬಲ ನೀಡಿದ್ದ ಭಾಜಪ ಹಾಗೂ ಎಡಪಕ್ಷಗಳಿಗೂ ಈ ಬಗ್ಗೆ ಯಾವ ಸುಳಿವೂ ಇರಲಿಲ್ಲ. ಮೀಸಲಾತಿ ಪ್ರಮಾಣವನ್ನು ಹೆಚ್ಚಿಸುವ ಮಂಡಲ್ ಆಯೋಗದ ಶಿಫಾರಸ್ಸುಗಳ ವಿರುದ್ಧ ದೇಶಾದ್ಯಂತ ದೊಡ್ಡ ಆಂದೋಲನವೇ ಪ್ರಾರಂಭವಾಯಿತು. ಮುಖ್ಯವಾಗಿ ವಿದ್ಯಾರ್ಥಿಗಳು ಸರಕಾರದ ತೀರ್ಮಾನದ ವಿರುದ್ಧ ಬಂಡೆದ್ದಿದ್ದರು. ಹಾಗಾಗಿ ವಿ. ಪಿ. ಸಿಂಗ್ ಸರಕಾರದ ಪತನಕ್ಕೆ ಈ ವರದಿಯೇ ಕಾರಣವಾಯಿತು. ೧೯೯೦ರ ಅಕ್ಟೋಬರ್ ೧ರಂದು ಸರ್ವೋಚ್ಚ ನ್ಯಾಯಾಲಯ ಮಂಡಲ್ ಆಯೋಗದ ಶಿಫಾರಸ್ಸುಗಳನ್ನು ಕಾರ್ಯಗತಗೊಳಿಸುವ ಕೇಂದ್ರ ಸರಕಾರದ ನಿರ್ಧಾರಕ್ಕೆ ತಡೆಯಾಜ್ಞೆ ನೀಡಿತು. ಈ ಮಧ್ಯೆ ಜನತಾ ಪರಿವಾರದಲ್ಲಿ ಬಿಕ್ಕಟ್ಟು ಉಲ್ಬಣಿಸಿತ್ತು. ಐವತ್ತೆಂಟು ಸದಸ್ಯರು ಪಕ್ಷದಿಂದ ಹೊರನಡೆದು ನವೆಂಬರ್ ೫ರಂದು ಚಂದ್ರಶೇಖರ್ ಅವರನ್ನು ತಮ್ಮ ನಾಯಕನನ್ನಾಗಿ ಆಯ್ಕೆ ಮಾಡಿದರು. ಅನಿವಾರ್ಯವಾಗಿ ವಿ. ಪಿ. ಸಿಂಗ್ ಸರಕಾರ ನವೆಂಬರ್ ೭ರಂದು ರಾಜೀನಾಮೆ ನೀಡಿತು. ಈ ಬಗೆಯಲ್ಲಿ ಕಾಂಗ್ರೆಸ್ಸೇತರ ಸರಕಾರದ ಎರಡನೇ ಪ್ರಯತ್ನವೂ ವಿಫಲಗೊಂಡಿತು.



ವಿ. ಪಿ. ಸಿಂಗ್

ಇಂಥ ಸನ್ನಿವೇಶಗಳಲ್ಲಿ ಕಾಂಗ್ರೆಸ್ ಸಂಚು ರೂಪಿಸುವುದರಲ್ಲಿ ತನ್ನ ಜಾಣಾಕ್ಷತನ ತೋರಿಸುತ್ತದೆ. ಮೊದಲ ಜನತಾ ಸರಕಾರದ ವಿರುದ್ಧ ಬಳಸಿದ ತಂತ್ರವನ್ನೇ ಅದು ಈಗಲೂ ಬಳಸಿತು. ವಿ. ಪಿ. ಸಿಂಗ್ ಸರಕಾರ ಪತನಗೊಂಡನಂತರ ಚಂದ್ರಶೇಖರ್ ಗುಂಪಿಗೆ ಬೆಂಬಲ ನೀಡಲು ಕಾಂಗ್ರೆಸ್ ನಿರ್ಧರಿಸಿತು. ೧೯೯೦ರ ನವೆಂಬರ್ ತಿಂಗಳ ೧೦ರಂದು ಚಂದ್ರಶೇಖರ್ ಪ್ರಧಾನಿಯಾಗಿ ಸಂಪುಟ ರಚಿಸಿದರು. ಈ ಸರಕಾರ ಅಧಿಕಾರದಲ್ಲಿದ್ದುದು ಕೇವಲ ಏಳು ತಿಂಗಳುಗಳು ಮಾತ್ರ. ೧೯೯೧ರ ಮಾರ್ಚ್ ೫ರಂದು ಕಾಂಗ್ರೆಸ್ ಕ್ಷುಲ್ಲಕವಾದ ಸಬೂಬು ಹೇಳಿ ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂತೆಗೆದುಕೊಂಡಿತು. ಅಸ್ಥಿರತೆ ಕೊನೆಗಾಣಿಸಲು ಮೇ ತಿಂಗಳಲ್ಲಿ ಲೋಕಸಭೆಗೆ ಮತ್ತೆ ಚುನಾವಣೆ ನಡೆಸಲು ಆದೇಶ ನೀಡಲಾಯಿತು. ಈ ಚುನಾವಣೆಗಳ ಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡಿದ್ದಾಗಲೆ ಮಾಜಿ ಪ್ರಧಾನಿ ಕಾಂಗ್ರೆಸ್ ನಾಯಕ ರಾಜೀವ ಗಾಂಧಿಯವರ ಹತ್ಯೆ ಆದದ್ದು. ಹಾಗಾಗಿ ಅನುಕಂಪದ ಅಲೆಯ ಮೇಲೆ ಈ ಚುನಾವಣೆಗಳಲ್ಲಿ ಕಾಂಗ್ರೆಸ್ ಬಹುಮತ ಗಳಿಸದೇ ಹೋದರೂ ೨೩೨ ಸ್ಥಾನಗಳನ್ನು ಪಡೆದುಕೊಂಡು ಸರಕಾರ ರಚನೆಗೆ ಮುಂದಾಯಿತು. ಆಂಧ್ರಪ್ರದೇಶದ ಮಾಜಿ ಮುಖ್ಯಮಂತ್ರಿ, ಕಾಂಗ್ರೆಸ್ಸಿನ ಹಿರಿಯ ನಾಯಕ ಪಿ. ವಿ. ನರಸಿಂಹರಾವ್ ಪ್ರಧಾನ ಮಂತ್ರಿಯಾಗಿ ೧೯೯೧ರ ಜೂನ್ ೨೧ರಂದು ಅಧಿಕಾರ ವಹಿಸಿಕೊಂಡರು. ಅಸ್ತಿತ್ವಕ್ಕೆ ಬಂದ ಈ ಅಲ್ಪಸಂಖ್ಯಾತ ಕಾಂಗ್ರೆಸ್ ಸರಕಾರ ಐದು ವರ್ಷದ ಅಧಿಕಾರಾವಧಿಯನ್ನು ಪೂರೈಸಿದ್ದು ವಿಶೇಷ. ಮೊದಲ ಬಾರಿಗೆ ದಕ್ಷಿಣ ಭಾರತದ ವ್ಯಕ್ತಿಯೊಬ್ಬರು ಸ್ವತಂತ್ರ ಭಾರತದ ಪ್ರಧಾನಿಯಾದರು. ಈ ಐದು ವರ್ಷಗಳನ್ನು ಭಾರತದ ರಾಜಕೀಯ, ಆರ್ಥಿಕ ಬೆಳವಣಿಗೆಗಳ ಪರ್ವಕಾಲ ಎನ್ನಬಹುದು. ಜಾಗತೀಕರಣ, ಉದಾರೀಕರಣ, ವಿದೇಶಿ ಬಂಡವಾಳದ ವ್ಯಾಮೋಹ ಪ್ರಾರಂಭವಾದದ್ದು ಈ ಅವಧಿಯಲ್ಲೇ. ಅದಲ್ಲದೆ ಹಿಂದುತ್ವವಾದಿಗಳ ಪ್ರಾಬಲ್ಯ ಅಧಿಕಗೊಂಡಿದ್ದು, ಬಾಬ್ರಿಮಸೀದಿ ಧ್ವಂಸಗೊಂಡಿದ್ದು ಆಗಲೆ. ಭಾರತದಲ್ಲಿ ಒಂದೇ ಪಕ್ಷದ ಆಳ್ವಿಕೆ ಅಂತ್ಯಗೊಂಡಿದ್ದೂ ಕೂಡ ಆಗಲೆ.

ಎರಡು ವರ್ಷಗಳ ಅನಿಶ್ಚಿತತೆ, ವಿ. ಪಿ. ಸಿಂಗ್ ಸರಕಾರ ಮಂಡಲ್ ಆಯೋಗದ ಶಿಫಾರಸ್ಸುಗಳನ್ನು ಜಾರಿಗೆ ತರುವ ಪ್ರಯತ್ನದಲ್ಲಿ ಸೃಷ್ಟಿಸಿದ ಗೊಂದಲ ಹಾಗೂ ಇತರ ಬೆಳವಣಿಗೆಗಳನ್ನು ತನ್ನ ಅನುಕೂಲಕ್ಕಾಗಿ ಉಪಯೋಗಿಸಿಕೊಂಡಿದ್ದು ಹಿಂದುತ್ವವಾದಿ ಭಾಜಪ ಮಾತ್ರ. ವಿ. ಪಿ. ಸಿಂಗ್ ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂತೆಗೆದುಕೊಳ್ಳುವುದಾಗಿ ಬೆದರಿಕೆ ಹಾಕುತ್ತಿದ್ದ ಭಾಜಪ ಅಯೋಧ್ಯಾದ ಬಾಬ್ರಿಮಸೀದಿ ಪ್ರದೇಶ ರಾಮಜನ್ಮಭೂಮಿಯಾದ್ದರಿಂದ ಅಲ್ಲಿ ರಾಮಮಂದಿರ ನಿರ್ಮಿಸುವುದಾಗಿ ಪ್ರಕಟಿಸಿತು. ಸಂಘಪರಿವಾರದ ಸಂಸ್ಥೆಗಳು ಅದನ್ನು ಒಂದು ಆಂದೋಲನವಾಗಿ ಸಂಘಟಿಸಲು ಸಿದ್ಧತೆ ನಡೆಸತೊಡಗಿದುವು. ಸುಮಾರು ನಾಲ್ಕುನೂರು ವರ್ಷಗಳ ಹಿಂದೆ ಮೊಘಲರ ಆಡಳಿತದ ಕಾಲ ನಿರ್ಮಾಣಗೊಂಡ ಈ ಬಾಬ್ರಿಮಸೀದಿ ಸ್ಥಳದಲ್ಲಿ ರಾಮಮಂದಿರ ಇತ್ತು. ಅದು ಶ್ರೀರಾಮನ ಜನ್ಮಸ್ಥಳ. ಅಲ್ಲಿದ್ದ ಮಂದಿರವನ್ನು ನೆಲಸಮ ಮಾಡಿ ಮಸೀದಿ ನಿರ್ಮಿಸಲಾಯಿತು ಎನ್ನುವುದು ಹಿಂದುತ್ವವಾದಿಗಳ ಅಭಿಮತ. ಅಂಥದ್ದೇನೂ ಅಲ್ಲಿರಲಿಲ್ಲ. ಅದು ಮುಸಲ್ಮಾನರಿಗೆ ಪವಿತ್ರವಾದ ಮಸೀದಿ ಮೊಘಲರ ಕಾಲದಿಂದ ಎನ್ನುವುದು ಪ್ರತಿವಾದ. ಈ ವಿವಾದ ಬ್ರಿಟಿಷ್ ಆಳ್ವಿಕೆಯ ಕಾಲದಲ್ಲೇ ಇತ್ತಾದರೂ ಹೆಚ್ಚು ಗಮನ ಸೆಳೆದಿರಲಿಲ್ಲ. ವಿವಾದಾತ್ಮಕವಾದ ಈ ಮಸೀದಿಯ ಆವರಣಕ್ಕೆ ಪ್ರವೇಶವಿಲ್ಲದಂತೆ ತಡೆಯಲು ಬೀಗ ಹಾಕಲಾಗಿತ್ತು. ೧೯೪೯ರಲ್ಲಿ ಒಂದು ರಾತ್ರೆ ಹಿಂದುತ್ವವಾದಿಯೊಬ್ಬ ಕಳ್ಳತನದಿಂದ ಗೋಡೆ ಹಾರಿ ಅಲ್ಲಿ ಶ್ರೀರಾಮನ ವಿಗ್ರಹವೊಂದನ್ನು ಪ್ರತಿಷ್ಠಾಪಿಸಿದ. ಈ ಬೆಳವಣಿಗೆಯ ವರದಿಯನ್ನು ಪರಿಗಣಿಸಿದ ಅಂದಿನ ಭಾರತ ಸರಕಾರದ ಗೃಹಮಂತ್ರಿ ಸರ್ದಾರ್ ವಲ್ಲಭಭಾಯಿ ಪಟೇಲ್ ಪುತ್ಥಳಿಯನ್ನು ಅಲ್ಲಿಂದ ತೆಗೆದುಹಾಕುವಂತೆ ಉತ್ತರಪ್ರದೇಶದ ಸರಕಾರಕ್ಕೆ ಆದೇಶ ನೀಡಿದರು. ಆಗ ಉತ್ತರ ಪ್ರದೇಶದ ಮುಖ್ಯಮಂತ್ರಿ ಗೋವಿಂದ ವಲ್ಲಭ ಪಂತ್, ಗೃಹ ಸಚಿವರು



ಚಂದ್ರಶೇಖರ್

ಲಾಲ್ ಬಹದ್ದೂರ್ ಶಾಸ್ತ್ರಿ. ಅಯೋಧ್ಯೆಯ ಜಿಲ್ಲಾ ಮ್ಯಾಜಿಸ್ಟ್ರೇಟ್ ಹಾಗೇನಾದರೂ ಪುತ್ಥಳಿಯನ್ನು ತೆಗೆದುಹಾಕಿದರೆ, ಹಿಂದೂಗಳಿಂದ ಉಗ್ರ ಪ್ರತಿಭಟನೆ ಬರುವುದರಿಂದ ಕಾನೂನು ಸುವ್ಯವಸ್ಥೆ ಕಾಪಾಡುವುದು ಸಮಸ್ಯೆಯಾದೀತೆಂದು ವರದಿ ಮಾಡಿದರೂ ಏನೂ ಕ್ರಮಕೈಗೊಳ್ಳಲಿಲ್ಲ. ಆಗ ನ್ಯಾಯಾಲಯದ ಮೆಟ್ಟಿಲೇರಿದ ಈ ವಿವಾದ ಇನ್ನೂ ಇತ್ಯರ್ಥವಾಗಿಲ್ಲ. ಹಿಂದುತ್ವವಾದಿಗಳು ಪ್ರಬಲಗೊಂಡಂತೆ, ಸಂಘಪರಿವಾರ ಬೆಳೆದಂತೆ ಈ ವಿವಾದ ತೀವ್ರಗೊಂಡಿತು. ರಾಮಜನ್ಮಭೂಮಿಯ ಪ್ರಶ್ನೆ ಆರೆಸ್ಸೆಸ್‌ನ ಪ್ರಧಾನ ಗುರಿಯಾಯಿತು. ಅದರ ರಾಜಕೀಯ ಮುಖವಾಡ ಭಾಜಪಗೆ ಅಯೋಧ್ಯೆಯಲ್ಲಿ ರಾಮಮಂದಿರದ ನಿರ್ಮಾಣ ಪ್ರಮುಖ ಕಾರ್ಯಕ್ರಮ ವಾಯಿತು. ಕೇಂದ್ರ ಸರಕಾರದ ದೌರ್ಬಲ್ಯವನ್ನು, ಅಸ್ಥಿರತೆಯನ್ನು ಚೆನ್ನಾಗಿ ಲೆಕ್ಕ ಹಾಕಿದ ಭಾಜಪ ಬೃಹತ್ ಆಂದೋಳನವನ್ನು ನಡೆಸಲು ಸಿದ್ಧತೆ ನಡೆಸಿತು. ಅದರ ಪರಿಣಾಮವೇ ಲಾಲಕೃಷ್ಣ ಆದ್ವಾನಿಯವರ ರಥಯಾತ್ರೆ.

ವಿ. ಪಿ. ಸಿಂಗ್ ಸರಕಾರದ ಪತನ ಸನ್ನಿಹಿತವಾದ ಸಂದರ್ಭವನ್ನು ಉಪಯೋಗಿಸಿಕೊಂಡು ಭಾಜಪ ನಾಯಕ ಆದ್ವಾನಿ ೧೯೯೦ರ ಸೆಪ್ಟೆಂಬರ್ ೨೫ರಂದು ಅಯೋಧ್ಯೆಯ ಬಾಬ್ರಿಮಸೀದಿ ಸ್ಥಳದಲ್ಲಿ ರಾಮಮಂದಿರದ ಶಿಲಾನ್ಯಾಸ ನೆರವೇರಿಸಲು ೬೦೦೦ ಮೈಲಿ ರಥಯಾತ್ರೆ ಪ್ರಾರಂಭಿಸಿದರು. ಗುಜರಾತಿನ ಸೋಮನಾಥದಿಂದ ಆರಂಭಗೊಂಡ ಈ ರಥಯಾತ್ರೆ ಅಯೋಧ್ಯೆ ತಲುಪಲಿಲ್ಲ. ಅಕ್ಟೋಬರ್ ೨೩ರಂದು ಬಿಹಾರದ ಸಮಸ್ತಿಪುರದಲ್ಲಿ ಆದ್ವಾನಿಯವರ ಬಂಧನದಿಂದಾಗಿ ಮಧ್ಯದಲ್ಲೇ ಅಂತ್ಯಗೊಂಡಿತು. ಆದರೆ ಆದ್ವಾನಿಯವರ ಹಾಗೂ ಸಂಘಪರಿವಾರದ ಉದ್ದೇಶ ಸಫಲಗೊಂಡಿತು. ದೇಶಾದ್ಯಂತ ರಥಯಾತ್ರೆಗೆ, ರಾಮಜನ್ಮಭೂಮಿ ವಿಚಾರಕ್ಕೆ ಸಾಕಷ್ಟು ಪ್ರಚಾರ, ಕಟ್ಟಡ ಸಾಮಗ್ರಿ ಹಾಗೂ ಕೋಟಿಗಟ್ಟಳೆ ಹಣ ಸಂಗ್ರಹವಾಯಿತು. ಈ ಪ್ರಚಾರ ಮುಂದೆ ಭಾಜಪ ನೇತೃತ್ವದಲ್ಲಿ ಕೇಂದ್ರದಲ್ಲಿ ಅಧಿಕಾರ ಗ್ರಹಣಕ್ಕೆ ನೆರವಾಯಿತು. ದಕ್ಷಿಣ ಭಾರತದ ರಾಜ್ಯಗಳಲ್ಲಿ ಕೂಡ ಹಿಂದುತ್ವವಾದಿಗಳು ನೆಲೆ ಕಂಡು ಕೊಳ್ಳಲು ಸಹಾಯಕವಾಯಿತು. ರಥಯಾತ್ರೆ ದೇಶದಲ್ಲಿ ಮತೀಯವಾದಿ




ಪ್ರಚೋದನೆಯನ್ನು ಉತ್ತುಂಗಕ್ಕೆ ಒಯ್ದಿತು. ಆದ್ವಾನಿಯವರ ಬಂಧನ ಮತ್ತು ಶಿಲಾನ್ಯಾಸಕ್ಕೆ ಅನುಮತಿ ದೊರಕದ್ದರಿಂದ ದೇಶದಲ್ಲಿ ಹಲವು ಕಡೆ ದಾಂಧಲೆಗಳಾಗಿ, ಮತೀಯ ಘರ್ಷಣೆಗಳಿಗೆ ಎಡೆಕೊಟ್ಟಿತು. ಆಗ ಸಂಭವಿಸಿದ ಘರ್ಷಣೆಗಳಲ್ಲಿ, ಪೊಲೀಸರ ಕಾರ್ಯಾಚರಣೆಯಲ್ಲಿ ಹಲವು ಮಂದಿ ಸಾವಿಗೀಡಾದರು. ಒಟ್ಟಿನಲ್ಲಿ ಈ ರಾಮಜನ್ಮಭೂಮಿ ಪ್ರಕರಣ ಹಿಂದುತ್ವ ವಾದಿಗಳ ಪ್ರಾಬಲ್ಯವನ್ನು ಸಾಕಷ್ಟು ವರ್ಧಿಸಿತು. ಮುಂದೆ ೧೯೯೨ರಲ್ಲಿ ಬಾಬ್ರಿಮಸೀದಿ ಧ್ವಂಸಕ್ಕೂ ಈ ರಥಯಾತ್ರೆ ನಾಂದಿಯಾಯಿತು. ಈಗಲೂ ರಾಮಮಂದಿರ ನಿರ್ಮಾಣ ಭಾಜಪದ ಮುಖ್ಯ ಅಜೆಂಡಾಗಳಲ್ಲಿ ಒಂದು.

***(ಮುಂದುವರಿಯುವುದು)***

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




# ಡಾ|| ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು




9 ಮತ್ತು 10ನೇ ಮಹಡಿ, ವಿಶ್ವೇಶ್ವರಯ್ಯ ಚಿಕ್ಕಗೋಪುರ
ಡಾ|| ಅಂಬೇಡ್ಕರ್ ವೀದಿ, ಬೆಂಗಳೂರು-560 001. e-mail address:mdadcl2011@gmail.com



ಡಾ|| ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮವು ಪರಿಶಿಷ್ಟ ಜಾತಿಯ ಜನಾಂಗದವರನ್ನು ಬಡತನ ರೇಖೆಯಿಂದ ಮೇಲೆ ತರುವ ಏಕೈಕ ಉದ್ದೇಶದಿಂದ ಕರ್ನಾಟಕ ಸರ್ಕಾರವು ಆಯವ್ಯಯದಲ್ಲಿ ನಿಗದಿಪಡಿಸುವ ಅನುದಾನದೊಂದಿಗೆ ರಾಷ್ಟ್ರೀಯ ಹಣಕಾಸು ನಿಗಮಗಳ ಸಹಯೋಗದೊಂದಿಗೆ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಾ ಬಂದಿರುತ್ತದೆ.


ಸನ್ಮಾನ್ಯ ಶ್ರೀ ಸಿದ್ದರಾಮಯ್ಯ
ಮುಖ್ಯಮಂತ್ರಿಗಳು


ಸನ್ಮಾನ್ಯ ಶ್ರೀ ಆಂಜನೇಯ
ಸಮಾಜ ಕಲ್ಯಾಣ ಸಚಿವರು


ಕುಮಾರಿ ಮಲ್ಲಾಜಮ್ಮ
ಅಧ್ಯಕ್ಷರು, ಡಾ|| ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ








ಪ್ರಕಟಣೆ:
ಶ್ರೀ ಕೆ. ಸಿ. ಶ್ರೀರಾಮಯ್ಯ, ಕ.ಆ.ಸೇ.,
ವ್ಯವಸ್ಥಾಪಕ ನಿರ್ದೇಶಕರು.

**ಸ್ವಯಂ ಉದ್ಯೋಗ ಯೋಜನೆ:** (ಅ) ಪರಿಶಿಷ್ಟ ಜಾತಿಯ ನಿರುದ್ಯೋಗಿಗಳು ಸ್ವಾವಲಂಬಿಗಳಾಗಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲವಾಗುವಂತೆ ನಿಗಮವು ಈ ಕೆಳಕಂಡಂತೆ ಸಾಲಸೌಲಭ್ಯಗಳನ್ನು ಒದಗಿಸುತ್ತಿದೆ. (ಆ) ರೂ.1.00.000/-ದೊಳಗಿನ ಘಟಕ ವೆಚ್ಚಕ್ಕೆ ನಿಗಮದಿಂದ ಶೇ.50ರಷ್ಟು, ಗರಿಷ್ಠ ರೂ.35,000/-ಗಳ ಸಹಾಯಧನ ನೀಡಿ, ಉಳಿದ ಮೊತ್ತವನ್ನು ಬ್ಯಾಂಕುಗಳ ಮುಖಾಂತರ ಸಾಲದ ರೂಪದಲ್ಲಿ ಒದಗಿಸಲಾಗುವುದು. (ಇ) ರೂ.1,00,000/-ದಿಂದ ಮೇಲ್ಪಟ್ಟ ಘಟಕ ವೆಚ್ಚದ ಯೋಜನೆಗಳಿಗೆ ನಿಗಮದಿಂದ ನೀಡುವ ಸಹಾಯಧನದ ಗರಿಷ್ಠ ಮಿತಿಯನ್ನು ರೂ.1.00 ಲಕ್ಷದಿಂದ ರೂ.2.00 ಲಕ್ಷಗಳಿಗೆ ಹೆಚ್ಚಿಸಲಾಗಿದೆ ಹಾಗೂ ಉಳಿದ ಭಾಗ ಬ್ಯಾಂಕ್/ಹಣಕಾಸು ಸಂಸ್ಥೆಗಳ ಸಾಲದ ರೂಪದಲ್ಲಿರುತ್ತದೆ. (ಈ) ಕೆಲವೊಂದು ಯೋಜನೆಗಳಿಗೆ ರಾಷ್ಟ್ರೀಯ ಪರಿಶಿಷ್ಟ ಜಾತಿ ಹಣಕಾಸು ಹಾಗೂ ಅಭಿವೃದ್ಧಿ ನಿಗಮದಿಂದ ಸಾಲ ಪಡೆದು ನೇರವಾಗಿ ಫಲಾನುಭವಿಗಳಿಗೆ ಸಾಲಸೌಲಭ್ಯ ಒದಗಿಸಲಾಗುವುದು. ಘಟಕ ವೆಚ್ಚದಲ್ಲಿ ಶೇ.5ರಷ್ಟು ಭಾಗ ಫಲಾನುಭವಿಯ ಪಾಲು, ಶೇ.20 ಭಾಗ ನಿಗಮದಿಂದ ಅಂಚಿನ ಹಣ(ಗರಿಷ್ಠ ರೂ.1.00ಲಕ್ಷ) ಹಾಗೂ ಉಳಿದ ಶೇ.75 ಭಾಗವನ್ನು ರಾಷ್ಟ್ರೀಯ ಹಣಕಾಸು ನಿಗಮದ ಹಣದಿಂದ ಸಾಲದ ರೂಪದಲ್ಲಿ ಭರಿಸಲಾಗುವುದು. ಪರಿಶಿಷ್ಟ ಜಾತಿಯ ನಿರುದ್ಯೋಗಿಗಳು ಸ್ವಾವಲಂಬಿಗಳಾಗಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲವಾಗುವಂತೆ ನಿಗಮವು ಈ ಕೆಳಕಂಡಂತೆ ಸಾಲ ಸೌಲಭ್ಯಗಳನ್ನು ಒದಗಿಸುತ್ತಿದೆ. (ಉ) ರೂ.1,00,000/-ದೊಳಗಿನ ಘಟಕ ವೆಚ್ಚಕ್ಕೆ ನಿಗಮದಿಂದ ಶೇ.50ರಷ್ಟು, ಗರಿಷ್ಠ ರೂ.35,000/-ಗಳ ಸಹಾಯಧನ ನೀಡಿ ಉಳಿದ ಮೊತ್ತವನ್ನು ಬ್ಯಾಂಕುಗಳ ಮುಖಾಂತರ ಸಾಲದ ರೂಪದಲ್ಲಿ ಒದಗಿಸಲಾಗುವುದು. (ಊ) ರೂ.1,00,000/- ದಿಂದ ಮೇಲ್ಪಟ್ಟ ಘಟಕ ವೆಚ್ಚದ ಯೋಜನೆಗಳಿಗೆ ನಿಗಮದಿಂದ ನೀಡುವ ಸಹಾಯಧನ ಗರಿಷ್ಠ ಮಿತಿಯನ್ನು ರೂ.1.00 ಲಕ್ಷದಿಂದ ರೂ.2.00 ಲಕ್ಷಗಳಿಗೆ ಹೆಚ್ಚಿಸಲಾಗಿದೆ. ಉಳಿದ ಭಾಗ ಬ್ಯಾಂಕ್/ಹಣಕಾಸು ಸಂಸ್ಥೆಗಳ ಸಾಲದ ರೂಪದಲ್ಲಿರುತ್ತದೆ.

**ಭೂ ಒಡೆತನ ಯೋಜನೆ:** ಈ ಯೋಜನೆಯಡಿ 2 ಎಕರೆ ಖುಷ್ಕಿ ಅಥವಾ 1 ಎಕರೆ ತರಿ/ಭಾಗಾಯ್ತು ಜಮೀನನ್ನು ಪರಿಶಿಷ್ಟ ಜಾತಿಯ ಕೃಷಿ ಕಾರ್ಮಿಕರಿಗೆ ಪರಿಶಿಷ್ಟ ಜಾತಿ/ವರ್ಗಕ್ಕೆ ಸೇರಿಲ್ಲದವರಿಂದ, ಆಯಾ ಗ್ರಾಮದಲ್ಲಿ ಜಮೀನು ಮಾರಾಟ ನೋಂದಾಯಿತ ಬೆಲೆಯ ಮೂರುಪಟ್ಟು ಘಟಕ ವೆಚ್ಚದಲ್ಲಿ ಗರಿಷ್ಠಮಿತಿ ರೂ.10.00 ಲಕ್ಷಗಳನ್ನು ಮೀರದಂತೆ ಖರೀದಿಸಲು ಮಂಜೂರಾತಿ ನೀಡಲಾಗುವುದು. ಈ ಘಟಕ ವೆಚ್ಚದಲ್ಲಿ ಅರ್ಧಭಾಗ ಸಹಾಯಧನವಾಗಿಯೂ, ಉಳಿದರ್ಧ ಸಾಲದ ರೂಪದಲ್ಲೂ ಇರುತ್ತದೆ. ಈ ಸಾಲವನ್ನು 10 ವರ್ಷಗಳಲ್ಲಿ ವಾರ್ಷಿಕ ಸಮಕಂತುಗಳಲ್ಲಿ ಶೇಕಡ 6ರ ಬಡ್ಡಿದರದಲ್ಲಿ ಮರುಪಾವತಿ ಮಾಡಬೇಕಿರುತ್ತದೆ.

**ಗಂಗಾ ಕಲ್ಯಾಣ ಯೋಜನೆ:** (ಅ) ಸಾಮೂಹಿಕ ನೀರಾವರಿ/ಏತ ನೀರಾವರಿ ಯೋಜನೆ: ನದಿ ಮತ್ತು ನೈಸರ್ಗಿಕ ಹಳ್ಳಗಳ ಅಕ್ಕಪಕ್ಕದಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿದ ಸಣ್ಣ ಮತ್ತು ಅತಿಸಣ್ಣ ರೈತರ ಜಮೀನುಗಳನ್ನು ಗುರುತಿಸಿ 8ರಿಂದ 15 ಎಕರೆ ಇರುವ ಗುಂಪು ಜಮೀನಿಗೆ ನಿಗದಿಪಡಿಸಿದ ಘಟಕ ವೆಚ್ಚದಲ್ಲಿ ಪೂರ್ಣ ಸಹಾಯಧನದೊಂದಿಗೆ ಏತ ನೀರಾವರಿ ಯೋಜನೆಯನ್ನು ಕೈಗೊಳ್ಳಲಾಗುವುದು. (ಆ) ವೈಯಕ್ತಿಕ ನೀರಾವರಿ ಕೊಳವೆಬಾವಿ ಯೋಜನೆ: ಈ ಯೋಜನೆಯಡಿ ಸಣ್ಣ ಮತ್ತು ಅತಿಸಣ್ಣ ರೈತರ ಜಮೀನಿನಲ್ಲಿ ಕೊಳವೆಬಾವಿ ಕೊರೆಯಿಸಿ ಪಂಪ್ ಮೋಟಾರನ್ನು ಅಳವಡಿಸಲಾಗುವುದು. ಈ ಕಾರ್ಯಕ್ರಮದಡಿ ರೂ.1,50,000/- ಸಹಾಯಧನವಾಗಿದ್ದು, ಉಳಿದ ಮೊತ್ತ ರೂ.50,000/- ಅವಧಿಸಾಲವಾಗಿರುತ್ತದೆ. ಅವಧಿಸಾಲವನ್ನು ಎನ್.ಎಸ್.ಸಿ.ಎಫ್.ಡಿ.ಸಿ.ಯಿಂದ ಭರಿಸಲಾಗುವುದು. ಕೊಳವೆಬಾವಿಗಳ ವಿದ್ಯುದ್ದೀಕರಣಕ್ಕಾಗಿ ಹಿಂದುಳಿದ ತಾಲ್ಲೂಕುಗಳಿಗೆ ಒದಗಿಸಿದ ಎಸ್‌ಸಿಎಸ್‌ಪಿ ಕ್ರೋಡೀಕೃತ ಹಣದಿಂದ ಎಸ್ಕಾಂಗಳಿಗೆ ನೀಡಲಾಗುವುದು.

**ಮೈಕ್ರೋ ಕ್ರೆಡಿಟ್ ಫೈನಾನ್ಸ್(ಕಿರುಸಾಲ):** ಈ ಯೋಜನೆಯಡಿ ಗ್ರಾಮೀಣ, ಅರೆ ನಗರ ಮತ್ತು ನಗರ ಪ್ರದೇಶಗಳಿಗೆ ಸೇರಿದ ಪರಿಶಿಷ್ಟ ಜಾತಿಯ ಕುಶಲಿ ಅಥವಾ ಕುಶಲಿಯಲ್ಲದ ವ್ಯಕ್ತಿಗಳ ಅಭಿವೃದ್ಧಿಗಾಗಿ ಅವರು ಸಣ್ಣ ಪ್ರಮಾಣದ ವ್ಯಾಪಾರ ಚಟುವಟಿಕೆಗಳನ್ನು ಕೈಗೊಳ್ಳಲು ಸೌಲಭ್ಯ ಒದಗಿಸಲಾಗುವುದು. ಘಟಕ ವೆಚ್ಚ ರೂ.15,000/-ಗಳಿದ್ದು, ಇದರಲ್ಲಿ ರೂ.10,000/- ಸಹಾಯಧನ ಮತ್ತು ರೂ.5,000/- ಸಾಲವಿರುತ್ತದೆ.

**ಮೈಕ್ರೋ ಕ್ರೆಡಿಟ್ ಯೋಜನೆ(ಎನ್.ಎಸ್.ಸಿ.ಎಫ್.ಡಿ.ಸಿ):** ಈ ಯೋಜನೆಯನ್ನು ರಾಷ್ಟ್ರೀಯ ಪರಿಶಿಷ್ಟ ಜಾತಿ ಹಣಕಾಸು ಹಾಗೂ ಅಭಿವೃದ್ಧಿ ನಿಗಮದ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ಘಟಕ ವೆಚ್ಚ ಗರಿಷ್ಠ ಮೊತ್ತ ರೂ.25,000/-ವಾಗಿದ್ದು, ಇದರಲ್ಲಿ ರೂ.15,000/- ಎನ್.ಎಸ್.ಸಿ.ಎಫ್.ಡಿ.ಸಿ.ಯವರ ಅವಧಿ ಸಾಲವಾಗಿರುತ್ತದೆ. ಅವಧಿಸಾಲಕ್ಕೆ ಶೇ.5ರಷ್ಟು ಬಡ್ಡಿಯನ್ನು ವಿಧಿಸಲಾಗುವುದು. ಉಳಿದ ರೂ.10,000/- ಜಿಲ್ಲಾ ಪಂಚಾಯತ್, ನಗರಾಭಿವೃದ್ಧಿ ಇಲಾಖೆ, ಸಮಾಜ ಕಲ್ಯಾಣ ಇಲಾಖೆ ಹಾಗೂ ವಿಶೇಷ ಘಟಕ ಯೋಜನೆಯಡಿ ಹಾಗೂ ಇತರೆ ಇಲಾಖೆಗಳಲ್ಲಿ ಲಭ್ಯವಿರುವ ಸಹಾಯಧನವನ್ನು ಪಡೆದು ಅನುಷ್ಠಾನಗೊಳಿಸಲಾಗುವುದು. ಸ್ತ್ರೀಶಕ್ತಿ ಯೋಜನೆಯಡಿ ರಚಿಸಿರುವ ಒಳ್ಳೆಯ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ವ-ಸಹಾಯ ಸಂಘ/ವೈಯುಕ್ತಿಕ ಫಲಾಪೇಕ್ಷಿಗಳಿಗೆ ಈ ಯೋಜನೆಯಡಿ ಸೌಲಭ್ಯವನ್ನು ಒದಗಿಸಲಾಗುವುದು.

**ಸಫಾಯಿ ಕರ್ಮಚಾರಿ ಪುನರ್ವಸತಿ ಯೋಜನೆ(ಎಸ್.ಆರ್.ಎಂ.ಎಸ್):** ಈ ಯೋಜನೆಯಡಿ ಸಫಾಯಿ ಕರ್ಮಚಾರಿಗಳು ಮತ್ತು ಅವರ ಅವಲಂಬಿತರ ಪುನರ್‌ವಸತಿಗಾಗಿ ರಾಷ್ಟ್ರೀಯ ಸಫಾಯಿ ಕರ್ಮಚಾರಿ ಪುನರ್‌ವಸತಿ ಹಣಕಾಸು ಮತ್ತು ಅಭಿವೃದ್ಧಿ ನಿಗಮ, ನವದೆಹಲಿ ಇವರ ಸಹಯೋಗದೊಂದಿಗೆ ಸಾಲ ಸೌಲಭ್ಯ ಕಲ್ಪಿಸಲಾಗುತ್ತಿದೆ. ಅದರಂತೆ, ರೂ.1,00,000/-ಗಳವರೆಗಿನ ಸಾಲಗಳಿಗೆ ರೂ.10,000/-ಗಳನ್ನು ರಾಜ್ಯ ಸರ್ಕಾರದ ಅನುದಾನದಿಂದ ಸಹಾಯಧನವಾಗಿ ನೀಡಲಾಗುತ್ತಿದೆ ಹಾಗೂ ರೂ.1,00,000/-ಕ್ಕಿಂತ ಹೆಚ್ಚಿನ ಮೊತ್ತದ ಸಾಲ ಪಡೆಯುವವರಿಗೆ 90% ಬ್ಯಾಂಕ್/ಎನ್.ಎಸ್.ಕೆ.ಎಫ್.ಡಿ.ಸಿ. ಅವಧಿಸಾಲ ಮತ್ತು ಶೇಕಡಾ 5 ಭಾಗ ಅಂಚಿನ ಹಣದ ಸಾಲ ನೀಡಲಾಗುವುದು. ಉಳಿಕೆ 5 ಭಾಗವನ್ನು ಪ್ರವರ್ತಕರು ಭರಿಸಬೇಕಾಗುವುದು. ಸದರಿ ಯೋಜನೆಯಡಿ ರೂ.25,000/-ದವರೆಗಿನ ಸಾಲಕ್ಕೆ ಶೇ.5ರ ಬಡ್ಡಿ ಹಾಗೂ ರೂ.25,000/-ಕ್ಕಿಂತ ಹೆಚ್ಚಿನ ಮೊತ್ತದ ಸಾಲಕ್ಕೆ ಶೇ.6ರ ಬಡ್ಡಿ ವಿಧಿಸಲಾಗುವುದು.

# ಮೌನ ಹೋರಾಟ



ನಮ್ಮ ಊರಿನಂತಹುದೇ ಅದೂ ಒಂದು ಊರು. ಆ ದೇಶವೂ ನಮ್ಮ ದೇಶದಂತಹುದೇ ದೇಶ. ನಮ್ಮದು ಭಾರತ ದೇಶ. ಅದು ಕೀನ್ಯಾ ದೇಶ. ನಾವು ಏಷ್ಯಾ ಖಂಡದಲ್ಲಿದ್ದೇವೆ. ಅದು ಆಫ್ರಿಕಾ ಖಂಡದಲ್ಲಿದೆ. ಎರಡೂ ದೇಶಗಳು ಮೊದಲು ಬ್ರಿಟಿಷರ ಆಡಳಿತದಲ್ಲೇ ಇದ್ದವು. ಭಾರತದ ಜನ ಛಲ ಬಿಡದೆ ಹೋರಾಡಿ ಸ್ವಾತಂತ್ರ್ಯ ಪಡೆದರು. ಹಾಗೆಯೇ ಕೀನ್ಯಾದ ಜನ ಸಹ. ಆದರೆ ಅವರು ನಮಗಿಂತ ಹೆಚ್ಚು ಹೋರಾಡಬೇಕಾಯಿತು. ಹೆಚ್ಚು ಹಿಂಸೆ ಅನುಭವಿಸಬೇಕಾಯಿತು. ಅವರ ತ್ಯಾಗ ನಮಗಿಂತ ಸ್ವಲ್ಪ ಹೆಚ್ಚೇ ಅನಿಸುತ್ತದೆ. ಕಾರಣ ಏನು ಗೊತ್ತೇ...? ಅಲ್ಲಿನ ಜನಕ್ಕೆ ಅಕ್ಷರದ ಆಯುಧ ಸಿಕ್ಕಿದ್ದು ನಮಗಿಂತ ಸ್ವಲ್ಪ ತಡವಾಗಿ. ಕೀನ್ಯಾದ ಜನರಿಗೆ ಸ್ವಾತಂತ್ರ್ಯದ ಹಂಬಲ ತೀವ್ರವಾಗುವ ಹೊತ್ತಿಗೆ ಬ್ರಿಟಿಷ್ ಪ್ರಭುಗಳಿಗೆ ತಮ್ಮ ವೈರಿಗಳನ್ನು ಹಿಂಸಿಸಲು, ಸದೆಬಡಿಯಲು ಹೊಸ ಹೊಸ ವಿಧಾನಗಳು, ಆಯುಧಗಳು ಸಿಕ್ಕಿದ್ದವು. ಆದ್ದರಿಂದಲೇ ಕೀನ್ಯಾದ ಜನರಿಗೆ ಸ್ವಾತಂತ್ರ್ಯ ಹೋರಾಟ ನಮ್ಮ ಹೋರಾಟಕ್ಕಿಂತ ಹೆಚ್ಚು ಕಠಿಣವೂ ಹಿಂಸಾತ್ಮಕವೂ ಆಯಿತು.

ಬಿಳಿಯರು ತಮ್ಮ ಹಿಡಿತದಲ್ಲಿದ್ದ ಯಾವ ದೇಶಗಳಲ್ಲೂ ಜನರನ್ನು ಜನರಂತೆ ಕಾಣಲಿಲ್ಲ. ಅವರ ಹಕ್ಕುಗಳನ್ನು ಗೌರವಿಸಲಿಲ್ಲ. ಆ ಜನರನ್ನು, ಅವರ ಭಾವನೆಗಳನ್ನು ಗಣನೆಗೇ ತೆಗೆದುಕೊಳ್ಳಲಿಲ್ಲ ಎಂಬುದು ಐತಿಹಾಸಿಕ ಸತ್ಯ. ಅವರ ಪ್ರಭುತ್ವದ ವಿರುದ್ಧ ದನಿ ಎತ್ತಿದವರನ್ನೆಲ್ಲಾ ದಯೆ ತೋರದೆ ನಾಶಮಾಡಿದರು. ಊಹಿಸಲೂ ಆಗದ ರೀತಿಯಲ್ಲಿ ಹಿಂಸಿಸಿದರು. 'ಮಾನವತೆಯ ವಿರೋಧಿಗಳು' ಎಂಬ ಹಣೆಪಟ್ಟಿ ಹಚ್ಚಿ ಸಾಮೂಹಿಕವಾಗಿ ಸಾವಿನ ಕೂಪಕ್ಕೆ ತಳ್ಳಿದರು.

ಕಳೆದ ಶತಮಾನದ ಆರಂಭದಲ್ಲಿ ನಮ್ಮ ನಾಡಿನಲ್ಲಿ ಸ್ವಾತಂತ್ರ್ಯ ಚಳುವಳಿ ಜೋರಾಗಿ ನಡೆಯುತ್ತಿದ್ದ ಸಮಯದಲ್ಲಿ ಕೀನ್ಯಾ ದೇಶದ ಪರಿಸ್ಥಿತಿಯೇ ಬೇರೆ ಆಗಿತ್ತು. ಆ ದೇಶದ ಫಲವತ್ತಾದ ನೆಲದಲ್ಲಿ ಬಿಳಿಯರು ತಮ್ಮವರನ್ನು ನೆಲೆಗೊಳಿಸುತ್ತಿದ್ದರು. ಬಲವಂತವಾಗಿ ಸ್ಥಳೀಯರನ್ನು ಒಕ್ಕಲೆಬ್ಬಿಸಿ ವಿಶಾಲವಾದ ಎಸ್ಟೇಟುಗಳನ್ನು ನಿರ್ಮಿಸತೊಡಗಿದ್ದರು. ಬಿಳಿಯರ ಮೋಜಿಗೆ ತಮ್ಮ ಬದುಕಿನ ಆಧಾರವಾಗಿದ್ದ ನೆಲ ಕಳೆದುಕೊಳ್ಳತೊಡಗಿದ ಕೀನ್ಯನ್ನರು ನಿಧಾನವಾಗಿ ಸಂಘಟಿತರಾಗತೊಡಗಿದ್ದರು. ಸಣ್ಣ ಸಣ್ಣ ಗುಂಪುಗಳನ್ನು ಚಿಕ್ಕದಾಗಿದ್ದಾಗಲೇ ಸದೆ ಬಡಿಯುತ್ತಿದ್ದ ಬಿಳಿಯರು ಇವರನ್ನು ದೊಡ್ಡ ಮಟ್ಟದಲ್ಲಿ ಸಂಘಟಿತರಾಗಲು ಬಿಡಲೇ ಇಲ್ಲ. ಈ ಕರಿಯ ಜನಾಂಗ (ನೀಗ್ರೋ)ವನ್ನು ಹೀನಾಯವಾಗಿ ಕಾಣುತ್ತಿದ್ದರು. ಇವರು ಅನಾಗರಿಕರು, ಕ್ರೂರಿಗಳು ಎಂದೆಲ್ಲ ಪ್ರಚಾರ ಮಾಡುತ್ತಾ ಜಾಗತಿಕವಾಗಿ ಇವರಿಗೆ ಬೆಂಬಲವೇ ಇಲ್ಲದಂತೆ ಮಾಡಿಬಿಟ್ಟಿದ್ದರು. ಇದನ್ನೆಲ್ಲಾ ಮೀರಿ ಸಂಘಟಿತರಾಗಿ ಬಹುದೊಡ್ಡ ಮಟ್ಟದಲ್ಲಿ ಬ್ರಿಟಿಷರನ್ನು ನಡುಗಿಸಿದ ಹೋರಾಟ ಕಳೆದ ಶತಮಾನದ ಮಧ್ಯಭಾಗದಲ್ಲಿ ನಡೆದೇ ಬಿಟ್ಟಿತು. ಈ ಹೋರಾಟವನ್ನು ನಡೆಸಿದ ಕೀನ್ಯನ್ನರ ಗುಂಪಿಗೆ ಇದು 'ಮೌ – ಮೌ' ಗಳೆಂಬ ಸಣ್ಣ ಬುಡಕಟ್ಟಿನ ಹೋರಾಟ ಎನ್ನಲಾಯಿತು. ವಾಸ್ತವವಾಗಿ ಅದು ಇಡೀ ದೇಶದ ಹೋರಾಟವಾಗಿತ್ತು. ಈ ಕ್ರಾಂತಿಯ ಬೆಂಕಿಯಲ್ಲಿ ಸತ್ತು ಹೋದ ಬ್ರಿಟಿಷರಿಗಿಂತ ಎಷ್ಟೋಪಟ್ಟು ಹೆಚ್ಚಿನ ಸಂಖ್ಯೆಯಲ್ಲಿ ಕೀನ್ಯನ್ನರು ಸುಟ್ಟು ಹೋದರು. ಅಸಂಖ್ಯಾತ ಕೀನ್ಯನ್ನರ ಕುಟುಂಬಗಳು ಬದುಕಲಿಕ್ಕೆ ಬೀದಿಯೂ ಇಲ್ಲದಂತೆ ಕಣ್ಮರೆಯಾಗಿಹೋದವು. ಎಷ್ಟೋ ಕೀನ್ಯಾದ ಮಹಿಳೆಯರನ್ನು, ಮಕ್ಕಳನ್ನು ಪೈಶಾಚಿಕತೆಯನ್ನೂ ಮೀರುವ ರೀತಿಯಲ್ಲಿ ಹಿಂಸಿಸಿ ಕೊಲ್ಲಲಾಯಿತು. ಇದೆಲ್ಲವೂ ಕೇವಲ ಕರಿಯರು ಎನ್ನುವ ಕಾರಣಕ್ಕೆ ನಡೆದದ್ದು ಎನಿಸಬಹುದು. ಆದರೆ ಸೂಕ್ಷ್ಮವಾಗಿ ಗಮನಿಸಿ ನೋಡಿ... ಇದೆಲ್ಲವೂ ನಡೆದದ್ದು ಕೇವಲ ನೆಲಕ್ಕಾಗಿ...! ಪ್ರಾಕೃತಿಕವಾಗಿ ಸಂಪದ್ಭರಿತವಾಗಿದ್ದ ಕೀನ್ಯಾದ ನೆಲದ ಮೇಲಿನ ಬ್ರಿಟಿಷರ ವ್ಯಾಮೋಹದಿಂದಾಗಿ...!

ಈ ಕಥೆ ಕೀನ್ಯಾದ ಸ್ವಾತಂತ್ರ್ಯ ಹೋರಾಟದ ಕಥೆಯಲ್ಲ. ಇದು ಆ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಒಬ್ಬ ವ್ಯಕ್ತಿಯ ಕಥೆ. 'ಮೌ–ಮೌ' ಬಂಡುಕೋರನೆಂದು ಬ್ರಿಟಿಷರಿಂದ ಕರೆಸಿಕೊಂಡು ಆ ಕಾರಣಕ್ಕಾಗಿ ತನ್ನ ಕಣ್ಣೆದುರೇ ಹೆಂಡತಿ–ಮಕ್ಕಳು ಬರ್ಬರವಾಗಿ ಹತ್ಯೆಯಾಗುವುದನ್ನು ಕಂಡು ಘಾಸಿಗೊಂಡ 'ಮರುಗೆ' ಎಂಬ ವ್ಯಕ್ತಿ ತನ್ನ ಎಂಬತ್ತೂರನೇ ವಯಸ್ಸಿನಲ್ಲಿ ಅಕ್ಷರ ಕಲಿಯಲು ಹೊರಟ ಕಥೆಯಿದು. ದೇಶವನ್ನು ದಾಸ್ಯದಿಂದ ಬಿಡಿಸಿದ ಎಷ್ಟೋ ವರ್ಷಗಳ ನಂತರ ತನ್ನ ದಾಸ್ಯವನ್ನು ಕಳೆದುಕೊಳ್ಳಲು ಎರಡನೇ ಬಾರಿ ತನ್ನವರ ವಿರುದ್ಧವೇ ಮೌನವಾಗಿ ಹೋರಾಡಿದ ಕಥೆಯಿದು. ೧೯೫೨ರಲ್ಲಿ ಬ್ರಿಟಿಷರ ವಸಾಹತುಶಾಹಿ ಆಡಳಿತದ ವಿರುದ್ಧ ಕಿಕುಯು ಬುಡಕಟ್ಟಿನ ಜನ ನಡೆಸಿದ ಹಿಂಸಾತ್ಮಕ ಪ್ರತಿಭಟನೆಯೇ 'ಮೌ–ಮೌ' ಹೋರಾಟ. ಈ ಹಿಂಸಾತ್ಮಕ ಪ್ರತಿಭಟನೆಯಲ್ಲಿ ಸಾವಿರಾರು ಕಿಕುಯು ಜನ

**ಎಂ. ಜೆ. ರಾಜೀವ ಗೌಡ**




'ಪ್ರೀತಿಯ ಖೈದಿ ನಂ. 4399, ಕೀನ್ಯಾ ಗಣರಾಜ್ಯದ ಪರವಾಗಿ ನಿಮಗೆ ತಿಳಿಸುವುದೇನೆಂದರೆ... ನಿಮ್ಮ ಎಲ್ಲ ರೀತಿಯ ವಿಚಾರಣೆ ಮಾಡಲಾಗಿ ನೀವು ನಿರ್ದೋಷಿಯೆಂದು ಸಾಬೀತಾಗಿದೆ. ಬ್ರಿಟಿಷ್ ಆಡಳಿತದಲ್ಲಿ ನೀವು ಅನುಭವಿಸಿದ ಸೆರೆವಾಸ ಅನ್ಯಾಯದ್ದೆಂದು ಗೊತ್ತಾಗಿದೆ. ಇದಕ್ಕಾಗಿ ನೀವು ಪರಿಹಾರ ಪಡೆಯಲು ಅರ್ಹರಾಗಿರುತ್ತೀರಿ. 1951ರಿಂದ 1963ರವರೆಗೆ ಬೇರೆ ಬೇರೆ ಜೈಲುಗಳಲ್ಲಿ ನೀವು ಕಳೆದ ದಿನಗಳನ್ನು ಲೆಕ್ಕ ಹಾಕಿ ನಿಮಗೆ... ಮೊತ್ತದ ಹಣವನ್ನು ಪರಿಹಾರವಾಗಿ ಸರ್ಕಾರ ನೀಡುತ್ತಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ನಿಮ್ಮ ಪಾತ್ರ ಗಣನೀಯವೆಂದು ಗುರುತಿಸಲಾಗಿದೆ. ಇದಕ್ಕಾಗಿ ದೇಶ ನಿಮ್ಮನ್ನು ಸದಾ ಗೌರವಿಸಲಿದೆ. ಇಂತಿ ನಿಮ್ಮ ರಾಷ್ಟ್ರಾಧ್ಯಕ್ಷರು... ಕೀನ್ಯಾ...'

ಕೊಲ್ಲಲ್ಪಟ್ಟರು. ಸುಮಾರು ಹತ್ತು ಲಕ್ಷಕ್ಕೂ ಹೆಚ್ಚು ಜನರನ್ನು ಸಾಮೂಹಿಕವಾಗಿ ಸೆರೆಯಲ್ಲಿಡಲಾಯಿತು. ಈ ಹೋರಾಟ ಕೊನೆಗೆ ಕೀನ್ಯಾಗೆ ಸ್ವಾತಂತ್ರ್ಯವನ್ನೇನೋ ತಂದುಕೊಟ್ಟಿತು. ಆದರೆ ಬಹಳಷ್ಟು ಜನಕ್ಕೆ ನ್ಯಾಯ ಸಿಗಲಿಲ್ಲ. ಅಂತಹ ದುರದೃಷ್ಟವಂತರಲ್ಲಿ ಮರುಗೆಯೂ ಒಬ್ಬ.

೨೦೦೦ದ ಹೊತ್ತಿಗೆ ಮರುಗೆ ತನ್ನ ತುಂಡು ಜಮೀನಿನಲ್ಲಿ ಏಕಾಂಗಿಯಾಗಿ ಸಾಗುವಳಿ ಮಾಡುತ್ತಿದ್ದ. ಏಕೆಂದರೆ ಯೌವನದಲ್ಲಿ ತನ್ನ ಕಣ್ಣೆದುರೇ ಬ್ರಿಟಿಷರ ಗುಂಡಿಗೆ ಬಲಿಯಾದ ತನ್ನ ಹೆಂಡತಿ, ಮಗಳನ್ನು ನೆನೆಯುತ್ತಾ ದುಡಿಯುವುದು ಅವನಿಗೆ ಅಭ್ಯಾಸವಾಗಿಹೋಗಿತ್ತು. ಅವನ ಜೀವನಸಂಗಾತಿಯಾಗಿದ್ದುದು ಎರಡು ಕೋಳಿಗಳು ಮತ್ತು ಒಂದು ಬೆಕ್ಕು ಇವಿಷ್ಟೆ. ಕಳೆದ ಐವತ್ತು ವರ್ಷಗಳಿಂದ ಅವನ ಜೊತೆಯಾಗಿದ್ದುದು ಇನ್ನೊಂದಿದೆ. ಅದು ಅವನ ಪೆಟ್ಟಿಗೆಯಲ್ಲಿ ಭದ್ರವಾಗಿ ಕುಳಿತಿದೆ. ಪ್ರತಿದಿನ ಅವನು ಸಂಜೆ ಎಲ್ಲಾ ಕೆಲಸ ಮುಗಿಸಿ ಮನೆಗೆ ಬಂದು ಆ ಪೆಟ್ಟಿಗೆಯ ಮುಂದೆ ಕೂರುತ್ತಾನೆ. ನಿಧಾನವಾಗಿ ಪೆಟ್ಟಿಗೆಯನ್ನು ತೆರೆದು ಅದನ್ನು ಕೈಗೆತ್ತಿಕೊಳ್ಳುತ್ತಾನೆ. ಅದರ ಜೊತೆಯೇ ಉಕ್ಕಿಬರುವ ತನ್ನ ಹೆಂಡತಿ ಮತ್ತು ಮಗಳ ಮುದ್ದು ಮುಖದ ನೆನಪಲ್ಲಿ ಕಣ್ಣೀರಾಗುತ್ತಾನೆ. ಅದು ಇನ್ನೂ ತೆರೆಯದೇ ಇರುವ ಒಂದು ಪತ್ರ. ಅವನಿಗೆ ಗೊತ್ತು, ಅದು ಸ್ವಾತಂತ್ರ್ಯ ಪಡೆದ ಹೊಸತರಲ್ಲಿ ಆ ದೇಶದ ಅಧ್ಯಕ್ಷರಿಂದ ಬಂದ ಪತ್ರ ಎಂದು. ಆದರೂ ಅವನು ಐವತ್ತು ವರ್ಷಗಳಾದರೂ ಇಂದಿಗೂ ಆ ಪತ್ರವನ್ನು ಒಡೆದೇ ಇಲ್ಲ. ಅದಕ್ಕೆ ಅದನ್ನು ಮುಟ್ಟಿದಾಗಲೆಲ್ಲ ಅದರೊಂದಿಗೆ ಮೂಡಿಬರುವ ಅವನ ಹೆಂಡತಿ ಮತ್ತು ಮಗಳು ಮಾತ್ರ ಕಾರಣರಾಗಿರಲಿಲ್ಲ. ಅವನಿಗೆ ಅದರೊಳಗಿನ ಒಂದಕ್ಷರವೂ ಓದಲು ಬರುತ್ತಿರಲಿಲ್ಲ...!

೨೦೦೩ರ ಒಂದು ದಿನ ಸಂಜೆ ರೇಡಿಯೋದಲ್ಲಿ ಒಂದು ಸುದ್ದಿ ಪ್ರಸಾರವಾಯಿತು. ಹೊಸ ಸರ್ಕಾರ ದೇಶದ ಎಲ್ಲರಿಗೂ ಉಚಿತ ಶಿಕ್ಷಣ ನೀಡುವ ಸುದ್ದಿ ಅದು. ಮರುದಿನ ಪತ್ರಿಕೆಗಳಲ್ಲೂ ಈ ಸುದ್ದಿ ಪ್ರಕಟವಾಗಿತ್ತು. ಅಂದು ಬೆಳಗ್ಗೆ ಬೆಳಗ್ಗೆಯೇ ದೇಶದಾದ್ಯಂತ ನಗರಗಳಿಗಿಂತ ಹೆಚ್ಚಾಗಿ ಹಳ್ಳಿಗಾಡುಗಳ ಶಾಲೆಗಳ ಕಡೆ ಪೋಷಕರು ತಮ್ಮ ತಮ್ಮ ಮಕ್ಕಳನ್ನು ಎಳೆದುಕೊಂಡು ದೌಡಾಯಿಸಲು ಶುರುಮಾಡಿದ್ದರು. ಹತ್ತು ಗಂಟೆಯೊಳಗೆ ಎಲ್ಲ ಶಾಲೆಗಳು ಪೋಷಕರು ಮತ್ತು ಮಕ್ಕಳಿಂದ ತುಂಬಿ ತುಳುಕತೊಡಗಿದ್ದವು. ಗುಡ್ಡಗಾಡು ಪ್ರದೇಶದ ಒಂದು ಹಳ್ಳಿಯ ಶಾಲೆಯ ಕಡೆಗೂ ಇದೇ ರೀತಿ ಪೋಷಕರ, ಮಕ್ಕಳ ದಂಡು ದೌಡಾಯಿಸುತ್ತಿತ್ತು. ಆ ಗುಂಪಿನ ನಡುವೆ ಎಂಬತ್ತೂರು ವರ್ಷದ ಮರುಗೆಯೂ ದಾಪುಗಾಲು ಹಾಕುತ್ತಾ ಗುಡ್ಡದ ಬದಿಯಲ್ಲಿದ್ದ ಶಾಲೆಯ ಕಡೆ ಹೆಚ್ಚೂ ಕಡಿಮೆ ಓಡಿದಂತೆಯೇ ನಡೆದುಕೊಂಡು ಹೋದ. ಒಂದು ಸಣ್ಣ ಗುಡ್ಡದ ಮೇಲಿದ್ದ ಆ ಶಾಲೆಯ ವಿಶಾಲವಾದ ಅಂಗಳ ಮರುಗೆ ಅಲ್ಲಿಗೆ ಬರುವ ಹೊತ್ತಿಗೆ ಜನರಿಂದ ತುಂಬಿ ತುಳುಕುತ್ತಿತ್ತು. ನನ್ನ ಮಗು., ನನ್ನ ಮಗು... ಎಂದು ಕಿರುಚುತ್ತಾ ನೂಕಾಡುತ್ತಿದ್ದ ಜನಗಳ ಮಧ್ಯೆ ಇಬ್ಬರು ಶಿಕ್ಷಕರು ಕುಳಿತು ಎಲ್ಲರನ್ನೂ ಸಮಾಧಾನಪಡಿಸುತ್ತಾ ಅರ್ಜಿ ಪಡೆಯುತ್ತಿದ್ದರು. ಗೇಟಿನ ಹೊರಗಡೆಯೇ ನಿಂತ ಮರುಗೆ ಇದನ್ನೆಲ್ಲಾ ಸುಮ್ಮನೆ ನೋಡುತ್ತಾ ನಿಂತ.

ಆ ಶಾಲೆಗೆ ಇಬ್ಬರು ಶಿಕ್ಷಕರು. 'ಜೇನ್' ಮುಖ್ಯ ಶಿಕ್ಷಕಿ. ಆಲ್‌ಫ್ರೆಡ್ ಸಹಶಿಕ್ಷಕ. ಇಬ್ಬರೂ ನೀಗ್ರೋಗಳೇ... ಕೀನ್ಯಾದ ಕರಿಯರು. ಅರ್ಜಿಗಳನ್ನು ಪಡೆಯುತ್ತಾ ಮಕ್ಕಳನ್ನು ದಾಖಲುಮಾಡಿಕೊಳ್ಳುತ್ತಿದ್ದ 'ಜೇನ್' ಅಕಸ್ಮಾತ್ ಗೇಟಿನ ಕಡೆ ದೃಷ್ಟಿ ಹಾಯಿಸಿದಳು. ಗೇಟಿನ ಹೊರಗಡೆ ಕೈಯಲ್ಲಿನ ಕೋಲನ್ನು ನೆಲಕ್ಕೆ ಊರಿ ನಿಂತು ಇತ್ತ ನಡೆಯುತ್ತಿರುವುದನ್ನೆಲ್ಲಾ ತದೇಕಚಿತ್ತದಿಂದ ನೋಡುತ್ತಿದ್ದ ಮರುಗೆ ಕಣ್ಣಿಗೆ ಬಿದ್ದ. ತೇಪೆ ಹಾಕಿದ ಕೋಟು, ಒಂದು ಹಳೆಯ ಪ್ಯಾಂಟು ಹಾಕಿಕೊಂಡು ನಿಂತಿದ್ದ ಅವನ ಕಣ್ಣುಗಳಲ್ಲಿ ಮಡುಗಟ್ಟಿದ್ದ ನಿರೀಕ್ಷೆಗಳನ್ನು ಜೇನ್ ಗುರುತಿಸಿದಳು. ಬಹುಶಃ ಮೊಮ್ಮಗುವನ್ನು ಶಾಲೆಗೆ ಸೇರಿಸಲು ಬಂದಿರಬೇಕೆಂದುಕೊಂಡ ಜೇನ್ ಆಲ್‌ಫ್ರೆಡ್‌ಗೆ ಮರುಗೆಯನ್ನು ತೋರಿಸಿ ಹೋಗಿ ವಿಚಾರಿಸುವಂತೆ ಹೇಳಿದಳು. ಗೇಟಿನ ಬಳಿ ಹೋದ ಆಲ್‌ಫ್ರೆಡ್ ಮರುಗೆಯ ಜೊತೆ ಮಾತನಾಡಿ ಅಲ್ಲಿಂದಲೇ ಜೇನ್‌ಳನ್ನು ಕೂಗಿ ಕರೆದ. ಮಕ್ಕಳನ್ನು ಸೇರಿಸಲು ಅವಸರಿಸುತ್ತಿದ್ದ ಜನರಿಗೆ ಒಂದು ನಿಮಿಷ

ಸಮಾಧಾನದಿಂದಿರುವಂತೆ ಹೇಳಿ ಜೇನ್ ಗೇಟಿನ ಬಳಿ ಬಂದಳು. ಆಲ್‌ಫ್ರೆಡ್ ವ್ಯಂಗ್ಯವಾಗಿ, "ಈ ಮಗು ಶಾಲೆಗೆ ಸೇರಬೇಕಂತೆ...!" ಎಂದ. ಜೇನ್ ವಿಚಲಿತಳಾದರೂ ನಗಲಿಲ್ಲ. ಅವನ ಕಣ್ಣುಗಳಲ್ಲಿದ್ದ ಕಲಿಯುವ ಆಸೆಯನ್ನು ಗಮನಿಸಿದರೂ ತನ್ನ ಅಸಹಾಯಕತೆಯನ್ನು ವಿವರಿಸುತ್ತಾ ಜೇನ್, "ಇದು ಮಕ್ಕಳಿಗಾಗಿ ಇರುವ ಶಾಲೆ. ನೀವು ಇಲ್ಲಿ ಶಾಲೆಗೆ ಸೇರಲು ಸಾಧ್ಯವಿಲ್ಲ. ಕ್ಷಮಿಸಿ" ಎಂದಳು. ಮರುಗೆ ತನ್ನ ಕೋಟಿನ ಒಳಗಿನಿಂದ ಅಂದಿನ ದಿನಪತ್ರಿಕೆಯನ್ನು ತೆಗೆದು ಅವಳ ಮುಂದೆ ಹಿಡಿದ. ಎಲ್ಲರಿಗೂ ಉಚಿತ ಶಿಕ್ಷಣ ಎಂದು ದಪ್ಪ ಅಕ್ಷರಗಳಲ್ಲಿ ಮುದ್ರಿತವಾಗಿದ್ದ ತಲೆಬರಹ ನೋಡಿದೊಡನೆ ಅವಳಿಗೆ ಎಲ್ಲ ವಿಷಯ ಅರ್ಥವಾಯಿತು. ಅವಳು ಆ ಪತ್ರಿಕೆಯನ್ನು ಅವನ ಕೈಗೆ ವಾಪಸ್ಸು ಕೊಡುತ್ತಾ "ಇರಬಹುದು... ಆದರೆ ಇಲ್ಲಿ ಸಾಧ್ಯವಿಲ್ಲ... ದಯವಿಟ್ಟು ಕ್ಷಮಿಸಿ... ನೀವು ಹಿರಿಯರು... ನಮ್ಮನ್ನು ಅರ್ಥ ಮಾಡಿಕೊಳ್ಳಿ..." ಎಂದು ಅಂಗಳದಲ್ಲಿ ತುಂಬಿಹೋಗಿದ್ದ ಮಕ್ಕಳ ಕಡೆ ಕೈ ತೋರಿಸಿದಳು. ಒಂದೆರಡು ಕ್ಷಣ ಹತಾಶೆಯಿಂದ ಅವರನ್ನು ದಿಟ್ಟಿಸಿದ ಮರುಗೆ ಉಕ್ಕಿ ಬರುತ್ತಿದ್ದ ಕಣ್ಣೀರನ್ನು ತಡೆದು ಹಿಂದೆ ತಿರುಗಿ ದಾಪುಗಾಲಿಡುತ್ತಾ ತನ್ನ ಮನೆಯ ಕಡೆ ಹೊರಟ. ಜೇನ್ ಅಸಹಾಯಕತೆಯಿಂದ ಅವನು ಹೋಗುವುದನ್ನೇ ದಿಟ್ಟಿಸುತ್ತಿದ್ದಳು.

ಮರುಗೆ ಮನೆಗೆ ಬಂದ. ಒಂದೆರಡು ದಿನ ಕಳೆಯಿತು. ಹೊಸ ಶಾಲೆಗಳು ಖುಷಿಯಿಂದ ಪ್ರಾರಂಭವಾಗಿದ್ದವು. ಜೇನ್ ಉತ್ಸಾಹದಿಂದ ಮಕ್ಕಳಿಗೆ ಕಲಿಸಲು ಆರಂಭಿಸಿದ್ದಳು. ಒಂದು ದಿನ ಬೆಳಗ್ಗೆ ತುಂಬಿದ ಕೊಠಡಿಯಲ್ಲಿ ಜೇನ್ ಮಕ್ಕಳೊಂದಿಗಿದ್ದಾಗ ಆಲ್‌ಫ್ರೆಡ್ ಬಂದವನೇ ಜೇನ್‌ಳನ್ನು ಕರೆದ. ಏನು ಎಂಬಂತೆ ಕುತೂಹಲದಿಂದ ನೋಡಿದ ಅವಳಿಗೆ ಗೇಟಿನ ಕಡೆ ಕೈ ತೋರಿಸಿದ. ಅಲ್ಲಿ ನಿಂತಿದ್ದುದು ಮರುಗೆ...! ಅವಳಿಗೆ ನಿಜಕ್ಕೂ ಅತ್ಯಾಶ್ಚರ್ಯ. ಅವಳಿಗಿಂತ ಮುಂದೆ ಗೇಟಿನ ಬಳಿ ಬಂದ ಆಲ್‌ಫ್ರೆಡ್, "ನೋಡು... ದಯವಿಟ್ಟು ಮನೆಗೆ ಹೋಗು, ಮನೆಗೆ ಹೋಗಿ ಆರಾಮಾಗಿ ಮಲಗು... ಇದು ಸಣ್ಣ ಮಕ್ಕಳ ಶಾಲೆ. ನಿನ್ನಷ್ಟು ವಯಸ್ಸಾದವರಿಗಲ್ಲ ಈ ವಿದ್ಯೆ. ಹೋಗು, ದಯವಿಟ್ಟು ಮನೆಗೆ ಹೋಗು" ಎಂದ. "ಆರಾಮಾಗಿ ಮಲಗೋದಾ...? ನಾನಿನ್ನೂ ಬದುಕಿದ್ದೀನಲ್ಲಾ... ಆರಾಮು ಎಲ್ಲಿಂದ ಬರಬೇಕು...?" ಗೊಣಗಿದ ಮರುಗೆ. "ಇನ್ನು ಈ ವಯಸ್ಸಿನಲ್ಲಿ ಓದಿ ಏನು ಮಾಡ್ಬೇಕೂಂತಿದಿಯಾ... ನಿನ್ನ ಹೆಸರೂ...?" "ನಾನು ಮರುಗೆ..., ಕಿಮಾನಿ ನಾನಾ ಮರೂಗೆ" ಶಾಲೆಗೆ ಸೇರಿಸಲು ಕೇಳುತ್ತಿರಬಹುದು ಎಂದು ತನ್ನ ಹೆಸರನ್ನು ಹೇಳಿದ. "ನೋಡು ಕಿಮಾನಿ ನಾನಾ ಮರೂಗೆ... ಶಾಲೆಗೆ ಸೇರಬೇಕೆಂದರೆ ಯೂನಿಫಾರಂ ಬೇಕು, ಶೂಗಳು ಬೇಕು.. ಪುಸ್ತಕ ಪೆನ್ಸಿಲ್ಲು ಎಲ್ಲಾ ಬೇಕು. ಅದಕ್ಕೆಲ್ಲಾ ದುಡ್ಡು ಬೇಕು. ನಿನ್ನಿಂದ ಸಾಧ್ಯವಾ...? ದಯವಿಟ್ಟು ಮನೆಗೆ ಹೋಗು" ಎಂದು ಗದರಿದ ಆಲ್‌ಫ್ರೆಡ್. ಕೂಡಲೇ ಮುಂದೆ ಬಂದ ಜೇನ್ ಆಲ್‌ಫ್ರೆಡ್‌ನನ್ನು ಸುಮ್ಮನಿರಿಸಿದಳು. ಶಾಲೆಗೆ ಸೇರುವ ಅವಕಾಶ ಸಿಗಬಹುದೇನೋ ಎಂದು ದೈನ್ಯ ಭಾವದಿಂದ ತನ್ನನ್ನೇ ನೋಡುತ್ತಿದ್ದ ಮರುಗೆಯ ಕಡೆ ತಿರುಗಿ "ನೋಡಿ ನಾನು ಮೊನ್ನೆಯೇ ನಿಮಗೆ ಹೇಳಿದ್ದೆ. ಸರ್ಕಾರ ಎಲ್ಲರಿಗೂ ಶಿಕ್ಷಣ ಎಂದು ಹೇಳಿರಬಹುದು. ಆದರೆ ಅದರ ನಿಯಮಗಳು ಬೇರೆಯೇ ಇವೆ. ಜೊತೆಗೆ ನೋಡಿ ಎಷ್ಟೊಂದು ಮಕ್ಕಳು... ನೀವು ಹಿರಿಯರು ನಮ್ಮ ಪರಿಸ್ಥಿತಿಯನ್ನೂ ಸ್ವಲ್ಪ ಅರ್ಥ ಮಾಡಿಕೊಳ್ಳಿ..." ಎನ್ನುತ್ತ ಕೈ ಮುಗಿದಳು.

ದಾಪುಗಾಲಿಡುತ್ತಾ ಮರುಗೆ ತನ್ನ ಜೋಪಡಿಗೆ ಮರಳಿದ. ಪೆಟ್ಟಿಗೆಯಲ್ಲಿ ಭದ್ರವಾಗಿದ್ದ ಆ ಹಳೆಯ ಪತ್ರವನ್ನು ಕೈಗೆತ್ತಿಕೊಂಡು ಬಿಡಿಸಿದ. ಅದರಲ್ಲಿ ಅವನಿಗೆ ಗುರುತು ಸಿಗುವುದು ಆ ನಾಡಿನ ಅಧ್ಯಕ್ಷರ ಅರಮನೆಯ ಚಿತ್ರ ಮತ್ತು ಲಾಂಛನ ಮಾತ್ರ. ಅದರಲ್ಲೇನಿದೆಯೆಂದು ಅವನಿಗೆ ಇನ್ನೂ ತಿಳಿದಿಲ್ಲ. ಅದನ್ನು ಅವನು ಮುಟ್ಟಿದಾಗಲೆಲ್ಲ ಅವನ ನೆನಪಿಗೆ ಬರುವುದು ಅವನ ಹೆಂಡತಿ, ಮಗಳು ಮತ್ತು ಹೊಲದಲ್ಲಿ ನೆಮ್ಮದಿಯಿಂದ ಕೆಲಸ ಮಾಡಿಕೊಂಡಿದ್ದ ದಿನಗಳು. ಆದರೆ ಇಂದು ಆ ಪತ್ರವನ್ನು ಮುಟ್ಟುತ್ತಿದ್ದರೆ ಅಂದು ಬ್ರಿಟಿಷರು ತಮ್ಮ ಹಳ್ಳಿಗೆ ದಾಳಿ ಮಾಡಿದ ಮುಂಜಾವು ನೆನಪಾಗುತ್ತಿದೆ. ಆಗಸದಲ್ಲಿ ಸೂರ್ಯ ಮೂಡುವ ಹೊತ್ತಿಗೆ ಮನೆಗಳ ಬಾಗಿಲುಗಳನ್ನು ಮುರಿದು ಒಳ ನುಗ್ಗಿ ತನ್ನನ್ನೂ ಇತರರನ್ನೂ ಕೈಗಳನ್ನು ಹಿಂದಕ್ಕೆ ಕಟ್ಟಿಹಾಕಿ ಎಳೆದುಕೊಂಡು ಹೋದ ಕ್ಷಣಗಳು ನೆನಪಾಗುತ್ತಿವೆ. ಅದನ್ನು ತನ್ನ ಹೆಂಡತಿ ಪ್ರಶ್ನಿಸಿದ, ಪ್ರತಿಭಟಿಸಿದ ಕ್ಷಣಗಳು ನೆನಪಾಗುತ್ತಿವೆ. ಅದಕ್ಕಾಗಿ ಅವಳನ್ನು ಅವಳ ಮಡಿಲಲ್ಲಿದ್ದ ತನ್ನ ಮೂರು ವರ್ಷದ ಮಗಳನ್ನು ದೊಣ್ಣೆಗಳಿಂದ ಬಡಿದದ್ದು ನೆನಪಾಗುತ್ತಿದೆ. ಮನೆ ಮನೆಯಿಂದ ಹೆಂಗಸರು ಮಕ್ಕಳನ್ನು ಹೊರಗೆಳೆದು ಹಾಕಿ ಮನೆಗಳಿಗೆ ಹಚ್ಚಿದ ಬೆಂಕಿ ಇನ್ನೂ ಉರಿಯುತ್ತಲೇ ಇದ್ದಂತೆ ಭಾಸವಾಗುತ್ತಿದೆ. ತನ್ನನ್ನು ಎಳೆದೊಯ್ಯುವಾಗ 'ಪಪ್ಪಾ' ಎಂದು ಕೂಗಿದ ಮಗಳ ಕಣ್ಣಾಲಿಗಳ ತುಂಬ ಇದ್ದ ಕಣ್ಣೀರು ನೆನಪಾಗುತ್ತಿದೆ. ಇದೆಲ್ಲ ಆಗಿ ಹೋಗಿ ಸುಮಾರು ಐವತ್ತು ವರ್ಷಗಳಿಗೂ ಮಿಗಿಲಾಗಿದ್ದರೂ ಆ ನೆನಪುಗಳು ಈಗಿನ್ನೂ ನಡೆದಷ್ಟು ಹಸಿ ಹಸಿಯಾಗಿದೆ.

ಅಂದು ರಾತ್ರಿ ಜೇನ್ ತನ್ನ ಗಂಡನಿಗೆ ಮರುಗೆಯ ವಿಷಯವನ್ನು ತಿಳಿಸಿ, ಕಲಿಯಲು ಆ ಮನುಷ್ಯನಲ್ಲಿರುವ ಆಸೆಯ ಕುರಿತು ಹೇಳಿದಳು. ಆದರೆ ಆತನಿಗಾಗಿ ತಾನು ಏನೂ ಮಾಡಲಾಗುತ್ತಿಲ್ಲವಲ್ಲ ಎಂದು ಪೇಚಾಡಿ ಕೊಂಡಳು. ನೈರೋಬಿಯಲ್ಲಿ ಸರ್ಕಾರಿ ನೌಕರಿ ಮಾಡುತ್ತಿದ್ದ ಅವಳ ಗಂಡ ಚಾರ್ಲ್ಸ್ ಅವಳ ಮಾತುಗಳನ್ನು ತೀರಾ ಗಂಭೀರವಾಗೇನೂ ತೆಗೆದುಕೊಳ್ಳಲಿಲ್ಲ. ಬದಲಿಗೆ ನಿನ್ನಿಂದ ಸಾಧ್ಯವಾಗುವ ಕೆಲಸ ಮಾತ್ರ ಮಾಡಿಕೊಂಡು ಹೋಗು. ಅನಗತ್ಯವಾದ ಉಸಾಬರಿ ತಲೆ ಮೇಲೆ ಎಳೆದುಕೊಳ್ಳಬೇಡ ಎಂದು ಉಪದೇಶಿಸಿದ. ನಿಜವೇ, ತಾನಾಯಿತು ತನ್ನ ಪಾಡಾಯಿತು ಎಂದು ಬದುಕಬಯಸುವ ಅನೇಕರಂತೆ ಚಾರ್ಲ್ಸ್ ಸಹ ಯೋಚಿಸಿದ್ದು ತೀರಾ ಅಸಹಜವಾಗೇನೂ ಇರಲಿಲ್ಲ. ಆದರೆ ಜೇನ್‌ಳಿಗೆ ಮಾತ್ರ ಮರುಗೆಯ ವಿಷಯದಲ್ಲಿ ಬೇರೆಯವರಂತೆ ಯೋಚಿಸಲಾಗುತ್ತಿರಲಿಲ್ಲ.

ಮರುಗೆ ಶಾಲೆಗೆ ಹೋಗಲೇಬೇಕೆಂದು ನಿರ್ಧರಿಸಿದ್ದ. ಆಲ್‌ಫ್ರೆಡ್‌ನ ಮಾತುಗಳು ಅವನಲ್ಲಿನ ಹಠವನ್ನು ಇನ್ನಷ್ಟು ಹೆಚ್ಚಿಸಿತ್ತು. ತಾನು ಸಾಕಿಕೊಂಡಿದ್ದ ಕೋಳಿಗಳೆರಡನ್ನು ಪಕ್ಕದ ಮನೆಯ ಹೆಂಗಸೊಬ್ಬಳಿಗೆ ಮಾರಿದ. ಅದರಿಂದ ಸಿಕ್ಕಿದ ಹಣದಿಂದ ಶಾಲೆಯ ಸಮವಸ್ತ್ರದ ಬಣ್ಣದ ಹಳೆಯ ಪ್ಯಾಂಟು ಮತ್ತು ಸ್ವೆಟರೊಂದನ್ನು ಕೊಂಡುಕೊಂಡ. ಪ್ಯಾಂಟಿನ ಕಾಲುಗಳನ್ನು ಕತ್ತರಿಸಿ ನಿಕ್ಕರನ್ನಾಗಿ ಮಾಡಿಕೊಂಡ. ಒಂದು ಬ್ಯಾಗು ಮತ್ತು ಕೆಲ ಪುಸ್ತಕ, ಪೆನ್ಸಿಲ್ಲು ಖರೀದಿಸಿದ. ಒಂದು ದಿನ ಬೆಳಗ್ಗೆ ಬ್ಯಾಗನ್ನು ಹೆಗಲಿಗೆ ಹಾಕಿಕೊಂಡು ಕೋಲೂರಿಕೊಂಡು ಕುಂಟುತ್ತಾ ಶಾಲೆಯ ಕಡೆ ಹೊರಟ. ದಾರಿಯಲ್ಲಿ ಹೆಂಡದಂಗಡಿಯ ಮುಂದೆ ಹೆಂಡ ಕುಡಿಯುತ್ತಾ ಮೋಜು ಮಾಡುತ್ತಿದ್ದ ಇವನ ಒಂದು ಕಾಲದ ಹೋರಾಟದ ಗೆಳೆಯರು ಇವನ ಅವತಾರ ನೋಡಿ ನಕ್ಕರು. 'ಏಯ್ ಮರೂಗೆ... ಬಾ ಇಲ್ಲಿ, ಈ ವಯಸ್ಸಿನಲ್ಲಿ ನೀನು ಓದಿ ಯಾರನ್ನ ಉದ್ಧಾರ ಮಾಡ್ಬೇಕು, ಬಾ ಇಲ್ಲಿ ಸ್ವಲ್ಪ ಕುಡಿ... ಮಜಾ ಮಾಡು. ಈ ಹುಚ್ಚಾಟ ಬಿಡು.' ಎಂದು ಜೋರಾಗಿ ನಕ್ಕು ಕೂಗಿದರು. ಮರುಗೆ ಕೇಳಿಸಿಯೂ ಕೇಳದಂತೆ ಆ ಕಡೆ ತಿರುಗಿಯೂ ನೋಡದೆ ದಾಪುಗಾಲಿಡುತ್ತಾ ಶಾಲೆಯ ಕಡೆ ಹೊರಟ. ಅವನಿಗೆ ಅವನ ಗುರಿ ಸ್ಪಷ್ಟವಾಗಿತ್ತು.

ಶಾಲೆಯ ಬಳಿ ಮಕ್ಕಳೆಲ್ಲಾ ಗುಂಪಾಗಿ ನಿಂತು ಕುಣಿಯುತ್ತಾ ಪ್ರಾರ್ಥನೆ ಮಾಡುತ್ತಿದ್ದರು. ಅದು ಕೀನ್ಯಾದ ರಾಷ್ಟ್ರಗೀತೆ. ಹಾಡು ಮತ್ತು ಕುಣಿತ ಕಪ್ಪು ಜನರ ಸಂಸ್ಕೃತಿಯ ಅವಿಭಾಜ್ಯ ಅಂಗ. ಮಕ್ಕಳೊಂದಿಗೆ ಕುಣಿಯುತ್ತಿದ್ದ ಆಲ್‌ಫ್ರೆಡ್ ಗೇಟಿನ ಬಳಿ ಬಂದು ನಿಂತ ಆಕೃತಿಯನ್ನು ನೋಡಿ ಒಂದರೆಕ್ಷಣ ತನ್ನ ಕಣ್ಣುಗಳನ್ನು ತಾನೆ ನಂಬದಾದ. ಅಲ್ಲಿ ಗೇಟಿನುದ್ದಕ್ಕೂ ನಿಂತಿದ್ದುದು ಮರುಗೆ. ಕೂಡಲೇ ಆಫೀಸು ರೂಮಿಗೆ ಹೋಗಿ ಜೇನ್‌ಳನ್ನು ಕರೆದ. ಏನು ಎಂದ ಅವಳಿಗೆ ನೀನೆ ಬಂದು ನೋಡು ಎಂಬಂತೆ ಸನ್ನೆ ಮಾಡಿದ. ಶಾಲಾ ಮಕ್ಕಳಂತೆ ಸಮವಸ್ತ್ರ ಧರಿಸಿ ಹೆಗಲಿಗೆ ಬ್ಯಾಗು ನೇತಾಕಿಕೊಂಡು ಕೋಲೂರಿ ನಿಂತಿದ್ದ ಮರುಗೆಯನ್ನು ನೋಡಿ ಜೇನ್ ದಂಗಾದಳು. ಅವನನ್ನು ಬೈದು ಓಡಿಸಲೆಂದು ಮುನ್ನುಗ್ಗುತ್ತಿದ್ದ ಆಲ್‌ಫ್ರೆಡ್‌ನನ್ನು ತಡೆದು ನಿಲ್ಲಿಸಿದಳು. "ನಿಮಗ್ಯಾಕೆ ಈ ವಯಸ್ಸಿನಲ್ಲಿ ಕಲಿಯಲೇಬೇಕೆಂಬ ಹಠ...?" ಮರುಗೆಯನ್ನು ಕೇಳಿದಳು. "ನಾನು ಮೊದಲೇ ಕಲಿಯಬೇಕಿತ್ತು... ನಿಜ. ಆದರೆ ಅಂದು ನಾಡಿನ ಸ್ವಾತಂತ್ರ್ಯ ಹೋರಾಟ ನನಗೆ ಆ ಅವಕಾಶ ನೀಡಲಿಲ್ಲ. ಆದರೂ ನಾನಂದು ಓದುವುದನ್ನು ಕಲಿತಿದ್ದರೆ... ನನ್ನ ಜೀವನ ಬೇರೆಯದೇ ಆಗಿರುತ್ತಿತ್ತು. ಸ್ವಾತಂತ್ರ್ಯ ಬಂದಾಗ ನಾನು ಜೈಲಿನಲ್ಲಿದ್ದೆ. ಬಿಡುಗಡೆಯಾದಂದಿನಿಂದ ನಾನು ಒಬ್ಬಂಟಿಯಾಗಿದ್ದೇನೆ. ನನ್ನವರೂ ಅಂತ ಯಾರೂ ಇಲ್ಲ. ಆಗ ನನಗೆ ಏನೂ ಬೇಡವಾಗಿತ್ತು. ಆದರೆ ಅಧ್ಯಕ್ಷರ ಅರಮನೆಯಿಂದ ನನಗೊಂದು ಪತ್ರ ಬಂದ

ಮೇಲೆ ಅದನ್ನು ಓದಬೇಕೆಂಬ ಆಸೆ ಬಂತು. ಆದರೆ ನನ್ನ ಹಳ್ಳಿಯಲ್ಲಿ ಅದನ್ನು ಓದಿ ಹೇಳುವವರೂ ಇಲ್ಲ...! ಇಷ್ಟು ವರ್ಷಗಳಾದ ಮೇಲೆ ಸರ್ಕಾರ ಎಲ್ಲರಿಗೂ ವಿದ್ಯೆ ಕಲಿಸಲು ಹೊರಟಿದೆ. ಈಗಲಾದರೂ ನಾನು ಓದುವುದನ್ನು ಕಲಿತು ಕನಿಷ್ಠ ಆ ಪತ್ರವನ್ನಾದರೂ ಓದಿಕೊಳ್ಳಬೇಕು. ದಯವಿಟ್ಟು ನನಗೆ ಓದು ಬರಹ ಕಲಿಸಿಕೊಡಿ. ಸರ್ಕಾರ ಕಲಿಯಲಿಕ್ಕೆ ವಯಸ್ಸಿನ ಮಿತಿ ಹಾಕಿಲ್ಲ ಎಂದುಕೊಳ್ಳುತ್ತೇನೆ..." ಎಂದ ಮರುಗೆ. ಎಂಬತ್ತೂರು ವರ್ಷದ ಮುದುಕನ ಕಲಿಯುವ ಹಂಬಲ ನೋಡಿ ಜೇನ್ ಮಾತು ಹೊರಡದೆ ಮೂಕಳಾದಳು. ಒಂದರೆಕ್ಷಣ ಸುಮ್ಮನೆ ಅವನನ್ನೇ ದಿಟ್ಟಿಸಿ ನೋಡಿ ನಿಧಾನವಾಗಿ ಗೇಟಿನ ಬಾಗಿಲು ತೆರೆದು 'ಒಳಗೆ ಬಾ' ಎಂದು ನಸು ನಗುತ್ತಾ ಕರೆದಳು. ಮರುಗೆಯ ಕಣ್ಣುಗಳು ಮಿನುಗತೊಡಗಿದವು.

✶ ✶ ✶

ಅಂದಿನಿಂದ ಮರುಗೆಯ ಜೀವನ ಹೊಸದೊಂದು ಮಜಲಿಗೆ ಹೊರಳಿಕೊಂಡಿತು. ಅವನು ಕಳೆದ ಐವತ್ತು ವರ್ಷಗಳಿಂದ ಅನುಭವಿಸಿದ ಏಕಾಂಗಿತನದಿಂದ ಹೊರಬರತೊಡಗಿದ. ಪ್ರತಿದಿನ ಶಾಲೆಗೆ ಹೋಗುವುದು ತನಗಿಂತ ಸುಮಾರು ಎಪ್ಪತ್ತು ವರ್ಷಗಳಷ್ಟು ಕಿರಿಯರಾದ ಮಕ್ಕಳೊಂದಿಗೆ ಕೂತು ಅಕ್ಷರಾಭ್ಯಾಸ ಮಾಡುವುದು ತುಂಬ ಖುಷಿ ನೀಡುತ್ತಿತ್ತು. ಪೆನ್ಸಿಲ್ ಹಿಡಿಯುವುದು, ಪುಸ್ತಕ ಹಿಡಿಯುವುದರಿಂದ ಮೊದಲುಗೊಂಡು ಅಕ್ಷರಗಳು, ಅಂಕಿಗಳು ಹೀಗೆ ಪ್ರತಿಯೊಂದನ್ನೂ ಮನಸಾರೆ ಆನಂದಿಸುತ್ತಾ ಕಲಿಯತೊಡಗಿದ. ಆದರೂ ಅವನ ಮನಸ್ಸು ಒಮ್ಮೊಮ್ಮೆ ಕಳೆದುಹೋದ ದಿನಗಳಿಗೆ ಜಾರುತ್ತಿತ್ತು. ಒಮ್ಮೆ ಮೊಂಡಾದ ಪೆನ್ಸಿಲ್ಲನ್ನು ಚೂಪು ಮಾಡಿಕೊಳ್ಳಲು ಹೋದಾಗ ಸೆರೆಯಲ್ಲಿ ಬ್ರಿಟಿಷರ ಸೈನಿಕನೊಬ್ಬ ಚೂಪಾದ ಪೆನ್ಸಿಲ್ಲಿಂದ ಇವನ ಕಿವಿಗೆ ಚುಚ್ಚಿ ತಮಟೆ ಹರಿದು ಕಿವುಡನನ್ನಾಗಿ ಮಾಡಿದ ಘಟನೆ ನೆನಪಾಗಿ ತಲೆ ತಿರುಗಿ ಬೀಳುವುದರಲ್ಲಿದ್ದ. ಆಗ ಜೇನ್‌ಳೆ ಅವನು ಬೀಳದಂತೆ ಹಿಡಿದುಕೊಂಡಳು. ವಿಚಾರಿಸಿದಾಗ, ಇವನು 'ಮೌ–ಮೌ' ಹೋರಾಟಗಾರನೆಂದು ತಿಳಿದು ಅವನ ಬಗ್ಗೆ ಗೌರವವನ್ನು ಮತ್ತಷ್ಟು ಹೆಚ್ಚಿಸಿಕೊಂಡಳು. ಅವನ ಬಗ್ಗೆ ಮತ್ತಷ್ಟು ತಿಳಿದುಕೊಳ್ಳಲು ಯತ್ನಿಸಿದಾಗ ಅವನು ನಕ್ಕು ಸುಮ್ಮನಾದ.

ಆಟದ ಸಮಯದಲ್ಲಿ ಮಕ್ಕಳೆಲ್ಲಾ ಜಗತ್ತನ್ನೇ ಮರೆತು ಆಟದಲ್ಲಿ ಮುಳುಗುವುದನ್ನು ನೋಡಿ ಮರುಗೆ ಆನಂದಿಸುತ್ತಿದ್ದ. ಆದರೆ ಆ ಮಕ್ಕಳ ಗುಂಪಿನಲ್ಲಿ ಪೋಲಿಯೋ ಪೀಡಿತ ಹೆಣ್ಣುಮಗುವೊಂದು ಮಾತ್ರ ಆಟಕ್ಕೆ ಹೋಗದೆ ಒಬ್ಬಳೇ ಕುಳಿತಿರುತ್ತಿದ್ದಳು. ಒಂದು ದಿನ ಆ ಮಗುವೇ ಮರುಗೆಯ ಬಳಿ ಬಂದು ಮಕ್ಕಳು ಆಡುವುದನ್ನೇ ನೋಡುತ್ತಾ ಕೂತಿದ್ದ ಅವನನ್ನು ಮುಗ್ಧವಾಗಿ, "ಯಾಕೆ ತಾತಾ, ನೀನು ಆಡಲಿಕ್ಕೆ ಹೋಗುವುದಿಲ್ಲವೆ...?" ಎಂದಳು. ಮರುಗೆ ನಸುನಗುತ್ತಾ ಅವಳೆಡೆಗೆ ನೋಡಿದ. "ತಾತಾ ನಿನಗೆ ಹುಷಾರಿಲ್ಲವೇ... ಯೋಚನೆ ಮಾಡಬೇಡ, ನಾನು ಚೆನ್ನಾಗಿ ಓದಿ ಡಾಕ್ಟರಾಗುತ್ತೇನೆ. ಆಗ ನಿನ್ನ ಕಾಯಿಲೆ ವಾಸಿ ಮಾಡುತ್ತೇನೆ." ಎಂದಾಗ ಮರುಗೆಗೆ ಕಳೆದುಕೊಂಡ ತನ್ನ ಮಗಳ ಚಿತ್ರ ಕಣ್ಮುಂದೆ ಬಂದು ಆ ಮಗುವಿನ ತಲೆ ನೇವರಿಸಿದ. ಮರುಗೆ ಮಕ್ಕಳೊಂದಿಗೆ ಶಾಲೆಗೆ ಹೋಗಿ ಬರುವುದನ್ನು ಗಮನಿಸಿದ ಆ ಊರಿನ ಕೆಲ ಯುವಕರು ನಿಧಾನವಾಗಿ ಶಾಲೆಯ ಬಗ್ಗೆ, ಅಲ್ಲಿನ ಶಿಕ್ಷಕರ ಬಗ್ಗೆ... ಮುಖ್ಯವಾಗಿ ಮರುಗೆಯ ಬಗ್ಗೆ ಅಸಮಾಧಾನ ಬೆಳೆಸಿಕೊಳ್ಳತೊಡಗಿದರು. ಅವನು ಶಾಲೆಗೆ ಹೋಗುವಾಗ ಬರುವಾಗ ಅವನನ್ನು ನೇರವಾಗಿ ಅಣಕಿಸಲು ತೊಡಗಿದರು. ಬರಬರುತ್ತಾ ಹೆದರಿಸಲೂ ತೊಡಗಿದರು. ಮರುಗೆಗೂ ಮನೆಯಲ್ಲಿ ಕುಳಿತು ಶಾಲೆಯಲ್ಲಿ ಕಲಿತಿದ್ದನ್ನು ಪುನಃ ಅಭ್ಯಾಸ ಮಾಡುವಾಗ, ಆಗಾಗ ಯಾರೋ "ಏ ಮರೂಗೆ... ಬಾರೋ ಹೊರಗೆ" ಎಂದು ಕೂಗಿದಂತಾಗುತ್ತಿತ್ತು. ಅಂದು ಇದೇ ರೀತಿ ಕೂಗಿ ತನ್ನನ್ನು ತನ್ನ ಗೆಳೆಯರನ್ನು ಬ್ರಿಟಿಷರು ಬಂಧಿಸಿ ಎಳೆದೊಯ್ದ ದೃಶ್ಯ ನೆನಪಾಗುತ್ತಿತ್ತು. ಹೊರಗೆ ಬಂದು ನೋಡಿದರೆ ಯಾರೂ ಇರುತ್ತಿರಲಿಲ್ಲ. ಮತ್ತೆ ಮನೆಯೊಳಗೆ ಹೋಗಿ ಮೌನವಾಗಿ ಕೂರುತ್ತಿದ್ದ.

ಮರುಗೆ ನಿಧಾನವಾಗಿ ತನ್ನ ಕಿರಿಯ ಸಹಪಾಠಿಗಳಿಗೆ ತಾಳ್ಮೆಯಿಂದ ಸ್ವಾತಂತ್ರ್ಯ ಹೋರಾಟದ ಕಥೆಗಳನ್ನು ಹೇಳುತ್ತಿದ್ದ. ಕಿಕುಯು ಮೂಲನಿವಾಸಿಗಳು ಬ್ರಿಟಿಷರ ಟೀ ಎಸ್ಟೇಟುಗಳಿಗಾಗಿ ತಮ್ಮ ನೆಲವನ್ನು ಕಳೆದುಕೊಂಡಿದ್ದವರಲ್ಲಿ ಪ್ರಮುಖರು. ತಾನು ಮತ್ತು ತನ್ನ ಸಂಗಡಿಗರು ಕಾಡಿನ ಮಧ್ಯೆ ತಮ್ಮ ಗ್ರಾಮ ದೇವತೆಯ ಸಾಕ್ಷಿಯಾಗಿ ಪ್ರಮಾಣ ಮಾಡಿದ್ದನ್ನು ಹೇಳುತ್ತಾ, ತಾವು ಹೇಗೆ ಬ್ರಿಟಿಷ್ ಜಮೀನ್ದಾರನ ಮನೆಗೆ ನುಗ್ಗಿ ಅವನನ್ನು ಕಟ್ಟಿಹಾಕಿ ಆ ಮನೆಯಲ್ಲಿದ್ದ ಬಂದೂಕುಗಳನ್ನು ದೋಚಿಕೊಂಡು ಪರಾರಿಯಾಗಿದ್ದನ್ನು ಹೇಳುತ್ತಿದ್ದ. ಓಡಿ ಬರುವಾಗ ಹಿಂದೆಯೇ ಬಂದ ಪೊಲೀಸರು ತಮ್ಮಲ್ಲೊಬ್ಬನನ್ನು ಗುಂಡಿಟ್ಟು ಕೊಂದದ್ದನ್ನು ಹೇಳುತ್ತಾ ಗದ್ಗದಿತನಾಗುತ್ತಿದ್ದ. ಒಂದು ದಿನ ಹೀಗೆ ಸ್ವಾತಂತ್ರ್ಯ ಹೋರಾಟದ ಕಥೆಗಳನ್ನು ಹೇಳುತ್ತಾ... '೧೯೬೩ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂತು, ನಾವೆಲ್ಲಾ ಸ್ವತಂತ್ರರಾದೆವು' ಎಂದು ಆವೇಶದಿಂದ ಮಕ್ಕಳನ್ನೂ ಸೇರಿಸಿಕೊಂಡು ಘೋಷಣೆಗಳನ್ನು ಕೂಗಲು ತೊಡಗಿದ. ಆಲ್‌ಫ್ರೆಡ್ ಅಸಮಾಧಾನಗೊಂಡು ಜೇನ್‌ಳ ಬಳಿ ಇದು ಸಮಸ್ಯೆಯಾಗುತ್ತಿದೆ ಎಂದು ದೂರಿದ. ಆದರೆ ಜೇನ್ ಅವನ ಮಾತಿನ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲ. ಹೆಂಡದಂಗಡಿಯಲ್ಲಿ ಕೂತು ಕಾಡುಹರಟೆ ಹೊಡೆಯುತ್ತಿದ್ದ ಒಂದು ಕಾಲದ ಗೆಳೆಯರು ಶಾಲೆಯಿಂದ ಮನೆ ಕಡೆ ಹೊರಟ ಮರುಗೆಯನ್ನು ನೋಡಿ ನಗಾಡುತ್ತಿದ್ದರು. ಮರುಗೆ ಮೌನವಾಗಿ ಮನೆ ಸೇರಿಕೊಳ್ಳುತ್ತಿದ್ದ. ರಾತ್ರಿ ಮಲಗಿದಾಗ ಮರುಗೆಗೆ ಹಿಂದಿನ ದಿನಗಳ ನೆನಪುಗಳು ಬರುತ್ತಿದ್ದವು.

ಅಲ್ಲಲ್ಲಿ ಬಂಧಿಸಿದ 'ಮೌ–ಮೌ' ಹೋರಾಟಗಾರರನ್ನೆಲ್ಲ ಬ್ರಿಟಿಷರು ಒಂದು ಕ್ಯಾಂಪಿನಲ್ಲಿ ಕೂಡಿಹಾಕುತ್ತಿದ್ದರು. ಅಲ್ಲಿಗೆ ಕರೆದುಕೊಂಡು ಬಂದ ಕೂಡಲೇ ಅವರ ಮೈಮೇಲೆ ಒಂದು ಚೂರು ಬಟ್ಟೆಯೂ ಇಲ್ಲದಂತೆ ಮಾಡಿಬಿಡುತ್ತಿದ್ದರು. ಆ ಕ್ಯಾಂಪು ಇದ್ದ ವಿಶಾಲವಾದ ಬಯಲಿನ ಒಂದು ಮೂಲೆಯಲ್ಲಿದ್ದ ಹಳೆಯ ಕೊಠಡಿಯೇ ವಿಚಾರಣಾ ಸೆಲ್. ಅದರೊಳಗೆ ಹೋದವರು ಬದುಕಿ ಬಂದ ಉದಾಹರಣೆಗಳು ಕಡಿಮೆ. ತನ್ನನ್ನೂ ಒಂದು ದಿನ ಅಲ್ಲಿ ಕೈಗಳನ್ನು ಹಿಂದಕ್ಕೆ ಕಟ್ಟಿ ನಗ್ನವಾಗಿ ತಲೆ ಕೆಳಗೆ ನೇತುಹಾಕಿ ಕಿಕುಯುಗಳ ಪ್ರತಿಜ್ಞೆಯ ಬಗ್ಗೆ ತಿಳಿದುಕೊಳ್ಳಲು ಹಿಂಸಿಸಿದ್ದು ಈಗಿನ್ನೂ ನಡೆದಂತಿದೆ. ಅಂದು ತಾನು ಬಾಯಿ ಬಿಟ್ಟಿದ್ದರೆ ಬಚಾವಾಗಿಬಿಡಬಹುದಿತ್ತು. ಅಂದು ಬಚಾವಾದವರು ಇಂದು ನನ್ನನ್ನು ನೋಡಿ ನಗುತ್ತಿದ್ದಾರೆ... ಎಂದುಕೊಂಡು ಹಲ್ಲು ಕಡಿದುಕೊಳ್ಳುತ್ತಿದ್ದ.

ಇದೆಲ್ಲದರ ಮಧ್ಯೆ ಮರುಗೆಯ ಜೀವನ ಸಾಗುತ್ತಿತ್ತು. ಒಂದು ಲೇಖನ ಬರೆಯುವ ಉದ್ದೇಶದಿಂದ ಪತ್ರಿಕಾ ವರದಿಗಾರನೊಬ್ಬ ಒಮ್ಮೆ ಇಂತಹ ಶಾಲೆಗಳ ಫೋಟೋ ತೆಗೆಯುತ್ತಿದ್ದ. ಜೇನ್‌ಳ ಶಾಲೆಯ ಫೋಟೋ ತೆಗೆಯುವಾಗ ಮಕ್ಕಳಂತೆ ಸಮವಸ್ತ್ರ ಧರಿಸಿ ಮಕ್ಕಳ ನಡುವೆ ಕೂತು ಕಥೆಗಳನ್ನು ಹೇಳುತ್ತಿದ್ದ ಮರುಗೆ ಅವನ ಕಣ್ಣಿಗೆ ಬಿದ್ದ. ಕುತೂಹಲದಿಂದ ವಿಚಾರಿಸಿದಾಗ ಅವನೂ ಈ ಶಾಲೆಯ ವಿದ್ಯಾರ್ಥಿ ಎಂಬ ವಿಷಯ ಗೊತ್ತಾಯಿತು. ಅವನು ಅದನ್ನು ತನ್ನ ಪತ್ರಿಕೆಯಲ್ಲಿ ವರದಿ ಮಾಡಿದ. ಇದು ರೇಡಿಯೋದಲ್ಲೂ ವರದಿ ಯಾಯಿತು. ನಂತರ ಇದೆಲ್ಲವೂ ಬೇರೆಯದೇ ರೀತಿಯ ತಿರುವು ತೆಗೆದುಕೊಂಡಿತು. ಇದೊಂದು ವಿಶೇಷ ಎಂಬಂತೆ ಯಾರೂ ಪರಿಗಣಿಸುವುದಿಲ್ಲ. ಅಸಹಜವೆಂಬಂತೆ ನೋಡತೊಡಗಿದರು. ಎಲ್ಲ ಕಾಲಕ್ಕೂ ಎಲ್ಲ ದೇಶಗಳಲ್ಲೂ ಇದೇ ಅಲ್ಲವೆ ಆಗುವುದು ? ಯಾವುದೇ ಒಂದು ಒಳ್ಳೆಯ ಕೆಲಸ ಮೊದಲು ಗೇಲಿಗೊಳಗಾಗುತ್ತದೆ. ಕೊನೆಯಲ್ಲಿ ಎಲ್ಲರೂ ಅದನ್ನು ಒಪ್ಪಿ ಹೊಗಳುವ ಮುಂಚೆ ಸಾಕಷ್ಟು ವಿರೋಧಗಳನ್ನು ಎದುರಿಸಬೇಕಾಗುತ್ತದೆ. ಜೇನ್ ಮತ್ತು ಮರುಗೆಗೂ ಪತ್ರಿಕೆ ಮತ್ತು ರೇಡಿಯೋದ ಪ್ರಚಾರದಿಂದ ಆದದ್ದು ಇದೆ. ಜೇನ್‌ಳಿಗೆ ಇಲಾಖೆಯ ಕಡೆಯಿಂದ, ಮರುಗೆಗೆ ತನ್ನ ಊರಿನವರಿಂದ ಕಿರುಕುಳಗಳು ಪ್ರಾರಂಭವಾದವು.




ಒಂದು ದಿನ ಆಟದ ಸಮಯದಲ್ಲಿ ಒಬ್ಬ ಹುಡುಗ ಇನ್ನೊಬ್ಬನನ್ನು ಹಿಂದಿನಿಂದ ಒದೆಯುತ್ತಿದ್ದುದನ್ನು ನೋಡಿದ ಮರುಗೆಗೆ ತುಂಬ ಕೋಪ ಬಂತು. ಕೂಡಲೆ ಅಲ್ಲಿಗೆ ಹೋಗಿ ಜಗಳ ಬಿಡಿಸಿ ಇಬ್ಬರಿಗೂ ತನ್ನ ಊರುಗೋಲಿನಿಂದ ಬಿಗಿದು ನಾವು ನಮ್ಮ ನಮ್ಮಲ್ಲಿ ಜಗಳ ಆಡಬಾರದು ಎಂದು ಜೋರಾಗಿ ಕೂಗಾಡಿ ಬುದ್ಧಿವಾದ ಹೇಳಿದ. ಮರುಗೆಯಿಂದ ಒದೆ ತಿಂದ ಆ ಹುಡುಗನೂ ಸಹ ಜೋರಾಗಿ ಕಿರುಚತೊಡಗಿದಾಗ, ದೂರದಿಂದ ಇದನ್ನು ನೋಡಿದ ಜೇನ್ ಮತ್ತು ಆಲ್‌ಫ್ರೆಡ್ ಇಬ್ಬರೂ ಮರುಗೆ ಯಾರನ್ನೋ ವಿನಾಕಾರಣ ಬಡಿಯುತ್ತಿದ್ದಾನೆ ಎಂದೇ ಭಾವಿಸಿ ಅಲ್ಲಿಗೆ ಓಡಿ ಬಂದರು. ಜೇನ್ ಮರುಗೆಯನ್ನು, ಆಲ್‌ಫ್ರೆಡ್ ಆ ಹುಡುಗರನ್ನು ಅತ್ತಿತ್ತ ಎಳೆದಾಡುತ್ತಿದ್ದ ಸಮಯಕ್ಕೆ ಶಿಕ್ಷಣ ಇಲಾಖೆಯ ಅಧಿಕಾರಿ ಅಲ್ಲಿಗೆ ಬಂದ. ಅವನ ಹೆಸರು ಕಿಪ್ರುತೊ. ಅವನು ರಾಜಧಾನಿ ನೈರೋಬಿಯಿಂದ ಕಾರಿನಲ್ಲಿ ಈ ಕುಗ್ರಾಮಕ್ಕೆ ಬಂದಿದ್ದೇ ಮರುಗೆಯ ವಿಷಯ ಚರ್ಚಿಸಲಿಕ್ಕೆ. ಪತ್ರಿಕೆಗಳಲ್ಲಿ, ರೇಡಿಯೋದಲ್ಲಿ ಬಂದಿದ್ದ ವರದಿಗಳಿಂದ ಅವನು ಕುಪಿತನಾಗಿದ್ದ. ಅವನ ದೃಷ್ಟಿಯಲ್ಲಿ ಇದು ಜೇನ್, ಪ್ರಚಾರಕ್ಕಾಗಿ ಮಾಡಿದ ಕೃತ್ಯವಾಗಿತ್ತು. ನಿಜವೇ... ಎಲ್ಲ ಮೇಲಧಿಕಾರಿಗಳೂ ತಮ್ಮ ಕೈಕೆಳಗಿನವರ ಎಲ್ಲ ಕೆಲಸಗಳನ್ನೂ ಅನುಮಾನದಿಂದಲೇ ನೋಡುವುದು. ಬರುತ್ತಿದ್ದಂತೆಯೇ ಶಾಲೆಯ ಬಳಿ ನಡೆಯುತ್ತಿದ್ದ ಈ ಗದ್ದಲವನ್ನು ನೋಡಿದ. ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಗಿತ್ತು. ಕಾರಿನಿಂದಿಳಿದವನೇ, “ಏಯ್ ನಿಲ್ಲಿಸಿ... ಏನಿದು ಗದ್ದಲ..., ಯಾರೀ ಮುದುಕ...? ಇವನ್ಯಾಕೆ ಇಲ್ಲಿದ್ದಾನೆ...? ಆಂ...” ಎನ್ನುತ್ತ ಇವರ ಗುಂಪಿನೆಡೆಗೆ ಬಂದ. “ಸಾರ್, ಇವರು ಮರುಗೆ. ನಮ್ಮ ಶಾಲೆಯ ವಿದ್ಯಾರ್ಥಿ. ಇಲ್ಲಿ ಮಕ್ಕಳ ನಡುವಿನ ಒಂದು ಸಣ್ಣ ಗದ್ದಲವನ್ನು ಬಿಡಿಸುತ್ತಿದ್ದೇವೆ, ಅಷ್ಟೆ. ಇನ್ನೇನೂ ಇಲ್ಲ ಸಾರ್. ಕ್ಷಮಿಸಿ” ಎಂದಳು ಜೇನ್. ಅವನು ಕ್ರೂರವಾಗಿ ಜೇನ್‌ಳ ಕಡೆ ನೋಡಿ ವ್ಯಂಗ್ಯವಾಗಿ “ವಿದ್ಯಾರ್ಥಿ...! ಬುದ್ಧಿ ಇದೆಯಾ ನಿನಗೆ.. ಈ ಮುದುಕ ವಿದ್ಯಾರ್ಥಿಯೇ...? ಶಾಲೆ ಅಂದರೆ ಸಣ್ಣ ಮಕ್ಕಳು ಕಲಿಯುವ ಜಾಗ. ಇದು ತಿಳಿಯದಾ ನಿನಗೆ...” ಎಂದ. “ಗೊತ್ತಿದೆ ಸಾರ್...ಆದರೆ ಸರ್ಕಾರವೇ ಎಲ್ಲರಿಗೂ ಉಚಿತ ಶಿಕ್ಷಣ ಎಂದು ಹೇಳಿದೆಯಲ್ಲಾ... ಜೊತೆಗೆ ಇವರು ಸ್ವಾತಂತ್ರ್ಯ ಹೋರಾಟಗಾರರು. ಕೀನ್ಯಾದ ಬಿಡುಗಡೆಗಾಗಿ ಬ್ರಿಟಿಷರ ವಿರುದ್ಧ ನಿರ್ಣಾಯಕ ಹೋರಾಟ ಮಾಡಿದ ಮೌ–ಮೌ ಗುಂಪಿನವರು” ಎಂದು ಜೇನ್ ವಿನೀತಳಾಗಿಯೇ ಹೇಳಿದಳು. ಮೌ–ಮೌ ಹೆಸರು ಕೇಳಿದೊಡನೆಯೇ ಅವನು ಇನ್ನಷ್ಟು ಕೆರಳಿದ. ಕಿಕುಯು ಬುಡಕಟ್ಟಿನ ಜನಾಂಗದವರನ್ನು ‘ಮೌ–ಮೌ’ ಗಳೆಂದು ಗುರುತಿಸಲಾಗುತ್ತಿತ್ತು. ಕಿಕುಯುಗಳನ್ನು ಕೀನ್ಯಾದ ಸಾಮಾಜಿಕ ಜೀವನದಲ್ಲಿ ಮೊದಲಿನಿಂದಲೂ ಒಂದು ರೀತಿಯ ಅಸ್ಪೃಶ್ಯರಂತೆಯೇ ನೋಡಲಾಗುತ್ತಿತ್ತು. ಕಾರಣ ಕೀನ್ಯಾದ ಇತಿಹಾಸದಲ್ಲಿ ಇವರ ಹೋರಾಟವನ್ನು ಒಂದು ಸಣ್ಣ ಬುಡಕಟ್ಟಿನ ಹೋರಾಟವಾಗಿ ಮಾತ್ರ ಗುರುತಿಸುತ್ತಾರೆ. ಆದ್ದರಿಂದಲೇ ಕಿಪ್ರುತೋ ಮತ್ತಷ್ಟು ಕೆರಳಿದ್ದು. ಜೇನ್‌ಳಿಗೆ ಗಟ್ಟಿಯಾಗಿ ಹೇಳಿದ... “ತಿಳಿದುಕೋ... ಮೌ–ಮೌಗಳು ಸ್ವಾತಂತ್ರ್ಯ ಹೋರಾಟಗಾರರಲ್ಲ. ಅವರು ಕೇವಲ ದರೋಡೆ ಕೋರರು, ಕೊಲೆಗಾರರು. ನಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ಎಂದು ಕೊಳ್ಳುವುದೇ ಮೊದಲನೇ ತಪ್ಪು. ಬೇಕಿದ್ದರೆ ಆ ಮುದುಕ ವಯಸ್ಕರ ಶಾಲೆಗೆ ಹೋಗಲಿ. ಸರ್ಕಾರ ಇಂತಹ ವರಿಗಾಗಿಯೂ ಶಾಲೆಯೊಂದನ್ನು ಮಾಡಿದೆಯಲ್ಲ... ಕಳುಹಿಸು ಅಲ್ಲಿಗೆ. ನಾಳೆಯಿಂದ ಅವನು ಇಲ್ಲಿಗೆ ಬರಬಾರದು. ತಿಳಿಯಿತೇ...?” ಎಂದವನೇ ಅಲ್ಲಿಂದ ಹೊರಟೇಬಿಟ್ಟ. ಮತ್ತೆ ಮಾತಿಗೆ ಅವಕಾಶವನ್ನೇ ಕೊಡಲಿಲ್ಲ.

ಜೇನ್ ದಿಕ್ಕುಗಾಣದಂತಾದಳು. ಆಲ್‌ಫ್ರೆಡ್ ಸುಮ್ಮನೆ ನಿಂತಿದ್ದ. ಕಿಪ್ರುತೋನ ಮಾತುಗಳಿಂದ ಮರುಗೆಗೆ ತುಂಬ ಕೋಪ ಬಂದಿತ್ತು. ಮರುಗೆ ನೀನು ಸುಮ್ಮನಿದ್ದಿದ್ದರೆ ಇಷ್ಟೆಲ್ಲಾ ಆಗುತ್ತಿರಲಿಲ್ಲ... ಎಂದು ಅವನಿಗೆ ಹೇಳಲು ಜೇನ್ ಪ್ರಯತ್ನಿಸಿದಳು. ಆದರೆ ಮರುಗೆ ಅವಳ ಮಾತನ್ನು ಕೇಳುವ ಮನಃಸ್ಥಿತಿಯಲ್ಲಿ ಇರಲಿಲ್ಲ. “ದ್ರೋಹಿಗಳು... ಇವರ ಕಣ್ಣಿಗೆ ನಾವು ಮನುಷ್ಯರೇ ಅಲ್ಲ. ಇಂತಹವರ ಬದುಕಿಗಾಗಿಯೇನಾ ನಾವು ಹೋರಾಟ ಮಾಡಿದ್ದು...?” ಎಂದು ಜೋರಾಗಿ ಕಿರುಚಿದ. “ಸಮಾಧಾನ ಮಾಡಿಕೊ ಮರುಗೆ. ಈಗ ನಿನ್ನ ಸ್ವಾತಂತ್ರ್ಯ ಹೋರಾಟದ ಕಥೆ ಇಲ್ಲಿ ಬೇಡ. ನಾವೆಲ್ಲ ಎಂದೂ ಬ್ರಿಟಿಷರ ವಿರುದ್ಧ ಹೋಗಲಿಲ್ಲ. ನಮ್ಮ ಬದುಕನ್ನು ಅವರೆಂದೂ ಕಿತ್ತುಕೊಂಡಿರಲಿಲ್ಲ.” ಎನ್ನುತ್ತಾ ಜೇನ್‌ಳೂ ತಾಳ್ಮೆ ಕಳೆದುಕೊಳ್ಳುತ್ತಾ ಧ್ವನಿ ಏರಿಸಿ ಮಾತಾಡತೊಡಗಿದಳು. “ನೀನು ಬ್ರಿಟಿಷರ ವಿರುದ್ಧ ಹೋದೆ..., ಆದ್ದರಿಂದಲೇ ಅವರು ನಿನಗೆ ತೊಂದರೆ ಕೊಟ್ಟರು. ಅವರು ನಮ್ಮ ತಂಟೆಗೆ ಬರಲೇ ಇಲ್ಲವಲ್ಲ...” ಜೇನ್ ಹೇಳುತ್ತಲೇ ಇದ್ದಳು. ಅವಳ ಮಾತನ್ನು ಮಧ್ಯದಲ್ಲೇ ತುಂಡರಿಸಿದ ಮರುಗೆ ಜೇನ್‌ಳಿಗೆ ಕಠೋರವಾಗಿ ಹೇಳಿದ... “ಅವರು ನಿನ್ನ ಬದುಕಿಗೆ ಆಧಾರವಾಗಿದ್ದ ನೆಲವನ್ನು ನಿನ್ನಿಂದ ಕಿತ್ತುಕೊಳ್ಳಲಿಲ್ಲ... ಹಾಗಾಗಿ ನಿನಗೆ ಹೋರಾಟ ಬೇಕಾಗಲಿಲ್ಲ... ಆದರೆ ನಾನು ನೆಲ ಕಳೆದುಕೊಂಡೆ... ಪ್ರಶ್ನೆ ಮಾಡಿದ್ದಕ್ಕೆ ಅವರು ನನ್ನ ಹೆಂಡತಿ ಮಗಳನ್ನು ನನ್ನೆದುರೇ ಹಿಂಸಿಸಿ ಕೊಂದರು... ನನ್ನ ಕಾಲನ್ನು ಮುರಿದರು... ಇಂತಹ ಅನುಭವಗಳು ನಿಮಗಾಗಲಿ ನಿಮ್ಮ ಹಿರಿಯರಿಗಾಗಲಿ ಇಲ್ಲ... ಇದ್ದಿದ್ದರೆ ನನ್ನ ನೋವು ನಿಮಗೆ ಅರ್ಥವಾಗುತ್ತಿತ್ತು... ಬ್ರಿಟಿಷರು ನಮ್ಮನ್ನು... ಅಂದರೆ... ಕಿಕುಯುಗಳನ್ನು ಹುಡುಕಿ, ಹುಡುಕಿ ಕೊಂದರು... ಈ ನಾಡಿನ ಸ್ವಾತಂತ್ರ್ಯಕ್ಕೆ ನಾವು ಸಾಕಷ್ಟು ಬೆಲೆ ತೆತ್ತಿದ್ದೇವೆ... ಇದು ಗೊತ್ತಾ ನಿನಗೆ...?” ಎಂದು ಅಬ್ಬರಿಸಿದ ಮರುಗೆ ಅಲ್ಲಿಂದ ಹೊರಟುಬಿಟ್ಟ.

ಈ ತಲೆಮಾರಿನ ಜೇನ್‌ಳಿಗಾಗಲಿ, ಆಲ್‌ಫ್ರೆಡ್‌ನಿಗಾಗಲಿ ಅಥವಾ ಕಿಪ್ರುತೋನಿಗಾಗಲಿ ಆ ಹೋರಾಟದ ತೀವ್ರತೆಗಳು ಗೊತ್ತಿರಲಿಕ್ಕೆ ಸಾಧ್ಯವೇ ಇರಲಿಲ್ಲ. ಇವರೆಲ್ಲ ಇತಿಹಾಸವನ್ನು ಕೇವಲ ಪುಸ್ತಕಗಳಲ್ಲಿ ಓದಿಯಷ್ಟೇ ತಿಳಿದುಕೊಂಡಿದ್ದವರು. ಆ ಪುಸ್ತಕಗಳನ್ನು ಬರೆದವರ ಪೂರ್ವಗ್ರಹ ಮನಸ್ಸುಗಳು ಮುಂದಿನ ತಲೆಮಾರಿಗೂ ಹರಿದು ಬಂದಿರುತ್ತವೆ. ಹಾಗಾಗಿಯೇ ಕಿಕುಯುಗಳ ತ್ಯಾಗ ಅಲ್ಲಿನ ಜನಮಾನಸದಲ್ಲಿ ನೆಲೆ ಕಂಡುಕೊಂಡಿರಲಿಲ್ಲ.

ಮರುಗೆ ಅಲ್ಲಿಂದ ಹೊರಟ ನಂತರ ಮೌನವಾಗಿ ನಿಂತೇ ಇದ್ದ ಜೇನ್‌ಳ ಕಣ್ಣಲ್ಲಿ ನೀರಾಡುತ್ತಿತ್ತು. ಅವಳು ಬೇರೇನೂ ಮಾಡುವಂತಿರಲಿಲ್ಲ. ಕಿಪ್ರುತೋನ ಆಜ್ಞೆಯನ್ನು ಪಾಲಿಸಲೇಬೇಕಿತ್ತು. ಆದರೂ ತಾನೇ ರಾಜಧಾನಿಗೆ ಹೋಗಿ ಕಿಪ್ರುತೋನಿಗಿಂತ ಮೇಲಿನ ಅಧಿಕಾರಿಗಳನ್ನು ಕಂಡು ಮಾತನಾಡಿದಳು. ಯಾರೂ

ಮರುಗೆಯನ್ನು ಪ್ರಾಥಮಿಕ ಶಾಲೆಯಲ್ಲಿ ಮುಂದುವರಿಸಲು ಒಪ್ಪಲಿಲ್ಲ. ಎಲ್ಲರೂ ಅವನು ವಯಸ್ಕರ ಶಾಲೆಗೆ ಹೋಗುವುದೇ ಸರಿ ಎಂದರು.

✶ ✶ ✶

ಮರುಗೆಯ ಮನೆಗೇ ಬಂದು, ಅವನನ್ನು ವಯಸ್ಕರ ಶಾಲೆಗೆ ಹೋಗಲು ಒಪ್ಪಿಸುವಷ್ಟರಲ್ಲಿ ಜೇನ್‌ಳಿಗೆ ಸಾಕಾಗಿಹೋಯಿತು. ಏಕೆಂದರೆ ಮರುಗೆ ತಾನು ಹೋಗುವುದಿಲ್ಲ ಎಂದು ಹಠ ಮಾಡಲಿಲ್ಲ. ಆದರೆ ಅವನ ಮೌನಕ್ಕೆ ಉತ್ತರಿಸಲು ಅವಳಿಂದಾಗಲಿಲ್ಲ. ಸುಮ್ಮನೆ ನಿಂತು ಎಲ್ಲವನ್ನೂ ಕೇಳಿಸಿಕೊಂಡ ಮರುಗೆ ಕೊನೆಗೆ ಒಪ್ಪಿದಂತೆ ತಲೆಯಾಡಿಸಿದ ಮೇಲೆಯೇ ಜೇನ್ ಅಲ್ಲಿಂದ ಹೊರಟಿದ್ದು. ಅಂದು ರಾತ್ರಿ ಮರುಗೆಯ ಕನಸಿನಲ್ಲಿ ಕ್ರಾಂತಿಕಾರಿ ಕಿಕುಯುಗಳನ್ನು ಬ್ರಿಟಿಷರಿಗೆ ತೋರಿಸಿ ಅವರನ್ನು ಬಂಧಿಸಲು ನೆರವಾಗುತ್ತಿದ್ದ ಮುಸುಕುಧಾರಿ ವ್ಯಕ್ತಿಗಳು ಬಂದಂತಾಯಿತು. ಕಣ್ಣುಬಿಟ್ಟು ನೋಡಿದವನಿಗೆ ಯಾರೂ ಕಾಣಲಿಲ್ಲ. ಅವನಿಗೆ ಗೊತ್ತಿದೆ... ಆ ಮುಸುಕಿನ ಒಳಗೆ ಕಾಣುತ್ತಿದ್ದ ಕಣ್ಣುಗಳು ತನ್ನದೇ ಜನಗಳದು ಎಂದು.

ನಗರದಲ್ಲಿರುವ ವಯಸ್ಕರ ಶಾಲೆಗೆ ಸೇರಲೆಂದು ಬಂದ ಮರುಗೆಯನ್ನು ಆ ಶಾಲೆಯ ದೊಡ್ಡ ಕಟ್ಟಡದ ಗೋಡೆಗಳಿಗೆ ಒರಗಿನಿಂತು ಸಿಗರೇಟು ಸೇದುತ್ತಾ, ವಿಕೃತ ಚೇಷ್ಟೆಗಳನ್ನು ಮಾಡುತ್ತಾ ನಿಂತಿದ್ದ ಯುವಕ ಯುವತಿಯರ ಗುಂಪೊಂದು ಕಿಚಾಯಿಸುತ್ತಲೇ ಸ್ವಾಗತಿಸಿತು. ಮರುಗೆ ಸುಮ್ಮನೆ ಎಲ್ಲವನ್ನೂ ಗಮನಿಸುತ್ತಲೇ ಹೋದ. ಅವರೆಲ್ಲ ಸರಿಯಾದ ವಯಸ್ಸಿಗೆ ಶಿಕ್ಷಣ ಪಡೆಯ ಲಾಗದಿದ್ದ ವಯಸ್ಕರೇ ಆಗಿದ್ದರೂ ಅವರ್‍ಯಾರಿಗೂ ಈಗ ಶಿಕ್ಷಣ ಪಡೆಯುವುದು ಒಂದು ಹಂಬಲವಾಗಿರಲಿಲ್ಲ. ಸರ್ಕಾರ ನಡೆಸುವ ಅನಾಥಾಶ್ರಮದಂತೆ ಇತ್ತು ಆ ಶಾಲೆ. ಇಲ್ಲಿ ಯಾರೂ ಯಾರಿಗೂ ಜವಾಬ್ದಾರರಾಗಿರಲಿಲ್ಲ... ಯಾರಿಗೂ ಯಾವುದರ ಬಗ್ಗೆಯೂ ಆಸಕ್ತಿ ಇರಲಿಲ್ಲ. ಈ ಶಾಲೆಯನ್ನು ನಡೆಸುವವರೂ ಸಹ ಸರ್ಕಾರಕ್ಕೆ ಒಂದು ಲೆಕ್ಕ ಕೊಡಲಿಕ್ಕೆ ಮಾತ್ರ ಇದನ್ನು ನಡೆಸುತ್ತಿದ್ದಂತಿತ್ತು.



ತನ್ನ ಹಳ್ಳಿ ಶಾಲೆಯ ಸಹಪಾಠಿಗಳಿಗಿಂತ ಇಲ್ಲಿನ ಸಹಪಾಠಿಗಳು ವಯಸ್ಸಿನಲ್ಲಿ ಹಿರಿಯರಾದರೂ ಆ ಮಕ್ಕಳು ಕಲಿಯುವೆಡೆಗೆ ತೋರುತ್ತಿದ್ದ ಪ್ರೀತಿಯ ಒಂದಂಶವೂ ಇವರು ತೋರುತ್ತಿರಲಿಲ್ಲ. ತರಗತಿಗಳಲ್ಲಿ ನಡೆಯುವುದು ಪಾಠಗಳಾಗಿರಲಿಲ್ಲ. ಅದೊಂದು ಗದ್ದಲಮಯ ಸಂತೆಯಂತಿರುತ್ತಿತ್ತು. ಇಲ್ಲಿ ಎಷ್ಟು ದಿನವಿದ್ದರೂ ನಾನೇನೂ ಕಲಿಯಲಾರೆ ಎಂದು ಮರುಗೆಗೆ ಎರಡೇ ದಿನದಲ್ಲಿ ಸ್ಪಷ್ಟವಾಯಿತು. ಅದೆಲ್ಲಕ್ಕಿಂತ ಅವನು ತನ್ನಂತಹವರ ಹೋರಾಟ ಇಂತಹ ಬೇಜವಾಬ್ದಾರಿ ಜನಾಂಗಕ್ಕೆ ಸ್ವತಂತ್ರ ಬದುಕು ನೀಡುವುದಕ್ಕೆ ಕಾರಣವಾಯಿತೇ... ಎಂದು ಚಿಂತಿಸಿದ.

ಮೂರನೇ ದಿನಕ್ಕೆ ಮರುಗೆ ವಾಪಸ್ಸು ತನ್ನ ಹಳ್ಳಿಯ ಶಾಲೆಯ ಬಳಿ ಬಂದು ಹೊರಗೇ ನಿಂತಿದ್ದ. ಅಲ್ಲಿ ಬಂದ ಜೇನ್ ಆಶ್ಚರ್ಯದಿಂದ ಅವನನ್ನು ತನ್ನ ಆಫೀಸಿಗೆ ಕರೆದುಕೊಂಡು ಹೋದಳು. ಮರುಗೆ ಕೈ ಮುಗಿಯುತ್ತಾ ಅವಳನ್ನು ಕೇಳಿದ... "ನನಗೆ ನಿಜವಾಗಲೂ ಕಲಿಯುವ ಆಸೆ ಇದೆ. ಸುಮ್ಮನೆ ಕಾಲ ಕಳೆಯುವ ಮನಸ್ಸಿಲ್ಲ..., ಅದಕ್ಕೆಲ್ಲಾ ನನಗೀಗ ಸಮಯವೂ ಇಲ್ಲ. ಅರ್ಥ ಮಾಡಿಕೋ. ನಾನು ಸ್ವತಃ ಆ ಪತ್ರವನ್ನು ಓದಬೇಕು... ಓದಿ ಅರ್ಥ ಮಾಡಿಕೋಬೇಕು... ಇಲ್ಲೇ ಕಲಿಯಲು ದಯವಿಟ್ಟು ನನಗೂ ಒಂದು ಅವಕಾಶ ಕೊಡು." ಜೇನ್ ಒಂದುಕ್ಷಣ ಮಾತಾಡದೇ ಸುಮ್ಮನೆ ಕುಳಿತಳು. ಅವನ ಕಲಿಯುವ ಬಯಕೆಯ ಮುಂದೆ ಸರ್ಕಾರದ ನಿಯಮಗಳು ತುಂಬ ಸೋಗಲಾಡಿತನದ್ದು ಎನಿಸಿತು. ಅವೆಲ್ಲ ಒಂದು ರೀತಿಯ ಅರ್ಥಹೀನ ಆಚರಣೆಗಳು ಎನಿಸಿತು. ಅವಳ ಮೌನ ನೋಡಿ ಕೊನೆಗೆ ಮರುಗೆ ನಿಧಾನಕ್ಕೆ ಮೇಲೆದ್ದು ತರಗತಿಯೊಳಗೆ ಹೋದ. ಸ್ವಲ್ಪ ಸಮಯಕ್ಕೆ ತರಗತಿಯೊಳಗಿನಿಂದ ಮಕ್ಕಳು ಖುಷಿಯಿಂದ ಹಾಡುವುದು ಕೇಳಿಸಿತು. ಜೇನ್ ತರಗತಿಯ ಬಳಿ ಬಂದಳು. ಮರುಗೆ ಮಕ್ಕಳಿಗೆ ಹಾಡು ಹೇಳಿಕೊಡುತ್ತಾ ಕುಣಿಯುತ್ತಿದ್ದ. ಮಕ್ಕಳೆಲ್ಲಾ ಅವನ ಜೊತೆ ಕುಣಿಯುತ್ತಿದ್ದರು. ಅಲ್ಲಿಗೆ ಬಂದ ಜೇನ್‌ಳನ್ನು ನೋಡಿ ಕುಣಿಯುವುದನ್ನು ನಿಲ್ಲಿಸಿದ ಮರುಗೆ ಜೇನ್‌ಳಿಗೆ ಹೇಳಿದ... "ಮಕ್ಕಳಿಗೆ ನಾನು ಹೋಗುವುದಾಗಿ ಹೇಳಲು ಬಂದೆ. ಏಕೆಂದರೆ ನಾಳೆಯಿಂದ ನಾನು ಇಲ್ಲಿ ಬರುವುದಿಲ್ಲ ಅಲ್ಲವೇ...? ಅವರಿಗೆಲ್ಲ ಈಗಲೇ ಕಷ್ಟಪಟ್ಟು ಓದುವುದು ಎಷ್ಟು ಒಳ್ಳೆಯದು ಎಂದು ಹೇಳುತ್ತಿದ್ದೆ. ಏಕೆಂದರೆ ನನ್ನಂತೆ ವಯಸ್ಸಾದ ಮೇಲೆ ಕಲಿಯಬೇಕು ಎನಿಸಿದರೂ ಯಾರೂ ಕಲಿಸುವುದಿಲ್ಲ ಎಂದು ಹೇಳಬೇಕೆನಿಸಿತು. ಹೇಳಿದೆ" ಆ ತಕ್ಷಣವೇ ಮಕ್ಕಳಿಗೆ ಕಲಿಯಲು ಸಹಾಯ ಮಾಡಲು ಒಬ್ಬ ಸಹಾಯಕನ ರೀತಿ ಮರುಗೆಯನ್ನು ನೇಮಿಸಿಕೊಳ್ಳಲು ಜೇನ್ ನಿರ್ಧರಿಸಿದಳು. ಮಕ್ಕಳೆಲ್ಲಾ ಖುಷಿಯಿಂದ ಚಪ್ಪಾಳೆ ತಟ್ಟಿ ಮರುಗೆಯನ್ನು ಸ್ವಾಗತಿಸಿದರು. ಮರುಗೆ ತನ್ನ ಕಿವಿಯನ್ನು ತಾನೇ ನಂಬದಾದ...!

✶ ✶ ✶

ಕೆಲವೇ ದಿನಗಳಲ್ಲಿ ಕೆಲ ರಾಷ್ಟ್ರೀಯ, ಅಂತರರಾಷ್ಟ್ರೀಯ ಟಿ. ವಿ. ಚಾನೆಲ್‌ಗಳ ವರದಿಗಾರರು ದಿಢೀರನೆ ಆ ಶಾಲೆಗೆ ತಮ್ಮ ಕ್ಯಾಮೆರಾಗಳೊಂದಿಗೆ ದಾಳಿ ಇಟ್ಟರು. ಅವರಿಗೆಲ್ಲ ಮರುಗೆಯ ಸುದ್ದಿ ಹೊಸದಾಗಿ ಕಾಣುತ್ತಿತ್ತು. ಬಂದವರೆ ಮರುಗೆಯನ್ನು ಸುತ್ತುವರಿದು ಒಮ್ಮೆಗೇ ಪ್ರಶ್ನೆಗಳನ್ನು ಕೇಳತೊಡಗಿದರು. ಅವರಿಗೆಲ್ಲ ಎಂಬತ್ನಾಲ್ಕು ವರ್ಷದ ವ್ಯಕ್ತಿಯ ಕಲಿಯುವ ಆಸೆ ಕುತೂಹಲಕಾರಿ ಯಾಗಿತ್ತು. ಮರುಗೆಯ ಬಾಲ್ಯ ಕಾಲಕ್ಕೆ ಕೀನ್ಯಾದಲ್ಲಿ ಕಪ್ಪು ಜನರಿಗೆ ಕಲಿಸಲು ಶಾಲೆಗಳೇ ಇರಲಿಲ್ಲ. ಬ್ರಿಟಿಷರ ಶಾಲೆಗಳಲ್ಲಿ ಇವರಿಗೆ ಪ್ರವೇಶವೂ ಇರಲಿಲ್ಲ ಎಂಬುದೇ ಅವರಿಗೆ ಅತ್ಯಂತ ರೋಚಕ ಸುದ್ದಿಯಾಗಿತ್ತು. ಕೀನ್ಯಾಗಿಂತ ಮುಂಚೆ ಸ್ವಾತಂತ್ರ್ಯ ಪಡೆದ ದೇಶಗಳಿಗೆ ಅಕ್ಷರ ಅತ್ಯಂತ ಪ್ರಬಲ ಆಯುಧವಾಗಿ ಸಿಕ್ಕಿದ್ದೇ ಕಾರಣವೆಂದು ಮರುಗೆ ಹೇಳಿದ. ಸುದ್ದಿ ಮಿಂಚಿನಂತೆ ಕೀನ್ಯಾದ ಗಡಿಗಳನ್ನು ದಾಟಿ ಹರಡಿತು. ರೇಡಿಯೋ, ಟಿ. ವಿ.ಗಳೆರಡರಲ್ಲೂ ಎಂಬತ್ನಾಲ್ಕು ವರ್ಷದ ಮರುಗೆ ಕಲಿಯುವ ಆಸೆಯಿಂದ ಶಾಲೆಗೆ ಹೋಗುತ್ತಿರುವುದೇ ಎಲ್ಲಾ ಕಡೆ ಸುದ್ದಿ. ಇಡೀ ವಿಶ್ವದ ಗಮನ ಸೆಳೆದ ಈ ಘಟನೆ ಅದೇ ನಾಡಿನಲ್ಲಿ, ಅದೇ ಹಳ್ಳಿಯಲ್ಲಿ ಮಾತ್ರ ವಿಚಿತ್ರ ಘಟನೆಗಳಿಗೆ ಕಾರಣವಾಯಿತು. ತಮ್ಮ ಊರಿನ ಶಾಲೆಯ ಶಿಕ್ಷಕಿ ತಮ್ಮ ಮಕ್ಕಳಿಗೆ ಕಲಿಸುವುದನ್ನು ಬಿಟ್ಟು, ಖ್ಯಾತಿಯ ಹಿಂದೆ ಬಿದ್ದು ಹಣ ಮಾಡಿಕೊಳ್ಳುತ್ತಿದ್ದಾಳೆ ಎಂದು ಆ ಹಳ್ಳಿಯ ಜನ ಮಾತಾಡಲು ಶುರು ಮಾಡಿದರು. ಕೆಲವರಂತೂ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವುದನ್ನೇ

ನಿಲ್ಲಿಸಿದರು. ಜೇನ್ ಅವರುಗಳ ಮನೆ ಮನೆಗೆ ಹೋಗಿ ಆ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಕೇಳಿ ಅವಮಾನಿತಳಾದಳು. ಇನ್ನು ಕೆಲವರು ತಮ್ಮ ಮಕ್ಕಳ ಜೊತೆಯಲ್ಲಿ ಮುದುಕನೊಬ್ಬ ಕಲಿಯುವುದನ್ನು ಸಹಿಸಲಾರದೆ ಗುಂಪನ್ನು ಕಟ್ಟಿಕೊಂಡು ಶಾಲೆಯ ಬಳಿ ಬಂದು ಗಲಾಟೆ ಮಾಡಲು ಶುರು ಮಾಡಿದರು. ಪ್ರಚಾರದ ಗೀಳಿನಿಂದ ಜೇನ್ ನಮ್ಮ ಮಕ್ಕಳನ್ನು ಕಡೆಗಣಿಸಿ ಮರುಗೆಗೆ ಹೆಚ್ಚಿನ ಮಹತ್ವ ಕೊಡುತ್ತಿದ್ದಾಳೆ, ಆದ್ದರಿಂದ ಅವಳನ್ನು ಬೇರೆ ಶಾಲೆಗೆ ಕಳುಹಿಸಬೇಕೆಂದು ಅವರೆಲ್ಲಾ ಅಲ್ಲಿ ಗಲಾಟೆ ಮಾಡತೊಡಗಿದರು.

ತನ್ನ ಕಟ್ಟುನಿಟ್ಟಿನ ಸೂಚನೆಯ ಹೊರತಾಗಿಯೂ ಮರುಗೆಯ ವಿಷಯ ಯಾವಾಗ ಕೀನ್ಯಾದಿಂದ ಆಚಿನ ದೇಶಗಳ ಗಮನವನ್ನೂ ಸೆಳೆಯಿತೋ... ಆಗಲೇ ಕಿಪ್ರುತೋ ಜೇನ್‌ಳ ಮೇಲೆ ಮತ್ತಷ್ಟು ಕೋಪಗೊಂಡಿದ್ದ. ಒಂದು ದಿನ ಶಾಲೆಯ ಬಳಿ ಬಂದವನೆ ಜೇನ್‌ಳ ಮೇಲೆ ನೇರವಾಗಿ ಹರಿಹಾಯ್ದ. "ಮರುಗೆ ಕಲಿಯಬೇಕಾದರೆ ವಯಸ್ಕರ ಶಾಲೆಯಲ್ಲಿಯೇ ಕಲಿಯಬೇಕು. ಇಲ್ಲವಾದಲ್ಲಿ ಯಾರ ಬಳಿಯಾದರೂ ಖಾಸಗಿಯಾಗಿ ಕಲಿಯಬಹುದು. ಅವನು ತನ್ನದೇ ಜನಗಳನ್ನು ಕೊಂದಿರುವುದಕ್ಕಾಗಿ ಸರ್ಕಾರ ಮೌ–ಮೌಗಳಿಗೆ ಸಾಕಷ್ಟು ಪರಿಹಾರ ಧನವನ್ನೂ ಕೊಟ್ಟಿದೆ. ಅವನು ಅವರ ಜನರನ್ನೇ ಕೊಂದಿರುವುದಕ್ಕೆ ಈ ಪರಿಹಾರ...! ಹೀಗಿರುವಾಗ ಅವನು ಈ ಶಾಲೆಗೆ ಬರುವ ಅಗತ್ಯವಿಲ್ಲ. ಇದು ಇಲ್ಲಿಗೆ ನಿಲ್ಲಬೇಕು. ಇಲ್ಲದಿದ್ದರೆ ನಿನ್ನ ಪರಿಸ್ಥಿತಿ ನೆಟ್ಟಗಿರುವುದಿಲ್ಲ. ಹುಷಾರು." ಎಂದು ಕಠೋರವಾಗಿ ಎಚ್ಚರಿಸಿದ. ಇದನ್ನೆಲ್ಲಾ ಮೌನವಾಗಿ ನೋಡಿದ ಮರುಗೆಗೆ ತನ್ನ ಕಲಿಯುವ ಆಸೆ ಇದಕ್ಕೆಲ್ಲಾ ಕಾರಣವಾಗಿದ್ದನ್ನು ನೋಡಿ ತುಂಬ ಬೇಸರವಾಯಿತು.

ಅಂದು ತನ್ನ ಹೆಂಡತಿಯನ್ನು ಅವಳಿಗೆ ಗೊತ್ತಿಲ್ಲದ ಓರ್ವ ಹೋರಾಟಗಾರನ ಹೆಸರನ್ನು ಹೇಳುವಂತೆ ಪೀಡಿಸುವಾಗ ತನ್ನನ್ನು ಬಲವಾಗಿ ಹಿಡಿದುಕೊಂಡಿದ್ದ ಇಬ್ಬರು ಸೈನಿಕರು ತಮ್ಮವರೇ ಆಗಿದ್ದರು ಎಂಬುದು ನೆನಪಾಯಿತು. ಅವಳ ಅಪ್ಪುಗೆಯಲ್ಲಿ ಜೋರಾಗಿ ಅಳುತ್ತಿದ್ದ ನನ್ನ ಮಗಳನ್ನು ಅವರಮ್ಮನ ಕೈಯಿಂದ ಕಿತ್ತುಕೊಂಡವನೂ ತಮ್ಮವನೆ ಎಂಬುದೂ ನೆನಪಾಯಿತು. ಅವಳ ತಲೆಗೆ ಹಿಂದಿನಿಂದ ಗುಂಡು ಹೊಡೆದವನೂ, ಜೋರಾಗಿ ಕಿರುಚುತ್ತಿದ್ದ ತನ್ನ ಮಗಳಿಗೆ ಗುಂಡಿಕ್ಕಿದವನೂ... ಎಲ್ಲರೂ ತಮ್ಮವರೇ. ಆ ದೃಶ್ಯಗಳನ್ನು ನೆನಪಿಸಿಕೊಳ್ಳಲಾರದೆ ಮರುಗೆ ಬಿಕ್ಕಳಿಸುತ್ತಾ ಕಣ್ಣುಗಳೆರಡನ್ನೂ ಮುಚ್ಚಿಕೊಂಡ. ಈಗ ತನ್ನ ಅಕ್ಷರ ಕಲಿಯುವ ಪ್ರಯತ್ನವನ್ನು ಸಹಿಸದೆ ಕಿರುಕುಳ ಕೊಡುತ್ತಿರುವವರೂ ತಮ್ಮವರೆ. ಏಕೆ ಹೀಗೆ...? ಯೋಚಿಸಿದಷ್ಟೂ ಮರುಗೆಗೆ ಆಯಾಸವಾಗುತ್ತಿತ್ತೇ ಹೊರತು ಉತ್ತರವಂತೂ ಸಿಗುತ್ತಿರಲಿಲ್ಲ.

ಒಂದು ದಿನ ಕೆಲವು ರಾಜಕಾರಣಿಗಳು ತಮ್ಮ ಐಷಾರಾಮಿ ಕಾರುಗಳಲ್ಲಿ ಈ ಶಾಲೆಗೆ ಬಂದರು. ಅವರೆಲ್ಲ ಜೇನ್‌ಳನ್ನೂ, ಮರುಗೆಯನ್ನೂ ಅಭಿನಂದಿಸಿದರು. ಹಾಡುತ್ತಾ ಕುಣಿಯುತ್ತಿದ್ದ ಮಕ್ಕಳ ಜೊತೆ ಮತ್ತು ಮರುಗೆಯ ಜೊತೆ ಅವರೂ ಸೇರಿ ಹಾಡುತ್ತಾ ಕುಣಿಯುತ್ತಿರಬೇಕಾದರೆ, ಅವರ ಕಾರಿನ ಡ್ರೈವರನೊಬ್ಬ ಜೇನ್‌ಳನ್ನು ಬಳಿಗೆ ಕರೆದು, "ನೋಡು ಜೇನ್, ಮರುಗೆಯ ಹೆಸರಲ್ಲಿ ವಿದೇಶಗಳಿಂದ ಬರುತ್ತಿರುವ ದೇಣಿಗೆಯಲ್ಲಿ ನಮ್ಮ ಪಾಲು ನಮಗೆ ಕೊಟ್ಟುಬಿಡು... ನಾವೆಲ್ಲಾ ಅದಕ್ಕಾಗೇ ಬಂದವರು." ಎಂದ. ಜೇನ್‌ಗೆ ಆಕಾಶವೇ ಕಳಚಿ ತಲೆ ಮೇಲೆ ಬಿದ್ದಂತಾಯಿತು. ಟಿ. ವಿ. ಚಾನೆಲ್‌ಗಳಲ್ಲಿ ಮರುಗೆಯ ವಿಷಯ ಪ್ರಸಾರವಾದಂದಿನಿಂದ ಕೆಲವು ವಿದೇಶಿ ಜನ ಸ್ವಲ್ಪಮಟ್ಟಿನ ಹಣವನ್ನು ಮರುಗೆಯ ವಿದ್ಯಾಭ್ಯಾಸದ ಖರ್ಚಿಗೆಂದು ನೀಡುತ್ತಿದ್ದರು.

ಬಹುಪಾಲು ಎಲ್ಲ ರಾಜಕಾರಣಿಗಳಂತೆ ಇವರ ಕಣ್ಣೂ ಈ ಹಣದ ಮೇಲೆ ಬಿದ್ದಿತ್ತು. ರಾಜಕಾರಣಿಗಳನ್ನು ಕಂಡಾಗ ಕೀನ್ಯಾದ ಜನ ಅವರನ್ನು ಲಂಚಕೋರರೆಂದು ಹೀಯಾಳಿಸುವುದು ಮಾಮೂಲಿ. ಆದರೂ ಅವರನ್ನು ಸಹಿಸಿಕೊಳ್ಳುವುದಕ್ಕೂ ಸಹ ಅಷ್ಟೇ ಒಗ್ಗಿಹೋಗಿದ್ದಾರೆ. ಹಾಗಾಗಿ ಇಂತಹ ವಿಷಯಗಳಲ್ಲಿ ಪಾಲು ಕೇಳುವುದು ಅವರಿಗೆ ತಪ್ಪೆನಿಸುವುದಿಲ್ಲ. ಆ ಹಳ್ಳಿಯ ಜನ ಜೇನ್ ಮೇಲೆ ಕೋಪಗೊಳ್ಳುವುದಕ್ಕೂ ಇದೇ ಕಾರಣ. ಕಿಪ್ರುತೋನ ಕೋಪಕ್ಕೂ ಇದೇ ಮೂಲ. ವಾಸ್ತವವಾಗಿ ಈ ಪುಢಾರಿಗಳ ಇಂತಹ ಭ್ರಷ್ಟ ಆಸೆಗಳನ್ನೆಲ್ಲಾ ಪೂರೈಸಲು ಜೇನ್‌ಗಾಗಲಿ ಮರುಗೆಗಾಗಲಿ ಸಾಧ್ಯವಿರಲಿಲ್ಲ. ಆದರೆ ತನ್ನ ಬೇಡಿಕೆ ಈಡೇರಿಸಿಕೊಳ್ಳಲು ಈ ವ್ಯವಸ್ಥೆ ಯಾವ ಮಟ್ಟಕ್ಕಾದರೂ ಇಳಿಯುತ್ತದೆ ಎನ್ನುವುದು ಬಹಳ ಬೇಗ ಜೇನ್‌ಗೆ ಅರಿವಾಯಿತು. ಅವರು ಸರಿರಾತ್ರಿಗಳಲ್ಲಿ ಅವಳ ಗಂಡನಿಗೆ ಫೋನ್ ಮಾಡಿ ಅವಳ ನಡತೆ ಸರಿಯಿಲ್ಲವೆಂದೂ, ಅವಳು ಅವನಿಗೆ ಮೋಸ ಮಾಡಿ ಬೇರೆ ಬೇರೆ ಗಂಡಸರ ಜೊತೆ ಸುತ್ತುತ್ತಿದ್ದಾಳೆಂದೂ, ಅವಳನ್ನು ಹಾಗೆ ಬಿಟ್ಟಿರುವ ಅವನು ಗಂಡಸೇ ಅಲ್ಲವೆಂದೂ ಹೇಳತೊಡಗಿದರು. ಮರುಗೆಯ ಹಳ್ಳಿಯ ಜನ ಅವನ ಮುರುಕಲು ಮನೆಯ ಮುಂದೆ ನಿಂತು ಅವನಿಗೆ ವಿದೇಶದಿಂದ ಬರುತ್ತಿರುವ ಹಣದಲ್ಲಿ ಪಾಲು ನೀಡುವಂತೆ ಪೀಡಿಸತೊಡಗಿದರು. ಇವರು ಯಾರಿಗೂ ಹಣ ನೀಡಲು ಸಾಧ್ಯವಿರಲಿಲ್ಲ. ಏಕೆಂದರೆ ಇವರಿಗೆ ನಿಜಕ್ಕೂ ಅಂತಹ ದೊಡ್ಡ ಮೊತ್ತದ ಹಣ ಏನೂ ಬರುತ್ತಿರಲಿಲ್ಲ. ಆದರೆ ಆ ಜನ ಇವರನ್ನು ಬಿಡಲು ತಯಾರಿರಲಿಲ್ಲ.

ಒಂದು ದಿನ ಹಳ್ಳಿಯ ಈ ಜನಗಳೆಲ್ಲ ಸೇರಿ ಶಾಲೆ ನಡೆಯುತ್ತಿದ್ದಾಗ ಗುಂಪು ಗುಂಪಾಗಿ ಬಂದು ದೊಂಬಿ ಮಾಡತೊಡಗಿದರು. ಮಕ್ಕಳಿಗೆ ಕಲಿಸುತ್ತಿದ್ದ ಜೇನ್ ಗಾಬರಿಬಿದ್ದಳು. ಅವರು ದಪ್ಪ ದಪ್ಪ ಕಲ್ಲುಗಳನ್ನು ಆ ಶಾಲೆಯ ಮೇಲೆ ಎಸೆಯತೊಡಗಿದರು. ಮಕ್ಕಳನ್ನೆಲ್ಲಾ ಬೆಂಚುಗಳ ಕೆಳಗೆ ಅವಿತುಕೊಳ್ಳಲು ಹೇಳಿ ಮರುಗೆ ಹೊರಗೆ ಬಂದ. ಅವನನ್ನು ನೋಡಿದ ಕೂಡಲೇ ಆ ಗುಂಪಿನ ಕ್ರೋಧವೆಲ್ಲಾ ಮರುಗೆಯ ಮೇಲೆ ತಿರುಗಿತು. ಅವರೆಲ್ಲಾ ಒಮ್ಮೆಲೆ ಕುಂಟ ಮರುಗೆಯ ಮೇಲೆ ಬೀಳಲು ಬಂದರು. ಕೂಡಲೇ ಮುದುಕ ಮರುಗೆ ತನ್ನ ಕೈಯಲ್ಲಿದ್ದ ಕೋಲನ್ನು ಬೀಸುತ್ತಾ ಸಿಕ್ಕಿದವರ ಬುರುಡೆಗಳಿಗೆ ಬಾರಿಸುತ್ತಾ ಹೋದ. ಅವನ ಏಟುಗಳಿಗೆ ಸಿಕ್ಕಿದ ಅವರು ತಪ್ಪಿಸಿಕೊಂಡು ಹಿಂದೆ ಓಡಿದರು. ಒಂಟಿ ಮರುಗೆಯ ಏಟುಗಳಿಗೆ ಹೆದರಿದ ಅವರೆಲ್ಲಾ ಸುಮ್ಮನೆ ಕೂಗಾಡುತ್ತಾ ಓಡಿಹೋದರು. ಈ ಕಿರುಕುಳ ಇಲ್ಲಿಗೇ ನಿಲ್ಲಲಿಲ್ಲ. ಈ ಘಟನೆ ನಡೆದ ಮೂರನೇ ದಿನಕ್ಕೆ ಜೇನ್‌ಳಿಗೆ ಅವಳನ್ನು ವರ್ಗಾವಣೆ ಮಾಡಿದ ಆದೇಶ ಬಂತು. ಏನಾದರೂ ಮಾಡುವಂತೆ ಅವಳು ತನ್ನ ಗಂಡನನ್ನು ಕೇಳಿದಳು. ಆದರೆ ಅವನು ತಾನು ಏನೂ ಮಾಡಲಿಕ್ಕಾಗದು ಎಂದು ಕೈಚೆಲ್ಲಿದ. ಜೊತೆಗೆ ಅವಳ ನಡತೆಯನ್ನೂ




## ಕಳೆದುಹೋಗುತ್ತಿದ್ದೇನೆ

ನಾನು, ಇಲ್ಲೇ, ಈಗಷ್ಟೇ
ಸಿಕ್ಕಿಸಿಕೊಂಡ ಪೋಷಾಕು,
ನನಗಾಗಿ ಹೊಲೆಯದ
ಯಾರದೋ ಅಳತೆಯದೆಂದು
ಅರಿಯುವ ಮುನ್ನವೇ,
ವಿವಸ್ತ್ರಳಾಗಿಬಿಡುವ ಭಯ
ಅವತರಿಸುತಲಿದೆ ದಟ್ಟವಾಗಿ.

ಮಸುಕು ಬೆಳಕಿನ ಹೊತ್ತು,
ಇಣುಕುತ್ತಿರುವ ಬಣ್ಣಗಳನ್ನು
ಬಗ್ಗುಬಡಿದ ಚಿತ್ರ – ವಿಚಿತ್ರ
ರೇಖಾಚಿತ್ರಗಳು, ಮೂಟೆ – ಮೂಟೆ
ಹೊತ್ತು–ಹೊಸೆದ ಕಣ್ಣ ಕನಸುಗಳು
ಮೂರಾಬಟ್ಟೆ.

ಬೇಗುದಿಯ ತೊರೆಗಳಲ್ಲಿ
ಕೊಚ್ಚಿಹೋಗುತ್ತಿರುವ ನಾನು
ವಿರಮಿಸಲಿ ಎಲ್ಲಿ,
ಕಳೆದುಹೋಗುತ್ತಿದ್ದೇನೆ
ಕುಚ–ಜಘನ–ಯೋನಿಗಳ ರಕ್ಷಣೆಯಲ್ಲಿ.

**ಜಿ. ಪಂಕಜ**
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ
ಪೊಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ
ಡಾ॥ ಅಂಬೇಡ್ಕರ್ ವೀದಿ
ಬೆಂಗಳೂರು – ೫೬೦ ೦೦೧

ಅನುಮಾನಿಸಿದ. ಅನುಮಾನ ಪಡುವ ಗಂಡನ ಜೊತೆ ವಾಸಿಸುವ ಬದಲು ೩೦೦ ಕಿ.ಮೀ. ದೂರದ ಆ ಹೊಸ ಜಾಗಕ್ಕೆ ಹೋಗುವುದೇ ಸರಿ ಎಂದು ಅವಳು ತೀರ್ಮಾನಿಸಿದಳು.

ಹೋಗುವ ಮುಂಚೆ ಕೊನೆಯ ಬಾರಿ ಮರುಗೆಯನ್ನು ಮಾತನಾಡಿಸಲು ಅವನ ಮನೆಗೆ ಬಂದಳು. ಅವನು ಕೊಟ್ಟ ಟೀ ಕುಡಿಯುತ್ತಾ ವಿಷಯ ತಿಳಿಸಿದಳು. ಮರುಗೆ ವಿಷಾದದಿಂದ, "ಬಹುಶಃ ನನ್ನಿಂದ ನಿನಗೆ ತುಂಬ ತೊಂದರೆಯಾಯಿತು ಕ್ಷಮಿಸು" ಎಂದ. "ಇಲ್ಲ ಮರುಗೆ ನಿನ್ನಿಂದ ಏನೂ ತೊಂದರೆಯಾಗಿಲ್ಲ. ಇದು ನನ್ನದೇ ನಿರ್ಧಾರ... ನೀನು ಆ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳಬೇಡ..." ಎಂದಳು ಜೇನ್. "ಬಹುಶಃ ನನ್ನದು ಕಲಿಯುವ ವಯಸ್ಸಲ್ಲ ಎನಿಸುತ್ತದೆ. ನಾನು ಕಲಿಯಲು ಇಚ್ಛಿಸಿದ್ದೇ ಇದಕ್ಕೆಲ್ಲ ಕಾರಣ" ಎಂದ ಮರುಗೆ. 'ನನ್ನ ತಂದೆ ಕಲಿತವರಲ್ಲ. ಆದರೂ ಅವರು ಕಲಿಯಲಿಕ್ಕೆ ವಯಸ್ಸಿನ ಮಿತಿ ಇಲ್ಲ... ಎಂದು ಯಾವಾಗಲೂ ಹೇಳುತ್ತಿದ್ದರು. ನಿಮ್ಮನ್ನು ನೋಡಿದಾಗಲೆಲ್ಲ ನನಗೆ ನಮ್ಮ ತಂದೆ ನೆನಪಾಗುತ್ತಾರೆ ಮರುಗೆ... ಇರಲಿ ನಾಳೆ ಈ ಊರಿನ ಶಾಲೆಯಲ್ಲಿ ನನ್ನ ಕೊನೆಯ ದಿನ. ಅಲ್ಲಿಗೆ ಬರುವಿರಲ್ಲಾ...?' ಎಂದು ಜೇನ್ ಅಲ್ಲಿಂದ ಹೊರಟಳು.

ಮರುಗೆ ಶಾಲೆಯ ಬಳಿ ಬರುವಷ್ಟರಲ್ಲಿ ಮಕ್ಕಳೆಲ್ಲಾ ಜೇನ್‌ಗೆ ವಿದಾಯ ಹೇಳುತ್ತಿದ್ದರು. ಅವರು ತಾವು ತಂದಿದ್ದ ಸಣ್ಣ ಪುಟ್ಟ ವಸ್ತುಗಳು, ಹೂಗೊಂಚಲು ಗಳನ್ನು ಅವಳಿಗೆ ಕೊಡುತ್ತಾ ತುಂಬ ಭಾವುಕರಾಗಿ ಹಾಡನ್ನು ಹಾಡುತ್ತಾ ಕುಣಿಯುತ್ತಿದ್ದರು. ದೂರದಿಂದಲೇ ಇದನ್ನು ನೋಡಿದ ಮರುಗೆ ಏನನ್ನೋ ನಿರ್ಧರಿಸಿದವನಂತೆ ಒಂದು ಕ್ಷಣ ಅಲ್ಲಿ ನಿಂತು ಮತ್ತೆ ತಿರುಗಿ ಹೊರಟ.

ಮರುದಿನ ಶಾಲಾ ಪ್ರಾರ್ಥನಾ ಸಮಯದಲ್ಲಿ ಕಿಪ್ರುತೋ ಮಾತನಾಡುತ್ತಾ "ಮಕ್ಕಳೇ ಇಂದು ಮಧ್ಯಾಹ್ನ ನಿಮ್ಮ ಶಾಲೆಗೆ ಹೊಸ ಶಿಕ್ಷಕಿ ಬರುವವರಿದ್ದಾರೆ. ನೋಡಿ ಅವರನ್ನು ಸ್ವಾಗತಿಸಲು ನಿಮ್ಮ ತಂದೆತಾಯಿಯರೂ ಬಂದಿದ್ದಾರೆ. ನೀವೂ ಸಹ ಅವರನ್ನು ಸಂತೋಷದಿಂದ ಸ್ವಾಗತಿಸಬೇಕು. ಅವರು ತುಂಬ ಒಳ್ಳೆಯ ಶಿಕ್ಷಕಿ. ಅವರ ಹೆಸರು ಗ್ರೇಸ್ ಮಕೂಂಬಾ... ಈಗ ಎಲ್ಲರೂ ಶಾಲೆಯ ಒಳಗೆ ಹೋಗಿ..." ಎಂದ. ಮಧ್ಯಾಹ್ನ ಆಯಿತು. ಮಕ್ಕಳನ್ನೆಲ್ಲಾ ಹೊರಗೆ ನಿಲ್ಲಿಸಿಕೊಂಡು ಬರುವ ಶಿಕ್ಷಕಿಗಾಗಿ ಎಲ್ಲರೂ ಕಾಯುತ್ತಾ ನಿಂತರು. ದೂರದಲ್ಲಿ ಕಾರು ಧೂಳೆಬ್ಬಿಸುತ್ತಾ ಬರುತ್ತಿರುವುದು ಕಂಡಿತು. ಕೂಡಲೇ ಕಿಪ್ರುತೋ 'ಅದೋ ಬಂದರು' ಎನ್ನುತ್ತಾ ಕುಣಿಯುತ್ತಾ ಅತ್ತ ಓಡಿದ. ಹೊಸ ಶಿಕ್ಷಕಿಯನ್ನು ಸ್ವಾಗತಿಸಲು ಅಲ್ಲಿಗೆ ಬಂದಿದ್ದ ಮಕ್ಕಳ ತಂದೆತಾಯಿಯರೂ ಸಹ ಕುಣಿಯುತ್ತಾ ಹೋಗಿ ಕಾರನ್ನು ಸುತ್ತುವರೆದರು. ಕಾರಿನಿಂದಿಳಿದ ಮಕೂಂಬಾ ಸಹ ಅವರೊಂದಿಗೆ ಕುಣಿಯುತ್ತಾ ಶಾಲೆಯ ಕಡೆ ಹೆಜ್ಜೆ ಹಾಕತೊಡಗಿದಳು. ಹಾಡು ಮತ್ತು ಕುಣಿತ ಕೀನ್ಯನ್ನರಿಗೆ ಅಸಹಜವೇನಲ್ಲ. ಆದರೆ ಮಕ್ಕಳಿಗೆ ಯಾಕೋ ಹೊಸಾ ಮೇಡಂ ಇಷ್ಟವಾಗಲಿಲ್ಲ. ತಮ್ಮನ್ನು ಅಮ್ಮನಂತೆ ನೋಡುತ್ತಿದ್ದ ಜೇನ್ ಮೇಡಂಗಿರುವ ಸೌಮ್ಯತೆ ಈ ಮೇಡಂನಲ್ಲಿ ಇಲ್ಲದಿರುವುದನ್ನು ಅವರು ಗುರುತಿಸಿದರು. ಮಕ್ಕಳ ಗುಂಪಿನಲ್ಲಿದ್ದ ಒಬ್ಬ ಹುಡುಗ ಕೆಲ ಹುಡುಗರನ್ನು ತನ್ನ ಜೊತೆ ಕರೆದುಕೊಂಡು ಓಡಿಹೋಗಿ ಕಾಂಪೌಂಡಿನ ಬಾಗಿಲನ್ನು ಮುಚ್ಚಿ ಒಳಗಿನಿಂದ ಚಿಲಕ ಹಾಕಿಬಿಟ್ಟ. ಎಲ್ಲರೂ ಒಂದು ಕ್ಷಣ ಏನು ನಡೆಯಿತು ಎಂದು ತಿಳಿಯದೆ ಸುಮ್ಮನೆ ನಿಂತುಬಿಟ್ಟರು. ಮರುಕ್ಷಣ ಕಿಪ್ರುತೋ, "ಏಯ್, ಬಾಗಿಲು ತೆರೆಯಿರಿ" ಎಂದು ಕೂಗತೊಡಗಿದ. ಆಲ್‌ಫ್ರೆಡ್ ಮತ್ತು ಇನ್ನೊಬ್ಬ ಸಹಾಯಕಿಯೂ ಮಕ್ಕಳಿಗೆ ಏನೂ ಹೇಳದಾದರು. ಹೊರಗಿನಿಂದ ಹೊಸ ಶಿಕ್ಷಕಿಯೂ ಬಾಗಿಲು ತೆರೆಯುವಂತೆ ಮಕ್ಕಳನ್ನು ಕೇಳಿಕೊಂಡಳು. ಆದರೆ ಮಕ್ಕಳು ತಮ್ಮ ಚಪ್ಪಲಿಗಳನ್ನು, ಅಲ್ಲೇ ಅಂಗಳದಲ್ಲಿದ್ದ ಕಲ್ಲುಗಳನ್ನು ಅವರತ್ತ ಎಸೆಯತೊಡಗಿದರು. ತಮ್ಮತ್ತ ಬಂದು ಬೀಳುತ್ತಿದ್ದ ಈ ವಸ್ತುಗಳಿಂದ ತಪ್ಪಿಸಿಕೊಳ್ಳಲು ಎಲ್ಲರೂ ಅತ್ತಿತ್ತ ಓಡತೊಡಗಿದರು. ಆ ಮಕ್ಕಳನ್ನು ಅವರು ಏನೂ ಮಾಡುವಂತಿರಲಿಲ್ಲ. ಮಕ್ಕಳೆಲ್ಲ ಗೇಟಿನ ಬಾಗಿಲನ್ನು ಒಳಗಿನಿಂದ ಹಾಕಿಕೊಂಡುಬಿಟ್ಟಿದ್ದರು. ಜೊತೆಗೆ 'ಹೊಸ ಮೇಡಂ ಬೇಡ..., ಜೇನ್ ಮೇಡಂ ಬರಲಿ...' ಎನ್ನುವ ಘೋಷಣೆಗಳು ಬೇರೆ. ಮಕೂಂಬಾ ಯೋಚಿಸಿದಳು...

ಇದು ನನ್ನ ಜಾಗವಲ್ಲ... ಇಲ್ಲಿ ನಾನು ಕೆಲಸ ಮಾಡಲಾರೆ ಎಂದು ನಿರ್ಧರಿಸಿದವಳೆ ವಾಪಸ್ಸು ಕಾರು ಹತ್ತಿ ಕೂತು ಕಿಪ್ರುತೋ ಎಷ್ಟು ಹೇಳಿದರೂ ನಿಲ್ಲದೆ ಅಲ್ಲಿಂದ ತಿರುಗಿ ಹೊರಟೇಬಿಟ್ಟಳು.

* * *

ಜೇನ್‌ಗೆ ಮಕ್ಕಳೆಲ್ಲ ವಿದಾಯ ಹೇಳುತ್ತಿದ್ದುದನ್ನು ನೋಡಿ ಮನೆಗೆ ಬಂದ ಮರುಗೆ ತನ್ನ ಬಳಿ ಉಳಿದಿದ್ದ ಒಂದೇ ಒಂದು ಮೇಕೆಯನ್ನು ತೆಗೆದುಕೊಂಡು ಹೋಗಿ ಸಂತೆಯಲ್ಲಿ ಮಾರಿದ. ಬಂದ ಹಣದಿಂದ ತಾನು ಎಂದೂ ನೋಡದೇ ಇದ್ದ ರಾಜಧಾನಿ ನೈರೋಬಿಗೆ ಹೊರಟುಬಿಟ್ಟ. ಸರ್ಕಾರ ದೇಶದಲ್ಲಿ ಶಿಕ್ಷಣವನ್ನು ಜನಪ್ರಿಯಗೊಳಿಸಲು ಅವನನ್ನೇ ಮಾದರಿಯಾಗಿ ಮಾಡಿಕೊಂಡಿತ್ತು. ಹಾದಿಯುದ್ದಕ್ಕೂ ಅವನದೇ ಚಿತ್ರಗಳಿರುವ ಬೋರ್ಡುಗಳು ರಾರಾಜಿಸುತ್ತಿದ್ದವು. ಜೊತೆಗೆ 'ಅಕ್ಷರಕ್ಕೆ ಅಪರಿಮಿತ ಶಕ್ತಿಯಿದೆ' ಎಂಬ ಅವನದೇ ಮಾತು ಪ್ರತಿ ಚಿತ್ರದ ಕೆಳಗೆ ಹೊಳೆಯುವ ಅಕ್ಷರಗಳಲ್ಲಿ ಮಿನುಗುತ್ತಿತ್ತು. ಅವನು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅನಾಮಿಕ ಹೋರಾಟಗಾರನಾಗಿದ್ದ. ಆದರಿಂದು ದೇಶದೆಲ್ಲೆಡೆ ಅವನ ನಿರೀಕ್ಷೆಯನ್ನೂ ಮೀರಿ ಅವನು ಜನಜನಿತನಾಗಿದ್ದ...! ಅಂತೂ ಇಂತೂ ಅವರಿವರನ್ನು ಕೇಳಿಕೊಂಡು ದೇಶದ ಶಿಕ್ಷಣ ಇಲಾಖೆಯ ಕೇಂದ್ರ ಕಛೇರಿಗೆ ಬಂದ. ಅಲ್ಲಿ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯನ್ನು ನೋಡಬೇಕಾಗಿತ್ತು. ಆದರೆ ಅದಕ್ಕೆ ಮೊದಲೇ ಅನುಮತಿ ಪಡೆಯಬೇಕಿತ್ತು. ಮರುಗೆಗೆ ಈ ಶಿಷ್ಟಾಚಾರಗಳೆಲ್ಲ ಗೊತ್ತಿಲ್ಲ. ಕಾರ್ಯದರ್ಶಿಯ ಆಪ್ತ ಸಹಾಯಕಿ ಅವನನ್ನು ಬಾಗಿಲಲ್ಲೇ ತಡೆದಳು. ಬೇಕಿದ್ದರೆ ಪೂರ್ವಾನುಮತಿ ಪಡೆದು ಇನ್ನೊಮ್ಮೆ ಬಂದು ನೋಡಿ..., ಈಗಂತೂ ಸಾಧ್ಯವೇ ಇಲ್ಲ ಎಂದಳು. ಆದರೆ ಅವನು ಏನಾದರಾಗಲಿ ಈಗಲೇ ಕಾರ್ಯದರ್ಶಿಯನ್ನು ನೋಡಲೇಬೇಕಿತ್ತು. ಅವಳು ಬೇರೆಯವರೊಂದಿಗೆ ಮಾತನಾಡುತ್ತಾ ಇರುವಾಗ ಮರುಗೆ ಯಾರ ಅನುಮತಿಯನ್ನೂ ಕೇಳದೆ ಕಛೇರಿಯೊಳಕ್ಕೆ ತನ್ನ ಊರುಗೋಲಿನ ಸಹಾಯದಿಂದ ದಾಪುಗಾಲಿಡುತ್ತಾ ಹೊರಟ. "ಏಯ್ ನಿಲ್ಲು, ನಿಲ್ಲು..." ಎಂದು ಕೂಗುತ್ತಾ ಬಂದ ಆಪ್ತ ಸಹಾಯಕಿಯ ಮಾತನ್ನು ಕೇಳಿಸಿಕೊಳ್ಳದೆ ಕಾರ್ಯದರ್ಶಿಗಳು ಇತರೆ ಅಧಿಕಾರಿಗಳೊಂದಿಗೆ ಸಭೆ ನಡೆಸುತ್ತಿದ್ದ ವಿಶಾಲವಾದ ರೂಮಿಗೆ ಬಂದು ನಿಂತ.

ಮಾಧ್ಯಮಗಳ ಮೂಲಕ ಸಾಕಷ್ಟು ಪರಿಚಿತನಾಗಿದ್ದ ಮರುಗೆಯನ್ನು ನೋಡಿ ಅಲ್ಲಿದ್ದವರೆಲ್ಲ ತಮ್ಮ ಮಾತುಗಳನ್ನು ನಿಲ್ಲಿಸಿದರು. ಅವರಲ್ಲೊಬ್ಬರು ಮರುಗೆಯನ್ನು ಕೇಳಿದರು... "ಮರುಗೆ, ನಿಮಗೇನು ಬೇಕಿತ್ತು...?" ಮರುಗೆ ನಿಧಾನವಾಗಿ ತನ್ನ ಹರಿದ ಕೋಟು ಮತ್ತು ತೇಪೆ ಹಚ್ಚಿದ ಅಂಗಿಗಳನ್ನು ತೆಗೆದುಹಾಕಿದ. ಬೆನ್ನನ್ನು ಅವರೆಡೆಗೆ ತಿರುಗಿಸಿ ತೋರಿಸಿದ. ಐವತ್ತು ವರ್ಷಗಳ ಹಿಂದಿನ ಬಾಸುಂಡೆಗಳು ಬೆನ್ನಿನ ಮೇಲೆ ಶಾಶ್ವತವಾಗಿ ಉಳಿದುಹೋಗಿದ್ದವು. "ನೋಡಿ ಇವು ಬ್ರಿಟಿಷರು ನನಗೆ ಕೊಟ್ಟ ಉಡುಗೊರೆ... ಅವರು ನನ್ನ ತಲೆಬುರುಡೆ ಒಡೆದರು..., ನನ್ನ ಕಾಲನ್ನು ಮುರಿದುಹಾಕಿದರು..., ಇದೆಲ್ಲವನ್ನೂ ಮೀರಿ ನನ್ನಂತಹ ಎಷ್ಟೋ ಜನ ತಮ್ಮ ಜೀವನಗಳನ್ನೇ ಶಾಶ್ವತವಾಗಿ ಕಳೆದುಕೊಂಡುಬಿಟ್ಟರು..." ಎನ್ನುತ್ತಾ ಗೋಡೆಯ ಮೇಲಿದ್ದ ರಾಷ್ಟ್ರನಾಯಕರ ಭಾವಚಿತ್ರಗಳನ್ನು ತೋರಿಸುತ್ತಾ, "ನೋಡಿ ಇವರೆಲ್ಲಾ ನಿಮ್ಮ ಬದುಕಿಗಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟವರು... ಅವರಿಲ್ಲದಿದ್ದರೆ ನಾನು ನೀವು ಯಾರೂ ಇರುತ್ತಿರಲಿಲ್ಲ..." ಎಂದು ಹೇಳುತ್ತಲೇ ಹೋದ ಮರುಗೆ. "ದಯವಿಟ್ಟು ದೇಶಕ್ಕೆ ಒಳ್ಳೆಯ ಶಿಕ್ಷಕರು ಬೇಕೆಂಬುದನ್ನು ಮರೆಯದಿರಿ. ಹಾಗೆಯೇ ನನ್ನ ಊರಿನ ಶಾಲೆಗೆ ಜೇನ್‌ಳನ್ನು ವಾಪಸ್ಸು ಕಳುಹಿಸಿ. ಧನ್ಯವಾದ..." ಎಂದು ಹೇಳಿ ತನ್ನ ಕೋಟು, ಅಂಗಿಗಳನ್ನೆತ್ತಿಕೊಂಡು ಅಲ್ಲಿಂದ ಹೊರಟ.




ಮರುಗೆಯ ಊರಿನ ಶಾಲೆಗೆ ಜೇನ್ ವಾಪಸ್ಸು ಬಂದಳು. ಮಕ್ಕಳೆಲ್ಲಾ ಸಂತೋಷದಿಂದ ಅವಳನ್ನು ಸ್ವಾಗತಿಸಿದರು. ಆಲ್‌ಫ್ರೆಡ್ ಸಹ ಸಂತೋಷಿಸಿದ. ಒಂದು ದಿನ ಮರುಗೆ ಅವಳ ಆಫೀಸ್ ರೂಮಿಗೆ ಬಂದ. ಬಂದವನೇ ಜೇನ್‌ಳಿಗೆ ಪತ್ರವೊಂದನ್ನು ನೀಡಿದ. "ಇದು ಐವತ್ತು ವರ್ಷಗಳ ಹಿಂದೆ ಸರ್ಕಾರ ನನಗೆ ಕಳುಹಿಸಿರುವ ಪತ್ರ. ಇದರಲ್ಲೇನಿದೆ ಎಂದು ನನಗಾಗಿ ಓದಿ ಹೇಳುವೆಯಾ...?" ಇಷ್ಟು ವರ್ಷಗಳು ಅದನ್ನು ತಾನೇ ಸ್ವತಃ ಓದಬೇಕೆಂದುಕೊಂಡು ಹಾಗೇ ಇಟ್ಟುಕೊಂಡಿದ್ದ. ಸರ್ಕಾರ ಎಲ್ಲರಿಗೂ ಉಚಿತ ಶಿಕ್ಷಣ ಎಂದಾಗ ಅವನ ಆಸೆ ಚಿಗುರಿತ್ತು. ಆದರೆ ನಂತರ ನಡೆದ ಘಟನೆಗಳು ಅವನನ್ನು ತುಂಬ ಘಾಸಿಗೊಳಿಸಿಬಿಟ್ಟಿದ್ದವು. ಈಗ ಆ ಪತ್ರವನ್ನು ಜೇನ್ ಓದಿ ಹೇಳಿದರೆ ಸಾಕೆಂದು ಅವಳ ಕೈಗೆ ನೀಡಿದ್ದ...! ಜೇನ್ ಪತ್ರವನ್ನು ಬಿಡಿಸಿದಳು. ಯಾಕೋ ಅದನ್ನು ಓದುತ್ತಿದ್ದಂತೆ ಅದನ್ನು ಆಲ್‌ಫ್ರೆಡ್‌ನ ಕೈಗೆ ನೀಡಿ, "ಆಲ್‌ಫ್ರೆಡ್ ಇದನ್ನು ಮರುಗೆಗೆ ನೀನೇ ಓದಿ ಹೇಳು" ಎಂದಳು. ಮರುಗೆ ಆಲ್‌ಫ್ರೆಡ್‌ನ ಪಕ್ಕದಲ್ಲಿ ಕುಳಿತುಕೊಂಡ.

ಆಲ್‌ಫ್ರೆಡ್ ಪತ್ರವನ್ನು ಗಟ್ಟಿಯಾಗಿ ಓದತೊಡಗಿದ... 'ಪ್ರೀತಿಯ ಖೈದಿ ನಂ. ೪೫೯೯, ಕೀನ್ಯಾ ಗಣರಾಜ್ಯದ ಪರವಾಗಿ ನಿಮಗೆ ತಿಳಿಸುವುದೇನೆಂದರೆ... ನಿಮ್ಮ ಎಲ್ಲ ರೀತಿಯ ವಿಚಾರಣೆ ಮಾಡಲಾಗಿ ನೀವು ನಿರ್ದೋಷಿಯೆಂದು ಸಾಬೀತಾಗಿದೆ. ಬ್ರಿಟಿಷ್ ಆಡಳಿತದಲ್ಲಿ ನೀವು ಅನುಭವಿಸಿದ ಸೆರೆವಾಸ ಅನ್ಯಾಯದ್ದೆಂದು ಗೊತ್ತಾಗಿದೆ. ಇದಕ್ಕಾಗಿ ನೀವು ಪರಿಹಾರ ಪಡೆಯಲು ಅರ್ಹರಾಗಿರುತ್ತೀರಿ.

೧೯೫೧ರಿಂದ ೧೯೬೩ರವರೆಗೆ ಬೇರೆ ಬೇರೆ ಜೈಲುಗಳಲ್ಲಿ ನೀವು ಕಳೆದ ದಿನಗಳನ್ನು ಲೆಕ್ಕ ಹಾಕಿ ನಿಮಗೆ... ಮೊತ್ತದ ಹಣವನ್ನು ಪರಿಹಾರವಾಗಿ ಸರ್ಕಾರ ನೀಡುತ್ತಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ನಿಮ್ಮ ಪಾತ್ರ ಗಣನೀಯವೆಂದು ಗುರುತಿಸಲಾಗಿದೆ. ಇದಕ್ಕಾಗಿ ದೇಶ ನಿಮ್ಮನ್ನು ಸದಾ ಗೌರವಿಸಲಿದೆ. ಇಂತಿ ನಿಮ್ಮ ರಾಷ್ಟ್ರಾಧ್ಯಕ್ಷರು... ಕೀನ್ಯಾ...' ಆಲ್‌ಫ್ರೆಡ್ ಇದನ್ನು ಓದಿ ಮುಗಿಸುವಷ್ಟರಲ್ಲಿ ಜೇನ್ ಮತ್ತು ಮರುಗೆ ಇಬ್ಬರ ಕಣ್ಣುಗಳಿಂದಲೂ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. ಕಣ್ಣೊರೆಸಿಕೊಂಡು ಎದ್ದ ಜೇನ್, "ಮರುಗೆ ನಾನು ನಿನಗಾಗಿಯೇ ಮತ್ತೆ ಇಲ್ಲಿಗೆ ಬಂದೆ. ನೀನು ನಾಳೆಯಿಂದ ಶಾಲೆಗೆ ಬರುವಿಯಲ್ಲ...?" ಎಂದಳು. ಕಣ್ಣೀರನ್ನು ಒರೆಸಿಕೊಂಡ ಮರುಗೆ, "ಖಂಡಿತ ನಾನಿನ್ನೂ ಸರಿಯಾಗಿ ಓದುವುದನ್ನು ಕಲಿತಿಲ್ಲ. ಕಲಿಯುವವರೆಗೂ ಪ್ರತಿದಿನ ಬರುತ್ತೇನೆ..." ಎನ್ನುತ್ತಾ ನಗತೊಡಗಿದ. ಓದುವುದು ಬಾರದೆ ತನಗಾಗಿ ಬಂದ ಪತ್ರದಲ್ಲಿ ಏನಿದೆ ಎಂದು ತಿಳಿದುಕೊಳ್ಳದೆ ಕಳೆದುಕೊಂಡ ಕಾಲವನ್ನು, ಬದುಕನ್ನು ನೆನೆಸಿಕೊಂಡು ಪಟ್ಟ ವಿಷಾದದ ಛಾಯೆ ಅವನ ಧ್ವನಿಯಲ್ಲಿತ್ತಾ...? ಗೊತ್ತಿಲ್ಲ... ಆದರೆ ಇತಿಹಾಸದಲ್ಲಿ ಪ್ರಾಥಮಿಕ ಶಾಲೆಗೆ ಸೇರಿದ ಅತ್ಯಂತ ಹಿರಿಯ ವ್ಯಕ್ತಿ ಎಂಬ ಗಿನ್ನೆಸ್ ದಾಖಲೆ ಮರುಗೆಯ ಹೆಸರಲ್ಲಿದೆ. ವಿಶ್ವಸಂಸ್ಥೆಯಲ್ಲಿ ಪ್ರಪಂಚದ ಎಲ್ಲ ದೇಶಗಳ ನಾಯಕರುಗಳಿಗೆ ವಿದ್ಯೆಯ ಮಹತ್ವ ತಿಳಿಸುವ ಉಪನ್ಯಾಸ ನೀಡಲು ಆಮಂತ್ರಿತನಾಗಿದ್ದು ಮರುಗೆಯ ಹೆಗ್ಗಳಿಕೆ...! ಮರುಗೆ ಕೀನ್ಯಾದಲ್ಲಿ ಹೊಸ ಜನಾಂಗಗಳಿಗೆ ಶಾಲೆಗೆ ಹೋಗಲು ಪ್ರೇರಣೆಯಾದ. ೨೦೦೯ರಲ್ಲಿ ತನ್ನ ೮೯ನೇ ವಯಸ್ಸಿನಲ್ಲಿ ಮರುಗೆ ಇಹಲೋಕ ತ್ಯಜಿಸುವವರೆಗೂ ವಿದ್ಯಾರ್ಥಿಯಾಗಿಯೇ ಇದ್ದ.


**ಎಂ. ಜೆ. ರಾಜೀವ ಗೌಡ**
ಮೇಲೂರು – ೫೬೨ ೧೦೨, ಶಿಡ್ಲಘಟ್ಟ ತಾಲೂಕು
ಚಿಕ್ಕಬಳ್ಳಾಪುರ ಜಿಲ್ಲೆ

> ೧೦ನೇ ಶತಮಾನದ ಮೊದಲ ಕನ್ನಡ ಗದ್ಯಕೃತಿಯಾದ 'ವಡ್ಡಾರಾಧನೆ'ಯ ಕಥಾಗುಚ್ಛದಲ್ಲಿ, 'ಸುಕುಮಾರಸ್ವಾಮಿಯ ಕಥೆ' ಮೊದಲನೆಯದು ಮತ್ತು ದೀರ್ಘವಾದುದು. ಇದರ ಕಥನವಿನ್ಯಾಸವು ವಿಶಿಷ್ಟವಾಗಿದ್ದು, ಉಳಿದ ಕಥೆಗಳಿಗಿಂತ ಹೆಚ್ಚು ಸೂಕ್ಷ್ಮವೂ ಸಂಕೀರ್ಣವೂ ಕುತೂಹಲಕರವೂ ಆಗಿದೆ. ಮೇಲುನೋಟಕ್ಕೆ ಈ ಕಥೆಯು ವಾಯುಭೂತಿ ಎಂಬ 'ದುಷ್ಟ' ಪಾತ್ರದ ಭವಾವಳಿ ಬದುಕಿನ ಏಳುಬೀಳಿನ ಕಥೆಯಂತೆ ಕಂಡರೂ, ವಿಭಿನ್ನ ಪಾತ್ರಗಳನ್ನು ತನ್ನ ಒಡಲಲ್ಲಿ ತುಂಬಿಕೊಂಡು ಹಲವರ ಕಥೆಯಾಗಿ ರೂಪುಗೊಂಡಿದೆ. ಇಲ್ಲಿನ ಕಥನವು ತನ್ನ ಆಶಯಕ್ಕೆ ತಕ್ಕಂತೆ ಕೆಲವು ಪಾತ್ರಗಳನ್ನು ಬೆಳೆಸಿದೆ ಮತ್ತೆ ಕೆಲವನ್ನು ಬಳಸಿದೆ. 'ಬೆಳಸು' ಮತ್ತು 'ಬಳಸು' ಎಂಬ ಈ ಶಬ್ದಗಳನ್ನು ತಾತ್ವಿಕ ಪರಿಭಾಷೆಯಾಗಿ ಬಳಸುವುದಾದರೆ, ಹೀಗೆ ಬಳಸುವ ಮತ್ತು ಬೆಳೆಸುವ ಪ್ರಕ್ರಿಯೆಯಲ್ಲಿ 'ವಡ್ಡಾರಾಧನೆ'ಯ ಕಥನಕ್ರಮವು ಅನೇಕ ಬಿಕ್ಕಟ್ಟುಗಳನ್ನು ಎದುರಿಸಿದೆ. ಈ ಬಿಕ್ಕಟ್ಟುಗಳ ನೆಲೆಯಿಂದ ಸುಕುಮಾರಸ್ವಾಮಿಯ ಕಥೆಯನ್ನು ಚರ್ಚಿಸುವಾಗ, ಸಮಾಜವನ್ನು ಕುರಿತಾದ ಕಥೆಯ ದೃಷ್ಟಿ ಧೋರಣೆಗಳು ತೆರೆದುಕೊಳ್ಳುತ್ತವೆ. ಅಲ್ಲದೆ ಇಲ್ಲಿನ ಕಥನದ ಬಿಕ್ಕಟ್ಟುಗಳು ಓದುಗರಲ್ಲಿ ಅನೇಕ ಪ್ರಶ್ನೆ ಮತ್ತು ಅನುಮಾನಗಳನ್ನು ಹುಟ್ಟಿಸುತ್ತವೆ.

**ಕುಮಾರಸ್ವಾಮಿ ಬೆಜ್ಜಿಹಳ್ಳಿ**

# ಸುಕುಮಾರಸ್ವಾಮಿಯ ಕಥೆ ಪ್ರಭುತ್ವ, ಧರ್ಮ ಮತ್ತು ಜನತೆ



**ಸು**ಕುಮಾರಸ್ವಾಮಿಯ ಕಥೆಯಲ್ಲಿ ಕೃಷಿ, ವ್ಯಾಪಾರ, ರಾಜ್ಯಾಡಳಿತ, ಅರಸರು, ಅರಸಿಯರು, ಮುನಿಗಳು ಮುಂತಾಗಿ ಸಮಾಜದ ವಿವಿಧ ಸ್ತರದ ಪಾತ್ರಗಳು ಬರುತ್ತವೆ. ಈ ಎಲ್ಲಾ ಪಾತ್ರಗಳಿಗೂ ಇರುವ ವಿವಿಧ ರೀತಿಯ ಚಲನೆ ಕುತೂಹಲಕರವಾಗಿದ್ದು ಸಂಕೀರ್ಣವಾಗಿದೆ. ಈ ಕಥನದಲ್ಲಿ ಸಾಮಾನ್ಯವಾಗಿ ರಾಜರಂತಹ ಪ್ರಭುತ್ವಕೇಂದ್ರಿತ ಪಾತ್ರಗಳು, ಸವಣರಂತಹ ಧರ್ಮಕೇಂದ್ರಿತ ಪಾತ್ರಗಳು, ವಣಿಕರಂತಹ ವೃತ್ತಿಕೇಂದ್ರಿತ ಪಾತ್ರಗಳು ಹೆಚ್ಚು ಬೆಳೆಯುತ್ತವೆ. ಇನ್ನುಳಿದಂತೆ ಸಾಮಾನ್ಯ ನೆಲೆಯಿಂದ ಬಂದ ಜನತೆಯ ಪಾತ್ರಗಳು ಬಳಕೆಗೊಳ್ಳುತ್ತವೆ. ಹೀಗೆ ಬಳಕೆಗೊಳ್ಳುವ ಪಾತ್ರಗಳು ಬೆಳೆಯುವ ಪಾತ್ರಗಳ ಬೇಕುಬೇಡಗಳನ್ನು ಅವಲಂಬಿಸಿರುತ್ತವೆ. ಇದು ಪ್ರಭುತ್ವ ಮತ್ತು ಧರ್ಮದಂತಹ ಸಂಸ್ಥೆಗಳು ತಾವು ಬೆಳೆಯುವ ಮತ್ತು ಉಳಿಯುವ ಸಲುವಾಗಿ ಜನತೆಯನ್ನು ಬಳಸಿಕೊಳ್ಳುವುದಕ್ಕೆ ಪೂರಕವಾಗಿವೆ. ಧರ್ಮವಾಗಲಿ ಪ್ರಭುತ್ವವಾಗಲಿ ತಮ್ಮ ಅಸ್ತಿತ್ವಕ್ಕೆ ಜನತೆಯನ್ನೇ ಅವಲಂಬಿಸಿರುತ್ತವೆ. ಹಾಗೆ ಅವು ತಮ್ಮ ಅಸ್ತಿತ್ವ ಮತ್ತು ಬೆಳವಣಿಗೆಗಾಗಿ ಜನತೆಯನ್ನು ಬಳಸಿಕೊಳ್ಳುವಾಗ ಜನ ಸ್ವತಂತ್ರವಾಗಿ ಮತ್ತು ವಿಮರ್ಶಾತ್ಮಕವಾಗಿ ಆಲೋಚನೆ ಮಾಡದಂತೆ ನಿಯಂತ್ರಿಸುತ್ತವೆ ಕೂಡ. ಈ ಹಿನ್ನೆಲೆಯಲ್ಲಿ ಧರ್ಮ, ಪ್ರಭುತ್ವ ಹಾಗೂ ಜನತೆ ಎಂಬ ಈ ಮೂರು ಚಾರಿತ್ರಿಕ ಶಕ್ತಿಗಳ ನಡುವೆ ಪರಸ್ಪರ ಪೂರಕವೂ ವೈರುಧ್ಯಕರವೂ ಆದ ಸಂಬಂಧಗಳಿವೆ. ಈ ಚಾರಿತ್ರಿಕ ಶಕ್ತಿಗಳು ಮೇಲ್ನೋಟಕ್ಕೆ ಬೇರೆ ಬೇರೆಯಾಗಿ ಕಂಡರೂ ವಾಸ್ತವದಲ್ಲಿ ಒಂದರೊಳಗೊಂದು ಮಿಳಿತವಾಗಿವೆ. ಧರ್ಮವು ಪ್ರಭುತ್ವ ಮತ್ತು ಜನತೆಯನ್ನು ಪ್ರಭಾವಿಸುತ್ತದೆ ಮತ್ತು ನಿಯಂತ್ರಿಸುತ್ತದೆ. ಹಾಗೆಯೇ ಪ್ರಭುತ್ವವೂ ಧರ್ಮದ ಮಾರ್ಗದರ್ಶನದಂತೆ ನಡೆಯುತ್ತದೆ. ಏಕಕಾಲಕ್ಕೆ ಧರ್ಮ ಮತ್ತು ಪ್ರಭುತ್ವಗಳು ಜನತೆಯನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತವೆ. ಈ ಆಯಾಮಗಳು 'ಸುಕುಮಾರಸ್ವಾಮಿಯ ಕಥೆ'ಯಲ್ಲಿ ಸಂಕೀರ್ಣವಾಗಿ ಅಭಿವ್ಯಕ್ತಗೊಂಡಿವೆ.

'ಸುಕುಮಾರಸ್ವಾಮಿಯ ಕಥೆ'ಯು ಕಾಣಿಸುವ ಪ್ರಭುತ್ವ, ಧರ್ಮ ಮತ್ತು ಜನತೆಯ ನಡುವಿನ ಈ ಸಂಬಂಧವನ್ನು ಕಥೆಯ ಚೌಕಟ್ಟಿನಲ್ಲಿ ಬಿಡಿಬಿಡಿಯಾಗಿ ಚರ್ಚಿಸುವುದು ಒಂದು ವಿಧಾನ. ಮೂರನ್ನು ಒಟ್ಟಿಗೇ ಗ್ರಹಿಸುವುದು ಇನ್ನೊಂದು ವಿಧಾನ. ಪ್ರಸ್ತುತ ಲೇಖನದಲ್ಲಿ ಎರಡನೆಯ ವಿಧಾನವನ್ನು ಅನುಸರಿಸಿ ವಿಶ್ಲೇಷಣೆ ಮಾಡಲು ಯತ್ನಿಸಲಾಗಿದೆ.

ವರ್ಧಮಾನ ತೀರ್ಥಂಕರರ ಪ್ರಾರ್ಥನೆಯುಳ್ಳ ಒಂದು ಸಂಸ್ಕೃತ ಶ್ಲೋಕದಿಂದ ವಡ್ಡಾರಾಧನೆಯ ಕಥೆಗಳು ಆರಂಭವಾಗುತ್ತವೆ. ಈ ಶ್ಲೋಕದ ಕೆಳಗಿರುವ ಪೀಠಿಕಾ ಭಾಗದಲ್ಲಿ ವಡ್ಡಾರಾಧನೆಯ ಸಮಸ್ತ ಕಥೆಗಳ ಆಶಯ ವ್ಯಕ್ತವಾಗಿದೆ. ಈ ಪೀಠಿಕೆಯ ವಿವರಣೆ ಎಂಬಂತೆ ಸಂಕಲನದ ಎಲ್ಲ ಕಥೆಗಳನ್ನು ಕನ್ನಡದಲ್ಲಿ ಮಂಡಿಸಲಾಗಿದೆ. ಪ್ರತಿ ಕಥೆಯ

ನಡುನಡುವೆ ಸಂಸ್ಕೃತ ಶ್ಲೋಕ ಮತ್ತು ಪ್ರಾಕೃತದ ಗಾಹೆಗಳು ಬರುತ್ತವೆ. ಈ ಪೀಠಿಕಾ ಭಾಗದಲ್ಲಿ ನಿಜವಾದ ವೀರನ ವ್ಯಾಖ್ಯೆಯೊಂದು ಕಾಣಿಸಿಕೊಳ್ಳುತ್ತದೆ. ಅದರ ಪ್ರಕಾರ "ದೇವೋಪಸರ್ಗ, ಮನುಷ್ಯೋಪಸರ್ಗ, ತಿರಿಕೋಪಸರ್ಗವೇ ಮೊದಲಾದ ನಾಲ್ಕು ಬಗೆಯ ಉಪಸರ್ಗಗಳು, ಇಪ್ಪತ್ತೆರಡು ಪರೀಷಹಗಳನ್ನು ಸೈರಿಸಿ, ಐದು ಇಂದ್ರಿಯಗಳನ್ನು ಗೆದ್ದು, ಬಾಹ್ಯಭಂತರ ಪರಿಗ್ರಹಗಳಂ ತೊರೆದು, ದ್ವಾದಶವಿಧಮಪ್ಪ ತಪದೊಳ್ ನೆಗಳ್ದು, ಪ್ರಾಯೋಪಗಮನದಿಂದ ಸನ್ಯಾಸನವನ್ನು ಗೆದ್ದು ಕರ್ಮಕ್ಷಯವನ್ನು ಕೈಗೊಂಡು ಮೋಕ್ಷಕ್ಕೆ" ಹೋದವನೇ ನಿಜವಾದ ವೀರ. ಇಡೀ ಕಥನವು ಈ ವೀರತ್ವದ ಪರಿಭಾಷೆಯಲ್ಲಿಯೇ ಮಾತನಾಡುತ್ತದೆ. ವೈರಿಗಳ ವಿರುದ್ಧ ಯುದ್ಧ ಮಾಡಿ ಗೆಲ್ಲುವ ಕ್ಷತ್ರಿಯರಿಗಿಂತ, ತಪಸ್ಸು ಮಾಡುವಾಗ ಬರುವ ಕಷ್ಟಗಳನ್ನು ಗೆಲ್ಲುವ ಸವಣರ ವೀರತ್ವವು ಬಹಳ ದೊಡ್ಡದು ಎಂದು ಅದು ಚಿತ್ರಿಸುತ್ತದೆ. ಅಲ್ಲದೆ ಧರ್ಮವು ತನ್ನ ಅಸ್ತಿತ್ವಕ್ಕಾಗಿ ತಾನೇ ಸೃಷ್ಟಿಸಿಕೊಂಡ ಮೇಲ್ಕಾಣಿಸಿದ ಉಪಸರ್ಗ ಮತ್ತು ಪರೀಷಹಗಳನ್ನು 'ಗೆದ್ದು' ಎಂದು ಹೇಳುವ ಮೂಲಕ ಅವನ್ನು ತನ್ನ ಎದುರಾಳಿ ಸ್ಥಾನದಲ್ಲಿ ನಿಲ್ಲಿಸುತ್ತದೆ. ಅಷ್ಟು ಮಾತ್ರವಲ್ಲ, ಇವನ್ನು ನಿರ್ಮಿಸಿಕೊಂಡಿರುವುದೇ ತಾನು ಗೆಲ್ಲುವ ಸಲುವಾಗಿ ಎಂದೂ ಅನಿಸುತ್ತದೆ. ಆ ಮೂಲಕ ತಾವು ಎದುರಿಸುವ ಎಲ್ಲಾ ಕಷ್ಟಗಳನ್ನು ಧರ್ಮವು ತನ್ನ ಮೇಲ್ಮೆಗಾಗಿ ಬಳಸಿಕೊಳ್ಳುತ್ತಿದೆ. ಉಪಕತೆಗಳಲ್ಲಿ ಬರುವ ಸಾಮಾನ್ಯ ಜನತೆಯ ಕಷ್ಟಗಳಿಂದ ಧರ್ಮವು ಪ್ರಯೋಜನವನ್ನು ಪಡೆಯುತ್ತಿದೆ. ಪ್ರಭುತ್ವವು ಇದಕ್ಕೆ ಸಹಾಯ ಮಾಡುತ್ತಿದೆ. ಉದಾಹರಣೆಗೆ ನಾಗಶ್ರೀಯು ಜೈನ ವ್ರತಗಳನ್ನು ಸವಣರಿಗೆ ಹಿಂದಿರುಗಿಸುವಾಗ ಅನೇಕ ಉಪಕಥೆಗಳನ್ನು ಸೃಷ್ಟಿಸಲಾಗಿದೆ. ಅವೆಲ್ಲವೂ ಸಾಮಾನ್ಯ ಜನತೆಯ ಪಾತ್ರಗಳು. ಕಥೆಯಲ್ಲಿನ ಆ ಉಪಕಥೆಗಳ ಭಾಗ ಅತ್ಯಂತ ರೋಚಕವಾಗಿದೆ. ಅವನ್ನು ಹೆಣೆದಿರುವ ಮೂಲ ಉದ್ದೇಶ ನಾಗಶ್ರೀ ಪಡೆದಿರುವ ಜೈನ ವ್ರತಗಳನ್ನು ಅವಳಲ್ಲಿಯೇ ಉಳಿಸುವುದು. ಅಷ್ಟೇ ಅಲ್ಲದೆ ನಾಗಶ್ರೀಯೊಂದಿಗೆ ಆ ರಾಜ್ಯದ ರಾಜನನ್ನೂ ಒಳಗೊಂಡಂತೆ ಅನೇಕ ಜನರನ್ನು ಜೈನರನ್ನಾಗಿ ಮಾಡುವ ಕಾರಣಕ್ಕಾಗಿ ಆ ಉಪಕಥೆಗಳನ್ನು ಹೆಣೆಯಲಾಗಿದೆ. ಹೀಗಾಗಿ ಕಥನವು ಧರ್ಮವನ್ನು ಕೇಂದ್ರಸ್ಥಾನದಲ್ಲಿ ನಿಲ್ಲಿಸಿ, ಜನಸಾಮಾನ್ಯ ಪಾತ್ರಗಳನ್ನು ಧರ್ಮದ ಹಿತಕ್ಕಾಗಿ ಬಳಸಿಕೊಳ್ಳುತ್ತಿದೆ. ಜತೆಗೆ ಪ್ರಭುತ್ವದೊಂದಿಗಿನ ಧರ್ಮದ ಸಾಮ್ಯತೆಯನ್ನು ಕಾಯ್ದುಕೊಳ್ಳುವ ತಂತ್ರಗಾರಿಕೆಯನ್ನೂ ಸಾಧಿಸಿದೆ.

ಈ ಲೇಖನದಲ್ಲಿ ಚರ್ಚೆಗೆ ಎತ್ತಿಕೊಂಡಿರುವ 'ಸುಕುಮಾರಸ್ವಾಮಿಯ ಕಥೆ'ಯು ಅತ್ಯಂತ ಪ್ರಮುಖವಾದ ಮತ್ತು ಅಷ್ಟೇ ಜಟಿಲವಾದ ಸಮಸ್ಯೆಯೊಂದಿಗೆ ಶುರುವಾಗುತ್ತದೆ. ಬಾಲ್ಯದಲ್ಲಿ ವ್ಯಸನಕ್ಕೆ ಬಿದ್ದು ತಂದೆಯಿಂದ ತಮಗೆ ಬರಬೇಕಾದ ಮಂತ್ರಿಪದವಿಯನ್ನು ಕಳೆದುಕೊಳ್ಳುವ ಅಗ್ನಿಭೂತಿ ಮತ್ತು ವಾಯುಭೂತಿಯರ ಸಮಸ್ಯೆಯದು. ಸೋದರರು ಅಧಿಕಾರದಿಂದ ವಂಚಿತರಾಗುವುದು "ವೇದ ಮೊದಲಾಗೊಂಡೆಯ ಶಾಸ್ತ್ರಗಳನೋದದೆ" ಇರುವ ಕಾರಣದಿಂದ. ಈ ಅಂಶವು ಶಾಸ್ತ್ರಜ್ಞಾನ, ಅಧಿಕಾರ ಮತ್ತು ಅದರ ಉತ್ಪನ್ನವಾದ ಸಂಪತ್ತಿನ ನಡುವಿನ ಸಂಬಂಧದ ಸ್ವರೂಪವನ್ನು ಸೂಚಿಸುತ್ತಿದೆ. ಮಂತ್ರಿಪದವಿಗೆ ಅರ್ಹವಾದ ಆ ವಿದ್ಯೆಗಳಾದರೂ ವೈದಿಕರು ಹುಟ್ಟುಹಾಕಿದವು. ಅಧಿಕಾರ ದತ್ತವಾಗಬೇಕಾದರೆ ಆ ವೈದಿಕ ಶಾಸ್ತ್ರಗಳನ್ನು ಅಧ್ಯಯನ ಮಾಡಿರಬೇಕು ಎಂಬ ಧೋರಣೆಯೂ ಇಲ್ಲಿದೆ. ಆದರೆ ಹೀಗೆ ವೈದಿಕಶಾಸ್ತ್ರಗಳನ್ನು ಕಲಿಯಲು ಸಾಧ್ಯವಿರುವುದು ವೈದಿಕರಿಗೇ ಹೊರತು ಬೇರೆ ಸಾಮಾಜಿಕ ಸ್ತರದ ಜನರಿಗಲ್ಲ. ಕಥನವು ಮಂತ್ರಿ ಪದವಿಗೆ ನಿರ್ದಿಷ್ಟ ಸಾಮಾಜಿಕ ಹಿನ್ನೆಲೆಯವರು ಮಾತ್ರ ಅರ್ಹರೆಂದು ಸೂಚಿಸುತ್ತದೆಯಾದರೂ, ಮುಂದೆ ಅಂತಹ ವೈದಿಕ ಪ್ರಣೀತ ಶಾಸ್ತ್ರಗಳನ್ನು ಜೈನ ಧರ್ಮಶಾಸ್ತ್ರದ ಹತೋಟಿಗೆ ಒಳಪಡಿಸುವ ವಿನ್ಯಾಸವನ್ನು ಒಳಗೊಳ್ಳುತ್ತದೆ. ಈ ಮೂಲಕ ಇಲ್ಲಿನ ಕಥನವು ತನ್ನ ಚೌಕಟ್ಟಿನಲ್ಲಿ ಜೈನ ಧರ್ಮಶಾಸ್ತ್ರವು ವೈದಿಕಶಾಹಿಯನ್ನೂ ತನಗೆ ಬೇಕಾದಂತೆ ಬಳಸಿಕೊಳ್ಳಲು ಆರಂಭಿಸುತ್ತದೆ.

ಅಗ್ನಿಭೂತಿ ಮತ್ತು ವಾಯುಭೂತಿಯರು ಮೂಲತಃ ಬ್ರಾಹ್ಮಣರು.

ಅವರು ಕೈತಪ್ಪಿಹೋಗಿರುವ ಮಂತ್ರಿ ಪದವಿಯನ್ನು ಮರಳಿ ಪಡೆಯುವುದಕ್ಕಾಗಿ ತಮ್ಮ ಮಾವನಾದ ಸೂರ್ಯಮಿತ್ರನಲ್ಲಿ ಏಳೆಂಟು ವರುಷದಿಂದೊಳಗೆ ಅವಶ್ಯವಿರುವ ಎಲ್ಲವನ್ನೂ ಕಲಿಯುತ್ತಾರೆ. ಮರಳಿ ತಮ್ಮ ರಾಜನಲ್ಲಿಗೆ ಬಂದು ಅವನ್ನೆಲ್ಲ 'ಪಂಡಿತ' ಜನವೆಲ್ಲ ಮೆಚ್ಚುವ ರೀತಿಯಲ್ಲಿ ವಖ್ಯಾಣಿಸುತ್ತಾರೆ. ಅದನ್ನು ಮನ್ನಿಸುವ 'ಪಂಡಿತ'ರೂ ಬ್ರಾಹ್ಮಣರೇ ಆಗಿದ್ದಾರೆ. ನಿರ್ದಿಷ್ಟವಾದ ಈ ವಿದ್ಯೆಯನ್ನು ಕಲಿತುದರಿಂದ ಸೋದರರಿಗೆ ಮಂತ್ರಿ ಪದವಿ ದೊರಕಿದೆ. ಪ್ರಭುತ್ವವು ಈ ಶಾಸ್ತ್ರಗಳನ್ನು ಕಲಿತವರಿಗೆ ಮಂತ್ರಿ ಪದವಿಯನ್ನು ನೀಡುವುದು ಆಡಳಿತದ ಕಾರಣಕ್ಕಾಗಿ. ಆ ಆಡಳಿತ ತಂತ್ರಗಳು ಕಥನ ಕೊಡುತ್ತಿರುವ ಮೇಲಿನ ಶಾಸ್ತ್ರಗಳಲ್ಲಿದೆ ಎಂದು ಕಥನವೇ ದೃಢಪಡಿಸುತ್ತಿದೆ. ಹಾಗೆ ಮಂತ್ರಿ ಪದವಿಯನ್ನು ಪಡೆದ ಅಗ್ನಿಭೂತಿ ಮತ್ತು ವಾಯುಭೂತಿಯರು ಬ್ರಾಹ್ಮಣರಾಗಿಯೇ ಉಳಿದು ಎಲ್ಲಾ ಸಂಪತ್ತನ್ನು ಪಡೆದು ಸುಖದಿಂದ ಬಾಳುವುದರ ಜೊತೆಗೆ ತಾವು ಕಲಿತ ಆ ಎಲ್ಲಾ ಓದುಗಳನ್ನು ಮತ್ತೆ ಬ್ರಾಹ್ಮಣರಿಗೇ ಬೋಧಿಸುತ್ತಾರೆ. ಇಲ್ಲಿ ವೈದಿಕ ಧರ್ಮಶಾಸ್ತ್ರವು ನಿರ್ಮಿಸಿರುವ ಜ್ಞಾನ ಮತ್ತು ಅದು ತಂದುಕೊಟ್ಟಿರುವ ಸಂಪತ್ತು ಈ ಎಲ್ಲವೂ ಮಿಳಿತಗೊಂಡಿವೆ.

ವಿಶೇಷವೆಂದರೆ, ಈ ಎಲ್ಲವನ್ನು ಜೈನಧರ್ಮವು ತನ್ನ ಉಳಿವಿಗಾಗಿ ಆಂತರ್ಯದಲ್ಲಿ ಒಪ್ಪಿಕೊಂಡು ಅನುಸರಿಸಿ, ನಂತರ ಬಹಿರಂಗವಾಗಿ ವಿರೋಧಿಸುವಂತೆ ಇಲ್ಲಿನ ಕಥನವು ಏರ್ಪಟ್ಟಿದೆ. ಅಂದರೆ ವೈದಿಕಶಾಹಿಯ ಶಾಸ್ತ್ರಗಳ ನಿಡಿದಾದ ಪಟ್ಟಿಯನ್ನೇ ನೀಡುವ ಕಥನವು ಅದನ್ನು ಮೀರಿದ ಮತ್ತು ಮನುಷ್ಯನ ಮೋಕ್ಷಕ್ಕೆ ಬೇಕಾದ ಜ್ಞಾನವು ವೈದಿಕ ಶಾಸ್ತ್ರದಲ್ಲಿಲ್ಲ ಎಂದು ಸಾರುವುದಕ್ಕೆ ಯತ್ನಿಸುತ್ತದೆ. ಮೇಲಿನ ಎಲ್ಲಾ ಓದುಗಳನ್ನು ಬೋಧಿಸಿದ ಸೂರ್ಯಮಿತ್ರನು ಕಥೆಯೇ ಹೇಳುವಂತೆ "ಎಲ್ಲಾ ಓದುಗಳುಮಂ ಬಲ್ಲೋನ್" ಅಲ್ಲದೆ ಪಂಡಿತನೂ ಕೂಡ. ಆದರೆ ಮುಂದೆ ಅವನೇ ಶಿಷ್ಯನಾಗಿ ಸುಧರ್ಮಾಚಾರ್ಯರೆಂಬ ಸವಣರಲ್ಲಿ ವಿದ್ಯೆ ಕಲಿಯುವ ಪ್ರಸಂಗ ಬರುತ್ತದೆ. ಅಂದರೆ ವೈದಿಕನಾದ ಸೂರ್ಯಮಿತ್ರನು ಕಲಿತಿರುವ ಎಲ್ಲಾ ಓದುಗಳಿಗೂ ಮಿಗಿಲಾದ ಓದುಗಳು ಜೈನಶಾಸ್ತ್ರದಲ್ಲಿವೆ ಎಂದು ಕಥನ ಧ್ವನಿಸುತ್ತದೆ. ವೈದಿಕ ಧರ್ಮಶಾಸ್ತ್ರಗಳು ಮಂತ್ರಿಪದವಿಯನ್ನು ದಕ್ಕಿಸಿಕೊಡುತ್ತವೆ ಮತ್ತು ಅದರಿಂದ ಅಧಿಕಾರ ಸಂಪತ್ತು ಎಲ್ಲವೂ ದೊರೆಯುತ್ತದೆ. ಆದರೆ ಅದೇ ವೈದಿಕ ಧರ್ಮಶಾಸ್ತ್ರಗಳನ್ನು ಒಪ್ಪಿಕೊಂಡ ಅಥವಾ ಅದರ ಮುಂದುವರೆದ ಭಾಗವಾದ ಜೈನ ಧರ್ಮಶಾಸ್ತ್ರವು ಭೂಲೋಕಕ್ಕಿಂತಲೂ ಮಿಗಿಲಾದ ದೇವಲೋಕದ ಸುಖಸಂಪತ್ತನ್ನು, ಅದರಲ್ಲೂ ಮುಖ್ಯವಾಗಿ ಮೋಕ್ಷವನ್ನು ಒದಗಿಸಿಕೊಡಬಲ್ಲದು. ಅಂದರೆ ವೈದಿಕ ಧರ್ಮಶಾಸ್ತ್ರಗಳಿಂದ ಬರುವ ಲೌಕಿಕ ಸುಖ ಸಂಪತ್ತನ್ನು ಜೈನಧರ್ಮ ಒಪ್ಪಿದೆ. ಅದು ವಣಿಕ ಪ್ರಧಾನವಾದ ಜೈನಧರ್ಮೀಯರಲ್ಲಿ ಸಹಜವೂ ಆಗಿದೆ. ಆದರೂ ಕಡೆಗೆ ಹೀಗೆ ಬಂದ ಎಲ್ಲಾ ಸುಖ ಸಂಪತ್ತನ್ನು ನಿರಾಕರಿಸಿ, ವೈದಿಕ ಧರ್ಮಶಾಸ್ತ್ರದಿಂದ ಕಲಿತದ್ದು ಅಮುಖ್ಯವೆಂದೂ, ಜೈನಧರ್ಮದಿಂದ ಪಡೆಯುವ ಕೇವಲ ಜ್ಞಾನವೇ ಶಾಶ್ವತವಾದುದು ಎಂದೂ ಸಾರುತ್ತದೆ. ಲೌಕಿಕ ಕಾರಣದಿಂದ ವೈದಿಕ ಧರ್ಮಶಾಸ್ತ್ರವನ್ನು ಒಪ್ಪಿಕೊಂಡೂ ಆಂತರ್ಯದಲ್ಲಿ ಅದನ್ನು ವಿರೋಧಿಸುವ ವಿನ್ಯಾಸವು ಈ ಕಥನಕ್ಕೆ ಹೀಗಾಗಿ ಪ್ರಾಪ್ತವಾಗಿದೆ.

ಧರ್ಮದ ವಿಷಯ ಬಂದಾಗ ಕಥೆಯು ಅನೇಕ ತಿರುವುಗಳನ್ನು ಪಡೆಯುತ್ತದೆ. ಪಾತ್ರಗಳು ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ಮತಾಂತರ ಹೊಂದುವ ಸನ್ನಿವೇಶಗಳಲ್ಲೆಲ್ಲ ಕಥೆ ಅನಿರೀಕ್ಷಿತ ತಿರುವುಗಳನ್ನು ಪಡೆಯುತ್ತದೆ. ಇದಕ್ಕೆ ಸಾಕ್ಷಿ, ಸೂರ್ಯಮಿತ್ರನು ಜೈನ ಸವಣನಾಗಿ ವಾಯುಭೂತಿಯಲ್ಲಿಗೆ ಬಂದಾಗ, 'ಜಾತ್ಯಂಧೆ'ಯಾದ ಹೊಲತಿಯ ಅಣುವ್ರತವನ್ನು ಸ್ವೀಕರಿಸಿದಾಗ, ಬ್ರಾಹ್ಮಣ ಕನ್ಯೆಯಾದ ನಾಗಶ್ರೀಯು ಜೈನವ್ರತ ಗಳನ್ನು ಸ್ವೀಕರಿಸಿದಾಗ ಹಾಗೂ ನಾಗಶ್ರೀಯ ತಂದೆ ಸೋಮಶರ್ಮನು ಜೈನನಾಗಿ ಪರಿವರ್ತನೆ ಪಡೆಯುವಾಗ ಕಥನವು ಪಡೆದುಕೊಳ್ಳುವ ನಾಟಕೀಯ ಆಯಾಮಗಳು. ಕಥೆಯು ಅಗ್ನಿಭೂತಿ–ವಾಯುಭೂತಿಯರ ಪ್ರಾರಂಭದಿಂದ ನಾಗಶ್ರೀಯ ಘಟ್ಟಕ್ಕೆ ಬಂದು ತಲುಪಿದ ನಂತರ, ಕಥೆಯಲ್ಲಿ ನಿಜವಾಗಿ ಎರಡು ಧರ್ಮಗಳ ನಡುವಣ ಸಂಘರ್ಷಕ್ಕೆ ಕಾವೇರುತ್ತದೆ. ಇಲ್ಲಿರುವ ಧರ್ಮಗಳ ಸಂಘರ್ಷ ಅಷ್ಟು ಸರಳವಾಗಿ ಮಂಡನೆಯಾಗುವುದಿಲ್ಲ. ಈ ಕಾರಣಕ್ಕಾಗಿ ಕಥನವು ಅನೇಕ ಉಪಕಥೆಗಳನ್ನು ಸೃಷ್ಟಿಮಾಡಿಕೊಳ್ಳುತ್ತದೆ ಮತ್ತು ಅವನ್ನು ಬಳಸಿಕೊಳ್ಳುತ್ತದೆ. ಜೈನವಿರೋಧಿಯಾಗಿದ್ದ ವಾಯುಭೂತಿಯ ಜನ್ಮಾಂತರದ ಕಥೆಗಳನ್ನು ಗಮನಿಸಿದಾಗ, ಜೈನಧರ್ಮಶಾಸ್ತ್ರದಲ್ಲಿ ಯಾವುದೇ ಪಾತ್ರಕ್ಕೆ ಕೆಳವರ್ಗದಿಂದ ನೇರವಾಗಿ ಸವಣನಾಗುವ ಅವಕಾಶವಿಲ್ಲ. ಬದಲಾಗಿ ಕೆಳಮಟ್ಟದಿಂದ ಹಂತಹಂತವಾಗಿ ಬೆಳೆಯುತ್ತಾ ಸಾಗುವುದು ಅನಿವಾರ್ಯ ವೆಂದು ತಿಳಿಯುತ್ತದೆ. ಈ ಬೆಳವಣಿಗೆಯಾದರೂ ಪಾತ್ರದ ಪಾಪಕರ್ಮಗಳನ್ನು ಅವಲಂಬಿಸಿದೆ. ಮೊದಲು ಬ್ರಾಹ್ಮಣನಾಗಿದ್ದ ವಾಯುಭೂತಿಯು ಅನೇಕ ಭವಗಳಲ್ಲಿ ನಾಯಿ, ಕತ್ತೆ, ಹಂದಿಯಾಗಿ ಜನ್ಮ ತಾಳುತ್ತಾ ಹೋಗುತ್ತಾನೆ. ಅಲ್ಲಿಯೂ ಹೆಣ್ಣು ನಾಯಿ ಮತ್ತು ಹೆಣ್ಣು ಕತ್ತೆಯಾಗಿ ಎಂಬುದು ಮಾರ್ಮಿಕ ಸಂಗತಿಯಾಗಿದೆ. ಇದು ಹೆಣ್ಣಿಗೆ ಜೈನಧರ್ಮಶಾಸ್ತ್ರ ನೀಡಿರುವ ಸ್ಥಾನದ ಸಂಕೇತವೂ ಆಗಿದೆ. ವಾಯುಭೂತಿ ಕೆಳಜಾತಿಯಲ್ಲಿ ಮಾತ್ರವಲ್ಲ ಹೆಣ್ಣಾಗಿ, ದುರ್ಗಂಧೆ, ದುಸ್ವರೆ ಜಾತ್ಯಂಧೆಯಾಗಿ ಹುಟ್ಟುತ್ತಾನೆ. ಈ ಮೂಲಕ ಅವನ ಅವಸ್ಥೆಗಳನ್ನು ಕೀಳು ಎಂದು ಇಲ್ಲಿನ ಧಾರ್ಮಿಕ ಕಥನವು ಸೂಚಿಸುತ್ತದೆ. ಕೊನೆಗೆ ಅವನು ಬ್ರಾಹ್ಮಣ ಜನ್ಮದಲ್ಲಿ ಅತ್ಯಂತ ರೂಪ ಲಾವಣ್ಯ ಉಳ್ಳವಳಾದ ನಾಗಶ್ರೀಯಾಗಿ ಹುಟ್ಟಿ ಸುಕುಮಾರಸ್ವಾಮಿಯಾಗುತ್ತಾನೆ. ಅದರಲ್ಲೂ ಸಂಪತ್ತಿನ ಒಡೆಯರಾದ ವಣಿಕರ ಜಾತಿಯಲ್ಲಿ ಜನಿಸುತ್ತಾನೆ. ಧರ್ಮದ ಚೌಕಟ್ಟಿನಲ್ಲಿ ಸಿಗುವ ಮೋಕ್ಷವೆಂಬ ಕೊನೆಯ ಗಮ್ಯಸ್ಥಾನದ ನಡುವೆ ಲೌಕಿಕವಾದ ಸಂಪತ್ತಿನ ಸ್ಥಾನವು ಮುಖ್ಯವಾಗಿದೆ. ಇದು ವಣಿಕಧರ್ಮವಾದ ಜೈನವು ಧರ್ಮ ಮತ್ತು ಅರ್ಥಗಳ ನಡುವೆ ಬೆಸೆದಿರುವ ವಿಚಿತ್ರವಾದ ಸಂಬಂಧದ ಪ್ರತೀಕದಂತಿದೆ.

'ಸುಕುಮಾರಸ್ವಾಮಿ ಕಥೆ'ಯು ಅಗ್ನಿಭೂತಿ ಮತ್ತು ವಾಯುಭೂತಿಯರಲ್ಲಿ ಒತ್ತುಕೊಟ್ಟಿರುವುದು ವಾಯುಭೂತಿಯ ಪಾತ್ರಕ್ಕೆ. ಇದಕ್ಕೆ ಸ್ಪಷ್ಟವಾದ ಕಾರಣವೂ ಇದೆ. ಈ ಇಬ್ಬರೂ ವಿಭಿನ್ನ ವ್ಯಕ್ತಿತ್ವಗಳನ್ನು ಉಳ್ಳವರು. ಅಗ್ನಿಭೂತಿ ಯಾದರೋ ಎಲ್ಲವನ್ನೂ ಸಹಾನುಭೂತಿಯಿಂದ ಒಪ್ಪುವವನು. ಆದರೆ ವಾಯುಭೂತಿ ಯಾವುದನ್ನೂ ಹಾಗೆ ನೇರವಾಗಿ ಒಪ್ಪುವವನಲ್ಲ. ಎಲ್ಲವನ್ನು ಒಪ್ಪುವ ಅಗ್ನಿಭೂತಿ ಕಥೆಗೆ ಸಮಸ್ಯೆಯಂತೆ ಕಂಡಿಲ್ಲ. ಆದರೆ ಜೈನಧರ್ಮವನ್ನು ಹಳಿದ ವಾಯುಭೂತಿಯು ಕಥೆಗೆ ಸಮಸ್ಯೆಯಾಗಿ ಕಂಡಿದ್ದಾನೆ. ಅದೇ ಕಾರಣಕ್ಕಾಗಿ ಅವನು ಕಥನದ ಕೇಂದ್ರಪಾತ್ರವಾಗಿರುವನು. ಕಥೆ ಇಲ್ಲಿ ಬದಲಾಯಿಸಬೇಕಾಗಿರುವುದು ಜೈನವಿರೋಧಿಯಾದ ವಾಯುಭೂತಿಯನ್ನೇ ಹೊರತು ಸುಲಭವಾಗಿ ಜೈನನಾದ ಅಗ್ನಿಭೂತಿಯನ್ನಲ್ಲ. ಇವರಿಬ್ಬರಿಗೂ ಮಾವನಾದ ಸೂರ್ಯಮಿತ್ರನು ಜೈನಸವಣನಾಗಿ ರೂಪಾಂತರಗೊಂಡು ಅಗ್ನಿಭೂತಿಯಲ್ಲಿಗೆ ಬಂದಾಗ ಅವನು ಅತ್ಯಂತ ಆದರದಿಂದ ಬರಮಾಡಿ ಕೊಂಡು ಎತ್ತರವಾದ ಸ್ಥಳದಲ್ಲಿ ಕುಳ್ಳಿರಿಸಿ ಸತ್ಕರಿಸುತ್ತಾನೆ. ಆದರೆ ವಾಯುಭೂತಿ ಸವಣರೂಪಿಯಾದ ಮಾವನನ್ನು ಹಾಗೆ ಸತ್ಕರಿಸದೆ ವಿರೋಧಿಸುತ್ತಾನೆ. ಇದು ಕಥೆಯ ಅತ್ಯಂತ ಮುಖ್ಯವಾದ ಘಟ್ಟ. ಸಾಂಪ್ರದಾಯಿಕ ಸಾಮಾಜಿಕ ತಿಳುವಳಿಕೆಯಲ್ಲಿ ಅಗ್ನಿಭೂತಿ ಒಳ್ಳೆಯ ಸಂಸ್ಕಾರವಂತನಾಗಿಯೂ ವಾಯುಭೂತಿ ಮಹಾಗರ್ವಿಯಾಗಿಯೂ ಬಿಂಬಿತನಾಗಿದ್ದಾನೆ. ಇಲ್ಲಿ ಪ್ರಮುಖವಾದ ಎರಡು ಅಂಶಗಳಿವೆ. ಮೊದಲನೆಯದು – ವಾಯುಭೂತಿಯು ಸೂರ್ಯಮಿತ್ರ ಬಂದ ಸಂದರ್ಭದಲ್ಲಿ ಪಾರ್ವರ ಸಭೆಯಲ್ಲಿ ಕುಳಿತು ಬೋಧನೆ ಮಾಡುತ್ತಿರುತ್ತಾನೆ. ಎರಡನೆಯದು – ಇದುವರೆಗೂ ಬ್ರಾಹ್ಮಣನಾಗಿದ್ದ ಸೂರ್ಯಮಿತ್ರ ಜೈನ ಸವಣನಾಗಿ ಮತಾಂತರಗೊಂಡು ಬಂದಿದ್ದಾನೆ. ಮಾವನನ್ನು ತಿರಸ್ಕರಿಸುವ ವಾಯುಭೂತಿಯ ಹಿನ್ನೆಲೆಯಿಂದ ನೋಡುವಾಗ ಮಾವನನ್ನು ಸತ್ಕರಿಸುವ ಅಗ್ನಿಭೂತಿಯದು ಸಹಜವಾದ ನಡೆಯಂತೆ ಕಾಣುವುದಿಲ್ಲ. ಕಾರಣ, ಧರ್ಮಗಳ ಮಧ್ಯೆ ಸಾಮರಸ್ಯವು ಅಷ್ಟು ಸುಲಭವಾಗಿ ಏರ್ಪಡುವುದಿಲ್ಲ. ಅಗ್ನಿಭೂತಿಯು ಜೈನ ಸವಣನಾಗಿರುವ ಮಾವನಾದ ಸೂರ್ಯಮಿತ್ರನಿಗೆ ನಮಸ್ಕರಿಸುವಂತೆ ವಾಯುಭೂತಿಗೆ ಸೂಚಿಸಿದಾಗ, ಅವನು "ಇದೇನೊಳ್ಳಿದರ್ಗ್ಗೆನ್ನಂ ಪೊಡೆವಡಿಸಿದಪ್ಪೈ ಪೇಳೆಂದುಮಶುಚಿಗಳ್ ಮಲಗ್ರಸ್ತರೆಂದಪ್ಪೊಡಂ ಮಿಂದರಿಯದವರಿವರ ಕಾಲ್ಗೆರಗುವಂ ಗಡಮೆಂದು ಪಾರ್ವರ ಸಭೆಯ ನಡುವಿರ್ದ್ದು" ಕಟುವಾಗಿ ನುಡಿಯುತ್ತಾನೆ. ಇದು ಅನ್ಯಧರ್ಮದ ವಿಷಯದಲ್ಲಿರುವ ಸಹಜ ಕಟುತ್ವವಾಗಿದೆ. ಆದರೆ ಕಥೆಯು ವಾಯುಭೂತಿಯ ಕಟುತ್ವಕ್ಕೆ ವೈಯಕ್ತಿಕ ಕಾರಣವನ್ನು ನೀಡುತ್ತದೆ. ಅಗ್ನಿಭೂತಿ

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು




ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂ ಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

............ ಈ ಸಂಪುಟದಲ್ಲಿ ನಾವು ಜೀವಮಂಡಲ ಎಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವ ಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದ ಉಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪವಾಗಿ ಮಾನವನ ವಿವಿಧ ಉದ್ಯೋಗಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯ ವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.


## ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್

285/ಎಫ್ - 6, ಉತ್ತರಾಧಿ ಮಠ ರಸ್ತೆ, 5ನೇ ಪಶ್ಚಿಮ ಅಡ್ಡರಸ್ತೆ

ಮೈಸೂರು -570004 ಇ-ಮೇಲ್ : kar_mas56@yahoo.co.in

ಮೊಬೈಲ್ : 9448074435, 9449853308, 9242459332

ಮತ್ತು ವಾಯುಭೂತಿಯರು ವಿದ್ಯೆ ಕಲಿಯುವಾಗ ಸೂರ್ಯಮಿತ್ರನು ತನ್ನ ನಿಜ ಸಂಬಂಧವನ್ನು ಮರೆಮಾಚಿ ಅವರನ್ನು ಅತ್ಯಂತ ಕಷ್ಟಪಡಿಸಿದನು ಎಂಬುದೇ ಆ ಕಾರಣ. ಕಥೆಯು ಹೀಗೆ ಕಾರಣ ಕೊಡುವಾಗ, ವಾಯುಭೂತಿಯ ನಿರಾಕರಣೆಗೆ ಕಾರಣ, ವೈಯಕ್ತಿಕವಾದುದಕ್ಕಿಂತಲೂ ಮಾವನಾದವನು ಅನ್ಯಧರ್ಮೀಯನಾಗಿರುವುದೇ ಆಗಿದೆ. ಒಂದು ಪ್ರಸಂಗ ದಲ್ಲಿ ವಾಯುಭೂತಿಯ ಅತ್ತಿಗೆ ಸೋಮದತ್ತೆಯು "ಸೂರ್ಯಮಿತ್ರಾಚಾರ್ಯರ್ ಮುನ್ ಬ್ರಾಹ್ಮಣರ್" ಎಂದು ಅವನಿಗೆ ಮನವರಿಕೆ ಮಾಡಿಕೊಡುವುದು ಮಾರ್ಮಿಕವಾಗಿದೆ. ಮೊದಲು ಬ್ರಾಹ್ಮಣನಾಗಿದ್ದ ಕಾರಣಕ್ಕಾಗಿಯಾದರೂ ನೀನು ನಮಸ್ಕರಿಸಬೇಕಿತ್ತು ಎಂಬ ಧೋರಣೆ ಸೋಮದತ್ತೆಯ ಹೇಳಿಕೆಯಲ್ಲಿದೆ. ಹೀಗೆ ಹೇಳುವಲ್ಲಿಯೂ ಧರ್ಮವೇ ವ್ಯಕ್ತಿಗಳ ಸಂಘರ್ಷಕ್ಕೆ ಪ್ರಮುಖ ಕಾರಣ ಎಂದು ಅರ್ಥ ವಾಗುತ್ತದೆ. ಹಾಗಾಗಿಯೇ ಕಥೆಯು ವಾಯುಭೂತಿ ಯನ್ನು ಕೇಂದ್ರಸ್ಥ ಸ್ಥಾನದಲ್ಲಿರಿಸಿ ಕಥನವನ್ನು ಕಟ್ಟುತ್ತದೆ.




'ಸುಕುಮಾರಸ್ವಾಮಿಯ ಕಥೆ'ಯಲ್ಲಿ ಬರುವ ಉಪಕಥೆಗಳು ಅತ್ಯಂತ ಕುತೂಹಲಕರವಾದವುಗಳು. ಕಥೆಯು ಈ ಉಪಕತೆಗಳನ್ನು ತರುವ ಸಂದರ್ಭ ಕೂಡ ಅಷ್ಟೇ ಕುತೂಹಲಕಾರಿಯಾಗಿದೆ. ಈ ಉಪಕತೆಗಳನ್ನು ಮೂಲಕತೆಯಿಂದ ಬೇರ್ಪಡಿಸಿ ಸ್ವತಂತ್ರ ಕಥೆಗಳಂತೆ ಓದಬಹುದು. ಆದರೆ ಮೂಲ ಕಥೆಯು ಪೂರ್ಣವಾಗಬೇಕಾದರೆ ಈ ಕಥೆಗಳು ಅಗತ್ಯ ಮತ್ತು ಅನಿವಾರ್ಯ. ಇಂತಹ ಒಂದು ಉಪಾಯ ಅಥವಾ ಬಿಕ್ಕಟ್ಟನ್ನು ಕಥನವು ತನಗೆ ತಾನೇ ತಂದುಕೊಂಡಿದೆ. ಈ ಕಥನ ವಿನ್ಯಾಸವು, ಹೇಗೆ ಜನಸಾಮಾನ್ಯರ ಉಪಕಥೆಗಳಿಲ್ಲದೆ ಮೂಲ ಮತ್ತು ಪ್ರಧಾನವೆನಿಸಿರುವ ಕಥೆಯು ಪೂರ್ಣ ವಾಗುವುದಿಲ್ಲವೋ, ಹಾಗೆಯೇ ಧರ್ಮ ಅಥವಾ ಪ್ರಭುತ್ವಕ್ಕೆ ಸಾಮಾನ್ಯ ಜನತೆ ಅಗತ್ಯ ಮಾತ್ರವಲ್ಲ ಅನಿವಾರ್ಯ ಕೂಡ ಎಂದು ಸಾಮಾನ್ಯ ಜನತೆಗೆ ಇರಬಹುದಾದ ಪ್ರಾಮುಖ್ಯತೆಯನ್ನು ಈ ಕಥನವು ಧ್ವನಿಸುತ್ತಿದೆ. ಇಷ್ಟಾದರೂ ಜನತೆಯನ್ನು ಕುರಿತಾದ ಕಥನದ ಧೋರಣೆ ದ್ವಂದ್ವದಲ್ಲಿಯೇ ಉಳಿಯುತ್ತದೆ. ಇಲ್ಲಿ ಬರುವ ಎಲ್ಲ ಉಪಕಥೆಗಳು, ಉಪಕಥೆಗಳಲ್ಲಿನ ಒಳಕಥೆಗಳಲ್ಲಿ ಅಪರಾಧ ಮಾಡಿ ಶಿಕ್ಷೆಗೆ ಒಳಗಾಗುತ್ತಿರುವ ಸಾಮಾನ್ಯ ಜನರ ಕಥೆಗಳೇ ಇವೆ. ಈ ಉಪಕಥೆಗಳನ್ನು ಮೂಲಕಥೆಯ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳುವ ಮೂಲಕ, ಜನತೆಯ ಮೂಲಕ ಧರ್ಮ ಮತ್ತು ಪ್ರಭುತ್ವವನ್ನು ಕಥನವು ವಿಶ್ಲೇಷಿಸುತ್ತಿದ್ದರೂ, ಅದು 'ಜನಪರ' ಧೋರಣೆಯನ್ನು ತಾಳಲು ಸಾಧ್ಯ ವಾಗುವುದಿಲ್ಲ ಅಥವಾ ಅಂತಹ ಸಾಧ್ಯತೆಯನ್ನು ಕಥೆಯ ಧಾರ್ಮಿಕ ಆಶಯ ಸಂಪೂರ್ಣವಾಗಿ ನಿಯಂತ್ರಿಸುತ್ತದೆ.

'ಸುಕುಮಾರಸ್ವಾಮಿಯ ಕಥೆ'ಯು ಇಂತಹ ಅನೇಕ ಬಿಕ್ಕಟ್ಟುಗಳನ್ನು ಎದುರಿಸುತ್ತದೆ. ಮಾನವೀಯ ನೆಲೆಯಲ್ಲಿ ಮೋದಾಳಿ ಮತ್ತು ವೀರಪೂರ್ಣ ನಂತಹ ಪಾತ್ರಗಳು ಅನೇಕ ನೈತಿಕ ತಾತ್ವಿಕ ಪ್ರಶ್ನೆಗಳನ್ನು ಹುಟ್ಟಿಸುತ್ತವೆ. ಅವು ಹುಟ್ಟಿಸುವ ಈ ಪ್ರಶ್ನೆಗಳಿಗೆ ಎದುರಾದರೆ ಕಥೆಯ ಧಾರ್ಮಿಕ ಆಶಯಕ್ಕೆ ಧಕ್ಕೆ ಒದಗುತ್ತದೆ. ಹೀಗಾಗಿ, ಧರ್ಮದ ಆಶಯವನ್ನು ಉಳಿಸಿಕೊಂಡು ಮಾನವೀಯ ನೆಲೆಯಲ್ಲಿ ಸಾಗಲು ಕಥನವು ಸಂಪೂರ್ಣವಾಗಿ ಸೋತಿದೆ ಅನಿಸುತ್ತದೆ. ಎಂತಲೇ ಸಾಮಾನ್ಯ ಜನರ ನೆಲೆಯ ಪಾತ್ರಗಳು ಇಲ್ಲಿ ಬೆಳೆಯದೆ ಬಳಕೆಗೊಳ್ಳುತ್ತವೆ ಅನಿಸುವುದು. ಇಂತಹ ಸನ್ನಿವೇಶದಲ್ಲಿ ಕಥನವು ಬಹಳ ಜಾಗರೂಕತೆಯನ್ನು ವಹಿಸುತ್ತದೆ. ನಾಗಶ್ರೀಯ ತಂದೆ ಸೋಮಶರ್ಮನು ತನ್ನ ಮಗಳು ಸ್ವೀಕರಿಸಿದ ಜೈನವ್ರತಗಳನ್ನು ಸವಣರಿಗೆ ಒಪ್ಪಿಸಲೆಂದು ಮಾಡುವ ಪಯಣದಲ್ಲಿ ಒಂದೊಂದಾಗಿ ಎಲ್ಲಾ ವ್ರತಗಳನ್ನು ಒಪ್ಪಿಕೊಳ್ಳುತ್ತಾ ಹೋಗುತ್ತಾನೆ. ಅವನ್ನು ಹೀಗೆ ಒಪ್ಪಿಸುವ ಸಲುವಾಗಿಯೇ ಕಥನವು ಸಾಮಾನ್ಯ ಜನರ ಪಾತ್ರಗಳನ್ನು ಮತ್ತು ಉಪಕತೆಗಳನ್ನು ಬಳಸಿಕೊಳ್ಳುತ್ತದೆ. ಉಚ್ಚಜಾತಿಗೆ ಸೇರಿದ ಮತ್ತು ಜೈನವಿರೋಧಿಯಾದ ಪಾತ್ರಗಳು ಜೈನಧರ್ಮದ ಕಡೆಗೆ ವಾಲುವ ಜವಾಬ್ದಾರಿಯನ್ನು ಸಾಮಾನ್ಯಸ್ತರದ ಜನರ ಮೇಲೆ ಹೊರೆಸುತ್ತದೆ. ಧರ್ಮ ಮತ್ತು ಪ್ರಭುತ್ವಗಳು ಜನತೆಯನ್ನು ಸಾಕಷ್ಟು ಅಂತರದಲ್ಲಿಟ್ಟು ನೋಡುತ್ತಲೇ ತಮ್ಮ ಅನುಕೂಲಕ್ಕಾಗಿ ಜನತೆಯನ್ನು ಬಳಸಿಕೊಳ್ಳುವ ವಿಧಾನವನ್ನು ಈ ಕಥನ ವಿನ್ಯಾಸದ ಮೂಲಕವೂ ನೋಡಬಹುದು.

ಸೋಮಶರ್ಮ ಭಟ್ಟನು "ಅಬ್ರಹ್ಮಣ್ಯಭೋ ಅಬ್ರಹ್ಮಣ್ಯಭೋ" ಎಂದು ಕೂಗುತ್ತಾ ಚಂದ್ರವಾಹನ ಮಹಾರಾಜನಲ್ಲಿಗೆ ಬಂದು ತನ್ನ ಮಗಳ ರಕ್ಷಣೆಗಾಗಿ ಅವರನ್ನು ಸವಣರು ಇರುವಲ್ಲಿಗೆ ಕರೆದೊಯ್ಯುತ್ತಾನೆ. ಆಗ ರಾಜನೊಂದಿಗೆ ಸಾಮಂತ, ಮಹಾಸಾಮಂತ, ಶ್ರೇಷ್ಠಿ, ಸೇನಾಪತಿ, ತಳಾರ, ದಂಡನಾಯಕ ಅಲ್ಲದೆ ಚಂಪಾ ನಗರದ "ಸಬಾಳವೃದ್ಧ ಜನಮೆಲ್ಲಂ" ಬಂದು ಸೇರುತ್ತಾರೆ. ಅಲ್ಲಿ ನಡೆಯುವ ನ್ಯಾಯ ತೀರ್ಮಾನವು ಧರ್ಮದ ಉಪದೇಶರೂಪದಲ್ಲಿ ನಡೆಯುತ್ತದೆ. ಅಲ್ಲಿ ವೈದಿಕ ಮತ್ತು ಜೈನಧರ್ಮದ ನಡುವೆ ಜ್ಞಾನದ ಪ್ರದರ್ಶನ ನಡೆಯುತ್ತದೆ. ನಾಗಶ್ರೀಯ ಮೂಲಕ ಅಲ್ಲಿ ನೆರೆದಿರುವ ನೆರವಿಯ ನಡುವೆ ಆ ಎಲ್ಲಾ ಶಾಸ್ತ್ರಗಳನ್ನು ಓದಿಸಿ ತೋರಿಸಲಾಗುತ್ತದೆ. ಜೈನ ಧರ್ಮಶಾಸ್ತ್ರದ ಪ್ರದರ್ಶನ ಕ್ಕಾಗಿಯೇ ಕಥನ ಇಷ್ಟೊಂದು 'ನೆರವಿ'ಯನ್ನು ಇಲ್ಲಿ ಸೇರಿಸಿದಂತಿದೆ. ಪ್ರತಿ ಕಥೆಯು "ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್" ಎಂದು ದೇಶ ಅಥವಾ ಜನತೆಯನ್ನು ಪ್ರತಿನಿಧಿಸುವಂತೆ ಆರಂಭವಾಗುತ್ತದೆ. ಆದರೆ ಮುಂದೆ ಅದು ರಾಜ ಮತ್ತು ರಾಣಿಯರು "ಇಷ್ಟ ವಿಷಯ ಕಾಮ ಭೋಗಗಳನ್ನು ಅನುಭವಿಸುತ್ತಿದ್ದರ್" ಎಂದು ಮುಂದುವರಿಯುತ್ತದೆ. ಸುಖ ಎಂಬುದು ಕೇವಲ ರಾಜ ಮತ್ತು ರಾಜ ಪರಿವಾರಕ್ಕೆ ಸೀಮಿತವಾಗಿದೆ ಎಂಬುದನ್ನು ಕಥನ ಸೂಕ್ಷ್ಮವಾಗಿ ಅಭಿವ್ಯಕ್ತಪಡಿಸುತ್ತದೆ. ಯಾವುದೇ ನಿರ್ಣಯವನ್ನು ಏಕಪಕ್ಷೀಯವಾಗಿ ತೆಗೆದುಕೊಳ್ಳುವ ರಾಜನು ಈ ಸಂದರ್ಭದಲ್ಲಿ ಮಾತ್ರ ಜನತೆಯನ್ನು ಹಿಂದಿಟ್ಟುಕೊಳ್ಳುತ್ತಾನೆ. ಇದನ್ನು ದೊರೆಯು ಜನತೆಗೆ ನೀಡುತ್ತಿರುವ ಪ್ರಾತಿನಿಧ್ಯ ಎಂದು ಗ್ರಹಿಸದೆ ಅವರನ್ನು ಮತಾಂತರಗೊಳಿಸಲು ಮಾಡುತ್ತಿರುವ ತಂತ್ರವೆಂದು ಗ್ರಹಿಸಬೇಕು. ಈ ತಂತ್ರಗಾರಿಕೆಯಿಂದಲೇ ಇಲ್ಲಿ ಉಪಕಥೆಗಳನ್ನು ಹೆಣೆಯಲಾಗಿದೆ. ಇವುಗಳಲ್ಲಿ ವೈನಯಿಕ ಎಂಬುವವನು ಜನರನ್ನು ಮೋಸಗೊಳಿಸಿ ಭತ್ತವನ್ನು ಕದಿಯುವ ಸಲುವಾಗಿ ಹೆಣೆದ ಕಥೆಯೂ ಒಂದು. ಮೋದಾಳಿಯ ಕಥೆಯು ಹಾದರವನ್ನು ಮುಂದೆ ಮಾಡಿ ಅವರು ಜೈನಧರ್ಮವನ್ನು ಹಿಡಿಯುವಂತೆ ಮಾಡುತ್ತದೆ. ಕೊನೆಗೆ ನಾಗಶ್ರೀಯೊಡನೆ ವೈದಿಕರಾದ ಅವಳ ತಂದೆ, ತಾಯಿ ಮತ್ತು ಆ ನಾಡಿನ ರಾಜ, ಆತನ ಪರಿವಾರ ಅಷ್ಟುಮಾತ್ರವಲ್ಲದೆ ಅಲ್ಲಿ ನೆರೆದಿದ್ದ ಜನರೂ ಕೂಡ ಜೈನದೀಕ್ಷೆಯನ್ನು ಪಡೆಯುತ್ತಾರೆ.

ಈ ಕಥೆಯಲ್ಲಿಯ ರಾಜಪ್ರಭುತ್ವ, ವಣಿಕರು ಮತ್ತು ಸಂಪತ್ತಿನ ಸ್ವರೂಪವು ಕುತೂಹಲಕಾರಿಯಾಗಿದೆ. ವಣಿಕರ ಶ್ರೀಮಂತಿಕೆಯನ್ನು ಅಂದರೆ ಅವರ ಸಂಪತ್ತನ್ನು, ಕೇಂದ್ರೀಕರಣವನ್ನು ಕಥೆ ವಿಜೃಂಭಣೆಯಿಂದ ಚಿತ್ರಿಸುತ್ತದೆ. ಸುಕುಮಾರಸ್ವಾಮಿಯನ್ನು ಕಾಣಲು ರಾಜ್ಯದ ರಾಜನು ಬಂದಾಗ ಕಾಣುವ ಸುಕುಮಾರಸ್ವಾಮಿಯ ವೈಭವವೂ ಸಹ ವಿಜೃಂಭಣೆಯಿಂದ ಕೂಡಿದೆ. ಸುಕುಮಾರಸ್ವಾಮಿಯು ತನ್ನ ತಾಯಿಯನ್ನು "ನಮ್ಮನಾಳ್ವರಮೊಳರೇ" ಎಂದು ಚಕಿತನಾಗಿ ಪ್ರಶ್ನಿಸುತ್ತಾನೆ. ಉಪ್ಪರಿಗೆಯಿಂದ ಇಳಿದುಬಂದ ಸುಕುಮಾರನನ್ನು ಕಂಡ ರಾಜನು "ಕನ್ನೆತ್ತ ಫಲಮನಿಂದು ಪೆತ್ತೆನೆಂದು ಪ್ರತ್ಯಕ್ಷ ಕಾಮದೇವನನಪ್ಪಿಕೊಳ್ವಂತಪ್ಪಿಕೊಂಡು" ಗೌರವಿಸುತ್ತಾನೆ. ಅಲ್ಲದೆ ಸುಕುಮಾರನ ಅಷ್ಟೂ ವೈಭೋಗದ ಜೀವನ ಕಂಡ ರಾಜನು "ಈತನ ಕ್ಷಣಮಾತ್ರದ ಭೋಗಕ್ಕಂ ಸುಖಕ್ಕಂ ಎಮ್ಮೆಲ್ಲಾ ಕಾಲಮರಸುತನಂ ಗೆಯ್ವಲ್ಲಿಯೊಳಪ್ಪ ಭೋಗೋಪ ಭೋಗಂಗಳ್ ದೊರೆಯಲ್ಲದರಿಂದೀ ಲೋಕದೊಳೀತನೆ ಪರಮಾರ್ಥ ಸುಖಿಯಂದೊಸೆದರಸನವಂತಿ ಸುಕುಮಾರನೆಂದು"

ಹೇಳುತ್ತಾನೆ. ಇಷ್ಟು ಸಂಪತ್ತಿಗೆ ಒಡೆಯನಾದ ಸುಕುಮಾರನನ್ನು ತನ್ನ ರಾಜ್ಯದ ಹೆಸರಿನಲ್ಲಿ 'ಅವಂತಿ ಸುಕುಮಾರ' ಎಂದು ಕರೆಯುವ ರಾಜನು ತನ್ನ ರಾಜ್ಯದ ಸಂಪತ್ತಿಗೆ ಕಾರಣರಾದ ಸಾಮಾನ್ಯ ಜನರನ್ನು ಹೀಗೆ ಕರೆಯಲು ಸಾಧ್ಯವಿಲ್ಲ. ರತ್ನದ್ವೀಪದಿಂದ ವ್ಯಾಪಾರಿಯೊಬ್ಬ ತಂದ ಲಕ್ಷ ದೀನಾರ ಬೆಲೆಬಾಳುವ ರತ್ನಗಂಬಳಿಗಳನ್ನು ಆ ರಾಜ್ಯದ ರಾಜನಾದ ವೃಷಭಾಂಕನಿಗೆ ಕೊಳ್ಳುವುದಕ್ಕೆ ಆಗುವುದಿಲ್ಲ. ಆದರೆ ಸುಕುಮಾರಸ್ವಾಮಿಯ ತಾಯಿಯು ಅವನ್ನು ಕೊಂಡು ಮೂವತ್ತೆರಡು ತುಂಡುಗಳನ್ನಾಗಿ ಮಾಡಿ ಸೊಸೆಯರಿಗೆ ನೀಡುತ್ತಾಳೆ. ಅವರಾದರೋ ಅವನ್ನು ತಮ್ಮ ಮೆಟ್ಟುಗಳಿಗೆ ಅಂಟಿಸಿಕೊಳ್ಳುವರು. ರಾಜನ ಸಂಪತ್ತು ವಣಿಕರ ಮೆಟ್ಟಿಗೂ ಸಮನಾಗುವುದಿಲ್ಲ.

ಸುಕುಮಾರಸ್ವಾಮಿಯ ತಂದೆ ಸೂರದತ್ತನು ಮೂವತ್ತೆರಡು ಕೋಟಿ ಚಿನ್ನಕ್ಕೆ ಒಡೆಯನು. ಸುಕುಮಾರಸ್ವಾಮಿಯ ಹೆಂಡತಿಯರು ಮೂವತ್ತೆರಡು ಜನ. ಈ ಮೂವತ್ತೆರಡೂ ಜನರು ಆ ಮೂವತ್ತೆರಡು ಕೋಟಿ ಸಂಪತ್ತಿನಿಂದ ಸುಖಸಂತೋಷಪಡುತ್ತಿದ್ದರು ಎಂದು ಹೇಳುವ ಮೂಲಕ ಕಥೆಯು ಸೂಕ್ಷ್ಮವಾಗಿ ಮಹಿಳೆಯರನ್ನು ಸಂಪತ್ತಿನ ಜತೆ ಸಮೀಕರಣ ಮಾಡುತ್ತದೆ. ಯಾವ ಜೈನಧರ್ಮವು ಸಂಪತ್ತಿನಿಂದ, ಸಮಾನತೆಯಿಂದ ಮತ್ತು ತಾನು ನಂಬಿರುವ ಮೋಕ್ಷದಿಂದ ಸ್ತ್ರೀಯರನ್ನು ಹೊರಗಿಟ್ಟಿದೆಯೋ ಕಥನವು ಅದೇ ಸ್ತ್ರೀಯರನ್ನು ಕೇಂದ್ರದಲ್ಲಿರಿಸಿ ಸಂಪತ್ತನ್ನು ಹಂಚಿಕೆ ಮಾಡುತ್ತದೆ. ಸುಕುಮಾರಸ್ವಾಮಿ ಸಾಯುವಾಗ ಅವನ ಗರ್ಭಿಣಿ ಹೆಂಡತಿಯರನ್ನು ಬಿಟ್ಟು ಉಳಿದ ಅಷ್ಟೂ ಹೆಂಡತಿಯರು ಸತಿ ಹೋಗುತ್ತಾರೆ. ಆ ಮೂಲಕ ಸಂಪತ್ತಿನ ವಾರಸುದಾರಿಕೆಯನ್ನು ಗರ್ಭಿಣಿ ಸ್ತ್ರೀಯರಿಗೆ ಹುಟ್ಟುವ ಮಕ್ಕಳಿಗಾಗಿ ಮುಂದುವರಿಸುವ ಕೆಲಸವನ್ನು ಪ್ರಭುತ್ವ ಮಾಡುತ್ತದೆ.

ಕಥೆಯ ಕೊನೆಯಲ್ಲಿ ಸುಕುಮಾರಸ್ವಾಮಿಯು ಉಪ್ಪರಿಗೆಯಿಂದ ಇಳಿಯುವಾಗ ಬಳಸಿರುವ ಚಿತ್ರಗಳು ಸಾಂಕೇತಿಕವಾಗಿವೆ. ಜೈನ ಕಥನಗಳಲ್ಲಿ ವಿಮಾನದ ವರ್ಣನೆಗಳು ಸಾಕಷ್ಟು ಬರುತ್ತವೆ. ಇಲ್ಲಿಯೂ ಜೈನಧರ್ಮ ಶಾಸ್ತ್ರದ ವರ್ಣನೆಗಳ ಜೊತೆಗೆ ವಿಮಾನದ ವರ್ಣನೆಯೂ ಸೇರುತ್ತದೆ. ಈ ವರ್ಣನೆಗೂ ಇದನ್ನು ಕೇಳಿದ ಸುಕುಮಾರಸ್ವಾಮಿಯು ಮಂಚದಿಂದ ಇಳಿಯುವುದಕ್ಕೂ ಒಂದು ಸಂಬಂಧವಿದೆ. ಮಂಚದಿಂದ ಇಳಿಯುವುದು ಅಲ್ಲಿ ವರ್ಣನೆಯಾದ ವಿಮಾನವನ್ನು ಏರುವ ಸಲುವಾಗಿ. ಅಂದರೆ ಮನುಷ್ಯ ಲೋಕದ ಕ್ಷಣಿಕಸುಖವನ್ನು ತೊರೆದು 'ದೇವಲೋಕ' ಎಂಬ ಶಾಶ್ವತ ಸುಖವನ್ನು ಪಡೆಯುವ ಸಲುವಾಗಿ ಅವನು ಉಪ್ಪರಿಗೆಯಿಂದ ಇಳಿಯುತ್ತಿದ್ದಾನೆ. ಆ ವಿಮಾನ ಎಂಬ ಮೋಕ್ಷದ ಪಯಣಕ್ಕೆ ಸಿದ್ಧಗೊಳಿಸುವ ಸಲುವಾಗಿಯೇ ಕಥೆಯು ಇದನ್ನು ಸಹಜವಾಗಿ ಜೋಡಿಸಿದೆ. ಸುಕುಮಾರ ಸ್ವಾಮಿಯು ಉಪ್ಪರಿಗೆಯ ಮೇಲಿರುತ್ತಾನೆ. ಆ ಉಪ್ಪರಿಗೆಯು ಸೃಷ್ಟಿಯಾದದ್ದು ಕೂಡ ಅವನು ಅನುಭವಿಸಿದ ಲೌಕಿಕದ ಸುಖದ ಮೆಟ್ಟಿಲುಗಳಿಂದ. ಆ ಲೌಕಿಕದ ಸುಖವು ಅವನನ್ನು ಬಂಧಿಸಿದೆ. ಅಂದರೆ ಲೌಕಿಕದ ಸುಖವನ್ನು ಬಂಧನ ಎಂದು ಕಥೆಯಲ್ಲಿನ ಜೈನಧರ್ಮಶಾಸ್ತ್ರವು ಗ್ರಹಿಸಿದೆ.

ಈ ಕಥೆಯ ಭಾಷಿಕ ವಿನ್ಯಾಸವು ಪ್ರಭುತ್ವ, ಧರ್ಮ ಮತ್ತು ಜನತೆಯ ನಡುವಣ ಅಂತರ್‌ಸಂಬಂಧಗಳನ್ನು ಬೇರೊಂದು ಬಗೆಯಲ್ಲಿ ಸೂಚಿಸುತ್ತದೆ. ಕಥೆಯು ಪ್ರಾಕೃತ ಗಾಹೆಯ ಮೂಲಕ ಪ್ರಾರಂಭವಾಗುತ್ತದೆ. ಅಲ್ಲದೆ ಕಥೆಯ ಮಧ್ಯದಲ್ಲಿ ಸಂಸ್ಕೃತ ಶ್ಲೋಕಗಳು ಮತ್ತು ವೃತ್ತಗಳು ಬರುತ್ತವೆ. ಈ ಶ್ಲೋಕ ಮತ್ತು ಗಾಹೆಗಳನ್ನು ಪ್ರಭುತ್ವ ಮತ್ತು ಧರ್ಮ ಎಂತಲೂ ಅದರ ವಿವರಣೆಗಾಗಿ ಬಳಸಿರುವ ಕನ್ನಡವನ್ನು ಜನತೆ ಎಂದು ಗ್ರಹಿಸಿದರೆ ಧರ್ಮ, ಪ್ರಭುತ್ವ ಮತ್ತು ಜನತೆಯ ಸ್ವರೂಪವೂ ಅರ್ಥವಾಗುತ್ತದೆ. ಧರ್ಮವು ಸೃಷ್ಟಿ ಮಾಡಿದ ಶ್ಲೋಕ ಮತ್ತು ಗಾಹೆಗಳು ಪ್ರಭುತ್ವದ ಸ್ಥಾನದಲ್ಲಿ ನಿಂತಿವೆ. ಅಲ್ಲದೆ ಅವು ಪ್ರಾಕೃತ ಮತ್ತು ಸಂಸ್ಕೃತದಲ್ಲಿವೆ. ನಂತರ ಬರುವ ಕನ್ನಡವು ಅದರ ವಿವರಣೆ ಎಂಬಂತೆ ಬಳಕೆಗೊಂಡಿದೆ. ಕಥೆಯು ಸಂಸ್ಕೃತ ಮತ್ತು ಪ್ರಾಕೃತವನ್ನು ಹಿಂದಿಕ್ಕಿ ಕನ್ನಡದ ಬಳಕೆಯನ್ನು ಹೆಚ್ಚಿಸಿದೆ. ಇದು ಸತ್ಯದಂತೆ ಕಂಡರೂ ಅದರ ಸ್ವರೂಪ ಅಷ್ಟು ಸರಳವಾದುದಲ್ಲ. ಕಾರಣ ಆ ಗಾಹೆಗಳು ಮತ್ತು ವೃತ್ತ ಅಥವಾ ಶ್ಲೋಕಗಳು ಬರುವುದು ಸಾಮಾನ್ಯವಾಗಿ ಧರ್ಮದ ವಿಷಯ ಬಂದಾಗ. ಧರ್ಮಶಾಸ್ತ್ರದ ಆ ಜ್ಞಾನವನ್ನು ಕಥೆಯು ಸಂಸ್ಕೃತ ಮತ್ತು ಪ್ರಾಕೃತ ಭಾಷೆಯಲ್ಲಿ ಹಿಡಿದಿಟ್ಟಿದೆ. ಅದನ್ನು ವಿವರಿಸುವ ಸಲುವಾಗಿ ಕನ್ನಡವನ್ನು ಬಳಸುತ್ತಿದೆ. ಆ ಮೂಲಕ ನಿಜವಾದ ಶಕ್ತಿ ಎಂಬುದು ಆ ಎರಡು ಭಾಷೆಗಳು ಹುಟ್ಟುಹಾಕಿರುವ ಜ್ಞಾನದಲ್ಲಿದೆ ಎಂದು ಕಥೆಯು ಅಭಿವ್ಯಕ್ತಪಡಿಸುತ್ತಿದೆ. ಈ ರೀತಿಯಾಗಿ ನಿರೂಪಣೆಯಲ್ಲಿ ಕನ್ನಡ ಭಾಷೆಗೆ ದೊಡ್ಡ ಸ್ಪೇಸನ್ನು ನೀಡಿಯೂ ಅದನ್ನು ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳು ಸೃಷ್ಟಿಸಿರುವ ಜ್ಞಾನದ ವಿವರಣೆಗಾಗಿ ಬಳಸಿಕೊಂಡಿದೆ.

ಹೀಗೆ 'ಸುಕುಮಾರಸ್ವಾಮಿಯ ಕಥೆ'ಯ ಕಥನ ವಿನ್ಯಾಸವನ್ನು ಗಮನಿಸಿದರೆ, ಅದು ತನ್ನ ಪೀಠಿಕಾ ಭಾಗದಿಂದ ಹಿಡಿದು ಕಥೆಯ ಮುಕ್ತಾಯದವರೆಗೆ ಪ್ರಭುತ್ವ, ಧರ್ಮ ಮತ್ತು ಜನತೆ ಎಂಬ ಚಾರಿತ್ರಿಕ ಶಕ್ತಿಗಳನ್ನು ತನ್ನ ಧರ್ಮದ ಆಶಯಕ್ಕೆ ತಕ್ಕಂತೆ ಒಗ್ಗಿಸಿದೆ. ಕಥೆಗೆ ಬೇಕಾದ ಪಾತ್ರಗಳ ಸೃಷ್ಟಿಯಲ್ಲಿ, ಉಪಕಥೆಗಳನ್ನು ಮೂಲಕಥೆಗೆ ಹೊಂದಿಸುವಲ್ಲಿ ಮತ್ತು ಭಾಷೆಯ ಬಳಕೆಯಲ್ಲಿ ಶಿವಕೋಟಿ ಸಾಕಷ್ಟು ಜಾಗರೂಕತೆಯನ್ನು ವಹಿಸಿದ್ದಾನೆ. ಹತ್ತನೇ ಶತಮಾನದಷ್ಟು ಹಿಂದೆಯೇ ಕನ್ನಡ ಭಾಷೆಯನ್ನು ಮತ್ತು ಸಾಮಾನ್ಯ ಜನತೆಯ ಪಾತ್ರಗಳನ್ನು ತನ್ನ ಕಥನದ ಒಳಗು ಮಾಡಿಕೊಂಡಿರುವುದು ಅವನ ಪ್ರತಿಭೆಗೆ ಹಿಡಿದ ಕನ್ನಡಿಯೇ. ವಡ್ಡಾರಾಧನೆ ಮೊಗೆದಷ್ಟೂ ಹಿಂಗದ ಕಡಲಿನಂತಿದ್ದು, ಅದು ಈಜುವವರ ಸಾಮರ್ಥ್ಯವನ್ನೇ ಹಂಗಿಸುತ್ತದೆ. ಈ ಕಾರಣದಿಂದಾಗಿಯೇ ವಡ್ಡಾರಾಧನೆಯನ್ನು ಸಂಪೂರ್ಣವಾಗಿ ಜೀರ್ಣಿಸಿಕೊಳ್ಳಲು ಕನ್ನಡ ಸಾರಸ್ವತಲೋಕ ಇಂದಿಗೂ ಹೆಣಗಾಡುತ್ತಿದೆ.

**ಕುಮಾರಸ್ವಾಮಿ ಬೆಜ್ಜಿಹಳ್ಳಿ**
ಸಂಶೋಧನ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೦೧, ಬಳ್ಳಾರಿ ಜಿಲ್ಲೆ

## ಡಾ॥ ಬಿ. ಶ್ರೀನಿವಾಸ ಕಕ್ಕಿಲ್ಲಾಯ

# ಶಾಲಾ ಶಿಕ್ಷಣ ಸ್ಥಿತಿ-ಗತಿ

ರಾಜ್ಯದ ಶಿಕ್ಷಣ ವ್ಯವಸ್ಥೆ ಗಂಭೀರವಾದ ಸಂಕಷ್ಟದಲ್ಲಿದೆಯೆನ್ನುವುದು ನಿರ್ವಿವಾದ. ಪ್ರಾಥಮಿಕ ಹಂತದಿಂದ ವೃತ್ತಿಶಿಕ್ಷಣದವರೆಗೆ ಕಲಿಕೆ ಗೌಣವಾಗುತ್ತಿದೆ, ಫಲಿತಾಂಶ-ಪದವಿ ಪತ್ರಗಳಷ್ಟೇ ಮುಖ್ಯವಾಗುತ್ತಿವೆ. ಶಿಕ್ಷಣದ ಸಾರಕ್ಕಿಂತ ಶಾಲೆಗಳ ವೈಖರಿಗೆ ಹೆಚ್ಚಿನ ಆದ್ಯತೆ ದೊರೆಯುತ್ತಿದೆ.

ದಶಕಗಳ ಹಿಂದೆ ಇಲ್ಲಿ ಕಲಿತ ಅದೆಷ್ಟೋ ವೈದ್ಯರು-ತಂತ್ರಜ್ಞರು-ವಿಜ್ಞಾನಿಗಳು-ವಿಶೇಷಜ್ಞರು ದೇಶ-ವಿದೇಶಗಳಲ್ಲಿ ಅಪ್ರತಿಮ ಸಾಧಕರಾಗಿದ್ದಾರೆ. ಆದರೆ ಇಂದು, ನಮ್ಮ ವೈದ್ಯಕೀಯ ಹಾಗೂ ಇಂಜಿನಿಯರಿಂಗ್ ಕಾಲೇಜುಗಳಿಂದ ಹೊರಬರುತ್ತಿರುವವರು ಮೂಲಭೂತ ವಿಷಯಗಳನ್ನೇ ಅರಿಯದವರಾಗಿ ಪರದಾಡುವಂತಾಗಿದೆ. ಶಾಲಾ ವಿದ್ಯಾರ್ಥಿಗಳಂತೂ ಓದು-ಬರಹಗಳೂ ಸರಿಯಾಗಿ ಬಾರದೆ, ಸಾಮಾನ್ಯ ಜ್ಞಾನವೂ ಇಲ್ಲದೆ, ಕಲಿಕೆಯ ಆನಂದದಿಂದ ವಂಚಿತರಾಗಿ, ಹುಚ್ಚು ಸ್ಪರ್ಧೆಯಲ್ಲಿ ಓಡುವ ಯಂತ್ರಗಳಂತಾಗಿದ್ದಾರೆ.

ನಮ್ಮ ಮಕ್ಕಳ ಭವಿಷ್ಯಕ್ಕಾಗಿ, ನಮ್ಮ ದೇಶದ ಒಳಿತಿಗಾಗಿ ರಾಜ್ಯದ ಶಾಲೆಗಳಲ್ಲಿ ಶಿಕ್ಷಣ ಗುಣಮಟ್ಟವನ್ನು ಆಮೂಲಾಗ್ರವಾಗಿ ಸುಧಾರಿಸುವ ತುರ್ತು ಅಗತ್ಯವಿದೆ. ಶಾಲೆಗಳನ್ನು ವಿದ್ಯಾರ್ಥಿಸ್ನೇಹಿಗಳನ್ನಾಗಿಸುವುದು; ಹೆತ್ತವರನ್ನೂ, ಮಕ್ಕಳನ್ನೂ ಕನ್ನಡ ಮಾಧ್ಯಮ ಶಾಲೆಗಳತ್ತ ಸೆಳೆಯುವುದು; ಶಿಕ್ಷಣದ ಹೊರೆಯನ್ನು ಇಳಿಸಿ ವಿದ್ಯಾರ್ಥಿಗಳ ಆಸಕ್ತಿಗಳಿಗೆ ಅನುಗುಣವಾಗಿ ಕಲಿಕೆಯನ್ನೊದಗಿಸುವುದು; ಮೌಲ್ಯಮಾಪನವನ್ನು ಪರಿಷ್ಕರಿಸಿ ವಿದ್ಯಾರ್ಥಿಗಳ ಭವಿಷ್ಯವನ್ನು ಸದೃಢಗೊಳಿಸುವುದು ಅತ್ಯಗತ್ಯವಾಗಿದೆ.

ಶಿಕ್ಷಣದ ದಿಕ್ಕು-ದೆಸೆಯ ಬಗ್ಗೆ ನವಂಬರ್ ೨೯ರಂದು ಮಂಗಳೂರಿನಲ್ಲೊಂದು ವಿಚಾರ ಮಂಥನವನ್ನು ಏರ್ಪಡಿಸಲಾಗಿತ್ತು. ರಾಜ್ಯ ಮುಕ್ತ ವಿ.ವಿ.ಯ ಉಪಕುಲಪತಿಗಳಾಗಿದ್ದ ಪ್ರೊ॥ ವಿವೇಕ ರೈ, ಹಿರಿಯ ಶಿಕ್ಷಣ ತಜ್ಞರಾದ ಡಾ॥ ಸುಕುಮಾರ ಗೌಡ ಹಾಗೂ ಶ್ರೀ ಬಾಳಿಲ ಕೃಷ್ಣ ಶಾಸ್ತ್ರಿ ಸೇರಿದಂತೆ ಹಲವು ಶಿಕ್ಷಕರು, ತರಬೇತುದಾರರು, ಪೋಷಕರು ಹಾಗೂ ಶಿಕ್ಷಣಾಸಕ್ತರು ಅದರಲ್ಲಿ ಭಾಗವಹಿಸಿದ್ದರು. ರಾಜ್ಯದ ಶಿಕ್ಷಣ ಸಚಿವರಾದ ಶ್ರೀ ಕಿಮ್ಮನೆ ರತ್ನಾಕರ ಅವರು ಕೂಡಾ ವಿಚಾರ ಮಂಥನದಲ್ಲಿ ಭಾಗವಹಿಸಿ, ಅಲ್ಲಿ ಮೂಡಿ ಬಂದ ಅಭಿಪ್ರಾಯಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸಿದ್ದಲ್ಲದೆ, ಶಿಕ್ಷಣ ವ್ಯವಸ್ಥೆಯನ್ನು ಉತ್ತಮಪಡಿಸುವ ಬಗ್ಗೆ ತಮ್ಮ ಕಾಳಜಿಯನ್ನು ವ್ಯಕ್ತಪಡಿಸಿದ್ದರು.

ಗುಣಮಟ್ಟದ ಶಿಕ್ಷಣದ ಮಾನದಂಡಗಳನ್ನು ಸರಕಾರವು ಸ್ಪಷ್ಟವಾಗಿ ವ್ಯಾಖ್ಯಾನಿಸಬೇಕಾದ ಅಗತ್ಯವಿದ್ದು, ಸಮಗ್ರ ಶಿಕ್ಷಣ ನೀತಿಯನ್ನೂ ಭಾಷಾ ನೀತಿಯನ್ನೂ ಬೇಗನೇ ವಿಶದಪಡಿಸಬೇಕಾದ ಅಗತ್ಯವಿದೆ. ಮಕ್ಕಳ ಹಿತದೃಷ್ಟಿಯಿಂದ ಎಲ್ಲಾ ಶಾಲೆಗಳಲ್ಲಿ ಕಲಿಕೆಯ ಮಾಧ್ಯಮವು ಕನ್ನಡವೇ ಆಗಿರಬೇಕು. ಕಲಿಕೆಯ ಮಾಧ್ಯಮವು ಹೆತ್ತವರ ವಿವೇಚನೆಗೆ ಬಿಟ್ಟದ್ದೆನ್ನುವುದು ಪ್ರಶ್ನಾತೀತವಾದ ಸಂದರ್ಭದಲ್ಲಿ, ಹೆತ್ತವರೂ, ಮಕ್ಕಳೂ ಕನ್ನಡ ಮಾಧ್ಯಮವನ್ನೇ ಆಯ್ದುಕೊಳ್ಳುವಂತೆ ಅದನ್ನು ಆಕರ್ಷಕಗೊಳಿಸಬೇಕಾಗುತ್ತದೆ. ಕನ್ನಡ ಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣದ ಪ್ರವೇಶಾವಕಾಶಗಳನ್ನು ಹೆಚ್ಚಿಸುವುದರ ಜೊತೆಗೆ, ಆಂಗ್ಲ ಮಾಧ್ಯಮದ ಶಾಲೆಗಳನ್ನು ನಿರುತ್ತೇಜಿಸುವುದಕ್ಕೂ, ಕಠಿಣವಾಗಿ ನಿಯಂತ್ರಿಸುವುದಕ್ಕೂ ಸರಕಾರವು ಮುಂದಾಗಬೇಕಿದೆ. ಎಲ್ಲಾ ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಒಂದರಿಂದ ಐದನೇ ತರಗತಿಯವರೆಗೆ ಆಂಗ್ಲ ಭಾಷೆಯಲ್ಲಿ ಸಂವಹನವನ್ನು ಕಲಿಸಿ, ಮೇಲಿನ ತರಗತಿಗಳಲ್ಲಿ ಗಣಿತ ಹಾಗೂ ವಿಜ್ಞಾನದ ಕನ್ನಡ ಪಠ್ಯಗಳಲ್ಲಿ ಅಗತ್ಯವಿದ್ದಲ್ಲೆಲ್ಲ ಸಮಾನಾರ್ಥದ ಆಂಗ್ಲ ಪದಗಳನ್ನು ಒದಗಿಸುವುದರಿಂದ ಕನ್ನಡದಲ್ಲೇ ಕಲಿಕೆಯ ಜೊತೆಗೆ ಇಂಗ್ಲಿಷ್ ಭಾಷೆಯಲ್ಲಿ ಮುಂದಿನ ವಿದ್ಯಾಭ್ಯಾಸಕ್ಕೆ ಸೇತುವೆಯನ್ನೊದಗಿಸಿದಂತೆಯೂ ಆಗುತ್ತದೆ. ಇಂತಹ ಪಠ್ಯಕ್ರಮವನ್ನು ಆದಷ್ಟು ಶೀಘ್ರವಾಗಿ ರೂಪಿಸುವುದಕ್ಕೆ ಹಿರಿಯ ಶಿಕ್ಷಕರು ಹಾಗೂ ತಜ್ಞರ ಸಮಿತಿಯೊಂದನ್ನು ಕೂಡಲೇ ರಚಿಸುವುದಕ್ಕೆ ಸರಕಾರವು ಮುಂದಾಗಬೇಕಿದೆ.




ಇಂದಿನ ಪಠ್ಯಪುಸ್ತಕಗಳು ಎಲ್ಲಾ ತರಗತಿಯ ಮಕ್ಕಳಿಗೂ ಹೊರೆಯಾಗಿವೆ. ಮೇಲಿನ ತರಗತಿಗಳ ಗಣಿತ, ವಿಜ್ಞಾನ ಇತ್ಯಾದಿ ಪಠ್ಯಗಳು ಶಿಕ್ಷಕರಿಗೂ ಅರಗಿಸಿಕೊಳ್ಳಲಾಗದಷ್ಟು ಕಠಿಣವಾಗಿವೆ. ಪುಸ್ತಕಗಳು ಅತೀ ಭಾರವಿದ್ದು ಪ್ರತೀ ವಿದ್ಯಾರ್ಥಿಯೂ ಕನಿಷ್ಠ ಎಂಟರಿಂದ ಹತ್ತು ಕಿಲೋ ತೂಕವನ್ನು ಹೊರುವಂತಾಗಿದೆ. ಈ ವರ್ಷ ಪರೀಕ್ಷೆಗೆ ಕೆಲದಿನಗಳಿರುವಾಗ ಗಣಿತ ಪಠ್ಯವನ್ನು ಕಡಿತಗೊಳಿಸಿರುವುದನ್ನು ನೋಡಿದರೆ, ಅಷ್ಟೊಂದು ಕಠಿಣವಾದ ಪಠ್ಯವನ್ನು ರಚಿಸಿ, ವಿದ್ಯಾರ್ಥಿಗಳನ್ನೂ ಶಿಕ್ಷಕರನ್ನೂ ವರ್ಷವಿಡೀ ಶಿಕ್ಷಿಸಿದ್ದೇಕೆನ್ನುವ ಪ್ರಶ್ನೆ ಏಳುತ್ತದೆ. ಪಠ್ಯಪುಸ್ತಕಗಳಲ್ಲಿ ಸ್ಥಳೀಯ ಸಾಮಾಜಿಕ, ರಾಜಕೀಯ ವಿಚಾರಗಳು, ಸಾಮಾನ್ಯ ಜ್ಞಾನ, ವಿದ್ಯಾರ್ಥಿಗಳ ಶೈಕ್ಷಣಿಕ ಅಗತ್ಯಗಳು, ಜೀವನ ಕೌಶಲ್ಯಗಳು ಮತ್ತಿತರ ವಿಷಯಗಳಿಗೆ ಆದ್ಯತೆಗಳಿರಬೇಕೇ ಹೊರತು, ವಿಶ್ವದ ಎಲ್ಲಾ ವಿಷಯಗಳನ್ನೂ ಕಠಿಣವಾದ

ನವೆಂಬರ್ 29ರಂದು ಸಮದರ್ಶಿ ವೇದಿಕೆ ಹಾಗೂ ಹೊಸತು ಬಳಗದಿಂದ ಮಂಗಳೂರಿನಲ್ಲಿ ನಡೆದ ಶಾಲಾ ಶಿಕ್ಷಣ ವ್ಯವಸ್ಥೆ ಕುರಿತ ಕಾರ್ಯಾಗಾರದಲ್ಲಿ ಮೂಡಿಬಂದ ಅಭಿಪ್ರಾಯಗಳನ್ನು ಸಂಕಲಿಸಿ ಡಾ॥ ಬಿ. ಶ್ರೀನಿವಾಸ ಕಕ್ಕಿಲ್ಲಾಯ ಅವರು ಈ ಕಿರುಲೇಖನ ಸಿದ್ಧಪಡಿಸಿದ್ದಾರೆ. ಶಿಕ್ಷಣ ಸಚಿವ ಶ್ರೀ ಕಿಮ್ಮನೆ ರತ್ನಾಕರ ಅವರನ್ನೂ ಒಳಗೊಂಡು ಹಲವಾರು ಪ್ರಗತಿಪರ ಚಿಂತಕರು, ಶಿಕ್ಷಣ ತಜ್ಞರು ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಕಾರ್ಯಾಗಾರದಲ್ಲಿ ವ್ಯಕ್ತಪಡಿಸಿದ್ದಾರೆ. ಶಾಲಾ ಶಿಕ್ಷಣ ವ್ಯವಸ್ಥೆ ಹಾಗೂ ಭಾಷಾ ಮಾಧ್ಯಮ ಕುರಿತು ಇಲ್ಲಿ ವ್ಯಕ್ತವಾದ ಅಭಿಪ್ರಾಯಗಳಿಗೆ ನಾಡಿನ ಶಿಕ್ಷಣ ಪ್ರೇಮಿಗಳೂ, ತಜ್ಞರು, ಹೊಸತು ಓದುಗ ಬಳಗ ತಮ್ಮ ಅಭಿಪ್ರಾಯಗಳನ್ನು, ಸಲಹೆ ಸೂಚನೆಗಳನ್ನು ಕಳಿಸಿದರೆ, ಸೂಕ್ತವಾದವುಗಳನ್ನು ಸೇರಿಸಿ ಸರಕಾರಕ್ಕೆ, ಶಿಕ್ಷಣ ಇಲಾಖೆಗೆ ಸಲ್ಲಿಸಲಾಗುವುದು. ಶಾಲಾ ಶಿಕ್ಷಣದ ಸಬಲೀಕರಣಕ್ಕೆ ನಿಮ್ಮ ಕಾಣಿಕೆಯೂ ಮಹತ್ವ. ತಮ್ಮ ಅಭಿಪ್ರಾಯ, ಸಲಹೆ, ಸೂಚನೆ ಅಥವಾ ಇನ್ನೂ ಹೆಚ್ಚಿನ ಚಿಂತನೆಗಳನ್ನು ಸಂಕ್ಷಿಪ್ತವಾಗಿ ಬರೆದು ಹೊಸತು ವಿಳಾಸಕ್ಕೆ ಅಥವಾ ಇ-ಮೇಲ್ ಮೂಲಕ ಕಳಿಸಲು ವಿನಂತಿಸುತ್ತೇವೆ. – *ಸಂ.*

ವಿಷಯಗಳನ್ನೂ ಮಕ್ಕಳ ತಲೆಗೆ ತುರುಕಿಸುವ ಉದ್ದೇಶವಿರಬಾರದು. ಎಲ್ಲಾ ಮಕ್ಕಳಿಗೂ ಅತಿ ಕಠಿಣವಾದ ಗಣಿತ ಹಾಗೂ ವಿಜ್ಞಾನದ ಪಠ್ಯಗಳನ್ನು ಕಡ್ಡಾಯಗೊಳಿಸುವ ಅಗತ್ಯವಿಲ್ಲ, ಅದರಿಂದ ಅವರಿಗೆ ಪ್ರಯೋಜನಗಳೂ ಇಲ್ಲ. ಆದ್ದರಿಂದ ಪಠ್ಯಪುಸ್ತಕವನ್ನು ಪರಿಷ್ಕರಿಸುವ ಕೆಲಸವನ್ನು ತಕ್ಷಣವೇ ಆರಂಭಿಸಬೇಕಾಗಿದೆ.

ಹೊಸ ಮಾದರಿಯ ಶಿಕ್ಷಣದ ಹೆಸರಲ್ಲಿ ಮಕ್ಕಳಿಗೆ ನೀಡಲಾಗುತ್ತಿರುವ ಚಟುವಟಿಕೆಗಳು ತೀರಾ ಅಸಂಗತವೂ, ಅನಗತ್ಯವೂ ಕಠಿಣವೂ ಆಗಿವೆ. ಹೆಚ್ಚಿನ ಸಂದರ್ಭಗಳಲ್ಲಿ ಹೆತ್ತವರೇ ಅವನ್ನು ಮಾಡಬೇಕಾಗುತ್ತದೆ, ಅಂತರಜಾಲದ ನೆರವನ್ನೂ ಪಡೆಯಬೇಕಾಗುತ್ತದೆ. ಆದ್ದರಿಂದ ಇಂತಹ ಚಟುವಟಿಕೆಗಳು ಸರಳವಾಗಿ, ಕನಿಷ್ಠವಾಗಿ, ಮಕ್ಕಳೇ ಮಾಡುವಂತಿರಬೇಕು. ಮಕ್ಕಳ ಬರವಣಿಗೆಯನ್ನೂ, ಓದುವಿಕೆಯನ್ನೂ ಗಟ್ಟಿಗೊಳಿಸುವುದಕ್ಕೆ ಇವುಗಳಲ್ಲಿ ಆದ್ಯತೆ ನೀಡಬೇಕು. ಶಾಲೆಗಳಲ್ಲಿ ವಾಚನಾಲಯಗಳನ್ನು ಬೆಳೆಸಿ, ಕಡ್ಡಾಯವಾಗಿ ಬಳಸುವುದನ್ನು ಪ್ರೋತ್ಸಾಹಿಸಬೇಕು.

ಇಂದು ಕೇವಲ ಫಲಿತಾಂಶದ ಉದ್ದೇಶದಿಂದ ಪರೀಕ್ಷೆಗಳನ್ನು ನಡೆಸುತ್ತಿರುವುದರಿಂದ ಹಲವಾರು ಅನೈತಿಕ ಕ್ರಮಗಳಿಗೆ ದಾರಿಯಾಗುತ್ತಿದೆ. ಪ್ರತೀ ಶಾಲೆಗೂ ನೂರಕ್ಕೆ ನೂರು ಫಲಿತಾಂಶ ಬರಬೇಕೆನ್ನುವ ಒತ್ತಡದಿಂದಾಗಿ ಸಾರ್ವತ್ರಿಕ ನಕಲು ಮಾಡಿಸುವುದು, ಶಿಕ್ಷಕರೇ ಉತ್ತರ ಪತ್ರಿಕೆಗಳನ್ನು ತುಂಬಿಸುವುದು ಇವೇ ಮುಂತಾದ ಅಕ್ರಮಗಳಾಗುತ್ತಿವೆ. ಆದ್ದರಿಂದ ಪರೀಕ್ಷೆಗಳು ಸರಳವಾಗಿದ್ದು ಮಕ್ಕಳಿಗೆ ಎಷ್ಟು ಗೊತ್ತಿದೆ ಎಂಬುದನ್ನು ಪರೀಕ್ಷಿಸುವುದಕ್ಕಷ್ಟೇ ಸೀಮಿತವಾಗಿರಬೇಕು ಹಾಗೂ ಅಂಕಗಳ ಬದಲಿಗೆ ಶ್ರೇಣಿಯನ್ನಷ್ಟೇ ನೀಡಬೇಕು. ಆರು ಯಾ ಏಳನೇ ತರಗತಿಯಲ್ಲಿ ಪಡೆಯುವ ಶ್ರೇಣಿಗಳಿಗೆ ಅನುಗುಣವಾಗಿ ಮುಂದಿನ ತರಗತಿಗಳಲ್ಲಿ ಐಚ್ಛಿಕ ವಿಷಯಗಳನ್ನು ಹೆಚ್ಚು ಕಲಿಯುವ ಅವಕಾಶವಿರಬೇಕು. ಹತ್ತನೆ ತರಗತಿಯ ಪರೀಕ್ಷೆಯಲ್ಲೂ ಉತ್ತೀರ್ಣ, ಅನುತ್ತೀರ್ಣ ಎನ್ನುವುದನ್ನು ತೆಗೆದು ಶ್ರೇಣಿಗಳ ಆಧಾರದಲ್ಲಿ ವಿದ್ಯಾರ್ಥಿಯು ಮುಂದಿನ ಶಿಕ್ಷಣವನ್ನು ಆಯ್ದುಕೊಳ್ಳುವುದಕ್ಕೆ ಅವಕಾಶವಿರಬೇಕು. ಉದಾಹರಣೆಗೆ, ಒಬ್ಬ ವಿದ್ಯಾರ್ಥಿಯು ಕನ್ನಡ (ಅಥವಾ ಭಾಷೆಗಳಲ್ಲಿ) ಹಾಗೂ ಸಮಾಜ ವಿಜ್ಞಾನದಲ್ಲಿ ಉನ್ನತ ಶ್ರೇಣಿಯನ್ನು ಪಡೆದು, ಗಣಿತ ಹಾಗೂ ವಿಜ್ಞಾನಗಳಲ್ಲಿ ಕೆಳಗಿನ ಶ್ರೇಣಿಗಳನ್ನು ಪಡೆದಿದ್ದರೆ, ಆತನು ಮಾನವಿಕ ಶಾಸ್ತ್ರಗಳಲ್ಲಿ ಪದವಿಪೂರ್ವ ಶಿಕ್ಷಣವನ್ನು ಮುಂದುವರಿಸಲು ಅವಕಾಶವಿರಬೇಕು.

ಪ್ರತಿ ತರಗತಿಗೆ ಒಬ್ಬ ಶಿಕ್ಷಕರು, ಪ್ರತಿ ಶಾಲೆಗೆ ಒಬ್ಬ ಮುಖ್ಯೋಪಾಧ್ಯಾಯರು ಇರಲೇಬೇಕು. ಹಾಗೆಯೇ ಎಲ್ಲ ಶಾಲೆಗಳಿಗೆ ದೈಹಿಕ ಶಿಕ್ಷಕರಿರಬೇಕು; ವೃತ್ತಿ ತರಬೇತಿ, ಸಂಗೀತ ಹಾಗೂ ಕಲೆಗಳಿಗೂ ಶಿಕ್ಷಕರಿರಬೇಕು. ಈ ನೇಮಕಾತಿಗಳಿಗೆ ಇರಬಹುದಾದ ಎಲ್ಲಾ ಅಡ್ಡಿಗಳನ್ನೂ ಸರಕಾರವು ಕೂಡಲೇ ನಿವಾರಿಸಬೇಕು. ಶಾಲೆಗಳಲ್ಲಿ ಸಾಕಷ್ಟು ವಿದ್ಯಾರ್ಥಿಗಳಿಲ್ಲದಿದ್ದರೆ, ಪ್ರತೀ ಗ್ರಾಮದಲ್ಲೂ ಒಂದು ಅಥವಾ ಎರಡು ಶಾಲೆಗಳನ್ನು ಅತ್ಯುತ್ತಮವಾಗಿ ಅಭಿವೃದ್ಧಿಪಡಿಸಿ, ಗ್ರಾಮದ ಮಕ್ಕಳಿಗೂ, ಶಿಕ್ಷಕರಿಗೂ ಆ ಶಾಲೆಗಳಿಗೆ ತೆರಳಲು ವಾಹನಗಳ ವ್ಯವಸ್ಥೆಯನ್ನು ಮಾಡಬಹುದು. ಅದೆಷ್ಟೋ ಮಕ್ಕಳು ಸೈಕಲ್ಲುಗಳನ್ನು ಬಳಸಲಾಗದೆ ಅವು ವ್ಯರ್ಥವಾಗುತ್ತಿರುವುದರಿಂದ, ಸೈಕಲ್ಲುಗಳ ಬದಲಿಗೆ ಇಂತಹ ವಾಹನಗಳ ಸೌಕರ್ಯವನ್ನೊದಗಿಸುವುದು ಹೆಚ್ಚು ಸಮಂಜಸವೆನಿಸಬಹುದು.

ಶಾಲಾಭಿವೃದ್ಧಿ ಸಮಿತಿಗಳ ನಡವಳಿಕೆಯೂ ತೃಪ್ತಿದಾಯಕವಾಗಿಲ್ಲವೆಂದು ಹಲವರ ಅಭಿಪ್ರಾಯವಿರುವುದರಿಂದ ಅವುಗಳ ಬದಲಿಗೆ ಪ್ರತೀ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಶಿಕ್ಷಣ ಸಮಿತಿಯನ್ನು ರಚಿಸಬಹುದು. ಗ್ರಾಮದ ವೈದ್ಯರು, ತಂತ್ರಜ್ಞರು, ವಕೀಲರು, ನಿವೃತ್ತ ಶಿಕ್ಷಕರು, ಪ್ರತೀ ಶಾಲೆಯ ಮುಖ್ಯೋಪಾಧ್ಯಾಯರು, ಹೆತ್ತವರು ಹಾಗೂ ವಿದ್ಯಾರ್ಥಿಗಳ ಪ್ರತಿನಿಧಿಗಳು ಮುಂತಾದವರನ್ನು ಸದಸ್ಯರಾಗಿಸಿ, ಗ್ರಾಮದಲ್ಲಿರುವ ಶಾಲೆಗಳ ಮೇಲುಸ್ತುವಾರಿಯನ್ನು ಈ ಸಮಿತಿಗಳಿಗೆ ವಹಿಸಬಹುದು.

ಶಿಕ್ಷಕರು ಶಾಲೆಗಳಲ್ಲಿ ಪಾಠ ಮಾಡುತ್ತಿರುವುದನ್ನು ಖಾತರಿಗೊಳಿಸಬೇಕು ಹಾಗೂ ಎಲ್ಲಾ ಶಿಕ್ಷಣೇತರ ಜವಾಬ್ದಾರಿಗಳಿಂದ ಅವರನ್ನು ಮುಕ್ತಗೊಳಿಸಬೇಕು. ವಿಶೇಷವಾಗಿ ಇಂಗ್ಲಿಷ್ ಬೋಧಕರಿಗೆ ಸಂವಹನದಲ್ಲಿ ತರಬೇತಿ ನೀಡುವ ತುರ್ತು ಅಗತ್ಯವಿದ್ದು, ಅದಕ್ಕಾಗಿ ಪ್ರತಿ ಜಿಲ್ಲೆಯಲ್ಲೂ ತರಬೇತಿ ಕೇಂದ್ರಗಳನ್ನು ಸ್ಥಾಪಿಸಬೇಕು. ಶಿಕ್ಷಕರಿಗೆ ನೀಡಬೇಕಾಗಿರುವ ಎಲ್ಲಾ ತರಬೇತಿಗಳನ್ನೂ ರಜಾಕಾಲದಲ್ಲಿ ನಡೆಸಬೇಕು ಹಾಗೂ ಅದಕ್ಕಾಗಿ ಶಿಕ್ಷಕರಿಗೆ ಅಷ್ಟೂ ದಿನಗಳ ನಗದೀಕರಿಸಬಲ್ಲ ರಜೆಯನ್ನು ನೀಡಬೇಕು.

ಇಂದು ಶಿಕ್ಷಣದ ಗುಣಮಟ್ಟವು ಇಳಿಯುತ್ತಿರುವುದಕ್ಕೆ ಶಿಕ್ಷಕರು ಮತ್ತು ಅವರ ಮೇಲೆ ನಿಗಾವಹಿಸಬೇಕಾದ ಮೇಲಧಿಕಾರಿಗಳು ಹಾಗೂ ಶಾಲಾಭಿವೃದ್ಧಿ ಸಮಿತಿಗಳೇ ಮುಖ್ಯ ಕಾರಣರು ಎನ್ನಲಾಗುತ್ತದೆ. ಶಿಕ್ಷಣ ಉತ್ತಮಗೊಳ್ಳಬೇಕಾದರೆ ಇವರೆಲ್ಲರ ಸಹಕಾರ ಹಾಗೂ ಪ್ರಾಮಾಣಿಕ ಪಾಲ್ಗೊಳ್ಳುವಿಕೆ ಅತ್ಯಂತ ಮುಖ್ಯವಾಗಿದ್ದು, ಸರಕಾರವು ಅದನ್ನು ಖಾತರಿಗೊಳಿಸಬೇಕು. ಶಿಕ್ಷಕರ ಬೋಧನಾ ಸಾಮರ್ಥ್ಯವು ಪ್ರತಿವರ್ಷವೂ ಒರೆಗೆ ಹಚ್ಚಲ್ಪಡಬೇಕು ಹಾಗೂ ಶಿಕ್ಷಕರ ಹಾಜರಾತಿ, ಶಿಕ್ಷಣ ಕ್ರಮ ಹಾಗೂ ವರ್ತನೆಗಳ ಬಗ್ಗೆ ನಿರಂತರ ಮೌಲ್ಯಮಾಪನವಿರಬೇಕು. ತರಗತಿಯ ಎಲ್ಲ ವಿದ್ಯಾರ್ಥಿಗಳು ಅನಾಮಧೇಯರಾಗಿ ಈ ಮೌಲ್ಯಮಾಪನವನ್ನು ಮಾಡುವಂತಿರಬೇಕು.

ರಾಜ್ಯದ ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸುವಲ್ಲಿ ಆಸಕ್ತರಾಗಿರುವ ಎಲ್ಲರೂ ಜೊತೆಗೂಡಿ ಸರಕಾರದ ಮನವೊಲಿಸುವುದಕ್ಕೆ ಕಾಲ ಪಕ್ವವಾಗಿದೆ. ಈ ಕೆಲಸದಲ್ಲಿ ವಿಳಂಬವಾದರೆ ನಮ್ಮ ರಾಜ್ಯದ ಮಕ್ಕಳಿಗೆ ಇನ್ನಷ್ಟು ಹಾನಿಯಾಗುವುದು ನಿಶ್ಚಿತ. ಆದ್ದರಿಂದ ರಾಷ್ಟ್ರೀಯ ಶಿಕ್ಷಣ ನೀತಿ ಹಾಗೂ ಶಿಕ್ಷಣ ಹಕ್ಕು ಕಾಯಿದೆಗಳ ವ್ಯಾಪ್ತಿಯೊಳಗೆ, ಸರಕಾರದ ಆರ್ಥಿಕ ಇತಿಮಿತಿಗಳೊಳಗೆ, ಕನ್ನಡ ಮಾಧ್ಯಮವನ್ನು ಉತ್ತೇಜಿಸುವ ಉದ್ದೇಶವಿಟ್ಟು ಕೊಂಡು, ರಾಜ್ಯಕ್ಕೊಂದು ಸಮಗ್ರ ಶಿಕ್ಷಣ ನೀತಿಯನ್ನು ರೂಪಿಸುವಲ್ಲಿ ಎಲ್ಲ ಶಿಕ್ಷಣಾಸಕ್ತರು ಕೈಜೋಡಿಸಬೇಕಾಗಿದೆ.

ಡಾ|| ಬಿ. ಶ್ರೀನಿವಾಸ ಕಕ್ಕಿಲ್ಲಾಯ
'ಅಕ್ಷಯ', ಕದ್ರಿ, ಕೈಬಟ್ಟಲ್, ಆಳ್ವಾರಿಸ್ ರಸ್ತೆ
ಮಂಗಳೂರು – ೫೭೫ ೦೦೨

# ಶತಮಾನದ ಸಾಹಿತ್ಯ ಪರಿಷತ್ತು: ಕೆಲವು ಪ್ರಶ್ನೆಗಳು

ಕನ್ನಡ ಸಾಹಿತ್ಯ ಪರಿಷತ್ತು ಶತಮಾನೋತ್ಸವದ ಸಂಭ್ರಮದಲ್ಲಿದೆ. ತನ್ನ ಎಲ್ಲ ಮಿತಿ ಸಾಧ್ಯತೆಗಳ ಮಧ್ಯೆಯೂ ಪರಿಷತ್ತು ನಮ್ಮ ನಾಡಿನ ಸಾಹಿತ್ಯ ಕ್ಷೇತ್ರದ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಇಂದು ಭಾಷಾಮಾಧ್ಯಮ, ಕನ್ನಡ ಶಾಲಾ ಶಿಕ್ಷಣದ ಅವಸ್ಥೆ, ಇಂಗ್ಲಿಷಿನ ದಾಳ, ಪ್ರಧಾನ ಸಂವಹನ ಮಾಧ್ಯಮವಾಗಿ ಕನ್ನಡಕ್ಕಿರುವ ಸ್ಥಾನ, ಕನ್ನಡ ಸಾಹಿತ್ಯ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳು ಇಂಥ ಬಹುಮುಖಿ ಸಮಸ್ಯೆಗಳನ್ನೆದುರಿಸುತ್ತಿರುವ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಒಂದು ಸಂಸ್ಥೆಯಾಗಿ ಹೇಗಿರಬೇಕು ? ಅದರ ಅಧ್ಯಕ್ಷರಾಗಿ ಆಯ್ಕೆಯಾಗುವವರ ಜವಾಬ್ದಾರಿಗಳೇನು ? ಈ ಹಿನ್ನೆಲೆಯಲ್ಲಿ ಮುಂಬರುವ ಪರಿಷತ್ತಿನ ಚುನಾವಣೆಯ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಬಯಸುವ, ಸಂಭವನೀಯ ಅಭ್ಯರ್ಥಿಗಳಿಗೆ ಕೆಲವು ಪ್ರಶ್ನೆಗಳನ್ನು 'ಹೊಸತು' ಕೇಳಿದೆ. ಡಾ|| ಮನು ಬಳಿಗಾರ್ ಹಾಗೂ ಪ್ರೊ|| ಜಯಪ್ರಕಾಶ ಗೌಡ ಅವರು ಈ ಪ್ರಶ್ನೆಗಳಿಗೆ ಉತ್ತರಿಸಿದ್ದಾರೆ. ಅಧ್ಯಕ್ಷ ಸ್ಥಾನಕ್ಕೆ ಇನ್ನೂ ಹೆಚ್ಚಿನ ಅಭ್ಯರ್ಥಿಗಳಿರಬಹುದು. ಸಾಂಕೇತಿಕವಾಗಿ ಈ ಮಹನೀಯರಿಗೆ ಪ್ರಶ್ನಾವಳಿಯನ್ನು ಕೊಟ್ಟು, ಅವರಿಂದ ಬಂದ ಅಭಿಪ್ರಾಯಗಳನ್ನು ಇಲ್ಲಿ ಪ್ರಕಟಿಸಲಾಗಿದೆ.

ಸಾಹಿತ್ಯ ಪರಿಷತ್ತಿನಂಥ ಒಂದು ಪ್ರಾತಿನಿಧಿಕ ಸಂಸ್ಥೆ ನಾಡು-ನುಡಿಯ ಕುರಿತು ಸ್ಪಷ್ಟತೆಯನ್ನೂ, ಅದನ್ನು ಪ್ರತಿನಿಧಿಸುವವರು ನಿರ್ದಿಷ್ಟ ಉದ್ದೇಶವನ್ನೂ ಹೊಂದಿರಲಿ ಎಂಬುದು 'ಹೊಸತು' ಆಶಯ. ಈ ಪ್ರಶ್ನಾವಳಿಯನ್ನು ಸಿದ್ಧಪಡಿಸಿದ ಡಾ|| ರಾಮಲಿಂಗಪ್ಪ ಟಿ. ಬೇಗೂರು ಅವರಿಗೂ ಪ್ರಶ್ನೆಗಳಿಗೆ ಉತ್ತರಿಸಿದ ಡಾ|| ಮನು ಬಳಿಗಾರ ಹಾಗೂ ಪ್ರೊ|| ಜಯಪ್ರಕಾಶ ಗೌಡ ಅವರಿಗೂ ವಂದನೆಗಳು.

– *ಸಂ.*

## ಪ್ರಶ್ನೆಗಳು

೧. ನಿಮ್ಮ ಪ್ರಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗುವವರ ವಿಶೇಷ ಅರ್ಹತೆಗಳು ಯಾವುವು ?

೨. ಇತ್ತೀಚಿನ ಎರಡು ಮೂರು ಅವಧಿಯ ಈ ಹಿಂದಿನ ಅಧ್ಯಕ್ಷರ ಇಮೇಜು, ಕಾರ್ಯವೈಖರಿ, ಚುನಾವಣಾ ರಾಜಕಾರಣ, ಸಾಹಿತ್ಯ ವ್ಯಕ್ತಿತ್ವ ಇವುಗಳ ಬಗೆಗೆ ನಿಮ್ಮ ನಿಲುವೇನು ?

೩. ಮಹಿಳೆಯರು ಇದುವರೆಗೆ ಅಧ್ಯಕ್ಷರಾಗಿಲ್ಲ ಎಂಬ ಬಗೆಗೆ ನಿಮ್ಮ ಅಭಿಪ್ರಾಯವೇನು ?

೪. ಸರ್ಕಾರ, ಮತಮಾನ್ಯಗಳು, ಅಧಿಕಾರಶಾಹಿ, ಸ್ಥಾಪಿತ ಸಾಹಿತ್ಯ ಮತಗಳು ಇವುಗಳ ಜೊತೆಗೆ ಕ. ಸಾ. ಪ. ಸಂಬಂಧ ಹೇಗಿರಬೇಕು ?

೫. ಜಿಲ್ಲೆ, ತಾಲ್ಲೂಕು, ಹೋಬಳಿ ಮಟ್ಟದ ಘಟಕಗಳ ಉದ್ದೇಶ, ಕಾರ್ಯಶೀಲತೆ ಮತ್ತು ಕೇಂದ್ರ ಘಟಕದೊಂದಿಗೆ ಅವುಗಳ ಸಂಬಂಧ ಹೇಗಿರಬೇಕು ?

೬. ನಿಮ್ಮ ಪ್ರಕಾರ ಈ ಹಿಂದೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಆಗಿರಬಹುದಾದ ಲೋಪಗಳು ಯಾವುವು ? ನಿಜಕ್ಕೂ ಕನ್ನಡ ಸಾಹಿತ್ಯ ಪರಿಷತ್ತಿನ ಧ್ಯೇಯೋದ್ದೇಶಗಳು ಏನಾಗಿರಬೇಕು ?

೭. ನಿಮ್ಮ ಪ್ರಕಾರ ಆದರ್ಶ ಮತ್ತು ಕಾರ್ಯಸಾಧ್ಯ ಸಾಹಿತ್ಯ ಸಮ್ಮೇಳನಗಳ ಸ್ವರೂಪ ಮತ್ತು ಉದ್ದೇಶ ಹೇಗಿರಬೇಕು ?

೮. ನೀವು ಒಂದು ಪಕ್ಷ ಮುಂದಿನ ಅವಧಿಗೆ ಅಧ್ಯಕ್ಷರಾದಲ್ಲಿ ನಿಮ್ಮ ಕಾರ್ಯಯೋಜನೆಗಳು ಏನು ?

೯. ಸಮ್ಮೇಳನದಲ್ಲಿ ತೆಗೆದುಕೊಳ್ಳುವ, ತೆಗೆದುಕೊಂಡ ನಿರ್ಣಯಗಳು ಜಾರಿಯಾಗಿವೆಯೇ, ಜಾರಿಗಾಗಿ ಪರಿಷತ್‌ನ ಹೊಣೆಗಾರಿಕೆ ಏನು ? ಅದಕ್ಕಾಗಿ ನಿಮ್ಮ ಕಾರ್ಯಯೋಜನೆ ಏನು ?

## ಪ್ರಶ್ನೆಗಳಿಗೆ ಉತ್ತರಗಳು

❑ **ಡಾ|| ಮನು ಬಳಿಗಾರ್**

೧. ಕನ್ನಡ ಸಾಹಿತ್ಯ ಪರಿಷತ್ತಿಗೆ ಅಧ್ಯಕ್ಷರಾಗುವವರು ಮುಖ್ಯವಾಗಿ ಕನ್ನಡದ ಬಗ್ಗೆ ಬದ್ಧತೆ ಹಾಗೂ ಜ್ಞಾನ ಇದ್ದವರಾಗಿರಬೇಕು. ನಾಡಿನ ಸಾಹಿತ್ಯ, ಸಂಸ್ಕೃತಿ, ಕಲೆ, ಪರಂಪರೆ ಇತ್ಯಾದಿಗಳ ಕುರಿತು ತಿಳುವಳಿಕೆ ಹಾಗೂ ಅಧ್ಯಯನ ಮಾಡಿರಬೇಕು. ಕನ್ನಡಕ್ಕೆ ಕುತ್ತು ಬಂದಾಗ ಯಾವುದೇ ಹೋರಾಟ ಮತ್ತು ತ್ಯಾಗಕ್ಕೂ ಸಿದ್ಧರಿರಬೇಕು. ಪ್ರಾಮಾಣಿಕವಾಗಿ ಪಾರದರ್ಶಕವಾಗಿ ಕೆಲಸ ನಿರ್ವಹಿಸುವವರಾಗಬೇಕು.

೨. ಹಿಂದಿನ ಅಧ್ಯಕ್ಷರುಗಳ ಕೆಲಸದ ಬಗ್ಗೆ ನಾನು ಟೀಕೆ ಟಿಪ್ಪಣಿ

ಮಾಡಲು ಇಚ್ಛಿಸುವುದಿಲ್ಲ. ಎಲ್ಲರೂ ಅವರವರ ಶಕ್ತ್ಯಾನುಸಾರ ಉತ್ತಮ ಕೆಲಸ ಮಾಡಿದ್ದಾರೆನ್ನಬಹುದು.

೩. ಯಾರಾದರೂ–ಅಂದರೆ ಪುರುಷರು ಅಥವಾ ಮಹಿಳೆಯರು ಅಧ್ಯಕ್ಷರಾಗ ಬಹುದು. ಇದು ಚುನಾವಣೆ ಮೂಲಕ ಆಗುವ ಪ್ರಕ್ರಿಯೆ ಆದ್ದರಿಂದ ಎಲ್ಲರಿಗೂ ಸಮಾನ ಅವಕಾಶವಿದೆ. ಇದೊಂದು ಪ್ರಜಾಸತ್ತಾತ್ಮಕ ನಿಲುವು.

೪. ಸರಕಾರ, ಅಧಿಕಾರಶಾಹಿ, ಮಠಗಳು ಇತ್ಯಾದಿಗಳ ಜೊತೆ ಅಷ್ಟೇ ಏಕೆ ಕನ್ನಡದ, ಸಾಹಿತ್ಯದ ಪೋಷಣೆ ಹಾಗೂ ಬೆಳವಣಿಗೆ ದೃಷ್ಟಿಯಿಂದ ಎಲ್ಲ ರಂಗಗಳ ಜೊತೆಗೂ ಆರೋಗ್ಯಕರ ಸಂಬಂಧ ಹೊಂದಲು ಸಾಧ್ಯವಿದೆ. ಹಾಗೆಯೇ ಒಂದು ಗೌರವಯುತ ಅಂತರವನ್ನೂ ಕಾಯ್ದುಕೊಳ್ಳಬೇಕು. ಇಲ್ಲಿ ವಿವೇಚನೆ ಹಾಗೂ ಜಾಗರೂಕತೆಯಿಂದ ನಿಲುವು ತಳೆಯಬೇಕು. ಪ್ರಸಂಗ ಬಂದರೆ ಯಾವ ಹೋರಾಟಕ್ಕೂ ಹಿಂಜರಿಯಬಾರದು. ಪರಿಷತ್ತಿನ ಮೂಲಭೂತ ಆಶಯಕ್ಕೆ ಹಾಗೂ ಸಾರ್ವಭೌಮತ್ವಕ್ಕೆ ಎಂದೂ ಧಕ್ಕೆ ಬರದಂತೆ ನೋಡಿಕೊಳ್ಳಬೇಕು.

೫. ಜಿಲ್ಲೆ, ತಾಲ್ಲೂಕು ಮತ್ತು ಹೋಬಳಿ ಘಟಕಗಳು ರಾಜ್ಯ ಘಟಕದೊಂದಿಗೆ ಬಹಳ ಅನ್ಯೋನ್ಯತೆಯಿಂದ ಕೆಲಸ ಮಾಡಬೇಕಾಗುತ್ತದೆ. ಯಾವುದೇ ಆಂತರಿಕ ಹಾಗೂ ಸ್ವಹಿತಾಶಕ್ತಿಯ ಘರ್ಷಣೆಗಳು ಇರಕೂಡದು. ಅಧ್ಯಕ್ಷರಾಗುವವರು ಇದನ್ನೆಲ್ಲ ನಿಭಾಯಿಸುವ ಶಕ್ತಿ ಹಾಗೂ ಮನೋಬಲ ಹೊಂದಿದ ಅನುಭವಿ ಆಗಿರಬೇಕು. ವಿಶಾಲ ಹಾಗೂ ಸಮತೋಲ ದೃಷ್ಟಿವುಳ್ಳವರಾಗಿರಬೇಕು.

೬. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹಿಂದೆ ಲೋಪಗಳಾದ ಬಗ್ಗೆ ನನ್ನ ಗಮನಕ್ಕೆ ಬಂದಿಲ್ಲ. ಮೊದಲು ಪರಿಷತ್ತಿಗೆ ಸೀಮಿತ ಅನುದಾನ ಅಥವಾ ಅದರ ಕೊರತೆಯಿತ್ತು. ಇತ್ತೀಚಿನ ಐದಾರು ವರ್ಷಗಳಲ್ಲಿ ಹಾಗಿಲ್ಲ. ಪರವಾಗಿಲ್ಲ ಎನ್ನುವಷ್ಟು ಸುಧಾರಿಸಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಧ್ಯೇಯೋದ್ದೇಶವೆಂದರೆ ಕನ್ನಡವನ್ನು, ಕನ್ನಡ ಸಾಹಿತ್ಯವನ್ನು ರಕ್ಷಿಸಿ ಬೆಳೆಸುವುದಾಗಬೇಕು. ಎಲ್ಲ ಸಂದರ್ಭಗಳಲ್ಲೂ ಕನ್ನಡಕ್ಕೆ ಪ್ರಾಧಾನ್ಯತೆ ಇರುವಂತಾಗಬೇಕು.

೭. ನಾವಿಟ್ಟುಕೊಳ್ಳುವ ಆದರ್ಶವೆಂದರೆ ಕನ್ನಡ ಸಾಹಿತ್ಯ ಪರಿಷತ್ತನ್ನು ಕಟ್ಟಿ ಬೆಳೆಸಿದ ಮಹನೀಯರ ಯಾವುದೇ ಒಂದು ಅಂಶಕ್ಕೂ ಚ್ಯುತಿ ಬರಬಾರದು. ಸಾಹಿತ್ಯ ಸಮ್ಮೇಳನಗಳ ಉದ್ದೇಶ ಮತ್ತು ಸ್ವರೂಪದಲ್ಲಿ ಹೆಚ್ಚಿನ ಬದಲಾವಣೆಗಳನ್ನು ತರಬೇಕೆಂದರೆ ಸಾಹಿತ್ಯವಲಯದವರನ್ನು ಸಂಪರ್ಕಿಸಿಯೇ ಮಾಡಬೇಕಾಗುತ್ತದೆ. ಈಗಲೂ ಹಾಗೆಯೇ ಮಾಡಲಾಗುತ್ತಿದೆ. ಗೋಷ್ಠಿಗಳು, ವಿಚಾರ ಸಂಕಿರಣಗಳು, ಚರ್ಚೆಗಳು ಈಗಾಗಲೇ ನಡೆಯುತ್ತಲೇ ಬಂದಿವೆ. ನಾನು ವಿದ್ಯಾರ್ಥಿ ದೆಶೆಯಿಂದಲೇ ಸಾಹಿತ್ಯ ಸಮ್ಮೇಳನಗಳಲ್ಲಿ (೧೯೭೪ರಿಂದ) ಭಾಗವಹಿಸುತ್ತ ಬಂದಿದ್ದೇನೆ. ಆ ಅನುಭವದ ಹಿನ್ನೆಲೆಯಲ್ಲಿ ಪ್ರಯತ್ನ ಮುಂದುವರಿಸುತ್ತೇನೆ. ಕಾಲಕಾಲಕ್ಕೆ ಹೊಸತನ್ನು ತರಬೇಕೆನಿಸಿದರೆ ಖಂಡಿತ ಅದು ಸ್ವಾಗತಾರ್ಹ.

೮. ಕನ್ನಡ ಭಾಷೆಯ ಬೆಳವಣಿಗೆ ಬಗ್ಗೆ ವಿಶ್ವವಿದ್ಯಾಲಯಗಳ ಜೊತೆ ಹಾಗೂ ಸಂಶೋಧನಾ ಸಂಸ್ಥೆಗಳ ಜೊತೆ ಹೆಚ್ಚಿನ ಸಂಪರ್ಕ ಬೆಳೆಸಿ ಕನ್ನಡದ ಆಧುನಿಕ ಅವಶ್ಯಕತೆಗಳ ಕುರಿತು ಕೆಲಸ ಮಾಡುತ್ತೇನೆ. ತಂತ್ರಾಂಶ ಅಭಿವೃದ್ಧಿ, ಗಣಕೀಕರಣ ಕನ್ನಡದಲ್ಲಿ ಇನ್ನೂ ಹೆಚ್ಚೆಚ್ಚು ಆಗಬೇಕಿದೆ. ಇದಕ್ಕಾಗಿ ಸಾಹಿತಿಗಳು, ಭಾಷಾಶಾಸ್ತ್ರಜ್ಞರು, ತಂತ್ರಾಂಶ ಪಂಡಿತರು ಎಲ್ಲರನ್ನೂ ಕೂಡಿಸಿಕೊಂಡು ಕೆಲಸ ನಿರ್ವಹಿಸಬೇಕಾಗುತ್ತದೆ. ಇನ್ನು ಮಹಿಳೆಯರಿಗಾಗಿಯೇ ಹೆಚ್ಚಿನ ಕಾರ್ಯಕ್ರಮಗಳನ್ನು, ಅವಕಾಶಗಳನ್ನು ಒದಗಿಸಿಕೊಡುತ್ತೇನೆ. ಯುವಜನರಲ್ಲಿ ಕನ್ನಡ ಭಾಷಾಭಿಮಾನ, ಸಾಹಿತ್ಯಕ ಒಲವು ಇತ್ತೀಚೆಗೆ ಕಡಿಮೆಯಾಗುತ್ತಿದೆ. ಇದನ್ನು ಅಭ್ಯಾಸಮಾಡಿ ಹೇಗೆ ಅದನ್ನು ಹೆಚ್ಚಿಸಬೇಕೆಂಬ ಕುರಿತು ಕಾರ್ಯಕ್ರಮ ರೂಪಿಸುತ್ತೇನೆ. ಹಿಂದಿನ ಎಲ್ಲ ಉತ್ತಮ ಕೆಲಸಗಳನ್ನೂ ಮುಂದುವರಿಸುತ್ತೇನೆ. ಈಗ ಮಾಸಿಕ ಪತ್ರಿಕೆಯಾಗಿ ಬರುತ್ತಿರುವ 'ಕನ್ನಡ ನುಡಿ'ಯ ವಾರ್ಷಿಕ ವಿಶೇಷ ಸಂಚಿಕೆಯನ್ನು (ಸುಮಾರು ೨೦೦–೩೦೦ ಪುಟ) ಪ್ರತಿವರ್ಷ ಹೊರತರಲು ಆ ಮೂಲಕ ಕನ್ನಡ ಸಾಹಿತ್ಯದ ಒಲವು–ನಿಲುವು, ಭಾಷಾ




# ಅಮ್ಮನ ಲಾಲಿ

**ಹೆ**ಣ್ಣು ಮಗುವು ಮಗ್ಗಲು ಮುಲುಕಿಸಿ,
ಎಳೆಯ ಕಂದಮ್ಮ ತುಟಿ ಅಲುಗಿಸಿ,
ಹಸಿದ ಹೊಟ್ಟೆಗೆ ಹಾಲು ಕೇಳುವ
ಒಡಲಾಳದ ಹೃದಯ ಸಂಭಾಷಣೆ.

ಕಣ್ಣ ಭಾಷೆ, ದೇಹ ಭಾಷೆಗೆ ವ್ಯಾಕರಣವೆಂತಹದು ?
ಸರಳ ಗೆರೆಗಳು ಅಲ್ಲೊಂದು ಇಲ್ಲೊಂದು
ಹೂ-ಬಳ್ಳಿಯ ಬಾಗು, ಬಳುಕು, ಮೊಗ್ಗು

ಬುಡಕಟ್ಟು ಮಂದಿಯು ಗೋಡೆಗೆ ಬಿಡಿಸಿದ
ಹಸೆ ಚಿತ್ತಾರದ ಕೌತುಕದ ಗುಂಗು.

ಕುಚ್ಚು, ಕುಲಾಯಿ, ಲಾಲಿ ಹಾಡು
ಹಗಲು ರಾತ್ರಿ ದಂಡಿಗೆ ದುಡಿದವಳಿಗೆ
ತಂಗುದಾಣಕ್ಕೊಂದು ಪೂರ್ಣವಿರಾಮ
ದಣಿದ ದೇಹಕ್ಕೊಂದು ವಿಶ್ರಾಂತಿ ಧಾಮ.

ತೊಟ್ಟಿಲಿಗೆ ಹಾಡಿದ ಜೋಗುಳವೇ
ಅವಳ ಮನದ ಕೀಲಿ ಕೈಯೇ
ಬಸುರು, ಬಯಕೆಯ ದಾಟಿ ಮಸಣದವರೆಗೆ
ಹೆಜ್ಜೆ ಹೆಜ್ಜೆಗೂ ಅವಳದೇ ಸೊಲ್ಲು.

ಮುಂಜಾನೆ ಅರಳಿ, ಮುಸ್ಸಂಜೆ ಮುದುಡುವ
ಜೀವ ಚೈತನ್ಯ ಸಿಕ್ಕಾಗ ಸೆಲೆ ಬಿರಿಯುವ
ಬಿಕ್ಕಿದ, ಉಕ್ಕಿದ, ಭಾವ ಕಡೆಯ ಪುಟದ ಟಿಪ್ಪಣಿ
ರೂಪಕದ ಸಾಮ್ರಾಜ್ಯದಲ್ಲಿ ಅಂತರಂಗ ರಿಂಗಣಿಸಿ
ಧ್ಯಾನಸ್ಥವಾಗಿ ಬಿಡುಗಡೆ ಪಡೆದಿತ್ತು ತುಸುಕಾಲ.

ವಿಮರ್ಶೆಗಳು ಅಬ್ಬರಿಸಲಿ ಬಿಡಲಿ
ಸಾಗಬೇಕಿದೆ ಬಹುದೂರ ಹಾದಿಯಲ್ಲಿ
ನಿಲ್ಲದಿರಲಿ ರಚ್ಚೆ ಹಿಡಿದ ಮಗುವನು
ರಮಿಸಿ ಮಲಗಿಸುವ ಅಮ್ಮನ ಲಾಲಿ.

**ಡಾ॥ ಕೆ. ಷರೀಫಾ**
ನಂ. ೫ ಎ, ೧ನೇ ಮಹಡಿ, ೧ನೇ ಬ್ಲಾಕ್, ೨ನೇ ಮುಖ್ಯರಸ್ತೆ
ಆರ್. ಟಿ. ನಗರ, ಬೆಂಗಳೂರು – ೫೬೦ ೦೩೨

---

ಬೆಳವಣಿಗೆ, ಸಂಶೋಧನಾತ್ಮಕ ಚಟುವಟಿಕೆ ಇತ್ಯಾದಿಗಳ ಬಗ್ಗೆ ಲೇಖನಗಳನ್ನು ಹಿರಿಯ ಹಾಗೂ ಕಿರಿಯ ವಿದ್ವಾಂಸರಿಂದ ಬರೆಯಿಸಿ ಸಂಕಲಿಸಲು ಅನುವು ಮಾಡಿಕೊಡಲಾಗುವುದು. ಒಟ್ಟಾರೆಯಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಹಣೆಯಲ್ಲಿ ಈಗಾಗಲೇ ನಾನು ಘೋಷಿಸಿದಂತೆ – ಸಾಧನೆ, ಅರ್ಹತೆ ಯೋಗ್ಯತೆ, ಪ್ರಾದೇಶಿಕ ಸಮಾನತೆ, ಸಾಮಾಜಿಕ ನ್ಯಾಯ ಇವುಗಳನ್ನು ಆಧಾರವಾಗಿಟ್ಟುಕೊಂಡು ಪ್ರಾಮಾಣಿಕವಾಗಿ, ಪಾರದರ್ಶಕವಾಗಿ ಹೆಜ್ಜೆ ಇಡುತ್ತೇನೆ. ಶ್ರೀ ಹಾಲಂಬಿ ಹಾಗೂ ಶ್ರೀ ಧರ್ಮದರ್ಶಿ ಪುನರೂರು ಅವರಂತೆ ನಾನೂ ಕೂಡ ಕ. ಸಾ. ಪ. ದಿಂದ ಮಾಸಿಕ ಗೌರವಧನ ಪಡೆಯುವುದಿಲ್ಲ.

೯. ಸಮ್ಮೇಳನದಲ್ಲಿನ ನಿರ್ಣಯಗಳನ್ನು ಜಾರಿಮಾಡುವಲ್ಲಿ ಪರಿಷತ್ತು ಸದಾ ಕೆಲಸ ಮಾಡುತ್ತ ಬಂದಿದೆ. ನೀತಿ ನಿರೂಪಣಾ (ಪಾಲಿಸಿ ಮ್ಯಾಟರ್ಸ್) ಕಾರ್ಯವಿದ್ದಲ್ಲಿ ತುಸು ವಿಳಂಬವಾಗುವ ಸಾಧ್ಯತೆ ಇರುತ್ತದೆ. ಎಲ್ಲ ಪ್ರಾದೇಶಿಕ ಭಾಷೆಗಳ ಸ್ಥಿತಿಗತಿ ಹಾಗೂ ಭವಿಷ್ಯ, ಎರಡೂ ಭಾರತದಲ್ಲಿ ಒಂದೇ ನಮೂನೆಯದಾಗಿವೆ. ಜಾಗತೀಕರಣ ಹಾಗೂ ಆಂಗ್ಲೀಕರಣದ ಆರ್ಭಟದಲ್ಲಿ ದೇಸಿ ಭಾಷೆಗಳು ನಲುಗಿಹೋಗುತ್ತಿವೆ. ಕಾರಣ ನಮ್ಮ ರಾಜ್ಯದ ಇತರ ಭಾಷೆಗಳವರು ಹಾಗೂ ಹೊರ ರಾಜ್ಯಗಳವರ ಜೊತೆ ಸಂಪರ್ಕ ಬೆಳೆಸಿ ಒಟ್ಟಾರೆಯಾಗಿ ಏನಾದರೂ ಮಾಡಲು ಸಾಧ್ಯವೇ ಎಂಬುದನ್ನು ಪರಿಶೀಲಿಸಿ ಕ್ರಮ ಕೈಗೊಳ್ಳುವುದು ಅವಶ್ಯವೆನಿಸುತ್ತದೆ. ಬಹಳಷ್ಟು ನಿರ್ಣಯಗಳು ಜಾರಿಯಾಗಿವೆ. ಕೆಲವೊಂದು ಆಗಿಲ್ಲ. ಅದಕ್ಕಾಗಿ ಸರ್ಕಾರ ಹಾಗೂ ಸಂಬಂಧಿಸಿದ ಸಂಸ್ಥೆಗಳ ಜೊತೆ ನಿರಂತರ ಸಂಪರ್ಕ ಬೆಳೆಸಿಕೊಂಡು ನನ್ನ ಮೂವತ್ತೇಳು ವರ್ಷಗಳ ಆಡಳಿತ ಅನುಭವದ ನೆಲೆಯಲ್ಲಿ ಸರ್ವ ಪ್ರಯತ್ನ ಮಾಡುತ್ತೇನೆ. ಆದಷ್ಟು ಜಾರಿ ಆದವುಗಳ ಬಗ್ಗೆ ಹಾಗೂ ಯಾಕೆ ಕೆಲವೊಂದು ನಿರ್ಣಯಗಳು ಅನುಷ್ಠಾನಗೊಂಡಿಲ್ಲ ಎಂಬುದರ ಬಗ್ಗೆ ಸಕಾರಣಗಳ ಪಟ್ಟಿಮಾಡಿ ಮುಂದಿನ ಸಮ್ಮೇಳನದಲ್ಲಿ ಮಂಡಿಸಲು ಕ್ರಮ ಕೈಗೊಳ್ಳಬೇಕು. ಈ ನಿರ್ಣಯದ ಜಾರಿಗಾಗಿಯೇ ೨ ಅಥವಾ ೩ ತಿಂಗಳಿಗೆ ಒಮ್ಮೆ ಪರಾಮರ್ಶೆ ಮಾಡಿ ಅವಶ್ಯವೆನಿಸಿದಲ್ಲಿ ಅದಕ್ಕಾಗಿ ಉಪಸಮಿತಿ/ ಕಾರ್ಯಸಮಿತಿಯೊಂದನ್ನು ರಚಿಸಿ ಕೆಲಸ ಪೂರೈಸಬೇಕಾಗುತ್ತದೆ.

**ಡಾ॥ ಮನು ಬಳಿಗಾರ್**, 'ಶಿಗ್ಲಿಮನೆ', ನಂ. ೩೨, ೬ನೇ ಅಡ್ಡರಸ್ತೆ
೩೫ನೇ ಮುಖ್ಯರಸ್ತೆ, ಬಿ.ಟಿ.ಎಂ. ೨ನೇ ಹಂತ, ಬೆಂಗಳೂರು – ೫೬೦ ೦೬೮

## ಪ್ರಶ್ನೆಗಳಿಗೆ ಉತ್ತರಗಳು

❑ **ಪ್ರೊ॥ ಜಯಪ್ರಕಾಶ ಗೌಡ**

೧. ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಿಗೆ 'ಅರ್ಹತೆ'ಗಳು ಎರಡು ತೆರನಾದದ್ದು. ನಿಯಮಾವಳಿಗಳಿಗೆ ಅನುಗುಣವಾದದ್ದು ಒಂದಾದರೆ, ಅವುಗಳನ್ನು ಮೀರಿದ್ದು ಎರಡನೆಯದು. ಎರಡನೆಯದ್ದು ಮುಖ್ಯ. ಸಾಹಿತ್ಯದ ಹಿನ್ನೆಲೆಯನ್ನು ಪ್ರತಿಪಾದಿಸುವ ವರ್ಗ ಒಂದಿದೆ. ಇದು ಒಂದು ಹಂತದವರೆಗೆ ಒಪ್ಪಿತವಾದದ್ದು. ಇದೇ ಪೂರ್ಣವಾದುದಲ್ಲ. ಇದನ್ನು ಒಳಗೊಂಡಂತೆಯೂ ಇದನ್ನು ಮೀರಿದ ಅರ್ಹತೆಗಳೇ ಮುಖ್ಯ ಎಂಬುದು ನನ್ನ ಭಾವನೆ. ಸಂಘಟನೆಯ ಸಾಮರ್ಥ್ಯ-ಹಿನ್ನೆಲೆ ಮುಖ್ಯ. ಜೊತೆಗೆ, ತಂಡದಲ್ಲಿ ಕೆಲಸ ಮಾಡುವ ಧೋರಣೆ. ನಾಯಕತ್ವ ಎಂದಾಗ

ಮುಂಚೂಣಿಯ ಪಾತ್ರ ವಹಿಸುವುದಲ್ಲ. ಮುಂಚೂಣಿಯಲ್ಲಿ ಕೆಲಸ ಮಾಡುವ ಅರ್ಥಾತ್ ನಾಯಕರನ್ನು ಸೃಷ್ಟಿಸುವುದೇ ನೈಜ ನಾಯಕತ್ವ ಎಂಬುದರ ಬಗ್ಗೆ ನಂಬುಗೆ ಇರಬೇಕು.

ಯಾವುದೇ ಭಾಷೆಯೊಂದಕ್ಕೆ ಸಾಹಿತ್ಯ ಒಂದು ನೆಲೆಯಾದರೆ, ಭಾಷಿಕ ನೆಲೆಯದ್ದು ಮತ್ತೊಂದು. ಅಧ್ಯಕ್ಷರಿಗೆ ಈ ಎರಡರ ಚಾರಿತ್ರಿಕ ಅವಲೋಕನದ ಜೊತೆಗೆ ಭವಿಷ್ಯತ್ತಿನ ಮುಂಗಾಣ್ಕೆ ಇರಬೇಕು. ಸಾಹಿತ್ಯದ ಭಾಷಿಕ ಸಮಸ್ಯೆಗಳ ಜ್ವಲಂತತೆ ಉಲ್ಬಣವಾಗುತ್ತಿರುವ ಕಾಲಘಟ್ಟದಲ್ಲಿ ಇವುಗಳ ಗ್ರಹಿಕೆ ಹಾಗೂ ಪರಿಹಾರದ ಉಪಕ್ರಮಗಳ ಅರಿವಿನ ಜೊತೆಗೆ ಸ್ಪಷ್ಟ, ಮೂರ್ತರೂಪದ ಯೋಜನೆಗಳನ್ನು ರೂಪಿಸುವಿಕೆಯ ಒಳನೋಟಗಳಿರಬೇಕು.

೩. 'ಮಹಿಳೆ' ಅಧ್ಯಕ್ಷಪಟ್ಟಕ್ಕೇರದಿರುವುದು ನಿಜಕ್ಕೂ ಅನಪೇಕ್ಷಣೀಯ. ಅಧ್ಯಕ್ಷಗಿರಿಯನ್ನು ನಿಭಾಯಿಸಬಲ್ಲ ಹಲವು – ಹತ್ತು ಮಂದಿ ನಮ್ಮಲ್ಲಿದ್ದಾರೆ. 'ಕಾಲದ ಪಕ್ವತೆ' ಖಂಡಿತ ಇದಕ್ಕೆ ಆಸ್ಪದಮಾಡಿ ಕೊಡುತ್ತದೆ.

೪. ಪರಿಷತ್ತಿನ ಸಂಪರ್ಕ – ಸಂಬಂಧದ ಜಾಲ ವಿಸ್ತಾರವಾದದ್ದು. ಒಂದು ಹಂತದವರೆಗೆ ಇದನ್ನು ಸಾಧ್ಯಮಾಡಬೇಕು ಎಂಬುದು ನಿಜವಾದರೂ, ಪರಿಷತ್ತಿನ ಅಸ್ತಿತ್ವ(ಐಡೆಂಟಿಟಿ)ದ ಪ್ರಶ್ನೆ ಕಾಡುತ್ತದೆ. ವಿಶೇಷವಾಗಿ ಸಮ್ಮೇಳನಗಳಲ್ಲಿ ಈ ಎಲ್ಲದರ ಪಾತ್ರ ಸಂವೇದನಾಶೀಲರೆಲ್ಲರನ್ನು ಕಾಡುತ್ತಿದೆ. ಸರ್ಕಾರ, ಮಠ, ಅಧಿಕಾರಶಾಹಿ ಈ ಎಲ್ಲವೂ ಮುಖ್ಯ. ಆದರೆ ಈ ಎಲ್ಲವುಗಳ ಪಾತ್ರ ನಿಷ್ಕರ್ಷೆ ಮತ್ತಷ್ಟು ಮರುವ್ಯಾಖ್ಯೆಗಳನ್ನು ಬೇಡುತ್ತದೆ. ಎಲ್ಲರನ್ನು ತೆಕ್ಕೆಗೆ ತೆಗೆದುಕೊಳ್ಳಬೇಕು ಅಂದಾಗ, ಪರಿಷತ್ತೇ ಮತ್ತೊಬ್ಬರ ತೆಕ್ಕೆಗೆ ಹೋಗದಂತೆ ಎಚ್ಚರವಹಿಸಬೇಕಾದ್ದೂ ಮುಖ್ಯವಾದದ್ದು. ಪ್ರಬಲವಾದ 'ಇಚ್ಛಾಶಕ್ತಿ'ಯನ್ನು ಇದು ಬೇಡುತ್ತದೆ. ಈ ಎಲ್ಲ ಮಂದಿ ಪರಿಷತ್ತಿನ ಮೇಲೆ ಸವಾರಿ ಮಾಡದಂತೆ; ಪರಿಷತ್ತೇ ಈ ಎಲ್ಲರ ಮೇಲೆ ಸವಾರಿ ಮಾಡುವಂತಾದರೆ ಎಷ್ಟು ಚೆನ್ನ! ಆದರೆ ಅದು ಸಾಧ್ಯವೇ? ಎಂಬ ಅನುಮಾನ ಕಾಡಿದೆ. ಪರಿಷತ್ತಿನ ಹಿನ್ನೆಲೆಯಲ್ಲಿ ೬ ಕೋಟಿ ಕನ್ನಡಿಗರಿದ್ದಾರೆ ಎಂಬುದೇ ಮನಃಸ್ಥೈರ್ಯ ತುಂಬುತ್ತದೆ. ಸರ್ಕಾರ ಅಧಿಕಾರಶಾಹಿಗಳ ಜೊತೆಗಿನ ಸಂಬಂಧ ಒಂದು ತೆರನಾದರೆ, ಮಠಮಾನ್ಯತೆಗಳೊಂದಿಗಿನ ಸಂಬಂಧ ಮತ್ತೊಂದು ತೆರನಾದದ್ದು. ಸರ್ಕಾರ – ಅಧಿಕಾರಶಾಹಿಗಳ ಪಾಲ್ಗೊಳ್ಳುವಿಕೆ ಸಹಜವಷ್ಟೇ ಅಲ್ಲ, ಅವರ ಕರ್ತವ್ಯ ಕೂಡ.

೫. ನಾಡು – ನುಡಿಯ ಕಾರ್ಯಕ್ರಮಗಳ ವಿಸ್ತರಣೆಗೆ ತಾಲ್ಲೂಕು – ಹೋಬಳಿ ಘಟಕಗಳ ಜೊತೆಗಿನ ಸಂಬಂಧ ಉಪಯುಕ್ತವಾದದ್ದೆ. ಆದರೆ, ಅವುಗಳಿಗೆ ಸಾಂಸ್ಥಿಕ ರೂಪಕೊಡುವ ಬಗ್ಗೆ ಯೋಚಿಸಬೇಕು. ಪ್ರಸ್ತುತ ತಾಲ್ಲೂಕು ಘಟಕಗಳವರೆಗೂ ಪರಿಷತ್ ತನ್ನ ಸಾಂಸ್ಥಿಕ ಚೌಕಟ್ಟುಗಳನ್ನು ರೂಪಿಸಿಕೊಂಡಿದೆ. ಬಹುಶಃ ಇಷ್ಟು ಸಾಕು.

ಕೇಂದ್ರ – ಜಿಲ್ಲೆ – ತಾಲ್ಲೂಕು ಘಟಕಗಳ ನಿರಂತರ ಸಮನ್ವಯ ಹಾಗೂ ಅನುಸಂಧಾನ ನಡೆಯುತ್ತಿದೆ. ಜಿಲ್ಲಾ ಅಧ್ಯಕ್ಷರ ಮರ್ಜಿಯಲ್ಲೇ ತಾಲ್ಲೂಕು ಘಟಕಗಳು ನಡೆಯಬೇಕಿದೆ. ಕಾರಣ ಸ್ಪಷ್ಟ, ಪ್ರಸ್ತುತ ಅಧ್ಯಕ್ಷರಿಂದಲೇ ತಾಲ್ಲೂಕು ಅಧ್ಯಕ್ಷರು ನಾಮಕರಣಗೊಳ್ಳುತ್ತಾರೆ. ತಾಲ್ಲೂಕು ಘಟಕಗಳಿಗೂ ನೇರ ಚುನಾವಣೆ ಮಾಡುವ ಕುರಿತು ಯೋಚಿಸಬೇಕಾದ ಅಗತ್ಯವಿದೆ. ಸಾಧಕ – ಬಾಧಕಗಳ ಚರ್ಚೆ ಆಗಬೇಕು.

೬. ಸಾಹಿತ್ಯ ಪರಿಷತ್ತಿನಲ್ಲಿ ಆಗಿರಬಹುದಾದ ಲೋಪಗಳು ಎನ್ನುವುದಕ್ಕಿಂತ ಯೋಜನೆಯ ರೂಪಿಸುವಿಕೆ ಮತ್ತು ಅನುಷ್ಠಾನದಲ್ಲಿ ಆದ 'ಮಿತಿ'ಗಳು ಎಂದರೆ ಒಳಿತು. ಯಾವುದೇ ಅಧ್ಯಕ್ಷರ ಅವಧಿಯಲ್ಲಿ ಆಗಿರಬಹುದಾದ ಲೋಪಗಳು – ಮಿತಿಗಳು – ಉದ್ದೇಶಪೂರ್ವಕವಾದವುಗಳಲ್ಲ.

ಮುಖ್ಯವಾಗಿ 'ಸಮ್ಮೇಳನಗಳ' ಯೋಜನೆಯೇ ಅಧ್ಯಕ್ಷರಿಗೆ 'ಹೊರೆ' ಎನಿಸುತ್ತದೆ. ವಾರ್ಷಿಕ ಸಮ್ಮೇಳನಗಳ ತಯಾರಿಗೆ ೬ ತಿಂಗಳು, ಅದರ ಲೆಕ್ಕಪತ್ರಗಳ ಮುಕ್ತಾಯಕ್ಕೆ ೩ ತಿಂಗಳು. ಇದು ಬದಲಾಗಬೇಕು. ಸಮ್ಮೇಳನದ ಉಸ್ತುವಾರಿಗೆ ಒಂದು ಉಪಸಮಿತಿ ಇದ್ದರೆ ಹೇಗೆ? ಅಧ್ಯಕ್ಷರು – ಕಾರ್ಯಕಾರಿ ಸಮಿತಿ ಉಳಿಕೆ ಕನ್ನಡಪರ ಚಟುವಟಿಕೆಗಳಿಗೆ ಶ್ರಮ – ಕಾಲವನ್ನು ಮೀಸಲಿಡಬಹುದು.

೭. ಪರಿಷತ್ತಿನ ಧ್ಯೇಯ ಧೋರಣೆಗಳಲ್ಲಿ ಬದಲಾವಣೆ ಅಗತ್ಯ. ನುಡಿಯ ಜೊತೆಗೆ ನೆಲ – ಜಲದ ಸಮಸ್ಯೆಗಳನ್ನು ಪ್ರಧಾನವಾಗಿ ಕೈಗೊಳ್ಳಬೇಕು. ಶಿಕ್ಷಣ ಕ್ಷೇತ್ರದಲ್ಲಿ ವಿಜ್ಞಾನ ಶಿಕ್ಷಣವನ್ನು ಮಾಧ್ಯಮವಾಗಿ ಮಾಡಲು ಇರುವ ಅಡ್ಡಿಗಳನ್ನು ಪರಿಷತ್ತು ನಿವಾರಿಸಬೇಕು. ಪುಸ್ತಕಗಳು ಬೋಧನೆ – ಪಾರಿಭಾಷಿಕ ಶಬ್ದಕೋಶಗಳು ಇತ್ಯಾದಿ ಅಂಶಗಳ ಕಡೆ ಪರಿಷತ್ತು ಗಮನ ಹರಿಸಬೇಕು. ವೈದ್ಯಕೀಯ, ತಾಂತ್ರಿಕ ಶಿಕ್ಷಣದಲ್ಲೂ ಕನ್ನಡಕ್ಕೆ ಸ್ಥಾನ ಕಲ್ಪಿಸಲು ಪರಿಷತ್ತು ಪ್ರಯತ್ನಿಸಬೇಕು. ಇಂಗ್ಲಿಷ್ ಈಗಾಗಲೇ ಇದೆ.

ವ್ಯಾವಹಾರಿಕ ನೆಲೆಯಲ್ಲಾದರೂ ಕನ್ನಡ ಭಾಷೆ ತಾಂತ್ರಿಕ ಶಿಕ್ಷಣದ ಪಠ್ಯ ಕ್ರಮದಲ್ಲಿ ಸ್ಥಾನ ಪಡೆಯುವಂತಾಗಬೇಕು. ಆದರ್ಶ – ಕಾರ್ಯಸಾಧ್ಯ ಎಂಬ ಶಬ್ದಗಳೇ ವೈರುಧ್ಯವಲ್ಲವೇ? ಹೌದಾದರೂ, ಈ ದಿಕ್ಕಿನಲ್ಲಿ ಗಂಭೀರ ಚಿಂತನ ಅಗತ್ಯ. ಕಾರ್ಯಸಾಧ್ಯವಲ್ಲದ್ದು ಎಷ್ಟೇ ಚೆನ್ನವಿದ್ದರೂ ಆದರ್ಶ ವಾಗಲಾರದು. ಆದರ್ಶ – ಮೂಲತಃ ತಾತ್ವಿಕವಾದದ್ದಾದರೂ ಅನುಷ್ಠಾನ ಗೊಳ್ಳಬೇಕು. ಯಾವತ್ತೂ 'ಆದರ್ಶ' ಕಲ್ಪಿತ ಯೋಜಿತ ಆಯಾಮದ್ದೇ ಆಗಿದ್ದು, ಇದು ಕೇವಲ ಸೈದ್ಧಾಂತಿಕ, ಪ್ರಾಯೋಗಿಕವಾಗಿ ಸಾಧ್ಯವಿಲ್ಲದ್ದು ಎಂದೇ ಕೈಚೆಲ್ಲಿಬಿಡುತ್ತೇವೆ. ಸಮ್ಮೇಳನಗಳ ಆಯೋಜನೆಯಲ್ಲಿ ಆದರ್ಶಗಳ ಬೆನ್ನುಹತ್ತುವ ಕಾರ್ಯಕ್ಕೆ ಕಾಲ ಕೂಡಿಬಂದಿದೆ ಎಂದು ಭಾವಿಸುತ್ತೇನೆ.

ಕೃಷಿಕ, ಚಮ್ಮಾರ, ಬಡಗಿ, ನೇಕಾರರಂಥವರು, ಅನಕ್ಷರಸ್ಥರಾದರೂ, ಸಮ್ಮೇಳನದ ವೇದಿಕೆಯಲ್ಲಿ ಮಾತನಾಡುವ ಅವಕಾಶ ಒದಗಿಬರಬೇಕು. ಏಕೆ ಅಂತೀರಾ? ಭಾಷೆಯನ್ನು ಉಳಿಸಿ – ಬೆಳೆಸುತ್ತಿರುವವರಲ್ಲಿ ಇವರದ್ದೇ ಅಗ್ರಪಾತ್ರ. ಸಾಹಿತ್ಯ – ಕಾವ್ಯದ ಸೃಷ್ಟಿಗೆ ಇಂಥವರು ಆಕರ – ಸಾಮಗ್ರಿಗಳಾಗುವುದಾದರೆ, ಸಮ್ಮೇಳನದಲ್ಲಿ ನಿರೂಪಣೆ ಏಕಾಗಬಾರದು? ಈ ದಿಸೆಯಲ್ಲಿ ಯೋಚಿಸುವಂತಾಗಬೇಕು.

೮. ಇದುವರೆಗೆ ಚರ್ಚಿಸಿರುವ ವಿಷಯಗಳು ವೈಯಕ್ತಿಕವಾಗಿ ನನ್ನ ದೃಷ್ಟಿಕೋನ ಗಳನ್ನು ಅನಾವರಣಗೊಳಿಸಿವೆ. ಪರಿಷತ್ತನ್ನು ಕಟ್ಟಕಡೆಯ ವ್ಯಕ್ತಿಯವರೆಗೆ ಕೊಂಡೊಯ್ಯಬೇಕೆನ್ನುವುದು ಮುಖ್ಯವಾದದ್ದು.

ಸರ್ಕಾರ – ರಾಜಕೀಯ ಪಕ್ಷಗಳು ಪರಿಷತ್ತಿನ 'ದನಿ'ಯನ್ನು ಗಂಭೀರವಾಗಿ ಪರಿಗಣಿಸುವಂತೆ ಮಾಡಬೇಕು. ಒಂದೆಡೆ ದನಿ ಗಟ್ಟಿಯಾಗಬೇಕು. ಮತ್ತೊಂದೆಡೆ, ಅನುಸಂಧಾನದ ಪ್ರಕ್ರಿಯೆಯೂ ನಡೆಯಬೇಕು.

ಪರಿಷತ್ತನ್ನು ಸಾಹಿತ್ಯಿಕ ಪರಿಧಿಯಿಂದ ಭಾಷಿಕ – ಸಾಂಸ್ಕೃತಿಕ ವಲಯಕ್ಕೆ ಜಿಗಿತಗೊಳಿಸಬೇಕೆಂಬ ಹಂಬಲ ನನ್ನದು. ಕನ್ನಡಿಗರಲ್ಲಿ ತಲ್ಲಣ – ತಳಮಳಗಳನ್ನು ಸೃಷ್ಟಿಸುತ್ತಿರುವ ವರ್ತಮಾನದ ಸಮಸ್ಯೆಗಳ ಪರಿಹಾರದಲ್ಲಿ ಪರಿಷತ್ತು ಕಾರ್ಯೋನ್ಮುಖವಾಗಬೇಕು. ಬಹುರಾಷ್ಟ್ರೀಯ ಕಂಪನಿಗಳಲ್ಲಿ ಕನ್ನಡಿಗರಿಗೆ ಉದ್ಯೋಗ ಖಾತ್ರಿ ಯೋಜನೆ ಜಾರಿಯಾಗಬೇಕು. ಈ ನಿಟ್ಟಿನಲ್ಲಿ ಪರಿಷತ್ತು 'ಒತ್ತಡ ತಂತ್ರ'ದ ಕಾರ್ಯತಂತ್ರವನ್ನು ರೂಪಿಸಬೇಕು.

೯. ಸಮ್ಮೇಳನಗಳಲ್ಲಿ ತೆಗೆದುಕೊಳ್ಳುವ ನಿರ್ಣಯಗಳು 'ಔಪಚಾರಿಕ' ಆಗಿಬಿಟ್ಟಿವೆ. ಸರ್ಕಾರದ ಪ್ರತಿನಿಧಿಯನ್ನೊಳಗೊಂಡ ೫ ಜನರ ಸಮಿತಿ, ನಿರ್ಣಯಗಳ ಅನುಷ್ಠಾನದ ಉಪಕ್ರಮಗಳನ್ನು ರೂಪಿಸಿ, ಜಾರಿಗೊಳಿಸಲು ಮುಂದಾಗುವ ಪ್ರಯತ್ನಗಳಾಗಬೇಕು. ಸಾಹಿತ್ಯ ಪರಿಷತ್ತು ಚಾರಿತ್ರಿಕ ಹಿನ್ನೆಲೆಯ, ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆ. ಕನ್ನಡ ನಾಡಿನಾದ್ಯಂತ ವ್ಯಾಪಕತೆ ಹೊಂದಿದ್ದು ತನ್ನದೇ ಮಹತ್ವ ಪಡೆದುಕೊಂಡಿದೆ. ಕಳೆದ ಸಾರಿಯೂ ಅಧ್ಯಕ್ಷ ಹುದ್ದೆಗೆ ಸ್ಪರ್ಧಿಸಿದ್ದೆ. ಈ ಬಾರಿಯೂ ಸ್ಪರ್ಧಿಸಲಿದ್ದೇನೆ. ಮಂಡ್ಯದಲ್ಲಿ ಗೆಳೆಯರ ಬಳಗ, ಜನ – ದನಿ ಸಂಸ್ಥೆಗಳನ್ನು ಸ್ಥಾಪಿಸಿ ರಂಗಭೂಮಿ – ಸಾಹಿತ್ಯ – ಕಲೆಗೆ ಸಂಬಂಧಿಸಿದಂತೆ ನಾಡು ಗಮನಿಸುವಂತೆ ಕೆಲಸ ಮಾಡಿದ್ದೇನೆ. ಕಳೆದ ಒಂದು ದಶಕದಿಂದ ಮಂಡ್ಯದ ಕರ್ನಾಟಕ ಸಂಘದ ಸಾರಥ್ಯ ವಹಿಸಿಕೊಂಡು, ಸಂಘವನ್ನು ಉಚ್ಛ್ರಾಯ ಸ್ಥಿತಿಗೆ ಕೊಂಡೊಯ್ದಿದ್ದೇನೆ. ಕಾರ್ಯಕ್ರಮಗಳಲ್ಲಿ ದತ್ತಿನಿಧಿ, ನಾಟಕ ಮುಂತಾದ ನೆಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದೇನೆ. ನಾಡಿನಾದ್ಯಂತ ಪ್ರವಾಸ ಮಾಡಿ ಅಭಿಪ್ರಾಯ ರೂಪಿಸುತ್ತಿದ್ದೇನೆ. ಕನ್ನಡದ ತೇರನ್ನು ಎಳೆಯುವ ಕಾರ್ಯಕ್ಕೆ ಎಲ್ಲರ ಬೆಂಬಲ ಅಪೇಕ್ಷಿಸುತ್ತೇನೆ.

**ಪ್ರೊ॥ ಜಯಪ್ರಕಾಶ ಗೌಡ**
ಅಧ್ಯಕ್ಷರು, ಕರ್ನಾಟಕ ಸಂಘ, ಮಂಡ್ಯ

ಮಹಾನಗರಿಯ ತೆಕ್ಕೆಯಲ್ಲಿ ನನ್ನನ್ನು ನೇರಿಳೆ ಮರ ಕಾಡುತ್ತಿರುವುದಕ್ಕೆ ಕಾರಣವಿದೆ. ಹೋದ ವರ್ಷ ನನ್ನ ವಾಸ್ತವ್ಯ ಬದಲಾಯಿಸಿದಾಗ ಪಕ್ಕದ ಮನೆಯ ಕಂಪೌಂಡಿನಲ್ಲಿ ಒಂದು ಬೃಹತ್ ನೇರಿಳೆ ಮರ ಇರುವುದನ್ನು ಗಮನಿಸಿದ್ದೆ. ಆದರೆ ನನ್ನ ಮನೆಯಾಕೆಗೆ ಅದು ಇಷ್ಟೊಂದು ತೊಂದರೆ ಕೊಡುತ್ತದೆ ಎಂದುಕೊಂಡಿರಲಿಲ್ಲ. ಈ ಸಾರಿ ಸಮೃದ್ಧವಾಗಿ ಹಣ್ಣು ಬಿಟ್ಟದ್ದಕ್ಕೇನೋ ನಾನಾ ಬಗೆಯ ಅತಿಥಿಗಳು ನಾವು ಹಣ್ಣು ಕೀಳುವ ಮೊದಲೇ ಆ ಮರಕ್ಕೆ ಲಗ್ಗೆಯಿಟ್ಟು ತಮ್ಮ ಬರುವಿಕೆಯನ್ನು ಸಾರುತ್ತಿದ್ದವು. ಅಷ್ಟೇ ಅಲ್ಲ ಕಳಿತ ನೇರಿಳೆ ಹಣ್ಣನ್ನು ಕುಕ್ಕಿ ಉದುರಿಸುತ್ತಿದ್ದವು. ಕೆಲವೊಮ್ಮೆ ಜೋರಾಗಿ ಬೀಸಿದ ಗಾಳಿಗೂ ಪಟಪಟನೇ ಉದುರಿ ನಮ್ಮ ಮನೆಯ ಗೋಡೆ, ನೇತು ಹಾಕಿ ಹರಡಿದ್ದ ಬಿಳಿ ಬಟ್ಟೆಗಳ ಮೇಲೆಲ್ಲ ಬಿದ್ದು ರಕ್ತದ ಕಲೆಗಳಂತೆ ಗುರುತು ಮಾಡುತ್ತಿದ್ದದ್ದು ಒಂದು ತಲೆನೋವೇನೋ ಸರಿ. ನನಗೋ ಬಾಲ್ಯದಲ್ಲಿ ನೇರಿಳೆ ಹಣ್ಣನ್ನು ಸೀಕಾಬಿಟ್ಟಿ ಮೆದ್ದ ನೆನಪನ್ನು ಮೆಲುಕು ಹಾಕಲು ಇದು ಕಾರಣೀಭೂತವಾಗಿ ನನಗೆ ಒಂದು ಪ್ರಬಂಧ ಬರೆಯಲು ಹಚ್ಚಿದ್ದು ಸುಳ್ಳಲ್ಲ.

'ಫಾರ್ ದಿ ಫಸ್ಟ್ ಟೈಮ್ ಇನ್ ಇಂಡಿಯಾ' ನನ್ನ ಕುತೂಹಲ ಕೆರಳಿಸಿತ್ತು ಮಾತ್ರವಲ್ಲ ಸಿಟ್ಟೂ ತರಿಸಿತ್ತು. ಏನಿದು ಹಾಗಾದರೆ ಒಗಟೆ? ಎಂದು ಅಲವತ್ತುಕೊಳ್ಳುವ ಮೊದಲೇ ಹೇಳಿಬಿಡುತ್ತೇನೆ. ಕಳೆದ ವರ್ಷ ನಗರದ ಆಯಕಟ್ಟಿನ ಜಾಗೆಗಳಲ್ಲಿ ಜಡಿದಿದ್ದ ಜಾಹೀರಾತು ಫಲಕದ ಒಕ್ಕಣೆ – 'ಭಾರತದಲ್ಲಿ ಇದೇ ಪ್ರಥಮ ಬಾರಿಗೆ ಪರಿಚಯಿಸುತ್ತಿದ್ದೇವೆ. ಅಪ್ಪಣೆಯಾದರೆ, ನಿಮ್ಮ ಮನೆಬಾಗಿಲಿಗೇ ಫಳಫಳ ಹೊಳೆಯುವ ಜಾಮೂನುಗಳನ್ನು ತಲುಪಿಸಲು ತುದಿಗಾಲ ಮೇಲೆ ನಿಂತಿದ್ದೇವೆ. ಸಕ್ಕರೆ ಖಾಯಿಲೆಯ ಹೃದ್ರೋಗಿಗಳಿಗೆ ಇದು ದಿವ್ಯೌಷಧಿ...' ಇದಕ್ಕಿಂತ ಇನ್ನೇನು ಬೇಕು. ನಮ್ಮ ನಗರವಾಸಿಗಳನ್ನು ಬಡಿದೆಬ್ಬಿಸುವುದಕ್ಕೆ? 'ಅಲೇ ಇವನಾ, ತತ್ತಾ ಹಂಗಾರ ಯಾಡು ಕೇಜಿ. ಭಾಳಾ ಅಂದ್ರ ಸಾವರ ರೂಪಾಯಿ ಪೀಕಿದರಾಯ್ತು – ತಂದುಕೊಡುವ ಖರ್ಚೂ ಸೇರಿಸಿ.' ಟೆಕ್ಕಿಗಳಿಗೆ ಸಾವಿರಗಳು ಯಾವ ಲೆಖ್ಖ, ಪೈಸೆಗಳು ಇದ್ದಂತೆ, ಪೈಸೆಗಳು!

'ಜಾಮೂನು' ಎಂದ ತಕ್ಷಣ ಐವತ್ತು ವರ್ಷದ ಕೆಳಗೆ ನಡೆದ ನಮ್ಮ ಕೊಪ್ಪಳ ಸಿದ್ದನ ಐನಾತಿ ಪ್ರಕರಣವೊಂದು ಮನಸ್ಸಿನೊಳಗೇ ಗುದ್ದಿಕೊಂಡು ಬರುತ್ತದೆ. ಅದನ್ನೇ 'ಜಾಮೂನಿಗೆ ಜಾಮೀನು ಯಾರು'? ಎಂಬ ಶೀರ್ಷಿಕೆಯಲ್ಲಿ ಪತ್ರಿಕೆಗೆ ಬರೆದು ನಾಕು ವರ್ಷ ಆತನಿಂದ ಟೂ ಬಿಡಿಸಿಕೊಂಡಿದ್ದು ಹಳೆಯ ಕತೆ. ಹಾಗೊಂದು ದಿನ ಊರವರ ಮದುವೆ ದಿಬ್ಬಣದ ಜತೆ ಲಾರಿ ಏರಿ ಕೊಪ್ಪಳಕ್ಕೆ ಬಂದಿಳಿದಿದ್ದ ಸಿದ್ದಪ್ಪ, ಮಹಾ ತಿನಿಸಲುಮಾರಿ. ನಮ್ಮ ಬಿಸಿಲ ಸೀಮೆಯ ಹುಡುಗರಿಗೆ ಪ್ರಚಂಡ ಹಸಿವು. ನಮಗಾಗ ಕಲ್ಲುತಿಂದು ಕಲ್ಲು ಅರಗಿಸಿಕೊಳ್ಳುವ ವಯಸ್ಸು ಬೇರೆ. ಆಹೇರಿ(ಮುಯ್ಯಿ)ಗೆಂದು ಎರಡು ರೂಪಾಯಿ ನೋಟು + ಖರ್ಚಿಗೆ ಎಂಟಾಣೆ ನಾಣ್ಯದ ಗಟ್ಟಿಯನ್ನು ಕರವಸ್ತ್ರದ ಚುಂಗಿನಲ್ಲಿ ಗಂಟು ಹಾಕಿಕೊಂಡು ಬಿಳಿ ಪೈಜಾಮಿನ ಆಳವಾದ ಜೋಬಿನಲ್ಲಿ ಜೋಪಾನವಾಗಿಟ್ಟುಕೊಂಡು ಬಂದಿದ್ದ. ಅಕ್ಕಿ ಕಾಳು ಬಿದ್ದು, ಎಲೆ ಮುದುರೆತ್ತಿ, ಲಾರಿ ಹತ್ತಿ ಕುಳಿತು – ಮರಳಿ ಊರಿಗೆ ಹೋಗಲು ಸಾಕಷ್ಟು ಸಮಯವಿದ್ದುದರಿಂದಾಗಿ, ಮುಯ್ಯಿ ಪಟ್ಟಿ ಬರೆಸಲು ಆ ಎರಡ್ರುಪಾಯಿ ಪರಿಚಿತರ ಕೈಗಿತ್ತು, ಯಾರನ್ನೂ ಜೊತೆಗೆ ಹಾಕಿಕೊಳ್ಳದೆ, ನಗರಾವಲೋಕನ ಮಾಡಲು ಹೊರಟಿತ್ತು ಏಕಮೇವಾದ್ವಿತೀಯ ಪುರುಷಸಿಂಹ – ನಮ್ಮ ಕೊಪ್ಪಳ ಸಿದ್ದ. ಅಲ್ಲಿ, ಇಲ್ಲಿ ಅಂಡಲೆದು, ಬಳಲಿ ಬೆಂಡಾಗಿ ನಗರದ ಸರ್ಕಲ್ಲಿನಲ್ಲಿ ಉಡುಪಿ ಹೋಟೇಲಿನ ಮುಂದೆ ಬರುವ ಹೊತ್ತಿಗೆ ಹೊರಗೆ ಕಪ್ಪು ಹಲಗೆಯಲ್ಲಿ ಬರೆದಿದ್ದ ಅಂದಿನ ವಿಶೇಷಗಳು ಬಾಯಲ್ಲಿ ಬುಳುಬುಳು ನೀರು ತರಿಸಿದ್ದವು. ಒಳ ನುಗ್ಗಿದವನೇ ಜಾಮೂನಿಗೆ ಆದೇಶವಿತ್ತ. ನಂತರ ಮಸಾಲೆದೋಸೆಗೆ ಹಾಗೆಯೇ ಖಡಕ್ ಟೀಗೆ.

# ನೀರಲ ಹಣ್ಣೆಂಬೊ ಕೃಷ್ಣ ಸುಂದರಿಯ ನೆನೆದು

ಈರಪ್ಪ ಎಂ. ಕಂಬಳಿ



ಆಗಿನ್ನೂ ಸೋವಿ ಕಾಲ. ರೂಪಾಯಿಗೆ ಎಂಟು ಸೇರು ಜೋಳ ಅಳೆಯುತ್ತಿದ್ದರು.

ಅದಿರಲಿ, ಇಡ್ಲಿ–ದೋಸೆ–ಸಿರಾ–ಜಾಮೂನುಗಳು ನಮ್ಮ ಪ್ರದೇಶಕ್ಕೆ ಹೊಸ ಪರಿಚಯದ ಐಟಂಗಳು. ಆಗಿನ್ನೂ ಕೇಳಬೇಕೆ? ವಲಸೆ ಬಂದ ಉಡುಪಿ ಕಡೆಯ ಹೊಟೇಲಿನವರೇ ಅವನ್ನು ಮೊದಲು ತಂದದ್ದು. ಆ ಮೊದಲು ನಮ್ಮ ಟೀ ಕಾಫಿ ಕ್ಲಬ್ಬುಗಳಲ್ಲಿ ಬರೀ ಉಪ್ಪಿಟ್ಟು, ಪುರೇವು, ತೋಯಿಸಿದ ಮಂಡಾಳು ಒಗ್ಗರಣೆ, ಮಿರ್ಚಿಗಳೇ ನಮ್ಮನ್ನಾಳುತ್ತಿದ್ದವು, ಆಗ. ಹೀಗಿದ್ದಾಗ ಉಡುಪಿ ಹೊಟೇಲು, ನಮ್ಮ ಸಿದ್ದಪ್ಪನನ್ನೂ ಆಕರ್ಷಿಸಿದ್ದರಲ್ಲಿ ಅಚ್ಚರಿಯೇನಿಲ್ಲ. ಸಾಂಗೋಪಾಂಗವಾಗಿ ಮೇಯ್ದಾದ ಬಳಿಕ ನಿಧಾನವಾಗಿ ಎದ್ದು ಸಂತೃಪ್ತಿಯಲ್ಲಿ ಬೀಗುತ್ತ, ಗಲ್ಲೆ ಟೇಬಲ್ಲಿನ ಮುಂದೆ ಬಂದು ನಿಂತ ಸಿದ್ದಣ್ಣ, ಜೋಪಾನವಾಗಿ ಹಾವಿನ ಮರಿಯನ್ನು ಹೊರ ತೆಗೆಯುವಂತೆಯೇ ಪೈಜಾಮಿನ ದೊಡ್ಡ ಸೈಡು ಜೇಬಿನಲ್ಲಿ ಮುದುರಿ ಮಲಗಿದ್ದ ಕರವಸ್ತ್ರವನ್ನು ಹೊರಗೆಳೆದ. ಯಾಕೆಂದರೆ, ಅದರ ಮಡಿಕೆಯಲ್ಲಿ ಅಡಗಿದ್ದ ಎಂಟಾಣೆ ನಾಣ್ಯವೇನಾದರೂ ಕೆಳಗೆ ಬಿದ್ದು ತಣ್ಣನೆ ಕೈಗೆ ಸಿಗದಂತೆ ಉರುಳಿ ಓಡಿದರೆ ಗತಿಯೇನು ಎನ್ನುವ ಎಚ್ಚರಿಕೆ. ಕರವಸ್ತ್ರ ಬಿಡಿಸಿ ನೋಡಿದರೆ, ಅದೇನು ಮಾಯವೋ? ಅಂದುಕೊಂಡಂತೇ ಆಗಿತ್ತು. ಕರ್ಚೀಪು ಕೊಡವಿದರೂ ಎಂಟಾಣೆಯ ಪತ್ತೆಯಿಲ್ಲ. ಗಾಬರಿಯಾಯಿತು. ಬೋಳು ತಲೆಯ ನೆಹರು ಮುದ್ರೆಯಿತ್ತು ಅದರ ಮೇಲೆ. ಸರ್ವವಸ್ತು ಭಂಡಾರವಾಗಿದ್ದ ಜೇಬನ್ನು ತಡಕಿ ತಡಕಿ ಹುಡುಕಲಾರಂಭಿಸಿದ್ದ. 'ಎಂಟಾಣೆಯಿತ್ತು. ಎಂಟಾಣೆಯಿತ್ತು' ಎಂಬ ಗಾಯಿತ್ರಿ ಮಂತ್ರ ಉಲಿಯುತ್ತಲೇ ಇದ್ದ. ಆ ಕಾಲದಲ್ಲಿ ಅರ್ಧ ರುಪಾಯಿಗೂ ಅಷ್ಟೊಂದು ಕೊಳ್ಳುವ ಶಕ್ತಿಯಿತ್ತು.

ಕಾಸು ಇರುವುದನ್ನು ಖಾತ್ರಿ ಮಾಡಿಕೊಂಡೇ ಪ್ರವೇಶ ಮಾಡಬೇಕಿತ್ತು ಎನ್ನುವುದು ಹೊಟೇಲಿನವನ ವಾದ. ಪರಸ್ಥಳ–ಪ್ರಾಣ ಸಂಕಟ. ತನ್ನ ಊರಾಗಿದ್ದರೆ ಎರಡು ಮಿನಿಟಿನಲ್ಲಿ ಮನೆಗೋಡಿ ಹೋಗಿ ಬಂದು ತಂದು ಕೊಡುತ್ತೇನೆಂದು ಜಬರ್ದಸ್ತಾಗಿ ಹೇಳಿ ಹೊರಬರಬಹುದಿತ್ತು. ಗುರುತು–ಖೂನ ಇಲ್ಲದ ಹುಡುಗನನ್ನು ಹೋಗಗೊಟ್ಟಾರೆಯೆ ಹೊಟೇಲಿನವರು. ಅಲ್ಲೇ ಇದ್ದ ಎದುರು ಕುರ್ಚಿಯಲ್ಲಿ ಕುಕ್ಕರಬಡಿಯಲು ಹೇಳಿದರು. ತನ್ನ ಊರಿನ ಗುರುತಿನವರು ಯಾರಾದರೂ ಅದೇ ರಸ್ತೆ ಗುಂಟ ಅಚಾನಕ್ ಬರುವರೇನೋ ಎಂಬ ಧಾವಂತದಲ್ಲಿ ರಸ್ತೆಯಲ್ಲಿ ಕಣ್ಣು ನೆಟ್ಟವಾಗಿ ಕುರ್ಚಿಗೆ ಕಟ್ಟಿ ಹಾಕಿದ್ದವನಂತೆ ಕೂತೇ ಇದ್ದ. ಬಾಯಿಸತ್ತ ಸಿದ್ದ.

ಹೊತ್ತು ಹೊರಳಿತು. ದಾರಿ ನೋಡೀ ನೋಡೀ ಕಣ್ಣು ಗುಡ್ಡೆಗಳು ಒಡೆದು ಹೋಗುವಂತೆ ನೋಯಲಾರಂಭಿಸಿದ್ದವು. ಈಗಿನಂತೆ ಆಗ ಸಂಪರ್ಕ ಸಾಧನಗಳೂ ಇರಲಿಲ್ಲ. ಅರಿಯದ ಊರು ಬೇರೆ. ಏನು ಮಾಡುವುದೋ ಎಂಬ ದಿಗಿಲಲ್ಲಿ ಕೂತೇ ಇತ್ತು ಸಿದ್ದಪ್ಪ ಸಿಡಿಲು ಬಡಿದ ಮರದಂತೆ. ತನ್ನ ಊರಲ್ಲಿ ಕಬಡ್ಡಿ ಟೀಮಿನ ನಾಯಕ ಇಲ್ಲಿ ಬೆಪ್ಪನಂತೆ ಕೂರಬೇಕಾಗಿತ್ತು. ಚೆಂಬಿಸ್ತ್ರೀ ಮಾಡಿಕೊಂಡು ತೊಟ್ಟಿದ್ದ ಬಿಳಿ ಪೈಜಾಮ ಈಗ ಬೆವರಿನಲ್ಲಿ ಒದ್ದೆ–ಮುದ್ದೆ. ದಿಬ್ಬಣದ ಮಂದಿ, ಊಟ ತೀರಿಸಿಕೊಂಡು ಲಾರಿ ಹತ್ತುವ ವೇಳೆಗೆ ಸಿದ್ದ ಕಾಣುತ್ತಿಲ್ಲವಲ್ಲ ಎಂದು ಓಣಿಯ ಮುದುಕನೊಬ್ಬ ನೆನಪಿಸಿದ್ದ. ಆಗ ಹತ್ತಾರು ಜನ ಎರಡು ಮೂರು ತಂಡಗಳಲ್ಲಿ ನಮ್ಮ ನಾಯಕನನ್ನು ಹುಡುಕಲು ನಗರದ ಪ್ರಮುಖ ರಸ್ತೆಗಿಳಿದರು. ನೋಡನೋಡುತ್ತಿದ್ದಂತೆ, ಅದೇ ರಸ್ತೆಯಲ್ಲಿ ಅವಸರದಲ್ಲಿ ಹೋಗುತ್ತಿದ್ದವರು ಇವನ ಕಣ್ಣಿಗೆ ಬಿದ್ದೊಡನೇ ಗಾಡಿಯಿಂದ ಚೆಂಗನೆ ಜಿಗಿದ ನಾಯಿಯಂತೆ ಓಡಿದವನೇ ಅವರ ಶರಟು ಹಿಡಿದು ಎಳೆದು, 'ಹಿಂಗಿಂಗೇ' ಎಂದು ವಿವರಿಸಿದ್ದ. ಅವರು ಹೊಟೇಲಿಗೆ ಬಂದು ಎಂಟಾಣೆ ಬಿಲ್ಲು ತೆತ್ತು ಕರೆದುಕೊಂಡು ನಡೆದಿದ್ದರು. ನಮ್ಮೂರಿನ ಹುಲಿ ಈಗ ಬಿಲದಿಂದ ಹೊರಬಿದ್ದ ಇಲಿಯಂತೆ. ತಲೆತಗ್ಗಿಸಿಕೊಂಡು ಹಿಂಬಾಲಿಸಿತ್ತು. ಎಲ್ಲರೆದುರು ಹಗರಣವನ್ನು ಬಣ್ಣಗಟ್ಟಿ ಹೇಳುವಾಗ, ಆಗ ಇನ್ನಷ್ಟು ಕುಗ್ಗಿ ಹೋಗಿದ್ದ. ಎಷ್ಟೇ ಆದರೂ, ಮನುಷ್ಯ ಪರಿಸ್ಥಿತಿಯ ಕೂಸಲ್ಲವೆ? ಆಣೆಗೆ ಹೋದ ಮಾನ ಏನು ಕೊಟ್ಟರೂ ಬಾರದು – ಹೊಸಗಾದೆ. ಹಲ್ಲು ಕಚ್ಚಿ ಸಹಿಸಿದ್ದ.




# ಮಾನವೀಯತೆ



ಗೆಳತಿ,
ಕುಸುರಿ ಮಾಟದ ಪ್ರಣತಿಯಲ್ಲಿ
ಪ್ರೀತಿಯೆಂಬ ತೈಲವನೆರೆದು
ಹೊಸೆದಿಟ್ಟ ಬತ್ತಿ ಹಚ್ಚಿ;
'ದೀಪ' ಬೆಳಗೋಣ ಜಗಕೆಲ್ಲ ॥
ಅಜ್ಞಾನದ ಅಂಧಕಾರಕೆ
ಸುಜ್ಞಾನದ ಸುಧೆಯ ಹರಿಸಿ
ಬೀದಿ ಮಕ್ಕಳ ಪಾಲಿಗೆ;
'ಅಕ್ಷರ'ದ ಬೆಳಕಾಗೋಣ ॥
ನೊಂದವರ ಮನಕೆ, ಬೆಂದವರ ಹೃದಯಕೆ
ಮಧುರ ಬಂಧದ ಸೇತುವಾಗಿ
ಕರುಣೆಯ ಸಿಂಚನ ಮೂಡಿಸಿ, ಅವರ;
'ಬದುಕಿ'ಗೆ ಉಲ್ಲಾಸದ ನಗುವಾಗೋಣ ॥
ಬೆವರ ಹನಿ ಸುರಿಸುವ ನೇಗಿಲ ಯೋಗಿಯ
ಎದೆಯ ದನಿಗೆ ಧ್ವನಿಯಾಗೋಣ
ಹಸಿದೊಡಲ ತುಂಬುವ ಅನ್ನದಾತನ;
'ಆತ್ಮಹತ್ಯೆ'ಯ ಸಾವ ದೂರ ಸರಿಸೋಣ ॥

**ಪ್ರೊ॥ ಗಂಗಾಂಬಿಕಾ ಅ. ಚೌಗಲಾ**
ಪ್ರಾಧ್ಯಾಪಕರು, ಕೆ. ಎಲ್. ಇ. ಸಂಸ್ಥೆ
ಜಿ. ಐ. ಬಾಗೇವಾಡಿ ಪದವಿ
ಕಾಲೇಜು, ನಿಪ್ಪಾಣಿ, ಬೆಳಗಾವಿ ಜಿಲ್ಲೆ

ತುಸು ವಿಷಯಾಂತರ ಮಾಡಿದೆನೇನೊ ಕ್ಷಮಿಸಿರಿ, ಅದು ನನ್ನ ದೌರ್ಬಲ್ಯ. ನಾನು ಹೇಳಹೊರಟಿದ್ದು ಖಂಡಿತ ನಾಗರಿಕ ಜಗತ್ತಿನ ಈ ಹಿಟ್ಟಿನ ಜಾಮೂನು ಕುರಿತು ಅಲ್ಲ. ನನ್ನೂರಿನ ದಫೇದಾರ ತೋಪು ಎಂದರೆ ನೇರಿಳೆ ಮರಗಳ ಸಮೂಹ. ಆಷಾಢದ ಎಡಬಲ ನೇರಿಳೆ ಹಣ್ಣಿನ ಸುಗ್ಗಿ. ಶಾಲೆಯ ರಜೆಗಾಗಿ ಕಾಯುವ ಜಮಾನಾ ಅಲ್ಲ ನಮ್ಮದು. ನಮಗೆ ಬೇಕೆಂದಾಗ, ಬಿಡುವು ಮಾಡಿಕೊಂಡು ನಾವೇ ಶಾಲೆಗೆ ಗುಡ್‌ಬೈ ಹೇಳುವವರು. ನಿತ್ಯದಂತೆ ಶಾಲೆಯ ಕಡೆ ಪಾದ ಬೆಳೆಸುತ್ತಿದ್ದೆವಾದರೂ ತಲೆಯಲ್ಲಿ ಒಂದು ಹುಳು ಹೊಕ್ಕಿತೆಂದರೆ ನಾವೇ ಶಾಲೆಗೆ ರಜೆ ನೀಡುವ ಸರ್ವ ಸ್ವತಂತ್ರ ಪ್ರಭುಗಳೇ ಸೈ. ಆಯಾ ಋತುಮಾನಕ್ಕನುಗುಣವಾಗಿ, ಪ್ರಕೃತಿಯೇ ಬದಲಾಗುತ್ತಿತ್ತು. ನಮಗದೇ ಬಹುದೊಡ್ಡ ಆಕರ್ಷಣೆಯಾಗಿ ಬಿಡುತ್ತಿತ್ತು. ಮಳೆಗಾಲ ಬಂತೆಂದರೆ ತುಂಬಿ ಹರಿಯುವ ಹಳ್ಳ-ಕೆರೆಗಳೇ ನಮ್ಮ ಆಡುಂಬೊಲವಾಗುತ್ತಿದ್ದವು. ಸುಗ್ಗಿಯ ಕಾಲದಲ್ಲಿ ಹೊಲಗಳು ಕಣಗಳು. ಹೀಗಾಗಿ ಶಾಲೆಯ ನಾಕು ಗೋಡೆಗಳೊಳಗಿನದಕ್ಕಿಂತ ಅನ್ಯಾದೃಶ ಹೊರ ಪ್ರಪಂಚವೇ ನಮ್ಮನ್ನು ಹೆಚ್ಚು ಆಕರ್ಷಿಸುತ್ತಿತ್ತು. ನಾವು ಪರಿಸರದ ಕೂಸುಗಳೇ ಸೈ. ಹೀಗಾಗಿ ನಮ್ಮ ಬಾಲ್ಯಕಾಲದ ಚಿತ್ರಗಳಿಗೆ ನೂರೆಂಟು ಬಣ್ಣಗಳು.

'ಕಾಡಿಗೆ ಹೋಗಿದ್ದೆ ಕಾರಿಮುಳ್ಳ ತುಳಿದಿದ್ದೆ, ನೀರಡಿಸಿ ಬಂದಿದ್ದೆ ನೀರಲಣ್ಣು ತಿಂದಿದ್ದೆ' ಇದು ಶಿಶು ಪ್ರಾಸ. ನೀರಡಿಕೆಯಾದಾಗ ನೀರಲ ಹಣ್ಣು ನೆನೆದರೂ ಸಾಕು ಬಾಯಲ್ಲಿ ಬುಳುಬುಳು ನೀರು ಉಕ್ಕುತ್ತದೆ ಎಂದರೆ ನೇರಿಳೆ ಹಣ್ಣಿನ ಸ್ವಾದಿಷ್ಟತೆ ಸಾರುವ ನುಡಿ ಸಿಂಚನ ಇದು. ಹಣ್ಣು ಬಿಡುವ ಸುಳಿವು ಸಿಕ್ಕೊಡನೆ, ನಮ್ಮ ನಾಕಾರು ಹುಡುಗರ ತಂಡ ಹೇಳದೆ ಕೇಳದೆ ನೇರಿಳೆ ಮರಗಳ ತೋಪಿಗೆ ದೌಡಾಯಿಸುತ್ತಿತ್ತು. ಅಲ್ಲೇ ಗುಡಿಸಲು ಹಾಕಿಕೊಂಡು ಕಾವಲಿರುತ್ತಿದ್ದ ಮುದುಕ ಕಲ್ಲು ಬೀರಲು, ಮರ ಹತ್ತಲು ಬಿಡದಿದ್ದರೂ ಗಾಳಿಯ ಹೊಡೆತಕ್ಕೆ ಉದುರಿ ಬಿದ್ದ, ಇಲ್ಲಾ ಗಿಣಿ-ಅಳಿಲು ಕಚ್ಚಿ ಉದುರಿಸಿದ್ದ ಹಣ್ಣುಗಳನ್ನು ಆಯ್ದುಕೊಳ್ಳಲು ಅವಕಾಶ ನೀಡುವಷ್ಟು ಉದಾರಿಯಾಗಿರುತ್ತಿದ್ದ. ಮಾಗಿದ ಹಣ್ಣುಗಳು ತೊಟ್ಟು ಕಳಚಿ ತಾನಾಗೇ ಉದುರಿದಾಗ ಗಟ್ಟಿ ನೆಲಕ್ಕೆ ಬಿದ್ದರೆ ಕರಿಯ ತುಟಿಯೊಡೆದು ರಕ್ತ ಒಸರಿದಂತಿರುತ್ತಿದ್ದ ಹಣ್ಣನ್ನು ಅದಕ್ಕೆ ಮರಳಿನ ಕಣಗಳೇನಾದರೂ ಅಂಟಿದ್ದರೆ ಉಫ್ ಎಂದು ಊದಿ ಉದುರಿಸಿ, ಸೀದಾ ಬಾಯಿಗೆ ಹಾಕಿಕೊಳ್ಳುತ್ತಿದ್ದೆವು. ಅಕಸ್ಮಾತ್ ಅದೃಷ್ಟ ನೆಟ್ಟಗಿದ್ದು ಮೃದುವಾದ ಹುಲ್ಲಿನ ಎಸಳಿನ ಮೇಲೆ ಬಿದ್ದು ಪೆಟ್ಟಾಗದೆ ಸಪೂರವಾಗಿದ್ದ ಹಣ್ಣುಗಳನ್ನು ಬಿಳಿ ಪೈಜಾಮಿನ ಜೋಳಿಗೆಯಂಥ ಸೈಡು ಜೋಬುಗಳಿಗೆ ಇಳಿಸುತ್ತಿದ್ದೆವು. ನಮ್ಮಮ್ಮ ಮನೆಗಳಿಗೆ ತೆರಳಿ ಮನೆಯಲ್ಲೇ ಇರುತ್ತಿದ್ದ ಕೈಲಾಗದ ಮುದುಕರು-ಮಕ್ಕಳಿಗೆ ಹಂಚಿ ತಿಂದು, ನಮ್ಮ ಸಾಹಸ ಮೆರೆಯಬೇಕಲ್ಲವೆ?

*ಕರಿಯ ಹೆಂಡತಿ ಎಂದು ಕಿರಿಕಿರಿ ಮಾಡಬ್ಯಾಡ*
*ನೇರಿಳೆ ಹಣ್ಣು ಬಲು ಕಪ್ಪು, ರುಚಿ ಬಾಳ,*
*ಅತ್ತಿಯ ಹಣ್ಣು ಬಲು ಕೆಂಪು, ಹುಳ ಬಾಳ*

– ಎಂದು ಹಾಡಿದ ಜನಪದರ ತ್ರಿಪದಿ ಅದೆಷ್ಟು ಅರ್ಥಪೂರ್ಣ. ಅದರ ಸಾಕ್ಷಾತ್ಕಾರವಾಗಬೇಕೆಂದಿದ್ದರೆ ಸ್ವತಃ ನೇರಿಳೆ ಹಣ್ಣು-ಅತ್ತಿಯ ಹಣ್ಣಿನ ಸೀಜನ್ನಿನಲ್ಲಿ ಅವುಗಳನ್ನು ಹಿಸುಕಿ ತಿಂದು ಅನುಭವಿಸಿದಾಗಲೇ ವೇದ್ಯವಾಗುವ ವಾಸ್ತವ. ಮೆತ್ತನೆಯ ಕೆಂಪು ಅತ್ತಿಹಣ್ಣನ್ನು ಹಿಸುಕಿ ತೆರೆದರೆ ಅದರ ಹೊಟ್ಟೆಯಲ್ಲಿ ಗಿಜಿಗಿಜಿ ಅನ್ನುವ ಹುಳುಗಳು. ಅದು ಯಾವ ಮಾಯದಲ್ಲಿ ಹಾಗೆ ಅಡಗಿರುತ್ತವೆಯೋ ಅದು ನೈಸರ್ಗಿಕ ಚಮತ್ಕಾರ. ಆ ಹುಳುಗಳನ್ನು ಊದಿ ಹೊರಗೆ ಉದುರಿಸಿ, ಊದಿ ಊದಿ ಮೆಲ್ಲುವುದೆಂದರೆ, ಅತ್ತಿಯ ಒಳಮೈಯಲ್ಲಿ ಮಧುರವಾದ ಜೇನು ಸವರಿದಂತೆ ರುಚಿ. ಅದೇ ರೀತಿ ಚೆನ್ನಾಗಿ ಮಾಗಿದ ಜಂಬು ನೇರಿಳೆ ಹಣ್ಣು ಕಡು ಕಪ್ಪು ಬಣ್ಣ ತಳೆದಿದ್ದರೂ ಅದರ ರುಚಿ ಅಸಾಧಾರಣವಾದುದು. ಸವಿದ ರಸಿಕನಿಗೇ ಗೊತ್ತು ಅದರ ರಸಾಸ್ವಾದನೆಯ ಗಮ್ಮತ್ತು.

ಮರದಿಂದ ಗಾಳಿಗೆ ಉದುರಿ ಬಿದ್ದರೂ ಸಾಕು ತುಟಿಯೊಡೆದಂತೆ ರಕ್ತ ಜಿನುಗಿಸಿಕೊಳ್ಳುವ ಈ ಕೋಮಲಾಂಗಿ ಕೃಷ್ಣೆಯ ತ್ವಚೆ ತುಂಬ ತೆಳು. ಆ ಕಾರಣಕ್ಕಾಗೇ ನೇರಿಳೆ ಹಣ್ಣನ್ನು ಗಾಯವಾಗದಂತೆ ಜೋಪಾನವಾಗಿ ಇಳಿಸಿ ಹೊತ್ತು ತರುವ ಕ್ರಮವಾದರೂ ಹೇಗೆ ಅನ್ನುತ್ತೀರಾ? ಬನ್ನಿರಿ ಹೇಳುತ್ತೇನೆ. ಎಳವೆಯಲ್ಲಿ ಹಸಿರು ಬಣ್ಣ ತಳೆದ ನೇರಿಳೆ ಕಾಯಿ ಬಲಿಯುತ್ತ ಬಂದಂತೆ ಕೆಂಪು ಬಣ್ಣಕ್ಕೆ ತಿರುಗುತ್ತದೆ. ಕ್ರಮೇಣ ದೋರೆಯಾದಾಗ ಕಡು ನೀಲಿ ಯಾ ನೇರಿಳೆ ಬಣ್ಣಕ್ಕೆ ತಿರುಗಿ, ನಂತರ ಹಣ್ಣಾಗಿ ಮಾಗುವ ಹೊತ್ತಿಗೆ ಕಡುಗಪ್ಪು ಬಣ್ಣ ತಳೆದು ಕಂತೆ ಕಟ್ಟಿದ ಇಷ್ಟಲಿಂಗದಂತೆ ಫಳಫಳ ಹೊಳೆಯಲಾರಂಭಿಸುತ್ತದೆ. ಹಸಿರು-ಕೆಂಪು ನೇರಿಳೆ – ಕಡುಗಪ್ಪು ಬಣ್ಣಗಳಾಗಿ ಒಂದೊಂದು ಹಂತಕ್ಕೂ ಒಂದೊಂದು ಬಣ್ಣ ತಳೆಯುವ ಪರಿ ಆಕರ್ಷಕವಾಗಿರುತ್ತದೆ. ಮರದಲ್ಲಿದ್ದ ಹಣ್ಣುಗಳು ಮಾಗಲಾರಂಭಿಸಿದೊಡನೆ ಕ್ವಾಲಿಟಿ ಕಂಟ್ರೋಲ್ ಇನ್ಸಪೆಕ್ಟರರಂತೆ ಎಲ್ಲೆಲ್ಲಿಂದಲೋ ಗಿಣಿರಾಮರ ಪರಿವಾರ ಮರಕ್ಕೆ ಲಗ್ಗೆ ಇಕ್ಕಿ, ಕೊಕ್ಕು ಹಾಕಿ ಸೇವಿಸುವ ಭರದಲ್ಲಿ ಕೆಲವೊಂದಷ್ಟು ಕೆಳಗೆ ಬೀಳಿಸುತ್ತವೆ. ಆ ಸೂಚನೆ ಸಿಕ್ಕೊಡನೆ ಮನುಷ್ಯ ನೇರಿಳೆ ಹಣ್ಣಿನ ಹಾರ್ವೆಸ್ಟ್ ಮಾಡಲು

ಅಣಿಯಾಗುತ್ತಾನೆ. ಸರಸರನೇ ಮರ ಹತ್ತುವಲ್ಲಿ ನಿಸ್ಸೀಮರಾದ ಯುವಕರನ್ನು ಹತ್ತಿಸಿ, ನೇರಿಳೆ ಹಣ್ಣಿನ ಗೊಂಚಲು ತೂಗಿ ತೊನೆಯುವ ಒಂದೊಂದೇ ಟೊಂಗೆಯನ್ನು ಏರಿ, ಅದರ ಮೇಲೆ ಆಯ ತಪ್ಪದಂತೆ ನಿಂತು, ಉದ್ದ ಕೋಲಿನಿಂದ ಬಡಿಯುತ್ತಾನೆ. ಕೆಳಗೆ ಸದರಿ ಟೊಂಗೆಯ ಬುಡದಲ್ಲಿ ನಾಲ್ಕು ಜನ ಹೆಣ್ಣಾಳುಗಳು ಚಾದರ–ಬೆಡ್‌ಶೀಟು ಹಿಡಿದು ಹಣ್ಣು, ನೆಲಕ್ಕೆ ಬಿದ್ದು ಪೆಟ್ಟಾಗದಂತೆ ಸಂಗ್ರಹಿಸುತ್ತಾರೆ. ಹೀಗೇ ಒಂದೊಂದೆ ಟೊಂಗೆಯಿಂದ ಹಣ್ಣು ಸಂಗ್ರಹಿಸುತ್ತ ಹೋಗುತ್ತಾರೆ. ಇದು ಒಂದು ತೆರನಾಗಿ ಕಟವಾಳಿ ಆಕಳ ಕೆಚ್ಚಲಿಗೆ ಕೈಹಾಕಿ ಹಾಲು ಕರೆದಂತೆ. ಅಷ್ಟೊಂದು ಎಚ್ಚರದಿಂದ ಕೆಲಸ ನಿರ್ವಹಿಸಬೇಕು. ಹಾಗೆ ಸಂಗ್ರಹಿಸಿದ ಹಣ್ಣುಗಳಲ್ಲಿ ತುಟಿಯೊಡೆದು ರಕ್ತಸಿಕ್ತವಾದವುಗಳನ್ನು ಬೇರ್ಪಡಿಸಿ, ಬುಟ್ಟಿಯ ತಳಕ್ಕೆ ಮೃದುವಾದ ಎಲೆಗಳನ್ನು ಹರಡಿ ಅದರ ಮೇಲೆ ತೆಳು ಸಿಪ್ಪೆಯ ಈ ಕರಿ ನೇರಿಳೆ ಹಣ್ಣನ್ನು ಜೋಪಾನವಾಗಿ ತುಂಬಿ ಮಾರುಕಟ್ಟೆಗೆ ಹೊತ್ತು ತರಬೇಕಾಗುತ್ತದೆ ಆ ಕುಸುಮಬಾಲೆಯನ್ನು. ಅನುಪಮ ರುಚಿಯೂ ಅಪರಿಮಿತ ಸ್ವಾದಿಷ್ಟವನ್ನೂ ಒಡಲಲ್ಲಿ ಅಡಗಿಸಿಕೊಂಡಿರುವ ಅಪರೂಪದ ಐಟಂಗಳೆಲ್ಲ ಹೀಗೇ ಅಂತ ಕಾಣುತ್ತದೆ. ಮಾನವನನ್ನೂ ಒಳಗೊಂಡಂತೆ ಜೀವಿ ಸಂಕುಲಕ್ಕೆ ಆ ನಿಸರ್ಗ ನೀಡುವ ರುಚಿಗಳೆಷ್ಟು ? ತಳೆಯುವ ಬಣ್ಣಗಳೆಷ್ಟು ವಾಹ್ !

ನೇರಿಳೆ ಶರಬತ್ತು ನೀಡುವ ಮಜಾ ಒಂದಾದರೆ; ಕಹಿ ಮಿಶ್ರಿತ ಒಗರು ರುಚಿಯ ನೇರಿಳೆ ಬೀಜದ ಒಣ ಪುಡಿಯಿಂದ ಮಾಡಿದ ಕಷಾಯ ಮಧುಮೇಹ ರೋಗಿಗಳಿಗೆ ಆಯುರ್ವೇದದ ಔಷಧಿಯಂತೆ, ವಾಹ್! ಮೇಲ್ಪದರ ಅಗಾಧವಾದ ಸಿಹಿ ತಿರುಳು, ಆವೃತವಾದ ಒಳಗಿನ ಬೀಜ ಮಾತ್ರ ಕಹಿ ಮಿಶ್ರಿತ ಔಷಧಿ. ನೇರಿಳೆ ಹಣ್ಣು ಎಂದರೇನೇ ಜೀವಿ ಸಂಕುಲಕ್ಕೆ ನಿಸರ್ಗ ನೀಡುವ 'ಕ್ಯಾಪ್ಸೂಲ್‌ಗಿತ್ತಿ'ಯಂತೆ. ಬಾಲ್ಯದಲ್ಲಿ ನೇರಿಳೆ ಹಣ್ಣು ಚಪ್ಪರಿಸುವಾಗ ಆಯತಪ್ಪಿ ಕೆಲವೊಮ್ಮೆ ಬೀಜಗಳು ಗಂಟಲಿಗೆ ಜಾರಿ ಉದರ ಸೇರುತ್ತಿದ್ದವು. ಬಾಲ್ಯದ ಮುಗ್ಧತೆಯಲ್ಲಿ ಹೊಟ್ಟೆಯಲ್ಲಿ ಮರವಾದರೆ ಸತ್ತು ಹೋಗುವ ಭೀತಿ.



ನೈಸರ್ಗಿಕ ನೇರಿಳೆ ಹಣ್ಣಿನ ಬಣ್ಣದಿಂದಾಗಿ ನಾಗರಿಕ ಜಗತ್ತಿನ ಮಿಠಾಯಿಯೊಂದು ಅದರ ಹೆಸರನ್ನು ಕದ್ದು ತನ್ನ ತಲೆಗೇರಿಸಿಕೊಂಡು 'ಜಾಮೂನು' ಎಂಬ ಹೆಸರಿನಲ್ಲಿ ಮೆರೆಯುತ್ತಿದೆ. ಸಕ್ಕರೆ ಪಾಕದಲ್ಲಿ ತೇಲುವ ಜಾಮೂನು ಒಂದು ಬಗೆಯಾದರೆ; ರಸದುಂಬಿದ ಡ್ರೈ ಜಾಮೂನು, ಕರಿ ಜಾಮೂನು (ಕಾಲಾ ಜಾಮೂನು) ಎಂದೆಲ್ಲ ನಾಗರಿಕ ಪ್ರಪಂಚದಲ್ಲಿ ಸಲುವಳಿಯಲ್ಲಿವೆ ನಿಜ. ಆದರೆ ನಿಸರ್ಗದ ನೇರಿಳೆ ಹಣ್ಣಿಗೆ ಅದ್ಯಾವುದೂ ಸಾಟಿಯಾಗದು. ಬಣ್ಣ ಮತ್ತು ಹೆಸರು ನಮ್ಮ ನೈಸರ್ಗಿಕ ನೇರಿಳೆ ಹಣ್ಣಿನದಾದರೆ; ಸಿಹಿಯನ್ನು ಸಕ್ಕರೆಯಿಂದ ಪಡೆದದ್ದಾಗಿದೆ. ಹಾಗೆಯೆ ಹಿಟ್ಟು ಮತ್ತು ಕರಿಯಲು ರೀಫೈನ್ಡ್ ಎಣ್ಣೆಗಳೆಲ್ಲ ಸೇರಿ ಅದಕ್ಕೆ ಏನೆಲ್ಲ ಸಂಗೀತ ಆಗಬೇಕು. ಅದೇನಿದ್ದರೂ ಕೃತಕವಾಗಿ ಬೇರೆ ಬೇರೆ ಸರಕುಗಳಿಂದ ಎರವಲು ಪಡೆದೇ ಅದನ್ನು ಸಿದ್ಧಪಡಿಸಿದ ಬಾಬತ್ತು. ಇಷ್ಟೆಲ್ಲ ಆದರೂ, ಸಕ್ಕರೆ ರೋಗಿಗಳೆಂದೇ ಕರೆಯಲಾಗುವ ಮಧುಮೇಹಿಗಳಿಂದ ಬಹಿಷ್ಕಾರಕ್ಕೊಳಗಾದ ಮಿಠಾಯಿಯಾಗಿದೆ. ಆದರೆ, ಅದೇ ನಮ್ಮ ನೈಸರ್ಗಿಕ ನೇರಿಳೆ ಹಣ್ಣನ್ನು ನೋಡಿರಿ. ಅದಕ್ಕೆ ಆಯುರ್ವೇದ ಔಷಧೀಯ ಗುಣವಿದೆಯೆಂದು ಗೊತ್ತಾದೊಡನೆ; ಹೃದಯ ರೋಗಿಗಳೆಲ್ಲ ಅದರತ್ತ ವಾಲುತ್ತಿದ್ದಾರೆ. ಹೀಗಾಗಿ ಅದಕ್ಕೆ ಡಿಮ್ಯಾಂಡಪ್ಪೊ ಡಿಮ್ಯಾಂಡು. ಆಧುನಿಕ ನಾಗರಿಕ ಜಗತ್ತಿನಲ್ಲಿ ಈ ನೈಸರ್ಗಿಕ ನೇರಿಳೆ ಹಣ್ಣಿನ ಸ್ಥಾನಮಾನ ಪುನರ್ ಸ್ಥಾಪನೆಯಾಗುತ್ತಿರುವುದರ ಲಕ್ಷಣವೇ ನಾನು ಆರಂಭದಲ್ಲಿ ಹೇಳಿದ ಜಾಹೀರಾತು – 'ಫಾರ್ ದಿ ಫಸ್ಟ್ ಟೈಮ್ ಇನ್ ಇಂಡಿಯಾ ವೀ ಆರ್ ಇಂಟ್ರಡ್ಯೂಸಿಂಗ್...' ಎನ್ನುವ ಒಗಟಿಗೆ ಮಾರು ಹೋಗಿ ನೇರಿಳೆ ಯಾವ ಮೂಲದಿಂದ ಬರುತ್ತದೆನ್ನುವ ವಿಷಯ ಗೊತ್ತಿಲ್ಲದೆ ಕೆಲವು ಮೀನುಗಳು ಗಾಳಕ್ಕೆ ಬಿದ್ದರೂ ಬೀಳಲಿ ಎನ್ನುವ ಹುನ್ನಾರ !

ಆಧುನಿಕ ನಾಗರಿಕ ಜಗತ್ತಿಗೆ ಅದೇನು ಗರ ಬಡಿದಿದೆಯೊ ? ಮನುಷ್ಯ ಹೆಚ್ಚು ಹೆಚ್ಚು ನಗರೀಕರಣಗೊಂಡಷ್ಟೂ ಅಷ್ಟಷ್ಟು ನಿಸರ್ಗದಿಂದ ದೂರ ಸರಿಯುತ್ತಾ ಹೋಗುತ್ತಾನೆ. ಹಲವು ಹತ್ತು ನಾಗರಿಕ ಜಗತ್ತಿನ ಸವಲತ್ತುಗಳಿಂದಾಗಿ; ದುಡ್ಡು ಖರ್ಚು ಮಾಡಿ ಮೈಯಲ್ಲಿ ಕೊಬ್ಬು ಬೆಳೆಸಿಕೊಳ್ಳುತ್ತಾನೆ. ಸದರಿ ಕೊಬ್ಬನ್ನು ಕರಗಿಸುವುದಕ್ಕಾಗೇ ಮತ್ತೆ ದುಡ್ಡು ಖರ್ಚು ಮಾಡಬೇಕಾಗುತ್ತದೆ. ಇದು ರೀಸೈಕ್ಲಿಂಗ್. ಹೀಗಾಗಿ ನೈಸರ್ಗಿಕ ಜಾಮೂನಿಗೆ ಮತ್ತೆ ಬೇಡಿಕೆ ಬಂದಿದೆ. ಮನುಷ್ಯನ ವಿಕೃತಿಯನ್ನು ತೊಡೆದು ಹಾಕಬಲ್ಲ ಶಕ್ತಿ ಪ್ರಕೃತಿಗೆ ಮಾತ್ರ ಎನ್ನುವ ಸತ್ಯವು ನೇರಿಳೆ ನಮ್ಮ ಕಣ್ಣ ಮುಂದಿರುವ ಜೀವಂತ ಉದಾಹರಣೆ ! ಆಹಾ ನೇರಿಳೆ, ಕನ್ನೇರಿಳೆ ನಿನ್ನ ಸಮಾನರಾರಿಹರು ಹೇಳೇ !! ಅಂದ ಹಾಗೆ ನೇರಿಳೆಗೂ ಪನ್ನೇರಿಳೆಗೂ ಏನೇನೂ ಸಾಮ್ಯವಿಲ್ಲದಿದ್ದಾಗ್ಯೂ ಪನ್ನೇರಿಳೆಗೆ ಆ ಹೆಸರು ಹೇಗೆ ಬಂತೋ ಸಸ್ಯಶಾಸ್ತ್ರಜ್ಞರೇ ಹೇಳಬೇಕು. ಜಾಗತಿಕ ಮಾರುಕಟ್ಟೆಯಲ್ಲಿ ನಮ್ಮ ನೆಲದ ಸರಕನ್ನೇ ನಮಗೆ ಬಣ್ಣಗಟ್ಟಿ ಹೊಗಳಿ, ಭರ್ಜರಿ ರೊಕ್ಕ ಮಾಡುವ ಹುನ್ನಾರ ಇದರ ಹಿಂದೆ ಇದ್ದರೂ ಇದ್ದೀತು.

ನಮ್ಮ ನೆಲದ ದೇಸೀ ಸರಕೇ ನಮ್ಮ ಉಪೇಕ್ಷೆಗೊಳಗಾಗಿ ಮುಂದೊಂದು ದಿನ ವಿದೇಶೀಯರ ಪಾಲಾಗಿ; ಪೇಟೆಂಟಿನ ಸಮಸ್ಯೆ ಎದುರಾದರೆ ಅಚ್ಚರಿ ಪಡಬೇಕಾಗಿಲ್ಲ. ಜಾಗತೀಕರಣದ ಚಾಕಚಕ್ಯತೆಯಲ್ಲಿ, ನಮ್ಮ ಕೈಯೊಳಗಿನ ಪೆನ್ನು ಕಿತ್ತುಕೊಂಡು ನಮ್ಮ ಕಣ್ಣಿಗೇ ತಿವಿದರೂ ಅಚ್ಚರಿಯಿಲ್ಲ. ಜಾಹಿರಾತುಗಳನ್ನು ನಂಬಿ ನಾವು ನೇರಿಳೆ ಹಣ್ಣು ಕೊಳ್ಳಬೇಕಾಗಿರುವುದು ಅದೆಂಥ ಅಣಕ! ಹೊಳೆ ನೀರಿಗೂ ದೊಣೆ ನಾಯಕನ ಅಪ್ಪಣೆಯೆ ?

ನನ್ನೂರಲ್ಲಿ ನನ್ನ ಅಪ್ಪ, ನಾಟಕ ಆಡಿಸುವ 'ಪೆಟಗಿ ಮಾಸ್ತರ' ಎಂದೇ ಹೆಸರುವಾಸಿಯಾಗಿದ್ದ ಕಾಲ ಅದು. ಹಗಲು ವೇಷಗಾರರ ತಂಡವೇನಾದರೂ ಅಪ್ಪಿತಪ್ಪಿ ನನ್ನೂರಿನಲ್ಲಿ ಬೀಡುಬಿಟ್ಟರೆ ನನ್ನ ಅಪ್ಪನಿಗೆ ತನ್ನ ಬಂಧುಗಳೇ ಮನೆಗೆ ಬಂದಿಳಿದಷ್ಟು ಸಂಭ್ರಮ. ಗುಡಿಗುಂಡಾರಗಳಲ್ಲಿ ಅವರಿಗೆ ವಸತಿ ಸೌಲಭ್ಯ ಕಲ್ಪಿಸುವುದರಿಂದ ಹಿಡಿದು ತಿಂಗಳ ಕೊನೆಗೆ ಪಟ್ಟಿ ಎತ್ತಿ ಅವರನ್ನು ಊರು ಸೀಮೆ ದಾಟಿಸುವವರೆಗೂ ನಿಗಾಹ್ ವಹಿಸುತ್ತಿದ್ದನೀತ. ನಾಟ್ಯ ಗಾಯನ ಸಂಗೀತಗಳು ರಕ್ತಗತವಾಗಿದ್ದ ಅಭಿಜಾತ ಕಲಾವಿದರೆಂದರೆ ಆ ಹಗಲುವೇಷದ ಅಲೆಮಾರಿ ಕುಟುಂಬಗಳವರು.

ನನ್ನ ಅಪ್ಪನ ಕಾಲದ ಸಮಾನ ಮನಸ್ಕರು ಹಾಗೆ, ಆಗೀಗ ಯಾರಾದಾದರೂ ಮನೆಯ ಪಡಸಾಲೆಯಲ್ಲಿ ಜಮಖಾನೆ ಹಾಸಿ ಸದರಿ

ಹಗಲು ವೇಷದ ಕಲಾವಿದರಲ್ಲಿಯೇ ಶಾಸ್ತ್ರೀಯ ಗಾಯನ ಮಾಡುವ ಹಿರೀಕನನ್ನು ಆತನಿಗೆ ಸಾತ್ ಕೊಡುವ ತಬಲಾ ಹಾರ್ಮೋನಿಯಂ ಸಮೇತ ಕೂರಿಸಿ, ತಕ್ಕ ಮರ್ಯಾದೆ ಮಾಡುವುದಾಗಿ ಪುಸಲಾಯಿಸಿ, ಸಣ್ಣ ಬಜೆಟ್ಟಿನ ಸಂಗೀತದ ಬೈಠಕ್ಕು ನಡೆಸುತ್ತಿದ್ದರು. ಆ ಸಂದರ್ಭದಲ್ಲಿ ಮನೆ ಮಾರು ಪರಿವೆಯಿಲ್ಲದೆ, ಇಡೀ ದಿನ ಸಂಗೀತದಲ್ಲಿ ಮೈಮರೆತಾಗ ನನ್ನ ಅವ್ವನು, ಅಪ್ಪ ಎಲ್ಲೆ ಇದ್ದರೂ ಪತ್ತೆ ಹಚ್ಚಿ ಕಸ್ಟಡಿಗೆ ತೆಗೆದುಕೊಂಡು ಬರುವಂತೆ ವರಾತ ಹಚ್ಚಿ ಪೊಲೀಸು ಠಾಣೆಯಿಂದ ಥೇಟು ಕನಿಷ್ಠ ಬಿಲ್ಲೆಯನ್ನು ಕಳಿಸುವಂತೇ ನನ್ನನ್ನು ಅಟ್ಟುತ್ತಿದ್ದಳು. ನಾನಾದರು ನಿರ್ವಾಹವಿಲ್ಲದೆ ಅಪ್ಪನ ಗಾಯನ ಸಮಾಜ ಹುಡುಕಿಕೊಂಡು ಹೋಗಿ, ಆತನ ಕಿವಿಯಲ್ಲಿ ಉಸುರುತ್ತಿದ್ದೆ. ಆತ ನನ್ನನ್ನೂ ಎಳೆದು ತನ್ನೊಟ್ಟಿಗೇ ಕೂರಿಸಿಕೊಳ್ಳುತ್ತಿದ್ದ. ನಾನು ನೆನಪು ಮಾಡಿದಾಗಲೆಲ್ಲ 'ಹೋಗಾಣ ಇರಲೇ' ಎಂದು ಗದರುತ್ತಿದ್ದ – ನಡುನಡುವೆ ರಸಾಭಾಸ ಮಾಡಬೇಡವೆನ್ನುವಂತೆ.




ಅಂಥದೇ ಒಂದು ದಿನ, ಭರ್ಜರಿ ಸಂಗೀತ ಕಚೇರಿ ನಡೆದಿರುವ ಹೊತ್ತಿನಲ್ಲಿಯೇ 'ಅರ್ಜೆಂಟಾಗಿ ಯಾರೋ ಊರಿಂದ ಬಂದಿದ್ದಾರೆ' ಎಂದು ಹೇಳಿ ಅಪ್ಪನನ್ನು ಅನಾಮತ್ತಾಗಿ ಕರೆ ತರುವಂತೆ ಅಟ್ಟಿದ್ದಳು. ನನ್ನ ಬಿಳಿ ಪೈಜಾಮಿನ ಎರಡೂ ಕಡೆಯ ಕಿಸೆಗಳು ಅವೊತ್ತು ಭರ್ತಿ ನೀರಲ ಹಣ್ಣು ಲೋಡ್ ಆಗಿದ್ದವು. ಅವಕ್ಕೆ ಘಾಸಿಯಾಗದಂತೆ ನಿಧಾನವಾಗಿ ನಡೆದುಕೊಂಡು, ಒಂದೊಂದೇ ತೆಗೆತೆಗೆದು ಬಾಯಿಗಿರಿಸಿಕೊಂಡು ಚಪ್ಪರಿಸುತ್ತ ಸಂಗೀತ ಕಚೇರಿ ಹೊಕ್ಕೆ. ಮಾಸ್ತರನ ಮಗನೆಂಬ ಕಾರಣಕ್ಕೆ ದಾರಿಬಿಟ್ಟರು. ಹಿಂದೂಸ್ತಾನಿ ರಾಗದಲ್ಲಿ ಆಲಾಪಿಸುತ್ತ ಅರೆಗಣ್ಣಿನಲ್ಲಿ ಮೈಮರೆತಿದ್ದ ಆ ಗಾಯಕ ಮುದುಕನ ಮುಂದೆ ಕೈಗೆಟುಕುವಷ್ಟು ಹತ್ತಿರದಲ್ಲಿ ಮಂಡಿಸಿದ್ದ ಅಪ್ಪನ ತೊಡೆಯನ್ನು ಏರಿ ಅಲಂಕರಿಸಿಬಿಟ್ಟೆ. ಸುಮ್ಮನೆ ಇದ್ದರೆ ಆಗುತ್ತಿತ್ತು. ಮಂಗ ಮನಸ್ಸು ಕೇಳಬೇಕಲ್ಲ. ಪೈಜಾಮಿನ ಕಿಸೆಗಳಲ್ಲಿ ತುಂಬಿದ್ದ ಕಳಿತ ನೇರಳೆ ಹಣ್ಣನ್ನು ಒಂದೊಂದಾಗಿ ತೆಗೆದು ಬಾಯಿಗಿರಿಸಿಕೊಂಡು ಚಪ್ಪರಿಸಲು ಶುರು ಮಾಡಿದೊಡನೆ, ಇಷ್ಟಗಲ ಬಾಯಿಬಿಟ್ಟುಕೊಂಡು, ಗಾಳಿಯಲ್ಲಿ ಕೈಯಾಡಿಸುತ್ತ, ಅರ್ಧ ನಿಮೀಲಿತ ನಯನಗಳಲ್ಲಿ ಹಾಡುತ್ತಿದ್ದಾತನಿಗೆ ಅದೇನಾಯಿತೋ ಏನೋ ಠಾಂಗು ಕೊಟ್ಟಂತಾಯಿತು. ಆತನ ಬಾಯಲ್ಲಿ ಜೊಲ್ಲು ಸುರಿದು ಶಾರೀರ ಬೇಸೂರ್ ಆಯಿತು. ಕಟಕಟನೇ ಹಲ್ಲು ಕಡಿದ ನನ್ನ ಅಪ್ಪ ನನ್ನನ್ನು ಅನಾಮತ್ತು ಎತ್ತಿ ಹೊರಗೆಸೆಯಲು ಆಣತಿಯಿತ್ತ. ಅಲ್ಲಿ ಸೇರಿದ್ದವರು ನನ್ನನ್ನು ನೆಲಕ್ಕೆ ಮುಟ್ಟಿಸದಂತೆ ಎತ್ತಿ ತಂದು ಬೀದಿಗೆ ಬಿಟ್ಟಾಗ, ಬಿಳಿ ಪೈಜಾಮಿನಲ್ಲಿದ್ದ ನೇರಳೆ ಹಣ್ಣುಗಳು ಗಾಯಗೊಂಡು ರಕ್ತಸಿಕ್ತ ಕಲೆ ಉಂಟುಮಾಡಿದ್ದವು. ಇವರ ಸಂಗೀತ ಕಚೇರಿ ಹಾಳಾಗಿ ಹೋಗಲಿ. ಅಪ್ಪನಿಂದ ಏಟು ತಿನ್ನದೆ ಬಚಾವಾಗಿ ಹೊರಬಂದದ್ದು ಒಂದು ಸಂತೋಷ. ಅವರು ಕೇಳುತ್ತಿದ್ದ ಚೀಜುಗಳಿಗೆ ಧಕ್ಕೆಯಾಯಿತೆಂದು ಅಲ್ಲಿ ನೆರೆದಿದ್ದ ಹಿರಿಯರ ಕೋಪ ಒಂದು ಕಡೆಗಾದರೆ, ನನ್ನ ಜೋಳಿಗೆಯಂತಿದ್ದ ಕಿಸೆಗಳಲ್ಲಿ ತುಂಬಿದ್ದ ನೇರಳೆ ಹಣ್ಣುಗಳು ಒಡೆದ ಪ್ರಯುಕ್ತ ಬಿಳಿ ಪೈಜಾಮ ಜಾಂಬಳಿ ಬಣ್ಣದ ಕಲೆಗಳಿಂದ ಈಗ ಅವ್ವನಿಂದ ಶಾಪ ಹಾಕಿಸಿಕೊಳ್ಳಬೇಕಾಗಿತ್ತು.

ಅದೇ ಸಾವಿರದೊಂಭೈನೂರ ಅರವತ್ತರ ಸುಮಾರಿನಲ್ಲಿ ನಡೆದ ಘಟನೆಯನ್ನು ಇಲ್ಲಿ ಮೆಲುಕು ಹಾಕಬಹುದು. ಬೆಂಗಳೂರಿನ ಕೋಟೆ ಹೈಸ್ಕೂಲು ಮೈದಾನದಲ್ಲಿ ಪ್ರತಿ ವರ್ಷ ಏರ್ಪಾಡಾಗುತ್ತಿದ್ದ ಸಂಗೀತ ಕಾರ್ಯಕ್ರಮಕ್ಕೆ ತಮಿಳುನಾಡಿನಿಂದ ಸಂಗೀತ ವಿದುಷಿ ಸುಬ್ಬುಲಕ್ಷ್ಮಿಯವರನ್ನೊಳಗೊಂಡಂತೆ ದಂಡಿಯಾಗಿ ಬರುತ್ತಿದ್ದ ಗಾಯಕರ್‍ಯಾರೂ ಕನ್ನಡ ಕೀರ್ತನೆಗಳನ್ನಾಗಲಿ ದಾಸರ ಹಾಡುಗಳನ್ನಾಗಲಿ ಹಾಡುತ್ತಿರಲಿಲ್ಲವಂತೆ. ಅದನ್ನು ಪ್ರತಿಭಟಿಸಲು ಅನಕೃ ಮತ್ತು ರಾಮಮೂರ್ತಿಯವರ ನಾಯಕತ್ವದಲ್ಲಿ ಆ ಕಾಲದ ಕನ್ನಡದ ಹುಡುಗರು ಭಾರೀ ಪ್ರತಿಭಟನೆ ಮಾಡಿದ್ದು ಬೆಂಗಳೂರಿನ ಸಾಂಸ್ಕೃತಿಕ ಇತಿಹಾಸದಲ್ಲಿ ಮರೆಯಲಾರದ ದಾಖಲೆಯಂತೆ. ಅಂಥ ಸಂದರ್ಭದಲ್ಲಿ ನಮ್ಮ ಈ ನೇರಳೆ ಹಣ್ಣನ್ನು ಧಾರಾಳವಾಗಿ ಹುಡುಗರಿಗೆ ನೀಡಿ ಗಾಯಕರ ಸಮ್ಮುಖದಲ್ಲಿ ಕೂರಿಸಿದರಾಗಿತ್ತು. ತಣ್ಣಗಿನ ಪ್ರತಿಭಟನೆ, ಉಗುಳು ನುಂಗುತ್ತಲೇ ಹಾಡಲು ಬಾಯಿ ಬಿಡಲಾರದೆ ಗಾಯಕರು ಪೇರಿ ಕೀಳುವುದೊಂದೇ ಬಾಕಿ. ನೇರಳೆ ಹಣ್ಣು ಎಲ್ಲ ಸೀಜನ್‌ನಲ್ಲಿ ದೊರೆಯುವುದಿಲ್ಲವಲ್ಲ ಅನ್ನಬೇಡಿರಿ. ಪ್ರಕೃತಿ ಧಾರಾಳಿ, ನೇರಳೆಗೂ ಒಂದು ಪರ್ಯಾಯ ಉಪಾಯವಿದೆ. ಸದಾ ಕಾಲ ಮನೆಯಲ್ಲಿರುವ ಹುಣಸೆ ಹಣ್ಣಿನ ಜತೆಗೆ ರುಚಿಗೆ ತಕ್ಕಷ್ಟು ಉಪ್ಪು ಒಂದಷ್ಟು ಬೆಲ್ಲ ಬೆರೆಸಿ ಕುಟ್ಟಿ, ಚೆನ್ನಾಗಿ ಮಿದ್ದಿ ಉಂಡೆ ಕಟ್ಟುವುದು. ಅದನ್ನು ಜೋಳದ ದಂಟಿನ ಗಣಿಕೆಗೆ ಅಂಟಿಸಿ ಲಾಲಿ ಪೆಪ್ಪಿ ಮಾಡಿ ಮಕ್ಕಳ ಕೈಗೆ ಕೊಟ್ಟು, ಅವರನ್ನು ಸಂಗೀತ ಕಚೇರಿ ನಡೆಯುವಲ್ಲಿ ಮುಂದಿನ ಸಾಲಿನಲ್ಲಿ ಕೂರಿಸುವುದು, ಮುಂದೆ ಆಗುವ ಪರಿಣಾಮವನ್ನು ನಾನಿಲ್ಲಿ ವಿವರಿಸ ಹೋಗುವುದಿಲ್ಲ. ಅದನ್ನು ವಾಚಕರ ಕಲ್ಪನೆಗೇ ಬಿಡುತ್ತೇನೆ.

ಈ ಮಹಾನಗರಿಯ ತೆಕ್ಕೆಯಲ್ಲಿ ನನ್ನನ್ನು ನೇರಳೆ ಮರ ಕಾಡುತ್ತಿರುವುದಕ್ಕೆ ಕಾರಣವಿದೆ. ಹೋದ ವರ್ಷ ನನ್ನ ವಾಸ್ತವ್ಯ ಬದಲಾಯಿಸಿದಾಗ ಪಕ್ಕದ ಮನೆಯ ಕಂಪೌಂಡಿನಲ್ಲಿ ಒಂದು ಬೃಹತ್ ನೇರಳೆ ಮರ ಇರುವುದನ್ನು ಗಮನಿಸಿದ್ದೆ. ಆದರೆ ನನ್ನ ಮನೆಯಾಕೆಗೆ ಅದು ಇಷ್ಟೊಂದು ತೊಂದರೆ ಕೊಡುತ್ತದೆ ಎಂದುಕೊಂಡಿರಲಿಲ್ಲ. ಈ ಸಾರಿ ಸಮೃದ್ಧವಾಗಿ ಹಣ್ಣು ಬಿಟ್ಟದ್ದಕ್ಕೇನೋ ನಾನಾ ಬಗೆಯ ಅತಿಥಿಗಳು ನಾವು ಹಣ್ಣು ಕೀಳುವ ಮೊದಲೇ ಆ ಮರಕ್ಕೆ ಲಗ್ಗೆಯಿಟ್ಟು ತಮ್ಮ ಬರುವಿಕೆಯನ್ನು ಸಾರುತ್ತಿದ್ದವು. ಅಷ್ಟೇ ಅಲ್ಲ ಕಳಿತ ನೇರಳೆ ಹಣ್ಣನ್ನು ಕುಕ್ಕಿ ಉದುರಿಸುತ್ತಿದ್ದವು. ಕೆಲವೊಮ್ಮೆ ಜೋರಾಗಿ ಬೀಸಿದ ಗಾಳಿಗೂ ಪಟಪಟನೇ ಉದುರಿ ನಮ್ಮ ಮನೆಯ ಗೋಡೆ, ನೇತು ಹಾಕಿ ಹರಡಿದ್ದ ಬಿಳಿ ಬಟ್ಟೆಗಳ ಮೇಲೆಲ್ಲ ಬಿದ್ದು ರಕ್ತದ ಕಲೆಗಳಂತೆ ಗುರುತು ಮಾಡುತ್ತಿದ್ದದ್ದು ಒಂದು ತಲೆನೋವೇನೋ ಸರಿ. ನನಗೋ ಬಾಲ್ಯದಲ್ಲಿ ನೇರಳೆ ಹಣ್ಣನ್ನು ಸಿಕ್ಕಾಪಟ್ಟೆ ಮೆದ್ದ ನೆನಪನ್ನು ಮೆಲುಕು ಹಾಕಲು ಇದು ಕಾರಣೀಭೂತವಾಗಿ ನನಗೆ ಒಂದು ಪ್ರಬಂಧ ಬರೆಯಲು ಹಚ್ಚಿದ್ದು ಸುಳ್ಳಲ್ಲ.

ಹಾಗೆ ಫಳಫಳ ಹೊಳೆಯುವ ನೈಸರ್ಗಿಕ ನೇರಳೆ ಹಣ್ಣು ರುಚಿಗೆ ತಕ್ಕುದಾದ ಹೊಳಪೂ ಹೊಂದಿದೆ. ಅದರ ಒಡಲಲ್ಲಿ ಸ್ವಾದಿಷ್ಟ ಆರೋಗ್ಯಕರ ಔಷಧೀಯ ಗುಣವನ್ನು ಹೊಂದಿದೆ. ಕಪ್ಪಗಿದ್ದರೂ ಅದರ ಮಿಂಚು ಹೊಳಪು ಕಂಡೆ ಕಟ್ಟಿದ ನುಣುಪಾದ ಕರಿ ಲಿಂಗವನ್ನೋ ಸಾಲಿಗ್ರಾಮವನ್ನೇ ನೆನಪಿಸುತ್ತದೆ. ಪ್ರಪಂಚದಲ್ಲಿ ಕಪ್ಪು – ಬಿಳುಪಿಗೆ ವಿಶಿಷ್ಟವೂ ಅಸಾಧ್ಯವೂ ಆದ ಆಕರ್ಷಣೆಯಿದೆಯೆಂಬುದನ್ನು ನೇರಳೆ ಕೂಡ ಸಾಕ್ಷೀಕರಿಸುತ್ತದೆ. ಕ್ಲಾಸಿಕ್ ಸರಕುಗಳೆಲ್ಲ ಹೀಗೇ ಅಂತ ಕಾಣುತ್ತವೆ. ತರಾವರಿ ಬಣ್ಣಗಳ ಆಡಂಬರವಿಲ್ಲದೆ, ಎಲ್ಲ ಬಣ್ಣಗಳ ಮೂಲ ಸೆಲೆಗಳು ಕಪ್ಪು – ಬಿಳುಪಿನಲ್ಲಿಯೇ ಅಡಗಿವೆ ಎನ್ನುವಂತೆ ಕತ್ತಲೆ – ಬೆಳಕು ಪ್ರತಿನಿಧಿಸುವಂತೇ ಥೇಟು ಕಪ್ಪು ಬಿಳುಪಿನ ಕ್ಯಾನವಾಸು ! ಬಾಲ್ಯದಲ್ಲಿ ಓದಿದ್ದ ಕಾವ್ಯಾನಂದರ ಪದ್ಯದ ಸಾಲುಗಳನ್ನು ಜೋಡಿಸಿ ಈ ಪ್ರಬಂಧ ಮುಗಿಸುತ್ತೇನೆ.

*ನಾ ಕರಿಯಳೆಂದು ನೀ ಜರಿಯಬೇಡ ಬಿಳಿ ಗೆಳತಿ ಗರ್ವದಿಂದ*
*ಕಪ್ಪಿಗಿಂತ ಬಿಳಿ ಬಣ್ಣ ಹೆಚ್ಚ ಹೇಳ್ ಯಾವ ಹಿರಿಮೆಯಿಂದ*
*ಬಿಳಿಯ ಮೋಡ ನೀಡುವುದು ಇಳೆಗೆ ಬರಿ ಬೆಡಗು ಅಂದ ಚೆಂದ*
*ಇಳೆಯ ಜೀವ ಮಳೆ ಬರುವುದಕ್ಕೆ ಕರಿ ಮೋಡ ಮಾತ್ರದಿಂದ*

**ಈರಪ್ಪ ಎಂ. ಕಂಬಳಿ**
ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ
ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಬೆಂಗಳೂರು – ೫೬೦ ೦೦೧

ಚೆ ಗೆವಾರ ಮತ್ತು ಅವನ ಗೆಳೆಯ ಒಂಭತ್ತು ತಿಂಗಳ ಅವಧಿಯಲ್ಲಿ ಲ್ಯಾಟಿನ್ ಅಮೆರಿಕಾವನ್ನು ಮೋಟಾರ್ ಬೈಕಿನಲ್ಲಿ, ದೋಣಿ ತೆಪ್ಪದಲ್ಲಿ, ಹಡಗಿನಲ್ಲಿ ಹಾಗೂ ವಿಮಾನದಲ್ಲಿ ಪ್ರವಾಸ ಕೈಗೊಳ್ಳುತ್ತಾರೆ. ೧೯೫೧ರ ಅಕ್ಟೋಬರ್‌ನಲ್ಲಿ ಹೊರಟು ಅರ್ಜೆಂಟೈನಾ, ಚಿಲಿ, ಪೆರು, ಈಕ್ವೆಡಾರ್, ಕೊಲಂಬಿಯಾ, ವೆನಿಜುವೆಲಾ, ಪನಾಮಾ ಮತ್ತು ಮಯಾಮಿಗಳಲ್ಲಿ ಸುತ್ತಾಡಿ ಅಲ್ಲಿಂದ ಮನೆಗೆ ವಾಪಾಸಾದ ತಿರುಗಾಟದ ಅನುಭವವೇ ಈ ಕೃತಿ. ಡಾ॥ ಅನುಪಮಾ ಅವರು ಪುಸ್ತಕದ ಮೊದಲಿಗೆ ಅರ್ನೆಸ್ಟೋ ಚೆ ಗೆವಾರ ಡಿಲಾಸೆರ್ನಾನನ್ನು ಕುರಿತು 'ಆತ ನನ್ನ ಸಂಗಾತಿ' ಎಂಬ ಆತ್ಮೀಯತೆಯಿಂದ ಮನದುಂಬಿ ಬರೆದಿರುವ ಅವನ ವ್ಯಕ್ತಿಚಿತ್ರ ನಮ್ಮಲ್ಲಿ ಇನ್ನೊಮ್ಮೆ ಮತ್ತೊಮ್ಮೆ ಓದಬೇಕೆಂಬ ಒತ್ತಾಸೆಯನ್ನು ಮೂಡಿಸುತ್ತದೆ. "ಜಗತ್ತಿನ ಯಾವುದೇ ಭಾಗದಲ್ಲಿರುವ ಶೋಷಿತನಿಗಾಗಿ ನಿನ್ನೆದೆ ಕಂಪಿಸುತ್ತಿದ್ದರೆ ನಾನು ನಿನ್ನ ಸಂಗಾತಿ" ಎಂದವನನ್ನು ಕೇವಲ ಕಮ್ಯೂನಿಸ್ಟ್ ನಾಯಕ, ಗೆರಿಲ್ಲಾ ಹೋರಾಟಗಾರ ಎಂದಷ್ಟೇ ನೋಡಲು ಸಾಧ್ಯವಿಲ್ಲ. 'ಇವ ನಮ್ಮವ' ಎಂಬ ಲೇಖಕರ ಏಕವಚನದ ಬಳಕೆ ಅನುಪಮ !




ಇಂಗ್ಲಿಷ್ ಮೂಲ : **ಅರ್ನೆಸ್ಟೋ ಚೆ ಗೆವಾರ**
ಕನ್ನಡಕ್ಕೆ : **ಡಾ॥ ಎಚ್. ಎಸ್. ಅನುಪಮಾ**
ಪ್ರಕಾಶಕರು : **ಲಡಾಯಿ ಪ್ರಕಾಶನ**
# ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧
ಪುಟಗಳು : ೨೦೦ ಬೆಲೆ : ರೂ. ೧೫೦/–




# ಅರ್ನೆಸ್ಟೋ ಚೆ ಗೆವಾರನ ಮೋಟಾರ್ ಸೈಕಲ್ ಡೈರಿ

ಪ್ರಪಂಚ ಚರಿತ್ರೆಯ ಪಠ್ಯಗಳನ್ನು ಸ್ಥೂಲವಾಗಿ ಅವಲೋಕಿಸುತ್ತಿದ್ದರೆ, ಅಲ್ಲಿ ಮೂರು ನಮೂನೆ ವ್ಯಕ್ತಿಗಳನ್ನು ಎದುರಾಗುತ್ತೇವೆ. ಮೊದಲಿಗೆ ಅಲೆಗ್ಸಾಂಡರ್, ಚೆಂಗೀಸ್‌ಖಾನ್, ಮುಸಲೋನಿ, ಹಿಟ್ಲರ್ ಮುಂತಾದ ಅಸ್ವಾಕ್ರಮಣಶೀಲ ಸಾಮ್ರಾಜ್ಯವಾದಿಗಳು; ಹಿಂಸಾರಭಸಮತಿಗಳು. ಎರಡನೆಯದಾಗಿ ಮಹಾತ್ಮ ಗಾಂಧಿ, ನೆಲ್ಸನ್ ಮಂಡೇಲಾ, ಮಾರ್ಟಿನ್ ಲೂಥರ್ ಕಿಂಗ್, ಸೂಕಿ ಮುಂತಾದ ಅಹಿಂಸಾವಾದಿಗಳು; 'ಮನುಷ್ಯ ಜಾತಿ ತಾನೊಂದೆವಲಂ' ಎಂದು ತಿಳಿದು ಮಾನವ ಕಲ್ಯಾಣಕ್ಕಾಗಿ ದುಡಿದವರು; ಮೂರನೆಯದಾಗಿ ಸಶಸ್ತ್ರ ಹೋರಾಟದಿಂದಲಾದರೂ ಶೋಷಕರನ್ನು ಹಿಮ್ಮೆಟ್ಟಿಸಿ, ಸಾಮಾಜಿಕ ನ್ಯಾಯವನ್ನು ಸ್ಥಾಪಿಸಬೇಕೆಂದು ದಂಗೆ ಎದ್ದವರು; ಲೆನಿನ್, ಮಾವೋತ್ಸೆ ತುಂಗ್, ಭಗತ್ ಸಿಂಗ್, ಸುಭಾಷ್‌ಚಂದ್ರ ಬೋಸ್, ಅರ್ನೆಸ್ಟೋ ಚೆ ಗೆವಾರ, ಫಿಡಲ್ ಕ್ಯಾಸ್ಟ್ರೋ ಈ ನಮೂನೆಯ ವ್ಯಕ್ತಿಗಳು. ನಾನಿಲ್ಲಿ ಪ್ರಸ್ತಾಪಿಸಲಿರುವುದು ಈ ಮೂರನೆಯ ಗುಂಪಿಗೆ ಸೇರಿದ ಲ್ಯಾಟಿನ್ ಅಮೆರಿಕಾ ಸಂಜಾತ ಅರ್ನೆಸ್ಟೋ ಚೆ ಗೆವಾರನ ಬಗ್ಗೆ.

ಯಾರಿವನು ? ಈತ ನಡುಬಗ್ಗಿಸಿ ಬದುಕುವುದಕ್ಕಿಂತ ನೇರ ನಿಂತು ಸಾಯುವುದು ಮೇಲು ಎಂದವನು; ೨೪ರ ಹರೆಯ ತುಂಬುವುದರೊಳಗೆ (ಹುಟ್ಟಿದ್ದು ೧೯೨೮) ಇಡೀ ಲ್ಯಾಟಿನ್ ಅಮೆರಿಕಾವನ್ನು ಎರಡು ಬಾರಿ ಮೋಟಾರ್ ಸೈಕಲ್ಲಿನಲ್ಲಿ ಒಮ್ಮೆ ೪೫೦೦ ಕಿ.ಮೀ.; ಇನ್ನೊಮ್ಮೆ ೮೦೦೦ ಕಿ.ಮೀ., ಒಟ್ಟು ೧೨೫೦೦ ಕಿ.ಮೀ. ದೂರವನ್ನು ಕ್ರಮಿಸಿ, ಸುತ್ತುಹಾಕುವುದರಲ್ಲಿ ತಾನಂದುಕೊಂಡಿರುವುದಕ್ಕಿಂತ ಹೆಚ್ಚೇ ಬದಲಾದೆನೆಂದು ಹೇಳಿಕೊಂಡವನು. ಈ ಭೂಮಿ ಜಾತಿ–ವರ್ಗ–ಲಿಂಗ ಭೇದವಿಲ್ಲದ ನೆಲೆಯಾಗಬೇಕು ಎಂಬುದು ಚೆ ಗೆವಾರನ ಕನಸಾಗಿತ್ತು. ಕವಿಯ ಮನಸು, ಕ್ರಾಂತಿಯ ಕನಸುಳ್ಳವನು. ಇವನ ಪ್ರವಾಸ ಪೂರ್ವ ನಿಯೋಜಿತ ಪ್ರವಾಸ ಆಗಿರಲಿಲ್ಲ. ಅದು ಅವನ ದೃಷ್ಟಿಯಲ್ಲಿ 'ಬೂರ್ಜ್ವಾ' ಪ್ರವಾಸಿಗನಿಗೆ. "ನಿಜವಾದ ಸಾಹಸಿ ಪ್ರವಾಸಿಗನಿಗೆ ಅವತ್ತಿನದು ಅವತ್ತೇ ನಿರ್ಧಾರವಾಗಬೇಕು" ಎಂದವನು. ಚೆ ಗೆವಾರನ ಎರಡನೇ ಪ್ರವಾಸದ ಸಂದರ್ಭದಲ್ಲಿನ ಕೆಲವು ಡೈರಿ ಸ್ವರೂಪದ ಬರಹಗಳನ್ನು ಆಯ್ದು ಡಾ॥ ಎಚ್. ಎಸ್. ಅನುಪಮಾ ಅವರು ಅನುವಾದಿಸಿ ಕನ್ನಡದ ಯುವ ಚೇತನಗಳಿಗೆ 'ಮೋಟಾರ್ ಸೈಕಲ್ ಡೈರಿ' ಎಂಬ ಶೀರ್ಷಿಕೆಯಲ್ಲಿ ಕೊಟ್ಟಿದ್ದಾರೆ. ಗದುಗಿನ ಬಸೂ ಅವರ ಲಡಾಯಿ ಪ್ರಕಾಶನ ೨೦೧೪ರಲ್ಲಿ ಪ್ರಕಟಿಸಿದೆ. ಚೆ ಗೆವಾರನ ಫೋಟೋಗಳಂತೂ ಕೃತಿಯ ಶೋಭೆಯನ್ನು ಇಮ್ಮಡಿಸಿವೆ.

ಅರ್ನೆಸ್ಟೋ ಚೆ ಗೆವಾರ ಲ್ಯಾಟಿನ್ ಅಮೆರಿಕಾದ ಅರ್ಜೆಂಟೈನಾ ರಾಜ್ಯದ ರೊಸಾರಿಯೋದಲ್ಲಿ ಐರಿಷ್ ಮೂಲದ ಮಧ್ಯಮ ವರ್ಗದ ಕುಟುಂಬ ವೊಂದರಲ್ಲಿ ಹುಟ್ಟಿದವ; ಎಳೆಯ ಅರ್ನೆಸ್ಟೋ ಪದೇ ಪದೇ ಆಸ್ತಮಾದಿಂದ ನರಳಿ ನಿಯಮಿತವಾಗಿ ಶಾಲೆಗೆ ಹೋಗಲಾಗಲಿಲ್ಲ; ಇಂಜಿನಿಯರಿಂಗ್ ಓದಬೇಕೆಂದುಕೊಂಡಿದ್ದವನು ಮನಸ್ಸು ಬದಲಿಸಿ, ೧೯೪೮ರಲ್ಲಿ ಬ್ಯೂನಸ್ ಐರಿಸ್ ವಿಶ್ವವಿದ್ಯಾಲಯದಲ್ಲಿ ಮೆಡಿಕಲ್ ಓದಲು ದಾಖಲಾದ. ೧೯೫೦ರಲ್ಲಿ ಮೋಟಾರ್ ಅಳವಡಿಸಿದ ಬೈಸಿಕಲ್ಲಿನಲ್ಲಿ ೪೫೦೦ ಕಿ.ಮೀ. ಸುತ್ತಾಡಿ ಬಂದ. ಪುನಃ ೧೯೫೧–೫೨ರಲ್ಲಿ ಈತ ಹಾಗೂ ಗೆಳೆಯ ಆಲ್ಬರ್ಟೋ ಗ್ರೆನಾಡೋ ಇಬ್ಬರೂ ಲಾ ಪಡರೋಸಾ – ೨ ಮೋಟಾರ್ ಬೈಕ್ ಏರಿ ಲ್ಯಾಟಿನ್ ಅಮೆರಿಕಾದ ಪ್ರವಾಸ ಕೈಗೊಂಡರು. ೧೯೫೧ರ ಡಿಸೆಂಬರ್‌ನಲ್ಲಿ ಕಾರ್ಡೋಬಾ ಬಿಟ್ಟವರು, ಮೊದಲು ಬ್ಯೂನಸ್ ಐರಿಸ್‌ಗೆ ಹೋಗಿ ಅರ್ನೆಸ್ಟೋ ಕುಟುಂಬದವರಿಗೆ ವಿದಾಯ ಹೇಳಿ ಬೀಳ್ಕೊಟ್ಟರು.

**ಪ್ರೊ ॥ ಶಿವರಾಮಯ್ಯ**

ಆ ಅನುಭವಗಳನ್ನು ಅರ್ನೆಸ್ಟೋ ಆಗ ಮತ್ತು ಅನಂತರ ದಾಖಲಿಸಿದ್ದು ಅದೇ ಪ್ರವಾಸಿಯ ಟಿಪ್ಪಣಿಗಳು ಅಥವಾ 'ಮೋಟಾರ್ ಸೈಕಲ್ ಡೈರಿ'.

ಪ್ರವಾಸ ಮನುಷ್ಯನನ್ನು ಎತ್ತರೆತ್ತರ ಬೆಳೆಸುತ್ತದೆ. ಮತ್ತು ಎತ್ತರೆತ್ತರ ಬೆಳೆದಂತೆಲ್ಲಾ ಅವನು ಹತ್ತಿರ ಹತ್ತಿರವಾಗಬೇಕು ಎಂಬ ಪಾಠವನ್ನೂ ಕಲಿಸುತ್ತದೆ. ಪ್ರವಾಸ ಕೈಗೊಂಡ ದೇಶದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ಅರ್ಥಮಾಡಿಕೊಳ್ಳಲು ಅನುವು ಮಾಡಿಕೊಡುತ್ತದೆ. ತಾನು ಸಂಚರಿಸಿದ ಭೂಭಾಗದ ಜನತೆಯ ಕಷ್ಟ ಪರಂಪರೆಗೆ ಕಾರಣವೇನು? ಕಾರಣರಾರು? ಜನತೆಯ ಶತ್ರುಗಳನ್ನು ನಿವಾರಿಸಲು ಸಾಧ್ಯವೇ? ಸಾಧ್ಯವಾಗುವುದಾದರೆ ಅಲ್ಲಿ ಕೈಗೊಳ್ಳುವ ಮಾರ್ಗೋಪಾಯಗಳೇನು? ಎಂದು ಮುಂತಾಗಿ ಯೋಚಿಸುವಂತಾಗುತ್ತಾನೆ ವ್ಯಕ್ತಿ. ಈ ನಿಟ್ಟಿನಲ್ಲಿ ಧಾರ್ಮಿಕ ದಾಸ್ಯವನ್ನು ಕಿತ್ತೊಗೆಯಲು ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತವನ್ನು ಸುತ್ತಿದರೆ, ಗಾಂಧೀಜಿ ರಾಷ್ಟ್ರವನ್ನು ರಾಜಕೀಯ ದಾಸ್ಯದಿಂದ ಬಿಡುಗಡೆಗೊಳಿಸಲು ಆಸೇತು ಹಿಮಾಚಲ ಸುತ್ತಾಡಿದರು. ಇವರದು ಶಸ್ತ್ರರಹಿತ ಅಹಿಂಸಾ ಹೋರಾಟ. ಸತ್ಯಾಗ್ರಹ, ಧರಣಿ, ಉಪವಾಸಗಳೇ ಇವರ ಅಸ್ತ್ರಗಳು.

ಇದಕ್ಕೆ ತದ್ವಿರುದ್ಧವಾಗಿ ಶೋಷಕರನ್ನು ಆಮೂಲಾಗ್ರವಾಗಿ ಕಿತ್ತೊಗೆಯಲು ಶಸ್ತ್ರಸಜ್ಜಿತರಾಗಿಯೇ ಹೋರಾಟ ಮಾಡಬೇಕು ಎಂದವರು ಕಮ್ಯೂನಿಸ್ಟ್ ಕ್ರಾಂತಿಕಾರಿಗಳು. ಮಾವೋತ್ಸೆ ತುಂಗ್ ೧೯೪೬ರಲ್ಲಿ ತಮ್ಮ ಗೊತ್ತುಗುರಿಯಿಲ್ಲದ ದೀರ್ಘ ಪಯಣದ ಬಗ್ಗೆ ರಾಬರ್ಟ್ ಪೈನ್ ಎಂಬುವವರ ಬಳಿ ಹೇಳಿದ ಮಾತುಗಳಿವು; ಅಕ್ಟೋಬರ್ ೧೬, ೧೯೩೪ರಲ್ಲಿ ಆರಂಭವಾಗಿ ಅಕ್ಟೋಬರ್ ೨೦, ೧೯೩೫ರವರೆಗೆ ಒಟ್ಟು ೩೭೦ ದಿನಗಳಲ್ಲಿ ಸುಮಾರು ೧೨,೬೦೦ ಕಿ.ಮೀ. ಕ್ರಮಿಸಿದ ತನ್ನ ನೇತೃತ್ವದಲ್ಲಿದ್ದ ಪ್ರಥಮ ರಂಗದ ಸೇನೆಗೆ ಎಲ್ಲಿಗೆ ಹೋಗಬೇಕೆಂಬುದೇ ತಿಳಿದಿರಲಿಲ್ಲವಂತೆ. ಹಾಗೆಂದು ಮಾವೋ ಕೈಗೊಂಡ ಆ ಮಹಾ ಪಯಣಕ್ಕೆ ಗೊತ್ತುಗುರಿ ಇರಲಿಲ್ಲ ವೆಂದಲ್ಲ. ಮಾತೃಭೂಮಿಯನ್ನು ಪರಕೀಯರ ದಾಸ್ಯದಿಂದ ಬಿಡುಗಡೆ ಮಾಡಬೇಕು ಎಂಬ ಅಚಲ ಪ್ರತಿಜ್ಞೆ ಅವರ ಕಣ್ಣಾಗಿತ್ತು. ಅದು ೧೯೪೯ ಅಕ್ಟೋಬರ್ ೧ರಂದು ಕೈಗೂಡಿತು. ಚೀನಾದಲ್ಲಿ ಕೆಂಪು ಸೂರ್ಯನ ಉದಯವಾಯಿತು.

ಪ್ರಸ್ತುತ ಚೆ ಗೆವಾರ ಮತ್ತು ಅವನ ಗೆಳೆಯ ಒಂಭತ್ತು ತಿಂಗಳ ಅವಧಿಯಲ್ಲಿ ಲ್ಯಾಟಿನ್ ಅಮೆರಿಕಾವನ್ನು ಮೋಟಾರ್ ಬೈಕಿನಲ್ಲಿ, ದೋಣಿ ತೆಪ್ಪದಲ್ಲಿ, ಹಡಗಿನಲ್ಲಿ ಹಾಗೂ ವಿಮಾನದಲ್ಲಿ ಪ್ರವಾಸ ಕೈಗೊಳ್ಳುತ್ತಾರೆ. ೧೯೫೧ರ ಅಕ್ಟೋಬರ್‌ನಲ್ಲಿ ಹೊರಟು ಅರ್ಜೆಂಟೈನಾ, ಚಿಲಿ, ಪೆರು, ಈಕ್ವೆಡಾರ್, ಕೊಲಂಬಿಯಾ, ವೆನಿಜುವೆಲಾ, ಪನಾಮಾ ಮತ್ತು ಮಯಾಮಿಗಳಲ್ಲಿ ಸುತ್ತಾಡಿ ಅಲ್ಲಿಂದ ಮನೆಗೆ ವಾಪಾಸಾದ ತಿರುಗಾಟದ ಅನುಭವವೇ ಈ ಕೃತಿ. ಡಾ॥ ಅನುಪಮಾ ಅವರು ಪುಸ್ತಕದ ಮೊದಲಿಗೆ ಅರ್ನೆಸ್ಟೋ ಚೆ ಗೆವಾರ ಡಿಲಾಸೆರ್ನಾನನ್ನು ಕುರಿತು 'ಆತ ನನ್ನ ಸಂಗಾತಿ' ಎಂಬ ಆತ್ಮೀಯತೆಯಿಂದ ಮನದುಂಬಿ ಬರೆದಿರುವ ಅವನ ವ್ಯಕ್ತಿಚಿತ್ರ ನಮ್ಮಲ್ಲಿ ಇನ್ನೊಮ್ಮೆ ಮತ್ತೊಮ್ಮೆ ಓದಬೇಕೆಂಬ ಒತ್ತಾಸೆಯನ್ನು ಮೂಡಿಸುತ್ತದೆ. "ಜಗತ್ತಿನ ಯಾವುದೇ ಭಾಗದಲ್ಲಿ ಇರುವ ಶೋಷಿತನಿಗಾಗಿ ನಿನ್ನೆದೆ ಕಂಪಿಸುತ್ತಿದ್ದರೆ ನಾನು ನಿನ್ನ ಸಂಗಾತಿ" ಎಂದವನನ್ನು ಕೇವಲ ಕಮ್ಯೂನಿಸ್ಟ್ ನಾಯಕ, ಗೆರಿಲ್ಲಾ ಹೋರಾಟಗಾರ ಎಂದಷ್ಟೇ ನೋಡಲು ಸಾಧ್ಯವಿಲ್ಲ. 'ಇವ ನಮ್ಮವ' ಎಂಬ ಲೇಖಕರ ಏಕವಚನದ ಬಳಕೆ ಅನುಪಮ!

ಅರ್ನೆಸ್ಟೋ ತನ್ನ ಗೆಳೆಯನೊಂದಿಗೆ 'ಭೇಟಿ

**ಮಾತೆ**

ಮಮತೆಯೆಂಬ
ಬೃಹತ್ ಪಾಠವ
ಮಗುವಿಗೆ ಹೇಳಿಕೊಡುವಳು
ನಿರಕ್ಷರೆಯಾದ
ಮಾತೆ

**ಡಾ॥ ವಿ. ಪುಗಳೇಂದಿ,** ಬಳ್ಳಾರಿ




# ಕ್ರಿಯಾಪದ – ನಾಮಪದ



ಶಿಕ್ಷಕರು ಅದಕ್ಕಾಗಿಯೇ ಮತ್ತೆ-ಮತ್ತೆ ಹೇಳುವುದು
ಮಗೂ, ಭಾಷೆಯ ಜೊತೆಗೆ ವ್ಯಾಕರಣವನ್ನೂ ಕಲಿ
ನಾಮಪದದ ಜೊತೆಗೆ ಕ್ರಿಯಾಪದವನ್ನೂ ತಿಳಿ
ಶಬ್ದ-ಶಬ್ದಗಳ ಅರ್ಥ ತಿಳಿದು ಆಸ್ವಾದಿಸಿ ನಲಿ
ಒಂದೇ ಶಬ್ದಕ್ಕೆ ನಾಮಪದದಲ್ಲೊಂದರ್ಥ
ಅರಿತರೆ ಕ್ರಿಯಾಪದದಲ್ಲಿ ಮತ್ತೊಂದೇ ಅರ್ಥ
ಮೊದಲೇ ತಿಳಿದರೆ ಅವಾಂತರಕ್ಕೆಲ್ಲೂ ಆಸ್ಪದವಿಲ್ಲ
ಮಂಕುದಿಣ್ಣೆ, ಅಂದು ಶೋಭನ್ ಸರ್ಕಾರ್
ಹೇಳಿದ್ದು, 'ಮಂದಿರ ಮೇಂ ಸೋನಾ ಹೈ'
(ನನಗೆ ದೇವಸ್ಥಾನದಲ್ಲಿ ಮಲಗಲಿಕ್ಕಿದೆ)
ಅದಕ್ಕಾಗಿ ಹುಡುಕುತ್ತಿದ್ದರವರು, ಚಾಪೆ,
ಚಾದರ ಮೇಲೊಂದು ತಲೆದಿಂಬು
ಅರ್ಥಾಂತರದಲ್ಲಿ ಪುರಾತತ್ತ್ವ ಇಲಾಖೆ
ಪೇರಿಸಿದ್ದು ಹಾರೆ, ಪಿಕ್ಕಾಸು ಗುದ್ದಲಿ,
ಅರೆರೆ, 'ಮಂದಿರ ಮೇಂ ಸೋನಾ ಹೈ!'
(ದೇವಾಲಯದಲ್ಲಿ ಬಂಗಾರವಿದೆ!)
ತರಿಸಿದರು ಹೈಟೆಕ್ ಯಂತ್ರಗಳ
ವ್ಯರ್ಥವಾಗಿ ಅಗೆದರು ಭೂದೇವಿಯ ಮಡಿಲ
ಕಲಿತಿದ್ದರೆ ನಾಮಪದದ ಜೊತೆಗೆ ಕ್ರಿಯಾಪದ
ಆಗುತ್ತಿತ್ತೆ ಇಷ್ಟೊಂದು ಅವಾಂತರ?
ಅದಕ್ಕೇ ಮಗೂ, ಬಂಗಾರದಂತಹ ಕನಸು ಕಾಣಲು
ಚೆನ್ನಾಗಿ ನಲಿ-ಕಲಿ, ನಿದ್ದೆ ಮಾಡು

**ಡಾ|| ಮಾಧವಿ ಎಸ್. ಭಂಡಾರಿ**
'ಮಂದಾರ'. ಪದ್ಮನಾಭನಗರ ಡಯಾನಾ ಥಿಯೇಟರ್ ಹಿಂಭಾಗ, ಉಡುಪಿ – ೫೭೬೧೦೧

ನೀಡಿದ ಸ್ಥಳಗಳ ಪಟ್ಟಿ ನೋಡಿದರೆ ಅದು ರಜಾ ಕಳೆಯಲು ಅಥವಾ ಅಧ್ಯಯನ ಕುತೂಹಲದಿಂದ ಕೈಗೊಳ್ಳುವ ಪೂರ್ವನಿಯೋಜಿತ ಐಷಾರಾಮಿ ಪ್ರವಾಸವಾಗಿರಲಿಲ್ಲ. ಅಲ್ಲಿ ಪೂರ್ವನಿಶ್ಚಿತವಾಗಿದ್ದುದು ಹೋಗಬೇಕಾದ ಜಾಗವಷ್ಟೆ. ಅಮ್ಮನಿಗೆ ಬರೆದ ಪತ್ರದಲ್ಲಿ ಚೆ, ಹೋಟೆಲು, ಹಾಸ್ಟೆಲುಗಳಲ್ಲಿ ಉಳಿಯುವ ಪೂರ್ವನಿಯೋಜಿತ ಪ್ರವಾಸ 'ಬೂರ್ಷ್ವಾ' ಪ್ರವಾಸ; ನಿಜವಾದ ಸಾಹಸಿ ಪ್ರವಾಸಿಗೆ ಅವತ್ತಿನದು ಅವತ್ತೇ ನಿರ್ಧಾರವಾಗಬೇಕು' ಎಂದಿದ್ದಾನೆ (ಪುಟ–೧೧). 'ಚಲಿಸಲ್ ಸೃಷ್ಟಿ, ನಿಲಲ್ ಪ್ರಳಯ' ಎಂಬ ಕವಿವಾಣಿಯಂತೆ ಚಲನಶೀಲ ಪ್ರವಾಸಕ್ಕೆ ಏನೋ ಚೈತನ್ಯವಿದೆ. ಮನುಷ್ಯ ತನ್ನನ್ನು ತಾನು ನೋಡಿಕೊಳ್ಳುವ ಬಗೆಯನ್ನು ಅದು ಕಲಿಸುತ್ತದೆ. ಚೆ ಗೆವಾರನ ಸುತ್ತಾಟ ಅವನಿಗೆ ಲ್ಯಾಟಿನ್ ಅಮೆರಿಕಾವನ್ನು ನೋಡುವ ಇನ್ನೊಂದು ಬಗೆಯನ್ನು ಕಾಣಿಸಿತು. ಹಲವಾರು ದೇಶಗಳನ್ನು ಸುತ್ತಿ ಅಲ್ಲಿನ ಜನರನ್ನು ಬಾಧಿಸುತ್ತಿರುವ ಕಾಯಿಲೆ ಯಾವುದು? ಅದಕ್ಕೆ ಮದ್ದೇನು? ಎಂಬುವುದನ್ನು ಪರ್ಯಾಲೋಚಿಸಲು ಸಾಧ್ಯವಾಯಿತು. ಆ ಟಿಪ್ಪಣಿಗಳಲ್ಲಿ ಆತ ಚಿಲಿಯ ಗಣಿ ಕಾರ್ಮಿಕರ ದುಃಸ್ಥಿತಿಯ ಬಗ್ಗೆ ಬರೆಯುತ್ತಾನೆ. ಮಾರ್ಗಮಧ್ಯದಲ್ಲಿ ಭೇಟಿಯಾದ ನಿರ್ಗತಿಕ ಕಮ್ಯೂನಿಸ್ಟ್ ದಂಪತಿಯನ್ನು ಕಂಡು ಮರುಗುತ್ತಾನೆ. 'ಮಚುಪಿಚು' (ಹಳೆಯ ಪರ್ವತ)ವಿನ ಮೂಲ ನಿವಾಸಿಗಳನ್ನು ಯೂರೋಪಿಯನ್ ವಸಾಹತು ಶಾಹಿಗಳು ಹೇಗೆ ನಿರ್ನಾಮ ಮಾಡಿದ್ದಾರೆಂಬುದನ್ನು ಗುರ್ತಿಸುತ್ತಾನೆ. ಕುಷ್ಠರೋಗ ಕಾಲನಿಗಳಲ್ಲಿ ರೋಗಿಗಳು ತೋರಿಸಿದ ಪ್ರೀತಿಗೆ ಭಾವುಕ ನಾಗುತ್ತಾನೆ. ಲ್ಯಾಟಿನ್ ಅಮೆರಿಕಾದ ದೇಶಗಳು ಚಿನ್ನ, ಬೆಳ್ಳಿ, ತಾಮ್ರ, ವಜ್ರ ಮುಂತಾದ ಖನಿಜ ಗಳಿಂದಲೂ ಅಮೆಜ಼ಾನಿನ ನಿತ್ಯಹರಿದ್ವರ್ಣದ ಕಾಡುಗಳಿಂದಲೂ ಸಂಪದ್ಭರಿತವಾಗಿದ್ದೂ ಸಹ ಹಿಂದುಳಿದಿರುವುದಕ್ಕೆ ಕಾರಣವೇನೆಂದು ಚಿಂತಿತ ನಾಗುತ್ತಾನೆ. ಆ ಚಿಂತನೆಯ ಬೆಳಕಿನಲ್ಲಿ ನೋಡಿದ ವನಿಗೆ ಸ್ಪಷ್ಟವಾಗುವುದೇನೆಂದರೆ, ಕೊಲಂಬಸ್‌ನನ್ನು ಹಿಂಬಾಲಿಸಿದ ಸಾಮ್ರಾಜ್ಯಶಾಹಿಗಳ ಹಾಗೂ ವರ್ತಮಾನದ ನವ ವಸಾಹತುಶಾಹಿ ಬೃಹತ್ ಕಂಪನಿಗಳ ಶೋಷಕ ಪ್ರವೃತ್ತಿ ಹಾಗೂ ಸ್ವಹಿತಾಸಕ್ತಿಯ ಸ್ಥಳೀಯ ಆಡಳಿತಗಾರರ ದಳ್ಳಾಳಿತನವೂ ಕಾರಣವೆಂಬುದು ತಿಳಿದುಬರುತ್ತದೆ. ಒಟ್ಟಾರೆಯಾಗಿ ಉತ್ತರ ಅಮೆರಿಕಾದ ಹಿಡಿತ ಹಾಗೂ ಮೂಲನಿವಾಸಿಗಳ ಮೇಲೆ ಆಗುತ್ತಿರುವ ಅನ್ಯಾಯ ಇವು ಅರ್ನೆಸ್ಟೋನ ನಿದ್ರೆ ಕೆಡಿಸುತ್ತವೆ.

ದುಡ್ಡಿಲ್ಲವೆಂದು ಮಗುವಿಗೆ ಚಿಕಿತ್ಸೆ ಕೊಡಿಸ ಲಾರದ ತಂದೆ ತಾಯಿಯರು; ನಿರಂತರ ಕಿತ್ತು ತಿನ್ನುವ ಹಸಿವು, ಬಡತನ, ರೋಗರುಜಿನಗಳು; ಬಲಿ ಕೇಳುವ ಮೂಢನಂಬಿಕೆಗಳು; ಅಪಘಾತದಲ್ಲಿ ಮಗ ಸತ್ತರೆ ಅವನ ವಿಧಿ ಎಂದು ತೆಪ್ಪಗಾಗುವ ಅಸಹಾಯಕರು; ಹೀಗೆ ಹಲವಾರು ಶೋಚನೀಯ ದೃಶ್ಯಗಳು ಅವನ ಮೋಟಾರ್ ಸೈಕಲ್ ಪ್ರಯಾಣದ ಎದುರು ಸರಿದುಹೋಗುತ್ತ ಅವನ ಅಂತರಂಗವನ್ನು ಕಲಕುತ್ತವೆ. ಈ ಪ್ರಯಾಣದ ಕೊನೆಯಲ್ಲಿ ಅವನಿಗೆ ಅಲ್ಲಿನ ಎಲ್ಲ ಸಮಸ್ಯೆಗಳಿಗೆ ಉತ್ತರ ಅಖಂಡ ಲ್ಯಾಟಿನ್ ಅಮೆರಿಕಾ, ಶ್ರಮಿಕರ ಅಂತರರಾಷ್ಟ್ರೀಯತೆ ಹಾಗೂ ವಿಶ್ವ ಕ್ರಾಂತಿಯಲ್ಲಿದೆ ಎಂಬುದು ಮನದಟ್ಟಾಗುತ್ತದೆ. ಚೆ ಗಡಿಯಿಲ್ಲದ ಏಕೀಕೃತ ಹಿಸ್ಪ್ಯಾನಿಕ್ ಅಮೆರಿಕಾವನ್ನು ಕಲ್ಪಿಸಿಕೊಂಡು ಇದನ್ನೇ ಮುಂದೆಯೂ ಪ್ರತಿಪಾದಿಸುತ್ತ ಬಂದ. ಚೆ ಗೆವಾರನ ಟಿಪ್ಪಣಿಗಳನ್ನು ಓದುತ್ತಿದ್ದರೆ ಹಾದಿ ಮೇಲೆ ಹಾದುಹೋಗುವ ಸಂವೇದನಾಶೀಲ ವ್ಯಕ್ತಿ ತನ್ನ ಸುತ್ತಮುತ್ತಲ ಆಗುಹೋಗುಗಳನ್ನು ಹೇಗೆ ಗ್ರಹಿಸಬಲ್ಲ ಮತ್ತು ಆ ತಿರುಗಾಟದ ಅನುಭವವೇ ಹೋರಾಟಗಾರನನ್ನು ಹೇಗೆ ರೂಪಿಸಬಲ್ಲುದು ಎಂಬುದನ್ನು ತಿಳಿಯಲು ಅನುವು ಮಾಡಿ ಕೊಡುತ್ತದೆ. ಈ ಗೆಳೆಯರಿಬ್ಬರೂ ಮುಂದಿನ ಊಟ ಎಲ್ಲಿ, ಡ್ರಿಂಕ್ಸ್ ಎಲ್ಲಿ ಸಿಕ್ಕೀತು ಎಂದು ಯೋಚಿಸದೆ ಹುಡುಗಾಟದ ಹುಡುಗರಾಗಿ ಹೊರಟವರು. ಆದರೆ ಆ ಒಂಭತ್ತು ತಿಂಗಳ ತಿರುಗಾಟದ ಕೊನೆಗೆ ಚೆ ಗೆವಾರ ತನ್ನ ಹುಟ್ಟುಹಬ್ಬದ ಕೇಕನ್ನು ಅಖಂಡ ಲ್ಯಾಟಿನ್ ಅಮೆರಿಕಕ್ಕಾಗಿ ಕತ್ತರಿಸುವಷ್ಟು ಪರಿಣತ ಪ್ರಜ್ಞನಾಗಿ ಬೆಳೆದ. ಇದನ್ನು ಕಂಡು ನಾವು ಚಕಿತರಾಗುತ್ತೇವೆ.

ಲ್ಯಾಟಿನ್ ಅಮೆರಿಕ ಭಾರಿ ತ್ರಿಕೋನದಂತೆ ಇರುವ, ಬಹುತೇಕ ಉಷ್ಣವಲಯದಲ್ಲಿರುವ, ಉತ್ತರದಲ್ಲಿ ಅಗಲವಾಗಿದ್ದು ದಕ್ಷಿಣಕ್ಕೆ ಕ್ರಮೇಣ ಕಿರಿದಾಗುತ್ತ ದಕ್ಷಿಣದ ತುದಿಯಲ್ಲಿ ಎರಡೂ ಬಾಹುಗಳು ಕೂಡುವ, ಸಮಭಾಜಕ ವೃತ್ತದಿಂದ ದಕ್ಷಿಣಕ್ಕೆ ಇದೆ. ಉತ್ತರಾರ್ಧಗೋಳದಲ್ಲಿ ಬೇಸಿಗೆ ಇದ್ದಾಗ ಇಲ್ಲಿ ಚಳಿಗಾಲ. ಉತ್ತರದ ಋತುಗಳಿಗೆ



ವಿಲೋಮವಾಗಿ ಇಲ್ಲಿ ಋತು ಆವರ್ತಿಸುತ್ತದೆ. ಖಂಡದ ಪಶ್ಚಿಮದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಆ್ಯಂಡಿಸ್ ಪರ್ವತ ಶ್ರೇಣಿ ಹಬ್ಬಿದೆ. ಹಿಮಾಲಯವನ್ನು ಬಿಟ್ಟರೆ ಇದೇ ಪ್ರಪಂಚದ ಅತ್ಯುನ್ನತ ಪರ್ವತ ಸಾಲು, ಆ ಗಿರಿಶಿಖರಗಳು ಹಿಮಾವೃತ. ಈ ಪರ್ವತಗಳಡಿಯಲ್ಲಿ ಅನೇಕ ಖನಿಜ ನಿಕ್ಷೇಪಗಳಿವೆ. ಆದರೆ ಈ ಪ್ರದೇಶದಲ್ಲಿ ಅಗ್ನಿ ಪರ್ವತಗಳು ಆಗಾಗ ಅನಾಹುತ ಎಸಗುತ್ತವೆ. ಭೂಕಂಪಗಳು ಆಗಾಗ ಸಂಭವಿಸುತ್ತಲೇ ಇರುತ್ತವೆ. ಇಡೀ ನಗರಗಳೇ ನಾಶವಾಗಿರುವುದುಂಟು.

ಲ್ಯಾಟಿನ್ ಅಮೆರಿಕಾದಲ್ಲಿ ಹೆಚ್ಚು ಜನ ಸ್ಪ್ಯಾನಿಷ್, ಪೋರ್ಚುಗೀಸ್ ಮತ್ತು ಫ್ರೆಂಚ್ ಭಾಷೆಗಳನಾಡುತ್ತಾರೆ. ಆದ್ದರಿಂದ ಇದು ಲ್ಯಾಟಿನ್ – ಅಮೆರಿಕ. ಕೊಲಂಬಸ್ ೧೪೯೨ರಲ್ಲಿ ಈ ಖಂಡವನ್ನು ಪತ್ತೆಹಚ್ಚಿದ. ಆ ವೇಳೆಗೆ ಅಮೆರಿಕದ ಮೂಲ ನಿವಾಸಿಗಳಾದ ರೆಡ್ ಇಂಡಿಯನ್ನರು ಅಲ್ಲಿ ವಾಸವಾಗಿದ್ದರು. ಆ್ಯಂಡಿಸ್ ಭಾಗದಲ್ಲಿ 'ಇಂಕಾ', ಮೆಕ್ಸಿಕೋದಲ್ಲಿ 'ಆಜ್ಟೆಕ್' ಮತ್ತು ಮಧ್ಯ ಅಮೆರಿಕಾದಲ್ಲಿ 'ಮಾಯಾ' ನಾಗರಿಕತೆಗಳಿದ್ದವು. ಯೂರೋಪಿಯನ್ನರು ಈ ಭೂಭಾಗಗಳನ್ನು ವಶಪಡಿಸಿಕೊಂಡು ಮೂಲ ನಿವಾಸಿಗಳ ಭಾಷೆ, ಸಂಸ್ಕೃತಿ ಹಾಗೂ ನಾಗರಿಕತೆಗಳು ನಶಿಸಿಹೋಗುವಂತೆ ವಸಾಹತುಗಳನ್ನು ಸ್ಥಾಪಿಸಿದರು. ೧೫ನೇ ಶತಮಾನದಲ್ಲಿ ಒಂದೊಂದೇ ವಸಾಹತುಗಳು ಸ್ವಾತಂತ್ರ್ಯ ಗಳಿಸಲು ಪ್ರಾರಂಭಿಸಿದವು (ಕನ್ನಡ ವಿಶ್ವಕೋಶ, ಸಂಪುಟ–೧೪).

ಇಂಥ ಒಂದು ಖಂಡವನ್ನು ಮೋಟಾರ್ ಸೈಕಲ್ಲಿನಲ್ಲಿ ಸುತ್ತಿ ನೋಡಲು ಹೊರಟವರು ಈ ಗೆಳೆಯರು. ಇವರು ಮೋಟಾರ್ ಬೈಕ್ ರೇಸ್‌ಗಾಗಲೀ, ಐಷಾರಾಮಿ ತಿರುಗಾಟಕ್ಕಾಗಲಿ ಹೊರಟವರಲ್ಲ. ಗುಡ್ಡಬೆಟ್ಟಗಳನ್ನು ಏರಿ, ನದಿ ಸರೋವರಗಳನ್ನು ದಾಟಿ, ಪರ್ವತಗಳು, ಕಣಿವೆಗಳು, ಕಂದರಗಳಲ್ಲಿಳಿದು, ಮೈದಾನಗಳಲ್ಲಿ ಹಾದು ಸಾಗಿದರು. ಐಸ್‌ಪಿನ್ನಿನಂತೆ ಕೊರೆವ ಚಳಿ; ಮೈ ಸುಟ್ಟು ಮಸಿ ಕಟ್ಟುವಂತಹ ಬಿಸಿಲು. ಗಾಳಿ, ಮಳೆ, ಚಂಡಮಾರುತ ಒಮ್ಮೆ ಇವರ ಟೆಂಟನ್ನೇ ಹಾರಿಸಿದವು. ಪಂಕ್ಚರ್ ಆದ ಮೋಟಾರ್ ಬೈಕ್ ರಿಪೇರಿ, ಹೊತ್ತು ಹೊತ್ತಿನ ಊಟ ತಿಂಡಿ ಪಾನೀಯಗಳಿಗೆ ತತ್ವಾರ, ಹಣವಿಲ್ಲದಾಗ ಕೂಲಿ ಕೆಲಸ, ಹಡಗು ದೋಣಿಗಳಲ್ಲಿ ಟಾಯ್ಲೆಟ್ ಕ್ಲೀನಿಂಗ್, ಟ್ರಕ್ಕುಗಳಿಗೆ ಮೂಟೆ ತುಂಬುವುದು, ಫುಟ್ಬಾಲ್ ಹುಡುಗರಿಗೆ ತರಬೇತಿ, ಕುಷ್ಠರೋಗಿ ಕಾಲನಿಯಲ್ಲಿ ರೋಗ ತಪಾಸಣೆ, ಫ್ಲೂ ಜ್ವರದಿಂದ ನರಳಿದ್ದು, ಅಡುಗೆ ಸಹಾಯಕರಾಗಿ ದುಡಿದದ್ದು, ಅರ್ನೆಸ್ಟೋಗೆ ದಿನಕ್ಕೆ ನಾಲ್ಕು ಆಡ್ರಿನಲಿನ್ ಇಂಜೆಕ್ಷನ್, ಒಮ್ಮೊಮ್ಮೆ ಆಲ್ಬರ್ಟೋ ನಾಲ್ಕು ತಾಸಿಗೊಮ್ಮೆ ಪೆನ್ಸಿಲಿನ್ ತೆಗೆದುಕೊಂಡದ್ದು, ತೆಪ್ಪದಲ್ಲಿ ರಾತ್ರಿ ಹೊತ್ತು ಎತ್ತೆತ್ತಲೋ ಹೋಗಿ ದಿಕ್ಕು ತಪ್ಪಿದ ಪ್ರಸಂಗಗಳು... ಹೀಗೆ ಹಲವಾರು ಕಷ್ಟ ಪರಂಪರೆಗಳು ಎದುರಾಗಿದ್ದವು.

ಲ್ಯಾಟಿನ್ ಅಮೆರಿಕಾದ ಈ ತಿರುಗಾಟ ಮುಂದೆ ಅವನ ಹೋರಾಟಕ್ಕೆ ಮುನ್ನುಡಿ ಬರೆಯಿತು. ಈ ಪುಸ್ತಕದ ಟಿಪ್ಪಣಿಗಳು ಅವನ ಹೋರಾಟದ ದಿಕ್ಕು – ದೆಸೆಗಳನ್ನು, ಧಾಟಿ – ಧೋರಣೆಯನ್ನು ತೆರೆದಿಡುತ್ತವೆ. ತಿರುಗಾಟದ ನಡುವೆ ಆತ ತನ್ನ ಪ್ರೀತಿಯ ಅಮ್ಮನಿಗೆ, ಅಪ್ಪನಿಗೆ ಬರೆದಿರುವ ಕಾಗದಗಳು ಆತನನ್ನು ಮಾನವ ಪ್ರೀತಿಯ ಮಹೋನ್ನತ ನೆಲೆಗೆ ಕೊಂಡೊಯ್ಯುತ್ತವೆ. ಒಮ್ಮೆ ಆತ ಹೀಗೆ ಟಿಪ್ಪಣಿಸುತ್ತಾನೆ: ನಾಳೆಯನ್ನು ನೋಡುವುದೇ ದೊಡ್ಡ ಗುರಿಯಾದ, ಕೊನೆಯ ಕ್ಷಣಗಳಲ್ಲಿ ಬದುಕುತ್ತಿರುವ ಜನರನ್ನು ನೋಡಿದರೆ ವಿಶ್ವದಾದ್ಯಂತ ಶ್ರಮಿಕ ಜೀತಗಾರರ ಬದುಕಿನ ದುರಂತವನ್ನು ಊಹಿಸಲು ಸಾಧ್ಯವಾಗುತ್ತದೆ. ನಮ್ಮ ಸುತ್ತಲ ನಿಗೂಢಗಳಲ್ಲಿ ಇನ್ನೇನು ಲೀನವಾಗುವ, ಆ ಸಾಯುತ್ತಿರುವ, ಶೂನ್ಯದಲ್ಲಿ ಕಳೆದುಹೋಗುತ್ತಿರುವ ಕಣ್ಣುಗಳಲ್ಲಿ ಕ್ಷಮೆಗಾಗಿ, ಒಂದು ಹಿಡಿ ಪ್ರೀತಿಗಾಗಿ ಯಾಚನೆ ಕಾಣಿಸಿಕೊಳ್ಳುತ್ತದೆ. ವರ್ಗವೆಂಬ ವಿಲಕ್ಷಣ ಆದರ್ಶದ ಮೇಲೆ ನಿಂತಿರುವ ಈ ವ್ಯವಸ್ಥೆ ಇನ್ನೆಷ್ಟು ದಿನ ಮುಂದುವರಿಯುವುದೋ? ಗೊತ್ತಿಲ್ಲ! (ಪು. ೯೨). ಇದು ಚೆ ಗೆವಾರನ ಅಂದಿನ ತಲ್ಲಣ, ತಳಮಳ.

ವರ್ಗ ವ್ಯವಸ್ಥೆಯನ್ನು ಅಲುಗಾಡಿಸುವ, ಸಮಾನತೆಯನ್ನು ತರುವ ಆಶಯ ೨೪ರ ಹರೆಯದ ಆ ಕಣ್ಣುಗಳಲ್ಲಿ ಮಿಂಚುತ್ತದೆ. ಅಷ್ಟೇ ಅಲ್ಲ, ಆಮೇಲಿನ ತನ್ನ ಹೋರಾಟಕ್ಕೆ ಇನ್ನಷ್ಟು ಗಟ್ಟಿಗೊಳ್ಳುತ್ತಾನೆ. ಲ್ಯಾಟಿನ್ ಅಮೆರಿಕಾದ ಆದಿಮ ಸಮಾಜ 'ಇಂಕಾ' ನಾಗರಿಕತೆಯ ಬಗ್ಗೆ ಅತೀವ ಅಭಿಮಾನ ವ್ಯಕ್ತಪಡಿಸುವ ಅರ್ನೆಸ್ಟೋ ಟರಾಟಾ ಕಣಿವೆಯನ್ನು ಪ್ರವೇಶಿಸಿ ಅಲ್ಲಿರುವ ಅವಶೇಷವಾದ ವಸಾಹತು ಕಾಲದ ಚರ್ಚ್‌ನ್ನು ಕುರಿತು 'ಪುರಾತತ್ವ ಇಲಾಖೆಯ ಮಾಣಿಕ್ಯ' ಎಂದು ಕೊಂಡಾಡುವನು. ಆದರೆ ಸ್ಪ್ಯಾನಿಷ್ ಜನರು ಅಲ್ಲಿ ಪ್ರವೇಶಿಸಿದಾಗ ಮಾಡಿರುವ ಗಾಯದ ಕಲೆಗಳನ್ನೂ ಅಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಅವಶೇಷಗಳ ಮೂಲಕ ಹಾಗೂ ವಿದೇಶಕ್ಕೆ ಕೊಂಡೊಯ್ದಿರ ಬಹುದಾದ ಗಣತಿಯನ್ನೂ ಊಹಿಸುತ್ತಾನೆ. 'ಇಂಕಾ' ಸಂಸ್ಕೃತಿಯ ಸಂಗಮ ಕಣಿವೆ ಟರಾಟಾ. ಆದರೆ ಈಗ ಅಲ್ಲಿರುವುದು ಸೋತ ಜನ ಸಮುದಾಯ. ಕೆಲವರ ಪ್ರಕಾರ ಅವರು ಬದುಕುತ್ತಿದ್ದಾರೆ. ಏಕೆಂದರೆ ಆ ಅಭ್ಯಾಸವನ್ನು ಅವರಿಂದ ಬಿಡಿಸಲು ಸಾಧ್ಯವಿಲ್ಲ. (ಪು – ೧೦೫). ಜ಼ೀರೋ ಡಿಗ್ರಿ ಸೆಲ್ಸಿಯಸ್‌ನಲ್ಲಿ ನಿಂತ ವ್ಯಕ್ತಿಯ ಮೇಲೆ ಮಂಜಿನ ಮಳೆಗರೆದಂತಿವೆ ಅವನ ಈ ಮಾತುಗಳು.

ಮುಂದಿನ ಅವನ ಜೀವನ ವೃತ್ತಾಂತವನ್ನು ಅನುವಾದಕರು ವಿವಿಧ ಮೂಲಗಳಿಂದ ಸಂಗ್ರಹಿಸಿ ನೀಡುತ್ತಾರೆ: ಅವೆಂದರೆ ಬಂಡವಾಳಶಾಹಿ ಅಮೆರಿಕಾ ಹಾಗೂ ಕಮ್ಯೂನಿಸ್ಟ್ ದೇಶಗಳು ಪೈಪೋಟಿಯಿಂದ, ಸಂಘರ್ಷಕ್ಕಿಳಿದದ್ದು; ಅಮೆರಿಕಾದ ಬಹುರಾಷ್ಟ್ರೀಯ ಕಂಪನಿಗಳು ಲ್ಯಾಟಿನ್ ಅಮೆರಿಕಾದ ಕಾಡುಗಳು, ಖನಿಜಗಳು ಹಾಗೂ ನೆಲವನ್ನು ಸೂರೆಗೊಂಡದ್ದು; ದೇಶದಲ್ಲಿ ನಿರುದ್ಯೋಗ, ಬಡತನ, ಹಸಿವು, ಕಾಯಿಲೆ, ದಬ್ಬಾಳಿಕೆ, ದೌರ್ಜನ್ಯ ಎಲ್ಲೆ ಮೀರಿದ್ದು; ಕ್ಯಾಪಿಟಲಿಸ್ಟ್ ಆಕ್ಟೋಪಸ್‌ಗಳು ರೈತರನ್ನು ನೆಲವನ್ನು ಹಿಡಿದಿಟ್ಟದ್ದು; ಗ್ವಾಟೆಮಾಲಾದಲ್ಲಿ ಅರ್ಬೆಂಜೋನ ಚುನಾಯಿತ ಸರ್ಕಾರವನ್ನು ಉರುಳಿಸಿ ಸಿಐಎ ಬೆಂಬಲಿಗನನ್ನು ತಂದು ಕೂರಿಸಿದ್ದು... ಇತ್ಯಾದಿ. ಇಂಥ ಸಂದರ್ಭದಲ್ಲಿ ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೋ ಮತ್ತು ಚೆ ಗೆವಾರ ಜೊತೆಗೂಡಿ ಅಮೆರಿಕಾವನ್ನು ಹಿಮ್ಮೆಟ್ಟಿಸಲು 'ವಿಯೆಟ್ನಾಂ ಮಿಡಿತೆಗಳಂತೆ' ಅಣಿಯಾದರು. ಕ್ಯೂಬಾದ ಸರ್ವಾಧಿಕಾರಿ ಬ್ಯಾಟಿಸ್ಟಾನನ್ನು ಕೆಳಗಿಳಿಸಲಾಯಿತು (೧೯೫೯). ತದನಂತರ ವಿಶ್ವದ ಅನೇಕ ರಾಷ್ಟ್ರಗಳಿಗೆ ಚೆ ಭೇಟಿ ನೀಡಿದ. ಕ್ಯೂಬಾದ ಪೌರತ್ವವನ್ನು ಪಡೆದು ಬ್ಯಾಂಕ್ ರಾಷ್ಟ್ರೀಕರಣಕ್ಕೆ ಚಾಲನೆ ನೀಡಿದ (೧೯೬೦). ಕೈಗಾರಿಕಾ ಮಂತ್ರಿಯಾದ. ಕಾಂಗೋದ ಪ್ಯಾಟ್ರಿಸ್ ಲುಮುಂಬಾಗೆ ಬೆಂಬಲ ಸೂಚಿಸಿದ (೧೯೬೫). ಕಡೆಗೆ ಸೋವಿಯತ್ ರಷ್ಯಾ ಕೂಡ ಅಮೆರಿಕದ ಹಾಗೆಯೇ ಸಾಮ್ರಾಜ್ಯಶಾಹಿ ಎಂದು ಛೇಡಿಸಿ, ಕ್ಯೂಬಾದ ನಂಟನ್ನು ಕಡಿದುಕೊಂಡು, ಬೊಲಿವಿಯಾಗೆ ಮಾರುವೇಷದಲ್ಲಿ ಪ್ರಯಾಣಮಾಡಿದ. ಅಲ್ಲಿ ಸಶಸ್ತ್ರ ಪಡೆಗೆ ತರಬೇತು ನೀಡಲು ಮುಂದಾದ. ಆದರೆ ಇವನಿದ್ದ ಗೆರಿಲ್ಲಾ ಪಡೆಗಳನ್ನು ೧೯೬೭ರ ಅಕ್ಟೋಬರ್‌ನಲ್ಲಿ ಸೆರೆಹಿಡಿದ ಅಮೆರಿಕಾದ ಸಿಐಎ ಏಜೆಂಟರು ಅವನ ಜೊತೆಗಿದ್ದ ಎಲ್ಲಾ ೧೭ ಜನ ಗೆರಿಲ್ಲಾಗಳನ್ನೂ ಚೆ ಗೆವಾರನನ್ನೂ ಮುಗಿಸಿದರು. ಆಗ ಅವನಿಗಿನ್ನೂ ೩೯ ವರ್ಷ ಮಾತ್ರ.

**ಪ್ರೊ॥ ಶಿವರಾಮಯ್ಯ**
೧೭೨, ಹೊಂಗೆಸಾಲುಮನೆ, ಐಸೆಕ್ ರಸ್ತೆ
ನಾಗರಭಾವಿ ಗ್ರಾಮ, ಬೆಂಗಳೂರು – ೫೬೦ ೦೭೨

ವಿ. ಚಂದ್ರಶೇಖರ ನಂಗಲಿ

# ಬಹುಜಿಹ್ವಾಭಾರತಿಗೆ ಬಹುಭಾಷಾನೀತಿ

ಒಂದು ಭಾಷೆಯ ಅಂತಸ್ಥ ಬಹುಭಾಷಿಕತೆ ಅಥವಾ ಉಪಭಾಷಿಕ ವೈವಿಧ್ಯಕ್ಕೆ ಮಾನ್ಯತೆ ಸಿಗುವುದು ಭಾಷಾ ಸಂಸ್ಕೃತಿಯ ಪ್ರಭುತ್ವದಲ್ಲಿ ಮಾತ್ರ. ಭಾಷೆ – ಸಂಸ್ಕೃತಿ – ಪ್ರಭುತ್ವಗಳ ಮಧ್ಯೆ ಅವಿಭಾಜ್ಯ ಸಂಬಂಧವಿದ್ದಾಗ ಉಪಭಾಷಿಕ ವೈವಿಧ್ಯಕ್ಕೆ ಸಹಜವಾದ ಮನ್ನಣೆಯಿರುತ್ತದೆ. ಇವು ಮೂರು ದಾರಿಗಳಾದಾಗ ಜನಭಾಷೆ ಗ್ರಾಂಥಿಕಭಾಷೆ – ಪ್ರಭುತ್ವಭಾಷೆಗಳೆಂಬ ಮೂರು ಸೀಳುಗಳುಂಟಾಗುತ್ತವೆ. ಕನ್ನಡದ ಜನಭಾಷೆಗಳು – ಕನ್ನಡದ ಗ್ರಂಥಭಾಷೆ – ಕನ್ನಡದ ಪ್ರಭುತ್ವಭಾಷೆ ಸಂಪೂರ್ಣ ಬೇರೆ ಬೇರೆಯಾಗಿದ್ದು ಭಾಷಿಕವಾದ ಪ್ರತ್ಯೇಕ ದ್ವೀಪಗಳಾಗಿ ಬಿಟ್ಟಿದೆ. ಜನಭಾಷೆ – ಗ್ರಂಥಭಾಷೆ – ಪ್ರಭುತ್ವಭಾಷೆಗಳ ಮಧ್ಯೆ ಒಳಹೊಕ್ಕು ಬರುವ ಸಂಬಂಧವಿರಬೇಕು. ಅಂದರೆ ಇವು ಮೂರೂ ಒಂದೇ ಆಗಿರಲು ನಿರಂತರ ಪ್ರಯತ್ನಿಸುತ್ತಿರಬೇಕು. ಒಂದಾಗದೆ ಮೂರು ದಾರಿಗಳಾಗಿಬಿಡುವುದು 'ಭಾಷಿಕ ಪ್ರಜಾಪ್ರಭುತ್ವ' ಎನಿಸಿಕೊಳ್ಳುವುದಿಲ್ಲ.

ಕುವೆಂಪು ಅವರು ಭಾರತಾಂಬೆಯನ್ನು 'ಬಹುಜಿಹ್ವಾಭಾರತಿ' ಎಂದು ಕರೆದಿದ್ದಾರೆ. ಜಿಹ್ವೆ ಎಂದರೆ ನಾಲಿಗೆ ಎಂದರ್ಥ. 'ಮದರ್ ಟಂಗ್' ಎಂಬಲ್ಲಿ ಕೂಡ 'ನಾಲಿಗೆ' ಎಂಬ ಶಬ್ದವಿದೆ. 'ಅನೇಕ ನಾಲಿಗೆಗಳನ್ನುಳ್ಳ ಭಾರತಿ' – ಎಂದರೆ ಬಹುಭಾಷೆಗಳನ್ನು ಬಲ್ಲ ಭಾರತೀಯರು ಎಂದೇ ಅರ್ಥ! ಈ ದೃಷ್ಟಿಯಿಂದ ಒಂದೇ ಒಂದು ಭಾಷೆಯನ್ನು ಬಲ್ಲವರು ಭಾರತಾಂಬೆಯ ಮಕ್ಕಳಲ್ಲ. ಅನೇಕ ಭಾಷೆಗಳನ್ನು ದೈನಂದಿನ ವ್ಯವಹಾರದಲ್ಲಿ ಬಳಸುವವರೇ ನಿಜವಾದ ಭಾರತೀಯರು.

'ಗಡಿ ಸಮಾವೇಶ'ದ ಅಂಗವಾಗಿ ಗಡಿ, ಗಡಿಭಾಗ, ಗಡಿನಾಡು, ಗಡಿ ಸಮಸ್ಯೆಗಳು ಎಂಬ ಮಾತುಗಳನ್ನಿಲ್ಲಿ ಬಳಸಲಾಗಿದೆ. ಚಾಣಕ್ಯನು 'ಅರ್ಥಶಾಸ್ತ್ರ' ಗ್ರಂಥದಲ್ಲಿ ಗಡಿಪ್ರದೇಶಗಳ ನಿರ್ವಹಣೆಯನ್ನು ರಾಜ ಪ್ರಭುತ್ವಗಳು ಹೇಗೆ ನಿಭಾಯಿಸಬೇಕು ಎಂಬುದನ್ನು ನಿರೂಪಿಸಿದ್ದಾನೆ. ಇಲ್ಲಿ ನಾವು ಚಾಣಕ್ಯನ ಅಥವಾ ಕೌಟಿಲ್ಯನ ಕುಟಿಲನೀತಿ ಮತ್ತು ರಾಜಕೀಯ ತಂತ್ರಜ್ಞಾನವನ್ನು ಗುರುತಿಸಬಹುದು. ಕೌಟಿಲ್ಯನ ಪ್ರಕಾರ ರಾಜರು ಗಡಿಪ್ರದೇಶದಲ್ಲಿ ಉದ್ವಿಗ್ನತೆಯ ವಾತಾವರಣವನ್ನು ಸೃಷ್ಟಿಸಬೇಕು. ಗಡಿಭಾಗದಲ್ಲಿ ಯುದ್ಧಗಳನ್ನು, ಕಲಹಗಳನ್ನು ಸದಾ ಉಂಟುಮಾಡುತ್ತಾ ಪ್ರಜೆಗಳ ಮನಸ್ಸಿನಲ್ಲಿ ರಾಜರು ನಮ್ಮ ಸಂರಕ್ಷಣೆ ಮಾಡುತ್ತಿದ್ದಾರೆ ಎಂಬ ಭಾವನೆಗಳನ್ನು ಬೆಳೆಸಬೇಕು. ಆಗಾಗ್ಗೆ ಬೆಂಕಿಯನ್ನು ಹೊತ್ತಿಸುತ್ತಾ, ಆರಿಸುತ್ತಿರುವಂತೆ ನಟಿಸಬೇಕು ಇತ್ಯಾದಿ ಸಲಹೆಗಳನ್ನು ಕೊಟ್ಟಿದ್ದಾನೆ. ಇದೆಲ್ಲ ರಾಜಪ್ರಭುತ್ವದ ಕಾಲ. ನಾವಿಂದು ಪ್ರಜಾಪ್ರಭುತ್ವದ ಕಾಲದಲ್ಲಿ ಇದ್ದೇವೆ. ಆದ್ದರಿಂದ, ಭಾರತದೊಳಗಿನ ರಾಜ್ಯಗಳ ನಡುವಣ ಗಡಿಗಳನ್ನು ಪಾಕಿಸ್ತಾನ ಮತ್ತು ಚೀನಾ ದೇಶದ ಗಡಿಗಳಂತೆ ನೋಡಬಾರದು.

ಆದ್ದರಿಂದ, ಗಡಿ, ಗಡಿಭಾಗ, ಗಡಿನಾಡು, ಗಡಿಸಮಸ್ಯೆಗಳು ಎಂಬ ಪದಪುಂಜವನ್ನು 'ಡಿಲೀಟ್' ಮಾಡಿಕೊಂಡು ಇದಕ್ಕೆ ಬದಲಿಯಾಗಿ ಬಹುಭಾಷೆ, ಬಹುಭಾಷಾಪ್ರದೇಶ, ಬಹುಭಾಷಿಕರ ಸಮಸ್ಯೆಗಳು ಎಂಬುದನ್ನು 'ಸೇವ್' ಮಾಡಿಕೊಳ್ಳಬೇಕು. ಭಾಷೆಯಲ್ಲಿ 'ಸೌಮ್ಯೋಕ್ತಿ' ಎಂಬ ಮಾತಿನ ವರಸೆಯೊಂದಿದೆ. ಉದಾಹರಣೆ: ಹಾವು – ಚೇಳು ಎಂಬುದನ್ನು ಬಾಯಿಮಾತಿನಲ್ಲಿ ಹೇಳಲು ಇಷ್ಟವಿಲ್ಲದೆ, ಹುಳು – ಹುಪ್ಪಟೆ ಎನ್ನುವುದುಂಟು. ಭಾಷಾವಿಜ್ಞಾನದಲ್ಲಿ ಇದನ್ನೇ 'ಸೌಮ್ಯೋಕ್ತಿ' ಎನ್ನುತ್ತಾರೆ.

೧೯೫೬ರಲ್ಲಿ ರಚನೆಯಾದ ಭಾಷಾವಾರು ಪ್ರಾಂತ್ಯಗಳ ನಿರ್ಮಾಣದಲ್ಲಿದ್ದ ಅಸಾಂಗತ್ಯಗಳಿಂದಾಗಿ, ಪ್ರತಿಯೊಂದು ರಾಜ್ಯದ ಗಡಿಭಾಗದಲ್ಲಿ ಇಂದಿಗೂ ಭಾಷಾಯುದ್ಧಗಳು, ಭಾಷಾಕಲಹಗಳು ಸಂಭವಿಸುತ್ತಲೇ ಇವೆ. ಬೆಳಗಾವಿಯಲ್ಲಿ ಇರುವ ಮರಾಠಿಗರ ಪ್ರಾಬಲ್ಯ, ಕೇರಳದ ಕಾಸರಗೋಡಿನಲ್ಲಿರುವ ಕನ್ನಡಿಗರ ಆಧಿಕ್ಯ, ಆಂಧ್ರಪ್ರದೇಶದ ಮಡಕಶಿರದಲ್ಲಿರುವ ಕನ್ನಡಿಗರ ಬವಣೆ ಇತ್ಯಾದಿಗಳು ಇಂದಿಗೂ ಜ್ವಲಂತ ಸಮಸ್ಯೆಗಳಾಗಿಯೇ ಉಳಿದಿವೆ.

ನಮ್ಮ ದೇಶದಲ್ಲಿ ಮೊದಲಿನಿಂದಲೂ ಇದ್ದದ್ದು ಮತ್ತು ಇರುವುದು ನೈಸರ್ಗಿಕವಾದ ಮೇರೆಗಳೇ ಹೊರತು, ಮಾನವನಿರ್ಮಿತವಾದ ಗಡಿಗಳಲ್ಲ! ನದಿಗಳು ಮತ್ತು ಬೆಟ್ಟದ ಸಾಲುಗಳೇ ನೈಸರ್ಗಿಕವಾದ ಮೇರೆಗಳು. ಈ ದಿಸೆಯಲ್ಲಿ ಲೋಹಿಯಾ ಅವರ 'ಇಂಡಿಯಾದ ನದಿಗಳು' ಎಂಬ ಲೇಖನ ಬಹುಮುಖ್ಯವಾದುದು. ಕರ್ನಾಟಕದಲ್ಲಿ ಘಟ್ಟದ ಕೆಳಗಿನವರು ಮತ್ತು ಘಟ್ಟದ ಮೇಲಿನವರು ಎಂದು ವ್ಯವಹರಿಸುವಂತೆಯೇ ತುಂಗಭದ್ರ ನದಿಯ ಮೇಲಿನವರು ಮತ್ತು ಕೆಳಗಿನವರು ಎಂಬುದಾಗಿಯೂ ವ್ಯವಹರಿಸುವುದುಂಟು. ಆದರೆ, ರಾಜ್ಯ–ರಾಜ್ಯಗಳ ನಡುವಣ ಗಡಿಗಳು ೧೯೫೬ರಲ್ಲಿ ರಚನೆಯಾದವು. ಇಂಥ ಸೀಮಾಬದ್ಧ ರಾಜ್ಯಗಳಲ್ಲಿ ಪ್ರಜೆಗಳಾಗಿ ವಾಸಮಾಡುತ್ತಾ, ಸೀಮಾತೀತ ಜೀವನಶೈಲಿಗಳಲ್ಲಿ ಬದುಕುತ್ತಿರುವ ಬಗೆಗಳನ್ನು ನಾವಿಂದು ಪುನರ್ ಪರಿಶೀಲಿಸಬೇಕಾಗಿದೆ. ಒಂದು ಭಾಷೆಯ ಬೆಳ್ಗೊಡೆಯ ನೆರಳಿನಲ್ಲಿ ಬಹುಭಾಷಿಕರನ್ನು ನಿಲ್ಲಿಸಿಕೊಳ್ಳುವ ಹಠ ಸೀಮಾಬದ್ಧ ರಾಜ್ಯಗಳಲ್ಲಿ ಕಂಡುಬರುತ್ತದೆ. ಆದರೆ, ಸೀಮಾತೀತ ಜೀವನಶೈಲಿಗಳಲ್ಲಿ ಬದುಕುತ್ತಿರುವ ಬಹುಭಾಷಿಕರು 'ನಾ ನಿಲ್ಲುವವಳಲ್ಲ' ಎಂಬಂತೆ ನಿಸ್ಸೀಮರಾಗಿ ಕಂಡುಬರುತ್ತಾರೆ. ಇಂಥ ಸೀಮೆ ಮತ್ತು ನಿಸ್ಸೀಮೆಗಳ ದ್ವಂದ್ವಾತ್ಮಕ ಸಂಬಂಧವನ್ನು ಭಾಷಾವಾರು ಪ್ರಾಂತ್ಯಗಳು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲ. ಇದೊಂದು ರೀತಿಯಲ್ಲಿ ಏಕತ್ವ ಮತ್ತು ಬಹುತ್ವಗಳ ಬೃಹತ್ ಹೋರಾಟವಾಗಿದೆ.

ಈ ದಿಸೆಯಲ್ಲಿ ಕುವೆಂಪು ಅವರ 'ಬಹುಜಿಹ್ವಾ ಭಾರತಿ'ಯ ಕಲ್ಪನೆ ಒಂದು ದಿಕ್ಸೂಚಿಯಂತಿದೆ. ಸೀಮಾತೀತ ಜೀವನಶೈಲಿಗಳಲ್ಲಿ ಕಂಡು ಬರುವ ಚಲನಶೀಲತೆ – ಪರಿವರ್ತನಶೀಲತೆ – ವೈವಿಧ್ಯಶೀಲತೆಯಲ್ಲಿ ಬಹುಮುಖ್ಯವಾದ ಚಲನೆ – ಪರಿವರ್ತನೆ ಮತ್ತು ವೈವಿಧ್ಯಗಳೆಂಬ ಶೀಲತ್ರಯಗಳಿವೆ. ಈ ಶೀಲತ್ರಯಗಳಿಂದ ಕೂಡಿರುವುದೇ 'ಜೀವನಶೈಲಿ'. ಬಹುತ್ವವೇ ಭಾರತದ ಜೀವನಾಡಿ. ಬಹುಭಾಷೆಗಳು, ಬಹುಧರ್ಮಗಳು, ಬಹುಧಾನ್ಯಗಳು, ಬಹುನದಿಗಳು, ಬಹುಜನಾಂಗಗಳು ಭಾರತವನ್ನು ಜೀವಂತವಾಗಿಟ್ಟಿವೆ.

ಭಾಷಾವಾರು ಪ್ರಾಂತ್ಯಗಳು ಮತ್ತು ಶಿಕ್ಷಣ ಮಾಧ್ಯಮದಿಂದಾಗಿ

ಇಂದು ಎಲ್ಲೆಡೆ ಬಹುಭಾಷಾ ಪ್ರದೇಶಗಳು ಏಕಭಾಷಾ ಪ್ರದೇಶಗಳಾಗುವ ಒತ್ತಡವನ್ನು ಎದುರಿಸುತ್ತಿವೆ. ಬಹುರೂಪಾತ್ಮಕ ಕಾಡುಗಳು ನಾಶವಾಗುತ್ತಾ, ಏಕರೂಪಾತ್ಮಕ ತೋಪುಗಳು ಹೆಚ್ಚುತ್ತಿರುವುದನ್ನು ನಾವು ಪ್ರತ್ಯಕ್ಷ ಮನಗಂಡಿದ್ದೇವೆ. ಬಹುಭಾಷಾ ಪ್ರದೇಶಗಳೆಂದರೆ ಭಾಷಿಕ ಅರಣ್ಯ ಗಳಿದ್ದಂತೆ! ಏಕಭಾಷಾ ಪ್ರದೇಶಗಳೆಂದರೆ ಭಾಷಿಕ ತೋಪುಗಳಿದ್ದಂತೆ! ಈ ಸತ್ಯವನ್ನು ಮನಗಂಡು ಅರಣ್ಯ ಸಂರಕ್ಷಣೆ ಮಾಡುವಂತೆ ಪ್ರಭುತ್ವಗಳು 'ಭಾಷಿಕ ಅರಣ್ಯ'ಗಳನ್ನು ಸಂರಕ್ಷಿಸಬೇಕು. ಆದರೆ, ಆಳುವ ಸರ್ಕಾರಗಳು 'ಭಾಷಿಕ ತೋಪು'ಗಳನ್ನು ಬೆಳೆಸುತ್ತಿವೆ. ಕರ್ನಾಟಕ ಸರ್ಕಾರವನ್ನೆ ದೃಷ್ಟಿಯಲ್ಲಿಟ್ಟು ಕೊಂಡರೆ: (೧) 'ದೇವಭಾಷೆ' (= ಸಂಸ್ಕೃತ) ಎಂಬ ಬುಲ್ಡೋಜರ್, (೨) ರಾಷ್ಟ್ರಭಾಷೆ (= ಹಿಂದಿ) ಎಂಬ ಬುಲ್ಡೋಜರ್, (೩) ವಿಶ್ವಭಾಷೆ (= ಇಂಗ್ಲಿಷ್) ಎಂಬ ಬುಲ್ಡೋಜರ್‌ಗಳು ಉರುಳುತ್ತಾ ರೋಡ್ ಲೆವೆಲ್ಲಿಂಗ್ ಮಾಡುವಂತೆ, ಕನ್ನಡ ಮುಂತಾದ ಸೋದರ ಭಾಷೆಗಳನ್ನು 'ಲಿಂಗ್ವಿಸ್ಟಿಕ್ ಲೆವೆಲಿಂಗ್' ಮಾಡುತ್ತಿವೆ. ಇದನ್ನೇ ನಾನು ಏಕತ್ವ ಮತ್ತು ಬಹುತ್ವಗಳ ಬೃಹತ್ ಹೋರಾಟ ಎಂದು ಕರೆಯುತ್ತಿದ್ದೇನೆ. ಇದನ್ನು 'ಬಹುಜಿಹ್ವಾಭಾರತಿ'ಯ ಮೂಲಕವೇ ಎದುರಿಸಬೇಕು. ಇಂಗ್ಲಿಷನ್ನು ರಕ್ತಗತವಾಗಿಸಿಕೊಳ್ಳುವ ಬಹುಜಿಹ್ವಾಭಾರತಿ ನಮ್ಮ ಆದರ್ಶವಾಗಬೇಕು.

## ೨

ದೇವಭಾಷೆ, ರಾಷ್ಟ್ರಭಾಷೆ, ವಿಶ್ವಭಾಷೆಗಳೆಂಬ ಖ್ಯಾತಿ ಪಡೆದಿರುವ 'ವಿಕ್ರಮಾರ್ಜುನ ವಿಜಯ'ವನ್ನು ನವಭಾರತದ ಭಾಷಾ ಇತಿಹಾಸದಲ್ಲಿ ಮನಗಾಣ ಬಹುದು. ಇಂಥ ವಿಕ್ರಮಾರ್ಜುನ ವಿಜಯದೊಳಗೆ ಯಾರೊಬ್ಬರೂ ಮರೆಯಬಾರದ ದೇಶಭಾಷೆಗಳೆಂಬ 'ಕರ್ಣಭಾರತ' ಇದೆಯೆಂಬುದನ್ನು ಒಪ್ಪಿಕೊಳ್ಳಬೇಕು. ಅಂದರೆ, ಸಂಸ್ಕೃತ, ಹಿಂದಿ, ಇಂಗ್ಲಿಷ್ ಎಂಬ ವಿಕ್ರಮಾರ್ಜುನರ ವಿಜಯದಾಚೆಗೆ ಜನಭಾಷೆ ಗಳೆಂಬ 'ಕರ್ಣಭಾರತ'ವನ್ನು ಕೇಳಿಸಿಕೊಳ್ಳಬೇಕು.

ದೇಶಭಾಷೆಗಳು ಅಥವಾ ಜನಭಾಷೆಗಳು ಆಲೂಗಡ್ಡೆಯ ಕಣ್ಣುಗಳಿದ್ದಂತೆ! ಆಲೂಗಡ್ಡೆಗಳನ್ನು ಕೊಯ್ದು ನಾಟಿ ಮಾಡುವಾಗ ಕಣ್ಣುಗಳಿರುವಂತೆ ಅಥವಾ ಕಣ್ಣುಗಳಿಗೆ ಹಾನಿಯಾಗದಂತೆ ಕತ್ತರಿಸಿ ನಾಟಿ ಮಾಡುತ್ತಾರೆ. ಬಹುಭಾಷಾ ಪ್ರದೇಶಗಳು ಅಥವಾ ಭಾಷಿಕ ಅರಣ್ಯಗಳು ಬಹು ಸೂಕ್ಷ್ಮವಾದ ಕಣ್ಣುಗಳೆಂದು ತಿಳಿದು ಅವನ್ನು ಆರೈಕೆ ಮಾಡಬೇಕು. ಅಂದರೆ, ಇಲ್ಲಿ ಬಹುಭಾಷೆಗಳಿರುವಂತೆ ಅಥವಾ ಬಹುಭಾಷೆಗಳಿಗೆ ಹಾನಿಯಾಗದಂತೆ ಭಾಷಾ ನೀತಿಯನ್ನು ಅಳವಡಿಸಿಕೊಂಡು ಮುಂಬರುವ ತಲೆಮಾರುಗಳ ಎದೆಹೊಲದಲ್ಲಿ ನಿರಂತರ ನಾಟಿ ಕಾರ್ಯ ಮಾಡುತ್ತಿರಬೇಕು. ಇದನ್ನು ಲಿಂಗ್ವಿಸ್ಟಿಕ್ ಮ್ಯಾನೇಜ್‌ಮೆಂಟ್ ಎನ್ನುತ್ತಾರೆ. ನಮ್ಮ ವಿಶ್ವವಿದ್ಯಾಲಯಗಳಲ್ಲಿ ಹೋಟೆಲ್ ಮ್ಯಾನೇಜ್‌ಮೆಂಟ್, ಬ್ಯುಸಿನೆಸ್ ಮ್ಯಾನೇಜ್‌ಮೆಂಟ್ ರೀತಿಯ ಕೋರ್ಸುಗಳಿವೆಯೇ ಹೊರತು, ನಮಗಿಂದು ಅಗತ್ಯವಾದ ವೇಸ್ಟ್ ಮ್ಯಾನೇಜ್‌ಮೆಂಟ್ ಮತ್ತು ಲಿಂಗ್ವಿಸ್ಟಿಕ್ ಮ್ಯಾನೇಜ್‌ಮೆಂಟ್ ರೀತಿಯ ಕೋರ್ಸುಗಳಿಲ್ಲ.

ಭಾಷಿಕ ಗಡಿಗಳಾಗಲಿ ಅಥವಾ ಭಾಷಿಕ ಚಳುವಳಿಗಳಾಗಲಿ ಹಿಂದೆ ಇರಲಿಲ್ಲ. ಇದು ಸ್ಪಷ್ಟವಾಗಿ ವಿಶ್ವ ವಸಾಹತುಶಾಹಿಯ ಕೊಡುಗೆ. ಇಪ್ಪತ್ತನೇ ಶತಮಾನದಲ್ಲಿ ವಸಾಹತು ದೇಶಗಳಲ್ಲಿ ಇಂಗ್ಲಿಷ್ ಜೊತೆ ಏಗುತ್ತಾ ಬದುಕುತ್ತಿರುವ ದೇಶ ಭಾಷೆಗಳು ಅಥವಾ ಜನಭಾಷೆಗಳು ತಮ್ಮ ಅಸ್ತಿತ್ವಕ್ಕಾಗಿ ನಡೆಸಿದ ಮತ್ತು ನಡೆಸುತ್ತಿರುವ ಹೋರಾಟ ಗಳನ್ನಾಗಿ ಭಾಷಿಕ ಚಳುವಳಿಗಳನ್ನು ನೋಡಬೇಕು:

*ಹೇಗೋ ಅವರಿವರ ತಳ್ಳಿ ಮುನ್ನುಗ್ಗು*
*ಎಲ್ಲಾದರೂ ಸರಿಯೆ, ಬೇರೂರು, ಹೀರು*

– ಜಿ. ಎಸ್. ಶಿವರುದ್ರಪ್ಪ: ಮುಂಬೈ ಜಾತಕ

– ಮೇಲ್ಕಂಡ ನುಡಿಗಳಿಗೆ ಅನುಸಾರವಾಗಿ ನಡೆದುಕೊಳ್ಳುವ ಭಾಷಾನೀತಿಯಿಂದ ಭಾಷಿಕ ಸಹಬಾಳ್ವೆ ಸಾಧ್ಯವಾಗುವುದಿಲ್ಲ. ಬಹುಭಾಷಾ ಪ್ರದೇಶ ಗಳಿಂದ ಭಾಷಿಕವಾದ ಜೀವಂತ ಸೇತುವೆಗಳು ಸೃಷ್ಟಿಯಾಗುತ್ತವೆ. ಇಂಥ ಪಡೆಯನ್ನು ಕಟ್ಟಿಕೊಂಡು ನೆರೆಹೊರೆಯ ಭಾಷೆಗಳಲ್ಲಿರುವ ಸಾಹಿತ್ಯ ಮತ್ತು ಸಾರಸ್ವತ ಜ್ಞಾನವನ್ನು ಅನುವಾದ ಮಾಡಿಕೊಳ್ಳ ಬಹುದು. ಒಂದು ಭಾಷೆಯಲ್ಲಿ ನೈಜವಾದ

ಅನುವಾದಗಳು ಮೂಡಿಬರುವುದು ಭಾಷಿಕವಾದ ಜೀವಂತ ಸೇತುವೆಗಳಿಂದ. ಆದರೆ, ಏಕರೂಪಾತ್ಮಕವಾದ ಭಾಷಾವಾರು ಪ್ರಾಂತ್ಯದ ರಾಜ್ಯಾಡಳಿತಗಳು ಭಾಷಿಕ ಸೇತುವೆಗಳಿಗೆ ಸ್ಕೂಲಿಂಗ್ ಪ್ರೋತ್ಸಾಹ ಕೊಡುವುದಿಲ್ಲ. ಆದ್ದರಿಂದ, ಭಾಷಾವಾರು ಪ್ರಾಂತ್ಯಗಳಲ್ಲಿ ಮೂರನೇ ಭಾಷೆಯಾಗಿ ಹಿಂದಿ ಬದಲಿಗೆ ಇತರೆ ದೇಶಭಾಷೆಗಳ ಅಥವಾ ಜನಭಾಷೆಗಳ ಆಯ್ಕೆಗೆ ಅವಕಾಶವಿರಬೇಕು. ಆಗ ಕಾಸರಗೋಡಿನ ಕನ್ನಡಿಗರು ಕೇರಳ ರಾಜ್ಯದ ದೇಶಭಾಷೆ ಮಲಯಾಳಂ ಭಾಷೆಯನ್ನು ಕಡ್ಡಾಯವಾಗಿ ಓದಿಕೊಳ್ಳುವುದರ ಜೊತೆಗೆ, ಮೂರನೇ ಭಾಷೆಯಾಗಿ ಕನ್ನಡವನ್ನು ಕಲಿಯಲು ಅವಕಾಶ ಸೃಷ್ಟಿಯಾಗುತ್ತದೆ. ಬೆಳಗಾವಿಯ ಮರಾಠಿಗರು ಕರ್ನಾಟಕ ರಾಜ್ಯದ ದೇಶಭಾಷೆ ಕನ್ನಡವನ್ನು ಕಡ್ಡಾಯವಾಗಿ ಓದಿಕೊಳ್ಳುವುದರ ಜೊತೆಗೆ, ಮೂರನೇ ಭಾಷೆಯಾಗಿ ಮರಾಠಿಯನ್ನು ಕಲಿಯಲು ಅವಕಾಶ ಸೃಷ್ಟಿಯಾಗುತ್ತದೆ. ಕೋಲಾರದ ತೆಲುಗರು ಸ್ವಯಂಪ್ರೇರಣೆಯಿಂದ ಕನ್ನಡವನ್ನೇ ಕಲಿಯುತ್ತಿರುವುದರಿಂದ ಯಾವುದೇ ಸಮಸ್ಯೆಯಿಲ್ಲ. ಆದರೆ, ವ್ಯವಹಾರದಲ್ಲಿ ಬಳಸುವ ತೆಲುಗು ಭಾಷೆಯನ್ನು ಮೂರನೇ ಭಾಷೆಯಾಗಿ ಹಿಂದಿಗೆ ಬದಲು ಕಲಿಯುವಂಥ ಐಚ್ಛಿಕ ಆಯ್ಕೆಯನ್ನು ಕೊಡಬಹುದು. ತಮಿಳುನಾಡಿನ ಹೊಸೂರು ವಲಯದಲ್ಲಿರುವ ಕನ್ನಡಿಗರು ಪ್ರಥಮ ಭಾಷೆಯಾಗಿ ತಮಿಳನ್ನು ಕಡ್ಡಾಯವಾಗಿ ಓದಿಕೊಂಡರೂ ಮೂರನೇ ಭಾಷೆಯಾಗಿ ಕನ್ನಡವನ್ನು ಕಲಿಯುವ ಆಯ್ಕೆಯನ್ನು ಪಡೆಯಬಹುದು. ಆಗ ಈ ಎಲ್ಲ ಸೋದರ ಮತ್ತು ಸೋದರೇತರ ಭಾಷೆಗಳೊಂದಿಗೆ 'ಭಾಷಾ ಸಾಮರಸ್ಯ' ಉಂಟಾಗುತ್ತದೆ. 'ಸರ್ವ ಜನಾಂಗದ ತೋಟ' – ಎಂಬ ಕುವೆಂಪು ಅಭಿವ್ಯಕ್ತಿಯನ್ನು 'ಸರ್ವ ಭಾಷೆಗಳ ತೋಟ' ಎಂಬಂತೆಯೂ ಗ್ರಹಿಸಿ, ವಿಸ್ತರಣೆ ಮಾಡಿಕೊಳ್ಳಬೇಕು. ಇದರಿಂದ ನಮಗೆ ಲಿಂಗ್ವಿಸ್ಟಿಕ್ ಬ್ರಿಡ್ಜ್ ಮೇಕರ್ಸ್ ಅಥವಾ ಭಾಷಿಕವಾದ 'ಜೀವಂತ' ಸೇತುವೆಗಳು ಸಿಕ್ಕುತ್ತಾರೆ. ಪರಸ್ಪರ ಭಾಷಿಕವಾದ ಕೊಳ್ಳು – ಕೊಡುಗೆ ಸಾಧ್ಯವಾಗುತ್ತದೆ. ಕೋಮುಸೌಹಾರ್ದತೆ ಎಷ್ಟು ಮುಖ್ಯವೋ ಭಾಷಾ ಸೌಹಾರ್ದತೆಯೂ ಅಷ್ಟೇ ಮುಖ್ಯ. ಧಾರ್ಮಿಕ ಭಯೋತ್ಪಾದನೆ ಮತ್ತು ಭಾಷಿಕ ಭಯೋತ್ಪಾದನೆಗಳ ಅಪವಿತ್ರ ಮೈತ್ರಿ ಹೆಚ್ಚುತ್ತಿರುವ ದಿನಗಳಿವು. ಆದ್ದರಿಂದ, "ಹ್ರಸ್ವ ದೃಷ್ಟಿ ಬೇಡ! ಇರಲಿ ದೀರ್ಘದೃಷ್ಟಿ" – ಎಂಬ ಉಪನಿಷತ್ ವಾಕ್ಯವನ್ನು ಹೃದಯಸ್ಥ ಮಾಡಿಕೊಂಡು ನಡೆಯಬೇಕು.




೩

ಬಹುಭಾಷಿಕತೆಯನ್ನು ಎರಡು ದಿಕ್ಕುಗಳಿಂದ ಒಳಹೊಕ್ಕು ಅರ್ಥ ಮಾಡಿಕೊಳ್ಳಬೇಕು: (೧) ಅಂತಸ್ಥ ಬಹುಭಾಷಿಕತೆ (೨) ಪರಿಸರಸ್ಥ ಬಹುಭಾಷಿಕತೆ. ಲಿಂಗ್ವಿಸ್ಟಿಕ್ ಮ್ಯಾನೇಜ್‌ಮೆಂಟ್‌ನಲ್ಲಿ ಮೇಲ್ಕಂಡ ಎರಡೂ ಬಗೆಯ ಬಹುಭಾಷಿಕತೆಯ ತತ್ವವನ್ನು ಅಳವಡಿಸಿಕೊಳ್ಳಬೇಕು. ಇದನ್ನು ನಮ್ಮ ಪೂರ್ವಿಕರು ಬಹು ಚೆನ್ನಾಗಿ ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದರೆಂಬುದಕ್ಕೆ ನಿದರ್ಶನಗಳಿವೆ:

**ಅಂತಸ್ಥ ಬಹುಭಾಷಿಕತೆ:** 'ಕವಿರಾಜಮಾರ್ಗ'ದಲ್ಲಿ 'ಕನ್ನಡಂಗಳ್' ಎಂಬ ಪ್ರಯೋಗವಿದೆ. ಕನ್ನಡ ವೆಂಬುದು ಏಕರೂಪಾತ್ಮಕವಾದ ಒಂದೇ ಒಂದು ಭಾಷೆಯೆಂದು ಅರ್ಥವಲ್ಲ. ಕನ್ನಡ ನಾಡಿನಲ್ಲಿ ಪ್ರಾದೇಶಿಕವಾಗಿ ಮತ್ತು ಸಾಮಾಜಿಕವಾಗಿ ವೈವಿಧ್ಯಮಯ ಕನ್ನಡಗಳಿವೆ. ಈ 'ದೇಸಿ' ಬೇರೆಬೇರೆಯಾಗಿರುವುದರಿಂದ ಸಾವಿರ ನಾಲಿಗೆಗಳುಳ್ಳ ಆದಿಶೇಷನಿಗೂ ವರ್ಣಿಸಲು ಸಾಧ್ಯವಾಗದೆ ಬೇಸರ ಹುಟ್ಟುತ್ತದೆ ಎಂಬ ಅಭಿಪ್ರಾಯ 'ಕವಿರಾಜಮಾರ್ಗ'ದಲ್ಲಿದೆ. ಇದನ್ನೇ ಇಲ್ಲಿ 'ಅಂತಸ್ಥ ಬಹುಭಾಷಿಕತೆ' ಎಂದು ಕರೆಯಲಾಗಿದೆ.

**ಪರಿಸರಸ್ಥ ಬಹುಭಾಷಿಕತೆ:** ಕಾವೇರಿಯಿಂದ ಗೋದಾವರಿವರೆಗೆ ವಿಸ್ತಾರವಾಗಿರುವ ಕನ್ನಡ ನಾಡಿನಲ್ಲಿ 'ಕನ್ನಡ'ವೆಂಬ ಒಂದೇ ಒಂದು ಭಾಷೆಯಿಲ್ಲ. ಇಲ್ಲಿ ಬಹುಭಾಷೆಗಳಿವೆ: ತೆಲುಗು – ತುಳು – ತಮಿಳು – ಕೊಡವ ಸೋದರ ಭಾಷೆಗಳಾಗಿದ್ದರೆ, ಮರಾಠಿ, ಕೊಂಕಣಿ, ಉರ್ದು, ಬ್ಯಾರಿ ಭಾಷೆಗಳು ಸೋದರೇತರ ಭಾಷೆಗಳಾಗಿವೆ. ಇದೇ ಪರಿಸರಸ್ಥ ಬಹುಭಾಷಿಕತೆ. ಇದನ್ನು ನಾಶಪಡಿಸಲು ಸಾಧ್ಯವಿಲ್ಲ. ರತ್ನಾಕರವರ್ಣಿಯು 'ಭರತೇಶ ವೈಭವ' ಮಹಾಕಾವ್ಯದಲ್ಲಿ ಗುರುತಿಸಿಕೊಂಡಿರುವ ಬಹುಭಾಷಿಕ ಸಹೃದಯರ ವಲಯ ಗಮನಾರ್ಹವಾದುದು:

*ಅಯ್ಯಾ ಚೆನ್ನಾದುದೆನೆ ಕನ್ನಡಿಗರು*
*ಅಯ್ಯಾ ಮಂಚಿದಿ ಎನೆ ತೆಲುಗರು*
*ಎಂಚ ಪೊರ್ಲಾಂಡೆಂದು ತುಳುವರು*
*ಮೈಯುಬ್ಬಿ ಕೇಳಬೇಕಣ್ಣ!*

ಈ ಸಾಲುಗಳಲ್ಲಿ ತಾನು ಬರೆದ ಕನ್ನಡ ಮಹಾಕಾವ್ಯವನ್ನು ಕನ್ನಡಿಗರು ಮಾತ್ರವಲ್ಲದೆ, ತೆಲುಗರು, ತುಳುವರು ಕೂಡ ಕೇಳಬೇಕೆಂಬ ಹಾರೈಕೆಯಲ್ಲಿ ಬಹುಭಾಷಿಕತೆಯ ಒಲವು ನಿಲುವುಗಳಿವೆ.

ಕನ್ನಡದ ಪ್ರಮಾಣ ಭಾಷೆಯನ್ನು ಕಟ್ಟಿಕೊಳ್ಳುವಾಗ ಬಹುರೂಪಾತ್ಮಕವಾಗಿರುವ ಅಂತಸ್ಥ ಬಹುಭಾಷಿಕತೆ ಅಥವಾ ಉಪಭಾಷಾ ವೈವಿಧ್ಯವನ್ನು ದೂರವಿಡಬಾರದು. ಅದೇ ರೀತಿ, ಕನ್ನಡವನ್ನು ರಾಜ್ಯಭಾಷೆಯಾಗಿ ಪ್ರತಿಷ್ಠಾಪಿಸುವಾಗ ಪರಿಸರಸ್ಥ ಬಹುಭಾಷಿಕತೆಯನ್ನು ಒಳಗೊಳ್ಳಬೇಕು. ಇದನ್ನು 'ಆಲ್ ಇನ್‌ಕ್ಲೂಸಿವ್ ಅಪ್ರೋಚ್' ಎಂದು ಕರೆಯಬಹುದು. ರಾಜಕೀಯವಾಗಿ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡಿರುವಂತೆಯೇ ಭಾಷಿಕ ಪ್ರಜಾಪ್ರಭುತ್ವ ಅಥವಾ ಲಿಂಗ್ವಿಸ್ಟಿಕ್ ಡೆಮಾಕ್ರಸಿಯನ್ನು ಕೂಡ ಒಪ್ಪಿಕೊಳ್ಳಬೇಕು.

ಆದರೆ, ನಮ್ಮ ದೇಶದಲ್ಲಿ ಸಾಮಾಜಿಕ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಯಿರುವಂತೆಯೇ ಭಾಷಿಕ ಜಾತಿಪದ್ಧತಿ – ಭಾಷಿಕ ಅಸ್ಪೃಶ್ಯತೆಗಳು ಕಂಡು ಬರುತ್ತಿವೆ. ಜಾತಿ ತಾರತಮ್ಯದಂತೆ ಭಾಷಿಕ ತಾರತಮ್ಯವೂ ಅಪಾಯಕಾರಿಯಾದುದು. ಸಂಸ್ಕೃತ ನಾಟಕಗಳಲ್ಲಿರುವ ಭಾಷಿಕ ವರ್ಣಾಶ್ರಮ ವ್ಯವಸ್ಥೆಯಲ್ಲಿ ಕುಲೀನ ಪುರುಷರಿಗೆ ಸಂಸ್ಕೃತ, ಸ್ತ್ರೀ ಪಾತ್ರಗಳಿಗೆ ಪ್ರಾಕೃತ, ನೀಚ ಪಾತ್ರಗಳಿಗೆ ಅಪಭ್ರಂಶ ಎಂಬಂತಹ ಭಾಷಿಕ ವಿಂಗಡಣೆಯಿದೆ. ಇದರ ಜೊತೆಗೆ, ಕರ್ನಾಟಕದಲ್ಲಿರುವ 'ಉಪಭಾಷಿಕ ವರ್ಣಾಶ್ರಮ ವ್ಯವಸ್ಥೆ'ಯನ್ನು ಹೋಲಿಸಬಹುದು. ಶಿಕ್ಷಣ – ಆಡಳಿತ – ಸಂವಹನ ಕ್ಷೇತ್ರಗಳಲ್ಲಿ ಮೈಸೂರು ಕನ್ನಡ, ಸೇವಾವೃತ್ತಿಗಳಲ್ಲಿ ಪ್ರಾದೇಶಿಕ ಉಪಭಾಷೆಗಳು ಸಾಮಾಜಿಕ ಉಪಭಾಷೆಗಳು, ಗಾವಿಲರು – ದಡ್ಡರು – ಹಳ್ಳಿಗರ ಬಳಕೆಗೆ ಹಳ್ಳಿ ಕನ್ನಡ / ಮಂಡ್ಯ ಕನ್ನಡ / ಕುಣಿಗಲ್ ಕನ್ನಡ ಎಂಬಂತೆ ಭಾಷಿಕ ವಿಂಗಡಣೆಯಿದೆ. ಮೇಲ್ಕಂಡ ಉಪಭಾಷಿಕ ತಾರತಮ್ಯವನ್ನು ವ್ಯವಸ್ಥಿತವಾಗಿ ಕಾಯ್ದುಕೊಂಡಿರುವ ಸಿನೆಮಾಗಳು ಮತ್ತು ಸಮೂಹ ಮಾಧ್ಯಮಗಳನ್ನು ಸುಸ್ಪಷ್ಟವಾಗಿ ಗುರುತಿಸಬಹುದು.

ಇದರಂತೆಯೇ ಅಖಿಲಭಾರತ ಮಟ್ಟದಲ್ಲಿ ಕೂಡ ಭಾಷಿಕ ವರ್ಣಾಶ್ರಮ ವ್ಯವಸ್ಥೆಯನ್ನು ಮನಗಾಣಬಹುದು: ದೇವಭಾಷೆ ಸಂಸ್ಕೃತ (= ಬ್ರಾಹ್ಮ), ರಾಷ್ಟ್ರಭಾಷೆ ಹಿಂದಿ (= ಕ್ಷಾತ್ರ), ವಿಶ್ವಭಾಷೆ ಇಂಗ್ಲಿಷ್ (= ವಣಿಜ), ರಾಜ್ಯಭಾಷೆಯಾದ ಭಾಷಾವಾರು ಪ್ರಾಂತ್ಯಗಳು (= ಶೂದ್ರ) ಎಂಬ ಭಾಷಿಕ ಚತುರ್ವರ್ಣ ಪದ್ಧತಿಯ ಅಬ್ಬರದಲ್ಲಿ ಭಾರತದಲ್ಲಿರುವ ಇತರ ಮಾತೃಭಾಷೆಗಳು ಕೇಳುವವರಿಲ್ಲದ ಮಗುವಿನಂತೆ ಅನಾಥವಾಗಿವೆ.

ಉದಾಹರಣೆಗೆ, ಕನ್ನಡದ ಅಂತಸ್ಥ ಬಹುಭಾಷಿಕತೆಯ ವ್ಯಾಪ್ತಿಗೊಳಪಟ್ಟಿರುವ ಮೂಡಲಸೀಮೆಯ ಕನ್ನಡ ಅಥವಾ ಕೋಲಾರ ಕನ್ನಡಕ್ಕೆ, ಕನ್ನಡದ ಭಾಷಾವಿಜ್ಞಾನದ ಪಠ್ಯಪುಸ್ತಕಗಳಲ್ಲಿ ಮಾನ್ಯತೆ ಸಿಕ್ಕಿಲ್ಲ. ಕನ್ನಡದ ಪ್ರಾದೇಶಿಕ ಉಪಭಾಷೆಗಳು ಎಂಬ ಅಧ್ಯಾಯದಲ್ಲಿ (೧) ಮೈಸೂರು ಕನ್ನಡ (೨) ಧಾರವಾಡ ಕನ್ನಡ (೩) ಗುಲ್ಬರ್ಗ ಕನ್ನಡ (೪) ಮಂಗಳೂರು ಕನ್ನಡ ಎಂಬ ನಾಲ್ಕು ಬಗೆಗಳ ಪ್ರಸ್ತಾಪವಿದೆ. ಇಲ್ಲಿ ನ್ಯಾಯಬದ್ಧವಾಗಿರಬೇಕಾದ 'ಕೋಲಾರ ಕನ್ನಡ'ದ ಉಲ್ಲೇಖವಿಲ್ಲ. ಕೋಲಾರ ಕನ್ನಡವು ಭಾಷಾವಿಜ್ಞಾನದ

ಪಠ್ಯಪುಸ್ತಕಗಳಲ್ಲಿ ಮಾತ್ರವಲ್ಲದೆ, ಹೊಸಗನ್ನಡ ಸಾಹಿತ್ಯಚರಿತ್ರೆಯ ಗ್ರಂಥಗಳಲ್ಲೂ ಮಾನ್ಯವಾಗಬೇಕು. ಕೋಲಾರ ಕನ್ನಡವು ಹೊಸಗನ್ನಡ ಅರುಣೋದಯದ ಮುಂಗೋಳಿಯಾಗಿರುವುದು ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗಬೇಕು. ಉತ್ತರ ಕರ್ನಾಟಕದ ತತ್ವಪದಕಾರರಿಗಿಂತಲೂ ಪೂರ್ವಿಕರಾದ ಕೈವಾರದ ತಾತಯ್ಯನವರ ಕನ್ನಡ ಕೀರ್ತನೆಗಳಲ್ಲಿ ಬಳಕೆಯಾಗಿರುವ 'ಕೋಲಾರ ಕನ್ನಡ'ವು ಸಕಲ ದೃಷ್ಟಿಗಳಿಂದಲೂ ಗಮನಾರ್ಹವಾಗಿದೆ. ಆದರೂ ಇದನ್ನು ಗಮನಿಸದೆ ಕೈಬಿಡಲಾಗಿದೆ. ತಾತಯ್ಯನವರ ಬಹುತೇಕ ರಚನೆಗಳು ತೆಲುಗು ಭಾಷೆಯಲ್ಲಿದ್ದರೂ ಅವರು ತಮ್ಮನ್ನು ಗುರುತಿಸಿಕೊಂಡಿರುವುದು ಕನ್ನಡದ ದಾಸಶ್ರೇಷ್ಠರೊಂದಿಗೆ ಎಂಬುದನ್ನು ಮರೆಯಬಾರದು !

*...ಪುರಂದರ ದಾಸರಿಗೆ ಮಡಿ ಮಾಡೋ ದಾಸ*
*ಕನಕದಾಸರ ಮನೆಯ ಕಸ ಗುಡಿಸೋ ಬಡ ದಾಸ*
*ಯನ್ನ ಕೈ ಬಿಡುವುದು ಬಲು ಮೋಸ...*

ಮೇಲ್ಕಂಡ ಉಲ್ಲೇಖದ ಕೊನೆಯ ಸಾಲು ಹೊಸಗನ್ನಡದ ಅರುಣೋದಯದಲ್ಲಿ ಸ್ಥಾನ ನೀಡದೆ ತಾತಯ್ಯನವರನ್ನು ನಿರ್ಲಕ್ಷ್ಯ ಮಾಡಿರುವ ಪಂಡಿತರ ಮೋಸಕ್ಕೆ ಮಾರ್ಮಿಕವಾಗಿಯೂ ಅನ್ವಯಿಸುತ್ತದೆ.

ಒಂದು ಭಾಷೆಯ ಅಂತಸ್ಥ ಬಹುಭಾಷಿಕತೆ ಅಥವಾ ಉಪಭಾಷಿಕ ವೈವಿಧ್ಯಕ್ಕೆ ಮಾನ್ಯತೆ ಸಿಗುವುದು ಭಾಷಾಸಂಸ್ಕೃತಿಯ ಪ್ರಭುತ್ವದಲ್ಲಿ ಮಾತ್ರ. ಭಾಷೆ – ಸಂಸ್ಕೃತಿ – ಪ್ರಭುತ್ವಗಳ ಮಧ್ಯೆ ಅವಿಭಾಜ್ಯ ಸಂಬಂಧವಿದ್ದಾಗ ಉಪಭಾಷಿಕ ವೈವಿಧ್ಯಕ್ಕೆ ಸಹಜವಾದ ಮನ್ನಣೆಯಿರುತ್ತದೆ. ಇವು ಮೂರು ದಾರಿಗಳಾದಾಗ ಜನಭಾಷೆ – ಗ್ರಾಂಥಿಕಭಾಷೆ – ಪ್ರಭುತ್ವಭಾಷೆಗಳೆಂಬ ಮೂರು ಸೀಳುಗಳುಂಟಾಗುತ್ತವೆ. ಕನ್ನಡದ ಜನಭಾಷೆಗಳು – ಕನ್ನಡದ ಗ್ರಂಥಭಾಷೆ – ಕನ್ನಡದ ಪ್ರಭುತ್ವಭಾಷೆ ಸಂಪೂರ್ಣ ಬೇರೆ ಬೇರೆಯಾಗಿದ್ದು ಭಾಷಿಕವಾದ ಪ್ರತ್ಯೇಕ ದ್ವೀಪಗಳಾಗಿಬಿಟ್ಟಿದೆ.

ಜನಭಾಷೆ – ಗ್ರಂಥಭಾಷೆ – ಪ್ರಭುತ್ವ ಭಾಷೆಗಳ ಮಧ್ಯೆ ಒಳಹೊಕ್ಕು ಬರುವ ಸಂಬಂಧವಿರಬೇಕು. ಅಂದರೆ ಇವು ಮೂರೂ ಒಂದೇ ಆಗಿರಲು ನಿರಂತರ ಪ್ರಯತ್ನಿಸುತ್ತಿರಬೇಕು. ಒಂದಾಗದೆ ಮೂರು ದಾರಿಗಳಾಗಿ ಬಿಡುವುದು 'ಭಾಷಿಕ ಪ್ರಜಾಪ್ರಭುತ್ವ' ಎನಿಸಿಕೊಳ್ಳುವುದಿಲ್ಲ.

೪

ಭಾಷೆಯು ಒಂದು ಶಕ್ತಿಯುತವಾದ ಆಯುಧವಾಗಿರುವುದರಿಂದ ಹೊಸ ಪದಗಳನ್ನು ಕಟ್ಟುವ ಬಗೆಯನ್ನು ಚತುರಂಗ ದಳದ ಸೈನ್ಯ ನಿರ್ಮಾಣಕ್ಕೆ ಹೋಲಿಸಬಹುದು. ಒಂದು ಹೊಸ ವಸ್ತುವಿನೊಂದಿಗೆ ಹೊಸ ಪದವೂ ಬರುತ್ತದೆಯೆಂಬ ಮೂಲಭೂತ ತತ್ವವನ್ನು ಮರೆಯದೆ ಭಾಷಾ ಸ್ವೀಕರಣೆಯನ್ನು ನಿರಂತರವಾಗಿ ಮಾಡಿಕೊಳ್ಳುತ್ತಿರಬೇಕು. ಕನ್ನಡದಲ್ಲಿ ಇಂದು ಹೊಸ ಪದಗಳನ್ನು ಕಟ್ಟುವ ಹಲವು ಬಗೆಗಳಿವೆ :

೧. ಸಂಸ್ಕೃತಮಯ ಅಥವಾ ಜಿ. ಟಿ. ನಾರಾಯಣ ರಾವ್ ಬಗೆ :
ಬ್ಲಾಕ್ ಹೋಲ್ಸ್ = ಕೃಷ್ಣ ರಂಧ್ರಗಳು
ವೈಟ್ ಡ್ವಾರ್ಫ್ = ಶ್ವೇತ ಕುಬ್ಜ
ರೆಡ್ ಜೈಂಟ್ = ರಕ್ತ ದೈತ್ಯ

೨. ಅಚ್ಚಗನ್ನಡಮಯ ಅಥವಾ ಡಿ. ಎನ್. ಶಂಕರಭಟ್ ಬಗೆ :
ಜ್ಞಾನ = ಅರಿಮೆ, ಜ್ಞಾನಿ = ಅರಿಗ
ಪ್ರಶ್ನೆ = ಕೇಳ್ವಿ, ಧ್ವನಿ = ಉಲಿ

೩. ಕನ್ನಡಕ್ಕೆ ನಾಡವರೆ ಓಜರ್ ಎನ್ನುವ ಬಗೆ

'ಓಜ' ಎಂದರೆ ಗುರು ಎಂದರ್ಥ ! ಕನ್ನಡ ಭಾಷೆಗೆ ಗುರುಸ್ಥಾನದಲ್ಲಿ ಇರುವವರು ಕನ್ನಡ ನಾಡಿನವರೆ ಹೊರತು ಅನ್ಯರಾರೂ ಇಲ್ಲ ! ಏಕೆಂದರೆ, ಭಾಷೆಯನ್ನು ನಿರಂತರವಾಗಿ ಬಳಕೆ ಮಾಡುತ್ತಾ ಅದನ್ನು ಉಳಿಸಿಕೊಂಡು ಬರುವವರು ಮತ್ತು ಸಬಲೀಕರಣಗೊಳಿಸುತ್ತಿರುವವರು ಆ ನಾಡಿನ ಜನಸಾಗರವೇ ಹೊರತು ಪಂಡಿತರು ಅಥವಾ ಬುದ್ಧಿಜೀವಿಗಳಲ್ಲ ! ಈ ಮೊದಲ ಸತ್ಯವನ್ನು ಅರಿತು ಪದಗಳನ್ನು ಟಂಕಿಸುವ ಉತ್ಸಾಹ ಅಥವಾ ಶಬ್ದ ಬ್ರಹ್ಮರಾಗುವ ಸಂಭ್ರಮವನ್ನು ತೊರೆಯಬೇಕು. ಕನ್ನಡನಾಡಿನ ಜನಸಾಗರ, ಅಥವಾ ಜನತಾ ಜನಾರ್ದನರ ನಾಲಿಗೆಗಳ ಮೇಲೆ ನಲಿದಾಡುವ ಪದಗಳನ್ನು ಆಯ್ದುಕೊಂಡು, ಗ್ರಂಥಭಾಷೆಯ ಪದಕೋಶಕ್ಕೆ ಎಳ್ಳುನೀರು ಬಿಡಬೇಕು. ಶುಷ್ಕವಾಗಿರುವ 'ಕಾಗದ'ಕ್ಕಿಂತಲೂ ಒದ್ದೆಯಾಗಿರುವ 'ನಾಲಗೆ'ಯೇ ಶ್ರೇಷ್ಠವೆಂದು ತಿಳಿಯಬೇಕು.

ಕೋಲಾರ ಕನ್ನಡದಲ್ಲಿ ಚೇಗು, ದೊಂಗರ್ಲು, ಊದರ್ಲು ಮುಂತಾದ ವಿಶಿಷ್ಟ ಪದಗಳು ಬಳಕೆಯಲ್ಲಿವೆ. ಮರಗಳ ಕಾಂಡದಲ್ಲಿ ಮಧ್ಯೆ ಇರುವ ಲೋಹ ಸದೃಶ ಕಠಿಣಭಾಗವನ್ನು ಉತ್ತರ ಕರ್ನಾಟಕದಲ್ಲಿ 'ಕೆಚ್ಚು' ಎನ್ನುತ್ತಾರೆ. ಇದರ ಜೊತೆಗೆ ಉಪಭಾಷಿಕ ಪದವಾಗಿ 'ಚೇಗು' ಎಂಬುದನ್ನೂ ಬಳಸಬಹುದು. ಹೊಸದಾದ ಮಣ್ಣಿನ ರಸ್ತೆಗಳಲ್ಲಿರುವ ಹುಸಿನೆಲದ ಪೊಟರೆಗಳನ್ನು ಕೋಲಾರ ಕನ್ನಡದಲ್ಲಿ 'ದೊಂಗರ್ಲು' ಎನ್ನುತ್ತಾರೆ. ಪೊರಕೆಕಡ್ಡಿಯ ಹೂಮುಳ್ಳುಗಳು ಉದುರಿಹೋಗುವುದರಿಂದ, ಇವನ್ನು ಕೋಲಾರ ಕನ್ನಡದಲ್ಲಿ 'ಊದರ್ಲು' ಎನ್ನುತ್ತಾರೆ. ಕನ್ನಡದ ಪ್ರಮಾಣ ಭಾಷೆಯಲ್ಲಿ ಇಂಥ ಉಪಭಾಷಿಕ ಪದಕೋಶವನ್ನು ಹದವರಿತು ಬಳಸುವುದರಿಂದ ಬರೆಹಕ್ಕೊಂದು ಜೀವಂತಿಕೆ ಪ್ರಾಪ್ತಿಯಾಗುತ್ತದೆ.

ಭಾರತದ ರಾಷ್ಟ್ರಪಕ್ಷಿ 'ನವಿಲು'. ಕರ್ನಾಟಕ ಮತ್ತು ಆಂಧ್ರಪ್ರದೇಶದ ರಾಜ್ಯಪಕ್ಷಿ ಇಂಡಿಯನ್ ರೋಲರ್ ಅಥವಾ ಬ್ಲೂಜೇ. ಈ ಹಕ್ಕಿಯನ್ನು ಆಂಧ್ರಪ್ರದೇಶದಲ್ಲಿ 'ಪಾಲಪಿಟ್ಟ' ಎಂದು ಕರೆಯುತ್ತಾರೆ. ಇದೇ ಹಕ್ಕಿಯನ್ನು ತೇಜಸ್ವಿಯವರು 'ದಾಸಮಗರೆ' ಎಂದು ಗುರುತಿಸಿದ್ದಾರೆ. ಇದಕ್ಕೆ ಅಪರಾಜಿತ (ಹಿಂದಿ), ನೀಲಕಂಠ (ಸಂಸ್ಕೃತ), ಆಕಾಶ ಗೊರವಂಕ (ಕೋಲಾರ ಕನ್ನಡ) ಎಂಬ ಹೆಸರುಗಳೂ ಇವೆ. ತೇಜಸ್ವಿಯವರು 'ಕರಿ ಗೊರವಂಕ' ಎಂಬ ಪದವನ್ನು ಬಳಸಿರುವುದರಿಂದ, ಗಾತ್ರದಲ್ಲಿ ಇದನ್ನೇ ಹೋಲುವ 'ಬ್ಲೂಜೇ' ಹಕ್ಕಿಯನ್ನು ಪ್ರಮಾಣ ಭಾಷೆ ಕನ್ನಡದಲ್ಲಿ 'ಆಕಾಶ ಗೊರವಂಕ' ಎಂದು ಕರೆಯಲು ಅಡ್ಡಿಯಿಲ್ಲ. ಇದು ಉಪಭಾಷಿಕ ಪದಕೋಶಕ್ಕೆ ಹೇಗೆ ಮಾನ್ಯತೆ ನೀಡಬಹುದೆಂಬುದಕ್ಕೆ ಒಂದು ನಿದರ್ಶನ ಮಾತ್ರ !

ಭಾಷೆ ವೈಯಕ್ತಿಕ ಸೃಷ್ಟಿಯಲ್ಲ; ಸಾಂಸ್ಥಿಕ ಸೃಷ್ಟಿಯೂ ಅಲ್ಲ. ಭಾಷೆಯು ಸಾಮಾಜಿಕ ಉತ್ಪತ್ತಿ. (= ಲಾಂಗ್ವೇಜ್ ಈಸ್ ಎ ಸೋಷಿಯಲ್ ಪ್ರಾಡಕ್ಟ್)

ಆದ್ದರಿಂದ, ಭಾಷೆಯಲ್ಲಿ ಸಾಮಾಜೀಕೀಕರಣ ಪ್ರಕ್ರಿಯೆ ಅತ್ಯಗತ್ಯ. ಆದರೆ ಕನ್ನಡದಲ್ಲಿ ಭಾಷೆಯು ಸಾಂಸ್ಥೀಕರಣಗೊಂಡಿದೆ; ಪಟ್ಟಭದ್ರ ಹಿತಾಸಕ್ತಿಗಳ ಹಿಡಿತಕ್ಕೆ ಒಳಗಾಗಿದೆ. ಇದನ್ನು ಸ್ಪಷ್ಟಪಡಿಸಲು 'ಹೊಸ ಪದಗಳನ್ನು ಕಟ್ಟುವ ಬಗೆ'ಯನ್ನು ಪರಿಶೀಲಿಸಬಹುದು. ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ ಸೋದರ ಭಾಷೆಗಳ ಪದಕೋಶವನ್ನು ತೌಲನಿಕವಾಗಿ ಪರಿಶೀಲಿಸಿದರೆ ಮೂರು ಮಾದರಿಗಳನ್ನು ಗುರುತಿಸಬಹುದು :

| ಕನ್ನಡ ಮಾದರಿ | ತಮಿಳು ಮಾದರಿ | ತೆಲುಗು ಮಾದರಿ |
|---|---|---|
| ಆಕಾಶವಾಣಿ | ವಾನುಲಿ | ರೇಡಿಯೋ |
| ದೂರದರ್ಶನ | ತೊಳ್ಳೈಕಾಚ್ಚಿ | ಟಿ.ವಿ. |
| ಗಣಕಯಂತ್ರ | ಕನಿನಿ ಎಂದಿರಂ | ಕಂಪ್ಯೂಟರ್ |
| ಜಂಗಮವಾಣಿ | ಕಯ್‌ತೊಳ್ಳೈಪೇಚ್ಚಿ | ಮೊಬೈಲ್/ಸೆಲ್ |

– ಮೇಲ್ಕಂಡ ಪದಕೋಶದ ಮಾದರಿಗಳನ್ನು ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶಗಳ ಆಡಳಿತ ಭಾಷೆಯಿಂದ ಆಯ್ದುಕೊಂಡು ಉದಾಹರಿಸಲಾಗಿದೆ. ಇಲ್ಲಿ ಕನ್ನಡ ಮಾದರಿಯಲ್ಲಿರುವ ಸಂಸ್ಕೃತೀಕರಣ, ತಮಿಳು ಮಾದರಿಯಲ್ಲಿರುವ ತಮಿಳೀಕರಣ, ತೆಲುಗು ಮಾದರಿಯಲ್ಲಿರುವ ಇಂಗ್ಲಿಷೀಕರಣವನ್ನು ವಿಶೇಷವಾಗಿ ಗಮನಿಸಬೇಕು. ಕನ್ನಡ ಮಾದರಿ ಮತ್ತು ತಮಿಳು ಮಾದರಿಗಳು ಜನಭಾಷೆಯಿಂದ ದೂರ ಸಿಡಿದ ಪ್ರಭುತ್ವ ಭಾಷೆಗೆ ನಿದರ್ಶನವಾಗಿದ್ದರೆ, ತೆಲುಗು ಮಾದರಿಯಲ್ಲಿ ಜನಭಾಷೆಯೇ ಪ್ರಭುತ್ವ ಭಾಷೆಯಾಗಿರುವುದನ್ನು ಮನಗಾಣಬಹುದು. ತೆಲುಗು ಮಾದರಿಯ ಪರವಾದ ನಿರ್ಣಯವನ್ನು ಬಹು ಹಿಂದೆಯೇ ಆಚಾರ್ಯ ಬಿ. ಎಂ. ಶ್ರೀ. ಅವರು 'ಕನ್ನಡ ಮಾತು ತಲೆಯೆತ್ತುವ ಬಗೆ' – ಎಂಬ ದೀರ್ಘದೃಷ್ಟಿಯ ಸಂಶೋಧನಾತ್ಮಕ ಲೇಖನದಲ್ಲಿ ತೆಗೆದುಕೊಂಡಿದ್ದಾರೆ : 'Rail'ಅನ್ನು ರೈಲು ಎನ್ನುವುದು ಉತ್ತಮ, ಹೊಗೆಬಂಡಿ ಎನ್ನುವುದು ಮಧ್ಯಮ, ಧೂಮಶಕಟ ಎನ್ನುವುದು ಅಧಮ. ನಾವಿಂದು ಇಪ್ಪತ್ತೊಂದನೇ ಶತಮಾನದಲ್ಲಿದ್ದೇವೆ. ಮೇಲ್ಕಂಡಂತೆ, ಬಿ. ಎಂ. ಶ್ರೀ. ಗುರುತಿಸಿರುವ ಉತ್ತಮ ಕನ್ನಡಕ್ಕೆ ಜೈ ಎನ್ನೋಣ ! ಅಧಮ ಕನ್ನಡಕ್ಕೆ ಧಿಕ್ಕಾರ ಹಾಕೋಣ.

ಪದಕೋಶ ನಿರ್ಮಾಣದಲ್ಲಿ ಪಂಡಿತರು, ಬುದ್ಧಿ ಜೀವಿಗಳು, ಬುದ್ಧಿ ಸಂಸ್ಥೆಗಳು – ಸುದ್ದಿ ಸಂಸ್ಥೆಗಳು ಹಿಂದೆ ಸರಿಯಬೇಕು. ಜನತಾ ಜನಾರ್ಧನರ ನಾಲಿಗೆಗೆ ಅಗ್ರಪೀಠ ಸಲ್ಲಿಸಬೇಕು. ಇದನ್ನೇ ಪುರಾಣ ರೂಪಕದಲ್ಲಿ ಹೇಳುವುದಾದರೆ, ಜನಭಾಷೆಗಳು ಕರ್ಣನಿದ್ದಂತೆ ! ಪ್ರಭುತ್ವ ಭಾಷೆಯು ದುರ್ಯೋಧನ ಇದ್ದಂತೆ. ಇವೆರಡು "ಒಡಲೆರಡುಂ ಜೀವಂ ಒಂದೇ" – ಎಂಬಂತೆ ಅನ್ಯೋನ್ಯವಾಗಿರಬೇಕು. ಸ್ನೇಹ ತತ್ವಕ್ಕೆ ಪ್ರತೀಕವಾದ ಕರ್ಣ – ದುರ್ಯೋಧನ ಮೈತ್ರಿಯಲ್ಲಿ ಜನಭಾಷೆಗಳು ಮತ್ತು ಪ್ರಭುತ್ವ ಭಾಷೆಯ ಅವಿಭಾಜ್ಯ ಸಂಬಂಧವನ್ನು ಮನಗಾಣಬಹುದು. ಸತ್ಯಂ ತಪ ಮಹರ್ಷಿಯು ಕರ್ಣನಿಗೆ ಅಗ್ರಪೀಠ ಕೊಟ್ಟಂತೆಯೇ ಕನ್ನಡ ಸಹೃದಯರು ಜನಭಾಷೆಯ ಪದಕೋಶಕ್ಕೆ ಮಾನ್ಯತೆ ಕೊಡಬೇಕು. ಆದರೆ, ಕನ್ನಡಿಗರ ದುರದೃಷ್ಟ ಎನ್ನೋಣವೆ ? ಕನ್ನಡದಲ್ಲಿ ಜನಭಾಷೆ ಮತ್ತು ಪ್ರಭುತ್ವ ಭಾಷೆಗಳು ಭೀಮ – ದುರ್ಯೋಧನರಂತೆ ವಿರುದ್ಧ ಧ್ರುವಗಳಾಗಿವೆ. ಇಂದಲ್ಲ ನಾಳೆ ಜನಭಾಷೆಯ ಬಲಭೀಮರು ಪ್ರಭುತ್ವ ಭಾಷೆಯ ದುರ್ಯೋಧನರ ಮಕುಟಭಂಗ ಮತ್ತು ಊರುಭಂಗ ಮಾಡದೇ ಬಿಡುವುದಿಲ್ಲ. ಈ ದಿಸೆಯಲ್ಲಿ ಭಾಷಾ ವಿಜ್ಞಾನಿಗಳು ಶ್ರೀ ಕೃಷ್ಣನಂತೆ ತೊಡೆ ತಟ್ಟಿ, ಜನಬಲಕ್ಕೆ ಪ್ರೋತ್ಸಾಹ ನೀಡಬೇಕಾಗಿದೆ. "ಕನ್ನಡಕ್ಕೆ ನಾಡವರೆ ಓಜರ್" – ಎಂಬ ಕವಿರಾಜಮಾರ್ಗದ ಉದ್ದೇಶವೂ ಇದೇ ಆಗಿದೆ.

ವಿ. ಚಂದ್ರಶೇಖರ ನಂಗಲಿ
ನಂ. ೧೬, 'ಶ್ರೀಗೌರಿ', ೪ನೇ ಅಡ್ಡರಸ್ತೆ, ಕನಕನಗರ, ಹೊಸಕೋಟೆ
ಬೆಂಗಳೂರು ಗ್ರಾಮಾಂತರ – ೫೬೨ ೧೧೪

# ಓಪನ್ ಕೋರ್ಟ್‌ನಲ್ಲಿ ಕಂಡ ಪ್ಯಾಲೆಸ್ಟೈನ್ ಹೆಣ್ಣು






ಹೇಳು ಜಗತ್ತಿಗೆ ಹೇಳು
ಮೌನದ ಕದ ಒಡೆದು ಹೇಳು
ಹೇಳು ತಾಯೀ...
ಅಮೇರಿಕವೆಂಬ ತೋಳದ
ಬಾಹುಬಂಧನದಮಲಿಗೆ
ತನ್ನ ಗತ ಮರೆತ
ಯಹೂದಿಗಳಿಗೆ ಹೇಳು ತಾಯೀ...
ಕಣ್ಣೆದುರೇ ಅವರು ಕೊಂದ
ನಿನ್ನ ತಾಯಿ ತಮ್ಮ
ಅಣ್ಣಂದಿರ ಬಂಧವ
ಸರಣಿ ಮಾನಭಂಗಕ್ಕೊಳಗಾದ
ನಿನ್ನ ಯಾತನೆಯ
ಅದ ನೋಡುತ್ತಲೇ ದಹಿಸಿ
ನಿನ್ನ ಒಳಿತಿಗೆ ಹಾರೈಸಿ
ಜೀವತೆತ್ತ ನಿನ್ನ ತಂದೆಯ
ಕಣ್ಣೀರ ಕುದಿಯ
ವರ್ಷಗಳ ಕಾಲ ಸತ್ತು
ಬದುಕಿದ ನಿನ್ನ ಬೇಗೆಯ
ಹೇಳು ಜಗತ್ತಿಗೆ ಹೇಳು
ಮೌನದ ಕದ ಸೀಳಿ ಹೇಳು ತಾಯೀ...
ಆಕ್ರಮಿತ ಭುವಿಯ
ಹೆಣ್ಣುಗಳ ಮೈಸೀಳಿ
ಗಂಡುತನದ ಉನ್ಮಾದ ಮೆರೆವ
ಜಗದ ಷಂಡ ಪೌರುಷದ
ಅಟ್ಟಹಾಸವ ಒತ್ತೊತ್ತಿ ಬರುವ
ಗಂಟಲನು ತೆರೆತೆರೆದು ಹೇಳು
ಹೇಳು ತಾಯೀ...
ನಿನ್ನ ಬಿಕ್ಕುಗಳ ಬೆಂಕಿಮಣಿಯ
ಬೇಗೆ ಮಂಜು ಹೊದ್ದ
ಮಹಲುಗಳ ಕರಗಿಸಲಿ
ಮಾನವತೆಯ ಜೋಪಡಿ ಕಟ್ಟುವ
ಹಂಬಲು ಜಗದ ತುಂಬಾ ಹಬ್ಬಲಿ.

*(ಇಸ್ರೇಲ್‌ನ ದಬ್ಬಾಳಿಕೆಗೆ ಒಳಗಾದ ಹೆಣ್ಣುಮಗಳು
ಓಪನ್ ಕೋರ್ಟ್‌ನಲ್ಲಿ ತನ್ನ ದುಃಖ ತೋಡಿಕೊಂಡ ಕ್ಷಣ)*

ಡಾ|| ಸಬಿತಾ ಬನ್ನಾಡಿ
ಸಹ ಪ್ರಾಧ್ಯಾಪಕರು, ಸರ್ ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು, ಭದ್ರಾವತಿ

ಕಳೆದ ಶತಮಾನದ ಆದಿ ಭಾಗದಲ್ಲಿ ಹೆಣ್ಣುಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ಮದುವೆಯೆನ್ನುವುದು ಸರ್ವೇಸಾಮಾನ್ಯವಾದ ಸಂಗತಿಯಾಗಿತ್ತು. ಅದರಲ್ಲೂ ಬಡ ಬ್ರಾಹ್ಮಣ ಕುಟುಂಬದಲ್ಲಂತೂ 'ಕನ್ಯಾಸೆರೆ'ಯನ್ನು ಬಿಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ವರನ ವಯಸ್ಸು ಎಷ್ಟೇ ಇದ್ದರೂ, ಅವನು ವಿಧುರನಾಗಿದ್ದರೂ ಯೋಚಿಸದೆ ಮದುವೆ ಮಾಡಿಕೊಡುತ್ತಿದ್ದ ಪದ್ಧತಿಯಿತ್ತು. ಇಂತಹ ದುರದೃಷ್ಟ ಭಾಗ್ಯದ ಹೆಣ್ಣುಮಗಳು ಮೈಸೂರಿನ ರಾಜೀವಿ. ಆಕೆಗೆ ಹದಿನಾಲ್ಕು ವರ್ಷ ವಯಸ್ಸಾದಾಗ, ನಲವತ್ತೆಂಟು ವರ್ಷ ವಯಸ್ಸಿನ, ಆರೇಳು ಮಕ್ಕಳ ತಂದೆಯಾಗಿದ್ದ (ಕೆಲವು ಮಕ್ಕಳು ವಯಸ್ಸಿನಲ್ಲಿ ಆಕೆಗಿಂತ ಹಿರಿಯರು) ಪೌರೋಹಿತ್ಯ ವೃತ್ತಿ ಮಾಡುತ್ತಿದ್ದ ನರಸಿಂಹಾಚಾರ್ಯರನ್ನು ಮದುವೆಯಾಗಬೇಕಾಗಿ ಬಂದ ಸಂದರ್ಭ. ಹಿರಿಯರ ಮಾತಿಗೆ ತಲೆಯೊಡ್ಡಿದ ರಾಜೀವಿ ಆಗಷ್ಟೇ ಎಲ್.ಎಸ್. ಪರೀಕ್ಷೆಯನ್ನು ಮುಗಿಸಿದ್ದರೂ ಇನ್ನೂ ಹೆಚ್ಚು ಓದಬೇಕೆನ್ನುವ ನಂದದ ಆಸೆಯನ್ನು ತನ್ನಲ್ಲಿಟ್ಟುಕೊಂಡಿದ್ದರಿಂದಲೋ ಏನೋ ಮದುವೆಯ ನಂತರ ಮನೆಯಲ್ಲೇ ಕೂತು ಸ್ವತಃ ಓದಿಕೊಂಡು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕಟ್ಟುವ ನಿರ್ಧಾರ ತೆಗೆದುಕೊಂಡರು. ಅದಕ್ಕೆ ಪರೀಕ್ಷಾ ಶುಲ್ಕವಾದ ಇಪ್ಪತ್ತು ರೂಪಾಯಿಗಳನ್ನು ತಮ್ಮ ಪೌರೋಹಿತ್ಯದ ಸಂಪಾದನೆಯಿಂದ ಒದಗಿಸಿಕೊಟ್ಟ ಪತಿ ನರಸಿಂಹಾಚಾರ್ಯರ ಔದಾರ್ಯವನ್ನು ತನ್ನ ಜೀವಮಾನ ಪರ್ಯಂತ ನೆನಪಿಸಿಕೊಳ್ಳುತ್ತಿದ್ದ ಈಕೆ ಖಾಸಗಿಯಾಗಿ ಎಸ್.ಎಸ್.ಎಲ್.ಸಿ. ಮುಗಿಸಿ ಶಿಕ್ಷಕ ತರಬೇತಿ ಮಾಡಿಕೊಂಡು ಪ್ರೈಮರಿ ಶಾಲೆಯ ಅಧ್ಯಾಪಕಿಯಾಗಿ ಮನೆಮಂದಿಯ ಅಗತ್ಯಗಳನ್ನು ಪೂರೈಸಿದರು. ತಮ್ಮ ಎಲ್ಲ ಹೆಣ್ಣುಮಕ್ಕಳೂ ವಿದ್ಯೆ ಕಲಿತು, ಆರ್ಥಿಕವಾಗಿ ಸ್ವತಂತ್ರರಾಗ ಬೇಕೆಂದು ಬಯಸಿ, ಅದನ್ನು ಸಾಧಿಸಿ ಗೆದ್ದರು. ಈ ಮಹಾತಾಯಿಯ ಐವರು ಮಕ್ಕಳಲ್ಲಿ ನಾಲ್ಕನೆಯವರಾದ ಸುಮಿತ್ರಾಬಾಯಿ ಹುಟ್ಟಿದ್ದು 1950ರಲ್ಲಿ ಮೈಸೂರಿನಲ್ಲಿ. ಶಿಕ್ಷಕಿ ಅಮ್ಮನ ಓದಿನ ಹುಚ್ಚು ಮತ್ತು ಬದುಕಿನ ಛಲವನ್ನು ತಮ್ಮಲ್ಲೂ ರೂಢಿಸಿಕೊಂಡು ಇಂದು ಕನ್ನಡ ನಾಡಿನ ಪ್ರಸಿದ್ಧ ಸಾಹಿತ್ಯ ವಿಮರ್ಶಕಿಯಾಗಿರುವ ಡಾ॥ ಬಿ. ಎನ್. ಸುಮಿತ್ರಾಬಾಯಿ ಹೆಣ್ಣಿನ ಸ್ವಾವಲಂಬನ ಮತ್ತು ಸ್ವಂತಿಕೆಯ ಪ್ರತೀಕವಾಗಿದ್ದಾರೆ. ಅವರನ್ನು 'ಹೊಸತು' ವಿಶೇಷ ಸಂಚಿಕೆಗೆಂದು ಅವರ ಮನೆಯಲ್ಲಿ ಡಾ॥ ಎನ್. ಗಾಯತ್ರಿ ಮತ್ತು 'ಹೊಸತು' ಸಂಪಾದಕರಾದ ಡಾ॥ ಸಿದ್ದನಗೌಡ ಪಾಟೀಲರು ಸಂದರ್ಶಿಸಿದ್ದಾರೆ .

# ಮನುಷ್ಯತ್ವದ ಪರವಾದ ಸಿದ್ಧಾಂತಗಳ ಬದ್ಧತೆಯಿಂದ ಶ್ರೇಷ್ಠ ಸಾಹಿತ್ಯ !




- ಡಾ॥ ಬಿ. ಎನ್. ಸುಮಿತ್ರಾಬಾಯಿ



ಸಂದರ್ಶಕರು

**ಡಾ॥ ಎನ್. ಗಾಯತ್ರಿ ✤ ಡಾ॥ ಸಿದ್ದನಗೌಡ ಪಾಟೀಲ**

**ಹೊಸತು :** ನಮಸ್ತೆ. ನಿಮ್ಮನ್ನು ಹೊಸತು ಪತ್ರಿಕೆಗೆ ಸಂದರ್ಶಿಸಬೇಕೆಂದು ಬಂದಿದ್ದೇವೆ.

**ಸುಮಿತ್ರಾ :** ಸಂತೋಷ. ಏನು ಬೇಕಾದರೂ ಕೇಳಿ. ಗೊತ್ತಿದ್ದದ್ದು ಹೇಳುವೆ.

**ಹೊಸತು :** ನಿಮ್ಮ ಊರು ಹಾಸನ ಅಲ್ವಾ ?

**ಸುಮಿತ್ರಾ :** ನಾನು ಹುಟ್ಟಿದಾಗ ಮೈಸೂರಲ್ಲಿದ್ದೆವು. ನಮ್ಮ ತಾಯಿ ಮದುವೆಯಾದ ಮೇಲೆ ಖಾಸಗಿಯಾಗಿ ಎಸ್.ಎಸ್.ಎಲ್.ಸಿ. ಮತ್ತು ಟೀಚರ್ಸ್ ಟ್ರೈನಿಂಗ್ ಮಾಡಿಕೊಂಡು ಪ್ರೈಮರಿ ಸ್ಕೂಲಲ್ಲಿ ಟೀಚರ್ ಆಗಿ ಕೆಲಸಕ್ಕೆ ಸೇರಿ ಕೊಂಡಾಗ ಅವರ ಮೊದಲ ಅಪಾಯಿಂಟ್‌ಮೆಂಟ್ ಗುಂಡ್ಲುಪೇಟೆಯಲ್ಲಾಗಿತ್ತು. ನಂತರ ನಮ್ಮ ತಂದೆಗೆ ಅವರಿಗೆ ಗೊತ್ತಿದ್ದವರೊಬ್ಬರು ಹಾಸನದ ಸೀತಾರಾಮ ದೇವಸ್ಥಾನದಲ್ಲಿ ಅರ್ಚಕರಾಗಲು ಆಹ್ವಾನಿಸಿದಾಗ ಇಡೀ ಕುಟುಂಬ ಹಾಸನಕ್ಕೆ ಬಂದ್ವಿ. ಆಗ ನಮ್ಮ ತಾಯಿಯೂ ವರ್ಗಾವಣೆ ಮಾಡಿಸಿಕೊಂಡು ಹಾಸನಕ್ಕೆ ಬಂದರು. ಹೀಗೆ ನಾನು ಹಾಸನಕ್ಕೆ ಬಂದಾಗ ನನಗೆ ಮೂರುವರೆ

ವರ್ಷವಂತೆ. ನಂತರ ನಾನು ನನ್ನೆಲ್ಲ ಓದು ಮುಗಿಸಿದ್ದು ಇಲ್ಲೇ. ಮಧ್ಯೆ ಎರಡು ವರ್ಷ ಎಂ.ಎ. ಮಾಡಲು ಮೈಸೂರಿಗೆ ಹೋಗಿದ್ದು ಬಿಟ್ಟರೆ, ನನಗೆ ನಲವತ್ತು ವರ್ಷ ಆಗುವವರೆಗೂ ಹಾಸನದಲ್ಲಿದ್ದೆ.

**ಹೊಸತು :** ಆ ಕಾಲಕ್ಕೇ ನಿಮ್ಮ ಅಮ್ಮ ದುಡಿಯುವ ಮಹಿಳೆಯಾಗಿದ್ದು ಒಂದು ವಿಶೇಷ ಅಲ್ಲವೆ ? ಅದರ ಪ್ರಭಾವ ನಿಮ್ಮ ಮೇಲೆ ಹೇಗಾಗಿದೆ ?

**ಸುಮಿತ್ರಾ:** ಅಮ್ಮನಿಗೆ ದುಡಿಯಬೇಕೆಂಬುದು ಸಹಜ ಭಾವವಾಗಿಯೇ ಬಂದಿದೆ. ಅಂದ್ರೆ ಅಪ್ಪ ಪೌರೋಹಿತ್ಯವನ್ನು ಎಂದೂ ಆದಾಯ ತರುವ ವೃತ್ತಿಯೆಂದು ಭಾವಿಸಲಿಲ್ಲ. ಇದರಿಂದ ಸಹಜವಾಗಿಯೇ ಅಮ್ಮ ಮದುವೆಯಾಗಿ ಬಂದ ನಂತರ ತಾನು ಏನಾದರೂ ದುಡಿದು ತಂದು ತನ್ನ ಸಂಸಾರ ತಾನೇ ನೋಡಿಕೊಳ್ಳಬೇಕು, ಎಂದು ನಿರ್ಧರಿಸಿದರು. ನಾವು ಐದು ಮಕ್ಕಳು. ಅಣ್ಣನ ನಂತರ ನಾಲ್ವರು ಹೆಣ್ಣುಮಕ್ಕಳು. ಎಂದೂ ಮಕ್ಕಳ ಮದುವೆ ಮುಖ್ಯ, ಎಂದು ಭಾವಿಸಲಿಲ್ಲ. ಹೆಣ್ಣುಮಕ್ಕಳೂ ಚೆನ್ನಾಗಿ ಓದಿ ತಮ್ಮ ಕಾಲ ಮೇಲೆ ನಿಲ್ಲಬೇಕು. ಆಮೇಲೆ, ಮದುವೆ ಹೇಗೋ ಆಗುತ್ತದೆ, ಅಂತ ಅನ್ನಿದ್ದ ಅವರು ನಮ್ಮ ನಾಲ್ವರ ಓದಿಗೆ ಪ್ರಾಮುಖ್ಯತೆ ಕೊಟ್ಟರು. ಒಂದು ರೀತಿಯಲ್ಲಿ ಅವರೇ ನಮಗೆ ಮಾದರಿಯಾದರು.

**ಹೊಸತು :** ನಿಮ್ಮ ತಂದೆಯೂ ಇದಕ್ಕೆ ನೆರವಾದರೇ ?

**ಸುಮಿತ್ರಾ:** ನೆರವಾಗುವುದು ಅನ್ನುವುದಕ್ಕಿಂತ ಅಮ್ಮನ ಮೇಲೆ ಕೆಲಸದ ಹೊರೆ ಬೀಳದಂತೆ ಕೆಲಸ ಮಾಡುತ್ತಿದ್ದರು. ಇವತ್ತು ಸ್ತ್ರೀಪುರುಷರ ಸಮಾನತೆ ಎನ್ನುವುದು ಯಾವ ರೀತಿ ಆಧುನಿಕ ವಿಷಯವೆಂಬಂತೆ ನೋಡಲಾಗುತ್ತಿದೆಯೋ ಅದು ನಮ್ಮ ಮನೆಯಲ್ಲಿ ಸಹಜ ಸ್ಥಿತಿಯಂತೆ ಕಾಣುತ್ತಿತ್ತು. ಅಮ್ಮ ದೂರದ ಊರುಗಳಲ್ಲಿ ಕೆಲಸ ಮಾಡುತ್ತಿದ್ದರಿಂದ ಬೆಳಗ್ಗೆ ಬೇಗ ಎದ್ದು ಹೋಗುತ್ತಿದ್ದರು. ಆಗ ನಮ್ಮ ತಂದೆ ನಮಗೆಲ್ಲ ತಿಂಡಿ ಮಾಡಿಕೊಟ್ಟು, ಸ್ಕೂಲ್ ಬ್ಯಾಗು ತಗಲು ಹಾಕಿ ಸಿದ್ಧಮಾಡಿ ಕಳಿಸುತ್ತಿದ್ದರು. ನಮ್ಮ ತಂದೆ ಮತ್ತು ನಮ್ಮ ಅಣ್ಣ, ಇಬ್ಬರೂ ಚೆನ್ನಾಗಿ ಅಡುಗೆ ಮಾಡುತ್ತಿದ್ದರು. ಹಾಗೆಯೇ ಯಾವುದೇ ಕೀಳರಿಮೆಯಿಲ್ಲದೆ ಮನೆಯ ಕೆಲಸವನ್ನೆಲ್ಲಾ ಮಾಡುತ್ತಿದ್ದರು. ನಾವು ಹೆಂಗಸರು ಮಾಡುತ್ತಿದ್ದ ಕೆಲಸ ಕಡಿಮೆಯೇ. ಆ ರೀತಿಯಲ್ಲಿ ಇದು ಒಂದು ಮಾದರಿಯಾಗಿತ್ತು. ಹೀಗಾಗಿ 'ಹೆಣ್ಣಿನ ಶೋಷಣೆ' ಅನ್ನುವುದು ಎಂದೂ ನಮಗೆ ಒಳಗಿಂದ ಬಂದ ಅನುಭವವಾಗಿರಲಿಲ್ಲ.



**ಹೊಸತು :** ನಿಮ್ಮ ಶಾಲಾದಿನಗಳಲ್ಲಿ ನಿಮ್ಮ ಮೇಲೆ ಪ್ರಭಾವ ಬೀರಿದ ಅಧ್ಯಾಪಕರು ಯಾರು ?

**ಸುಮಿತ್ರಾ:** ನಮ್ಮ ಶಾಲಾ ದಿನಗಳಲ್ಲಿ ನನ್ನ ಮನಸ್ಸಿನ ವಿಕಾಸಕ್ಕೂ, ಬೌದ್ಧಿಕ ಬೆಳವಣಿಗೆಗೂ ಕಾರಣರಾದವರು ಎಚ್. ಆರ್. ಕೃಷ್ಣಮೂರ್ತಿ ಅಂತ ನಮ್ಮ ಮೇಷ್ಟ್ರು. ನಾನು ಹೈಸ್ಕೂಲ್‌ನಲ್ಲಿ ಇಂಗ್ಲಿಷ್ ಮೀಡಿಯಂನಲ್ಲಿ ವಿಜ್ಞಾನದ ಪಾಠ ಮಾಡಲು ಎಚ್. ಆರ್. ಕೃಷ್ಣಮೂರ್ತಿ ಅಂತ ಮೇಷ್ಟ್ರು ಬರುತ್ತಿದ್ದರು. ಅವರು ಫಿಸಿಕ್ಸ್, ಕೆಮಿಸ್ಟ್ರಿ, ಬಯಾಲಜಿ ಮತ್ತು ಸಾಮಾನ್ಯ ಜ್ಞಾನ ಅಂತ ನಾಲ್ಕು ವಿಷಯಗಳನ್ನು ಪಾಠ ಮಾಡಲು ಬರುತ್ತಿದ್ದರು. ಅವರ ವೈಶಿಷ್ಟ್ಯತೆಯೆಂದರೆ ನಮ್ಮ ಸುತ್ತಮುತ್ತ ಸಿಗುವಂತಹ, ಸರಳವಾದ ಕಲಿಕಾ



ಕನ್ನಡದಲ್ಲಿ ಮಹಿಳೆಯರ ಬರಹವನ್ನು ವಿಶೇಷ ದೃಷ್ಟಿಕೋನದಿಂದ ವಿಮರ್ಶಿಸುವ ಪ್ರಯತ್ನಕ್ಕೆ ನಾಂದಿ ಹಾಡಿದ ಪ್ರಮುಖರಲ್ಲಿ ಒಬ್ಬರಾದ ಡಾ॥ ಬಿ. ಎನ್. ಸುಮಿತ್ರಾಬಾಯಿ ಕಳೆದ ನಾಲ್ಕು ದಶಕಗಳಿಂದ ಬರವಣಿಗೆಯಲ್ಲಿ ತೊಡಗಿಕೊಂಡಿದ್ದು ಸುಮಾರು ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ. ೧೯೫೦ರಲ್ಲಿ ಮೈಸೂರಿನಲ್ಲಿ ಜನಿಸಿದ ಬಿ. ಎನ್. ಸುಮಿತ್ರಾಬಾಯಿ, ಬಿ. ನರಸಿಂಹಮೂರ್ತಿ ಆಚಾರ್ ಮತ್ತು ಬಿ. ಎಸ್. ರುಕ್ಮಿಣಿದೇವಿಯವರ ಐವರು ಮಕ್ಕಳಲ್ಲಿ ನಾಲ್ಕನೆಯವರು. ಸ್ತ್ರೀವಾದಿ ಸಂಸ್ಕೃತಿಯ ಅನ್ವೇಷಣೆ ಸುಮಿತ್ರಾಬಾಯಿಯವರ ಮುಖ್ಯ ಆಸಕ್ತಿಗಳಲ್ಲಿ ಒಂದು. ಸಮತಾ ವೇದಿಕೆ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, 'ಅಚಲ' ಮತ್ತು 'ಮಾನಸ' ಮಹಿಳಾ ಪತ್ರಿಕೆಗಳೊಂದಿಗೆ ಚಳುವಳಿಯ ಜೊತೆಯಲ್ಲಿ ಸಾಗುತ್ತಾ ಬಂದ ಸುಮಿತ್ರಾ ಅವರ ಕ್ರಿಯಾಶೀಲತೆ ಬೌದ್ಧಿಕ ಶಿಸ್ತಿನೆಡೆಗೆ ಗಮನಹರಿಸಿದಷ್ಟೇ ಸಾಮಾಜಿಕ ಸ್ವಾಸ್ಥ್ಯದೆಡೆಗೂ ದುಡಿದಿದೆ. ಅವರ 'ಸ್ತ್ರೀವಾದ'ವು ಸಾಹಿತ್ಯ ವಿಮರ್ಶೆಯ ಸಾಧನವಾಗಿರುವಂತೆಯೇ ಸಂಸ್ಕೃತಿಯ ವಿಶ್ಲೇಷಣೆಗೂ ನೆರವಾಗುತ್ತದೆ.

ಸಂಸ್ಕೃತ ಮತ್ತು ಇಂಗ್ಲಿಷಿನಲ್ಲಿ ಎಂ.ಎ. ಮಾಡಿ, ಜೈನಶಾಸ್ತ್ರದಲ್ಲಿ ಪಿಎಚ್.ಡಿ. ಮಾಡಿರುವ ಮತ್ತು ಪಾಲಿ ಮತ್ತು ಪ್ರಾಕೃತದ ಜ್ಞಾನವನ್ನು ಪಡೆದಿರುವ ಸುಮಿತ್ರಾಬಾಯಿ ಹಾಸನ ಮತ್ತು ಬೆಂಗಳೂರಿನ ಕಾಲೇಜುಗಳಲ್ಲಿ ಸಂಸ್ಕೃತ ಅಧ್ಯಾಪಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೮೭ರಲ್ಲಿ ಪ್ರಕಟವಾದ ಅವರ 'ಸಾರ್ವತ್ರಿಕದೆಡೆಗೆ' ಕೃತಿ ಅಂದಿನ ಕಾಲಘಟ್ಟದ ಕಾವ್ಯರಚನೆಯ ವಿಮರ್ಶೆಯಾಗಿದ್ದು ಸ್ತ್ರೀವಾದಿ ವಿಮರ್ಶೆಯ ಆರಂಭದ ಪ್ರಯತ್ನವಾಗಿದೆ. ನಂತರ ಬಂದ ಅವರ 'ವಿಚಯ' ಮತ್ತು 'ಸರಹದ್ದುಗಳಾಚೆ' ವಿಮರ್ಶಾ ಕೃತಿಗಳು ಸಾಹಿತ್ಯ ಅಕಾಡೆಮಿಯ ಬಹುಮಾನಗಳನ್ನು ಪಡೆದಿವೆ. ಹೆಣ್ಣಿನ ನಷ್ಟ ಚರಿತೆಯ ಕೊಂಡಿಗಳನ್ನು ಹೆಕ್ಕಿ ತೆಗೆಯುತ್ತಾ ಲೇಖಕಿಯರ ಪರಂಪರೆಯ ಸೃಷ್ಟಿಯಲ್ಲಿ ತೊಡಗಿದ ಸುಮಿತ್ರಾ ಅವರ ಬಹುಮುಖ್ಯ ಬರಹ 'ಕಲ್ಯಾಣ ಸರಸ್ವತಿ' ಮತ್ತು 'ಕಾತ್ಯಾಯಿನಿ ವಾಚಿಕೆ'. ಅವರ 'ಸ್ತ್ರೀವಾದ', 'ಅಯನ', 'ಬೊಗಸೆಯಲ್ಲಿ ಹೊಳೆನೀರು' ಸ್ತ್ರೀವಾದಿ ವಿಮರ್ಶಾ ಕೃತಿಗಳು. ಕಳೆದ ಮೂರು ದಶಕಗಳಿಂದ ಅವರು ನಾಡಿನ ಉದ್ದಗಲಕ್ಕೂ ಸಂಚರಿಸಿ ತಮ್ಮ ಉಪನ್ಯಾಸಗಳ ಮೂಲಕ ಸ್ತ್ರೀವಾದಕ್ಕೆ ಗಾಂಭೀರ್ಯವನ್ನು ಮತ್ತು ವೈಶಾಲ್ಯವನ್ನು ತಂದುಕೊಟ್ಟಿದ್ದಾರೆ. ಅವರ ಬರಹದ ಸಾಧನೆಯನ್ನು ಗುರುತಿಸಿ ರಾಷ್ಟ್ರಕವಿ ಜಿ.ಎಸ್.ಎಸ್. ಪ್ರಶಸ್ತಿ, ಕಲೇಸಂನ ಅನುಪಮಾ ಪ್ರಶಸ್ತಿ ಮತ್ತು ಕಳೆದ ವರ್ಷ ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಅತ್ತಿಮಬ್ಬೆ ಪ್ರಶಸ್ತಿಗಳನ್ನು ಅವರಿಗೆ ನೀಡಲಾಗಿದೆ.

ಸಲಕರಣೆಗಳನ್ನು ಇಟ್ಟುಕೊಂಡೇ ನಮಗೆ ಪ್ರಾಯೋಗಿಕವಾಗಿ ಪಾಠ ಮಾಡುತ್ತಿದ್ದರು. ನಮ್ಮ ತರಗತಿಯಲ್ಲಿ ನಾನು ಅವರಿಗೆ ಅತ್ಯಂತ ಪ್ರೀತಿಪಾತ್ರ ಶಿಷ್ಯೆಯಾಗಿದ್ದೆ. ಅವರು ನೂರಾರು ಜನರಿಗೆ ಪಾಠ ಮಾಡಿರಬಹುದಾದರೂ, ನಾನು ಶಾಲೆ ಬಿಟ್ಟ ನಂತರವೂ ಎಚ್. ಆರ್. ಕೆ. ಶಿಷ್ಯೆ ಅಂತಲೇ ಗುರುತಿಸುತ್ತಿದ್ದರು. ಇವರು ನನಗೆ ಶಾಲಾ ಪಠ್ಯದ ಆಚೆಗೂ ನನ್ನನ್ನು ಪ್ರಭಾವಿಸಿದ್ದಾರೆ. ಅವರು ಮೂಲತಃ ಮಾರ್ಕ್ಸ್‌ವಾದಿಯಾಗಿದ್ದರಿಂದ ಅವರ ಮನೆಗೆ ತರುತ್ತಿದ್ದ ಸೋವಿಯೆತ್ ಸಾಹಿತ್ಯ ಮತ್ತು ಸ್ಪುಟ್ನಿಕ್ – ಎಲ್ಲವನ್ನೂ ನನಗೆ ಓದೋಕೆ ಕೊಡುತ್ತಿದ್ದರು. ನಮಗೆ ಶಾಲಾ ಪಠ್ಯದಲ್ಲಿ ವಿದೇಶ ಅಂದ್ರೆ ಬರೀ ಬ್ರಿಟಿಷರು ಅಂತ ಅಂದ್ಕೊಂಡಿದ್ದ ಸಂದರ್ಭದಲ್ಲಿ, ಅವರಲ್ಲದೆ ರಷ್ಯಾ ಮತ್ತು ಇತರ ದೇಶಗಳು ಇವೆಯೆಂಬುದನ್ನು ಎಚ್. ಆರ್ಕೆ ತೋರಿಸಿಕೊಟ್ಟರು. ಅವರು ನಾಲ್ಕೈದು ವರ್ಷಗಳ ಹಿಂದಷ್ಟೇ ತೀರಿಹೋದರು. ಅಲ್ಲಿಯವರೆಗೂ ನಾನು ಅವರ ಜೊತೆ ಸಂಪರ್ಕವಿಟ್ಟುಕೊಂಡಿದ್ದೆ. ನಾನು ಎಲ್ಲ ರೀತಿಯಲ್ಲೂ ಮನಸ್ಸಿನಲ್ಲಿ ತುಂಬಾ ಗೌರವಿಸುವ ವ್ಯಕ್ತಿ ಅವರಾಗಿದ್ದರು.

**ಹೊಸತು :** ನೀವು ಶಿಕ್ಷಕ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳಲು ಬಲವಾದ ಕಾರಣಗಳು ಏನು ?

**ಸುಮಿತ್ರಾ:** ನಾನು ಬಿ.ಎಸ್ಸಿ. ಮುಗಿಸಿದ ನಂತರ ಏನಾದರೂ ಕೆಲಸ ಹುಡುಕಿಕೊಂಡು ಹೋಗಬಹುದಿತ್ತು. ಆದರೆ ನಾನು ಸಂಸ್ಕೃತವನ್ನು ಎರಡನೆಯ ಭಾಷೆಯಾಗಿ ಓದಿದ್ದರಿಂದ ಮೈಸೂರು ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಎಂ.ಎ.ಗೆ ಸೇರಿಕೊಂಡೆ. ನಮ್ಮಮ್ಮ ಹೇಗೂ ಶಿಕ್ಷಕಿಯಾಗಿದ್ದರು. ನನ್ನನ್ನು ಪ್ರಭಾವಿಸಿದ ವ್ಯಕ್ತಿಯೂ ಗುರುವಾದ್ದರಿಂದ ನಾನು ಶಿಕ್ಷಕ ವೃತ್ತಿಯನ್ನೇ ಆಯ್ಕೆ ಮಾಡಿಕೊಂಡೆ.

**ಹೊಸತು :** ಸಂಸ್ಕೃತದ ವಿದ್ಯಾರ್ಥಿನಿಯಾದ ನಿಮಗೆ ಕನ್ನಡ ಸಾಹಿತ್ಯದಲ್ಲಿ ಆಸಕ್ತಿ ಹುಟ್ಟಿದ್ದು ಹೇಗೆ ?

**ಸುಮಿತ್ರಾ:** ನನಗೆ ಕನ್ನಡದಲ್ಲಿ ಆಸಕ್ತಿ ಹುಟ್ಟುವುದಕ್ಕೆ ಹಲವಾರು ಕಾರಣಗಳಿವೆ. ಮೊದಲಿಗೆ ಇದಕ್ಕೆ ಕಾರಣರಾದವರು ನಮ್ಮ ಅಮ್ಮ. ಹಾಸನದಲ್ಲಿ ಮುನಿಸಿಪಾಲಿಟಿಯವರು ನಡೆಸುತ್ತಿದ್ದ ಸ್ಕೂಲಿನಲ್ಲಿ ಒಳ್ಳೆಯ ಲೈಬ್ರರಿ ಇತ್ತು. ಅವರು ಅಲ್ಲಿ ಶಿಕ್ಷಕಿಯಾಗಿದ್ದಾಗ ಅಲ್ಲಿಂದ ಕನ್ನಡ ಪುಸ್ತಕಗಳನ್ನು ಮನೆಗೆ ತರುತ್ತಿದ್ದರು. ಆಗ ಅಮ್ಮನೂ ಸೇರಿದಂತೆ ನಾವೆಲ್ಲ ಹೆಣ್ಣುಮಕ್ಕಳು ಆ ಪುಸ್ತಕಗಳನ್ನು ಓದುತ್ತಿದ್ದೆವು. ಹೀಗಾಗಿ ಸುಮಾರು ನನಗೆ ಏಳು ವರ್ಷದವಳಿಂದ ಹದಿಮೂರು ವರ್ಷವಾಗುವ ವೇಳೆಗೆ ಕಾರಂತ, ಕುವೆಂಪು, ತ್ರಿವೇಣಿ, ತರಾಸು, ಅ.ನ.ಕೃ., ರಾವ್ ಬಹದ್ದೂರ್ ಅವರ ಕಾದಂಬರಿಗಳನ್ನು ಓದಿದ್ದೆ. ಹೀಗೆ ಮನೆ ಮಂದಿಯೆಲ್ಲಾ ಈ ಕೃತಿಗಳನ್ನು ಓದಿ ಚರ್ಚಿಸುತ್ತಿದ್ದರಿಂದ ನಮ್ಮ ನಡುವೆ ಒಂದು ಸಾಹಿತ್ಯಕ ಆಸಕ್ತಿ ಹುಟ್ಟೋಕೆ ಕಾರಣವಾಯಿತು.

ನಂತರ ನನ್ನಲ್ಲಿದ್ದ ಸಾಹಿತ್ಯಕ ಆಸಕ್ತಿ ಬೇರೆಯೇ ಸ್ವರೂಪ ಪಡೆಯೋಕೆ ಕಾರಣರಾದವರು ನನ್ನ ಗೆಳತಿ ವಿಜಯಾ ದಬ್ಬೆ. ಅವರು ನಾನು ಒಂದೇ ಕಾಲೇಜಿನಲ್ಲಿ ಓದುತ್ತಿದ್ದವರು ಮುಂದೆ ಮೈಸೂರಿಗೆ ಎಂ.ಎ. ಮಾಡೋಕೆ ಅಂತ ಹೋದಾಗ ಅಲ್ಲಿ ಹಾಸ್ಟೆಲ್‌ನಲ್ಲಿ ನಾವು ಎರಡು ವರ್ಷಗಳ ಕಾಲ ರೂಮ್‌ಮೇಟ್ ಆಗಿದ್ದೆವು. ಮೈಸೂರಿಗೆ ಹೋಗುವುದಕ್ಕೆ ಮೊದಲೇ ವಿಜಯಾ ಪದ್ಯ ಬರೆದು ಪ್ರಸಿದ್ಧರಾಗಿದ್ದರು. ಮೈಸೂರಿಗೆ ಹೋದಮೇಲೆ ಅವರ ತರಗತಿಯವರು ಮತ್ತು ಅವರ ಸೀನಿಯರ್ಸ್ ಎಲ್ಲಾ ಸೇರಿ ಒಂದು ಸಾಹಿತ್ಯಿಕ ಗುಂಪು ಮಾಡಿಕೊಂಡು ಸಾಹಿತ್ಯ ಚರ್ಚೆ, ಬರವಣಿಗೆ ಎಲ್ಲಾ ಮಾಡುತ್ತಿದ್ದಾಗ ನಾನು ಆ ಗುಂಪಿನ ಜೊತೆಯೇ ಇರುತ್ತಿದ್ದೆ. ನಾನು ಸಂಸ್ಕೃತ ವಿದ್ಯಾರ್ಥಿಗಳ ಜೊತೆ ಇರುತ್ತಿದ್ದುದಕ್ಕಿಂತ ಹೆಚ್ಚಾಗಿ ಕನ್ನಡ ವಿದ್ಯಾರ್ಥಿಗಳ ಜೊತೆಯೇ ಇರುತ್ತಿದ್ದೆ. ಅದರಿಂದ ನನ್ನ ಯೋಚನೆಯ ದಿಕ್ಕು ಕೂಡ ಬೇರೆಯೇ ಆಗಿತ್ತು. ಮುಂದೆ ನಾನು ಶಿಕ್ಷಕಿಯಾಗಿ ಪಾಠ ಮಾಡುವಾಗ ಕೂಡ ಇದು ತುಂಬ ಸಹಾಯವಾಯಿತು.

**ಹೊಸತು :** ನೀವು ಸಂಸ್ಕೃತ ಶಿಕ್ಷಕಿಯಾಗಿ ಕೆಲಸ ಮಾಡುವಾಗ ನಿಮ್ಮ ಚಿಂತನೆಗಳನ್ನು ವಿದ್ಯಾರ್ಥಿಗಳಿಗೆ ತಲುಪಿಸುವಲ್ಲಿ ಸಫಲರಾದಿರಾ ?

**ಸುಮಿತ್ರಾ:** ನಾನು ೧೯೭೭ರಲ್ಲಿ ಹಾಸನದ ಎ.ವಿ.ಕೆ. ಮಹಿಳಾ ಕಾಲೇಜಿನಲ್ಲಿ ಸಂಸ್ಕೃತ ಶಿಕ್ಷಕಿಯಾಗಿ ಸೇರಿಕೊಂಡಾಗ, ಆ ಕಾಲೇಜಿಗೆ ಸುತ್ತಮುತ್ತಲ ಹಳ್ಳಿ, ಊರುಗಳಿಂದ ಹಲವಾರು ಹೆಣ್ಣುಮಕ್ಕಳು ಬರುತ್ತಿದ್ದರು. ಒಂದೊಂದು ತರಗತಿಯಲ್ಲೂ ೭೦–೮೦ ಹೆಣ್ಣುಮಕ್ಕಳು ಇರುತ್ತಿದ್ದರು. ಮೊದಲೇ ನಾನು ದೇವಾಲಯದ, ಪೌರೋಹಿತ್ಯದ ಮನೆಯ ವಾತಾವರಣದಿಂದ ಬಂದಿದ್ದರಿಂದ ನನ್ನ ಮನಸ್ಸಿನ ಆಳದಲ್ಲಿ ಪುರಾಣ, ಮಹಾಕಾವ್ಯಗಳ ಬಗೆಗಿನ ಜ್ಞಾನ ಸಂಗ್ರಹವಾಗಿದ್ದುದು

ಪ್ರಯೋಜನಕ್ಕೆ ಬಂತು. ನಾನು ಮೈಸೂರು ವಿಶ್ವವಿದ್ಯಾಲಯದಲ್ಲಿ ಓದಿ ಪಡೆದುಕೊಂಡಿದ್ದ ಹೊಸ ವಿಮರ್ಶಾತ್ಮಕ ತಿಳುವಳಿಕೆಯಿಂದಾಗಿ ಸಂಸ್ಕೃತ ಪಠ್ಯವನ್ನು ಪಾಠಮಾಡುವಾಗ ಸಾಮಾಜಿಕ ಮನೋಧರ್ಮದಿಂದ ಸಾಹಿತ್ಯವನ್ನು ನೋಡಬೇಕೆಂಬುದನ್ನು ಒತ್ತಿ ಹೇಳುತ್ತಿದ್ದೆ. ಇದು ಅವರಿಗೆ ಹೊಸ ವಿಚಾರವಾಗಿ ಕಂಡಿರಬೇಕು. ನನ್ನ ತರಗತಿಗಳನ್ನು ಇಷ್ಟಪಡುತ್ತಿದ್ದರು.

**ಹೊಸತು :** ನಿಮ್ಮ ಯೌವ್ವನದ ಅವಧಿಯಲ್ಲಿ ದೇಶದಲ್ಲಿ ಹಲವಾರು ಚಳುವಳಿಗಳು ಹುಟ್ಟಿಕೊಂಡ ಕಾಲವಾಗಿತ್ತು. ಅದಕ್ಕೆ ಹೇಗೆ ಸ್ಪಂದಿಸಿದಿರಿ ?

**ಸುಮಿತ್ರಾ:** ನೀವು ಹೇಳಿದ್ದು ನಿಜ. ಆಗ ಹಲವಾರು ಪ್ರಗತಿಪರ ಚಳುವಳಿಗಳು ಮೂಲಭೂತವಾಗಿ ಹುಟ್ಟಿದ್ದೇ ಹಾಸನದಲ್ಲಿ. ತುರ್ತುಪರಿಸ್ಥಿತಿ ತೆಗೆದಾದ ನಂತರ ಜೆ. ಪಿ. ಯವರು 'ಸಂಪೂರ್ಣ ಕ್ರಾಂತಿ'ಯ ಕರೆ ಕೊಟ್ಟಾಗ ಸಾಕಷ್ಟು ಸಂಖ್ಯೆಯಲ್ಲಿ ಲೋಹಿಯಾವಾದಿಗಳು ಹಾಸನದಲ್ಲಿ ಸ್ಪಂದಿಸಿದರು. ಆಗ ನಡೆದಂತಹ ಬೃಹತ್ ಸಭೆಯಲ್ಲಿ ನಂಜುಂಡಸ್ವಾಮಿ ಮತ್ತು ಪೂರ್ಣಚಂದ್ರ ತೇಜಸ್ವಿಯವರು ನೇತೃತ್ವ ವಹಿಸಿದ್ದರು. ಪಟ್ನಾಯಕ್ ಈ ಸಭೆಗೆ ಬಂದಿದ್ದರು. ಎಲ್ಲರಲ್ಲೂ ಒಂದು ರೀತಿಯ ಹೊಸ ಹುರುಪು ಹೊಮ್ಮಿತ್ತು. ಇದೇ ಮುಂದೆ ಬಲಿಷ್ಠ ರೈತ ಚಳುವಳಿಯಾಗಿ ಹೊರಹೊಮ್ಮಿತು. ಅದರ ಜೊತೆ ಜೊತೆಯಲ್ಲಿಯೇ ಹಾಸನದ ವಿವಿಧ ತಾಲ್ಲೂಕುಗಳಲ್ಲಿ ದಲಿತ ಸಂಘಟನೆಯು ನಡೆದು ದಲಿತ ಚಳುವಳಿಯು ಬೆಳೆಯುತ್ತಾ ಹೋಯಿತು. ಈ ಸಂದರ್ಭದಲ್ಲಿ ಕ್ರಿಯಾಶೀಲವಾಗಿದ್ದ ಲೋಹಿಯಾ ಅಧ್ಯಯನ ವೃತ್ತದಲ್ಲಿ ಚರ್ಚೆ, ಭಾಷಣ, ಅಧ್ಯಯನ – ಎಲ್ಲವೂ ನಡೆಯುತ್ತಿದ್ದವು. ಈ ಚರ್ಚೆಗಳಲ್ಲಿ ನಾನು ಭಾಗ ವಹಿಸುತ್ತಿದ್ದೆ. ಮಹಿಳೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರು ನಡೆಸುತ್ತಿದ್ದ ಎಲ್ಲ ಕಾರ್ಯಕ್ರಮಗಳಲ್ಲೂ ಸಕ್ರಿಯವಾಗಿ ಭಾಗವಹಿಸುತ್ತಿದ್ದೆ. ಇದರ ಜೊತೆಗೆ ಅವರು ಸರಳ ವಿವಾಹ ವೇದಿಕೆಯನ್ನು ಮಾಡಿಕೊಂಡು ಆಡಂಬರವಿಲ್ಲದ ಮಂತ್ರ ಮಾಂಗಲ್ಯದ ಮದುವೆ ಮಾಡುತ್ತಿದ್ದರೆ ಅದರಲ್ಲಿ ಮಂತ್ರ ಬೋಧಿಸುವಂತಹ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದೆ. ಆದರೆ ಈ ಸಂಘಟನೆಯು ಮಾಡುತ್ತಿದ್ದ ಜೈಲ್ ಭರೋ, ತಾಲ್ಲೂಕು ಕಚೇರಿಗೆ ಬೀಗಮುದ್ರೆ ಹಾಕುವಂತಹ ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ಭಾಗವಹಿಸಿಲ್ಲ. ಇದಕ್ಕೆ ನನಗೆ ನನ್ನದೇ ಆದ ಮಿತಿಯಿತ್ತು.

**ಹೊಸತು :** ನೀವು ಮಹಿಳಾ ಚಳುವಳಿಯೊಂದಿಗೆ ಗುರುತಿಸಿಕೊಂಡಿದ್ದು ಯಾವಾಗ ?

**ಸುಮಿತ್ರಾ:** ನಾನು ಹಾಸನದಲ್ಲಿ ಸಂಸ್ಕೃತ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದರೂ ನನ್ನ ಓದನ್ನು ನಿಲ್ಲಿಸಿರಲಿಲ್ಲ. ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಡಿಪ್ಲೊಮಾ, ಇಂಗ್ಲಿಷ್ ಎಂ.ಎ.ಯನ್ನು ಕರೆಸ್ಪಾಂಡೆನ್ಸ್ ಕೋರ್ಸಾಗಿ ಮಾಡುತ್ತಿದ್ದೆ. ನಂತರ ನನ್ನ ಪಿಎಚ್.ಡಿ.ಗೂ ರಿಜಿಸ್ಟರ್ ಮಾಡಿಸ್ಕೊಂಡೆ. ಈ ಸಂಬಂಧವಾಗಿ ಹಾಸನಕ್ಕೂ ಮೈಸೂರಿಗೂ ಸುತ್ತುತ್ತಿದ್ದೆ. ಇದೇ ಸಮಯದಲ್ಲಿ ಅಂದ್ರೆ ೧೯೭೮ರಲ್ಲಿ ವಿಜಯಾ ಮತ್ತು ಕೆಲವು ಗೆಳತಿಯರು ಸಮತಾ ವೇದಿಕೆ ಆರಂಭಿಸಿದರು. ಅವರ ಯಾವುದೇ ಚಟುವಟಿಕೆ ಮೆರವಣಿಗೆ, ಪ್ರತಿಭಟನೆ ಇರಬಹುದು ಅಥವಾ ಸಭೆ, ವಿಚಾರ ಸಂಕಿರಣ ಇರಬಹುದು, ಎಲ್ಲದರಲ್ಲೂ ಭಾಗವಹಿಸುತ್ತಿದ್ದೆ.

**ಹೊಸತು :** ಹಾಗಾದರೆ, ನಿಮ್ಮ ಬರವಣಿಗೆ ಆರಂಭವಾದದ್ದು ಯಾವಾಗ ?

**ಸುಮಿತ್ರಾ:** ಸಮತಾ ವೇದಿಕೆಯು 'ಸಮತಾ ವಾರ್ತಾ' ಅಂತ ಖಾಸಗಿ ಪ್ರಸಾರದ ಪತ್ರಿಕೆಯನ್ನು ತರುತ್ತಿತ್ತು. ಆ ಪತ್ರಿಕೆಗಾಗಿ ಮಹಿಳಾ ಕೇಂದ್ರಿತ ಲೇಖನಗಳನ್ನು ಬರೆಯುತ್ತಿದ್ದೆ. ಸಿಮೋನ್‌ದ ಬೋವಾಳ ವಿಚಾರಗಳನ್ನು ಲೇಖನ ಮಾಲಿಕೆಯಾಗಿ ಪ್ರಕಟಿಸಲಾಗಿತ್ತು. ನಾನು ಮತ್ತು ವಿಜಯಾ ಸೇರಿ ಮೈಥಿಲಿ ಶಿವರಾಮನ್‌ರವರ 'ವಿಮೋಚನೆಯೆಡೆಗೆ' ಎನ್ನುವ ಪುಸ್ತಕವನ್ನು ಹೊರತಂದಿದ್ದೆವು.

ಇದರ ಜೊತೆಗೆ ವಿಜಯಾ ದಬ್ಬೆಯವರು ಮೈಸೂರಿನಲ್ಲಿ 'ಪುಸ್ತಕ ಪುರವಣಿ' ಎನ್ನುವ ಪತ್ರಿಕೆಗೆ ಕೆಲವು ಕಾಲ ಸಂಪಾದಕಿಯಾಗಿದ್ದಾಗ ನನ್ನಿಂದ ಪುಸ್ತಕಗಳ ವಿಮರ್ಶೆ ಮಾಡಿಸುತ್ತಿದ್ದರು. ಆ ಸಂದರ್ಭದಲ್ಲಿ ನಾನು ಮಾಡಿದ ಮೊದಲ ಪುಸ್ತಕವೆಂದರೆ ವೈದೇಹಿಯವರ ಮೊದಲ ಕಥಾ ಸಂಕಲನ 'ಗಿಡ ಮರ ಬಳ್ಳಿ'. ಒಂದು ರೀತಿಯಲ್ಲಿ ವೈದೇಹಿಯವರ ಬರವಣಿಗೆಯೊಂದಿಗೆ ನನ್ನ ಬರವಣಿಗೆಯೂ ಆರಂಭವಾಯಿತೆನ್ನಬಹುದು.

**ಹೊಸತು :** ನಿಮ್ಮನ್ನು ಕನ್ನಡ ಸಾಹಿತ್ಯ ಲೋಕ ಪ್ರಮುಖವಾಗಿ ಗುರುತಿಸುವುದು ಸಾಹಿತ್ಯ ವಿಮರ್ಶಕಿಯಾಗಿ. ನಾಲ್ಕು ದಶಕಗಳ ಕಾಲದಿಂದಲೂ



ವಿಮರ್ಶಾ ಕಾರ್ಯದಲ್ಲಿ ತೊಡಗಿರುವ ನೀವು ಅಳವಡಿಸಿಕೊಂಡಿರುವ ಸಾಹಿತ್ಯ ವಿಮರ್ಶಾ ಮೀಮಾಂಸೆಯೇನು ?

**ಸುಮಿತ್ರಾ:** ನಾನು ಸಾಹಿತ್ಯವನ್ನು ನನ್ನ ಮಟ್ಟಿಗೆ ನಾನೇ ಓದಿ ಕೊಂಡೆನಾದರೂ ವಿಮರ್ಶೆ ಮಾಡುವ ಕ್ರಮವನ್ನು ನವ್ಯ ವಿಮರ್ಶೆಯಿಂದ ಕಲಿತೆ. ಆಗ ಪ್ರಕಟವಾಗುತ್ತಿದ್ದ 'ಸಾಕ್ಷಿ'ಯಂತಹ ಪತ್ರಿಕೆಗಳಲ್ಲಿ ಬರುತ್ತಿದ್ದ ಲೇಖನಗಳು, ಅನಂತಮೂರ್ತಿಯವರ 'ಪ್ರಜ್ಞೆ ಮತ್ತು ಪರಿಸರ'ದಲ್ಲಿನ ಲೇಖನಗಳು ನನಗೆ ವಿಮರ್ಶಾ ಕ್ರಮವನ್ನು ಕಲಿಸಿವೆ. ಅಲ್ಲದೆ ನನ್ನ ಸಂಸ್ಕೃತ ಎಂ.ಎ.ಯಲ್ಲಿ ಭಾರತೀಯ ಕಾವ್ಯಮೀಮಾಂಸೆಯನ್ನು ಓದಿಕೊಂಡಿದ್ದೆ. ಜೊತೆಗೆ ಇಂಗ್ಲಿಷ್ ಎಂ.ಎ.ಯಲ್ಲಿ ಓದಿಕೊಂಡ ವಿಮರ್ಶಾ ಸೂತ್ರಗಳು ನನಗೆ ವಿಮರ್ಶೆ, ವಿಶ್ಲೇಷಣೆಗೆ ನೆರವಾದವು.

**ಹೊಸತು :** ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯನ್ನು ಬೆಳೆಸಿದ ಆರಂಭಗಾರ್ತಿಯರಲ್ಲಿ ನೀವು ಪ್ರಮುಖರು. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಆರಂಭದ ದೆಸೆಗೆ ಹೋಲಿಸಿದಾಗ ಈಗ ಬದಲಾವಣೆ ಹೊಂದಿದೆಯಾ ?

**ಸುಮಿತ್ರಾ:** ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಆರಂಭದ ದಿನಗಳಲ್ಲಿ ಮಹಿಳಾ ಚಳುವಳಿಯ ಭಾಗವಾಗಿ ಬೆಳೆಯಿತು. ಅವತ್ತು ವರದಕ್ಷಿಣೆ ವಿರೋಧದ, ಅತ್ಯಾಚಾರ ವಿರೋಧದ ಅಥವಾ ಹಾಸ್ಟೆಲ್‌ಗಳಲ್ಲಿ ಹೆಣ್ಣುಮಕ್ಕಳ ಸಮಸ್ಯೆಗಳು ಇರಬಹುದು, ಇಂತಹ ಹತ್ತು ಹಲವು ಸಮಸ್ಯೆಗಳ ವಿರುದ್ಧ ಹೋರಾಡುತ್ತಿದ್ದ ಮಹಿಳೆಯರೇ ಚಳುವಳಿಯ ರೂಪದಲ್ಲಿ ಇತ್ತ ಸಾಹಿತ್ಯದಲ್ಲೂ, ವಿಮರ್ಶೆಯಲ್ಲೂ ಭಾಗವಹಿಸುತ್ತಿದ್ದರು. ಇದು ಬರವಣಿಗೆಯಲ್ಲೂ ಘೋಷಿತ ರೂಪದಲ್ಲಿ ವ್ಯಕ್ತವಾಗುತ್ತಿತ್ತು. ಅವತ್ತು ಮಹಿಳೆಯರ ಅನುಭವ ಅನನ್ಯವಾದದ್ದು, ಅದನ್ನು ಮಹಿಳೆಯರು ಮಾತ್ರ ಸಮರ್ಥವಾಗಿ ಹೇಳಬಲ್ಲರು ಎಂದು ನಂಬಿದ್ದ ಈ ಸಮೂಹ ಈ ಮಹಿಳೆಯರ ಅನುಭವದ ಬರವಣಿಗೆಗೆ ಪುರುಷ ವಿಮರ್ಶಕರು ಸರಿಯಾಗಿ ಸ್ಪಂದಿಸುತ್ತಿಲ್ಲ, ವಿಮರ್ಶಿಸುತ್ತಿಲ್ಲ ಅಂತ ತಿಳಿದು ಆ ವಿಮರ್ಶೆಯನ್ನು ಗಂಭೀರವಾಗಿ ಕೈಗೊಂಡರು. ಈ ಮೊದಲ ಹಂತದಲ್ಲಿ ವಿಮರ್ಶೆ ಮುಖ್ಯವಾಗಿ ಪ್ರಗತಿಪರತೆಯ ಚೌಕಟ್ಟಿನಲ್ಲಿ ಮೂಡಿಬಂದಿತು. ಅಂದರೆ, ತಾವು ಸಾಮಾಜಿಕ ಜೀವನದಲ್ಲಿ ಕಾಣಬಯಸಿದ ಹೋರಾಟಗಾರ್ತಿಯರ ಮಾದರಿಗಳನ್ನು ಸಾಹಿತ್ಯದಲ್ಲಿ ಹುಡುಕುವ ಪ್ರಯತ್ನ ನಡೆಸಿದರು. ಸುಮಾರು ಮೊದಲ ಒಂದು ದಶಕದವರೆಗಿನ ವಿಮರ್ಶೆಯಲ್ಲಿ ಇಂತಹ ಪ್ರಯತ್ನವನ್ನು ಕಾಣಬಹುದು.

ನಂತರದ ದಿನಗಳಲ್ಲಿ ಈ ಸ್ತ್ರೀವಾದಿಗಳ ಮೇಲೆ ಕೆಲವು ಆರೋಪಗಳು ಬಂದವು. ಇವರೆಲ್ಲಾ ಪಶ್ಚಿಮದ ಸ್ತ್ರೀವಾದಿ ತತ್ವದಿಂದ ಪ್ರೇರೇಪಿತರಾದವರು. ಈ ನೆಲದ ಸ್ತ್ರೀಸತ್ವವನ್ನು ಇವರ ಬರವಣಿಗೆ ಪ್ರತಿಫಲಿಸುತ್ತಿಲ್ಲ ಎನ್ನುವುದೇ ಆಗಿತ್ತು. ಆ ನಂತರ ಸ್ತ್ರೀಸತ್ವವನ್ನು ಕುರಿತಂತೆ, ಮಹಿಳಾ ಬರವಣಿಗೆಯ ವಿವಿಧ ಆಯಾಮ ಗಳನ್ನು ಕುರಿತಂತೆ ಚಿಂತಿಸಲಾಯಿತು. ಇದಾದ ನಂತರದ ಹಂತದಲ್ಲಿ ಒಟ್ಟಾರೆ ಸಾಹಿತ್ಯವನ್ನು ಸಮಾಜದ ಮುಖ್ಯ ಪ್ರತಿಫಲನವನ್ನಾಗಿ ನೋಡಲಾಯಿತು. ಕಳೆದ ಎರಡು ದಶಕಗಳಲ್ಲಿ ನಡೆದಂಥ ಸ್ತ್ರೀವಾದಿ ವಿಮರ್ಶೆಗಳು, ಮಹಿಳಾ ಸಾಹಿತ್ಯದ ಅಧ್ಯಯನಗಳು, ಮಹಿಳೆಯರ ರಚನೆಗಳು, ಪಿತೃಪ್ರಧಾನ ಸಂಸ್ಕೃತಿಯ ಒಳಗೇ ಉಪಸಾಂಸ್ಕೃತಿಕವಾಗಿ ಅರಳುತ್ತಾ ಬಂದವು. ಅಲ್ಲದೆ, ಅವುಗಳಲ್ಲಿ ತೆರೆದುಕೊಳ್ಳುವ ಸ್ತ್ರೀಲೋಕವು ಪುರುಷಪರ, ವಿರೋಧಿ, ಸಹಕಾರಿ, ಸ್ವಾಯತ್ತ ಮುಂತಾದ ಬಹುಸ್ತರೀಯ ಲಕ್ಷಣಗಳನ್ನು ಪ್ರಕಟಿಸುವುದನ್ನು ತೋರಿಸಿಕೊಟ್ಟಿದೆ.

ಆದರೆ ಮಹಿಳಾ ಸಾಹಿತ್ಯವನ್ನು ಮೂರು ನಿರ್ದಿಷ್ಟ ಹಂತಗಳಲ್ಲಿ ಗುರುತಿಸುವ

ಪ್ರಯತ್ನವೂ ನಡೆದಿದೆ. ನಮ್ಮ ಪಠ್ಯಗಳು ಇದನ್ನೇ ಒಪ್ಪಿತ ಮಾದರಿಯಾಗಿ ಸ್ವೀಕರಿಸಿವೆ. ಅದೇಂದರೆ ಇಲೇನ್ ಶೋವಾಲ್ಟರ್‌ರಂತಹವರು ಪ್ರತಿಪಾದಿಸಿದ ಸ್ತ್ರೀವಾದ ಮೂರು ಹಂತದ ಬೆಳವಣಿಗೆಯನ್ನು ಕುರಿತು ಹೇಳಲಾಗುತ್ತದೆ. ಪಿತೃಸಂಸ್ಕೃತಿಯೊಳಗೇ ಬದುಕುತ್ತಾ ಬರಹದಲ್ಲೂ ಅವುಗಳನ್ನೇ ಅಭಿವ್ಯಕ್ತಿಸುವ ಮೊದಲ ಹಂತದ ಮಹಿಳಾ ಬರವಣಿಗೆಗಳು. ನಂತರ ತಾವು ಬದುಕುತ್ತಿರುವ ವ್ಯವಸ್ಥೆಯ ವಿರುದ್ಧದ ಹೆಣ್ಣಿನ ಪ್ರತಿರೋಧದ ಬರಹ ಹಾಗೂ ಕೊನೆಯದಾಗಿ ಹೆಣ್ಣಿನ ಸತ್ವದ ಶೋಧ. ಆದರೆ ಶೋವಾಲ್ಟರ್ ಹೇಳಿದ ಈ ವರ್ಗೀಕರಣವನ್ನು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹಾಗೆಯೇ ಅನ್ವಯಿಸುವುದು ಸರಿಯಲ್ಲ, ಎಂದೆನಿಸುತ್ತದೆ. ೧೨ನೇ ಶತಮಾನದಲ್ಲಿಯೇ ಅಕ್ಕ ಮತ್ತು ಆ ಕಾಲದ ಶರಣೆಯರ ಸಾಮೂಹಿಕ ಬರಹಗಳು ಇದ್ದವು. ಅದಾದ ನಂತರ ಒಂದು ದೊಡ್ಡ ಖಾಲಿತನ ಉಂಟಾಗಿದೆ. ನಂತರ ಹೊನ್ನಮ್ಮನ ಕಾಲದವರೆಗೂ ಅಂತಹ ಮಹತ್ವದ ಬರವಣಿಗೆಯೇನೂ ಬರಲಿಲ್ಲ. ಇದನ್ನೇ ಅಕ್ಕ ಮತ್ತು ಹೊನ್ನಮ್ಮನ ಮಾದರಿಯೆಂದು ಹೇಳುತ್ತಾ ಬಂದರು. ಆದರೆ ಈ ಮಾತು ತುಂಬ ಬೀಸು ಹೇಳಿಕೆಯಾಗುತ್ತದೆ. ನನಗೇನೋ ಕನ್ನಡದಲ್ಲಿ ಮಹಿಳಾ ಸಾಹಿತ್ಯ ಮತ್ತು ವಿಮರ್ಶೆಗೆ ಬಹುಮುಖಿ ಸ್ವರೂಪ ಇದೆ ಅಂತ ಅನ್ನಿಸುತ್ತದೆ.

**ಹೊಸತು :** ಹಾಸನದಿಂದ ಬೆಂಗಳೂರಿಗೆ ಬಂದದ್ದು ನಿಮ್ಮ ಜೀವನದಲ್ಲಿ ಎಂತಹ ಬದಲಾವಣೆಯನ್ನು ತಂದಿತು ?

**ಸುಮಿತ್ರಾ:** ೧೯೮೦ರಲ್ಲಿ ಹಾಸನದಿಂದ ಬೆಂಗಳೂರಿಗೆ ಬಂದದ್ದು ನನ್ನ ಜೀವನದಲ್ಲಿ ಒಂದು ಮಹತ್ವದ ತಿರುವನ್ನು ನೀಡಿತು. ತಾಯಿಯ ಅನಾರೋಗ್ಯದ ಕಾರಣದಿಂದಾಗಿ ಅವರನ್ನು ನಾವೆಲ್ಲ ಸೋದರಿಯರು ನೋಡಿ ಕೊಳ್ಳುವುದಕ್ಕೆ ಸಾಧ್ಯವಾಗುತ್ತದೆಂದು ಬೆಂಗಳೂರಿಗೆ ಬರುವ ನಿರ್ಧಾರ ತೆಗೆದುಕೊಂಡೆ. ಆಗ ಬೆಂಗಳೂರಿನ ಆಚಾರ್ಯ ಪಾಠಶಾಲಾ ವಾಣಿಜ್ಯ ಕಾಲೇಜಿನಲ್ಲಿ ಸಂಸ್ಕೃತ ಶಿಕ್ಷಕಿಯ ಸ್ಥಾನ ತೆರವಾಗಿತ್ತು. ಹೀಗೆ ಬೆಂಗಳೂರಿಗೆ ಬರಬೇಕೆಂದು ಕೊಂಡಾಗಲೂ ನನಗೆ ಇಲ್ಲಿ ಏಕಾಕಿಯೆಂಬ ಭಾವನೆಯಿರಲಿಲ್ಲ. ನನಗೆ ಆ ವೇಳೆಗಾಗಲೇ ಅಚಲ ಮತ್ತು ಜಾಗೃತಿಯ ಮೂಲಕ ನೀವು ಮತ್ತು ನೇಮಿಚಂದ್ರ ಅವರು ಪರಿಚಯವಾಗಿದ್ದಿರಿ. ಹಾಗೆಯೇ ಲೇಖಕಿಯರ ಸಂಘದ ಮೂಲಕ ಎಚ್. ಎಸ್. ಪಾರ್ವತಿ, ಹೇಮಲತಾ ಮಹಿಷಿ ಮತ್ತು ಶಾಂತಾ ನಾಗರಾಜ್ ಅವರು ಪರಿಚಯ ವಾಗಿದ್ದರು. ಈ ಮುಂಚೆ ನಾನು ಹಾಸನದಲ್ಲಿ ಇದ್ದಾಗ ನಾನು ವಿಶೇಷವಾಗಿ ಲೇಖಕಿ ಅಂತ ಅನ್ನಿಸಿಕೊಂಡಿದ್ದು ಕಡಿಮೆಯೇ. ಅಲ್ಲಿ ಮಹಿಳಾ ಕಾವ್ಯವನ್ನು ಕುರಿತ ವಿಶ್ಲೇಷಣೆಯ ನನ್ನ ಮೊದಲ ಪುಸ್ತಕ 'ಸಾರ್ವತ್ರಿಕದೆಡೆಗೆ' ಬಿಡುಗಡೆಯಾಗಿತ್ತು. ಬೆಂಗಳೂರಿಗೆ ಬಂದ ಮೇಲೆ ನಾನು ಹೇಳಿದ ಮೇಲಿನ ಎರಡೂ ಸಂಘಟನೆಗಳು ನನ್ನನ್ನೂ ಸೇರಿದಂತೆ ಎಲ್ಲ ಮಹಿಳೆಯರ ಒಳಿತಿಗಾಗಿ ಹೋರಾಡುತ್ತಿದ್ದುದರಿಂದ ನಾನು ಇವುಗಳ ಭಾಗವಾಗಿ ಮಹಿಳಾ ಸಾಹಿತ್ಯದ ಮತ್ತು ಚಳುವಳಿಯ ಭಾಗವಾಗುವುದು ಸಾಧ್ಯವಾಯಿತು. ಇಲ್ಲೇ ನನ್ನನ್ನು ನಾನು ಲೇಖಕಿ ಅಂತ ಗುರುತಿಸಿಕೊಂಡೆ. ಹಾಗೆಯೇ ಜನರೂ ನನ್ನನ್ನು ಗುರುತಿಸಿದರು. ಆದರೆ ಹಾಸನದಲ್ಲಿ ಒಳ್ಳೆಯ ಶಿಕ್ಷಕಿ ಅಂತ ಅನಿಸ್ಕೊಂಡಿದ್ದು. ಬೆಂಗಳೂರಿನ ಈ ಕೋ–ಎಜುಕೇಷನ್ ಕಾಲೇಜಿನಲ್ಲಿ ನನ್ನ ಆ ಪ್ರತಿಭೆಗೆ ಅವಕಾಶವೇ ಇರಲಿಲ್ಲ.

**ಹೊಸತು :** ಲೇಖಕರು ನಂಬುವಂತಹ ಸಿದ್ಧಾಂತಗಳು ಅವರ ಸೃಜನಶೀಲತೆಗೆ ತೊಂದರೆಯಾಗುತ್ತದೆ, ಎನ್ನುವುದು ಕೆಲವರ ನಂಬಿಕೆಯಾಗಿದೆ. ಇದರ ಬಗ್ಗೆ ನಿಮಗೆ ಏನನ್ನಿಸುತ್ತದೆ ?

**ಸುಮಿತ್ರಾ:** ನನ್ನ ತಿಳುವಳಿಕೆಯಲ್ಲಿ ಜಗತ್ತಿನ ಅತ್ಯಂತ ಶ್ರೇಷ್ಠ ಸಾಹಿತ್ಯವನ್ನು ರಚಿಸಿದವರೆಲ್ಲಾ ಮನುಷ್ಯತ್ವದ ಆಳವಾದ ಸಿದ್ಧಾಂತಗಳಿಗೆ ಬದ್ಧರಾದವರೇ ಆಗಿರುತ್ತಾರೆ. ಆದ್ದರಿಂದ ಲೇಖಕರು ನಂಬುವ ತಾತ್ವಿಕವಾದ ಅಥವಾ ರಾಜಕೀಯ ಸಿದ್ಧಾಂತಗಳಿಂದ ಸಾಹಿತ್ಯ ಬಡವಾಗುತ್ತದೆ, ಅವರ ಸೃಜನಶೀಲತೆಗೆ ಅಡ್ಡಿಯಾಗುತ್ತದೆ, ಎಂದು ನಾನು ನಂಬುವುದಿಲ್ಲ. ಯಾರಿಗೆ ತೊಂದರೆಯಾಗುತ್ತದೆ, ಅಂತ ಅಂಜಿಕೆಯಿರುವವರು ನಿಜವಾದ ಮನುಷ್ಯತ್ವದ ಸಿದ್ಧಾಂತಗಳ ಬಗ್ಗೆ ಅನುಮಾನವನ್ನು ಇಟ್ಟುಕೊಂಡಿರುತ್ತಾರೆ ಮತ್ತು ಅವರು ಸಾಹಿತ್ಯದಿಂದ ಏನನ್ನು ನಿರೀಕ್ಷಿಸುತ್ತಾರೆ, ಎಂಬುದನ್ನು ಅವಲಂಬಿಸಿರುತ್ತದೆ.

**ಹೊಸತು :** ಇಂದು ಹಿಂದೆಂದಿಗಿಂತ ಸಾಹಿತ್ಯಕ ಬಹುಮಾನ, ಪ್ರಶಸ್ತಿಗಳ ಸಂಖ್ಯೆ ಹೆಚ್ಚಾಗಿದೆ. ಇಂತಹ ಬಹುಮಾನಗಳು ಬರಹಗಾರರ ಸಾಹಿತ್ಯ ಸೃಷ್ಟಿಗೆ ನೆರವಾಗುತ್ತವೆಯೇ ?

**ಸುಮಿತ್ರಾ:** ನನ್ನದೇ ವೈಯಕ್ತಿಕ ಅನುಭವ ವನ್ನು ತೆಗೆದುಕೊಳ್ಳುವುದಾದರೆ, ೩೫ ವರ್ಷಗಳ ಬರವಣಿಗೆಯ ನಂತರ ನನಗೆ ಹಲವಾರು ಪ್ರಶಸ್ತಿ, ಪುರಸ್ಕಾರಗಳು ಬಂದಿವೆ. ಇದು ಒಂದು ರೀತಿಯಲ್ಲಿ ನನ್ನ ಬರಹವನ್ನು ಗುರುತಿಸಿಕೊಟ್ಟ ಪುರಸ್ಕಾರ ಅಂತ ಅನ್ಕೊಂಡಿದೀನಿ. ಈ ಪ್ರಶಸ್ತಿ ಗಳಿಂದ ಉತ್ತೇಜನಗೊಂಡು ನಾನು ಬರಹದಲ್ಲಿ ತೊಡಗುವುದಾಗಲೀ, ಮುಂದುವರಿಸುವುದಾಗಲೀ ಮಾಡಿಲ್ಲ. ನಾನು ಸುಮಾರು ಪುಸ್ತಕಗಳನ್ನು ಬರೆದಾದ ಮೇಲೆ ಪ್ರಶಸ್ತಿಗಳು ಸಿಕ್ಕಿವೆ.

ಆದರೆ ಜಾಗತೀಕರಣದ ನಂತರ ಇವತ್ತಿನ ಪ್ರಚಾರ ಸಂಸ್ಕೃತಿಯ ಕಾಲದಲ್ಲಿ ಏನೇ ಬರೆದರೂ ಪ್ರಶಸ್ತಿ ಕೊಡುವ ಸಂಘ ಸಂಸ್ಥೆಗಳು ನಾಯಿ ಕೊಡೆಗಳಂತೆ ಹುಟ್ಟಿಕೊಂಡಿವೆ. ಹಿಂದೆ ಸೇವೆ ಅಂತ ಏನನ್ನು ಹೇಳುತ್ತಿದ್ದೆವೋ ಅದನ್ನು ಇವತ್ತು ಸಾಧನೆ ಅಂತ ಕರೆಯಲಾಗುತ್ತಿದೆ. ಇನ್ನೂ ಬೆಳೆಯಬೇಕಾದ ಎಳೆಯ ಪ್ರತಿಭೆಗಳಿಗೆ ಪ್ರಶಸ್ತಿ, ಮೊದಲನೇ ಕಥೆ, ಕವನಗಳಿಗೆ ಹಲವಾರು ಕಡೆಯಿಂದ ಬಹುಮಾನಗಳು ಸಿಕ್ಕುವುದರಿಂದ, ಅವರಿಗೆ ತಾವು ಏನೋ ಮಹತ್ತವಾದದ್ದನ್ನು ಸಾಧಿಸಿಬಿಟ್ಟಿದ್ದೀವಿ ಅನ್ನುವ ಭಾವನೆ ಬಂದು ಬರವಣಿಗೆಗೆ ತೊಡಕೇ ಆಗಬಹುದು. ಇಂದು ಬರೆದದ್ದಕ್ಕೆಲ್ಲಾ ಬಹುಮಾನ ದಕ್ಕುವ ಸನ್ನಿವೇಶ ಒದಗಿದೆ. ಆದ್ದರಿಂದ ಬರಹಕ್ಕೆ ಬಹುಮಾನ ಬರುವ ಬದಲು ಬಹುಮಾನಿತ ಬರಹಗಳು ಹೆಚ್ಚಾಗಿ ಸಾಂಸ್ಕೃತಿಕವಾಗಿ ಕಳಪೆಯ ಸೃಷ್ಟಿ ಹೆಚ್ಚಾಗುತ್ತಿದೆ.

ನೀವು ಕೆಲವು ಕವನಗಳನ್ನು ಬರೆದಿದ್ದೀರಿ ? ಕವನಸಂಕಲನವನ್ನು ತರುವ ಯೋಚನೆ ಇಲ್ಲವಾ?

**ಸುಮಿತ್ರಾ:** ನಾನು ಸುಮಾರು ಐವತ್ತಕ್ಕೂ ಹೆಚ್ಚು ಕವನಗಳನ್ನು ಬರೆದಿದ್ದೀನಿ. ಸಾಧ್ಯವಾದರೆ, ಒಂದು ಕವನಸಂಕಲನವನ್ನು ತರೋಣ ಅಂತ ಇದೀನಿ.

**ಹೊಸತು :** ಈಗ ಯಾವ ಬರವಣಿಗೆಯಲ್ಲಿ ತೊಡಗಿದ್ದೀರಿ ?

## ಮಾವನಿಗೆ, ಕೊನೆ ಪತ್ರ

ಮನೆಯೊಳಗೆ ನುಗ್ಗಿದ
ಕಾಮುಕರ ಹಿಂಡಿಗೆ
ಹೆದರಿಸಿದೆ, ಬೆದರಿಸಿದೆ
ಶಕ್ತಿ ಮೀರಿ ಹೋರಾಡಿದೆ:

ಅವರು ಬಗ್ಗದೆ
ನನ್ನನ್ನೇ ಬಗ್ಗು ಬಡಿದು
ಕಾದಿಟ್ಟ ಕನ್ಯಾತನಕ್ಕೆ, ಕನ್ನ ಇಟ್ಟು
ಒಬ್ಬರ ನಂತರ, ಮತ್ತೊಬ್ಬರಂತೆ
ಬಾಯಿಚಪ್ಪರಿಸಿಕೊಂಡು, ಹಿಗ್ಗಿ
ನನ್ನನ್ನು ಹಿಗ್ಗಾ ಮುಗ್ಗಾ ಮಾಡಿ
ಹೊರಟು ಹೋದರು,... ಮಾವ !

ಪೊಲೀಸ್ ನಾಯಿಗಳು ಬಂದು, ಆರ್ಭಟಿಸಿ
ಹಿಡಿಯಲು ಹೊರಟಾವ ಬಲು ರೋಷದಲಿ !

ಇಷ್ಟರಲ್ಲೇ, ಹಸೆಮಣಿ ಏರಿ
ನಿನ್ನ ಕೈಹಿಡಿದು, ಸಂಗಾತಿಯಾಗಬೇಕಿತ್ತು ;
ಕಂಡ ಕನಸು ಕರಕಲಾಯಿತು
ಚಂದದ ರೂಪ, ನನ್ನತನಕ್ಕೇ ಬೆಂಕಿ ಇಟ್ಟಿತು !
ಮಾವ ನೀನೇ ಹೇಳು, ನಾನೇನು ಮಾಡಲಿ
ಈ ಪವಿತ್ರ ನೆಲದ ಮಗಳು ನಾನು
ಅಳಿದುಳಿದ ಊಟವ
ನಿನಗೆ ಬಡಿಸಲು ಒಪ್ಪದು ನನ್ನ ಮನಸ್ಸು
ಈ ಜನ್ಮ ಸಾಕು, ದಯವಿಟ್ಟು ನನ್ನ ಕ್ಷಮಿಸು !!

**ಎಚ್. ಕೆ. ಕೊಟ್ರಪ್ಪ**
ಹರಿಹರ

**ಸುಮಿತ್ರಾ :** ನಾನು ನನ್ನ ಜೀವನದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಿದ್ದೇ ಹೆಚ್ಚು. ನನ್ನ ಮೂಲ ಕ್ಷೇತ್ರವಾದ ಸಂಸ್ಕೃತದಲ್ಲಿ ಏನೂ ಕೃಷಿ ಮಾಡಿಲ್ಲ. ಹೀಗಾಗಿ ನನ್ನ ಸ್ನೇಹಿತರಲ್ಲಿ ಕೆಲವರು ಇದರ ಬಗ್ಗೆ ಪ್ರಸ್ತಾಪ ಮಾಡುತ್ತಿದ್ದರು. ನನಗೂ ಸಂಸ್ಕೃತ ಶಾಸ್ತ್ರ ಗ್ರಂಥಗಳ ಬಗ್ಗೆ ಅಧ್ಯಯನ ಮಾಡುವ ಆಸೆಯಿತ್ತು. ಅದಕ್ಕೆ ಈಗ ಭರತನ 'ನಾಟ್ಯಶಾಸ್ತ್ರ'ವನ್ನು ಕುರಿತಂತೆ ಅಧ್ಯಯನ ನಡೆಸುತ್ತಿದ್ದೇನೆ. ಇದನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡಲು ಹೊರಟಿದ್ದೇನೆ. ಇದೊಂದು ನನ್ನ ಮಹತ್ವಾಕಾಂಕ್ಷಿ ಬರಹದ ಪ್ರಯತ್ನ. ಭಾರತದ ಬೇರಾವ ಪ್ರಾಂತ್ಯದಲ್ಲೂ ಇಂತಹ ಅಧ್ಯಯನ ನಡೆದಂತಿಲ್ಲ. ಬರಹ ಸದ್ಯದಲ್ಲಿಯೇ ಮುಗಿಯಲಿದೆ.



**ಹೊಸತು :** ಇಂದು ಜಾಗತೀಕರಣದ ಸೆಳೆತವೂ ಇದೆ. ಅದಕ್ಕೆ ಪ್ರತಿರೋಧದ ಪ್ರಯತ್ನಗಳೂ ನಮ್ಮ ನಡುವೆ ಇದೆ. ಈ ಪ್ರತಿರೋಧ ಗುಣಾತ್ಮಕ ವಿರೋಧವೂ ಆಗಬಹುದು, ಇಲ್ಲವೆ ಅವರ ಸಂಸ್ಕೃತಿಗೆ ಅಡ್ಡಬರುತ್ತದೆ, ಅನ್ನುವ ಕಾರಣಕ್ಕಾದರೂ ಇರಬಹುದು. ಒಟ್ಟಿನಲ್ಲಿ ಈ ಸಂದರ್ಭ ಹುಟ್ಟುಹಾಕಿರುವ ತಲ್ಲಣಗಳನ್ನು ಸಾಹಿತ್ಯದಲ್ಲಿ ತರುವ ಪ್ರಯತ್ನವನ್ನು ಯಾರಾದರೂ ಲೇಖಕಿಯರು ಮಾಡಿದ್ದಾರಾ ?

**ಸುಮಿತ್ರಾ :** ಎಂಭತ್ತರ ದಶಕದಲ್ಲಿ ಕಂಡುಬರುತ್ತಿದ್ದಂತೆ ಒಂದು ಸಮುದಾಯವಾಗಿ ಇಂತಹ ವಸ್ತುಗಳಿಗೆ ಸ್ಪಂದಿಸುತ್ತಿರುವವರು ಇಂದು ಕಡಿಮೆಯೇ. ಈ ವಿಷಯದಲ್ಲಿ ಇಂದು ನಡೆಯುತ್ತಿರುವ ಚಳುವಳಿಗಾರರ ಪ್ರತಿಭಟನೆಗಳೂ ಕೂಡ ಸಾಹಿತ್ಯದಲ್ಲಿ ಹರಳುಗಟ್ಟಿದ ಅನುಭವಗಳಾಗಿ ಕೆಲವು ಬಿಡಿ ಕಥೆ, ಕವಿತೆಗಳಲ್ಲಿ ಮೂಡಿ ಬಂದಿರಬಹುದು. ಆದರೆ ಮಹತ್ವದ ಕೃತಿಯ ರಚನೆ ಆಗಿಲ್ಲ. ಇಂದು 'ವಿಘಟನೆ' ಸಮಾಜದ ಮುಖ್ಯ ಅಂಶವಾಗಿ ಕಂಡುಬರುತ್ತಿದೆ. ಅದಿನ್ನೂ ಗಮನಿಸುವ ಹಂತದಲ್ಲೇ ಇದೆ. ಸಂಘಟಿಸುವ ಪ್ರಕ್ರಿಯೆಯಿನ್ನು ಮೂಡಿಬರಬೇಕಾಗಿದೆ. ಅಂತಹ ಪ್ರಯತ್ನಗಳು ಏನಾದರೂ ನಡೆದಿದ್ದರೂ ಬೆಂಗಳೂರಿನಿಂದ ಹೊರಗಿನ ಪ್ರಾಂತ್ಯಗಳಲ್ಲಿರುವವರು ಇಂತಹ ಪ್ರಯತ್ನಗಳಲ್ಲಿ ಸ್ವಲ್ಪವಾದರೂ ತೊಡಗಿಕೊಂಡಿದ್ದಾರೆ. ನನಗೆ ಈಗ ತಕ್ಷಣಕ್ಕೆ ಜ್ಞಾಪಕ ಬರುವುದು ಭಾಗೀರಥಿ ಹೆಗ್ಗಡೆಯವರು. ಅವರು ಯಾವುದೋ ಚಿಕ್ಕ ಊರಿನಲ್ಲಿದ್ದುಕೊಂಡೇ ನಕ್ಸಲರ ಬಗ್ಗೆ, ಪಾಕಿಸ್ತಾನಕ್ಕೆ ಹೋಗಿ ಬಂದವರನ್ನು ವಸ್ತುವಾಗಿಸಿ ಕತೆ ಬರೆದಿದ್ದಾರೆ. ಆದರೂ ಈ ದಿಕ್ಕಿನಲ್ಲಿ ಇನ್ನೂ ಅನುಭವಗಳನ್ನು ಶೋಧಿಸುವ ಕಾರ್ಯ ಆಗಬೇಕಿದೆ.

**ಹೊಸತು :** ನೀವು ಮಾರ್ಕ್ಸ್‌ವಾದಿಗಳೊಂದಿಗೆ ಮತ್ತು ಲೋಹಿಯಾ ವಾದಿಗಳೊಂದಿಗೆ ಕೆಲಸ ಮಾಡಿದ್ದೀರ. ಈ ಹಿನ್ನೆಲೆಯಲ್ಲಿ ನಿಮ್ಮ ಅನುಭವವನ್ನು ಕುರಿತು ಏನನ್ನಾದರೂ ಹೇಳಬಲ್ಲಿರಾ ?

**ಸುಮಿತ್ರಾ :** ನಾನು ಹಾಸನದಲ್ಲಿ ಲೋಹಿಯಾವಾದಿಗಳ ಜೊತೆಗೆ ಕೆಲಸ ಮಾಡುವುದಕ್ಕೂ ಮುಂಚೆ ಮೈಸೂರಿನ ವಿಶ್ವವಿದ್ಯಾಲಯದಲ್ಲಿ ಓದುತ್ತಿರುವಾಗಲೇ ಮಾರ್ಕ್ಸ್‌ವಾದಿ ಚಿಂತನೆಗೆ ತೆರೆದುಕೊಂಡವಳು. ಯಾವುದೇ ಒಬ್ಬ ವ್ಯಕ್ತಿ ಈ ದಿಕ್ಕಿನತ್ತ ನನ್ನನ್ನು ಪ್ರೇರೇಪಿಸಿದರು ಅಂತ ಹೇಳುವುದಕ್ಕಿಂತ ನಾನು ವಿಶ್ವವಿದ್ಯಾಲಯದಲ್ಲಿ ಓದಿಕೊಂಡ ಡಿ. ಡಿ. ಕೋಸಾಂಬಿ ಮತ್ತು ದೇವಿಪ್ರಸಾದ ಚಟ್ಟೋಪಾಧ್ಯಾಯರ ಬರಹಗಳು ನನ್ನ ಚಿಂತನೆಯನ್ನು ಗಟ್ಟಿಗೊಳಿಸಿದವು. ನಾನು ತರಗತಿಯಲ್ಲಿ ಪಾಠ ಮಾಡುವಾಗಲೂ ಪಠ್ಯವನ್ನು ಈ ಹಿನ್ನೆಲೆಯಿಂದಲೇ ಬೋಧಿಸುತ್ತಿದ್ದೆ. ಸಂಸ್ಕೃತಿಯಿಂದ ಪ್ರಜ್ಞೆ ಹುಟ್ಟುತ್ತದೆ ಎಂದು ನಾನು ನಂಬಿದ್ದರಿಂದಲೇ ಕಲೆಗಾಗಿ ಕಲೆ ಅನ್ನುವಂತಹ ವಾದಗಳು ನನಗೆ ಹುಸಿಯೆನಿಸಿದವು. ಹಾಸನದಲ್ಲಿದ್ದಾಗ ನಾನು ಲೋಹಿಯಾವಾದಿಗಳ ಸಂಪರ್ಕಕ್ಕೆ ಬಂದೆ. ಚಳುವಳಿಯೊಂದರ ಯಶಸ್ಸಿಗೆ ಮಹಿಳೆಯರ ಭಾಗವಹಿಸುವಿಕೆಯು ಅತ್ಯವಶ್ಯಕ, ಎಂದು ನಂಬಿದ್ದ ಈ ಗುಂಪಿನೊಂದಿಗೆ ಸೇರಿಕೊಂಡು ಕೆಲಸ ಮಾಡುವುದು ನನಗೆ ಮುಖ್ಯವೆನಿಸಿತು. ಆದರೆ ಸ್ವಲ್ಪ ಕಾಲದ ನಂತರ ಈ ಚಳುವಳಿಯಲ್ಲಿ ನನಗೆ ಭ್ರಮನಿರಸನವಾಯಿತು. ಏಕೆಂದರೆ ಗೋಪಾಲಗೌಡರ ಗರಡಿಯಲ್ಲಿ ಬೆಳೆದುಬಂದ ನವ್ಯರ ಸಾಹಿತ್ಯ ನಮಗೆ ವಿಮರ್ಶನ ಪ್ರಜ್ಞೆಯನ್ನು ಬೆಳೆಸಿತಾದರೂ ಅವರು ನಮಗೆ ಮಾದರಿಗಳಾಗದೇ ಹೋದರು. ಲೋಹಿಯಾ ಸಂಕಥನ ಬೇರೆ, ಆದರೆ ಅದನ್ನು ನಂಬಿದವರ ಬದುಕು ಬೇರೆ. ಈಗಲೂ ನನಗೆ ಲೋಹಿಯಾವಾದದ ಬಗ್ಗೆ ಗೌರವ ಇದ್ದರೂ ಲೋಹಿಯಾವಾದಿಗಳ ಬಗ್ಗೆ ಇಲ್ಲ. ಉದಾಹರಣೆಗೆ ರೈತ ಚಳುವಳಿ. ಅದರ ಕಾವು ಸ್ವಲ್ಪ ಕಾಲದ ನಂತರ ಆರಿದ ಮೇಲೆ ಅವರು ಅಧಿಕಾರ ಹಿಡಿದರೆ ಮಾತ್ರ ಪರಿವರ್ತನೆ ಸಾಧ್ಯ ಎಂದು ನಂಬಿದವರು ಅಧಿಕಾರ ಪಡೆದ ಮೇಲೆ ಜನರಿಗೆ ಏನು ಮಾಡಿದರು ? ಸ್ಥಳೀಯ ನೆಲೆಯಲ್ಲಿ ಅಧಿಕಾರ ಪಡೆಯಲು ಏನೆಲ್ಲ ನಡೆಸಿದರು ? ಅಂದು ಸರಳ ವಿವಾಹ ಮಾಡಿಕೊಂಡವರು, ಮಂತ್ರ ಮಾಂಗಲ್ಯದ ಮದುವೆ ಮಾಡಿಕೊಂಡವರು ಇಂದು ಫೈವ್ ಸ್ಟಾರ್, ಸೆವೆನ್ ಸ್ಟಾರ್ ಹೋಟೆಲ್‌ಗಳಲ್ಲಿ ತಮ್ಮ ಮಕ್ಕಳ ಅದ್ಧೂರಿಯ ವಿವಾಹ ಮಾಡುತ್ತಿದ್ದಾರೆ. ಈ ಉಬ್ಬರಿಸಿದ ಬಂಡವಾಳಶಾಹಿಯಲ್ಲಿ ಅವರು ಕಳೆದುಹೋಗಿದ್ದಾರೆ. ಅವರು ಮಾತನಾಡುವುದೇ ಒಂದು ಮಾಡುವುದೇ ಮತ್ತೊಂದು ಆದಾಗ ಯಾರನ್ನು ನಂಬುವುದು ? ಎಂದೂ ನನ್ನ ಆಯ್ಕೆ ಮಾರ್ಕ್ಸ್‌ವಾದವೇ ಆಗಿದೆ. ದೇವಿಪ್ರಸಾದ ಚಟ್ಟೋಪಾಧ್ಯಯರನ್ನು ಅತ್ಯಂತ ಹತ್ತಿರದಿಂದ ಬಲ್ಲವರಾದ ಜಿ. ಆರ್. ಮತ್ತು ಗಾಯತ್ರಿ ನನಗೂ ಪರಿಚಯವಾಗಿ, ಅವರ ಸ್ನೇಹದ ಮೂಲಕ ನನಗೆ ಅವರನ್ನು ಹತ್ತಿರದಿಂದ ಕಾಣುವ, ಮಾತನಾಡುವ ಮತ್ತು ಕಲ್ಕತ್ತೆಯ ಅವರ ಮನೆಯಲ್ಲಿ ಭೇಟಿಮಾಡುವ ಅವಕಾಶ ಸಿಕ್ಕಿತು. ಇದು ನನ್ನ ಬದುಕಿನ ಮಹತ್ವದ ಕ್ಷಣವೆಂದು ತಿಳಿಯುತ್ತೇನೆ.

**ಹೊಸತು :** ನಮ್ಮೊಡನೆ ಸಾಕಷ್ಟು ವಿಷಯವನ್ನು ಹಂಚಿಕೊಂಡಿದ್ದೀರ. ಅದಕ್ಕಾಗಿ ಪತ್ರಿಕೆಯ ಪರವಾಗಿ ವಂದನೆಗಳು.

**ಸುಮಿತ್ರಾ :** ಸಂತೋಷ, ನಮಸ್ಕಾರ.

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಕೆಂಪೇಗೌಡನಗರ
ಗವೀಪುರಂ, ಬೆಂಗಳೂರು – ೫೬೦ ೦೧೯



## ಡಾ॥ ಎಲ್. ಹನುಮಂತಯ್ಯನವರಿಗೆ ಅಭಿನಂದನೆಗಳು

ಸುಮಾರು ನಾಲ್ಕು ದಶಕಗಳಿಂದಲೂ ಕರ್ನಾಟಕದ ವಿವಿಧ ಜನಪರ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುವ ಖ್ಯಾತ ಬಂಡಾಯ ಸಾಹಿತಿ, ಕವಿ, ವಿಧಾನ ಪರಿಷತ್ತಿನ ಮಾಜಿ ಸದಸ್ಯರು ಮತ್ತು ನಮ್ಮ 'ಹೊಸತು' ತಿಂಗಳ ಪತ್ರಿಕೆಯ ಸಮಾಲೋಚಕ ಮಂಡಲಿಯ ಸದಸ್ಯರೂ ಆಗಿರುವ ಡಾ॥ ಎಲ್. ಹನುಮಂತಯ್ಯನವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ನೇಮಕಗೊಂಡಿರುವುದು ನಮಗೆಲ್ಲರಿಗೂ ಹೆಮ್ಮೆಯ ಸಂಗತಿ. ಶ್ರೀಯುತರಿಗೆ ನವಕರ್ನಾಟಕ ಪ್ರಕಾಶನ ಸಂಸ್ಥೆ ಮತ್ತು 'ಹೊಸತು' ತಿಂಗಳ ಪತ್ರಿಕೆ ಬಳಗದ ಹಾರ್ದಿಕ ಶುಭಾಶಯಗಳು.



ತಿಂಗಳ ಕಥೆ

# ಅಶೋಕನ ಗಿರ್ಮಿಟ್ಟಿ ಅಂಗಡಿ

ಕಿವಿ ಪಟಲ ಹರಿದು ಹೋಗೋ ಸಪ್ಪಳ. ಅದೇ ಶಿವಣ್ಣನ ಕಾರ್ ಹಾರ್ನ್. ನಾನೇನೋ ಬರೀತಾ ಇದ್ದ್ಯಾ. ಮತ್ತೆ ಹಾರ್ನ್. ಪೀ... 'ಇರೋ ಶಿವಾ ಬಂದ್ಯಾ.' ಊಹೂಂ ಅವಾ ಹುಟ್ಟಿದ್ದ ಏಳರಾಗ ಒಂಭತ್ತು ತಿಂಗಳು ತಡಿಯೂ ತಾಳ್ಮೆನೂ ಇರಲಿಲ್ಲ ಅವಗ. ಈಗ ನನ್ನ ತೆಲಿತಿಂತಾನ. ಮತ್ತೆ ಹಾರ್ನ್. ಥೂ... ಪೆನ್ನ ಬಿಸಾಕಿ ಹೊರಗ ಬಂದ್ಯಾ. ಶಿವಾ ನಗತಿದ್ದ, ಥೇಟ್ ಖಳನಾಯಕ ನಕ್ಕಾಂಗ. ನಿಂತಲ್ಲೇ ಕೇಳಿದ್ಯಾ 'ಸ್ವಲ್ಪ ತಾಳ್ಮೆ ಬ್ಯಾಡೇನೋ ಶಿವಾ.' ಅದೇ ಉಡಾಫೆ. 'ಬಾರೋ ಕಾಮ್ರೇಡ್ ಕಾಂತ್ರಿ ಒಂದೆರಡ ತಾಸ ಲೇಟ್ ಆದ್ರೂ ನಡೀತದ ಬಾ...' ಕಾರ್ ಗೇಟ್ ತೆಗದೇ ಇದ್ದಾ. ಕೂರೂದ ತಡಾ ರಾಕೆಟ್ ಸ್ಪೀಡ್. 'ಕಾಮ್ರೇಡ್ ಕಾಲಾ ಚೇಂಜ್ ಆಗೇದ. ಗ್ಲೋಬಾ ಅಂಗೈಯೊಳಗ ಅದ. ಮದಲ ಒಂದ ತಿಂಗಳ ಅನ್ನೂದು 'ಇವತ್ತ, ಒಂದಿನಾ ಆಗೇದ. ಹಂತಾದರಾಗ ನೀ ತಾಳ್ಮೆ ತಾಳ್ಮೆ ಅಂದ್ರ ಹೆಂಗ. ಹಿಂಗಾದ್ರ ಕ್ರಾಂತಿ ಯಾವಾಗ ಮಾಡಾವ. ಇಲ್ಲಿ ಬಾ ಮದಲ ಒಂದ ಗಿರ್ಮಿಟ್ ತಿಂದ ಬರೂನು.' ಇವಾ ಇವತ್ತ ಏನss ಓದಿ ಬಂದಿರಬೇಕು ಅನ್ನಿಸ್ತು. ಹಂಗೇನಾರ ಹೊಸಾ ವಿಷಯಾ ಓದಿದರ ಬಂದು ನನ್ನ ತೆಲಿ ತಿಂತಾನ. ಹಂತಾ ಕೊರಕ ಏನಲ್ಲ. ತನಗ ಏನ ಹೇಳಬೇಕು ಏನ ಮಾಡಬೇಕು ಅದನ್ನ ಬಿನ್‌ದಾಸ್ ಹೇಳಿ, ಮಾಡಿ ಹೊಕ್ಕಾನ. ಹಿಂದಮುಂದ ನೋಡಾವಲ್ಲ. ಇನ್ನೊಬ್ಬರ ಮನಸ... ಊಹೂಂ ಅದರ ಬಗ್ಗೆ ಚಿಂತೀನ ಇಲ್ಲ. ಯುನಿವರ್‌ಸಿಟಿಯೊಳಗ ಓದೂವಾಗ್ಲೂ ಹಿಂಗ ಇದ್ದ. ಪರೀಕ್ಷೆ ಸನೇ ಬಂದಗಳೇನ ಎಲ್ಲಾರೂ ಮನೀ, ಗಾರ್ಡನ್, ಸುತ್ತಲಗುಡ್ಡ ಹಿಂಗ ಸಿಕ್ಕ ಸಿಕ್ಕಲ್ಲಿ ಕುಂತು ಓದತಿದ್ರ, ಇವಾ ಬೆಕ್ಕ ಹಿಡಿಯವರಗತೆ ಕೈಯ್ಯಾಗ ಒಂದು ಕೋಲ ಹಿಡಕೊಂಡು ವರಾವರಾ ತಿರಗತಿದ್ದಾ. ನೂಲವರ ಮುಂದ ಹೇಲವರ ಕುಂತಂಗ ಪುಸ್ತಕದಾಗ ಮುಳಿಗಿದವರ ಮುಂದ ಕುಂತು 'ಹಿಂಗ್ಯಾಕ ಆಗಿರ್‍ಯೊಲೆ, ಹಡದ ಬಾಣತಿಗತೆ, ತೀರಾ ಪರೀಕ್ಷೆ ಅಂದ್ರ ಇಷ್ಟ ಹೆದರೂದೂ

**ಶ್ರೀಸುಮಿತ್ರಾಸುತ ಅಗಸಬಾಳ**

ಇವನೌನ.' ಅಂತ ಅವರನ್ನ ಡಿಸ್ಟರ್ಬ್ ಮಾಡಿದಾಗ ಇವಗ ಸಮಾಧಾನ. ತಾನರ ಫಸ್ಟ್ ಕ್ಲಾಸ್‌ನ್ಯಾಗ ಪಾಸ್ ಆಗಾವಾ. ಓದು ಮುಗಿದಿದ್ದ ತಡಾ ಸಣ್ಣ ವ್ಯಾಪಾರ ಚಾಲೂ ಮಾಡದಾ. ಇವತ್ತು ಬಿಜಿನೆಸ್ ಬೆಳದು ದೊಡ್ಡ ಕುಳಾ ಆಗ್ಯಾನ. ಮನಿಷ್ಯಾ ಆದ್ನಪಾ ಅಂತಾರಲ ಹಂಗ. ರೊಕ್ಕಾ ಗಳಿಸೀ ಗಳಿಸೀ ಬ್ಯಾಸರಾದರ ಧಾರವಾಡ ಪಶ್ಚಿಮ ದಿಕ್ಕಿಗಿ ನುಗ್ಗತಾನ. ಯಾಕಂದ್ರ ಅಲ್ಲಿ ಕೋರೀಬೇಕಂದ್ರ ನಾ ಸಿಗತೀನಿ. ತಿನ್ನಾಕ ಅಶೋಕನ ಅಂಗಡಿ ಗಿರ್ಮಿಟ್ ಸಿಗತದ.

ಅಮೀನಗಡ ಕರದಂಟ, ಬೆಳಗಾವಿ ಕುಂದಾ, ಸವಣೂರ ಖಾರಾ, ಧಾರವಾಡ ಪೇಡಾ ಇವಿಷ್ಟ ಜನರೀಗಿ ಗೊತ್ತ ಅದಾವು. ಆದರ ಧಾರವಾಡದ ಗಿರ್ಮಿಟ್ ಬಾಳಮಂದೀಗಿ ಗೊತ್ತಿಲ್ಲ. ಗಿರ್ಮಿಟ್ ಅಂದ್ರ ಗಿರ್ಮಿಟ್ ಅದು. ಹೇಳೂವಂಥಾದ್ದಲ್ಲ ತಿಂದನೋಡಬೇಕು ಅದರ ರುಚಿ. ಅದರಾಗೂ ನಾವು ಕಲಿಯೂ ಕಾಲದಾಗ ಶ್ರೀನಗರದ ಅಶೋಕನ ಅಂಗಡಿ ಗಿರ್ಮಿಟ್ ತಿಂದ ಎಂ.ಎ. ಡಿಗ್ರಿ ಮುಗಿಸಿದವರು. ಗುಂಡನ ಡಬರ್‍ಯಾಗ ನಾಕ ನಾಕ ಬಗಸಿ ಚುರಮರಿ ಹಾಕಿ ಅದೆಂಥಾದ ವಗ್ಗರಣಿ ನೀರಹಾಕಿ ಚಮಚೆ ತಗೊಂಡು ಗಿರ್ ಗಿರ್ ಗಿರ್ ಅಂತ ತಿರಗಿಸಿ, ಥಬ್ ಅಂತ ಹಳೀ ಸಂಯುಕ್ತ ಕರ್ನಾಟಕ ಪೇಪರ ತುಂಬಾ ಸುರಿವಿ,



ಮ್ಯಾಗ ಸೇವಾ, ನಾಕ ಕರದ ಮೆಣಸಿಕಾಯಿ, ಉಳ್ಳಾಗಡ್ಡಿ ಹಾಕಿ 'ಹ್ಞಾಂ ತೊಗೋರಿ' ಅಂತ ಕೊಡ್ತಿದ್ದಾ ಅಶೋಕ. ತೊಗೋಳುದೇನ ಬಂತು. ನಾವು ನಾಕಜನಾ ಇಲ್ಲಿ ಹತ್ತ ಜನಾ ಇಲ್ಲಿ ಹಸದ ದನಾ ಹೊಟ್ಟಮುಕ್ಕಾಕ ನುಗ್ಗಿದಂಗ ನುಗ್ಗತಿದ್ವಿ. ನೋಡ ನೋಡೂದರಾಗ ಗಿರ್ಮಿಟ್ ಖಾಲಿ. ಖಾಲಿ ಆಗೂದ್ರಾಗ ಮತ್ತ ಹೆಡಿಗ್ಯಾಗಿಂದ ಹೊಟ್ಟ ಸುರಿವಿದಂಗ ಗಿರ್ಮಿಟ್ ಸುರುವತಿದ್ದ ಅಶೋಕ. ಅಷ್ಟ ತಿಂದು ಎರಡ ಚರಗಿ ನೀರಕುಡದು ಈ ಶಿವ 'ಅ...ಬ್' ಅಂತ ಡೇಗಿ 'ಮಸ್ತ ಆತು ನೋಡು ಸಂಜೀ ಊಟಾನ ಬ್ಯಾಡ ಇವನೌನ' ಅಂತಿದ್ದಾ.

ಈ ಗಿರ್ಮಿಟ್ ಅಂಗಡಿಯೊಳಗಿನ ಒಂದು ಘಟನಾ ನನಗ ಇವತ್ತಿಗೂ ಮರಿಯಾಕ ಆಗವಲ್ದು. ಇಪ್ಪತ್ತು ವರ್ಷ ಆದ್ರೂ ಇನ್ನಾ ಕಣ್ಣಮುಂದ ಐತಿ. ಅವತ್ತೊಂದಿನ ಮಟಾ ಮಟಾ ಮಧ್ಯಾಹ್ನ ಬಿಸಲ. ಹೊಟ್ಟಿ ಹಸದಿತ್ತು ಯಥಾಪ್ರಕಾರ ಅಶೋಕನ ಗಿರ್ಮಿಟ್ ಅಂಗಡಿ ಕಡೆ ಹ್ವಾದ್ಯಾ. ತಟ್ಟೀನೆಳ್ಳಿಗಿ ಮುರಕ ಟೇಬಲ್ ಮುಂದ ಕುಂತು ಅಶೋಕ... ಅಂದ್ಯಾ. ಅವಾ ಹೂಂ ಅಂದವನ ಗಿರ್ ಗಿರ್ ಗಿರ್ಮಿಟ್ ತಿರುವಾಕ ಹತ್ತಿದಾ. ಹಂಗ ನಿಮ್ಮ ಉದ್ರಿ ಬಾಳ ಆತು ಅಂತ ಹೇಳೂದೂ ಮರೀಲಿಲ್ಲ. ನಾನ ಹೌದು ಅನ್ನೂದೂ ಮರೀಲಿಲ್ಲ. ಅಶೋಕ ಧಾರಾಳ ಮನಿಷ್ಯಾ ನನ್ನ ಉದ್ರಿ ಬಾಕಿ ಇದ್ರೂ 'ಬೂಂದಿ ಉಂಡಿ

ಇದ ಈಗ ಮಾಡಿದ್ದು ಕೊಡ್ಲೇನ್' ಅಂದಾ. ಬೂಂದಿ ತಿನ್ನೋ ಆಶೆ ಇದ್ರೂ ಉದ್ರಿ ತಿನ್ನೂದಲ್ಲಾ ಅಂತ ಬ್ಯಾಡ ಅಂದ್ಯಾ. ಇನ್ನೇನು ಗಿರ್ಮಿಟ್ ತಿನಬೇಕೂ ಅನ್ನೂದರಾಗ ಆ ಕಡೆಯಿಂದ ಒಂದು ಆಕೃತಿ ಬಂತು. ಮೂವತ್ತು ಮೂವತ್ತೈದು ವಯಸ್ಸಿರಬಹುದು. ಅಲ್ಲೇ ಹಿಂದ ಇಟ್ಟಂಗಿ ಭಟಿಯೊಳಗ ಕೆಲಸಾ ಮಾಡಾವಂತ ನೋಡಿದ ಕೂಡ್ಲೆ ಅನಿಸ್ತು. ತೆಲಿ ಕೂದಲಾ ಗಡ್ಡಾ ಕೆಂಧೂಳ ಮುಣಗಿದ್ದು. ಹಂಥಾ ಕರೀ ಮೈಸದೇಕ ಕೆಂಪಗಾಗಿತ್ತು. ತೆಳಗ ಒಂದು ಟಾವೆಲ್ ಸುತ್ತಿದ್ದಾ. ಅದೂ ಧೂಳ ಮುಣಿಗಿ ಕೆಂಪ ಜೇಂಡಾ ಆದಂಗ ಆಗಿತ್ತು. ಒಳೆ ಕಟ್ಟುಮಸ್ತ ದೇಹ ಪೈಲ್ವಾನ್ ಇದ್ದಂಗ ಇದ್ದ. ಕೈಯ್ಯಲ್ಲಾ ಕೆಸರ ಮುಳಗಿತ್ತು. ಕಣ್ಣ ಉರಿ ಉರಿ ಕೆಂಡದಂಗ ಇದ್ದು. ಬಂದಾವನ ನನ್ನ ಕಡೆನ ನುಗ್ಗಿದ. ನನ್ನೊಮ್ಮಿ ನನ್ನ ಮುಂದಿನ ಗಿರ್ಮಿಟ್ ಒಮ್ಮಿ ದುರುಗುಟ್ಟಿ ನೋಡಿದ. ನನಗ ಒಂಥರಾ ಆತು. ಇನ್ನಾ ಹಂತೇಕ ಬಂದಾವನ ಕುಡ್ಯಾಕಂತ ನನ್ನ ಮುಂದಿರೋ ನೀರಿನ ಚರಿಗಿ ಸರಕ್ಕನ ತಗೊಂಡು ಹ್ವಾದಾ. ಸ್ವಲ್ಪರ ನಯಾ, ವಿನಯಾ ಊಹೂಂ. ಒಂಥರಾ ದಾದಾಗಿರಿ ಮಾಡಿದಂಗ ಮಾಡಿದ. ಅಲ್ಲೇ ಮಗ್ಗಲದಾಗ ಎರಡೂ ಅಂಗೈ ತೊಳಕೊಂಡು ಮಾರಿಗೀಟ್ ನೀರ ಹಾಕೊಂಡು ದಬ್ ಅಂತ ಖಾಲಿ ಚರಿಗಿ ನನ್ನ ಮುಂದ ಇಕ್ಕರಿಸಿದ. ಮಾರಿ, ಗಡ್ಡ ಮೀಸಿಗಿ ಹತ್ತಿದ ನೀರ ಅಂಗೈಲೆ ಸವರಿ ಜಾಡಿಸಿದ. ಮಗ್ಗಲದಾಗ ಕುಂತ ನನಗ ನೀರ ಸಿಡಿದಿದ್ದು ನೋಡೀನೂ ನೋಡದಂಗ ನಿಂತ. ನನಗ ಸಿಟ್ಟ ತಡೀಲಿಲ್ಲ, ಏನರ ಅನಬೇಕು ಅನ್ನೂದರಾಗ 'ಅಸೋಕಾ ಈ ಬೂಂದಿ ಉಂಡಿ ಹೆಂಗ' ಅವನ ದನಿ ಹೊರಗಬಂತು. ಬಿರಸ ದನಿ ಒಳೆ ಹುಲಿ ಘರ್ಜನೆ ಇದ್ದಂಗ ಇತ್ತು. ನಾ ಸುಮ್ಮನ ಕುಂತ್ಯಾ. 'ಎರಡು ರೂಪಾಯಿಗಿ ಒಂದು, ಉದ್ರೀಗಿದ್ರೀ ಇಲ್ಲ' ಅಂತ ಅಶೋಕ ತನ್ನ ಕೆಲಸಾ ಮುಂದುವರಿಸಿದ. ಈ ಪೈಲ್ವಾನ ಆ ಕೆಂಪ ಟಾವೆಲ್ ಎತ್ತಿ ಅಂಡರ್‌ವೇರ್ ಕಿಸೇದಾಗಿಂದ ಒಂದೀಸ್ ಚಿಲ್ರೆ ತಗದಾ, ಮತ್ತ ನನ್ನ ಕಡೆ ದುರುಗುಟ್ಟಿ ನೋಡಿ 'ಇವೆಟ್ಟ ಅದಾವು ನೋಡ್ರಿ' ಅಂತ ಚಿಲ್ರಾ ನನ್ನ ಮುಂದ ಟೇಬಲ್ ಮ್ಯಾಲ್ ಇಟ್ಟಾ. ಅದೊಂಥರಾ ಆದೇಶ ಇದ್ದಂಗ ಇತ್ತು. ನಾನು ವಿನಮ್ರ ಸೇವಕನ ಥರಾ ಐದು ಪೈಸೆ, ಹತ್ತು ಪೈಸೆ, ನಾಕಾಣೆ ಎಲ್ಲಾ ಬ್ಯಾರೆ ಬ್ಯಾರೆ ಮಾಡಿ ಎಣಿಸಿ 'ಸವಾ ರೂಪಾಯಿ ಆದಾವು' ಅಂತ ಹೇಳಿ ಅಲ್ಲೇ ಟೇಬಲ್ ಮ್ಯಾಲಿಟ್ಯಾ. ಅವಾ ಬೂಂದಿ ಉಂಡಿಕಡೆ ಮತ್ತೊಮ್ಮಿ ನೋಡಕೊಂತ ನಿಂತಾ. ಅಶೋಕ ಕೇಳಿದ 'ಹೂಂ ಏನ ಕೊಡ್ಲಿ', ಇವಾ 'ಗಿರ್ಮಿಟ್ ಹೆಂಗ' ಅಂದಾ. 'ಒಂದೂವರಿ, ದೌಡ ಹೇಳ ಏನ್ ಕೊಡ್ಲಿ' ಅಶೋಕ ಇಷ್ಟನ್ನೂದರಾಗ 'ಒಂದ ಹಾಪ್ ಚಾ ಕೊಡು' ಅಂತ ಹೇಳಿ ನನ್ನ ಕಡೆ ತಿರಿಗಿ 'ಅದರಾಗಿನು ಎಂಟಣೆ ತಗದಕೊಡ್ರಿ' ಗುಡಿಗಿದ. ಅದಕ ಗುಡಗ ಅನಬೇಕು ಹಂಗಿತ್ತು ಅವನ ಧ್ವನಿ.

ಹಾಪ್ ಚಾ ಕುಡದು, ಉಳದ ಚಿಲ್ಲರ ಮತ್ತ ಆ ಕೆಂಪ ಜೇಂಡಾದ ಹಿಂದ ಹಾಕಿ ಧೂಳ ತುಂಬಿದ ಪೊದಿ ಮೀಸಿ ಗಡ್ಡಾ ಒರಸಗೊಂತ ಹೊಂಟ. ಇನ್ನೇನು ಹೊರಡೂ ಮುಂದ ಮತ್ತ ನನ್ನ ಕಡೆ ನಿಂತು ಒಮ್ಮಿ ದುರುಗುಟ್ಟಿ ನೋಡಿದ. ಬಹುಶಃ ಅವಾ ಒಂದು ಸ್ಮೈಲ್ ಕೊಟ್ಟಿರಬೇಕು. ಅದು ಅವನ ಪೊದಿ ಮೀಸಿಯೊಳಗ ನನಗ ಕಂಡಿರಾಕಿಲ್ಲ. ಅಥವಾ ಅವನ ಮನಸಿನ್ಯಾಗ ಏನೋ ಸಿಟ್ಟ ಇರಬೇಕು. ಹಿಂಗಾಗಿ ಅವಾ ನಕ್ಕರೂ ಅದು ಸಿಟ್ಟಿನ್ಯಾಂಗ ಕಾಣ್ತಿರಬೇಕು. ಹೋಗಲಿ ಅವಾ ಬಂದಾಗಿಂದ ನನ್ನ ಕಡೆ ದುರುಗುಟ್ಟಿ ನೋಡಿದ್ದ ಜಾಸ್ತಿ. ಅವನ್ನ ಕರದು ಬಾ ಗಿರ್‌ಮಿಟ್ ತಿನ್ನೂನು ಅನಬೇಕಂತ ಬಾಳ ಅನಿಸ್ತು. ಆದರ ಅವನ ಉರಿ ಉರಿ ಮುಖಾ ಕೆಂಡದಂಥಾ ಕಣ್ಣ ನೋಡಿ ಹೆದರಕಿ ಬಂತು. ಆದರೂ ಅವನ ಬಗ್ಗೆ ಪಾಪ ಅನಸ್ತಿತ್ತು. ಅವನ ಕೆಂಡದಂಥ ಕಣ್ಣ ಮಾತ್ರ ಇನ್ನಾ ನೆನಪದಾವು ನನಗ.

ಚುಯ್... ಶಿವಾ ಬ್ರೆಕ್ ಹಾಕಿದ ಸಪ್ಪಳ ನಾಕ ಮೈಲಿ ಕೇಳಂಗಿತ್ತು. ನೆನಪಿನ್ಯಾಗಿಂದ ಹೊರಗ ಬಂದ್ಯಾ. 'ಏ ಶಿವಾ ಯಾರ್ನರ ಕೊಂದಿ' ಆತಂಕದಿಂದ ಹೇಳಿದ್ಯಾ. 'ಸಾಯಿಲೇಳ ಇವನೌನ ತುಂಬಿ ಬಂದವರು ಹೋಗತಾರಾ' ಮತ್ತದೇ ಉಡಾಫೆ. ನಮ್ಮ ಕಾರ ನಿಂತಿದ್ದ ತಡ ಅಶೋಕ ಜಿಗದ ಬಂದ. ಕರೀ ಬಟ್ಟಿ ಹಾಕಿ ಅಯ್ಯಪ್ಪ ಆಗಿದ್ದ ಅಶೋಕ. 'ಸಾಮಿ ಬಿಸಿ ಬಿಸಿ ಭಜಿ ಅದಾವು ಗಿರ್ಮಿಟ್ ಜೋಡಿ ಕೊಡ್ತೀನಿ' ಅಂದ. 'ಏನೋ ಅಶೋಕ ನೀನೂ ಅಯ್ಯಪ್ಪ ಆದ್ಯಾ, ನೀವೆಲ್ಲಾ ಹಿಂಗಾದ್ರ ಹೆಂಗೋ ನಮ್ಮ ದ್ಯಾಮವ್ವ, ದುರಗವ್ವನ ಗತಿ ಹೆಂಗ' ಶಿವಾ ಚುಡಾಯಿಸಿದ. ಅಶೋಕ ಫ್ಹೀ... ಫ್ಹೀ... ಅಂತ ಹಲ್ಲ ತಗದು 'ಪೆಪ್ಸಿ ಸಾಮಿ, ಕೋಲಾಸಾಮಿ ಮದಲ ಏನರ ತೊಗೋರೆಲಾ ಸಾಮಿ' ಅಂದ. 'ಏ ಸಾಮಿ ಮದಲ ತಣ್ಣನ ಗಡಿಗ್ಯಾಗಿನ ನೀರ ಕೊಡು. ದಿನ್ನಾ ಪೆಪ್ಸಿ ಸಾಮಿ, ಕೋಲಾ ಸಾಮಿ, ವಿಸ್ಕಿ ಸಾಮಿಗೋಳ್ನ ಕುಡದ ಕುಡದ ಸಾಕಾಗೇದ.' ಶಿವಾ ದಬಾಯಿಸಿದ್ದ ತಡ ಅಶೋಕ ಓಡಿದ. 'ಮದಲ ಒಡಕ ತಂಬಿಗ್ಯಾಗ ಕುಡಿ ನೀರ ಕೊಡ್ತಿದ್ದ ನಮ್ಮ ಗಿರ್ಮಿಟ್ ಅಶೋಕ ಈಗ ನೋಡು ಪೆಪ್ಸಿ, ಕೋಲಾ ಅಂತಾನ' ಶಿವಾ ಹೇಳಿದ ಮಾತು ಖರೇ ಇತ್ತು. ಇಪ್ಪತ್ತು ವರ್ಷದ ಹಿಂದ ಇದೇ ಧಾರವಾಡ ಹಳಿಯಾಳ ರಸ್ತಾ ಮ್ಯಾಲ ದಂಡಿಗಿ ಒಂದು ಸಣ್ಣ ತಟ್ಟಿ ಕಟಗೊಂಡು ಮುರಕ ಟೇಬಲ್ ಇಟಗೊಂಡಿದ್ದ ಅಶೋಕ ಇವತ್ತ ಅದ ಜಾಗಾದಾಗ ಮೂವತ್ತು ನಲವತ್ತರಾಗ ಒಂದು ಕಟ್ಟಡಾ ಕಟ್ಟಿಸ್ಯಾನ. ಟೇಬಲ್, ಕುರ್ಚಿ, ಫ್ರಿಜ್, ಕೊಳ್ಳಾಗ ಒಂದು ಬಂಗಾರ ಚೈನ ಎಲ್ಲಾ. ನಮ್ಮ ಶಿವಾ ಅರವಿನು ಗಿರ್ಮಿಟ್ ತಿಂದ ಅಬ್ ಅನ್ನೂ ಸ್ಥಿತಿಯೊಳಗ ಇದ್ದಾವ ಇವತ್ತ ಕಾರ, ಬಂಗ್ಲೆ, ಲಕ್ಷಾಧಿಪತಿ, ಅವತ್ತಿನ ಬಡತನದ ಮ್ಯಾಲ ಇವತ್ತ ಸೇಡ ತೀರಸಗೊಳ್ಳಾಕತ್ಯಾನ.




ಗಿರ್ಮಿಟ್ ಬರೂದ ತಡಾ, ಶಿವಾ ಗಿರ್ಮಿಟ್ಟು ನನ್ನ ತೆಲಿ ಎರಡೂ ಕೂಡೇ ತಿನ್ನಾಕತ್ತಿದ. ಅದೇ... ಕಂಪ್ಯೂಟರ್ ಅವನ ಬಿಜಿನೆಸ್‌ನೊಳಗ ಎಷ್ಟು ಉಪಯೋಗ, ಇ-ಮೇಲ್ ಮಹತ್ವ, ಇಂಟರ್‌ನೆಟ್ ಅದ್ಭುತ. ಇಂಪೋರ್ಟ್-ಎಕ್ಸ್‌ಪೋರ್ಟ್ ಹಿಂಗ ಭಾರತ, ಜಗತ್ತ ಎಷ್ಟ ಮುಂದ ಹೋಗ್ಯಾವು, ಸೋಸಿಯಲ್ ಟ್ರಾನ್ಸೇಶನ್ ಇತ್ಯಾದಿ ಇತ್ಯಾದಿ ದಡಾ ಬಡಾ ಒದರತಿದ್ದ. ನಾ ಗಿರ್ಮಿಟ್ ತಿನ್ನಾಗ ಒಂದಕ್ಷಣ ನನ್ನ ಕೈ ಗಕ್ಕನ ನಿಂತಬಿಟ್ಟು, ನನ್ನ ಕಣ್ಣ ತೀಕ್ಷ್ಣ ಆದು. ನಾವು ಕುಂತ ಕಾರಿನ ಮುಂದ ಅವಾ ಹೋಟೆಲ್ ಒಳಗ ಹ್ವಾದಂಗ ಆತು. ನನ್ನ ಮೈಮನ ಎಲ್ಲಾ ಜಾಗೃತ ಆದು. ಅದ ಆ ನಮ್ಮ ಇಟ್ಟಂಗಿ ಭಟಿ ಪೈಲ್ವಾನ. ಖಂಡಿತಾ ಅವನ. ಅದ ಬರೀಮೈ. ಅದ ಕೆಂಪ ಜೇಂಡಾ. ಕೂದಲ ಬೆಳ್ಳಗ ಆಗಿರಬಹುದು. ಆದರ ಅದ ಕೆಂಪ ಇಟ್ಟಂಗಿ ಧೂಳ ಮುಣಿಗಿ ಕರಿಬಿಳಿ ಗೊತ್ತಾಗೂದಿಲ್ಲ. ಮದಲಿಗಿಂತ ಒಂಜರಾ ಇಳದಾನ. ಒಳಗ ಹ್ವಾದಾವನ ನೀರಿನ ಚರಿಗಿ ಹಿಡದ ಹೊರಗ ಬಂದು ಗೊಳಾ ಗೊಳಾ ನೀರ ಮುಕ್ಕಳಿಸಿ ಪುರ್ ಅಂತ ಉಗಳಿದ. ಅವಾ ಉಗುಳಿದ ನೀರು ನೆಲಕಬಿದ್ದು ನಮ್ಮ ಕಾರಿಗೂ ಸಿಡದು. 'ಏ ಯಜಮಾನ ನೋಡಿ ಉಗುಳು ಕಾಣೂದಿಲ್ಲ' ಅಂತ ಶಿವಾ ಜಬರಿಸಿದ. ಅವಾ ಮಕಾ ಎತ್ತಿ ಶಿವನ್ನ, ನನ್ನ, ಕಾರನ್ನ ದುರುಗುಟ್ಟಿ ನೋಡಿ ಕ್ಯಾರೆ ಅನ್ನಲಾರ್ದ ಒಳಗ ಹ್ವಾದಾ. ಅಶೋಕ ಯಾಲಕ್ಕಿ ಹಾಕಿ ಕುದಿಸಿದ ಕೇಟಿ ತಂದು ನಮಗ ಕೊಟ್ಟ. ಕೇಟಿ ಕುಡೀವಾಗ ಶಿವಾ ಮತ್ತ ಗ್ಲೋಬಲೈಜೇಶನ್ ಬಗ್ಗೆ ಕೊರ್‍ಯಾಕತ್ತಿದಾ. ನನ್ನ ಕಣ್ಣ ಮಾತ್ರ ಆ ನಮ್ಮ ಪೈಲ್ವಾನನ ಮ್ಯಾಲೇ ಇದ್ದು. ಇಪ್ಪತ್ತು ವರ್ಷದ ನಂತರ ಇವತ್ತ ಅವಾ ನನ್ನ ಕಣ್ಣಿಗಿ ಬಿದ್ದದ್ದು. ಒಂದು ಹಾಪ್ ಚಾ ಕುಡದು, ಜೇಂಡಾ ಎತ್ತಿ ಚಿಲ್ರೆ ಕೊಟ್ಟು, ಗುದ್ದಲಿ ಹೆಗಲಿಗೇರಿಸಿ ನಡದಾ. ಆದರ ಹೋಗಾಗ ಮತ್ತೊಮ್ಮೆ ನಮ್ಮ ಕಡೆ ದುರುಗುಟ್ಟಿ ನೋಡೂದ ಮರೀಲಿಲ್ಲ.

ಶಿವಾ ಕಾರ್ ಸ್ಟಾರ್ಟ ಮಾಡದ. ಯಾಕೋ ದೌಡ ಚಾಲೂ ಆಗಲಿಲ್ಲ. 'ಥೂ ಇದನ್ನ ತಗೀತೀನಿ. ಮೊನ್ನೆ ಅಮೆರಿಕಾದಿಂದ ಬೆಸ್ಟ್ ಮಾಡಲ್ ಹೊಸಾ ಕಾರ ಬಂದದ. ಅದನ್ನ ತೊಗೂತೀನಿ' ಅಂದ ಶಿವಾ ಇನ್ನೇನು ಕಾರ್ ಸ್ಪೀಡ್ ಮಾಡಬೇಕು. ಅದೇ ನಮ್ಮ ಪೈಲವಾನ ಗುದ್ದಲಿ ಹೆಗಲ ಮ್ಯಾಲಿಟಗೊಂಡು ನಟ್ಟ ನಡರೋಡಿನ್ಯಾಗ ನಡದಿದ್ದ. ಶಿವಾ ಹಾರ್ನ - ಹೊಡದದ್ದು ಕೇಳಿ ದಾರಿಬಿಟ್ಟು ಹಿಂದಕ ನೋಡಿದಾ. ಅದೇ ಬೆಂಕಿ ಚೆಂಡಿನ ನೋಟ. ಶಿವುನ ಕಾರ ಎಷ್ಟ ಸ್ಪೀಡ್‌ಲೇ ಮುಂದ ಹೊಂಟಿತ್ತೋ, ನನ್ನ ಮನಸ್ಸ ಅಷ್ಟ ಸ್ಪೀಡಲೆ ಹಿಂದ ಹೊಂಟಿತ್ತು. ಅದ ನಮ್ಮ ಪೈಲ್ವಾನನ ಕಡೆ.

ಶ್ರೀಸುಮಿತ್ರಾಸುತ ಅಗಸಬಾಳ
ನಂ. ೧೪, ಪೈಪ್‌ಲೇನ್ ರಸ್ತೆ, ವಯ್ಯಾಲಿಕಾವಲ್, ಬೆಂಗಳೂರು - ೫೬೦ ೦೦೩

ಅನ್ಯಾಯವನ್ನು ಸಹಿಸಲಾರದೆ ಅದನ್ನು ಪ್ರತಿಭಟಿಸುವ ಮನೋಧರ್ಮವನ್ನು ಮೈಗೂಡಿಸಿಕೊಂಡಿರುವುದರಿಂದ ವಿದ್ಯಾರ್ಥಿಗಳು ಚಳುವಳಿಗಳನ್ನು ನಡೆಸುತ್ತಾರೆ. ತಮ್ಮ ದಿನನಿತ್ಯ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಟ ನಡೆಸಿಕೊಂಡು ಬರುತ್ತಿರುವುದಲ್ಲದೆ ಸಾಮಾಜಿಕ ಹಿತಕ್ಕಾಗಿ ಸಾರ್ವಜನಿಕರೊಡನೆ ಸ್ಪಂದಿಸಿರುವ ಕೀರ್ತಿ ಸಹ ವಿದ್ಯಾರ್ಥಿ ಸಮುದಾಯಕ್ಕೇ ಸಲ್ಲುತ್ತದೆ. ಹಲವಾರು ನಾಗರಿಕ ಹಕ್ಕುಗಳು, ಶೈಕ್ಷಣಿಕ ವಿಷಯಗಳು, ಬೆಲೆ ಏರಿಕೆ, ಗಡಿ ಸಮಸ್ಯೆ ಇತರ ಸಮುದಾಯಗಳ ಜೊತೆ ಸೌಹಾರ್ದತೆ, ಸಾಮಾಜಿಕ ಸಮಾನತೆ ಹೀಗೆ ಹಲವಾರು ವಿಷಯಗಳನ್ನು ಅದು ಕೈಗೆತ್ತಿಕೊಂಡಿದೆ. ಶಿಕ್ಷಣವು ದುಬಾರಿಯಲ್ಲದ ಹಾಗೂ ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದುಳಿದ ವಿದ್ಯಾರ್ಥಿಗಳಿಗೆ ಸುಲಭವಾಗಿ ನ್ಯಾಯಯುತ ಸೌಲಭ್ಯಗಳು ದೊರಕುವಂತೆ ಪ್ರತಿಪಾದಿಸುವುದು ಅದರ ರಾಜಕೀಯ ಪ್ರಬುದ್ಧತೆಯ ದ್ಯೋತಕವಾಗಿದೆ.

**ಡಾ॥ ಸಿದ್ದಲಿಂಗಸ್ವಾಮಿ**

ವಿದ್ಯಾರ್ಥಿ ಸಮುದಾಯಕ್ಕೆ ರಾಜಕೀಯ ಪ್ರಜ್ಞೆ ಬೇಡವೆಂದು, ವಿಶ್ವವಿದ್ಯಾಲಯಗಳು ವಿದ್ಯಾರ್ಜನೆಗೆ ಹೊರತು ರಾಜಕಾರಣಕ್ಕೆ ಅಲ್ಲ ಹಾಗೂ ರಾಜಕೀಯ ಪ್ರಜ್ಞೆಯು ಶಿಕ್ಷಣದ ಮೌಲ್ಯವನ್ನು ಕುಸಿತ ಮಾಡುತ್ತದೆ, ಆದುದರಿಂದ ವಿದ್ಯಾರ್ಥಿ ಹೋರಾಟಗಳು ಬೇಡವೆಂಬ ವಾದಗಳು ಹುಟ್ಟಿಕೊಳ್ಳುತ್ತಿವೆ. ಭಾರತದಲ್ಲಿ ವಿಭಿನ್ನವಾದ ರಾಜಕೀಯ, ಆರ್ಥಿಕ, ಸಾಮಾಜಿಕ ವಿಷಯಗಳ ಬಗ್ಗೆ ನಡೆಯುತ್ತಿರುವ ಚರ್ಚೆಗಳು ಇಂದೂ ಸಹ ಮುಂದುವರಿಯುತ್ತಿವೆ. ಸಂಪ್ರದಾಯ ಮತ್ತು ಆಧುನಿಕತೆ, ಪ್ರತಿಗಾಮಿತನ ಮತ್ತು ಬದಲಾವಣೆ ಮುಂತಾದ ವೈರುಧ್ಯಗಳ ಸಂಘರ್ಷ ನಡೆಯುತ್ತಲೇ ಬಂದಿದೆ. ಜಾತ್ಯತೀತ ರಾಷ್ಟ್ರೀಯತೆ ಹಾಗೂ ಧಾರ್ಮಿಕ ರಾಷ್ಟ್ರೀಯತೆಗಳ ತಾಕಲಾಟಗಳು ಇಂದು ಗಂಭೀರ ಸ್ವರೂಪ ಪಡೆದುಕೊಳ್ಳುತ್ತಿವೆ. ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯ ಮತ್ತು ಸಮಾನತೆಗಳು ಇಲ್ಲದೆ ಕೇವಲ ರಾಜಕೀಯ ಸ್ವಾತಂತ್ರ್ಯಕ್ಕೆ ಯಾವುದೇ ಅರ್ಥವಿಲ್ಲವೆಂಬ ವಾದಗಳು ನಡೆಯುತ್ತಲೇ ಇವೆ. ಗಾಂಧೀವಾದ, ಸಮಾಜವಾದ, ಮಾರ್ಕ್ಸ್‌ವಾದ ಮತ್ತು ಮಾವೋವಾದಗಳು ಜನತೆಯ ಮತ್ತು ಯುವಜನರ ಮನಸ್ಸನ್ನು ಇಂದಿಗೂ ಕಾಡುತ್ತಿವೆ. ಹಿಂದಿನ ಹಲವಾರು ಸಮಸ್ಯೆಗಳು ಇಂದಿಗೂ ಸಹ ಮುಂದುವರಿಯುತ್ತಿವೆ. ವಿದ್ಯಾರ್ಥಿಗಳ ನಡುವೆ ಪ್ರಜಾಪ್ರಭುತ್ವ, ಸಮಾಜವಾದ ಹಾಗೂ ಇತರ ಸಿದ್ಧಾಂತಗಳು ಪ್ರಭಾವ ಬೀರಿವೆ. ಹಲವಾರು ರಾಜಕೀಯ ಮತ್ತು ಸಾಮಾಜಿಕ ಆರ್ಥಿಕ ಪ್ರಶ್ನೆಗಳು ಮಿಲಿಯಾಂತರ ಜನರ ಮೇಲೆ ಪ್ರಭಾವ ಬೀರುತ್ತಿವೆ. ಆದ್ದರಿಂದ ಈ ಚಿಂತನೆಗಳ ಪ್ರಭಾವವನ್ನು ಯಾವ ಪೂರ್ವಗ್ರಹಗಳಿಲ್ಲದೆ ಸಮಗ್ರವಾಗಿ ಚಿಂತಿಸುವುದು, ಚರ್ಚಿಸುವುದು ಅಗತ್ಯವಾಗಿದೆ.

ವಿದ್ಯಾರ್ಥಿಗಳ ನಡುವೆ ಗತಕಾಲದ ಚಳುವಳಿಗಳನ್ನು ಕುರಿತಂತೆ ಅನೇಕ ಚರ್ಚೆಗಳು ನಡೆಯುತ್ತಿವೆ. ಈ ಚರ್ಚೆಯು ವೈವಿಧ್ಯಮಯವಾದ ರಾಜಕೀಯ, ಆರ್ಥಿಕ, ಸಾಮಾಜಿಕ ವಿಷಯಗಳನ್ನು ಕುರಿತದ್ದಾಗಿದೆ. ಸಾಂಪ್ರದಾಯಿಕತೆ ಮತ್ತು ಆಧುನಿಕತೆ, ಪ್ರತಿಗಾಮಿತನ ಮತ್ತು ಬದಲಾವಣೆ, ಕ್ರಾಂತಿಕಾರಿವಾದ... ಹೀಗೆ ಹಲವಾರು ವಿಷಯಗಳ ಕುರಿತು ಚರ್ಚೆ ನಡೆಯುತ್ತಿದೆ. ಇಷ್ಟು ಮಾತ್ರವಲ್ಲದೆ ಜಾತ್ಯತೀತ ರಾಷ್ಟ್ರೀಯವಾದ ಹಾಗೂ ಧಾರ್ಮಿಕ ರಾಷ್ಟ್ರೀಯ ವಾದಗಳ ಸುತ್ತಲೂ ಸಹ ಚರ್ಚೆ ನಡೆಯುತ್ತಿದೆ. ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರವಿಲ್ಲದ ರಾಜಕೀಯ ಸ್ವತಂತ್ರಕ್ಕೆ ಯಾವ ಅರ್ಥವಿದೆ ಎಂಬ ವಿಷಯ ಗಳನ್ನು ಕುರಿತು ಚರ್ಚೆಗಳು ನಡೆದಿವೆ. ಇದಲ್ಲದೆ ಗಾಂಧಿವಾದ, ಸಮಾಜವಾದ, ಮಾರ್ಕ್ಸ್‌ವಾದ ಮತ್ತು ಮಾವೋವಾದ... ಹೀಗೆ ಹತ್ತು ಹಲವು ಸಿದ್ಧಾಂತಗಳ ಕುರಿತು ವಿದ್ಯಾರ್ಥಿಗಳ ನಡುವೆ ಪ್ರಜ್ಞೆಯಿದೆ. ಆದ್ದರಿಂದ ವಿದ್ಯಾರ್ಥಿ ಸಮುದಾಯ ಕೈಗೆತ್ತಿಕೊಂಡ ಹೋರಾಟಗಳಲ್ಲಿ ಈ ಸಿದ್ಧಾಂತಗಳ ಪ್ರಭಾವವನ್ನು ಸಹ ಗುರುತಿಸಲಾಗಿದೆ.

ವಿದ್ಯಾರ್ಥಿ ಸಮುದಾಯ ತನ್ನ ಹಲವಾರು ವಿಧದ ಹೋರಾಟಗಳ ಮೂಲಕ ದೇಶದ ರಾಷ್ಟ್ರೀಯ ಚಳುವಳಿಯ ಅಂಗವಾಗಿ ದೇಶದ ಗಮನ ಸೆಳೆದಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ವ್ಯಾಸಂಗದ ಜೊತೆಗೆ ದೇಶದ ಆಗುಹೋಗುಗಳ ಬಗ್ಗೆ ಚಿಂತಿಸುವುದಲ್ಲದೇ ಪ್ರಜಾಪ್ರಭುತ್ವ ಹಾಗೂ ಸ್ವಾತಂತ್ರ್ಯದ ರಕ್ಷಣೆಯ ವಿಚಾರದಲ್ಲಿ ವಿದ್ಯಾರ್ಥಿ ಸಮುದಾಯವು ಇತರ ಜನವಿಭಾಗಗಳ ಹೋರಾಟಗಳ ಜೊತೆಗೆ ಹೋರಾಟಗಳನ್ನು ಬೆಳೆಸಿ ರಾಜಕೀಯವಾಗಿ ಹಾಗೂ ಸೈದ್ಧಾಂತಿಕವಾಗಿ ಪ್ರಜಾಪ್ರಭುತ್ವ ಹೋರಾಟಗಳಿಗೆ ಸಂಘಟಿತವಾದ ರೂಪ ಕೊಟ್ಟಿದೆ.

# ವಿದ್ಯಾರ್ಥಿಗಳು, ಉನ್ನತ ಶಿಕ್ಷಣ ಹಾಗೂ ಸಾಮಾಜಿಕ ಚಳುವಳಿಗಳು





ವಿದ್ಯಾರ್ಥಿಗಳು ವ್ಯಾಸಂಗದ ಜೊತೆಗೆ, ವಿದ್ಯಾರ್ಥಿ ಸಮಸ್ಯೆಗಳಾದ ಪಠ್ಯ ವಿಷಯ, ಹಾಸ್ಟೆಲುಗಳು, ತರಗತಿ, ಶುಲ್ಕ, ವಿದ್ಯಾರ್ಥಿವೇತನ, ಕಲಿಕೆಯ ಸಾಧನಗಳು, ಶಿಕ್ಷಣದ ಪ್ರಜಾಪ್ರಭುತ್ವೀಕರಣ ಹೀಗೆ ಹತ್ತು ಹಲವು ವಿಚಾರಗಳ ಕುರಿತು ಸಹ ಹೋರಾಟವನ್ನು ನಡೆಸಿಕೊಂಡು ಬಂದಿದ್ದಾರೆ. ಬೀದಿ ಹೋರಾಟಗಳಿಂದ ಜನರ ಸಮಸ್ಯೆಗಳನ್ನು ಸಹ ಪರಿಹರಿಸಲು ಪ್ರಯತ್ನಿಸಿವೆ. ಈ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳು ನಿರುದ್ಯೋಗ, ಬೆಲೆ ಏರಿಕೆ, ಶೈಕ್ಷಣಿಕ ಸುಧಾರಣೆ, ಪ್ರಜಾಸತ್ತಾತ್ಮಕ ಹಕ್ಕುಗಳು ಇತ್ಯಾದಿ ವಿಷಯಗಳನ್ನು ಕುರಿತು ಜನಾಂದೋಲನಗಳನ್ನು ನಡೆಸಿದ್ದಾರೆ.

ಅನ್ಯಾಯವನ್ನು ಸಹಿಸಲಾರದೆ ಅದನ್ನು ಪ್ರತಿಭಟಿಸುವ ಮನೋಧರ್ಮವನ್ನು ಮೈಗೂಡಿಸಿಕೊಂಡಿರುವುದರಿಂದ ವಿದ್ಯಾರ್ಥಿಗಳು ಚಳುವಳಿಗಳನ್ನು ನಡೆಸುತ್ತಾರೆ. ತಮ್ಮ ದಿನನಿತ್ಯ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಟ ನಡೆಸಿಕೊಂಡು ಬರುತ್ತಿರುವುದಲ್ಲದೆ ಸಾಮಾಜಿಕ ಹಿತಕ್ಕಾಗಿ ಸಾರ್ವಜನಿಕರೊಡನೆ ಸ್ಪಂದಿಸಿರುವ ಕೀರ್ತಿ ಸಹ ವಿದ್ಯಾರ್ಥಿ ಸಮುದಾಯಕ್ಕೇ ಸಲ್ಲುತ್ತದೆ. ಹಲವಾರು ನಾಗರಿಕ ಹಕ್ಕುಗಳು, ಶೈಕ್ಷಣಿಕ ವಿಷಯಗಳು, ಬೆಲೆ ಏರಿಕೆ, ಗಡಿ ಸಮಸ್ಯೆ ಇತರ ಸಮುದಾಯಗಳ ಜೊತೆ ಸೌಹಾರ್ದತೆ, ಸಾಮಾಜಿಕ ಸಮಾನತೆ ಹೀಗೆ ಹಲವಾರು ವಿಷಯಗಳನ್ನು ಅದು ಕೈಗೆತ್ತಿಕೊಂಡಿದೆ. ಶಿಕ್ಷಣವು ದುಬಾರಿಯಲ್ಲದ ಹಾಗೂ ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದುಳಿದ ವಿದ್ಯಾರ್ಥಿಗಳಿಗೆ ಸುಲಭವಾಗಿ ನ್ಯಾಯಯುತ ಸೌಲಭ್ಯಗಳು ದೊರಕುವಂತೆ ಪ್ರತಿಪಾದಿಸುವುದು ಅದರ ರಾಜಕೀಯ ಪ್ರಬುದ್ಧತೆಯ ದ್ಯೋತಕವಾಗಿದೆ.

ವಿದ್ಯಾರ್ಥಿ ಸಮುದಾಯಕ್ಕೆ ತಮ್ಮ ಸುತ್ತಮುತ್ತಲೂ ಆಗುತ್ತಿರುವ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬೆಳವಣಿಗೆಗಳನ್ನು ಅರ್ಥಮಾಡಿಕೊಳ್ಳುವ ಸೂಕ್ಷ್ಮತೆ ಇದೆ. ಇದರಿಂದಾಗಿ ಶೈಕ್ಷಣಿಕ ಸಮಸ್ಯೆಗಳ ಪರಿಹಾರ ಹಾಗೂ ಶೈಕ್ಷಣಿಕ ವ್ಯವಹಾರಗಳಲ್ಲಿ ತಮ್ಮ ಪಾತ್ರವಿರಬೇಕೆಂದು ಹಾಗೂ ಈ ಸಂಸ್ಥೆಗಳಲ್ಲಿ ತಮ್ಮ ಪ್ರಾತಿನಿಧ್ಯವಿರಬೇಕೆಂದು ಪ್ರತಿಪಾದಿಸುವುದು ತಪ್ಪಲ್ಲ. ಶೈಕ್ಷಣಿಕ ಮಂಡಳಿಗಳಲ್ಲಿ ಇರುವ ಸರ್ವಾಧಿಕಾರಿ ಪ್ರವೃತ್ತಿ ಹಾಗೂ ಮಧ್ಯಯುಗೀನ ಚಿಂತನೆಗಳ ವಿರುದ್ಧ ಹೋರಾಟ ನಡೆಸುವುದು ವಿದ್ಯಾರ್ಥಿ ಸಮುದಾಯದ ಕರ್ತವ್ಯ.



ಸಾಮಾಜಿಕ ಚಳುವಳಿ ಎಂಬುದು ಸಮಾಜದ ಚಲನೆ ಸ್ಥಿತ್ಯಂತರ ಅಥವಾ ಬದಲಾವಣೆಗೆ ಸಂಬಂಧಿಸಿದಂತೆ ನಡೆಯುವ ಒಂದು ಸ್ವಾಭಾವಿಕ ಕ್ರಿಯೆ, ಇದು ವ್ಯವಸ್ಥಿತವಾದುದು. ಏಕೆಂದರೆ ಅದರ ಹಿಂದೆ ಧ್ಯೇಯ, ಯೋಜನೆ ಹಾಗೂ ಕಾರ್ಯಕ್ರಮಗಳು ಇರುತ್ತವೆ. ಸ್ವಾಭಾವಿಕ ಕ್ರಿಯೆಯಲ್ಲಿ ಹೇಗೆಂದರೆ ಮಾನವ ಜನಾಂಗದ ವಿಕಾಸದ ವಿವಿಧ ಮಜಲುಗಳಲ್ಲಿ ಇಂಥ ಚಳುವಳಿಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಅವುಗಳನ್ನು ವ್ಯವಸ್ಥೆ ಹತ್ತಿಕ್ಕಲು ಯತ್ನಿಸಿದರೂ ಚಳುವಳಿಯು ಒಂದಿಲ್ಲೊಂದು ರೂಪದಲ್ಲಿ ನಡೆಯುತ್ತಿರುತ್ತದೆ. ಏಕೆಂದರೆ ಜೀವನವೆಂದರೆ ಹರಿಯುವ ನೀರು. ಆದ್ದರಿಂದ ಚಲನೆಗಾಗಿ ಹಾರೈಸುವುದು ಮನುಷ್ಯನಲ್ಲಿ ಬೆಳೆದುಬಂದಿರುವ ಗುಣ. ಸಮಾಜಶಾಸ್ತ್ರಜ್ಞರು ಸಾಮಾಜಿಕ ಚಳುವಳಿಯನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ: "ಸಾಮಾಜಿಕ ಸಂಸ್ಥೆಗಳಲ್ಲಿ ಬದಲಾವಣೆಗಳನ್ನು ಉಂಟುಮಾಡುವ ಅಥವಾ ಸಂಪೂರ್ಣವಾದ ಹೊಸದೊಂದು ವ್ಯವಸ್ಥೆ ನಿರ್ಮಿಸುವ ಸಾಮೂಹಿಕ ಯತ್ನಗಳ ವಿಸ್ತಾರವಾದ ವೈವಿಧ್ಯವಾಗಿದೆ. ಈ ಬದಲಾವಣೆ ಸುಧಾರಣೆಯಾಗಿರಬಹುದು ಅಥವಾ ಕ್ರಾಂತಿಕಾರಿ ಸ್ವರೂಪದ್ದಾಗಿರಬಹುದು. ಈ ಚಳುವಳಿಗಳು ವ್ಯಕ್ತಿಗಿಂತ ಸಮಷ್ಟಿ ಹಾಗೂ ಸಮಾಜ ಪ್ರಮುಖವೆಂಬುದಕ್ಕೆ ಇಲ್ಲಿ ಹೆಚ್ಚು ಒತ್ತು ಇದೆ." ಚಳುವಳಿಗಳು ತಮ್ಮಷ್ಟಕ್ಕೆ ತಾವೇ ಜರುಗುತ್ತವೆ. ಅವು ಜಾಯಮಾನವೆನ್ನುವಹಾಗಿಲ್ಲ. ವಿಶಾಲವಾದ ಸಮಾಜಗಳಲ್ಲಿ ಮತ್ತೆ ಮತ್ತೆ ಘಟಿಸುವ ಪ್ರಕ್ರಿಯೆಗಳಾಗಿ ಕಾಣಿಸುತ್ತವೆ. ಅಂದರೆ ಹೊರಗಿನ ಪ್ರಪಂಚಕ್ಕೆ ತೆರೆದುಕೊಳ್ಳುವ ವಿಭಿನ್ನ ವಿಚಾರಗಳಿಗೆ ಪರಿಸ್ಥಿತಿಗಳಿಗೆ ತಮ್ಮನ್ನು ತಾವು ತೆರೆದುಕೊಂಡು ಸಂವಾದ ಸಂಘರ್ಷಗಳ ಮೂಲಕ ಬದಲಾವಣೆಯ ಸಾಧ್ಯತೆಯನ್ನು ಕಂಡುಕೊಳ್ಳುವ ಸಮಾಜಗಳಲ್ಲಿ ಚಳುವಳಿಗಳು ಹೆಚ್ಚಾಗಿ ಮೂಡಿಬರಲು ಸಾಧ್ಯವಾಗುತ್ತದೆ. ಸಾಮಾಜಿಕ ಚಳುವಳಿಗಳು ಸಮುದಾಯವೊಂದರ ಅಗತ್ಯ ಅಭೀಪ್ಸೆ, ಆಶೋತ್ತರಗಳ ಅಭಿವ್ಯಕ್ತಿಯಾಗಿದೆ. ಈ ಚಳುವಳಿಗಳಲ್ಲಿ ಪಾಲುಗೊಂಡವರು, ಆಂದೋಲನಗಳು ಚುರುಕುಗೊಂಡಂತೆ ತೆಗೆದುಕೊಳ್ಳುವ ತಿರುವುಮುರುವುಗಳು, ವಿಭಿನ್ನ ಸಂಘರ್ಷಗಳ ಫಲವಾಗಿ ಚಳುವಳಿಗಾರರು ಹೊಸ ಮನುಷ್ಯರೇ ಆಗಿ ಮಾರ್ಪಡಬಹುದು.

ಚಳುವಳಿಗಳಿಗೆ ಕಾಲ ದೇಶಗಳ ಎಲ್ಲೆಯಿಲ್ಲ. ಎಲ್ಲ ಕಾಲಗಳಲ್ಲೂ ಒಂದಿಲ್ಲೊಂದು ಚಳುವಳಿ ನಡೆದಿದೆ. ಕೆಲವು ಶಾಶ್ವತ ಪರಿಣಾಮ ಬೀರಿರಬಹುದು ಮತ್ತೆ ಕೆಲವು ಪರಿಣಾಮ ಬೀರದೆ ಹೋಗಿರಬಹುದು ಅಥವಾ ಇನ್ನೊಂದು ವ್ಯಾಪಕ ಚಳುವಳಿಯ ಗರ್ಭದಲ್ಲಿ ವಿಲೀನಗೊಂಡಿರಬಹುದು. ಭಾರತದ ಇತಿಹಾಸವನ್ನು ಗಮನಿಸಿದಾಗ ಮತ್ತೆ ಮತ್ತೆ ತಲೆ ಎತ್ತಿದ ಹಲವಾರು ಚಳುವಳಿಗಳು ಇದಕ್ಕೊಂದು ಉದಾಹರಣೆ. ಸಮಾಜ ರಚನೆಯ ಬದಲಾವಣೆಯ ಉದ್ದೇಶವುಳ್ಳ ರಾಜಕೀಯ ಕ್ರಾಂತಿಯು ಸಾಮಾಜಿಕ ಕ್ರಾಂತಿಯೆಂದು ಲ್ಯಾಡ್‌ಲಾಗ್ ಹೇಳುತ್ತಾನೆ. ಅಂದರೆ ರಾಜಕೀಯ ವ್ಯವಸ್ಥೆಯ ಬದಲಾವಣೆಗಾಗಿ ಜರುಗುವ ಎಲ್ಲಾ ಸಾಮಾಜಿಕ ಚಳುವಳಿಗಳು, ರಾಜಕೀಯ ಅಧಿಕಾರ ಗ್ರಹಣದ ಪ್ರೇರಿತವಾಗಿರುತ್ತದೆ ಎಂದೇನಿಲ್ಲ: ಉದಾಹರಣೆಗೆ, ಸ್ವಾತಂತ್ರ್ಯ ಹೋರಾಟದ ವೇಳೆಯಲ್ಲಿ ಬ್ರಿಟಿಷರ ದಾಸ್ಯದಿಂದ ದೇಶವನ್ನು ವಿಮೋಚನೆಗೊಳಿಸುವುದೇ ಆ ಹೋರಾಟದಲ್ಲಿ ಭಾಗವಹಿಸಿದ ಬಹುತೇಕ ಜನವರ್ಗದ ಉದ್ದೇಶವಾಗಿತ್ತೇ ವಿನಾ ಸ್ವಾತಂತ್ರ್ಯಾನಂತರ ಅಧಿಕಾರ ಸ್ಥಾನವನ್ನು ಪಡೆಯಬೇಕೆಂಬುದಲ್ಲ. ಈ ನಿಸ್ಪೃಹತೆ ಸ್ವಾತಂತ್ರ್ಯ ಚಳುವಳಿಯ ಬಳುವಳಿ.

ಆಂದೋಲನದ ಪ್ರಾರಂಭದಲ್ಲಿರಬಹುದಾದ ಧ್ಯೇಯದ ಸ್ಪಷ್ಟತೆ ಕ್ರಮೇಣ ಶಿಥಿಲಗೊಂಡು ಮುಂದೆ ಮತ್ತೊಂದು ಸ್ವರೂಪ ಪಡೆದುಕೊಂಡಿದ್ದಕ್ಕೆ ನಮ್ಮಲ್ಲಿ ನಿದರ್ಶನಗಳಿವೆ. ಉದಾಹರಣೆಗೆ, ಪೆರಿಯಾರ್‌ರಿಂದ ಪ್ರಾರಂಭಗೊಂಡ ದ್ರಾವಿಡ ಸ್ವಾಭಿಮಾನಿ ಚಳುವಳಿಯು ಮೂಲತಃ ಬ್ರಾಹ್ಮಣ ವಿರೋಧಿ ಚಳುವಳಿಯಾಗಿದ್ದರೆ ಕಾಲಕ್ರಮೇಣ ಅದು ಹಿಂದಿ ವಿರೋಧಿ ಚಳುವಳಿಯಾಯಿತು. ದ್ರಾವಿಡ ನಿಷ್ಠ ಚಳುವಳಿಯಾಗಿದ್ದ ಇದು ಹೀಗೆ ಪರಿವರ್ತನೆಯಾದದ್ದನ್ನು ಗಮನಿಸಬಹುದು. ಸೈದ್ಧಾಂತಿಕ ಖಚಿತತೆ ಮತ್ತು ಜನವರ್ಗದ ಪಾಲುಗೊಳ್ಳುವಿಕೆ ಇಲ್ಲದ ಚಳುವಳಿಗಳ ಇತಿಹಾಸವೇ ಇದಕ್ಕೆ ಉದಾಹರಣೆ. ೭೦ರ ದಶಕದಲ್ಲಿ ರೂಪುಗೊಂಡ ದಲಿತ ಪ್ಯಾಂಥರ್ ಚಳುವಳಿ ಅತಿ ಶೀಘ್ರವಾಗಿ ಲಕ್ಷಾಂತರ ಸದಸ್ಯರನ್ನು ಹೊಂದಿ ಜನಪ್ರಿಯವಾದರೂ ಅದರ ನಾಯಕರು ಸರ್ವಾಧಿಕಾರಿಗಳಾಗಿದ್ದುದರಿಂದ ಅತಿ

ಶೀಘ್ರವಾಗಿ ಪತನವಾಯಿತು. ೭೦ರ ದಶಕದ ರೈತ ಕಾರ್ಮಿಕ, ವಿದ್ಯಾರ್ಥಿ ಚಳುವಳಿಗಳು ನಂತರದ ದಿನಗಳಲ್ಲಿ ತಮ್ಮ ಪ್ರಖರತೆಯನ್ನು ಕಳೆದುಕೊಂಡವು.

ಆಧುನಿಕ ಬಂಡವಾಳವಾದಿ ಆರ್ಥಿಕತೆಯ ಬೆಳವಣಿಗೆಯಿಂದ ಕೆಲವು ಸಾಮಾಜಿಕ ಚಳುವಳಿಗಳು ಹುಟ್ಟಿಕೊಂಡಿವೆ. ಇವು ಅಂತರ ರಾಷ್ಟ್ರೀಯ ಸಂಘರ್ಷಗಳೆಂದು ಕಾಲಕ್ಕೆ ಹೊಂದದ ಮೌಲ್ಯಗಳ ವಿರುದ್ಧ ಪ್ರತಿಭಟನೆ ಯೆಂದು ವಾಟ್‌ಮೋರ್ ವ್ಯಾಖ್ಯಾನಿಸುತ್ತಾರೆ. ಒಂದೇ ಸಮಾಜದೊಳಗಣ ಸಂಘರ್ಷಗಳು ಆವಿಷ್ಕಾರ ಮತ್ತು ಬದಲಾವಣೆಯ ಪ್ರಮುಖ ಮೂಲಗಳಾಗಿವೆ. ತಲೆಮಾರುಗಳ ಸಂಘರ್ಷ ಕೂಡ ಯೋಗ್ಯವೆಂದು ವ್ಯಾಟ್‌ಮೋರ್ ಭಾವಿಸುತ್ತಾರೆ. ಎಲ್ಲಿಯವರೆಗೆ ನಾಗರಿಕ ಹಕ್ಕುಗಳಿಗೆ ಮಾನ್ಯತೆ ಇರುವುದಿಲ್ಲವೋ ಎಲ್ಲಿಯವರೆಗೆ ಸಾಮಾಜಿಕ ನ್ಯಾಯ, ಆರ್ಥಿಕ ಸಮಾನತೆಗಳಂತಹ ಸಂವಿಧಾನದತ್ತ ಹಕ್ಕುಗಳಿಗೆ ಅವಕಾಶವಿಲ್ಲವೋ, ಎಲ್ಲಿಯವರೆಗೆ ಜೀವನಾವಶ್ಯಕ ವಸ್ತುಗಳ ವಿಷಯದಲ್ಲಿ ವ್ಯಕ್ತಿಗೆ ಭದ್ರತೆ ಇರುವುದಿಲ್ಲವೋ ಅಲ್ಲಿಯವರೆಗೆ ಚಳುವಳಿಯ ಬಾಗಿಲು ತೆರೆದೇ ಇರುತ್ತದೆ. ಇವೆಲ್ಲ ಜನತೆಗೆ ದೊರೆತ ಮೇಲೂ, ಚಳುವಳಿಗಳು ಜರುಗಬಾರದೆಂಬುದೇನಿಲ್ಲ. ಏಕೆಂದರೆ ಮನುಷ್ಯ ಆಹಾರದಿಂದಷ್ಟೇ ಬದುಕುವುದಿಲ್ಲ. ಮನುಷ್ಯನ ಜೀವಿತದ ಸಮಸ್ಯೆ ದಿನೇ ದಿನೇ ಉಲ್ಬಣ ಗೊಳ್ಳುತ್ತಿರುವಾಗ ಚಳುವಳಿಗಳು, ಪ್ರತಿಭಟನೆಗಳ ಸಾಧ್ಯತೆ ಜೀವಂತವಾಗಿರುತ್ತವೆ.




ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಆಧುನಿಕ ಭಾರತದ ಇತಿಹಾಸದ ಒಂದು ಮಹತ್ವದ ಘಟನೆ. ಬ್ರಿಟಿಷರ ದಬ್ಬಾಳಿಕೆಯನ್ನು ಎದುರಿಸಿ ವಿಮೋಚನೆ ಗೊಳ್ಳಲು ಭಾರತದ ಜನತೆಯು ನಡೆಸಿದ ಹೋರಾಟ ನಮ್ಮ ಜನತೆಯ ಇಚ್ಛಾಶಕ್ತಿಯನ್ನು ಎತ್ತಿ ತೋರಿಸುತ್ತದೆ. ಜೊತೆಗೆ ಹೋರಾಟದ ಹುಟ್ಟಡಗಿಸುವ ಮೂಲಕ ಬ್ರಿಟಿಷರು ತಮ್ಮ ಅಧಿಕಾರವನ್ನು ಕ್ರೋಢೀಕರಿಸಲು ಒತ್ತಡ ಹೇರಿದ್ದು ಈ ಘಟನೆ. ಸಿಪಾಯಿ ದಂಗೆಯ ನಂತರ ಬ್ರಿಟಿಷರು ಹತ್ತು ಹಲವು ಬಗೆಗಳಲ್ಲಿ ತಮ್ಮ ಬಿಗಿ ಆಡಳಿತ ನೀತಿಯನ್ನು ಜಾರಿಗೆ ತಂದರು. ಅದುವರೆಗೆ ಧಾರ್ಮಿಕ ಕ್ಷೇತ್ರಕ್ಕೆ ಕೈ ಹಾಕದಿದ್ದ ಬಿಳಿಯರು ಶಾಲಾ ಕಾಲೇಜುಗಳಲ್ಲಿ ಕ್ರೈಸ್ತ ಧರ್ಮದ ಬೋಧನೆಯನ್ನು ಕೂಡ ಪ್ರಾರಂಭಿಸಿದರು. ಗಾಂಧೀಜಿಯ ಪ್ರವೇಶಕ್ಕೆ ಮೊದಲೇ ಭಾರತದ ವಿದ್ಯಾರ್ಥಿಗಳು ವಿವಿಧೆಡೆ ಹಲವು ಬಗೆಯ ಚಳುವಳಿಗಳಿಗೆ ಇಳಿದಿದ್ದು ಕಂಡುಬರುತ್ತದೆ. ಸ್ವಾತಂತ್ರ್ಯ ಹೋರಾಟವೆಂದರೆ ಗಾಂಧಿ ನೇತೃತ್ವದ ಕಾಂಗ್ರೆಸ್ಸಿನ ಹೋರಾಟವಷ್ಟೇ ಅಲ್ಲ, ಸಮಾಜವಾದಿಗಳು, ಕ್ರಾಂತಿಕಾರಿಗಳು, ಕಾರ್ಮಿಕರು, ರೈತರು ಈ ಹೋರಾಟಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಅಸಂಖ್ಯಾತ ಬಡಜನತೆ, ರೈತರು, ಕಾರ್ಮಿಕರು, ಯುವಕರು, ಮಹಿಳೆಯರು, ಸೈನಿಕರು, ವಿದ್ಯಾರ್ಥಿಗಳು ಸ್ವಾತಂತ್ರ್ಯಕ್ಕೋಸ್ಕರ ಸರ್ವಸ್ವವನ್ನು ತ್ಯಾಗಮಾಡಿ ಹೋರಾಟಕ್ಕೆ ಮೆರುಗು ನೀಡಿದ್ದಾರೆ.

ಇಷ್ಟೆಲ್ಲಾ ಜನವರ್ಗಗಳು ಹಲವು ದಾರಿಗಳಲ್ಲಿ ನಡೆಸಿದ ಹೋರಾಟಗಳ ಫಲವಾಗಿ ಸ್ವತಂತ್ರ ಭಾರತದ ಆಡಳಿತ ವರ್ಗವು ಬೂರ್ಷ್ವಾ ವರ್ಗದ ಕೈಯಲ್ಲಿ ಸೇರಿಹೋಯಿತು. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ನಮ್ಮ ನಾಯಕರಿಂದಾದ ಕೆಲವು ಪ್ರಮಾದಗಳು ಸ್ವಾತಂತ್ರ್ಯಾನಂತರದ ಭಾರತದ ಹಲವಾರು ಸಮಸ್ಯೆಗಳಿಗೆ ಕಾರಣವಾಯಿತು. ಸ್ವಾತಂತ್ರ್ಯದ ಫಲ ಎಲ್ಲ ಜನವರ್ಗಗಳ ಅನುಭವಕ್ಕೆ ಬರಲಿಲ್ಲ. ನಮ್ಮ ಕೃಷಿ ಪದ್ಧತಿ ಕೈಗಾರಿಕಾ ಧೋರಣೆ, ಶಿಕ್ಷಣ ವ್ಯವಸ್ಥೆ, ಅನಕ್ಷರತೆ ಮತ್ತು ಜಾತೀಯತೆಯಂತಹ ಪಿಡುಗುಗಳನ್ನು ಗಮನಿಸಿದಾಗ ನಮ್ಮ ಸ್ವಾತಂತ್ರ್ಯ ಹೋರಾಟದ ಆಶಯಗಳು ಹಲವಾರು ಬಗೆಯಲ್ಲಿ ಅಪೂರ್ಣವಾಗಿರುವುದು ಗೋಚರವಾಗುತ್ತದೆ.

ಈ ಸಂದರ್ಭದಲ್ಲಿ ಶಿಕ್ಷಣದ ಕುರಿತಾಗಿ ಕೆಲವು ಅತ್ಯಗತ್ಯ ವಿಷಯಗಳನ್ನು ನಾವು ಗಮನಿಸಬೇಕಾಗುತ್ತದೆ. ಸ್ವದೇಶಿ ಚಳುವಳಿಯ ಒಂದು ಹಂತದಲ್ಲಿ ವಿದೇಶಿ ಶೈಕ್ಷಣಿಕ ಸಂಸ್ಥೆಗಳನ್ನು ತೊರೆದು ನಮ್ಮ ಯುವಕರು ರಾಷ್ಟ್ರೀಯ ಚಳುವಳಿಯಲ್ಲಿ ಧುಮುಕಿದ್ದೇನೋ ನಿಜ. ಆದರೆ ಅಗಾಧ ಸಂಖ್ಯೆಯ ಯುವಜನರು ಶಿಕ್ಷಣದ ಪರಿಧಿಯಿಂದ ಹೊರಗೆ ಉಳಿದಿದ್ದರು. ಹೋರಾಟದ ಭರದಲ್ಲಿ ಶಿಕ್ಷಣವನ್ನು ತಡೆಯಬಹುದು, ಆದರೆ ಸ್ವಾತಂತ್ರ್ಯವಲ್ಲ ಎಂದು ಕೆಲವರು ತಿಳಿದಿದ್ದರು. ಜ್ಯೋತಿಬಾ ಫುಲೆ, ಅಂಬೇಡ್ಕರ್‌ರಂಥವರು ಶಿಕ್ಷಣದ ಮಹತ್ವವನ್ನು ತಿಳಿದು ಅದರಲ್ಲೂ ಶೂದ್ರರು, ಕೆಳಜಾತಿಯವರು, ಮಹಿಳೆಯರು, ಸುಶಿಕ್ಷಿತರಾಗುವುದೊಂದೇ ಅವರ ಏಳಿಗೆಯ ದಾರಿಯೆಂದು ಪ್ರತಿಪಾದಿಸುತ್ತಿದ್ದರು. ಕಾಂಗ್ರೆಸ್ ಕೂಡ ಶಿಕ್ಷಣ, ವೈಜ್ಞಾನಿಕ ವಿಚಾರಗಳ ಪ್ರಚಾರ, ಜಾತೀಯತೆ, ಮೌಢ್ಯಗಳ ವಿರೋಧಕ್ಕಾಗಿ ಸ್ವತಂತ್ರ ಚಳುವಳಿಯ ಜೊತೆ ಜೊತೆಗೆ ಶ್ರಮಿಸಿದ್ದರೆ ನಮ್ಮ ಪ್ರಜಾಪ್ರಭುತ್ವ ಇಂದಿಗೂ ಹೆಚ್ಚು ಅರ್ಥಪೂರ್ಣವಾಗುತ್ತಿತ್ತು.

ಇಂದಿನ ಶಿಕ್ಷಣದಲ್ಲಿ ಪ್ರಾಥಮಿಕ ಶಿಕ್ಷಣದಿಂದ ಮೊದಲ್ಗೊಂಡು ಉನ್ನತ ಶಿಕ್ಷಣದವರೆಗೆ ದೇಹ, ಮನಸ್ಸು, ವೃತ್ತಿಗಳಿಗೆ ಪ್ರಾಧಾನ್ಯತೆ ಇಲ್ಲ. ಮಾತೃಭಾಷೆಯಲ್ಲಿ ಶಿಕ್ಷಣ ಸ್ಥಾನಪಲ್ಲಟವಾಗಿ ಆಂಗ್ಲ ಮಾಧ್ಯಮ ಜನಪ್ರಿಯವಾಗಿದೆ. ಆಂಗ್ಲ ಮಾಧ್ಯಮದ ಗೀಳು ಉಳಿದೆಲ್ಲ ಕ್ಷೇತ್ರಗಳಂತೆ ಶಿಕ್ಷಣ ಗಣ್ಯಪರವಾಗಿ ನಿಂತಿದೆ. ಉಚಿತ ಸಾರ್ವತ್ರಿಕ ಶಿಕ್ಷಣದ ಉದ್ದೇಶ ಸಫಲವಾಗಿಲ್ಲ. ಸಮಾಜವಾದ, ವಿಚಾರವಾದ, ವೈಜ್ಞಾನಿಕ ಮನೋಭಾವಗಳ ಪ್ರಚಾರದೊಂದಿಗೆ ಆಧ್ಯಾತ್ಮಿಕ ಮೌಲ್ಯಗಳನ್ನು ಬೋಧಿಸಬೇಕೆನ್ನುವುದು ಪ್ರಸ್ತಾಪವಾಗಿದ್ದರೂ ಅವು ಇಲ್ಲಿಯವರೆಗೆ ಜಾರಿಗೆ ಬಂದಿಲ್ಲ.

ಈ ವಿಷಯವನ್ನು ಕುರಿತು ಅವಲೋಕಿಸಿದಾಗ ವಿದ್ಯಾರ್ಥಿ ಚಳುವಳಿಗಳ ಸಮಸ್ಯೆಗಳೆಂದರೆ, ಅವು ಯಾವ ಸಮಸ್ಯೆಗಳು ? ಅವು ಸಮಾಜದಲ್ಲಿ ವಿದ್ಯಾರ್ಥಿ ಗಳಿಂದ ಸೃಷ್ಟಿಯಾದ ಸಮಸ್ಯೆಗಳೇ ಅಥವಾ ಸಮಾಜದಲ್ಲಿ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳೇ ಅಥವಾ ವಿದ್ಯಾರ್ಥಿಗಳ ಮೇಲೆ ಹೇರಲಾಗಿರುವ ಸಮಸ್ಯೆಗಳೇ ಮುಂತಾದ ದೃಷ್ಟಿಕೋನಗಳು ಉದ್ಭವವಾಗುತ್ತವೆ. ವಿದ್ಯಾರ್ಥಿಗಳ ಸಮಸ್ಯೆಗಳು ಜನಸಮೂಹದ ಸಮಸ್ಯೆಗಳಿಂದ ಪ್ರತ್ಯೇಕವಾಗಿಲ್ಲ. ದೇಶದ ಯುವ ಪೀಳಿಗೆ ಎದುರಿಸುತ್ತಿರುವ ಸಮಸ್ಯೆಗಳೆಂದರೆ ಹಸಿವು, ದಾರಿದ್ರ್ಯ, ರೋಗ, ಅಜ್ಞಾನ, ನಿರುದ್ಯೋಗ, ಅವಕಾಶಗಳ ಕೊರತೆ, ಅಭದ್ರತೆ, ಅಸಮಾನತೆ ಹಾಗೂ ಹಿಂದುಳಿದಿರುವಿಕೆ.

**ವಿಶ್ವವಿದ್ಯಾನಿಲಯಗಳು ಮತ್ತು ಸಮಾಜ**

ಭಾರತದಲ್ಲಿ ವಸಾಹತುಶಾಹಿಯ ಅಡಿಯಲ್ಲಿ ಸ್ವಲ್ಪಮಟ್ಟಿಗೆ ಶಿಕ್ಷಣ ಕ್ಷೇತ್ರದಲ್ಲಿ, ಪ್ರಗತಿಯಾಗಿದ್ದು, ಈ ಬೆಳವಣಿಗೆ ವಸಾಹತುಶಾಹಿಯ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ರಚಿತವಾಗಿತ್ತು. ಸ್ವಾತಂತ್ರ್ಯಾನಂತರದ ವಿಶ್ವವಿದ್ಯಾನಿಲಯ ಮತ್ತು ಇತರ ಉನ್ನತ ಶಿಕ್ಷಣ ಸಂಸ್ಥೆಗಳು ಹಳೆಯ ವಸಾಹತುಶಾಹಿ ರಾಷ್ಟ್ರದ ಅವಲಂಬನೆಗೆ ಒಳಗಾಯಿತು. ಆದುದರಿಂದ ಸ್ವಾತಂತ್ರ್ಯಪೂರ್ವದ ಬಹುತೇಕ ವಿಶ್ವವಿದ್ಯಾನಿಲಯಗಳು ಮೂಲಭೂತವಾಗಿ ವಿದೇಶಿ ಹಿತಾಸಕ್ತಿಗೆ ಅನುಗುಣವಾಗಿತ್ತು.

ಇಂದು ವಿಶ್ವವಿದ್ಯಾನಿಲಯಗಳು ವಿವಿಧ ವೃತ್ತಿಗಳಿಗೆ ಹಾಗೂ ವರ್ಗಶಕ್ತಿಗಳಿಗೆ ತನ್ನದೇ ಆದ ವ್ಯಾಖ್ಯೆಯನ್ನು ಹೊಂದಿವೆ. ಒಂದು ಅರ್ಥದಲ್ಲಿ ವಿಶ್ವವಿದ್ಯಾ ನಿಲಯಗಳು ಉನ್ನತ ಮಟ್ಟದ ವೃತ್ತಿನಿರತ ತಂತ್ರಜ್ಞರನ್ನು ಕಲೆ, ವಿಜ್ಞಾನ ಕ್ಷೇತ್ರಗಳಲ್ಲಿ ಮಾನವ ಶಕ್ತಿಯನ್ನು ಉತ್ಪಾದಿಸಿ ಮತ್ತು ಆ ಕ್ಷೇತ್ರಗಳಲ್ಲಿ ಸಂಶೋಧನೆ ಮತ್ತು ಉನ್ನತ ಅಧ್ಯಯನ ನಡೆಸುತ್ತಿರುವ ಹಾಗೂ ಇದನ್ನು ದೇಶದ ಬೌದ್ಧಿಕ ಮತ್ತು ವೃತ್ತಿನಿರತ ಅಭಿವೃದ್ಧಿಗೆ ಬಳಸುತ್ತಿರುವ ಸಂಸ್ಥೆಗಳೇ ಆಗಿವೆ. ಕೆಲವರಿಗೆ ವಿಶ್ವದ್ಯಾನಿಲಯವು ಶಿಕ್ಷಣದ ಧಾರ್ಮಿಕ ನೈತಿಕ ಜ್ಞಾನವನ್ನು ಬೆಳೆಸುವುದಾಗಿದ್ದು, ಒಂದು ಸಂಶೋಧನಾ ಸಮುದಾಯವು ಸತ್ಯದ ಕಡೆಗೆ ಹಾಗೂ ಉತ್ಪನ್ನದ ಕಡೆಗೆ ಹಾಗೂ ಪ್ರಗತಿಯ ಕೇಂದ್ರವಾಗಿದ್ದು, ಅಭಿವೃದ್ಧಿ ಕ್ರಿಯಾಶೀಲ ಕೇಂದ್ರವಾಗಿದೆ. ಉನ್ನತ ಶಿಕ್ಷಣದ ಸಾಂಪ್ರದಾಯಿಕ ಕೇಂದ್ರವಾಗಿದೆ. ಇದು ಜ್ಞಾನದ ಸಂರಕ್ಷಣೆ ಪ್ರಸಾರ ಮತ್ತು ಉನ್ನತಿಯ ಪಾತ್ರದಲ್ಲಿ ವಿಜೃಂಭಿಸುತ್ತಿದೆ. ಅದು ವಿವಿಧ ಕ್ಷೇತ್ರಗಳಲ್ಲಿ ಜ್ಞಾನದ ಹೆಚ್ಚಳವನ್ನು ಉಂಟುಮಾಡುತ್ತದೆ ಎಂಬ ನಂಬಿಕೆಯಿದೆ.

ಬ್ರಿಟಿಷರು ಭಾರತದಲ್ಲಿ ಶಿಕ್ಷಣವನ್ನು ಪ್ರಾರಂಭಿಸುವಾಗ ಸಮಾಜದ ಮೇಲ್‌ಸ್ತರದ ಶಿಕ್ಷಣ ಕಲಿಸಿದರೆ ಅದು ಕ್ರಮೇಣ ಕೆಳಸ್ತರ ಗಳಿಗೆ ಇಳಿಮುಖವಾಗಿ ಹರಡಿಕೊಳ್ಳುತ್ತದೆ ಎಂದು ನಂಬಿದ್ದರು. ಸ್ವಾತಂತ್ರ್ಯ ಬಂದ ಮೇಲೂ ನಮ್ಮ ಸರ್ಕಾರಗಳು ಇದೇ ನಿಲುವನ್ನು ಉಳಿಸಿಕೊಂಡುಬಂದಿವೆ. ಈ ಸಿದ್ಧಾಂತ ಶಿಕ್ಷಣದಲ್ಲಷ್ಟೇ ಅಲ್ಲ, ಆಡಳಿತ ನ್ಯಾಯಾಂಗ ಹೀಗೆ ಎಲ್ಲಾ ಕ್ಷೇತ್ರಗಳಿಗೂ ವ್ಯಾಪಿಸಿದೆ.



ಪುಟ್ಟ ಗೂಡಿನಲ್ಲಿ
ಮರಿ ಹಕ್ಕಿ ಕಾಯುತ್ತಿದೆ
ಅಮ್ಮ ತರುವ
ಹಾಲ್ದೆನೆಯ ಎಳೆ ಸವಿಗೆ

ಡಾ॥ ಪ್ರಕಾಶ ಗ. ಖಾಡೆ
ಬಾಗಲಕೋಟೆ

ಈ ಸಿದ್ಧಾಂತದ ಪ್ರಕಾರ ಸಮಾಜದ ಅತ್ಯಂತ ಕೆಳಸ್ತರದವರಿಗೆ ಶಿಕ್ಷಣ ಸಂಸ್ಕೃತಿಗಳು ಇಳಿದುಬರದಿರುವುದಕ್ಕೆ ಕಾರಣಗಳನ್ನು ಕಾಲಕಾಲಕ್ಕೆ ಗುರುತಿಸಿ ಅವುಗಳಿಗೆ ಪರಿಹಾರ ಕ್ರಮ ಗಳನ್ನು ಕೈಗೊಳ್ಳಬೇಕಾಗುತ್ತದೆ. ಆದರೆ ಈ ಕುರಿತು ಹೇಳುವುದಾದರೆ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಸಮಾಜ ಮತ್ತು ದೇಶಕ್ಕಾಗಿ ಏನು ಕೊಡುಗೆ ನೀಡಬಲ್ಲರು ಎಂಬುದು ಮುಖ್ಯವಾಗುತ್ತದೆ ಎಂಬುದನ್ನು ಕೆಳಗಿನ ಟೀಕೆಗಳಿಂದ ಗಮನಿಸಬಹುದು :

೧. ಉನ್ನತ ಶಿಕ್ಷಣದ ತತ್ವ ಪಠ್ಯ ರಚನೆಯೂ ಭಾರತದ ಸಾಮಾಜಿಕ ಆರ್ಥಿಕ ಅಗತ್ಯಗಳಿಗೆ ಹಾಗೂ ಸಮಸ್ಯೆಗಳಿಗೆ ಪೂರಕವಾಗಿಲ್ಲ.

೨. ವಿಶ್ವವಿದ್ಯಾನಿಲಯಗಳು ನಡೆಸುವ ಸಂಶೋಧನೆಯು ಸಮಾಜದ ಸಮಸ್ಯೆಗಳಿಗೆ ಸ್ಪಂದಿಸುವ ವಿಷಯಗಳನ್ನು ಕುರಿತವುಗಳಾಗಿಲ್ಲ.

೩. ವಿಶ್ವವಿದ್ಯಾನಿಲಯದ ಬೋಧನೆ, ಬೋಧನಾ ವಿಧಾನ ಮತ್ತು ಅಧ್ಯಯನದ ಕಾರ್ಯಕ್ರಮಗಳು ಅಮೂರ್ತವಾಗಿದ್ದು ಅವು ವಿದ್ಯಾರ್ಥಿಗಳನ್ನು ವಾಸ್ತವ ಪ್ರಪಂಚ, ಅವರ ಸಂಸ್ಕೃತಿ ಮತ್ತು ಜನಗಳಿಂದ ಪ್ರತ್ಯೇಕಿಸಲ್ಪಟ್ಟಿವೆ.

೪. ವಿಶ್ವವಿದ್ಯಾನಿಲಯದ ಬೋಧನೆಯು ಸಂಕುಚಿತವಾಗಿದ್ದು ಶಿಸ್ತಿನ ಹೆಸರಿನಲ್ಲಿ ವಾಸ್ತವ ಜಗತ್ತಿನ ಸಮಸ್ಯೆಗಳನ್ನು ಉಪೇಕ್ಷಿಸಿದೆ. ಆದುದರಿಂದ ಪದವೀಧರರು ಸಮಾಜದಿಂದ ವಿಪರೀತವಾದ ವೆಚ್ಚದಲ್ಲಿ ಶಿಕ್ಷಣ ಪಡೆದಿದ್ದಾಗ್ಯೂ ಸಹ ಉಪಯುಕ್ತವಾದ ಕಾರ್ಯಗಳನ್ನು ಮಾಡಲಾಗಿಲ್ಲ.

೫. ವಿಶ್ವವಿದ್ಯಾನಿಲಯದ ಉನ್ನತ ಶಿಕ್ಷಣವು ಬಹಳ ದುಬಾರಿಯಾಗಿದೆ.

೬. ವಿಶ್ವವಿದ್ಯಾನಿಲಯಗಳು ಬಹುತೇಕ ಉಚ್ಚಸ್ತರದ ವರ್ಗಗಳಿಗೆ ಸೀಮಿತವಾಗಿ, ಶೋಷಿತವರ್ಗದ ಜನಸಮೂಹದಿಂದ ದೂರ ಉಳಿದಿದೆ.

ಮೇಲಿನ ಟೀಕೆಗಳು ವಸ್ತುನಿಷ್ಠವಾದುವು. ಆ ಹಿನ್ನೆಲೆಯಲ್ಲಿ ದಂತ ಗೋಪುರದಲ್ಲಿರುವ ಉನ್ನತ ಶಿಕ್ಷಣವು ರಾಷ್ಟ್ರೀಯ ಬೆಳವಣಿಗೆಯಲ್ಲಿ ತನ್ನದೇ ಆದ ಸ್ಥಾನವನ್ನು ಪಡೆಯಲಿಲ್ಲ. ದೇಶದ ಆರ್ಥಿಕ ಪ್ರಗತಿಯು ಆ ದೇಶದ ಮಾನವ ಸಂಪನ್ಮೂಲ ಹಾಗೂ ಭೌತಿಕ ಸಂಪನ್ಮೂಲಗಳೆರಡನ್ನೂ ಪರಿಣಾಮಕಾರಿಯಾಗಿ ಬಳಸಿಕೊಂಡಾಗ ಮಾತ್ರ ಸಾಧ್ಯವಾಗುತ್ತದೆ. ಆದ್ದರಿಂದ ಪ್ರಾಥಮಿಕ ಸೆಕೆಂಡರಿ ಮತ್ತು ಉನ್ನತ ಶಿಕ್ಷಣದಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಅಗತ್ಯ ಶಿಕ್ಷಣ ನೀಡುವುದರ ಮೂಲಕ ಭೌತಿಕ ಸಂಪತ್ತಿನ ಬಳಕೆಯಾಗಬೇಕು.

ಇಂಥ ಶಿಕ್ಷಣ ಒಳ್ಳೆಯ ಗುಣಮಟ್ಟದ್ದಾಗಿದ್ದು ಅದರ ಪಠ್ಯವೂ ಸ್ಥಳೀಯ ಪರಿಸ್ಥಿತಿಗೆ ಪ್ರಸ್ತುತವಾಗಿರಬೇಕು. ದೇಶದ ಅಭಿವೃದ್ಧಿಯಲ್ಲಿ ಶಿಕ್ಷಣಕ್ಕೆ ಶೋಷಿತ ವರ್ಗದ ಸಂಪೂರ್ಣ ವಿಮೋಚನೆಯನ್ನು ಉಂಟುಮಾಡುವಂತಹ ಸಾಮರ್ಥ್ಯವಿರಬೇಕು. ಆದ್ದರಿಂದ ವಿಶ್ವವಿದ್ಯಾನಿಲಯವು ಬೆಳವಣಿಗೆಯಲ್ಲಿ ಬಹಳ ಪ್ರಮುಖವಾಗಿದ್ದು ಇದು ತನ್ನ ಶಿಕ್ಷಣದಲ್ಲಿ ಸ್ತ್ರೀ–ಪುರುಷರಿಬ್ಬರಿಗೂ ಸಾಂಪ್ರದಾಯಿಕ ಶಿಕ್ಷಣವನ್ನು ನೀಡುತ್ತದೆ. ಈ ಶಿಕ್ಷಣವು ಸಮುದಾಯದ ಒಳಿತಿಗೆ ಅನುಗುಣವಾಗಿ ಸಾಮಾಜಿಕ ಬೆಳವಣಿಗೆಯ ಸಾಧನ ಕೂಡ ಆಗಿದೆ. ಇದು ದೇಶದ ನಾಯಕರನ್ನು ತಯಾರುಮಾಡುವುದಲ್ಲದೆ ದೇಶದ ಬೆಳವಣಿಗೆಯ ಮೇಲೆ ಪ್ರಭಾವ ಬೀರುವ ನುರಿತ ವ್ಯಕ್ತಿಗಳನ್ನು ಸಹ ತಯಾರು ಮಾಡುತ್ತದೆ. ಸಾಂಸ್ಕೃತಿಕ ಸಂಸ್ಥೆಯಾಗಿ ಇದು ಕ್ರಿಯೆ ಮತ್ತು ಪ್ರತಿಕ್ರಿಯೆಯಲ್ಲಿ ಸಮತೋಲನವನ್ನು ಹೊಂದಿರಬೇಕು. ಈ ಸಮತೋಲನವು ಧಾರ್ಮಿಕ, ಭೌತಿಕ, ಮಾನವೀಯತೆ ಮತ್ತು ವಿಜ್ಞಾನಗಳ ಸಮತೋಲನವನ್ನು ಹೊಂದಿರಬೇಕು. ಇದು ದೇಶದ ಸ್ಥಾನಮಾನವನ್ನು ಪ್ರತಿಬಿಂಬಿಸುವುದಲ್ಲದೆ ವ್ಯಕ್ತಿಗಳೂ ತಮ್ಮ ಸ್ವಂತ ಸಂಸ್ಕೃತಿಯನ್ನು ಬಿಂಬಿಸುವಂತಿರಬೇಕು.

ಉನ್ನತ ಶಿಕ್ಷಣವು ವ್ಯಕ್ತಿಗೆ ಬದುಕಿನ ಚಲನಶೀಲತೆಯಲ್ಲಿ ಒಳಗೊಳ್ಳುವ ಐತಿಹಾಸಿಕ ಪ್ರಕ್ರಿಯೆಯನ್ನು ಪರಿಚಯಿಸುವುದರ ಮೂಲಕ ಆತನ ಇತಿಮಿತಿಗಳನ್ನು ಅವನಿಗೆ ತೆರೆದು ತೋರಿಸುವಂತಿರಬೇಕು. ಸ್ವಂತ ವ್ಯಕ್ತಿತ್ವದ ಇತಿಮಿತಿಗಳ ಅರಿವು ವ್ಯಕ್ತಿಯಲ್ಲಿ ಸಹಜವಾಗಿಯೇ ವಿನಯವನ್ನು ಉಂಟು ಮಾಡುತ್ತದೆ. ಈ ವಿನಯ ಬದುಕಿನ ವಾಸ್ತವವಾದಿ ಸ್ವರೂಪವನ್ನು ಆತನಿಗೆ ಸಾಕ್ಷಾತ್ಕಾರ ಮಾಡಬಲ್ಲುದಾದ್ದರಿಂದ ಆತ ಸಾಮಾಜಿಕವಾಗಿ ಜಾಗೃತನಾಗಿ ಸಮಾಜದ ಏಳಿಗೆಗೆ ಶ್ರಮಿಸಲು ಸಾಧ್ಯ. ಈ ದೃಷ್ಟಿಯಿಂದ ನೋಡಿದಾಗ ನಮ್ಮಲ್ಲಿ ಜನಪ್ರಿಯವಾಗಿರುವ 'ವಿದ್ಯಾದದಾತಿ ವಿನಯಂ' ಎಂಬುದು ಅಪ್ರಸ್ತುತ ವಾಗುತ್ತಿದೆ. ಏಕೆಂದರೆ ಇಂದು ವಿದ್ಯಾವಂತರಾದವರು ಆತ್ಮವಂಚಕರಾಗಿದ್ದಾರೆ. ದುರ್ವಿನೀತರಾಗಿದ್ದಾರೆ. ಪ್ರಸ್ತುತ ಸಮಾಜ ವ್ಯವಸ್ಥೆಯೊಂದಿಗೆ ರಾಜಿಮಾಡಿಕೊಳ್ಳುವ ಇಂಥ ಹುಂಬರಿಂದಾಗಿ ಸಮಾಜ ವ್ಯವಸ್ಥೆ ಇನ್ನಷ್ಟು ಸ್ಥಿರವಾಗುತ್ತದೆ. ಅದು ಜನಪರವಾದ ಸೃಜನಶೀಲ ಚಟುವಟಿಕೆಗಳನ್ನು, ವ್ಯಕ್ತಿಗಳನ್ನು ಹತ್ತಿಕ್ಕುತ್ತಿದೆ.

ಶಿಕ್ಷಣದ ಖಾಸಗೀಕರಣದಿಂದಾಗಿ ಇದು ವ್ಯಾಪಾರೀಕರಣಗೊಂಡಿದ್ದು ಲಾಭದ ದೃಷ್ಟಿಯಿಂದ ನಡೆಸುತ್ತಿರುವ ವ್ಯವಸ್ಥೆಯಾಗಿದೆ ವಿಶ್ವಮಾರುಕಟ್ಟೆ ಅರ್ಥ ವ್ಯವಸ್ಥೆಯ ಅಗತ್ಯಗಳಿಗನುಗುಣವಾಗಿ ಉನ್ನತ ಶಿಕ್ಷಣದ ಗೊತ್ತು ಗುರಿಯಿಲ್ಲದೆ ಬೆಳೆಯುತ್ತಿರುವ ಅಸಮತೋಲನ ಬೆಳವಣಿಗೆ ಉನ್ನತ ಶಿಕ್ಷಣದ ಮುಗ್ಗಟ್ಟಿಗೆ ಕಾರಣವಾಗುತ್ತಿದೆ. ಇಂತಹ ಪರಿಸ್ಥಿತಿಯು ಖಾಸಗಿಯವರು ಶಿಕ್ಷಣ ಕ್ಷೇತ್ರಗಳಲ್ಲಿ ಎಗ್ಗಿಲ್ಲದ ಲಾಭ ಮಾಡಿಕೊಳ್ಳಲು ಅವಕಾಶ ಉಂಟುಮಾಡಿಕೊಳ್ಳುತ್ತಿದೆ.

ಭಾರತದ ಪ್ರಜಾಪ್ರಭುತ್ವ ಮತ್ತು ಸಂಸದೀಯ ಚಿಂತನೆಗಳು ಹಲವರಿಂದ ಪ್ರಭಾವಿತವಾಗಿವೆ. ಭಾರತದ ಸಂವಿಧಾನದ ನಿರ್ಮಾಪಕರು ಭಾರತದಲ್ಲಿ ಬಲಿಷ್ಠವಾದ ಆಧುನಿಕ ರಾಜ್ಯವೊಂದನ್ನು ಮತ್ತು ಪಾರ್ಲಿಮೆಂಟರಿ ಪದ್ಧತಿಯ ಸರ್ಕಾರವನ್ನು ಸ್ಥಾಪಿಸಿದರು. ಈ ಸಂಸದೀಯ ಪ್ರಜಾಪ್ರಭುತ್ವ ಕಾರ್ಯ ನಿರ್ವಹಣೆಯ ಲೋಪಗಳು ಹಲವಾರು ಸಮಸ್ಯೆಗಳನ್ನು ಹುಟ್ಟುಹಾಕಿತು. ಆದ್ದರಿಂದ ಬದಲಾಗುತ್ತಿರುವ ಉನ್ನತ ಶಿಕ್ಷಣವಲಯದಲ್ಲಿ ವಿದ್ಯಾರ್ಥಿಗಳ ಚಟುವಟಿಕೆ ಮತ್ತು ಚಳುವಳಿಗಳ ಪಾತ್ರ ಬದಲಾಗಬೇಕಿದೆ. ವಿದ್ಯಾರ್ಥಿ ಸಂಘಟನೆಗಳು ವಿಶ್ವವಿದ್ಯಾನಿಲಯ, ಕಾಲೇಜುಗಳ ಅಧ್ಯಾಪಕ ಸಂಘಗಳು ಮತ್ತು ರಾಜಕೀಯ ಪಕ್ಷಗಳು, ಸಂಘಟನೆಗಳು ಮತ್ತು ಪತ್ರಿಕೆಗಳು ಈ ವಲಯವು ಅನುಭವಿಸುತ್ತಿರುವ ಸಮಸ್ಯೆಗಳನ್ನು ಕುರಿತು ಹೆಚ್ಚು ಗಮನ ನೀಡಬೇಕಿದೆ.

ಆದುದರಿಂದಾಗಿ ಉನ್ನತ ಶಿಕ್ಷಣವು ಸಂಪೂರ್ಣವಾಗಿ ಸುಧಾರಣೆಗೊಂಡು ಮತ್ತು ವೈಜ್ಞಾನಿಕ ಆಶಯಗಳನ್ನು ಹೊಂದಿ ಸಮಾಜವನ್ನು ಬದಲಾವಣೆ ಮಾಡುವ ಸಾಧನವಾಗಬೇಕು ಹಾಗೂ ಪ್ರಜಾಪ್ರಭುತ್ವೀಕರಣ, ಜಾತ್ಯತೀತತೆ ಮತ್ತು ದೇಶಭಕ್ತಿಯನ್ನು ಬೆಳೆಸುವ ಸಾಧನವಾಗಬೇಕು. ಅಲ್ಲದೆ ಶಿಕ್ಷಣವನ್ನು ವೃತ್ತಿ ಆಧಾರಿತ ಮತ್ತು ಮಾನವ ಸಂಪನ್ಮೂಲದ ಯೋಗ್ಯ ಬೆಳವಣಿಗೆಗೆ ಬುನಾದಿಯನ್ನು ಹಾಕಬೇಕು. ಜಾತಿ, ಭಾಷೆ, ಧರ್ಮ ಇತ್ಯಾದಿ ವಿಚಾರಗಳಿಂದ ಉದ್ಭವವಾಗುವ ಭಿನ್ನತೆ, ದ್ವೇಷ ಇತ್ಯಾದಿಗಳು ವರ್ಗ ಹಿತಾಸಕ್ತಿಗಳಾಗಿರುತ್ತವೆ. ಇವುಗಳನ್ನು ಮೀರಿ ನಿಂತ ಚಳುವಳಿಗಳು ಜಾತ್ಯತೀತ ಪ್ರಜ್ಞೆಯನ್ನು ಮೂಡಿಸುತ್ತವೆ. ಇಂತಹ ವಿದ್ಯಾರ್ಥಿ ಹೋರಾಟಗಳನ್ನು ವ್ಯರ್ಥ ಹಾಗೂ ಅನುತ್ಪಾದಕವೆಂದು ತಳ್ಳಿಹಾಕುವಂತಿಲ್ಲ.

ಡಾ॥ ಸಿದ್ದಲಿಂಗಸ್ವಾಮಿ
ನಂ. ೩೯೦, ೧೧ನೇ 'ಬಿ' ಅಡ್ಡರಸ್ತೆ
ವಿನಾಯಕ ಬಡಾವಣೆ, ೯ನೇ ಬ್ಲಾಕ್
೨ನೇ ಹಂತ, ನಾಗರಭಾವಿ, ಬೆಂಗಳೂರು – ೫೬೦ ೦೭೨




# ಗ್ರಾಮದರ್ಶನ

■ ಕೆ. ಪಿ. ಸ್ವಾಮಿ

ಊರಿಗೆ ಹೋದಾಗ ಸ್ವಲ್ಪ ಬಿಡುವು ದೊರೆತರೆ, ಅಥವಾ ಬಿಡುವು ಮಾಡಿಕೊಂಡು ಹೆಗಲಿಗೆ ಜೋಳಿಗೆ ನೇತು ಹಾಕಿಕೊಂಡು ಅಕ್ಕಪಕ್ಕದ ಗ್ರಾಮಗಳಿಗೆ ನಡೆಯುತ್ತ ಹೋಗಿಬರುವುದನ್ನು ಹವ್ಯಾಸವಾಗಿ ಮಾಡಿಕೊಂಡಿದ್ದೇನೆ. ಈ ನಡೆದಾಟದಿಂದ ಕೈಮೇಲೆ ಫಲವನ್ನೇನೂ ನಿರೀಕ್ಷಿಸುವುದಿಲ್ಲ. ಎಲ್ಲ ನಗರಗಳ ಬೇರುಗಳು ಈ ಗ್ರಾಮಗಳಲ್ಲವೆ ಎಂಬ ನಿರೀಕ್ಷೆಯಿಂದ ಕೈಕೊಳ್ಳುವ ತಿರುಗಾಟ ಅದು.

ನಗರಗಳಲ್ಲಿ ಹುಟ್ಟಿ ಬೆಳೆಯುವ ಮಕ್ಕಳಿಗೆ ನಮ್ಮ ಗ್ರಾಮಗಳು ಹೀಗಿರುತ್ತವೆ ಎಂದರೆ ಅರ್ಥವಾಗುವುದಿಲ್ಲ. ಹೌದೆ? ಹೀಗಿರುತ್ತವೆಯೆ? ಎಂದು ಮರುಪ್ರಶ್ನೆ ಹಾಕಬಹುದು. ತಮ್ಮದೇ ಜಗತ್ತಿನಿಂದ ಎಚ್ಚೆತ್ತಾಗ ಮಕ್ಕಳಿಗೆ ನಮ್ಮ ಗ್ರಾಮಗಳ ಪಡಿಪಾಟಲು ಆಶ್ಚರ್ಯವಾಗಬಹುದು!

ನಮ್ಮ ನಗರಗಳಂತಲ್ಲದೆ ಗ್ರಾಮಗಳು ಇಂದಿನ, ಹಿಂದಿನ ಮತ್ತು ಅದಕ್ಕೂ ಹಿಂದಿನ ಶತಮಾನಗಳಲ್ಲಿ ಜೀವ ಹಿಡಿದುಕೊಂಡು ಬದುಕುತ್ತಿವೆ ಎಂದರೆ ಗಾಬರಿ ಬೀಳಬೇಕಾಗಿಲ್ಲ. ನಗರಗಳಂತೆ ಗ್ರಾಮಗಳಿಗೆ ಸ್ವಲ್ಪವೇ ಅವಧಿಯಲ್ಲಿ ಹೊಸ ರೂಪ ತಳೆದು ನಿಲ್ಲುವ ಅವಕಾಶವಿಲ್ಲ. ಗ್ರಾಮಗಳು ನಿಧಾನಕ್ಕೆ ಬದಲಾಗುವಂಥವು.

ಗ್ರಾಮ ಸಂಸ್ಕೃತಿಯನ್ನು ಅವರು ತಮ್ಮದೇ ರೀತಿಯಲ್ಲಿ ಉಳಿಸಿ ಪೋಷಿಸಿಕೊಂಡು ಬಂದಿದ್ದಾರೆ. ಗುಡಿಸಿಲುಗಳಿಂದ ಮುಂದೆ ಹೋಗದವರಿದ್ದಾರೆ. ನಾಡ ಹೆಂಚಿನ ಮನೆಗಳವರು, ಮನೆಯ ಅರ್ಧಕ್ಕೆ ಮಂಗಳೂರು ಹೆಂಚು ಹೊದಿಸಿಕೊಂಡವರು, ಸಂಪೂರ್ಣ ಹೊದಿಸಿದವರು, ಜೊತೆಗೆ ಅಲ್ಲಲ್ಲಿ ಒಂದೊಂದು ತಾರಸಿ ಮನೆಗಳವರಿದ್ದಾರೆ. ತಾರಸಿ ಮನೆಗಳ ಮುಂದೆಯೂ ಕುಳಿತು ಮಾತಾಡಲು ಜಗಲಿ ಅಥವಾ ಪಡಸಾಲೆ, ದನಕರು ಕಟ್ಟುವ ಕಂಬಗಳು, ಮನೆಯ ಒಂದು ಭಾಗದಲ್ಲಿ ಕುರಿಗಳ ಕೊಟ್ಟಿಗೆ, ಆಡಿನ ಗೊತ್ತುಗಳು, ಮನೆಯ ಮುಂದೆ ಹಳೆಯ ಸೈಕಲ್, ಮೋಪೆಡ್ ಅಥವಾ ಮೋಟಾರುಬೈಕು ಕಾಣಬಹುದು.

ಕೆಲವು ಮನೆಗಳ ಮುಂದೆ ಸಣ್ಣ ಶೌಚಾಲಯ ಕಟ್ಟಿಸಿಕೊಂಡವರಿದ್ದಾರೆ. ಅನೇಕ ಮನೆಗಳ ಮೇಲೆ ಟಿ.ವಿ. ಅಂಟೆನಾಗಳಿವೆ, ಕೇಬಲ್ ನೆಟ್‌ವರ್ಕ್ ಸಹ ಉಂಟು. ಇವೆಲ್ಲ ಬದಲಾವಣೆಗಳು ಎನ್ನಬಹುದು.

ಗುಡಿಸಿಲುಗಳೇ ಹೋಟೇಲುಗಳು! ಕೆಲವರು ಬೆಂಚಿನ ಮೇಲೆ ಮತ್ತೆ ಕೆಲವರು ಕುಕ್ಕುರುಗಾಲಿನ ಮೇಲೆ ಕುಳಿತು ಕಾಫಿ, ಟೀ ಕುಡಿಯುತ್ತಾರೆ. ಈ ಹೋಟೇಲುಗಳು ರಾಜಕೀಯ ಚರ್ಚೆ ನಡೆಯುವ ಸ್ಥಳಗಳು, ಇವು ಕೆಲವೊಮ್ಮೆ ಘರ್ಷಣಾ ಕಣವಾಗುವುದೂ ಅಪರೂಪವಲ್ಲ!

ಎದುರಿಗೆ ಸಿಕ್ಕಿದವರನ್ನು ಮಾತಾಡಿಸಿದರೆ, ಅವರ ಬಗ್ಗೆ ವಿಚಾರಿಸಿದರೆ ಅವರಿಗೆ ಸಂತೋಷವಾಗುತ್ತದೆ. ನೀವು ಅಪರಿಚಿತರಾದರೂ ತೆರೆದ ಮನಸ್ಸಿನಿಂದ ಉತ್ತರಿಸುತ್ತಾರೆ. ಕೆಲವೊಮ್ಮೆ ನಿಟ್ಟುಸಿರು ಚೆಲ್ಲುತ್ತಾರೆ. ಅವರ ಬದುಕಿನ ಬವಣೆಯಲ್ಲಿ ಸಣ್ಣಪುಟ್ಟ ಬಯಕೆಗಳೂ ಈಡೇರಲಿಲ್ಲ ಎಂಬ ನಿಟ್ಟುಸಿರುಗಳು ಅವು. ನಿಮ್ಮ ಬಗ್ಗೆ ವಿಚಾರಿಸಿ ತಿಳಿದುಕೊಳ್ಳುತ್ತಾರೆ. ನೀವು ಹೀಗೆ ಸುಮ್ಮನೆ ಗ್ರಾಮದರ್ಶನಕ್ಕೆಂದು ಬಂದವರು ಎಂದು ತಿಳಿದು ಅವರಿಗೆ ಆಶ್ಚರ್ಯವಾಗದೆ ಇರುವುದಿಲ್ಲ. ಒಂದು ಕ್ಷಣ ನಿಮ್ಮ ಮೇಲೆ ಅವರಿಗೆ ಆತ್ಮೀಯ ಭಾವನೆ ಉಂಟಾಗುತ್ತದೆ. ತಮ್ಮ ಮನೆಯ ಒಂದೆರಡು ಗುಟ್ಟುಗಳನ್ನು ರಟ್ಟುಮಾಡುತ್ತಾರೆ. ದಾಯಾದಿಗಳ ಕಿರುಕುಳ, ಮಕ್ಕಳು ಕುಡುಕರಾಗಿರುವುದು, ಮುದುಕ ತಂದೆ – ತಾಯಿಯರನ್ನು ಇಳಿ ವಯಸ್ಸಿನಲ್ಲಿ ಬೇರೆ ಇರಿಸಿರುವ ಮಕ್ಕಳು, ಅದಕ್ಕೆ ಶಾಮೀಲಾಗಿರುವ ಸೊಸೆ – ಮುಂತಾದ ಗುಟ್ಟಿನ ವಿಚಾರಗಳು ಅವು.

ಈಗ ರೈತರನ್ನು ಬರಿಯ ನೇಗಿಲ ಯೋಗಿಗಳು ಎನ್ನುವಂತಿಲ್ಲ. ಅವರ ಮಧ್ಯೆ ಕೆಲವು 'ಟ್ರ್ಯಾಕ್ಟರ್ ಯೋಗಿ'ಗಳೂ ಇದ್ದಾರೆ. ಇದೂ ಅಭಿವೃದ್ಧಿಯ ಗುರುತು.

ರೈತರು ಹಿಂದಿನಂತೆ ಸಾಮೆ, ನವಣೆ, ಹಾರಕ – ಮುಂತಾದ ಕಿರುಧಾನ್ಯಗಳನ್ನು ಬೆಳೆಯುವುದಿಲ್ಲ. ಅಂತೆಯೇ ಎಲ್ಲರೂ ಅವರೆ, ತೊಗರಿ, ತಡಗುಣಿ – ಮುಂತಾದ ಸಾಲು ಸಾಲು ಧಾನ್ಯಗಳನ್ನು ಬೆಳೆಯುವುದಿಲ್ಲ. ಇತ್ತೀಚಿನ ಕೆಲವು ವರ್ಷಗಳಲ್ಲಿ ಇವೆಲ್ಲ ಹೇಗಿದ್ದವು ಎಂದು ಹಳ್ಳಿಯ ಜನರೂ ಮರೆತು ಹೋಗಿರಬಹುದು!

ಈಗ ರೈತರ ಒಲವು ನಗದು ಬೆಳೆಗಳ ಕಡೆಗೆ – ಮುಸುಕಿನ ಜೋಳ, ಟೊಮ್ಯಾಟೋ, ಹುರುಳಿಕಾಯಿ, ಹೀರೇಕಾಯಿ, ಬೆಂಡೆ, ಬದನೆ, ಮೆಣಸಿನ ಕಾಯಿ ಹಾಗೂ ಬಗೆಬಗೆಯ ಸೊಪ್ಪುಗಳು ಮತ್ತು ಹೂಗಳನ್ನು ಬೆಳೆಸುತ್ತಾರೆ. ತಾವೇ ಸಂತೆಗೆ ಒಯ್ದು ಮಾರಾಟ ಮಾಡುತ್ತಾರೆ. ಮಧ್ಯವರ್ತಿಗಳ ಕಾಟವಂತೂ ಇದ್ದೇಇರುತ್ತದೆ. ತಾವು ಮೋಸಹೋದದ್ದು ತಿಳಿದಾಗ, ಮಾರುಕಟ್ಟೆಯಲ್ಲಿ ಧಾರಣೆ ಇಳಿದಾಗ ಎಂದಿನಂತೆ ಥೂ! ಇವನ ಬದುಕಿನ ಮನೆ ಹಾಳಾಗ ಎಂದು ನಿಟ್ಟುಸಿರು ಬಿಡುತ್ತಾರೆ. ಅಷ್ಟು ಮಾತ್ರವಲ್ಲದೆ ತಮ್ಮ ನೂರು ತಾಪತ್ರಯಗಳ ಮಧ್ಯೆ ಚೆಲ್ಲಾಪಿಲ್ಲಿಯಾಗುತ್ತಿರುವ ಬದುಕನ್ನು ಕಟ್ಟಿ ನಿಲ್ಲಿಸಲು ಪಟ್ಟು ಸಡಿಲಿಸದೆ ಪ್ರಯತ್ನಿಸುತ್ತಾರೆ.

ಮೋಟಾರು ಬೈಕಿನ ಹಿಂದೆ ಹಸಿರು ಹುಲ್ಲು ಹೊರೆ ಕಟ್ಟಿಕೊಂಡು ಗುಡುಗುತ್ತ ಬರುವ ಯುವ ರೈತರೊಂದಿಗೆ ಮಾತಾಡಿದರೆ, ಆತ ಡಿಗ್ರಿ ಮುಗಿಸಿದವನು, ಉದ್ಯೋಗ ಅರಸುವಾತ ಅಥವಾ ಓದನ್ನು ಅರ್ಧಕ್ಕೆ ನಿಲ್ಲಿಸಿ ರೈತನಾದವನು – ಹೀಗೆ ಹೊಸ ಮಾಹಿತಿ

ಸಿಕ್ಕಬಹುದು. ಹಾಗೆಯೇ ಸೈಕಲ್ಲುಗಳಲ್ಲಿ ಕಿಣಿಕಿಣಿ ಸದ್ದು ಮಾಡುತ್ತ ಶಾಲೆಗೆ ಹೊರಟ ಹುಡುಗಿಯರನ್ನು ಕಾಣಬಹುದು ! ಕೆಲವು ವರ್ಷಗಳ ಹಿಂದೆ ಇಂಥ ದೃಶ್ಯವನ್ನು ಕಲ್ಪಿಸಿಕೊಳ್ಳುವುದೂ ಅಸಾಧ್ಯವಾಗಿತ್ತೆನ್ನಬಹುದು.

ನೀರು ತುಂಬಿದ ಕೆರೆಯಲ್ಲಿ ಸಾವಿರಾರು ಮೈಲುಗಳಾಚೆಯಿಂದ ವಲಸೆ ಬಂದಿರುವ ಬಗೆಬಗೆಯ ಹಕ್ಕಿಗಳು ಸಂತೋಷವಾಗಿ ವಿಹರಿಸುವುದನ್ನು ನೋಡಿದಾಗ, ಛೇ, ಪಕ್ಷಿ ವೀಕ್ಷಕರೇ ಇಲ್ಲದೆ ಇಂಥ ಒಂದು ಸೊಬಗಿನ ದೃಶ್ಯ ತನ್ನಷ್ಟಕ್ಕೆ ಕಳೆದುಹೋಗುತ್ತಿದೆಯಲ್ಲ ಎನ್ನಿಸಬಹುದು. ರೈತರಿಗೆ ಅಂಥ ದೃಶ್ಯವನ್ನು ನಿಂತು ನೋಡುವಷ್ಟು ವ್ಯವಧಾನವಿಲ್ಲ. ಆ ಹಕ್ಕಿಗಳು ರೈತರ ಮಿತ್ರರ ಜಾತಿಗೆ ಸೇರಿದವು. ಅವರು ತಮ್ಮಷ್ಟಕ್ಕೆ ಗದ್ದೆ ಉಳುವಾಗ, ಕಳೆ ಕೀಳುವಾಗ ಆ ಹಕ್ಕಿಗಳು ಅವರ ಸುತ್ತಲೂ ಹಾರಾಡುತ್ತ ಮೇವು ಹೆಕ್ಕುತ್ತಿರುತ್ತವೆ.

ಊರ ದೇವರ ಹಬ್ಬ ಉತ್ಸವದ ದಿನಗಳು ಗ್ರಾಮದರ್ಶನಕ್ಕೆ ಒಳ್ಳೆಯ ಸಂದರ್ಭ. ಆಗ ರೈತರ ಸಂಭ್ರಮ, ಸಡಗರಕ್ಕೆ ಮಿತಿ ಇರುವುದಿಲ್ಲ. ಸಾಲ ಮಾಡಿಯಾದರೂ ಹಬ್ಬ ಮಾಡಲೇಬೇಕು. ನೆರೆದ ನೆಂಟರಿಷ್ಟರ ಮುಂದೆ ತಮ್ಮ ದುಗುಡ ದುಮ್ಮಾನ ತೋರಿಸಿಕೊಳ್ಳಲಾರರು. ದೇವರಿಗೆ ಆರತಿ, ಪೂಜೆ ಕುಣಿತ ಮುಂತಾದ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಾರೆ. ಹಬ್ಬದ ಸಂದರ್ಭದಲ್ಲಿಯೇ ನಾಟಕಕ್ಕೆ ಏರ್ಪಾಟಾಗಿದ್ದರೆ ಅದರ ಖದರೇ ಬೇರೆ! ನೆಂಟರಿಷ್ಟರು ನಾಟಕ ನೋಡಿ ಅದರಲ್ಲಿ ಪಾತ್ರವಹಿಸುವ ತಮ್ಮ ಬಂಧುವಿಗೆ ಮುಯ್ಯಿ ಓದಿಸಿದರೇ ಗೌರವ ಹೆಚ್ಚು. ಸಿದ್ಧಪ್ಪಾಜಿ ಚರಿತ್ರೆ, ಮಾದೇಶ್ವರನ ಮಹಿಮೆ, ಭಕ್ತಿ ಭಂಡಾರಿ ಬಸವಣ್ಣ, ಶನಿಮಹಾತ್ಮೆ, ಕುರುಕ್ಷೇತ್ರ – ಇವು ಅವರ ಆಯ್ಕೆಯ ನಾಟಕಗಳು. ನಾಟಕದ ದೆಸೆಯಿಂದ ಸಾಲ ಮಾಡಿ ಕೇದಾರಗೌಳ ರಾಗವನ್ನು ಬಿತ್ತರಿಸುತ್ತ ಓಡಿಯಾಡುವ ಮಂದಿ ಸಿಗುತ್ತಾರೆ.

ಬೇಸಿಗೆ ದಿನಗಳಲ್ಲಿ ಕ್ರಿಕೆಟ್ ಮ್ಯಾಚುಗಳೂ ನಡೆಯುತ್ತವೆ. ಆಟಗಾರರು ಬಿಸಿಲಿನಲ್ಲಿ ಬೆವರು ಸುರಿಸುತ್ತ ಚೆಂಡು ಹಿಡಿಯಲು ಮುಳ್ಳುಗಳನ್ನು ಲೆಕ್ಕಿಸದೆ ಓಡುತ್ತಾರೆ. ಪ್ರೇಕ್ಷಕರ ಗ್ಯಾಲರಿ ಸಿದ್ಧವಾಗಿರುತ್ತದೆ. ಕಮೆಂಟೇಟರು ಮೈಕು ಹಿಡಿದು ಅರಚುತ್ತಾನೆ. ಅಂಪೈರ್ ಔಟ್ ಕೊಟ್ಟರೂ ಕೆಲವು ದಾಂಡಿಗರು ತಕರಾರು ತೆಗೆಯುತ್ತಾರೆ. ಬೇರೆ ಬೇರೆ ಊರುಗಳ ಸ್ಕೂಲ್ ಟೀಮುಗಳು ನೆರೆದಿರುತ್ತವೆ. ಕೆಲವೊಮ್ಮೆ ಜಗಳಗಳಾಗುತ್ತವೆ. ಅರಾಸೆ ಅವರ ಮುಗಿಲಹಳ್ಳಿ ಟೀಮಿನ ನೆನಪು ಕೆಲವರಿಗಾಗಬಹುದು. ಅಂತೂ ಟೂರ್ನಮೆಂಟ್ ನಡೆದೇ ನಡೆಯುತ್ತದೆ!

ಹಳ್ಳಿಗಳು ಹಿಂದೆ ಬಿದ್ದಿವೆ ಎಂದು ಹೇಳಲು ಕಾರಣವಿಲ್ಲ.

ಈಗ ಬಾವಿಗಳಿಂದ ನೀರು ಸೇದುವ ಪರಿಪಾಠ ಕಡಿಮೆಯಾಗುತ್ತಿದೆ. ಬಾವಿಯ ನೀರು ಉಪಯೋಗಕ್ಕೆ ಬಾರದಂತಾಗಿದೆ. ಹೆಂಗಸರು ಬಾವಿಗಳತ್ತ ಸುಳಿಯುವುದಿಲ್ಲ. ಊರ ಬೀದಿಯಲ್ಲಿ ತಲೆಯಮೇಲೊಂದು ಕಂಕುಳಲ್ಲೊಂದು ಬಿಂದಿಗೆ ಹೊತ್ತು ಲಾಗವವಾಗಿ ಸಾಗುವ ಸೊಸೆಯಂದಿರು ಈಗ ನೋಡಸಿಗುವುದಿಲ್ಲ.

ನಜೀರ್ ಸಾಬರ ಕೊಳವೆ ಬಾವಿಗಳು ಸಹ ಹಳತಾಗುತ್ತಿವೆ. ಗ್ರಾಮ ಪಂಚಾಯಿತಿ ವತಿಯಿಂದ ಈಗ ಹಳ್ಳಿಗಳಿಗೆ ನೀರು ಸರಬರಾಜು ಮಾಡಲಾಗುತ್ತದೆ. ವಿದ್ಯುತ್ ಪಂಪಿನ ಮೂಲಕ ನೆಲದಡಿಯ ನೀರು ತೆಗೆದು ಪ್ರತಿಯೊಂದು ಬೀದಿಯಲ್ಲಿ ಸ್ಥಾಪಿಸಿರುವ ತೊಂಬೆಗಳಿಗೆ ತುಂಬಿಸಲಾಗುತ್ತದೆ. ಕೆಲವು ಮನೆಗಳಿಗೆ ನಳದ ಸಂಪರ್ಕವೂ ಇರುತ್ತದೆ. ಅಲ್ಲಿ ಸುರಿದು ಪೋಲಾಗುವ ನೀರಿನ ಬಗ್ಗೆ ಅವರಿಗೆ ಏನೂ ಅನ್ನಿಸುವುದಿಲ್ಲ. ಅದು ಯಾರಪ್ಪನದೂ ಅಲ್ಲ ಸರಕಾರ ಸರಬರಾಜು ಮಾಡುವ ನೀರು ಎಂಬ ಒಣ ಜಂಬ. ನಗರಗಳಿಂದ ಹೋದವರಿಗೆ ಗ್ರಾಮದ ಜನರು ನೀರಿನ ಬಗ್ಗೆ ತೋರಿಸುವ ಅಸಡ್ಡೆಯ ವರ್ತನೆ ನೋಡಿ ಹೊಟ್ಟೆ ಉರಿಯಬಹುದು!

ತಮ್ಮ ಗದ್ದೆಗಳಿಗೆ ಪಂಪಿನಿಂದ ನೀರು ಹಾಯಿಸುವ ರೈತರು ಸಹ


ಹಂದಿ ಜೋಗಯ್ಯ


ಗ್ರಾಮದಲ್ಲಿ ಚಿಂತನೆ


ರಸ್ತೆಯಲ್ಲಿ ಕಣ

ಪೋಲಾಗುವ ನೀರಿನ ಬಗ್ಗೆ ಕೇರ್ ಮಾಡುವುದಿಲ್ಲ. ಜಲ ನಮ್ಮ ಭೂಮಿಯದು, ನಮ್ಮದೇ ಆಸ್ತಿ ಎಂಬ ನಂಬಿಕೆ ಅವರದು – ನೀರು ಪೋಲು ಮಾಡುವುದಕ್ಕೆ ಅದೂ ಒಂದು ಕಾರಣ.

ಆದರೆ ಯಾವುದಾದರೂ ಕಾರಣದಿಂದ ನಾಲ್ಕೈದು ದಿನ ಕರೆಂಟು ಕೈ ಕೊಟ್ಟಾಗ ಅವರು ಮತ್ತೆ ನಜೀರ್ ಸಾಬರ ಕೊಳವೆ ಬಾವಿಗಳತ್ತ ಹೋಗುತ್ತಾರೆ!

ರೈತರು ಬೆಳೆದ ಭತ್ತ, ರಾಗಿ, ಎಳ್ಳು ಮುಂತಾದುವನ್ನು ರಸ್ತೆಗಳ ಮೇಲೆ ಒಕ್ಕಣೆ ಮಾಡಿಕೊಳ್ಳುತ್ತಾರೆ. ಹಿಂದಿನಂತೆ ಕಣಗಳಲ್ಲಿ ಒಕ್ಕಣೆ ಮಾಡುವುದಕ್ಕಿಂತ ಹೆಚ್ಚು ರೇಜಿಗೆ ಕೆಲಸ ಅದು. ಗ್ರಾಮಗಳ ಬದಲಾವಣೆಯ ಸಂಕೇತವಾಗಿ ಕಣ ಸಂಸ್ಕೃತಿ ಮಾಯವಾಗುತ್ತಿದೆ. ಮೆದೆಗಳೂ ಕಾಣಿಸುವುದಿಲ್ಲ.

ಕೆಲವು ಹಳ್ಳಿಗಳಲ್ಲಿ ಒಂದೆರಡು ಕಡೆ ಇತ್ತೀಚೆಗೆ ಮೃತರಾದವರ ಭಾವಚಿತ್ರ ವನ್ನು ದೊಡ್ಡದು ಮಾಡಿಸಿ 'ಭಾವಪೂರ್ಣ ಶ್ರದ್ಧಾಂಜಲಿ'ಯ ಫ್ಲೆಕ್ಸಿ ನೇತು ಹಾಕಿರುತ್ತಾರೆ. ಬದುಕಿದ್ದಾಗ ಆ ವ್ಯಕ್ತಿಯನ್ನು ಹೇಗೆ ನಡೆಸಿಕೊಂಡಿದ್ದರೂ, ಸತ್ತ ನಂತರ ಆತನನ್ನು ಹೀಗೆ ಸ್ಮರಿಸಿಕೊಳ್ಳುವುದು ಇತ್ತೀಚಿನ ಬೆಳವಣಿಗೆ.

ಗ್ರಾಮಗಳಲ್ಲಿ ಪ್ರತ್ಯೇಕ ಸಾರಾಯಿ ಅಂಗಡಿಗಳಿರುವುದಿಲ್ಲ. ಪೆಟ್ಟಿ ಅಂಗಡಿ ಗಳವರೇ ಸಾರಾಯಿ ಮಾರಾಟ ಮಾಡುತ್ತಾರೆ. ಹಿಂದೊಮ್ಮೆ ಹೊಲ ಕೆಲಸಗಳಲ್ಲಿ ಪರಸ್ಪರ ಸಹಕರಿಸುವ ಮುಯ್ಯಾಳಿನ ಪದ್ಧತಿ ಇತ್ತು. ಅದು ಈಗ ಕಾಣಿಸುತ್ತಿಲ್ಲ. ಕೆಲಸಕ್ಕೆ ಬರುವವರಿಗೆ ಮಧ್ಯಾಹ್ನ ಹೊಟ್ಟೆ ತುಂಬ ಊಟ ನೀಡುವ ರೂಢಿ ಇದೆ. ಅದರ ಜೊತೆಗೆ ಈಗ ಗಂಡಾಳುಗಳಿಗೆ ಸಾರಾಯಿ ಲಂಚ ನೀಡಬೇಕಾಗಿದೆ ಎಂದು ಮಾತಿಗೆ ಸಿಕ್ಕಿದ ರೈತರು ಹೇಳುತ್ತಾರೆ. ಸಾರಾಯಿ ಸಮಾರಾಧನೆ ನಿಂತರೆ, ನಾಳೆಯಿಂದ ಅವರು ಕೆಲಸಕ್ಕೆ ಬಾರದೆ ನಾಪತ್ತೆಯಾಗುತ್ತಾರೆ.

ಅಯ್ಯಪ್ಪನ ಸೀಸನಿನಲ್ಲಿ ಸ್ವಾಮಿಗಳು ಕಪ್ಪು ಬಟ್ಟೆ ಧರಿಸಿ, ಹೆಂಗಸರು ಸುಳಿಯದ ಕಡೆ ಸೇರಿಕೊಂಡು ಮೈಕಿನ ಮೂಲಕ ಅಯ್ಯಪ್ಪನನ್ನು ಕರೆಯುತ್ತಾರೆ. ಆಯಾ ಕೇರಿಯವರು ಅಯ್ಯಪ್ಪ ಭಕ್ತ ಮಂಡಲಿ ಮಾಡಿಕೊಂಡು ಶಬರಿಮಲೆಗೆ ಹೋಗಿ ಬರುತ್ತಾರೆ. ಜಾತಿ ಸದಾ ಜಾಗೃತವಾಗಿರುವುದರ ಸಂಕೇತ ಅದು!

ಕೆಲವು ಊರುಗಳಲ್ಲಿ ಮಾಸ್ತಿಕಲ್ಲುಗಳು, ವೀರಗಲ್ಲುಗಳು ನೋಡಸಿಗುತ್ತವೆ. ಹಿಂದೊಂದು ಕಾಲದಲ್ಲಿ ಶಾಸನ, ವೀರಗಲ್ಲುಗಳ ಅಧ್ಯಯನಕಾರರು ಇವನ್ನು ದಾಖಲೆ ಮಾಡಿಕೊಂಡಿರಬಹುದು. ಊರಿನವರಿಗೆ ಅವುಗಳ ಬಗ್ಗೆ ಹೆಚ್ಚೇನೂ ತಿಳಿದಿರುವುದಿಲ್ಲ. ಅವುಗಳ ಬಗ್ಗೆ ತಿಳಿದುಕೊಂಡು ಅವರಾದರೂ ಏನು ಮಾಡಬೇಕು! ಅವುಗಳ ಬಗ್ಗೆ ವಿಚಾರಿಸಿದರೆ ಊರಿನ ಶಾನುಭೋಗರುಗಳ ಕಡೆಗೆ ಕೈ ತೋರಿಸುತ್ತಾರೆ.

ಗ್ರಹಿಸುವ ಶಕ್ತಿ ಇರುವವರಿಗೆ ಗ್ರಾಮೀಣ ಭಾಷೆಯ ಸೊಗಡು ಒಂದು ಬಗೆಯ ರೋಮಾಂಚನ ನೀಡುವಂಥದ್ದು. ಗ್ರಾಮವಾಸಿಗಳು ತಮ್ಮ ಆಡು ನುಡಿಯೊಂದಿಗೆ ಆಧುನಿಕ ನುಡಿಗಳನ್ನು ಸೇರಿಸಿ ತಮ್ಮ ಮಾತುಗಳಿಗೆ ಒಂದು ಬನಿಯನ್ನು ತಂದುಕೊಳ್ಳಬಲ್ಲರು! ಒಂದು ಭಾಷೆ ಜೀವಂತವಾಗಿರುವುದು ಜನಪದರ ಮಾತುಗಳಲ್ಲಿ ಎಂಬ ಮಾತನ್ನು ನೆನಪು ಮಾಡಿಕೊಳ್ಳಬಹುದು.

ಮಾತಿನ ಸೊಗಡಿನಂತೆಯೇ ಗ್ರಾಮಗಳಲ್ಲಿ ತಿರುಗಾಡಿದಾಗ ಮಣ್ಣಿನ ವಾಸನೆ, ಹಸಿರು ಬೆಳೆಯ ವಾಸನೆ, ಹೂವುಗಳ ವಾಸನೆ, ಎಮ್ಮೆ, ಆಡು, ಕುರಿ, ಹಸುಗಳ ವಾಸನೆ, ಗಂಜಳದ ವಾಸನೆ, ಗೊಬ್ಬರದ ವಾಸನೆ, ದುಡಿಯುವ ಜನರ ಬೆವರಿನ ವಾಸನೆ ಗ್ರಹಿಕೆಗೆ ಬರುತ್ತದೆ.

ಊರಿನ ಮಧ್ಯೆ ಹಾದುಹೋಗುವ ರಸ್ತೆಯಲ್ಲಿ ನಡೆಯುತ್ತಿದ್ದಾಗ ಸಿರಿಗಂಧದ ದಟ್ಟ ಕಂಪು ಒಂದು ಕ್ಷಣ ತಡೆದು ನಿಲ್ಲಿಸಿತು. ನಾಲ್ಕೈದು ಮಂದಿ ಹೆಂಗಸರು ಜಗಲಿಯ ಮೇಲೆ ಕುಳಿತು ಯಾವುದೋ ಕೆಲಸದಲ್ಲಿ ನಿರತರಾಗಿದ್ದರು. ಸಿರಿಗಂಧ ಸೂಸಿದ್ದು ಅಲ್ಲಿಂದಲೇ! ಆಶ್ಚರ್ಯವಾಯಿತು. ಸೆಗಣಿ ಬಾಚುವ ಕೈಗಳಿಗೆ ಸಿರಿಗಂಧದ ಕಂಪು!

ಅತ್ತ ನಾಲ್ಕು ಹೆಜ್ಜೆ ಹಾಕಿದಾಗ ನಾಯಿಯೊಂದು ಮೇಲೆ ಎಗರಲು ತಯಾರಾಗಿ ನಮ್ಮನ್ನು ಅಡ್ಡ ಹಾಕಿತು. ನಿಮ್ಮ ನಾಯಿಗೆ ಒಂದು ಮಾತು ಹೇಳ್ರವ್ವ ತಾಯಂದಿರಾ ಎಂದು ಮೊರೆಯಿಟ್ಟಾಗ ಹೆಂಗಸೊಬ್ಬಳು ಅದಕ್ಕೆ ಛೀಮಾರಿ ಹಾಕಿ ಅದನ್ನು ತೆಪ್ಪಗಿರಿಸಿದಳು.

ಆ ಊರಿನ ಹೆಸರು ಕಾಗೆಪುರ. ಮಳವಳ್ಳಿ ತಾಲ್ಲೂಕಿನ ಒಂದು ಗ್ರಾಮ. ಅದಕ್ಕೂ ಎಂ. ಎಂಬ ಇನಿಶಿಯಲ್ ಇದೆ. ಮಿಕ್ಕರೆ ಎಂಬ ಮತ್ತೊಂದು ಗ್ರಾಮದ ಹೆಸರಿನ ಇನಿಶಿಯಲ್ ಅದಕ್ಕೆ!

ಆ ಹೆಂಗಸರು ಗಂಧದಕಡ್ಡಿಗಳನ್ನು ಪ್ಯಾಕು ಮಾಡುತ್ತಿದ್ದರು. ನಗರಗಳ ಹೆಂಗಸರು ಮಾಡುತ್ತಿದ್ದ ಕೆಲಸ ಈಗ ಹಳ್ಳಿ ಹೆಂಗಸರ ಪಾಲಿಗೆ ಬಂದಿದೆ. ಇದರ ಕಾರಣ ಏನೇ ಇದ್ದರೂ ಹಳ್ಳಿ ಹೆಂಗಸರ ಪಾಲಿಗೆ ಇದೊಂದು ಹೊಸ ಅವಕಾಶ. ಆ ಹೊಸ ಕೆಲಸಕ್ಕೆ ವೇಳೆಯ ನಿರ್ಬಂಧವಿಲ್ಲ. ತಮ್ಮ ಮನೆ, ಕೊಟ್ಟಿಗೆ ಕೆಲಸ, ಹಾಲು ಕರೆಯುವ ಮತ್ತು ಅಡಿಗೆ ಕೆಲಸ ಮುಗಿದ ನಂತರ ಆರಾಮವಾಗಿ ಪ್ಯಾಕಿಂಗ್ ಕೆಲಸಕ್ಕೆ ಬರಬಹುದು. ತಮಾಷೆ ಮಾಡಿಕೊಳ್ಳುತ್ತ ತಮ್ಮಿಂದ ಸಾಧ್ಯವಾದಷ್ಟು ಕೆಲಸ ಮಾಡಿ, ಮಧ್ಯೆ ಮನೆಗೂ ಹೋಗಿ ಗಂಡಸರಿಗೂ ಊಟ ನೀಡಿ, ಮತ್ತೆ ಬಂದು ಕೆಲಸ ಮುಂದುವರಿಸಬಹುದು. ದಿನಕ್ಕೆ ೬೦ರಿಂದ ೮೦ ರೂ. ಸಂಪಾದನೆ. ಮಹಿಳೆಯರ ಸಬಲೀಕರಣದ ಒಂದು ಮುಖ ಇದು. ಈ ಸಬಲೆಯರು ಗಂಡಂದಿರಿಗೆ ಸಾಲ ನೀಡಲು ಮರೆಯದೆ ಅಸಲು ವಸೂಲು ಮಾಡುವವರು!

ಗ್ರಾಮಗಳಲ್ಲಿ ಮಹಿಳೆಯರ ಸಬಲೀಕರಣದ ಮತ್ತೊಂದು ಮುಖವೆಂದರೆ ಪ್ರತಿಯೊಂದು ಕೇರಿಯಲ್ಲಿ ಚಟುವಟಿಕೆ ನಡೆಸುವ ಸ್ತ್ರೀ ಶಕ್ತಿ ಬ್ಯಾಂಕುಗಳು. ಬೆಳಗಿನ ಬಿಸಿಲಿನಲ್ಲಿ ಹತ್ತಿಪ್ಪತ್ತು ಮಹಿಳೆಯರು ವೃತ್ತಾಕಾರವಾಗಿ ಕುಳಿತು ದುಂಡುಮೇಜಿನ ಪರಿಷತ್ತು ನಡೆಸುತ್ತಿದ್ದಾರೆಂದರೆ, ಅವರ ಬ್ಯಾಂಕಿನ ವ್ಯವಹಾರ ನಡೆಯುತ್ತಿದೆ ಎಂದು ಅರ್ಥ. ಗಂಡಸರ ಅನಾವಶ್ಯಕ ಎಗರಾಟ ಕಡಿಮೆ ಯಾಗಲು ಈ ಸ್ತ್ರೀ ಶಕ್ತಿ ಕಾರಣ! ಇದರಲ್ಲಿ ಐದು, ಹತ್ತು, ಇಪ್ಪತ್ತು ಸಾವಿರ ರೂ. ವರೆಗೆ ಸಾಲ ಸಿಗುತ್ತದೆ. ನಿಗದಿತ ಬಡ್ಡಿ ಮತ್ತು ಅಸಲು ಸಂದಾಯ ಮಾಡಬೇಕು. ಈ ಹಣದಿಂದ ಹಸು, ಎಮ್ಮೆ, ಕುರಿ, ಆಡು, ಖರೀದಿಸಿ ಸಾಕಿ ಮಾರಾಟ ಮಾಡಬಹುದು. ಮನೆಯ ಹೊರೆಯ ಒಂದು ಭಾಗ ಇವರ ಹೆಗಲ ಮೇಲೆ.

ಹೆತ್ತವಳನ್ನು ಅವ್ವ, ಅವ್ವನ ಅವ್ವನನ್ನು ಅಮ್ಮ ಎನ್ನುತ್ತಿದ್ದ ಪರಿಪಾಟ, ಕಿರಿಯರನ್ನು ಏನ್ ಮಗಾ, ಯಾವೂರು ಮೊಗಾ ಎಂದು ವಿಚಾರಿಸುತ್ತಿದ್ದ ಸಂಸ್ಕೃತಿ ಕ್ರಮೇಣ ಮಾಯವಾಗುತ್ತಿದೆ. ಪಟ್ಟಣಗಳು ಕ್ಷಿಪ್ರಗತಿಯಲ್ಲಿ ಬದಲಾಗುವಾಗ, ಹಳ್ಳಿಗಳು ನಿಧಾನವಾಗಿಯಾದರೂ ಬದಲಾಗಬೇಕಲ್ಲವೆ?

ಕೆ. ಪಿ. ಸ್ವಾಮಿ
ನಂ. ೧೦, ೧ನೇ ಮಹಡಿ, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭



ಜಿ. ಶ್ರೀನಿವಾಸಮೂರ್ತಿ

# ಅತಾರ್ಕಿಕ ಅನಂತಗಳ ಕ. ವೆಂ.

ನವ್ಯ ಸಾಹಿತ್ಯದಂತೆ ನವ್ಯ ರಂಗಭೂಮಿಗೂ ಒಂದು ಸಾಂಸ್ಕೃತಿಕ ಅಸ್ತಿತ್ವವಿದೆ. ಅದನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದವರಲ್ಲಿ ಕ. ವೆಂ. ಅವರೂ ಒಬ್ಬರು. ಶ್ರೀರಂಗರು ಆರಂಭಿಸಿದ ತರಬೇತಿ ಶಿಬಿರಗಳ ಸಹವಾಸದಿಂದ ಹೊಸ ರಂಗಭೂಮಿಯ ಬೆನ್ನು ಹತ್ತಿದವರು ಕ. ವೆಂ. ಸಾಹಿತ್ಯ ಲೋಕದಿಂದಲೇ ರಂಗಭೂಮಿ ಪ್ರವೇಶಿಸುತ್ತಿದ್ದ ಕಾಲದಲ್ಲಿ ನಾಟಕ ಆಡಿಸುವುದು, ವಿಮರ್ಶಕರಾಗಿ ನೋಡುವುದು ನಾಟ್ಯ ಮೀಮಾಂಸೆಯ ದೃಷ್ಟಿಯಿಂದಾಗಬೇಕೆಂಬ ಹಂಬಲವನ್ನು ಕನ್ನಡದಲ್ಲಿ ಮೊದಲಿಗೆ ಪ್ರಚಾರಕ್ಕೆ ತಂದರು. ಎಂ. ಇ. ಎಸ್. ಕಾಲೇಜಿನಲ್ಲಿ ಬಿರುಸಿನ ರಂಗ ಚಟುವಟಿಕೆ ಹುಟ್ಟುಹಾಕಿದ್ದಲ್ಲದೆ, ಕಾರ್ಮಿಕರ ಮತ್ತು ಹವ್ಯಾಸಿ ತಂಡಗಳಲ್ಲೂ ನಿರ್ದೇಶಕರ ಕೆಲಸ ಮಾಡಿದರು. ಅಲ್ಲಿಯೂ ಇಂಗ್ಲಿಷ್ ಅಧ್ಯಾಪಕರ ಎದುರಿಗೆ ಸರಿಸಮನಾಗಿ ತಮ್ಮ ಛಾಪು ಒತ್ತಿದ ಕನ್ನಡದ ಮೇಷ್ಟ್ರು ಇವರೆ.

ಇದ್ದಿದ್ದರೆ ಈ ನವೆಂಬರಿಗೆ ೯೦ ವರ್ಷ ಮುಗಿಸುತ್ತಿದ್ದ ಕ. ವೆಂ. ಎಂದೇ ಪ್ರಸಿದ್ಧರಾದ ಕ. ವೆಂ. ರಾಜಗೋಪಾಲ ಮೂರು ವಾರದ ಮೊದಲೇ ತೀರಿಹೋದರು. ಅವರ ಅಂತ್ಯ, ಅಂತ್ಯಯಾತ್ರೆ, ಅಂತ್ಯಕ್ರಿಯೆ ಯಾವುದೂ ದೊಡ್ಡ ಸುದ್ದಿಯಾಗಲಿಲ್ಲ. ಅದು ಅವರ ಪುಣ್ಯ. ಅದಕ್ಕೆ ಅವರಿಗೆ ಯಾವುದೇ ಮಠ ಪೀಠಗಳ ಬೆಂಬಲ ಅಥವಾ ಸಂಪರ್ಕ ಇಲ್ಲದ್ದು ಕಾರಣ. ಹಾಗೆಂದು ಅವರೇನೂ ಪಡಪೋಷಿಯಲ್ಲ. ಎಂ. ಇ. ಎಸ್., ಸಂಜೆ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು, ಬೆಂಗಳೂರು ವಿಶ್ವವಿದ್ಯಾಲಯದ ಸಂಗೀತ, ನೃತ್ಯ, ನಾಟಕ (ಪ್ರದರ್ಶನ ಕಲೆಗಳ) ವಿಭಾಗದ ಮುಖ್ಯಸ್ಥರಾಗಿದ್ದರು. ಆದರೆ ಈ ಸಂಸ್ಥೆಗಳ ಈಗಿನ ಮುಖ್ಯಸ್ಥರಿಗೆ ಕ. ವೆಂ. ಮತ್ತು ಅಂತಹವರ ಬಗ್ಗೆ ಉದಾಸೀನ. ಆದರೆ ನಾವು ಕ. ವೆಂ. ಅವರನ್ನು ನೆನೆಸಿಕೊಳ್ಳುವುದು ಅವರು ಅಯಾಚಿತವಾಗಿ ಪಡೆದ ಈ ಸ್ಥಾನಗಳಿಗಾಗಿ ಅಲ್ಲ, ಈ ಸ್ಥಾನ ಮತ್ತು ಆಸ್ಥಾನಗಳಲ್ಲಿನ ಮಂದಮತಿಗಳಿಗೆ ಅವರೊಂದು ಸವಾಲಾಗಿ, ಕುಮತಿಗಳಿಗೆ ಒಡಪಾಗಿ, ಮಹಾಮತಿಗಳಿಗೆ ಇರಿಸುಮುರಿಸಾಗಿ, ಸರಸಿಗಳಿಗೆ ಕವಿಯಾಗಿ ಎಲ್ಲರಿಗೂ ಸುಲಭರಾದರೂ ಯಾರ ಕೈಗೂ ಸಿಗದ, ಎಡ ಎಂದರೆ ಬಲ, ಬಲ ಅಂದರೆ ಎಡ ಎಂದು ಕೈ ಬೀಸಿ ದಾಪುಗಾಲು ಹಾಕುತ್ತಿದ್ದ ಆ ಮೇಷ್ಟರು ವ್ಯಕ್ತಿಯಾಗಿ ನಮಗೆ ಸೋಜಿಗ. ಅದಕ್ಕೇ ಅವರನ್ನು ನೆನೆಯುವುದು. ಶರತ್ಕಾಲದಲ್ಲಾಗಲೇ ಶಿಶಿರದ ಹಿಮ, ಹಿಮಗಾಲದಲ್ಲಿ ಮಳೆ. ಮಧ್ಯೆ ಕಾಲ ಬದಲಾಗುತ್ತಿದೆ ಅಥವಾ ನಮ್ಮ ಕಾಲದ ಲೆಕ್ಕಾಚಾರ ಬದಲಾಗಬೇಕಿದೆ. 'ಕಾಲಪುರುಷಂ ಗಡ' ಎಂದು ರಾಮಾಶ್ವಮೇಧ ಆರಂಭಿಸಿದ ಮುದ್ದಣ ಅದರಿಂದಲೇ ಕಾಲವಶನಾದ. ಮುಂದೊಂದು ದಿನ ಇದ್ದಕ್ಕಿದ್ದಂತೆ ಜನ ಅವನ ಕೃತಿಗಳಿಗೆ ಗಮನಕೊಟ್ಟರು. ಸಾಹಿತ್ಯಲೋಕದಲ್ಲಿ ಇಂಥವೆಲ್ಲ ಇದ್ದದ್ದೇ. ಆದರೆ ಗೊತ್ತಿಲ್ಲದೆ ಅವಜ್ಞೆಗೆ ಒಳಗಾಗುವುದು ಒಂದು. ಕ. ವೆಂ. ಅವರು ಅನೇಕರಿಗೆ ತಿಳಿದಿದ್ದೂ ಅವಜ್ಞೆಗೆ ಒಳಗಾದರು. ಇದೊಂದು ನಮ್ಮ ಕಾಲದ ಸಾಂಸ್ಕೃತಿಕ, ರಾಜಕೀಯ, ಸಂಸ್ಕೃತಿ–ಕ್ಷೇತ್ರದಿಂದ ಎಂದು ಹೇಳಿಕೊಂಡು ತಿರುಗುವ ರಾಜಕೀಯ ಮಧ್ಯ(ದ್ಯ)ವರ್ತಿ ಪುಢಾರಿಗಳು ಸಾಂಸ್ಕೃತಿಕ ಸಂಗತಿಗಳನ್ನು ಕೇವಲ ಮಾಧ್ಯಮದ ಫುಟೇಜಿಗೆ ಬಳಸಿಕೊಳ್ಳುತ್ತಾರೆ. ಅವರಿಗೆ ಸಾಹಿತಿಯ ಸಾವು ತಾವು ಮ್ಯಾನೇಜ್ ಮಾಡಬೇಕಾದ ಈವೆಂಟ್. ಕ. ವೆಂ. ಅವರ ಸಾವು ಆ ರೀತಿಯ ಈವೆಂಟ್ ಅಲ್ಲ. ಇರಲಿ, ಒಳ್ಳೆಯದೇ. ಮಾಮೂಲಿ ಪ್ರಶ್ನೆಯಾಗಿ ಮಾಧ್ಯಮದವರು ಅವರಿಗೆಷ್ಟು ಮಕ್ಕಳು ಎಂದಾಗ ಅವರ ಮಗಳು ರಂಗಾಯಣದ ನಟಿ ನಂದಿನಿ, ಅಫಿಷಿಯಲ್ಲಾಗಿ ನಾವು ಐವರು ಆದರೆ ಮಾನಸಿಕವಾಗಿ ಅದೆಷ್ಟೋ ನೂರು ಎಂದದ್ದು ಸುಳ್ಳಲ್ಲ, ಸತ್ಯಸ್ಯ ಸತ್ಯ. ಆ ಪ್ರೀತಿಯೇ ದೊಡ್ಡದು.

ಕ. ವೆಂ. ಸದಾ ರಾಜಕೀಯವಾಗಿ ಜಾಗೃತರಾಗಿದ್ದವರು. ಬಾಲ್ಯದಿಂದ ಸೋದರಮಾವನ ಮನೆಯಲ್ಲಿ ಬೆಳೆದು ಅವರ ಮನೆಯವರೆಲ್ಲರಂತೆ ಆರ್. ಎಸ್. ಎಸ್.ನಲ್ಲಿದ್ದವರು. ಗಾಂಧಿ ಹತ್ಯೆ ನಂತರ ಅದಕ್ಕೆ ನಿಷೇಧ ಹಾಕಿದ್ದಾಗ ಅದನ್ನು ವಿರೋಧಿಸಿ ಜೈಲಿಗೂ ಹೋಗಿ ಬಂದರು. ಆದರೆ ಅದೇ ಕಾಲಕ್ಕೆ ಆರ್. ಎಸ್. ಎಸ್.ಅನ್ನೂ ಬಿಟ್ಟರು. ವಿದ್ಯಾಭ್ಯಾಸವನ್ನೂ ಸಾಹಿತ್ಯವನ್ನೂ ಬಿಡುಗಡೆಯ ದಾರಿ ಎಂದು ಗಣಿಸಿ ಅತ್ತ ಕಡೆ ಹೊರಟಿದ್ದರು. ಕೊಂಚ ಹೆಚ್ಚು ವಯಸ್ಸಾದಾಗ ಕಾಲೇಜಿಗೆ ಸೇರಿದರು. ತೀ. ನಂ. ಶ್ರೀ. ಅವರಂತಹ ಘನ ವಿದ್ವಾಂಸರ ಶಿಷ್ಯರಾಗಿ ವಿದ್ವತ್ತಿನ ಕಡೆ ಮನಸ್ಸು ಮಾಡಿದಂತೆ, ಮೈಸೂರಿನಲ್ಲೇ ಗೋಪಾಲಕೃಷ್ಣ ಅಡಿಗರಲ್ಲಿ ಕಾವ್ಯ ಗುರುವನ್ನು ಕಂಡರು. ಅದೇ ಅಡಿಗರು ಜನಸಂಘದಿಂದ ಚುನಾವಣೆಗೆ ನಿಂತಾಗ ಅದನ್ನು ವಿರೋಧಿಸಿದರು. ೫೦ರ ದಶಕದ ಆರಂಭದಲ್ಲಿ ಮೈಸೂರಿನಲ್ಲಿದ್ದಾಗಲೇ ನಿರಂಜನರ ಪರಿಚಯ ವಾಗಿತ್ತಾದರೂ ಬೆಂಗಳೂರಿಗೆ ಬಂದಮೇಲೆ ೬೦ರ ದಶಕದಲ್ಲಿ ಬಸವರಾಜ ಕಟ್ಟೀಮನಿ, ನಿರಂಜನ ಮೊದಲಾದ ಪ್ರಗತಿಪರ ಸಾಹಿತಿಗಳ ಸಂಪರ್ಕ–ಸಂಬಂಧ ಗಾಢವಾಯಿತು. ಪುವ್ವಾಶ್ರೀ, ಜಿ. ಆರ್., ಎಸ್. ಆರ್. ಭಟ್ ಮೊದಲಾದವರು ಅವರ ಆಪ್ತ ಸಂಗಾತಿಗಳಾದರು. ಆಗಿನಿಂದ ಎಡಪಂಥೀಯ ಧೋರಣೆಗಳು ಖಚಿತವೂ ಗಾಢವೂ ಆದವು. ೭೦ರ ದಶಕದಲ್ಲಿ ಇವರನ್ನು ನನಗೆ ಪರಿಚಯಿಸಿದವರೂ ಅವರೆ. ಆಗ ಸ್ಟಡಿ ಸರ್ಕಲ್‌ಗೆ ನಮಗೆ ಪ್ರವೇಶ ಸಿಕ್ಕಿತು. ಅವರು ಕೆಲಸ ಮಾಡಿದ ಎಂ.ಇ.ಎಸ್. ಕಾಲೇಜಿನಲ್ಲಿ ಆಗ ಅದನ್ನು ವಿರೋಧಿಸುವ ಆರ್.ಎಸ್.ಎಸ್.ನ ಗುಂಪೊಂದು ಇತ್ತು. ಆ ವಿರೋಧಿ ಗುಂಪಿಗೆ ಕ. ವೆಂ. ಮುಂದಾಳು. ಆಗಿನ ಚರ್ಚೆಗಳು ನಮ್ಮ ವಿದ್ಯಾಭ್ಯಾಸದ ಒಂದು ಅಮೂಲ್ಯ ಭಾಗ. ವೈಯಕ್ತಿಕ ಮುನಿಸು ಎಷ್ಟೇ ಇದ್ದರೂ, ಚರ್ಚೆ ಎಷ್ಟೇ ಬಿಸಿಯಾಗಿದ್ದರೂ ಪ್ರೀತಿ, ಸ್ನೇಹ, ವಾತ್ಸಲ್ಯಗಳಿಗೆ ಅಡ್ಡಿಬರುತ್ತಿರಲಿಲ್ಲ. ಕಾಲೇಜಿನ ಪ್ರಾರ್ಥನೆ, ಹುಡುಗರು ಹುಡುಗಿಯರಿಗೆ ಬೇರೆ ಬೇರೆ ಮೆಟ್ಟಿಲುಗಳು ಮುಂತಾದ ವ್ಯವಸ್ಥೆಗಳನ್ನು ಕ. ವೆಂ. ತಾವೇ ಮುಂದೆ ನಿಂತು ಪಾಲಿಸುವಂತೆ ಮಾಡುತ್ತಿದ್ದರು. ಜಿ. ಪಿ. ರಾಜರತ್ನಂ ಮಾರಲ್ ಸೈನ್ಸ್ ತರಗತಿಗೆ ಹೋಗುವವರನ್ನೂ ತಪ್ಪಿಸಿಕೊಳ್ಳುವವರನ್ನೂ ಓರೆಗಣ್ಣಿನಿಂದ ನೋಡುತ್ತಾ 'ಹೋಗಿ ತಿಳ್ಕೊಳಿ. ಹಾಗೇ ಪ್ರಶ್ನೆ ಮಾಡೋದನ್ನೂ ಕಲೀರಿ' ಎಂದು ನಮ್ಮಲ್ಲಿ ಪ್ರಶ್ನಿಸುವ ಮನೋಧರ್ಮಕ್ಕೆ ಒಡ್ಡಿಕೊಳ್ಳುವಂತೆ ಮಾಡಿದವರು ಅವರು.

**ಶ್ರೇಷ್ಠ ಗುರುಗಳ ಸಾಲಿನವರು**

ಇಂದು ಅಧ್ಯಾಪಕರು ಏನೇನು ಮಾಡಬೇಕು ಎಂದು ಪಟ್ಟಿ ಮಾಡಿ ಅದನ್ನು ಮೌಲ್ಯಮಾಪನ ಮಾಡುವ ಪದ್ಧತಿ ಬಂದಿದೆ. ಆದರೆ ಐವತ್ತು ವರ್ಷದ ಹಿಂದೆಯೆ ಇದನ್ನು ಕಾರ್ಯಗತಗೊಳಿಸಿದ ಶ್ರೇಷ್ಠ ಅಧ್ಯಾಪಕರು ಇದ್ದಾರೆ. ಅಂತಹ ಅಪರೂಪದ ಗುರುಗಳ ಸಾಲಿಗೆ ಸೇರಿದವರು ಕ. ವೆಂ. ಗುರುಗಳಿಗೆ ಎಲ್ಲಕ್ಕಿಂತ ಮುಖ್ಯ ಆತ್ಮಗೌರವ. ಎಂ. ಪಿ. ಎಲ್. ಶಾಸ್ತ್ರಿಗಳಂತಹ ಹುಲಿಗಳೆದುರು ಬಹುಪಾಲು ಅಧ್ಯಾಪಕರು ಇಲಿಗಳಂತೆ ವರ್ತಿಸುತ್ತಿದ್ದಾಗ ಕೇವಲ ತಮ್ಮ ಒಳ ಸತ್ವದಿಂದ ಧೈರ್ಯವಾಗಿ ತಲೆ ಎತ್ತಿ ನಡೆಯುವುದನ್ನು ತೋರಿಸಿಕೊಟ್ಟವರು ಕ. ವೆಂ. ಇದು ಅಹಂಕಾರವಲ್ಲ. ಯಾಕೆಂದರೆ ಕಾಲೇಜಿನ ಶಿಸ್ತಿಗೆ ಇವರು ಬೆಂಬಲವಾಗಿರುತ್ತಿದ್ದರು. ಸಾಮೂಹಿಕ ಪ್ರಾರ್ಥನೆ ನಮ್ಮ ಸಂಸ್ಕೃತಿಯಲ್ಲಿಲ್ಲ ಎಂದೆನ್ನುತ್ತಲೇ ವಿದ್ಯಾರ್ಥಿಗಳನ್ನು ಪ್ರಾರ್ಥನೆಗೆ ನಿಲ್ಲಿಸುತ್ತಿದ್ದರು. ಶಂಕರಮಠದ ಸ್ವಾಮಿಗಳು, ಸಾಯಿಬಾಬಾ ಕಾಲೇಜಿಗೆ ಬಂದಾಗ ಹುಡುಗರ ಕೈಹಿಡಿದು ಸರಪಳಿ ಕಟ್ಟಿ ಶಿಸ್ತು ಕಾಪಾಡಿದವರೇ ಸಾಯಿಬಾಬಾ ಕಥೆಯನ್ನು ಬರೆದರು. ತರಗತಿಗಳಲ್ಲಿ ಕೊನೆ ಬೆಂಚಿನ ಕೊನೆ ಹುಡುಗನ ಬಗ್ಗೆ ನಿಗಾ ಇರುತ್ತಿತ್ತು. ಅವರ ಆಪ್ತ ಶಿಷ್ಯರು ರ್‍ಯಾಂಕ್, ಫಸ್ಟ್ ಕ್ಲಾಸ್ ಜನರಿಗಿಂತ ಪಾಸ್ ಕ್ಲಾಸ್‌ನವರೇ ಜಾಸ್ತಿ. ಇದಕ್ಕೆ ಕಾರಣ ಈವತ್ತು ನಾವು ಯಾವುದನ್ನು ಮೆಂಟಾರ್ ಎನ್ನುತ್ತೇವೆ ಆ ಕೆಲಸವನ್ನು ಅವರು ಮಾಡಿದ್ದು. ಯಾರನ್ನೂ ದಡ್ಡರೆಂದುಕೊಳ್ಳುತ್ತಿರಲಿಲ್ಲ. ಆಸಕ್ತಿಯಿಂದ ತಮಗೆ ತಿಳಿದದ್ದನ್ನೆಲ್ಲ ಎಲ್ಲರ ಜತೆಗೂ ಹಂಚಿಕೊಳ್ಳುತ್ತಿದ್ದರು. ದಕ್ಕಿದವರಿಗೆ ದಕ್ಕಲಿ, ಮೊದಲೇ ಏಕೆ ಆಸಕ್ತಿ ನಿರ್ಧರಿಸಬೇಕು, ಎನ್ನುವುದು ಅವರ ಇಂಗಿತ. ಓದಿನಲ್ಲಿ

ಮುಂದಿಲ್ಲದಿದ್ದರೂ ಒಬ್ಬನಿಗೆ ಬೇರೆ ಆಸಕ್ತಿ ಇದ್ದರೆ ಅದನ್ನು ಬೆಳೆಸಿಕೊಳ್ಳುವುದಕ್ಕೆ ಉತ್ತೇಜನ ನೀಡುತ್ತಿದ್ದರು. ವೈಯಕ್ತಿಕ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದರು, ಆದರೆ ನಿರ್ಭಾವುಕರಂತೆ ಅದನ್ನು ಮರೆಮಾಚುತ್ತಿದ್ದರು. ಅದರಿಂದ ಸಹಾಯ ಪಡೆದಾತನಿಗೆ ಇರಿಸುಮುರಿಸಾಗದಂತೆ ನೋಡಿಕೊಳ್ಳುತ್ತಿದ್ದರು. ಇದನ್ನು ಇಂದಿನ ಕಾಂಗ್ರೆಸ್ ನಾಯಕ ಬಿ. ಕೆ. ಹರಿಪ್ರಸಾದ್ ನೆನಪು ಮಾಡಿಕೊಳ್ಳುತ್ತಾರೆ.




ಎಂ. ಇ. ಎಸ್. ಕಾಲೇಜಿನಲ್ಲಿ ೫೭ರಿಂದ ೮೧ರವರೆಗೆ ಅಧ್ಯಾಪಕರಾಗಿದ್ದು, ಕೊನೆಯ ಕೆಲವು ವರ್ಷಗಳು ಪ್ರಿನ್ಸಿಪಾಲರೂ ಆಗಿದ್ದರು. ಮೋಸ ತಟವಟಗಳಿಲ್ಲದ ಅವರು ಪಾರದರ್ಶಕ ಆಡಳಿತಕ್ಕೆ ಮಾದರಿ. ಆದರೆ ಅದು ಆಳುವವರಿಗೂ, ಕತ್ತು ಬಗ್ಗಿಸಿಯೇ ದುಡಿಯುವುದಕ್ಕೆ ಅಭ್ಯಾಸ ಮಾಡಿಕೊಂಡವರಿಗೂ ಪ್ರಿಯವಲ್ಲ. ೫೫ನೇ ವಯಸ್ಸಿಗೆ ನಿವೃತ್ತರಾಗಿ ಕೆಲಕಾಲ ತೀರ ಕಡಿಮೆ ಸಂಬಳದಲ್ಲಿ ಮುಂದುವರಿದ ಅವರಿಗೆ ಬೆಂಗಳೂರು ವಿಶ್ವವಿದ್ಯಾಲಯದ ಸಂಗೀತ, ನೃತ್ಯ, ನಾಟಕ ವಿಭಾಗದ ಮುಖ್ಯಸ್ಥರಾಗುವ ಅವಕಾಶ ಒದಗಿಬಂತು. ಸೆಂಟ್ರಲ್ ಕಾಲೇಜಿನ ವಿಭಾಗದ ಆವರಣವನ್ನು ರಂಗತಂಡಗಳ ಚಟುವಟಿಕೆಯ ಕೇಂದ್ರವಾಗಿಸಿದರು. ಅಲ್ಲಿ ನಿವೃತ್ತರಾದ ನಂತರ ಚೆನ್ನಪಟ್ಟಣದಲ್ಲಿನ ಕುವೆಂಪು ಕಾಲೇಜಿನಲ್ಲಿ ಆರಂಭವಾದ ಸ್ನಾತಕೋತ್ತರ ಕೇಂದ್ರದಲ್ಲಿ ಅಧ್ಯಾಪಕರಾಗಿ, ಮುಖ್ಯಸ್ಥರಾಗಿ ಕೆಲಸ ಮಾಡಿದರು.

**ಅಧ್ಯಾಪಕರ ವಿದ್ವತ್ತು:** ಅಧ್ಯಾಪಕರಿಗಿರಬೇಕಾದ ಇನ್ನೊಂದು ಮುಖ್ಯ ಗುಣ ಸದಾ ತಮ್ಮನ್ನು ತಾವು ನವೀಕರಿಸಿಕೊಳ್ಳುವ ಅಧ್ಯಯನಶೀಲತೆ ಮತ್ತು ಕಾಲೇಜು ಅಧ್ಯಾಪಕರಿಗಿರಬೇಕಾದ್ದು ಸಂಶೋಧನಾ ಚಟುವಟಿಕೆ. ಅದಕ್ಕಾಗಿ ಈಗ ಬೇಕಾದಷ್ಟು ಅನುದಾನ ಉಂಟು. ಆದರೂ ಅಪ್‌ಡೇಟ್ ಆಗದವರೇ ಹೆಚ್ಚು. ಅದೇ ಕ. ವೆಂ. ಸತತವಾಗಿ ಸ್ವಂತ ಖರ್ಚಿನಲ್ಲೇ ಅಧ್ಯಯನ ಮತ್ತು ಸಂಶೋಧನೆಗಳಲ್ಲಿ ತೊಡಗಿದವರು. ಅವರ ಪುಸ್ತಕ ಸಂಗ್ರಹ ಇದಕ್ಕೊಂದು ಸಾಕ್ಷಿ. ಪೂನಾದ ಭಾಷಾಶಾಸ್ತ್ರದ ಬೇಸಿಗೆ ಶಿಬಿರಕ್ಕೆ ಯುವ ಅಧ್ಯಾಪಕರೊಂದಿಗೆ ಹೋಗಿ ಬಂದರು. ವಿದ್ಯಾರ್ಥಿಗಳನ್ನು ವರ್ಷ ವರ್ಷ ಶೈಕ್ಷಣಿಕ ಪ್ರವಾಸಕ್ಕೆ ಕರೆದುಕೊಂಡು ಹೋಗುತ್ತಿದ್ದವರು ಅದರ ಪ್ರಯೋಜನ ಪಡೆದು ಇತಿಹಾಸ, ಶಿಲ್ಪಕಲೆ ಮುಂತಾದವುಗಳ ಬಗ್ಗೆ ಸಾಂಸ್ಕೃತಿಕ ಚಿಂತನೆ ನಡೆಸಿದರು. ಅದರ ಫಲ 'ಬೌದ್ಧ ಧರ್ಮದಲ್ಲಿ ಯಕ್ಷ ಕಲೆ' ಎಂಬ ಪುಸ್ತಕ. ಕಲೆಗಳನ್ನು ಆಂತ್ರೊಪಾಲಜಿ ದೃಷ್ಟಿಯಿಂದ ನೋಡುವುದನ್ನು ನಮಗೆ ತೋರಿಸಿಕೊಟ್ಟವರು ಅವರು. ಇದೇ ರೀತಿ ಅವರು ಜಾನಪದ ಅಧ್ಯಯನದಲ್ಲೂ ತೊಡಗಿದರು. 'ಹೊಲೆಯರ ತಮಟೆಗೆ ಒಕ್ಕಲಿಗರ ಕುಣಿತ' ಎಂದು ಆಚರಣೆ ಆಧರಿಸಿದ ಕಲೆಗಳಲ್ಲಿನ ಸಾಮಾಜಿಕ ಸಂಬಂಧವನ್ನು ದಿವಿನಾಗಿ ತೋರಿಸಿಕೊಟ್ಟರು. ಆದರೆ ಅದನ್ನು ಕುರಿತು ಬರೆಯುವಾಗ ಈ ಹೊಳಹು ಮಸುಕಾಗಿಬಿಟ್ಟಿತು. ಇವರ ವಿದ್ವತ್ತು ಪುಸ್ತಕದ ಓದಿನಿಂದಷ್ಟೇ ಬಂದದ್ದಲ್ಲ, ಕ್ಷೇತ್ರಕಾರ್ಯ, ಬೇರೆಯವರ ಜತೆಗಿನ ಚರ್ಚೆ ಇದಕ್ಕೆ ಅಷ್ಟೇ ಮುಖ್ಯ. ಚಿ. ಮೂ. ಹ(ಪ)ಗಣದ ಬಗ್ಗೆ ಲೇಖನ ಬರೆದಾಗ ನನ್ನನ್ನು ಕರೆದುಕೊಂಡು ಉತ್ತರ ಕನ್ನಡ ಜಿಲ್ಲೆಯ ಹಳದೀಪುರಕ್ಕೆ ಹೋದರು. ಅಲ್ಲಿ ರಾತ್ರೋ ರಾತ್ರಿ ಹಗಣ ನೋಡಿ, ಓಂಕಾರ ಶೆಟ್ಟರ ಮನೆಯಲ್ಲಿ ಜೈನರು ಅಲ್ಲಿ ವನದುರ್ಗಿ ಪೂಜೆ ಮಾಡುವ ಬಗ್ಗೆ ಮಾತನಾಡುತ್ತಾ ತಥಾಕಥಿತ ಸಾಂಸ್ಕೃತಿಕ ವಿಚಾರಗಳೆಲ್ಲ ಎಷ್ಟು ಪ್ರಶ್ನಾರ್ಹ ಎಂದು ತೋರಿಸುತ್ತಾ, ವೈದಿಕ ಬ್ರಾಹ್ಮಣರಷ್ಟೇ ಅಲ್ಲ, ಜಾನಪದ ಜೈನ ಸಂಪ್ರದಾಯದ ಜತೆಗಿನ ಸಂಬಂಧವನ್ನೂ ಕಲೆ, ಜಾನಪದ ಆಚರಣೆಗಳು ಪ್ರತಿರೋಧಾತ್ಮಕ ನೆಲೆಯಲ್ಲೇ ನೋಡಬೇಕಾಗಿಲ್ಲವೆಂದು ನನ್ನಲ್ಲಿ ಜಾಗೃತಿ ಮೂಡಿಸಿದರು. ವಿಶ್ವನಾಥನ ಸಾಹಿತ್ಯದರ್ಪಣದಲ್ಲಿನ ಉಪರೂಪಕಗಳಲ್ಲಿ ಬರುವ ಪ್ರೇಂಖಣದ ಜತೆ ಇದನ್ನು ಹೋಲಿಸಿ, ಸಂಸ್ಕೃತ ವಿದ್ಯಾರ್ಥಿಯಾದ ನನಗೆ ಕ್ಷೇತ್ರಕಾರ್ಯ ಮಾಡುವುದು ಎಷ್ಟು ಮುಖ್ಯ ಎಂದು ತೋರಿಸಿದರು. ನನ್ನ ಸಂಸ್ಕೃತ ಅಧ್ಯಾಪಕರಾರೂ ಇದನ್ನು ಊಹಿಸಲು ಸಹ ಸಾಧ್ಯವಿರಲಿಲ್ಲ. ಸಮ್ಮೇಳನ, ವಿಚಾರ ಸಂಕಿರಣಗಳಲ್ಲಿ ಸ್ವಂತ ದುಡ್ಡುಹಾಕಿಕೊಂಡು ಹೋಗಿ ಭಾಗವಹಿಸಿ ಬರುತ್ತಿದ್ದರಲ್ಲದೆ ನನ್ನಂತಹ ಅನೇಕರನ್ನು ಜತೆಗೆ ಕರೆದುಕೊಂಡುಹೋಗಿ ವಿದ್ವದ್ಗೋಷ್ಠಿಗಳಲ್ಲಿ ಭಾಗವಹಿಸುವುದನ್ನು ಕಲಿಸಿದರು. ಚೆನ್ನಪಟ್ಟಣದ ಸ್ನಾತಕೋತ್ತರ ಕೇಂದ್ರದ ಇವರ ವಿದ್ಯಾರ್ಥಿಗಳು ಇದನ್ನು ಈಗಲೂ ನೆನೆಯುತ್ತಾರೆ.

ಇವರ ಸಂಶೋಧನಾ ಒಲವುಗಳನ್ನು ಗೇಲಿಮಾಡಿದ ಧೀಮಂತರನೇಕರು ಇವರ ಕಾಳಜಿಗಳನ್ನು ಗುರುತಿಸದೆ ಹೋದರು. ನಾಟಕದ ವಿಭಾಗದ ಮುಖ್ಯಸ್ಥರಾದಾಗ ವಿಭಾಗದಲ್ಲಿ ಕೊನೆಹಳ್ಳಿಯಿಂದ ತಂದ ಶಿಲಾಯುಗದ ಕಲ್ಲುಗಳನ್ನು ಇಟ್ಟುಕೊಂಡು ಆ ಕಲ್ಲನ್ನು ಹೇಗೆ ಹಿಡಿಯುತ್ತಿದ್ದರು ಎಂದೆಲ್ಲ ವಿವರಿಸುತ್ತಿದ್ದರೆ, ನಾಟಕ ವಿಭಾಗದಲ್ಲಿ ಇದು ಬೇಕೆ, ಎಂದು ಮೂಗುಮುರಿದು ಅವರೆದುರಿಗೆ ಹಲ್ಲುಕಿರಿದವರೆಷ್ಟೋ ಜನ ನಾಟಕದ ಶೈಕ್ಷಣಿಕ ಅಧ್ಯಯನದಲ್ಲಿ ಇತಿಹಾಸ, ಮಾನವ ಶಾಸ್ತ್ರಗಳ ವ್ಯಾಪ್ತಿಯನ್ನು ಅರಿಯುವಷ್ಟು ಪ್ರಬುದ್ಧರಾಗಿರಲಿಲ್ಲ. ಜತೆಗೆ ಶಿಸ್ತುಬದ್ಧ ಕ್ರಮಗಳ ತರಬೇತಿ ಇವರಿಗಿರಲಿಲ್ಲವೆನ್ನುವುದೂ ಸರಿಯೆ. ಆದರೆ ಅವರ ಹೊಳಹುಗಳನ್ನು ಅವರೇ ಬೆನ್ನು ಹತ್ತುವಷ್ಟು ವ್ಯವಧಾನ ಒತ್ತಾಸೆ ಅವರಿಗಿರಲಿಲ್ಲ, ಅವರ ಹೊಳಹುಗಳನ್ನು ಮುಂದುವರಿಸುವ ಪ್ರಬುದ್ಧ ಶಿಷ್ಯರು ಸಿಗಲಿಲ್ಲ. ಸ್ಥಳನಾಮಗಳಲ್ಲಿನ 'ಕಲ್ಲು' ಶಬ್ದದ ಬಗ್ಗೆ, ಸೂರ್ಯದೇಗುಲಗಳ ಬಗ್ಗೆ, ಅಲ್ಲಿಂದ ಪಂಚಾಂಗಗಳ ಬಗ್ಗೆ, ನಾಟಕದ ನೆಚ್ಚಿನ ಶಿಷ್ಯ ನಾಯರಿ ಅವರ ಜನಾಂಗದ ಬಗ್ಗೆ ಆ ಮೂಲಕ ಕರಾವಳಿ ಸಂಸ್ಕೃತಿ ಬಗ್ಗೆ ಏನೆಲ್ಲ ಯೋಚಿಸಿದರು, ಬರೆದರು. ಅವು ಕೆ. ವಿ. ಎನ್. ಹೇಳುವಂತೆ ತಾರ್ಕಿಕ ಅಂತ್ಯಗಳನ್ನು ಕಾಣಲಿಲ್ಲ. ಆದರೆ ಅದಕ್ಕೆ ಅವರ ವಿದ್ವತ್ತಿನ ಕೊರತೆಗಿಂತ ಅವರ ಸಂಶೋಧನೆಯಲ್ಲಿ ಇಣುಕುತ್ತಿದ್ದ ಕಾವ್ಯ ಮನೋಧರ್ಮ ಮತ್ತು ಒಂದು ಥೀಸಿಸ್‌ಅನ್ನು ಸೃಷ್ಟಿಸಬೇಕೆಂಬ ಛಲವಿಲ್ಲದ್ದೂ ಕಾರಣವಿರಬೇಕು. ಅದಕ್ಕೇ ಕೆ. ವಿ. ಎನ್. ಇವರನ್ನು ಕೋಲಾರದ ಚಿನ್ನದ ಗಣಿ ಹಾಗೆ ಒಂದು ಚಿನ್ನದ ರೇಖೆಗೆ ಎಷ್ಟೋ ಮಣ್ಣು ಹೊರಬರಬೇಕು ಎಂದಿದ್ದರು. ಸಂಶೋಧನೆಯಲ್ಲಾಗಲಿ ವಿಮರ್ಶೆಯಲ್ಲಾಗಲಿ ಇವರದ್ದು ಥಟಕ್ಕನೆ ಬೇರೆಯವರಿಗೆ ತಿಳಿಯಲಾಗದ ಆಲೋಚನೆ. ಇದರಿಂದ ಎಷ್ಟೋ ಗೋಷ್ಠಿಗಳಲ್ಲಿ ಇವರದ್ದು ಅಡ್ಡ ಪ್ರಶ್ನೆಯಂತೆ ಕಾಣುತ್ತಿತ್ತು. ಜನಗಳನ್ನು ಗೊಂದಲಗೊಳಿಸುತ್ತಿತ್ತು. ಜಿ. ಎಸ್. ಎಸ್. ತಮಾಷೆಯಾಗಿ ಇವರನ್ನು "ಕನ್ನಡದ ಕನ್ಫ್ಯೂಶಿಯಸ್" (ಕನ್ಫ್ಯೂಸ್ ಮಾಡುವವರು) ಎಂದು ನಗೆಯಾಡಿದರೂ ಅವರು ಏರ್ಪಡಿಸುತ್ತಿದ್ದ ವಿಚಾರ ಸಂಕಿರಣಗಳಲ್ಲಿ ಕ. ವೆಂ. ಇಲ್ಲದೆ ಸೆಮಿನಾರೇ ? ಎನ್ನುತ್ತಿದ್ದುದೂ ಉಂಟು.

**ಕವಿ ಕಥೆಗಾರ**

ಕವಿ ಮನಸ್ಸು ಕ. ವೆಂ. ಸಂಶೋಧನೆಯನ್ನು ಅತಾರ್ಕಿಕಗೊಳಿಸಿದರೆ, ಅವರ ವೈಚಾರಿಕತೆ ಅವರ ಕಾವ್ಯದ ಭಾವತೀವ್ರತೆಯನ್ನು ಕಡಿಮೆಮಾಡಿತು. ಎಚ್. ಎಸ್. ಆರ್. ಹೇಳುವಂತೆ ಇವರು ಪಂಡಿತರಲ್ಲಿ ಕವಿ, ಕವಿಗಳಲ್ಲಿ ವಿಚಾರವಂತ. ಸದಾ ಜಾಗೃತರಾಗಿ ಆತ್ಮಾವಲೋಕನ ಆತ್ಮಶೋಧ ಮಾಡಿಕೊಳ್ಳುವುದು ಮುಖ್ಯವೆಂದೆಣಿಸಿದ ನವ್ಯದ ಪರಿಸರದಲ್ಲಿ ಸಾಹಿತ್ಯ ಕೃಷಿ ಆರಂಭಿಸಿದರು. ಅಲ್ಲಿನ ರೂಪಕಪೂರ್ಣ ಅಭಿವ್ಯಕ್ತಿ ಕ್ರಮವನ್ನು ತಮ್ಮದಾಗಿಸಿಕೊಂಡರು. ಇವರ ಮೊದಲ ಕವನ ಸಂಕಲನ 'ಅಂಜೂರ'ಕ್ಕೆ ಮುನ್ನುಡಿ

ಬರೆದ ಅಡಿಗರು ಅದನ್ನು ಗುರುತಿಸುತ್ತಾರೆ. ಆದರೆ ಬೇಗನೆ ಕ. ವೆಂ. ಧೋರಣೆಗಳಲ್ಲಿ ನವ್ಯರಿಗಿಂತ ಬೇರೆ ದಿಕ್ಕಿನಲ್ಲಿ ತೊಡಗಿದರು. ಈ ಮೊದಲು ಹೇಳಿದಂತೆ ಪ್ರಗತಿಶೀಲರ ಧೋರಣೆಗೆ ಇವರು ಹತ್ತಿರವಾದರು. ಆದರೆ ಎಡಪಕ್ಷಗಳಲ್ಲಿನ ಕ್ರೌರ್ಯವೂ ಅವರಿಗೆ ವಿಷಾದ ತಂದಿತ್ತು. 'ಸಮಾಧಿಯ ಮೂಕಸಾಕ್ಷಿ' ಎಂಬ ಕಥೆ ಸಾಯುತ್ತಿರುವ ಹುಡುಗನಿಗೆ ವೈದ್ಯನನ್ನು ಕರೆಯುವ ಬದಲು ಮೌಲ್ವಿ ಬಂದು ಹೆಣದ ಸಂಸ್ಕಾರ ಮಾಡುವ ಕಥೆ ಹೇಳಿದೆ. ಅದೇ 'ಹುಡುಗ ಬೇಕಾಗಿದ್ದಾನೆ' ಕವಿತೆಯಲ್ಲಿ :

*ಎಲ್ಲ ಜಾತಿ ಮತಕ್ಕೂ ಆಚೆ ಈಚೆ*
*ಕೊಲೆಗಡುಕತನ ಮೆರೆದಾಡಿದೆಯೆಂದರೆ*
*ಯಾವುದಕ್ಕೂ ಬೆಲೆಯಿಲ್ಲವೆಂಬುದೇ ಇವನ ಛಲವಾಗಿದೆ* – ಎಂದು 'ಇಂಥ ಹುಡುಗನಿಗಾಗಿ ಹುಡುಕುತ್ತಿದ್ದೇನೆ ಹಗಲೂ ಇರುಳು' ಎಂದು ತಮ್ಮ ಧೋರಣೆ ತೋಡಿಕೊಂಡರು. ರೂಪಕ ಶೈಲಿಯಲ್ಲಿ 'ಆಸೆಯ ಶಿಶು' ಎಂಬ ಕಥೆಯೊಂದಿಗೆ ಕಥೆಗಾರ ಕೃಷಿ ಆರಂಭಿಸಿದರೂ ಬರಬರುತ್ತಾ ದಟ್ಟ ವಾಸ್ತವ ವಿವರಗಳಿಂದ ಕಥೆಯೇ ರೂಪಕ ವಾಗುವಂತೆ ಬರೆಯತೊಡಗಿದರು. 'ಹೊಲತಿಯ ಹಾಳು', 'ಅನಾಥ ಮೇಷ್ಟರ ಸ್ವಗತ ಸಂಪ್ರದಾಯ' ಇವೆಲ್ಲಗಳು ಅವರ ಕಾವ್ಯಾತ್ಮಕ ಕಥೆಗಳು. ನವ್ಯ ಕವಿ ಸಾಹಿತಿಗಳಲ್ಲಿ ಇಂಗ್ಲಿಷಿನ ಅಧ್ಯಾಪಕರದ್ದೇ ಮೇಲುಗೈ ಆಗಿದ್ದಾಗ ಕನ್ನಡದ ಈ ಅಧ್ಯಾಪಕ ನವ್ಯ ಕವಿಯಾದದ್ದು ಕೆಲವರಿಗೆ ಗೇಲಿ ವಿಷಯ ವಾಯಿತು. ದಾವಣಗೆರೆ ಪ್ರಗತಿಶೀಲ ಸಾಹಿತ್ಯ ಸಮ್ಮೇಳನದ ಕಾವ್ಯಗೋಷ್ಠಿಯ ಅಧ್ಯಕ್ಷತೆ ವಹಿಸಿಬಂದ ಕ. ವೆಂ. ಅನ್ನು ಲಂಕೇಶ್ ಕ. ವೆಂ. ರಾಜಗೋಪಾಲ ನವ್ಯ ಕಾವ್ಯದ ಬಾಲ ಎಂದು ಛೇಡಿಸಿದ್ದೂ ಉಂಟು. ನವ್ಯದ ಕ್ರಮವೇ ಜನಪ್ರಿಯತೆಗೆ ಒದಗಲಿಲ್ಲ. ಇವರು ಅನ್ಯಾಯವನ್ನು ಕಂಡು ಮರುಗಿದ್ದು ಪ್ರತಿಭಟಿಸಿದ್ದಕ್ಕಿಂತ ಹೆಚ್ಚು. ಇವರ ಸಿಟ್ಟು ಆತ್ಮಾವಲೋಕನದಲ್ಲಿ ಬೇಗ ವಿಷಾದವಾಗಿ ಪರಿಣಮಿಸುತ್ತಿತ್ತು. ಆದ್ದರಿಂದ ಪ್ರಗತಿಶೀಲ ಮತ್ತು ಎಂಭತ್ತರ ದಶಕದಲ್ಲಿ ಬಂಡಾಯ ಚಳವಳಿಗಳು ಆರಂಭವಾದಾಗ ತಾತ್ವಿಕವಾಗಿ ಅವುಗಳೊಡನೆ ಗುರುತಿಸಿಕೊಂಡರೂ ಅದರ ರಭಸ ಇವರಲ್ಲಿ ಕಾಣುವುದಿಲ್ಲ. ಪು. ತಿ. ನ., ತೀ. ನಂ. ಶ್ರೀ.ಗಳ ಬಗ್ಗೆ ಸಾನೆಟ್ ಬರೆಯುವ ಇವರು ಅವರ ಮೆಲುದನಿಯನ್ನೇ ಇಷ್ಟ ಪಡುತ್ತಿದ್ದರು. 'ಮಳೆಬಿದ್ದ ನೆಲದಲ್ಲಿ ಕನ್ನಡದ ಕಂಪು : ಮಲೆದೇಗುಲದಲಿ ಮೊಳಗುತ್ತಿದೆ ಗಂಟೆ ಪು. ತಿ. ನ. ಪು. ತಿ. ನ.' ಎಂಬ ಸಾಲುಗಳಲ್ಲಿ ಗಂಟೆಯದೂ ಮೆಲುದನಿಯೆ.

**ನಾಟಕದ ಹುಚ್ಚು**

ನವ್ಯ ಸಾಹಿತ್ಯದಂತೆ ನವ್ಯ ರಂಗಭೂಮಿಗೂ ಒಂದು ಸಾಂಸ್ಕೃತಿಕ ಅಸ್ತಿತ್ವವಿದೆ. ಅದನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದವರಲ್ಲಿ ಕ. ವೆಂ. ಅವರೂ ಒಬ್ಬರು. ಶ್ರೀರಂಗರು ಆರಂಭಿಸಿದ ತರಬೇತಿ ಶಿಬಿರಗಳ ಸಹವಾಸದಿಂದ ಹೊಸ

**ಗಣಿ**

ಗಣಿಯನ್ನು
ಬಗೆದು, ನಂಜು
ಮಾಡಿದರು

ಗಣೀ ಧಣಿಗಳು
ಮುಗ್ಗರಿಸಿ
ಜೈಲು
ಸೇರಿದರು

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು

ರಂಗಭೂಮಿಯ ಬೆನ್ನುಹತ್ತಿದವರು ಕ. ವೆಂ. ಸಾಹಿತ್ಯ ಲೋಕದಿಂದಲೇ ರಂಗಭೂಮಿ ಪ್ರವೇಶಿಸುತ್ತಿದ್ದ ಕಾಲದಲ್ಲಿ ನಾಟಕ ಆಡಿಸುವುದು, ವಿಮರ್ಶಕರಾಗಿ ನೋಡುವುದು ನಾಟ್ಯ ಮೀಮಾಂಸೆಯ ದೃಷ್ಟಿ ಯಿಂದಾಗಬೇಕೆಂಬ ಹಂಬಲವನ್ನು ಕನ್ನಡದಲ್ಲಿ ಮೊದಲಿಗೆ ಪ್ರಚಾರಕ್ಕೆ ತಂದರು. ಎಂ. ಇ. ಎಸ್. ಕಾಲೇಜಿನಲ್ಲಿ ಬಿರುಸಿನ ರಂಗ ಚಟುವಟಿಕೆ ಹುಟ್ಟುಹಾಕಿದ್ದಲ್ಲದೆ, ಕಾರ್ಮಿಕರ ಮತ್ತು ಹವ್ಯಾಸಿ ತಂಡಗಳಲ್ಲೂ ನಿರ್ದೇಶಕರ ಕೆಲಸ ಮಾಡಿದರು. ಅಲ್ಲಿಯೂ ಇಂಗ್ಲಿಷ್ ಅಧ್ಯಾಪಕರ ಎದುರಿಗೆ ಸರಿಸಮನಾಗಿ ತಮ್ಮ ಛಾಪು ಒತ್ತಿದ ಕನ್ನಡದ ಮೇಷ್ಟ್ರು ಇವರೆ. ಕುವೆಂಪು ಅವರ ಮೋಡಣ್ಣನ ತಮ್ಮ, ನನ್ನ ಗೋಪಾಲ, ಶ್ರೀರಂಗರ ಸ್ವಗತ ಸಂಭಾಷಣೆ, ಟಾಗೋರರ ಅಂಚೆಮನೆ, ಮೆಂಟರ್ ಲಿಂಕನ ಕುರುಡುಲೋಕ (ಅನು : ಎಚ್.ಎಸ್.ಆರ್.), ಮುಂತಾದ ನಾಟಕಗಳನ್ನು ಲಿರಿಕಲ್ ಗುಣ ದೊಂದಿಗೆ ನವೀನ ರೀತಿಯಲ್ಲಿ ನಿರ್ದೇಶಿಸಿದರು. ಬೆಳಕು, ರಂಗಪರಿಕರಗಳನ್ನು ಆಧುನಿಕ ರೀತಿಯಲ್ಲಿ ಬಳಸುವುದಕ್ಕೆ ತೊಡಗಿದ ಇವರು ಮಾಡಿದ ಕೆಲಸಗಳಲ್ಲಿ ಎಷ್ಟೋ ದಾಖಲಾಗಿಲ್ಲ. ಎಚ್. ವಿ. ವೆಂಕಟಸುಬ್ಬಯ್ಯನವರು ಕ. ವೆಂ. ಮಾಡಿಸಿದ ಸ್ವಗತ ಸಂಭಾಷಣೆ ಬಗ್ಗೆ ಹೇಳಿದ್ದರು; "ಮೇಷ್ಟ್ರು ಪಾತ್ರಗಳು ಬೆಳಕಿನ ಕೋಲಿನ ಮುಖಾಂತರ ತೂರಿಬರುವ ಹಾಗೆ ಮಾಡಿದ್ದರು. ಅದು ಅದ್ಭುತ" ಎಂದು. ಐಟಿಐ ಕಾರ್ಮಿಕ ಸಂಘಕ್ಕೆ 'ಜ್ವಾಲೆ' ನಾಟಕ ಮಾಡಿಸಿದರು. ಹೆಸರು ಅಲ್ಲಿನ ಸತ್ಯನಾರಾಯಣ ಅವರದ್ದಾಗಿತ್ತು. ಬ್ರೆಕ್ಟ್ ಬಗ್ಗೆ ತುಂಬ ಆಕರ್ಷಿತರಾಗಿ ಆತನ ಬಗ್ಗೆ ಪುಸ್ತಕ ಬರೆಯಲು ಹವಣಿಸಿದ್ದರು. ಲಂಕೇಶರಿಗೆ ಆಪ್ತಮಿತ್ರರಾದ ಇವರು ಅವರ ನಾಟಕಗಳಿಗೆ ಸಲಹೆ ಸೂಚನೆ ಕೊಟ್ಟದ್ದಿದೆ. ಅದೇ ರೀತಿ ಶಿವಪ್ರಕಾಶ, ಬಿ. ಸುರೇಶರು ನಾಟಕ ಬರೆಯುವಾಗಲೂ ಉತ್ಸಾಹದಿಂದ ಅದರ ರಂಗ ಸಾಧ್ಯತೆಗಳನ್ನು ಕುರಿತು ಯೋಚಿಸಿ ಸೂಕ್ತ ಸಲಹೆ ಕೊಡುತ್ತಿದ್ದರು. "ನೀನ್ಯಾಕೆ ನಾಟಕ ಬರಿಬಾರದು" ಎಂದ ಲಂಕೇಶರಿಗೆ "ನೀನು ಬರಿ ನಾನು ಆಡಿಸುತ್ತೇನೆ" ಎಂದಿದ್ದವರು ಇಳಿಗಾಲದಲ್ಲಿ ನಾಟಕ ರಚನೆಯನ್ನೂ ಮಾಡಿದರು. ಭಗತ್ ಸಿಂಗ್ ವಿಚಾರಣೆ, ಗಾಂಧಿ ವಿಚಾರಣೆ, ಸಾಕ್ರೆಟೀಸ್ ವಿಚಾರಣೆಗಳ ತ್ರಿವಳಿ, ಕಲ್ಯಾಣದ ಕೊನೆಯ ದಿನಗಳು, ನಾಟಕಗಳನ್ನು ಬರೆದದ್ದಲ್ಲದೆ ಕೃಷ್ಣದೇವರಾಯನ ರಾಣಿಯರು, ಮತ್ತಿನ್ನೊಂದು ಜಾವಳಿ ಕುರಿತ ನಾಟಕಗಳ ಡ್ರಾಫ್ಟ್ ರಚಿಸಿದರು. ಬಹಳ ಹಿಂದೆ ಅತ್ತೆ ಕಾಂಜಿ (ನೋ ನಾಟಕದ ಅನುವಾದ), ಮಾಯಾ ಕೋಲಾಹಲ, ಲೋಹ ಭೀಮ ನಾಟಕಗಳನ್ನು ರಚಿಸಿದ್ದೂ ಉಂಟು.

ಎಂ. ಇ. ಎಸ್. ಕಾಲೇಜಿನಲ್ಲಲ್ಲದೆ ಸೆಂಟ್ರಲ್ ಕಾಲೇಜಿನಲ್ಲೂ ಕ. ವೆಂ. ನಾಟಕಗಳನ್ನಾಡಿಸಿದರು. ಕನ್ನಡ ಸಂಘದ ಚಿನ್ನದ ಬೆಳಸು ಕಾಲದಲ್ಲಿ ಬಿ. ಎಂ. ಶ್ರೀ. ಅವರ ಅಶ್ವತ್ಥಾಮನ್, ಮಾಸ್ತಿ ಯವರ ಯಶೋಧರೆ, ಮುಗಳಿಯವರ ಎತ್ತಿದ ಕೈ ನಾಟಕಗಳನ್ನು ಆಡಿಸಿದರು (ಇದರ ಬಗ್ಗೆ ಬುದ್ಧ ಮತ್ತು ಖಡ್ಗ ಎಂದು ಒಂದು ಟಿಪ್ಪಣಿ ಬರೆದಿದ್ದಾರೆ). ಅದರಲ್ಲಿ ಎಚ್. ಎಸ್. ಆರ್., ಜಿ. ಶ್ರೀನಿವಾಸರಾಜು, ಕೆ. ಆರ್. ಗಣೇಶ್, ಸಿ. ವೀರಣ್ಣ, ಬರಗೂರು ರಾಮಚಂದ್ರಪ್ಪ ನಟರಾಗಿದ್ದರು. ಇತ್ತೀಚೆಗೆ ತೀರಿ ಕೊಂಡ ಕ. ವೆಂ. ಅವರನ್ನು ಇನ್ನೇನು ಕಟ್ಟಿಗೆಯ ಮೇಲೆ ಇಡಬೇಕೆನ್ನುವಾಗ ಅಲ್ಲಿಗೆ ಓಡಿ ಬಂದ ಬರಗೂರು ಇದನ್ನು ನೆನೆಯುತ್ತಾ ನನ್ನನ್ನು ರಂಗದ ಮೇಲೆ ಮೊದಲು ತಂದವರೇ ಇವರು ಎಂದಾಗ ಕಣ್ಣಾಲಿ ಒದ್ದೆಯಾಯಿತು. ಹಾಗೆ ಇವರ ನಿರ್ದೇಶನ ದಲ್ಲಿ ಮೊದಲು ರಂಗ ಏರಿದವರು ಪ್ರಸಿದ್ಧ ನಿರ್ದೇಶಕ ಪ್ರಸನ್ನ, ನ. ರತ್ನರ 'ಎಲ್ಲಿಗೆ' ಅಸಂಗತ ನಾಟಕದಲ್ಲಿ. ಅವರ ಮಹತ್ವಾಕಾಂಕ್ಷಿ ಪ್ರಯೋಗ ಗಳಲ್ಲಿ ಹೆಸರಿಸಬೇಕಾದವು 'ದ ಥಿಯೇಟರ್‌ಗೆ' ಮಾಡಿಸಿದ ಮೃಚ್ಛಕಟಿಕ ಮತ್ತು ಪೀಪಲ್ಸ್ ಥಿಯೇಟರಿಗೆ ಮಾಡಿಸಿದ ಚಿರಸ್ಮರಣೆ (ನಿರಂಜನರ ಕಾದಂಬರಿಯ ನಾಟಕ ರೂಪ : ಬಿ. ಸಿ.)

ಪ್ರಿನ್ಸಿಪಾಲರಿಂದ ಪ್ಯೂನ್‌ವರೆಗೆ ಎಲ್ಲರೂ ರಂಗದ ಮೇಲೆ ಬರುವಂತೆ ಮಾಡಿ ಸಮಾಜವಾದ ರಂಗದಲ್ಲಿ ಸುಲಭ ಎಂದು ತೋರಿಸಿದ ಇವರು ಅನೇಕ ಸಂಘಟನೆಗಳಿಗೆ ಕುಮ್ಮಕ್ಕು ಕೊಟ್ಟು ಬೆಳೆಸಿದರು. ಅದರಲ್ಲಿ ಸಮುದಾಯವೂ ಮುಖ್ಯ. ಆದರೆ ಎಲ್ಲ ಕಡೆಗಿದ್ದೂ ಎಲ್ಲಿಗೂ ಅಂಟಿಕೊಂಡವರಲ್ಲ. ಮುಂದೆ ಬಿ. ವಿ. ಕಾರಂತರೇ ಮೊದಲಾಗಿ ಹೊಸ ವೃತ್ತಿಪರರು ಬಂದಾಗ ಅದಕ್ಕೆ ಬೇಕಾದ ಭೂಮಿಕೆಯನ್ನು ಸಿದ್ಧ ಮಾಡಿದವರು ಇವರು.

ಇವರನ್ನು ಹತ್ತು ವರ್ಷ ಆದಮೇಲೆ ಅವರ ಶತಮಾನದ ಹೊತ್ತಿಗೆ ಯಾರು ನೆನೆಯುತ್ತಾರೂ ಇಲ್ಲವೋ, ಆದರೆ ಈಗ ಅವರನ್ನು ನೆನೆದರೆ ನಾವು ಈಜಲಾಗದ ನದಿಯ ಮೇಲಿನ ಗಾಳಿ ನಮ್ಮನ್ನು ಕ್ಷಣಕಾಲ ಮುಟ್ಟಿ ಹೋದಂತಾಗುತ್ತದೆ.

**ಜೆ. ಶ್ರೀನಿವಾಸಮೂರ್ತಿ**
ನಂ.೨೫, ೧೬ನೇ ಅಡ್ಡರಸ್ತೆ, ೧೩ನೇ ಮುಖ್ಯರಸ್ತೆ
ಮಲ್ಲೇಶ್ವರಂ, ಬೆಂಗಳೂರು – ೫೬೦೦೫೫

# ವರ್ತಮಾನಕ್ಕೆ ಅಶೋಕನ ಪ್ರಸ್ತುತತೆ

**ಡಾ॥ ಎಚ್. ಎಸ್. ಗೋಪಾಲ ರಾವ್**

ಗೌತಮ ಬುದ್ಧ ಹೇಳಿದನೆಂದು ತಿಳಿಯಲಾದ ಮಾತುಗಳಲ್ಲಿ ನನಗೆ ಚೆನ್ನಾಗಿ ನೆನಪಿನಲ್ಲಿರುವುದು 'ಆಸೆಯೇ ದುಃಖಕ್ಕೆ ಮೂಲ.' ಇದನ್ನು ಅಶೋಕ ತನ್ನ ಬದುಕಿನಲ್ಲಿ ಅಳವಡಿಸಿಕೊಂಡು, ತನ್ನ ಪ್ರಜೆಗಳಿಗೂ ಅಳವಡಿಸಿಕೊಳ್ಳಲು ಸೂಚನೆ ನೀಡಿದ. ಶಿವಗಂಗೆಯ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ನನಗೆ ಇತಿಹಾಸದ ಪಾಠ ಹೇಳಿದ ಶ್ರೀ ಭೈರಣ್ಣ ಮೇಷ್ಟ್ರು ಪಾಠ ಮಾಡುವ ಸಂದರ್ಭ ಹೇಳಿದ್ದ ಮಾತುಗಳನ್ನು ನಾನು ಮರೆತಿಲ್ಲ. ಎಲ್ಲಾ ಮೇಷ್ಟ್ರುಗಳು ಹೇಳಿದ ಎಲ್ಲವೂ ಯಾರ ನೆನಪಿನಲ್ಲೂ ಇರುವುದಿಲ್ಲ. ಆದರೆ, ಪ್ರೌಢಶಾಲೆಯವರೆಗಿನ ಮೇಷ್ಟ್ರುಗಳು ಹೇಳಿದ ಹಲವು ವಿಚಾರಗಳು ದೀರ್ಘ ಕಾಲ ನೆನಪಿನಲ್ಲಿರುತ್ತವೆ. ಅವರ ಕೆಲವು ಮಾತುಗಳನ್ನು ಮರೆಯಲು ಸಾಧ್ಯವಾಗುವುದೇ ಇಲ್ಲ. ಅದು ಮೇಷ್ಟ್ರು ಮತ್ತು ವಿದ್ಯಾರ್ಥಿಯ ನಡುವಿನ ಹಾರ್ದಿಕ ಸಂಬಂಧವೋ ಮಾತಿನಲ್ಲಿದ್ದ ಮತ್ತು ಇರುವ ಭಾವವೋ ಸ್ಪಷ್ಟವಾಗುವುದಿಲ್ಲ. ಬುದ್ಧ ಹೇಳಿದ ಎಂದು ಮೇಷ್ಟ್ರು ಹೇಳಿದ್ದ ಮಾತುಗಳು ಇನ್ನೂ ನನ್ನ ಕಿವಿಯಲ್ಲಿವೆ. ಅದನ್ನು ಹೇಳಿದ್ದ ಶ್ರೀ ಭೈರಣ್ಣ ಮೇಷ್ಟ್ರು ನನಗೆ ಬುದ್ಧನ ನೆನಪು ಹಸಿರಾಗಿ ಉಳಿಯುವಂತೆ ಮಾಡಿದ್ದಾರೆ. ಶಾಸನಶಾಸ್ತ್ರದ ವಿದ್ಯಾರ್ಥಿಯಾಗಿ ಅಶೋಕನ ಶಾಸನಗಳ ಲಿಪಿ, ಭಾಷೆಗಳನ್ನು ಅಭ್ಯಾಸ ಮಾಡುತ್ತಲೇ ಅಶೋಕನು ಇತಿಹಾಸದಲ್ಲಿ ಪ್ರಮುಖವಾಗಿ ಉಳಿದಿರುವುದಕ್ಕೆ ಕಾರಣಗಳನ್ನು ತಿಳಿಯಲು ಪ್ರಯತ್ನಿಸಿದ್ದೇನೆ. ರಾಜ್ಯ ವಿಸ್ತರಣೆಯ ಮಹತ್ವಾಕಾಂಕ್ಷಿ ಸಾಮ್ರಾಟ ಅಶೋಕ ಕಳಿಂಗ ಯುದ್ಧಾನಂತರ ಅಲ್ಲಿನ ಸಾವು ನೋವುಗಳಿಗೆ ಪಶ್ಚಾತ್ತಾಪಪಟ್ಟು ಯುದ್ಧಕ್ಕೆ ವಿರಾಮ ಹೇಳಿ ಜನರಿಗೆ ಸಾರ್ಥಕ ಬದುಕು ನಡೆಸಲು ಸೂಚಿಸಿದ ನಡೆಗಳನ್ನು ಶಾಸನಗಳ ಮೂಲಕ ದಾಖಲಿಸಿದ ಪರಿ ಅನನ್ಯ.

ಇತಿಹಾಸದಿಂದ ಬದುಕಿನ ಪಾಠ ಕಲಿಯಬೇಕು ಎಂಬುದು ಹಿರಿಯರ ನಿರೀಕ್ಷೆ. ನಡೆದುಹೋದ ಘಟನೆಯ ಹೆಜ್ಜೆಗುರುತುಗಳು ಮುಂದಿನ ನಡೆಯನ್ನು ನಿರ್ಧರಿಸಬೇಕು. ಆಗಷ್ಟೇ ಇತಿಹಾಸದ ಅಧ್ಯಯನ



ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೆಗೊಳಂಗಳಲ್ಲಿ ತಲಾ ಎರಡು, ಅಂದರೆ ಒಟ್ಟು ನಾಲ್ಕು ಶಾಸನಗಳಿವೆ. ಹಿಂದೆ ರಾಯಚೂರು ಜಿಲ್ಲೆಯ ಭಾಗವಾಗಿದ್ದು, ಈಗ ಕೊಪ್ಪಳ ಜಿಲ್ಲೆಗೆ ಸೇರಿರುವ ಕೊಪ್ಪಳದ ಪಾಲ್ಕಿಗುಂಡು ಮತ್ತು ಗವಿಮಠ ಹಾಗೂ ಮಸ್ಕಿಗಳಲ್ಲಿ ತಲಾ ಒಂದೊಂದು, ಅಂದರೆ ಒಟ್ಟು ಮೂರು ಶಾಸನಗಳಿವೆ. ಇವುಗಳ ಪೈಕಿ ಮಸ್ಕಿ ಶಾಸನವೇ ದೇವಾನಾಂಪ್ರಿಯ ಪ್ರಿಯದರ್ಶಿಯೇ ಅಶೋಕ ಎನ್ನುವುದನ್ನು ಖಚಿತಪಡಿಸಿದ ಶಾಸನ. ಈಗಾಗಲೇ ತಿಳಿಸಿರುವಂತೆ ಇದು ಬೆಳಕು ಕಂಡದ್ದು ೨೬-೧-೧೯೧೫ರಂದು, ಅಂದರೆ ಸರಿಯಾಗಿ ಒಂದು ನೂರು ವರ್ಷಗಳ ಹಿಂದೆ. ಕಲಬುರಗಿ ಜಿಲ್ಲೆಯ ಸನ್ನತಿಯ ಚಂದ್ರಲಾಂಬಾ ದೇವಾಲಯದ ಆವರಣ ದಲ್ಲಿರುವ ಒಂದು ಗುಡಿಯಲ್ಲಿ ದೇವಿಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದ್ದ ಪೀಠದ ಎರಡೂ ಬದಿಗಳಲ್ಲಿ ಅಶೋಕನ ಶಾಸನಗಳಿರುವುದು ೧೯೮೯ರಲ್ಲಿ ಬೆಳಕಿಗೆ ಬಂತು. ಇವೆಲ್ಲವೂ ಅಶೋಕನ ಮುಖ್ಯ ಪ್ರಸ್ತರ ಶಾಸನಗಳ ಪ್ರತಿಗಳು. ಫಲಕದ ಒಂದು ಬದಿಯಲ್ಲಿ ಎರಡು ಮತ್ತು ಮತ್ತೊಂದು ಬದಿಯಲ್ಲಿ ಮತ್ತೆರಡು ಶಾಸನಗಳನ್ನು ಕೆತ್ತಲಾಗಿದೆ. ಈ ನಾಲ್ಕು ಶಾಸನಗಳೂ ಸೇರಿದಂತೆ ಕರ್ನಾಟಕದಲ್ಲಿ ಅಶೋಕನ ಹದಿನೇಳು ಶಾಸನಗಳು ಲಭ್ಯವಿವೆ. ಜೊತೆಗೆ ಸನ್ನತಿಯ ಉತ್ಖನನದ ಸಂದರ್ಭ ದೊರೆತ ಒಂದು ಭಾವಶಿಲ್ಪದ ಮೇಲೆ 'ರಾಜಾ ಅಸೋಕ' ಎಂಬ ಬರಹವಿದೆ. ಇದು ಅಶೋಕನ ಭಾವಶಿಲ್ಪ ಎನ್ನುವುದು ಖಚಿತವಾಗಿರುವುದರಿಂದ, ಮೊಟ್ಟ ಮೊದಲ ಬಾರಿಗೆ ಅಶೋಕನ ಭಾವಶಿಲ್ಪವು ಕರ್ನಾಟಕ ರಾಜ್ಯದಲ್ಲಿದೆ ಎಂದು ಸ್ಪಷ್ಟ ವಾಗುತ್ತದೆ. ಭಾರತೀಯ ಇತಿಹಾಸದಲ್ಲಿ ಇದು ಒಂದು ಮುಖ್ಯ ವಿಚಾರ.

ಸಾರ್ಥಕವಾಗುತ್ತದೆ. ಇತಿಹಾಸ ಬಲ್ಲ ಎಲ್ಲರಿಗೂ ಈ ಮಾತು ತಿಳಿದಿದೆ. ಇತಿಹಾಸ ತಿಳಿಯದವರಿಗೆ ಬಹುತೇಕ ಬುದ್ಧನೂ ತಿಳಿದಿರಲಾರ ಮತ್ತು ಅಶೋಕನ ಮಾತಂತೂ ದೂರವೇ ಉಳಿಯುತ್ತದೆ.

ಕಳಿಂಗ ಯುದ್ಧದಲ್ಲಿ ಸಂಭವಿಸಿದ ಸಾವು, ನೋವುಗಳಿಂದ ನೊಂದ ಅಶೋಕ ನಂತರ ಯುದ್ಧಕ್ಕೆ ವಿರಾಮ ಹೇಳಿದ. ಈಗ ಯಾವುದೇ ಕಾರಣಕ್ಕಾಗಿ ನಡೆಯುತ್ತಿರುವ ಸಂಘರ್ಷಗಳಲ್ಲಿ ಕೊಲ್ಲುವುದು ಮಕ್ಕಳ ಆಟದಂತಾಗಿದೆ ಎನಿಸುತ್ತದೆ. ಜೀವಕ್ಕೆ ಗೌರವವಿರಲಿ, ಅರ್ಥವೇ ಇಲ್ಲದಂತಾಗಿದೆ. ಕೊಲ್ಲುವವರಿಗೆ ಮತ್ತು ಕೊಲ್ಲಲೆಂದೇ ಸಿದ್ಧತೆ ನಡೆಸುವವರಿಗೆ ಯಾವುದೇ ಬುದ್ಧಿ ಮಾತು ಅರ್ಥವಾಗುವುದಿಲ್ಲ. ಬಲಿಗಾಗಿ ಬಲವಂತದಿಂದ ವಧಾಸ್ಥಾನಕ್ಕೆ ಎಳೆದೊಯ್ಯುವ ಯಾವುದೇ ಪ್ರಾಣಿಯ ಆರ್ತನಾದ ಯಾರ ಮನಸ್ಸನ್ನೂ ತಟ್ಟುವುದಿಲ್ಲ. ತನ್ನ ಅರಮನೆಯ ಅಡುಗೆಮನೆಯಲ್ಲಿ ಆಹಾರಕ್ಕಾಗಿ ನಡೆಯುತ್ತಿದ್ದ ಪ್ರಾಣಿಬಲಿಯನ್ನು ಕಡಿತಗೊಳಿಸುವ ದಿಟ್ಟ ನಿರ್ಧಾರ ಮಾಡಿದವನು ಅಶೋಕ. ಅಶೋಕನ ಗಿರ್ನಾರ್ ಪ್ರಸ್ತರ ಶಾಸನದಲ್ಲಿ ಈ ವಿಷಯವು ಪ್ರಸ್ತಾಪಿತವಾಗಿದೆ : 'ದೇವಾನಾಂಪ್ರಿಯ ಪ್ರಿಯದರ್ಶಿಯ ಅಡುಗೆಮನೆಯಲ್ಲಿ ಹಿಂದೆ ನೂರಾರು ಜೀವಗಳನ್ನು ಕೊಲ್ಲಲಾಗುತ್ತಿತ್ತು; ಇನ್ನು ಮುಂದೆ ದಿನದ ಅಡುಗೆಗಾಗಿ ಎರಡು ಹಕ್ಕಿಗಳು ಮತ್ತು ಒಂದು ಪ್ರಾಣಿಯನ್ನು ಮಾತ್ರ ಕೊಲ್ಲಬಹುದು. ಇದನ್ನೂ ಪ್ರತಿದಿನ ಮಾಡುವಂತಿಲ್ಲ. ಮುಂದಿನ ದಿನಗಳಲ್ಲಿ ಇದನ್ನೂ ನಿಲ್ಲಿಸತಕ್ಕದ್ದು.' ಮಾಂಸಾಹಾರವನ್ನು ತ್ಯಜಿಸಿ ಎಂದು ಯಾರನ್ನೂ ಒತ್ತಾಯಿಸುವ ಅವಶ್ಯಕತೆ ಇಲ್ಲ ಎಂಬುದು ಸರ್ವವೇದ್ಯ. ಅವರವರ ಆಹಾರ ಪದ್ಧತಿ ಅವರವರದು. ಅದರ ಮೇಲೆ ನಿರ್ಬಂಧ ಅಥವಾ ಪ್ರತಿಬಂಧ ಹೇರುವ ದುಸ್ಸಾಹಸವನ್ನು ಮಾಡುವಂತಿಲ್ಲ. ಮಾಡಲೂಬಾರದು. ಅದು ವ್ಯಕ್ತಿ ಸ್ವಾತಂತ್ರ್ಯದ ಹರಣವಾಗುತ್ತದೆ. ವ್ಯಕ್ತಿ ಸ್ವಾತಂತ್ರ್ಯ ಎಂದಾಗ, ಯಾರು ಏನನ್ನೂ ಬೇಕಾದರೂ ಮಾಡಬಹುದೆ ಎಂಬ ಸರಳ ಪ್ರಶ್ನೆ ಎದುರಾಗುತ್ತದೆ. ತಮಗಿಷ್ಟ ಬಂದ ಏನೆಲ್ಲವನ್ನೂ ಮಾಡಲು, ಮಾತನಾಡಲು ಯಾವ ಸ್ವಾತಂತ್ರ್ಯವೂ ಅವಕಾಶ ನೀಡುವುದಿಲ್ಲ. ಯಾವುದೇ ದೇಶದ ಸಂವಿಧಾನವೂ ಸ್ವೇಚ್ಛಾಪ್ರಧಾನ ಸ್ವಾತಂತ್ರ್ಯವನ್ನು ಪ್ರೋತ್ಸಾಹಿಸುವುದಿಲ್ಲ. ಸಂವಿಧಾನಾತ್ಮಕ ಸ್ವಾತಂತ್ರ್ಯದ ಅರ್ಥವ್ಯಾಪ್ತಿಯ ಚೌಕಟ್ಟನ್ನು ಮೀರಿದ ನೈತಿಕ ಚೌಕಟ್ಟನ್ನು ಯಾರೂ ಮೀರಬಾರದು ಎಂಬ ನಿರೀಕ್ಷೆ ಬಹುತೇಕ ಎಲ್ಲ ಪ್ರಜ್ಞಾವಂತರದು. ಸುಲಭವಾಗಿ ಕೈಗೆ ಸಿಗದ ಮತ್ತು ಕ್ರೌರ್ಯಕ್ಕೆ ಹೆಸರಾದ ಅಪರಾಧಿ ಕಂಡಾಗ, ಗುಂಡುಹಾರಿಸಿ ಕೊಲ್ಲುವುದು ಅಪರಾಧ ಆಗಲಾರದು. ಆದರೆ ನಿರಪರಾಧಿಯಾದ ಯಾವುದೇ ವ್ಯಕ್ತಿಯನ್ನು ಕೊಲ್ಲುವುದು ಅಪರಾಧ. ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛಾಚಾರಕ್ಕೆ ಅವಕಾಶ ದೊರೆಯಬಾರದು.

ಧರ್ಮ, ಭ್ರಷ್ಟಾಚಾರ, ಅಧಿಕಾರ ದುರುಪಯೋಗ ಇತ್ಯಾದಿಗಳ ಬಗ್ಗೆ ಆಗುತ್ತಿರುವ ವಾದ–ವಿವಾದಗಳು ವರ್ತಮಾನಕ್ಕೆ ಮಾತ್ರ ಸೀಮಿತವಲ್ಲ. ಆಡಳಿತದ ಅವಕಾಶವಿರುವ ಎಲ್ಲೆಡೆ ಈ ವಾದ–ವಿವಾದಗಳಿರುತ್ತವೆ. ಚರ್ಚೆಯು ಪ್ರಜಾಪ್ರಭುತ್ವದ ಪ್ರಮುಖ ಲಕ್ಷಣ. ಅಶೋಕನೂ ಮೊದಲಿಗೆ ಅಧಿಕಾರಕ್ಕೆ ಆಸೆಪಟ್ಟವನು. ಕಳಿಂಗದ ಯುದ್ಧವು ಅವನಿಗೆ ಕಲಿಸಿದ ಪಾಠವು ನಂತರ ಅವನ ಬದುಕನ್ನೇ ಬದಲಿಸಿತು. ಇದಕ್ಕೆ ಆಗಿನ ನ್ಯಾಯಾಂಗ ಪದ್ಧತಿ, ಕಾರ್ಯಾಂಗಗಳು ಕಾರಣವಲ್ಲ. ಅವನಿಗೆ ಖುದ್ದು ಬಂದ ತಿಳಿವಳಿಕೆ. ಅದಕ್ಕೆ ಅವಕಾಶ ಕಲ್ಪಿಸಿದ್ದು ಬುದ್ಧನ ನಡೆ, ನುಡಿ. ಅಶೋಕನಿಗೆ ಅಧಿಕಾರದ ಅಮಲು ಏರಿರಲಿಲ್ಲ ಎನ್ನುವುದಕ್ಕೆ ಅವನ ೬ನೆಯ ಪ್ರಸ್ತರ ಶಾಸನ ಸಾಕ್ಷಿಯಾಗಿದೆ. ಗಿರ್ನಾರ್ ಶಾಸನದ ಪಾಠವು, ಅಶೋಕನು ಪ್ರಜೆಗಳಿಗೆ ಸಂಬಂಧಿಸಿದ ಯಾವುದೇ ವಿಷಯವನ್ನು ಅವನು ಭೋಜನ ಮಾಡುತ್ತಿರುವಾಗಲಾಗಲೀ, ಅಂತಃಪುರದಲ್ಲಿರುವಾಗಲಾಗಲೀ, ಪ್ರಯಾಣ ಮಾಡುತ್ತಿರುವಾಗಲಾಗಲೀ, ಯಾವುದೇ ಸಮಯದಲ್ಲೂ ತಿಳಿಸಲು ಅವಕಾಶವಿರುವುದಾಗಿ ತಿಳಿಸಿದೆ. ಒಬ್ಬ ಸಾಮ್ರಾಟನಾದವನು ಪ್ರಜೆಗಳ ಸಮಸ್ಯೆಗಳನ್ನು ತಿಳಿಯಲು ಉತ್ಸುಕನಾಗಿದ್ದ ಮತ್ತು ಅದಕ್ಕೆ ಅಧಿಕೃತ ಅವಕಾಶಗಳನ್ನು ಕಲ್ಪಿಸಿದ್ದ ಎಂಬುದು ಮಹತ್ವದ ವಿಚಾರ.

ಅಶೋಕನ ೩ನೆಯ ಪ್ರಸ್ತರ ಶಾಸನವು, ಅವನ ಪಟ್ಟಾಭಿಷೇಕದ ೧೨ನೆಯ ವರ್ಷವನ್ನು ಉಲ್ಲೇಖಿಸಿದ್ದು, ಅದರಲ್ಲಿ ತನ್ನ ಸಾಮ್ರಾಜ್ಯದ ರಜ್ಜುಕರು ಮತ್ತು

ಪ್ರಾದೇಶಿಕರು ಎಂಬ ಅಧಿಕಾರಿಗಳಿಗೆ ನೀಡಿದ ಆದೇಶವು ದಾಖಲಾಗಿದೆ. ಅವನ ಆದೇಶದ ಪ್ರಕಾರ ಮೇಲೆ ಉಲ್ಲೇಖಿಸಲಾದ ಅಧಿಕಾರಿಗಳು ತಮ್ಮ ಆಡಳಿತಾವಧಿಯಲ್ಲಿ ಪ್ರತಿ ಐದು ವರ್ಷಕ್ಕೊಮ್ಮೆ ತಮ್ಮ ಆಡಳಿತ ವ್ಯಾಪ್ತಿಯಲ್ಲಿರುವ ಎಲ್ಲ ಸ್ಥಳಗಳ ತನಿಖೆಯ ಸಂದರ್ಭದಲ್ಲಿ, ವಿಶೇಷವಾದ ಒಂದು ಕೆಲಸವನ್ನು ಮಾಡಬೇಕು; ಅದೇಂದರೆ, ತಮ್ಮ ಪ್ರಜೆಗಳಿಗೆ ಧರ್ಮವನ್ನು ಕುರಿತು ಪ್ರಚಾರ ಮಾಡಬೇಕು. ಧರ್ಮವೆಂದರೆ, ತಂದೆ ತಾಯಿಯರನ್ನು ಗೌರವಿಸು. ಸ್ನೇಹಿತರು, ಪರಿಚಿತರು, ಬಂಧುಗಳನ್ನು ಆದರಿಸು. ಪ್ರಾಣಿಗಳನ್ನು ಕೊಲ್ಲುವುದನ್ನು ತಡೆ. ಇವು ಗೌರವದ ಕೆಲಸಗಳು. ಕಡಿಮೆ ವೆಚ್ಚ ಮಾಡುವುದು ಮತ್ತು ಕಡಿಮೆ ಉಳಿಸುವುದು ಒಳ್ಳೆಯ ಕೆಲಸ. ಇಲ್ಲಿ ಧರ್ಮ ಎಂದರೆ ಎಲ್ಲ ಮನುಷ್ಯರಿಗೂ ಅನ್ವಯವಾಗುವ ಸನ್ನಡತೆ. ಈಗ ಸಾಮಾನ್ಯವಾಗಿ ಪ್ರಚಲಿತದಲ್ಲಿರುವ ಧರ್ಮದ ವ್ಯಾಖ್ಯೆಯನ್ನು ಅಶೋಕನ ಮಾತುಗಳು ಮೀರಿವೆ. ಇಂತಹ ಮಾನವ ಧರ್ಮವು ಎಲ್ಲರಿಗೂ ಅನ್ವಯಿಸುವಂಥದ್ದು. ಅಶೋಕ ದೊಡ್ಡವನಾಗುವುದು ಇಂತಹ ಮಾತುಗಳಿಂದಲೇ. ಮತ್ತೊಂದು ಶಾಸನದಲ್ಲಿ ಅಶೋಕ ಧರ್ಮದ ಬಗೆಗಿನ ಈ ಮಾತುಗಳನ್ನು, ಹಾಳಾಗದೆ, ತನ್ನ ಮಕ್ಕಳು, ಮೊಮ್ಮಕ್ಕಳು ಮತ್ತು ಮುಮ್ಮಕ್ಕಳಿಗೂ ಕಾಣುವಂತೆ, ದೀರ್ಘ ಕಾಲ ಉಳಿಯಲಿ ಎಂಬ ಉದ್ದೇಶದಿಂದ ಕಲ್ಲಿನ ಮೇಲೆ ಶಾಸನವನ್ನು ಬರೆಸಿದ ಎಂಬ ಸೂಚನೆ ಇದೆ. ಶಾಸನವನ್ನು ಕಲ್ಲಿನ ಮೇಲೆ ಬರೆಸಿದ ಉದ್ದೇಶವನ್ನು ಈ ಮೂಲಕ ಸ್ಪಷ್ಟಪಡಿಸಲಾಗಿದೆ. ಅಶೋಕನಿಗೆ ವರ್ತಮಾನದ ಜೊತೆಗೆ ಭವಿಷ್ಯವನ್ನು ಕುರಿತ ಆಲೋಚನೆಯೂ ಇತ್ತು. ಯಾವುದೇ ವ್ಯಕ್ತಿ ತನ್ನ ಬಗ್ಗೆ ಮತ್ತು ಸದ್ಯದ ಬಗ್ಗೆ ಮಾತ್ರ ಚಿಂತಿಸುವುದಕ್ಕಿಂತ ತನ್ನ ಪ್ರಜೆಗಳು ಮತ್ತು ಎಲ್ಲ ಕಾಲದ ಬಗ್ಗೆ ಚಿಂತಿಸಿ, ಅದರಂತೆಯೇ ಕಾರ್ಯಪ್ರವೃತ್ತನಾಗುವುದರಿಂದ ಅವನಿಗೆ ದೈಹಿಕವಾಗಿ ಸಾವಿದ್ದರೂ, ಮಾನಸಿಕವಾಗಿ ಸಾವಿಲ್ಲ. ಆದ್ದರಿಂದಲೇ ಅಶೋಕ ಇಂದಿಗೂ ಉಳಿದಿದ್ದಾನೆ ಮತ್ತು ಪ್ರಸ್ತುತನಾಗುತ್ತಾನೆ. ಇದು ವಸ್ತುನಿಷ್ಠ ಆಲೋಚನೆ ಎನಿಸದಿರುವ ಸಾಧ್ಯತೆಗಳೂ ಇವೆ. ಆದರ್ಶ ಮತ್ತು ಕನಸುಗಳು ವಾಸ್ತವವಲ್ಲ ಎನ್ನುವ ಅರಿವಿದ್ದರೂ, ಕನಸು ಕಾಣಬೇಕು ಮತ್ತು ಆದರ್ಶದ ಬೆನ್ನು ಹತ್ತಬೇಕು. ಇದರಿಂದ ಯಾರಿಗೂ ಕೆಡುಕಂತೂ ಆಗುವುದಿಲ್ಲ.

ದೇವಾನಾಂಪ್ರಿಯ ಪ್ರಿಯದರ್ಶಿಯ ಶಾಸನಗಳು ಭಾರತದ ಹಲವೆಡೆ ದೊರೆತಿದ್ದರೂ, ಅವನೇ ಅಶೋಕ ಎಂದು ಮೊದಲಿಗೆ ದೃಢಪಡಿಸಿದ್ದು, ಕರ್ನಾಟಕ ರಾಜ್ಯದ ಈಗಿನ ಕೊಪ್ಪಳ ಜಿಲ್ಲೆಯ ಮಸ್ಕಿ ಗ್ರಾಮದ ಹೊರವಲಯದ ಗುಡ್ಡದ ಒಂದು ದೊಡ್ಡ ಬಂಡೆಯ ಮೇಲೆ ದೊರೆತ ಶಾಸನ. ಅದೊಂದು ಸಣ್ಣ ಗುಡ್ಡ. ಹೆಚ್ಚು ಎತ್ತರವಿಲ್ಲ. ಅಲ್ಲಿನ ಕಲ್ಲು ಬೂದುಬಣ್ಣದ ಬೆಣಚುಕಲ್ಲು. ಗುಡ್ಡದ ಕೆಳಭಾಗದ ಒಂದು ದೊಡ್ಡ ಹಾಸುಬಂಡೆಗೆ ಹೊಂದಿಕೊಂಡಂತಿರುವ ಗುಹೆಯ ಒಳಮುಖದಲ್ಲಿ, ಎಂಟು ಸಾಲುಗಳ ಒಂದು ಶಾಸನವಿದೆ. ಅದರಲ್ಲಿ ನೈಸರ್ಗಿಕ ಕಾರಣಗಳಿಂದಲೇ ಕೆಲವು ಅಕ್ಷರಗಳು ಹಾಳಾಗಿವೆ. ಇದು ಪತ್ತೆಯಾದದ್ದು ೧೯೧೫ರ ಜನವರಿ ೨೭ನೆಯ ತಾರೀಖು. ಅಂದರೆ ಈಗ್ಗೆ ಸರಿಯಾಗಿ ೧೦೦ ವರ್ಷಗಳ ಹಿಂದೆ. ಶಾಸನವನ್ನು ಓದಿದ ನಂತರ, ಆವರೆಗೆ ದೇವಾನಾಂಪ್ರಿಯ ಪ್ರಿಯದರ್ಶಿ ಯಾರು ಎಂಬ ಒಗಟಿಗೆ ಅವನು ಅಶೋಕ ಎಂಬುದು ಸ್ಪಷ್ಟವಾಯಿತು. ಶಾಸನದ ಮೊದಲ ಸಾಲಿನ ಆರಂಭದಲ್ಲೇ 'ದೇವಾನಾಂಪಿಯಸಅಸೋಕಸ' ಎಂದು ಬರೆಯಲಾಗಿದೆ. ಆದ್ದರಿಂದ ಶಾಸನದ ಮೂಲಕ ಅಶೋಕನ ಹೆಸರನ್ನು ಮೊಟ್ಟಮೊದಲಿಗೆ ಖಚಿತಪಡಿಸಿದ ಕೀರ್ತಿ ಕರ್ನಾಟಕದ ಪಾಲಿನದಾಗಿದೆ. ನಂತರ ಕಳೆದ ಶತಮಾನದ ೭೦ರ ದಶಕದಲ್ಲಿ ಬೆಳಕಿಗೆ ಬಂದ ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೇಗೊಳಂನ ಶಾಸನಗಳಲ್ಲೂ ಅಶೋಕನ ಹೆಸರು ಉಲ್ಲೇಖಗೊಂಡಿದೆ. ಕರ್ನಾಟಕವು ದೇವಾನಾಂಪ್ರಿಯ ಪ್ರಿಯದರ್ಶಿಯೇ ಅಶೋಕ ಎಂದು ಪ್ರಸಿದ್ಧಗೊಳಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದೆ.

**ಅಗಸನ ಕತ್ತೆ**

ಅಧಿಕಾರಿಯ ಅಧಿಕಾರ
ರಾಜಕಾರಣಿಯ ರಾಜಕಾರಣ
ಧರ್ಮಗುರುವಿನ ಧರ್ಮಕಾರಣ
ಈಗ ವಿನಾಕಾರಣ ಆಗಿವೆ
ಅಗಸನ ಕತ್ತೆ
ಏಕೆಂದರೆ ಅವರು
ಅವುಗಳನು ಬಳಸಿಹರು
ಅವರವರ ಮೂಗಿನ ನೇರಕೆ !

ಪ್ರೊ॥ ಶಂಕರಗೌಡ ಸತ್ಮಾರ
ಧಾರವಾಡ

ಈಚೆಗೆ ಕಲಬುರಗಿ ಜಿಲ್ಲೆಯ ಸನ್ನತಿಗೆ ಹೊಂದಿಕೊಂಡ ಕಣಗನಹಳ್ಳಿಯಲ್ಲಿ ನೆಲಕಚ್ಚಿದ್ದ ಬೌದ್ಧ ಸ್ತೂಪದ ಅವಶೇಷಗಳ ನಡುವೆ 'ರಾಜಾ ಅಸೋಕ' ಎಂಬ ಉಲ್ಲೇಖವಿರುವ ಒಂದು ಭಾವಶಿಲ್ಪವೂ ಸಿಕ್ಕಿರುವುದು ಕರ್ನಾಟಕದ ಪಾಲಿಗೆ ಮತ್ತೊಂದು ದಾಖಲೆ. ಅಶೋಕ ಕರ್ನಾಟಕ ಪ್ರಾಂತ್ಯಕ್ಕೆ ಬಂದಿದ್ದನೋ ಇಲ್ಲವೋ ಎಂಬುದು ಸ್ಪಷ್ಟವಾಗಿಲ್ಲ. ಆದರೆ ಈಗ ಕರ್ನಾಟಕದಲ್ಲಿ ದೊರೆತಿರುವ ಶಾಸನಗಳು, ಆಯಾ ಪ್ರದೇಶಗಳು ಅಶೋಕನ ಕಾಲದ ಮೌರ್ಯ ಸಾಮ್ರಾಜ್ಯದ ಗಡಿಗಳಾಗಿದ್ದವು ಎಂದು ಖಚಿತಪಡಿಸಿವೆ. ಅಶೋಕನ ತಾತ, ಮೌರ್ಯ ವಂಶದ ಮೂಲಪುರುಷ ಚಂದ್ರಗುಪ್ತ ಮೌರ್ಯನಂತೂ, ತನ್ನ ಗುರು ಭದ್ರಬಾಹು ಮುನಿಗಳ ಜೊತೆಗೆ ಕರ್ನಾಟಕದ ಶ್ರವಣಬೆಳಗೊಳಕ್ಕೆ ಬಂದು ಅಲ್ಲೇ ಸಲ್ಲೇಖನ ವ್ರತದ ಮೂಲಕ ಸಮಾಧಿಸ್ಥನಾದನೆಂಬುದು ಖಚಿತವಾಗಿದೆ. ಚಂದ್ರಗುಪ್ತ ಜೈನಧರ್ಮವನ್ನು ಅವಲಂಬಿಸಿದ್ದರೂ, ಆ ಬಗ್ಗೆ ಪ್ರಚಾರ ಮಾಡಿದ ಸೂಚನೆಗಳಿಲ್ಲ. ಅವನ ಮೊಮ್ಮಗ ಅಶೋಕನು ಬೌದ್ಧಧರ್ಮವನ್ನು ಅವಲಂಬಿಸಿ, ಬೌದ್ಧಧರ್ಮದ ಪ್ರಚಾರಕ್ಕಾಗಿ ಶ್ರಮಿಸಿದ್ದಾನೆ. ಅದೇ ಕಾರಣದಿಂದ ಭಾರತದ ಬಹುತೇಕ ಎಲ್ಲ ಗಡಿ ಪ್ರಾಂತ್ಯಗಳಲ್ಲಿ, ಆಯಾ ಪ್ರಾಂತ್ಯಗಳ ಜನರಿಗೆ ತಿಳಿಯುವ ಮತ್ತು ಅರ್ಥವಾಗುವ ರೀತಿಯಲ್ಲಿ ಶಾಸನಗಳನ್ನು ಹಾಕಿಸಿದ್ದಾನೆ. ಅವನ ಶಾಸನಗಳಲ್ಲಿ ಅವನು ಬೌದ್ಧಧರ್ಮವನ್ನು ಸ್ವೀಕರಿಸಿದ ಸೂಚನೆಗಳಿದ್ದರೂ, ನೇರವಾಗಿ ಅವನು ಅದೊಂದೇ ಧರ್ಮವನ್ನು ಪ್ರಚಾರ ಮಾಡಲಿಲ್ಲ. ಅವನು ಪ್ರಚಾರ ಮಾಡಿದ್ದು ಮಾನವ ಧರ್ಮವನ್ನು. ಯಾವುದೇ ನಿಶ್ಚಿತ ಧರ್ಮದ ಚೌಕಟ್ಟನ್ನು ಮೀರಿದ ಮಾನವಧರ್ಮವನ್ನು ಅಶೋಕ ತನ್ನ ಅಧಿಕಾರಿಗಳ ಮೂಲಕ ತಿಳಿಸುವ ಸಾರ್ಥಕ ಪ್ರಯತ್ನ ಮಾಡಿದ್ದಾನೆ. ಆದ್ದರಿಂದ ಅಶೋಕನು ಎಲ್ಲ ಕಾಲಕ್ಕೂ ಪ್ರಸ್ತುತನಾಗುತ್ತಾನೆ. ಶಭಾಷ್‌ಗಿರಿಯಲ್ಲಿರುವ ಅವನ ೧೩ನೆಯ ಪ್ರಸ್ತರ ಶಾಸನವು ಈ ನಿಟ್ಟಿನಲ್ಲಿ ಬಹಳ ಮಹತ್ವದ ದಾಖಲೆಯಾಗಿದೆ. ಒಂದೊಂದು ಧರ್ಮವಿರಲಿ, ಒಂದೊಂದು ಜಾತಿಯವರೂ ತಾವು ಶ್ರೇಷ್ಠರೆಂದು ಘೋಷಿಸಿಕೊಂಡು ಅನ್ಯಜಾತಿಯವರನ್ನು ಕೀಳಾಗಿ ಕಾಣುವ ಹೊತ್ತಿನಲ್ಲಿ ಅಶೋಕನ ಶಾಸನಗಳು ಮರಳುಗಾಡಿನ ನಡುವಿನ ಓಯಸಿಸ್‌ನಂತೆ ಕಾಣುತ್ತವೆ. ಆ ಶಾಸನದ ಪಾಠದ ಕನ್ನಡ ಅನುವಾದ ಹೀಗಿದೆ: 'ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಸನ್ಯಾಸಿಗಳೂ, ಗೃಹಸ್ಥರೂ ಆದ ಎಲ್ಲಾ ಮತದವರನ್ನೂ ದಾನಗಳಿಂದ ಪೂಜಿಸುತ್ತಿರುವನು. ಆದರೆ ಆ ಬಗೆಯ ದಾನವನ್ನೂ, ಪೂಜೆಯನ್ನೂ ದೇವಾನಾಂಪ್ರಿಯನು ಸರ್ವ ಮತಧರ್ಮಗಳ ಸಾಮರಸ್ಯಕ್ಕಿಂತ ಉತ್ತಮವಾದುದೆಂದು ತಿಳಿಯುವುದಿಲ್ಲ. ಸರ್ವ ಮತಧರ್ಮಗಳ ಸಾಮರಸ್ಯವನ್ನು ಅನೇಕ ಮಾರ್ಗಗಳಲ್ಲಿ ಕೈಗೂಡಿಸಬಹುದು. ಅವುಗಳಲ್ಲಿ ಬಹು ಮುಖ್ಯವಾದುದು ವಾಕ್‌ನಿಗ್ರಹ. ತನ್ನ ಮತದ ಹೊಗಳಿಕೆಯನ್ನೂ ಅನ್ಯಮತದ ದೂಷಣೆಯನ್ನೂ ಕಾರಣವಿಲ್ಲದೆ ಮಾಡಕೂಡದು. ಕಾರಣವಿದ್ದಾಗ್ಯೂ ದೂಷಣೆಯು ಬಹು ಲಘುವಾಗಿಯೇ ಇರಬೇಕು. ಅದಕ್ಕೆ ವಿರುದ್ಧವಾಗಿ ಎಲ್ಲಾ ಸಮಯದಲ್ಲೂ ಅನ್ಯಮತೀಯರನ್ನು ಗೌರವಿಸಬೇಕು. ಇದರಿಂದ ತನ್ನ ಮತವೂ ವರ್ಧಿಸುತ್ತದೆ ಮತ್ತು ಅನ್ಯಮತಗಳೂ ಬೆಳೆಯುತ್ತವೆ. ಹೀಗೆ ಮಾಡದಿದ್ದರೆ ತನ್ನ ಮತಕ್ಕೆ ಹಾನಿಯೂ ಅನ್ಯಮತಗಳಿಗೆ ಅಪಕಾರವೂ ಉಂಟಾಗುತ್ತದೆ. ಸ್ವಮತ ಪ್ರೀತಿ ಮತ್ತು ಅನ್ಯಮತ ದ್ವೇಷದಿಂದ ತನ್ನ ಮತಕ್ಕೇ ಹೆಚ್ಚು ಹಾನಿಯಾಗುತ್ತದೆ. ಆದುದರಿಂದ ವಾಕ್‌ನಿಗ್ರಹವು ಸಾಧುವಾದುದು. ಎಲ್ಲಾ ಮತದವರೂ ಇತರ ಮತಗಳ ಧರ್ಮಗಳಲ್ಲಿ ಹೆಚ್ಚು ಜ್ಞಾನವನ್ನು ಸಂಪಾದಿಸಬೇಕೆಂಬುದೇ ದೇವಾನಾಂಪ್ರಿಯನ ಆಸೆ. ತಮ್ಮ ತಮ್ಮ ಮತಗಳಲ್ಲಿ ಶ್ರದ್ಧೆ ಇರುವವರಿಗೆ ಈ ರೀತಿ ಹೇಳತಕ್ಕದ್ದು. ಸರ್ವಮತಗಳ ಸಾಮರಸ್ಯವುಂಟಾಗುವಂತೆ ಮಾಡುವುದು ದಾನ, ಪೂಜೆ ಮುಂತಾದವುಗಳಿಗಿಂತ ಉತ್ತಮವಾದುದೆಂದು ದೇವಾನಾಂಪ್ರಿಯನು ಭಾವಿಸುತ್ತಾನೆ ಎಂದು, ನನ್ನಿಂದ ನಿಯೋಜಿತರಾಗಿರುವ ಧರ್ಮಮಹಾಮಾತ್ರರು,







ಸ್ತ್ರೀ ಅಧ್ಯಕ್ಷ ಮಹಾಮಾತ್ರರು, ವ್ರಜಭೂಮಿಕರು ಮುಂತಾದ ಅಧಿಕಾರಿಗಳು ಜನರಿಗೆ ತಿಳಿಸ ತಕ್ಕದ್ದು. ಇದರ ಫಲವಾಗಿ ಪ್ರತಿಯೊಬ್ಬನ ಮತದ ಬೆಳವಣಿಗೆಯೂ ಧರ್ಮದ ವೃದ್ಧಿಯೂ ಆಗುವುದೆಂದು ನಾನು ಆಶಿಸುತ್ತೇನೆ.'

ಸ್ವಮತ ಪ್ರಶಂಸೆ ಮತ್ತು ಅನ್ಯ ಮತ ದ್ವೇಷವೇ ಪ್ರಧಾನವಾಗಿ ಕಾಣುತ್ತಿರುವ ಹೊತ್ತಿನಲ್ಲಿ ಅಶೋಕನ ಮಾತುಗಳು ಎಲ್ಲ ಕಾಲಕ್ಕೂ ಪ್ರಸ್ತುತ ಎನಿಸುತ್ತವೆ. ನೈತಿಕತೆಗೆ ಒತ್ತು ನೀಡಿರುವ ಅಶೋಕ ಕರ್ನಾಟಕದಲ್ಲೂ, ಶಾಸನಗಳ ಮೂಲಕ ತನ್ನ ಹೆಜ್ಜೆಗುರುತುಗಳನ್ನು ಉಳಿಸಿದ್ದಾನೆ.

ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ಧಾಪುರ ಮತ್ತು ಜಟಿಂಗ ರಾಮೇಶ್ವರಗಳಲ್ಲಿ, ತಲಾ ಎರಡು, ಅಂದರೆ ಒಟ್ಟು ಆರು ಶಾಸನಗಳು ದೊರೆತಿವೆ. ಅಶೋಕನ ಶಾಸನಗಳ ವಿಶೇಷವೆಂದರೆ ಅವನ ಪ್ರತಿಯೊಂದು ಶಾಸನವೂ ಅವನದೇ ಆದ ಒಂದಲ್ಲ ಒಂದು ಶಾಸನದ ಪ್ರತಿಯಾಗಿರುತ್ತದೆ. ಈ ಮೇಲಿನ ಶಾಸನಗಳು ಮೊದಲು ಬೆಳಕಿಗೆ ಬಂದದ್ದು ೧೮೯೨ರಲ್ಲಿ. ಅದನ್ನು ಪ್ರಕಟಿಸಿದ ಕೀರ್ತಿ ಬಿ. ಎಲ್. ರೈಸ್ ಅವರಿಗೆ ಸಲ್ಲುತ್ತದೆ.

ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೆಗೊಳಂಗಳಲ್ಲಿ ತಲಾ ಎರಡು, ಅಂದರೆ ಒಟ್ಟು ನಾಲ್ಕು ಶಾಸನಗಳಿವೆ. ಹಿಂದೆ ರಾಯಚೂರು ಜಿಲ್ಲೆಯ ಭಾಗವಾಗಿದ್ದು, ಈಗ ಕೊಪ್ಪಳ ಜಿಲ್ಲೆಗೆ ಸೇರಿರುವ ಕೊಪ್ಪಳದ ಪಾಲ್ಕಿಗುಂಡು ಮತ್ತು ಗವಿಮಠ ಹಾಗೂ ಮಸ್ಕಿಗಳಲ್ಲಿ ತಲಾ ಒಂದೊಂದು, ಅಂದರೆ ಒಟ್ಟು ಮೂರು ಶಾಸನಗಳಿವೆ. ಇವುಗಳ ಪೈಕಿ ಮಸ್ಕಿ ಶಾಸನವೇ ದೇವಾನಾಂಪ್ರಿಯ ಪ್ರಿಯದರ್ಶಿಯೇ ಅಶೋಕ ಎನ್ನುವುದನ್ನು ಖಚಿತಪಡಿಸಿದ ಶಾಸನ. ಈಗಾಗಲೇ ತಿಳಿಸಿರುವಂತೆ ಇದು ಬೆಳಕು ಕಂಡದ್ದು ೨೮-೧-೧೯೧೫ರಂದು, ಅಂದರೆ ಸರಿಯಾಗಿ ಒಂದು ನೂರು ವರ್ಷಗಳ ಹಿಂದೆ. ಕಲಬುರಗಿ ಜಿಲ್ಲೆಯ ಸನ್ನತಿಯ ಚಂದ್ರಲಾಂಬಾ ದೇವಾಲಯದ ಆವರಣದಲ್ಲಿರುವ ಒಂದು ಗುಡಿಯಲ್ಲಿ ದೇವಿಯ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದ್ದ ಪೀಠದ ಎರಡೂ ಬದಿಗಳಲ್ಲಿ ಅಶೋಕನ ಶಾಸನಗಳಿರುವುದು ೧೯೮೯ರಲ್ಲಿ ಬೆಳಕಿಗೆ ಬಂತು. ಇವೆಲ್ಲವೂ ಅಶೋಕನ ಮುಖ್ಯ ಪ್ರಸ್ತರ ಶಾಸನಗಳ ಪ್ರತಿಗಳು. ಫಲಕದ ಒಂದು ಬದಿಯಲ್ಲಿ ಎರಡು ಮತ್ತು ಮತ್ತೊಂದು ಬದಿಯಲ್ಲಿ ಮತ್ತೆರಡು ಶಾಸನಗಳನ್ನು ಕೆತ್ತಲಾಗಿದೆ. ಈ ನಾಲ್ಕು ಶಾಸನಗಳೂ ಸೇರಿದಂತೆ ಕರ್ನಾಟಕದಲ್ಲಿ ಅಶೋಕನ ಹದಿನೇಳು ಶಾಸನಗಳು ಲಭ್ಯವಿವೆ. ಜೊತೆಗೆ ಸನ್ನತಿಯ ಉತ್ಖನನದ ಸಂದರ್ಭ ದೊರೆತ ಒಂದು ಭಾವಶಿಲ್ಪದ ಮೇಲೆ 'ರಾಜಾ ಅಸೋಕ' ಎಂಬ ಬರಹವಿದೆ. ಇದು ಅಶೋಕನ ಭಾವಶಿಲ್ಪ ಎನ್ನುವುದು ಖಚಿತವಾಗಿರುವುದರಿಂದ, ಮೊಟ್ಟ ಮೊದಲ ಬಾರಿಗೆ ಅಶೋಕನ ಭಾವಶಿಲ್ಪವು ಕರ್ನಾಟಕ ರಾಜ್ಯದಲ್ಲಿದೆ ಎಂದು ಸ್ಪಷ್ಟವಾಗುತ್ತದೆ. ಭಾರತೀಯ ಇತಿಹಾಸದಲ್ಲಿ ಇದು ಒಂದು ಮುಖ್ಯ ವಿಚಾರ.

ಕ್ರಿ. ಪೂ. ೨೭೨ರಿಂದ ೨೩೨ರವರೆಗೆ, ೪೦ ವರ್ಷಗಳ ಕಾಲ ಆಡಳಿತ ನಡೆಸಿದ ಅಶೋಕ ಮೌರ್ಯ ಸಾಮ್ರಾಜ್ಯದ ಪ್ರಖ್ಯಾತ ದೊರೆ. ಯಾವುದೇ ಕಾಲದ ಮತ್ತು ಯಾವುದೇ ಪ್ರದೇಶದ ಆಡಳಿತಗಾರರು ಅಶೋಕನನ್ನು ಮಾದರಿಯಾಗಿ ಇಟ್ಟುಕೊಂಡರೆ ತಪ್ಪಾಗುವುದಿಲ್ಲ. ಮಾಡಿದ ತಪ್ಪನ್ನು ತಿದ್ದಿಕೊಂಡು ಪ್ರಜೆಗಳ ಒಳಿತಿಗಾಗಿ ಶ್ರಮಿಸುವುದು ದೊಡ್ಡ ಮಾತು. ಒಂದೆಡೆ ಧರ್ಮ ಮತ್ತು ಮತಗಳ ಹೆಸರಿನಲ್ಲಿ ಘರ್ಷಣೆಗಳಾಗುತ್ತಿದ್ದರೆ, ಇನ್ನೊಂದೆಡೆ ಮನುಷ್ಯನ ದುರಾಸೆಗೆ ಪರಿಸರ ನಾಶವಾಗುತ್ತಿದೆ. ಆಸೆ ಎನ್ನುವುದಕ್ಕೆ ಮಿತಿ ಇರಬೇಕು. ಆಸೆಯೇ ಬೇಡ ಎನ್ನುವುದು ಸಾಧ್ಯವಿಲ್ಲ; ಆದರೆ ಅದಕ್ಕೊಂದು ಮಿತಿ ಇರಬೇಕಾದದ್ದು ಅನಿವಾರ್ಯ. ಸುಲಭವಾಗಿ ಮತ್ತು ವಕ್ರಮಾರ್ಗದಿಂದ ಹಣ ಸಂಪಾದಿಸಿದ ವ್ಯಕ್ತಿ, ಆ ಹಣವನ್ನು ಬಳಸಿಕೊಳ್ಳಲು ಅನ್ಯಮಾರ್ಗಗಳನ್ನು ಹುಡುಕಿಕೊಳ್ಳಬೇಕಾದ್ದು ಅನಿವಾರ್ಯ. ಅದಕ್ಕಾಗಿ ಅನುಸರಿಸುವ ವಿಧಾನಗಳಲ್ಲಿ ಭೂಮಿಯ ಖರೀದಿಯೂ ಒಂದು. ಭೂಮಿಯ ಮಾರಾಟ ಮತ್ತು ಕೊಳ್ಳುವಿಕೆಯಲ್ಲಿ ಆಗುತ್ತಿರುವ ವಂಚನೆ ಮತ್ತು ಮೋಸವು ಬಹುತೇಕ ಎಲ್ಲ ನಾಗರಿಕರಿಗೂ ತಿಳಿದಿರುತ್ತದೆ. ಒಂದು ಕುಟುಂಬದ ವಾಸಕ್ಕೆ ಒಂದು ಮನೆ ಸಾಕು. ಕುಟುಂಬ ಪಾಲಾಗುವ ಸಂದರ್ಭದಲ್ಲಿ ಮಾತ್ರ ಪಾಲಿಗೆ ತಕ್ಕಂತೆ ಮನೆಗಳ ಸಂಖ್ಯೆ ಹೆಚ್ಚಬೇಕು. ಅದು ಅನಿವಾರ್ಯ. ಆದರೆ ಇತ್ತೀಚಿನ ದಿನಗಳಲ್ಲಿ ಮನೆಗಳನ್ನು ಕಟ್ಟಿಸಿ ಬಾಡಿಗೆಗೆ ಕೊಡುವುದು ಒಂದು ದಂಧೆಯಾಗಿದೆ. ಇಲ್ಲಿ ಮನೆ ಇಲ್ಲದೆ ಅನ್ಯ ಸ್ಥಳಗಳಲ್ಲಿ ದುಡಿಯುವ ಮತ್ತು ಸ್ಥಳದಿಂದ ಸ್ಥಳಕ್ಕೆ ವರ್ಗಾವಣೆಗೊಳ್ಳುವ ನೌಕರ ವರ್ಗದ ಅನುಕೂಲಕ್ಕೆಂದು, ಮನೆಗಳನ್ನು ಕಟ್ಟಿಸಿ, ಬಾಡಿಗೆಗೆ ಕೊಡುವ ಕ್ರಮವನ್ನು ತಪ್ಪು ಎನ್ನಲಾಗುವುದಿಲ್ಲ. ಆದರೆ ಅದನ್ನು ಒಂದು ಲಾಭದ ದಂಧೆಯನ್ನಾಗಿ ಪರಿವರ್ತಿಸುವುದು ದುರಾಸೆಯ ಮತ್ತೊಂದು ರೂಪ. ದುರಾಸೆಯ ಪ್ರತಿರೂಪವಾಗಿರುವ ಅದೆಷ್ಟು ಮನೆಗಳು ಖಾಲಿ ಇವೆ ಎನ್ನುವುದರ ಬಗ್ಗೆ ಒಂದು ಸಮೀಕ್ಷೆ ನಡೆಸಬೇಕಾಗಬಹುದು. ವಾಸದ ಬಡಾವಣೆಗಳು ಹೆಚ್ಚುತ್ತಿರುವ ಸಂದರ್ಭದಲ್ಲಿ ಅದೆಷ್ಟು ಎಕರೆ ಕೃಷಿಭೂಮಿ ನಷ್ಟವಾಗುತ್ತಿದೆ ಎಂಬುದರ ಅಂದಾಜು ಮಾಡಬೇಕಾಗಿದೆ.

ಮನುಷ್ಯನ ದುರಾಸೆಯಿಂದ ಸಂಭವಿಸುತ್ತಿರುವ ಇಂತಹ ಅವಘಡಗಳಿಗೆ ಇನ್ನೂ ಅನೇಕ ಉದಾಹರಣೆಗಳನ್ನು ನೀಡಬಹುದು. ರಸ್ತೆಯ ಅಗಲೀಕರಣದ ಸಂದರ್ಭದಲ್ಲಿ ಮೊದಲಿನ ಆಡಳಿತಗಾರರು ನೆಡಿಸಿದ್ದ ರಸ್ತೆ ಬದಿಯ ಸಾಲು ಮರಗಳು ನಾಶವಾಗಿವೆ. ಆ ಮರಗಳಲ್ಲಿ ಗೂಡು ಕಟ್ಟಿಕೊಂಡು ವಾಸಿಸುತ್ತಿದ್ದ ಪಕ್ಷಿ ಸಂಕುಲ ಕಾಣೆಯಾಗುತ್ತಿದೆ. ಮನುಷ್ಯನ ದುರಾಸೆಗೊಂದು ಮಿತಿ ಇರಬೇಕು. ಇಲ್ಲವಾದರೆ ನಾವು ಪ್ರಕೃತಿಯ ಅವಕೃಪೆಗೆ ಪಾತ್ರರಾಗಬೇಕಾದ್ದು ಅನಿವಾರ್ಯ.

ಹಣಕ್ಕಾಗಿ, ಅಧಿಕಾರಕ್ಕಾಗಿ ಕಿತ್ತಾಡುವ ಜನರೇ ಹೆಚ್ಚಾಗುತ್ತಿರುವ ಹೊತ್ತಿನಲ್ಲಿ ಆಸೆಗೆ ಕಡಿವಾಣ ಹಾಕಿದ ಬುದ್ಧ ಮತ್ತು ಅವನ ಉದ್ದೇಶಗಳನ್ನು ತನ್ನ ಆಳ್ವಿಕೆಯ ವ್ಯಾಪ್ತಿಯ ಮತ್ತು ಗಡಿ ಭಾಗಗಳ ಪ್ರದೇಶದಲ್ಲಿ ದಾಖಲು ಮಾಡಿರುವ ಅಶೋಕ ಇಬ್ಬರೂ ಮಹತ್ವದ ಸಾಧಕರಾಗಿ ಗೋಚರಿಸುತ್ತಾರೆ.

**ಡಾ॥ ಎಚ್. ಎಸ್. ಗೋಪಾಲ ರಾವ್**
ನಂ. ೧೪೪, 'ಸ್ವಸ್ತಿಶ್ರೀಸ್ಕಂದ', ಐ.ವೈ.ಡಿ. ರಸ್ತೆ, ಅರಸಿನಕುಂಟೆ
ನೆಲಮಂಗಲ ತಾಲ್ಲೂಕು, ಬೆಂಗಳೂರು (ಗ್ರಾ)ಜಿಲ್ಲೆ – ೫೬೨ ೧೨೩





# ಹಿಂದೂಗಳ ಸಾಂಸ್ಕೃತಿಕ ಇತಿಹಾಸದ ಮರ್ಮ

**ನಾಲ್ಕು ಸಾವಿರ ವರ್ಷಗಳ ಹಿಂದೆ ಯಾವ ಪ್ರಾರ್ಥನೆಯನ್ನು ಹೇಳಲಾಗುತ್ತಿತ್ತೋ ಇಂದಿಗೂ ಯಥಾವತ್ತಾಗಿ ಒಂದು ಪದವೂ ವ್ಯತ್ಯಾಸವಾಗದಂತೆ ಹೇಳಲಾಗುತ್ತದೆ. ಪ್ರಾಚೀನ ಗ್ರಂಥದಲ್ಲಿನ ಸಂವಾದ, ಕವಿತೆ, ವರ್ಣನೆ ಇವತ್ತಿಗೂ ಹಾಗೇ ಉಳಿದಿವೆ. ಮುಂದೆ ವಿಕಾಸ ಹೊಂದಿದ್ದ ನಾಟ್ಯಕಲೆಯ ಕುರುಹುಗಳು ಅಲ್ಲಿ ಸಿಗುತ್ತವೆ. ಅಲ್ಲಿ ಬಣ್ಣಿಸಲಾದ ದೇವತೆಗಳ ದೇವತತ್ವವನ್ನು ಇಂದಿಗೂ ಮಾನ್ಯ ಮಾಡಲಾಗುತ್ತದೆ. ಈ ಪ್ರಾಚೀನ ಕಾಲದ ಯಾವುದೇ ಸಂಗತಿಯೂ ಇಂದು ಹಿಂದೂಸ್ಥಾನದಲ್ಲಿ ಸಂಪೂರ್ಣ ನಾಶಗೊಳ್ಳಲಿಲ್ಲ. ದೇಶದ ಒಂದಲ್ಲ ಒಂದು ಭಾಗದಲ್ಲಿ ಅವು ಯಥಾವತ್ತಾಗಿ ಕಾಣಬರುತ್ತವೆ. ಪುರಾಣ ವಸ್ತು ಸಂಶೋಧಕರಿಗೆ ಉತ್ಖನನ ಮಾಡುವಾಗ ಯಾವ ಬಗೆಯಲ್ಲಿ ಹಳೆಯ ಮಣ್ಣಿನ ಪಾತ್ರೆಗಳು ಸಿಕ್ಕಿವೆಯೋ, ಅದೇ ಬಗೆಯ ಮಣ್ಣಿನ ಪಾತ್ರೆಗಳು ದೇಶದಲ್ಲಿ ಬಳಕೆಯಾಗುತ್ತಿವೆ. ಪ್ರಾಚೀನ ಶಿಲ್ಪ ಅಥವಾ ಚಿತ್ರಕಲೆಯಿಂದ ಯಾವ ಬಗೆಯ ಪೋಷಾಕನ್ನು ಚಿತ್ರಿಸಲಾಗಿದೆಯೋ ಅದೇ ಬಗೆಯ ಪೋಷಾಕು ಇವತ್ತಿಗೂ ಒಂದಲ್ಲ ಒಂದು ಕಡೆಯಲ್ಲಿ ಬಳಕೆಯಲ್ಲಿವೆ.**

ವಿದೇಶಿ ಪ್ರವಾಸಿಗರು, ಇತಿಹಾಸಕಾರರು ಅಥವಾ ರಾಜರುಗಳು ಹಿಂದೂಸ್ಥಾನದಲ್ಲಿನ ಸಮಾಜವ್ಯವಸ್ಥೆಯ ಬಗೆಗೆ ಸಾಕಷ್ಟು ಬರೆದು ಇಟ್ಟಿದ್ದಾರೆ. ಆದರೆ ಹಿಂದೂಸ್ಥಾನದಲ್ಲಿ ಕಂಡುಬರುವ ಅಸಂಖ್ಯ ಜಾತಿ, ಪಂಥ, ದೇವರು ಮತ್ತು ಧರ್ಮಗಳಿಂದಾಗಿ ಅವರು ಗಲಿಬಿಲಿಗೊಂಡಂತೆ ಕಾಣುತ್ತಾರೆ. ಹಿಂದೂಗಳ ಸಮಾಜ ಸಂಸ್ಥೆಯು ಅವರಿಗೆ ಉಗ್ರಾಣದಲ್ಲಿ ಬಿಸಾಕಿದ ಅಸ್ತವ್ಯಸ್ತವಾಗಿ ಬಿದ್ದಿರುವ ಸಾಮಾನುಗಳಂತೆ ಕಾಣುತ್ತದೆ. ಈ ಸಂಸ್ಥೆಗಳು ಅದೆಷ್ಟು ಬಹುಸಂಖ್ಯಾತ ಮತ್ತು ಬಹು ವಿಧವಾಗಿವೆ ಎಂದರೆ ಅದನ್ನು ಬಣ್ಣಿಸುತ್ತ ಬಣ್ಣಿಸುತ್ತ ಈ ಜನರ ಬರವಣಿಗೆಯಲ್ಲಿ ಒಂದು ರೀತಿಯ ನಿರಾಸೆಯ ಸ್ವರ ಕೇಳಲಾರಂಭಿಸುತ್ತದೆ. ಹಿಂದೂ ಸಂಸ್ಕೃತಿಯ ಮಹಾಪ್ರವಾಹವು ಯಾವ ಚಿಕ್ಕಪುಟ್ಟ ಪ್ರವಾಹಗಳಿಂದ ನಿರ್ಮಾಣಗೊಂಡಿದೆಯೋ, ಅವುಗಳ ಸೂಕ್ಷ್ಮ ಅಧ್ಯಯನವನ್ನು ಕೈಗೊಳ್ಳದ ಹೊರತು, ಆ ಬೃಹತ್ ಪ್ರವಾಹದ ಯಥಾರ್ಥ ಸ್ವರೂಪವು ಅನಾವರಣಗೊಳ್ಳುವದು ಸಾಧ್ಯವಿಲ್ಲ.

ಈ ಹಲವು ವಿಧದ ಸಮಾಜ ಸಂಸ್ಥೆಯ ಕೇವಲ ವರ್ಣನೆ ಮಾತ್ರದಿಂದಲೇ ಸಮಾಜದ ರಚನೆ ಹೇಗೆ ಹೇಗೆ ಆಯಿತು ಎನ್ನುವದರ ಗ್ರಹಿಕೆಯೂ ಆಗಲಾರದು. ಅದಕ್ಕಾಗಿ ಹಿಂದೂ ಸಂಸ್ಕೃತಿಯ ಚಾರಿತ್ರಿಕ ಹಿನ್ನೆಲೆಯನ್ನು ಎಚ್ಚರಿಕೆಯಿಂದ ವ್ಯಾಸಂಗ ಮಾಡಬೇಕಾಗುತ್ತದೆ, ಎಂದರೆ ಹಿಂದೂಸ್ಥಾನದಲ್ಲಿಯ ಸಮಾಜದಲ್ಲಿ ಗೋಚರಿಸುವ ವಿವಿಧ ಮತ್ತು ಒಮ್ಮೊಮ್ಮೆ ಪರಸ್ಪರ ವಿರೋಧಿ ರೀತಿ ರಿವಾಜುಗಳು ಅರ್ಥವಾಗ ಬಹುದು. ಒಂದು ಉಪಖಂಡದಂತಹ ವಿಸ್ತೀರ್ಣವುಳ್ಳ ದೇಶದ ಒಂದು ತುದಿಯಿಂದ ಮತ್ತೊಂದು ತುದಿಯವರೆಗೆ ಪಸರಿಸಿದ ಮತ್ತು ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗಿನ ಕಳೆದ ಸುಮಾರು ೫೦೦೦ ವರ್ಷಗಳ ಕಾಲ ಉತ್ಕ್ರಾಂತವಾಗುತ್ತ ಹೋದ ಬಹುವಿಧ ಸಮಾಜ ಸಂಸ್ಥೆಯ ಅಸ್ತಿತ್ವ ಮತ್ತು ಪ್ರದೇಶಕ್ಕೆ ತಕ್ಕಂತೆ ಮಾಡಲಾದ ವಿಂಗಡಣೆಯ ಕಾರಣವನ್ನು ತಿಳಿದುಕೊಳ್ಳಲು ಈ ನಿರ್ದಿಷ್ಟ ವಿಶೇಷಗಳು ಸಹಾಯವಾಗಲಿವೆ.

**ಅಖಂಡ ಪರಂಪರೆ :** ಯೂರೋಪಿನ ಇಂಗ್ಲೆಂಡ್‌ನಿಂದ ಹಿಂದೂಸ್ಥಾನದ ಕೃಷ್ಣಾ ದಡದವರೆಗಿನ ಸಂಪೂರ್ಣ ದೇಶ ವಿಭಾಗವನ್ನು ಗಮನಕ್ಕೆ ತಂದುಕೊಂಡರೆ, ಅಲ್ಲಿ ಮಾತನಾಡುವ ಭಾಷೆಗಳಿಗೆ ಇಂಡೋ–ಜರ್ಮನಿಕ್ ಭಾಷೆ ಎಂದು ಕರೆಯುತ್ತಾರೆ. ಈ ಎಲ್ಲ ಭಾಷೆಗಳಲ್ಲಿ ಹಿಂದೂಸ್ಥಾನದಲ್ಲಿನ ಭಾಷೆಗಳಲ್ಲಿ ಮಾತ್ರ ಪ್ರಾಚೀನ ಗ್ರಂಥಗಳನ್ನು ಕಂಠಪಾಠ ಮಾಡಿ ಮತ್ತು ಸ್ಮೃತಿಯ ಸಹಾಯದಿಂದ ಒಂದು ಕಾಗುಣಿತವೂ ವ್ಯತ್ಯಾಸವಾಗದಂತೆ ಶಾಶ್ವತವಾಗಿ ಉಳಿಸುವ ಶತಪ್ರಯತ್ನ ಹಿಂದೂಸ್ಥಾನದಲ್ಲೇ ಆದಂತೆ ಕಂಡುಬರುತ್ತದೆ. ನಾಲ್ಕು ಸಾವಿರ ವರ್ಷಗಳ ಹಿಂದೆ ಯಾವ ಪ್ರಾರ್ಥನೆಯನ್ನು ಹೇಳಲಾಗುತ್ತಿತ್ತೋ ಇಂದಿಗೂ ಯಥಾವತ್ತಾಗಿ ಒಂದು ಪದವೂ ವ್ಯತ್ಯಾಸವಾಗದಂತೆ ಹೇಳಲಾಗುತ್ತದೆ. ಪ್ರಾಚೀನ ಗ್ರಂಥದಲ್ಲಿನ ಸಂವಾದ, ಕವಿತೆ, ವರ್ಣನೆ ಇವತ್ತಿಗೂ ಹಾಗೇ ಉಳಿದಿವೆ. ಮುಂದೆ ವಿಕಾಸ ಹೊಂದಿದ್ದ ನಾಟ್ಯಕಲೆಯ ಕುರುಹುಗಳು ಅಲ್ಲಿ ಸಿಗುತ್ತವೆ. ಅಲ್ಲಿ ಬಣ್ಣಿಸಲಾದ ದೇವತೆಗಳ ದೇವತತ್ವವನ್ನು ಇಂದಿಗೂ ಮಾನ್ಯ ಮಾಡಲಾಗುತ್ತದೆ. ಈ ಪ್ರಾಚೀನ ಕಾಲದ ಯಾವುದೇ ಸಂಗತಿಯೂ


ಮರಾಠಿ ಮೂಲ : **ಇರಾವತಿ ಕರ್ವೆ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**

ಇಂದು ಹಿಂದೂಸ್ಥಾನದಲ್ಲಿ ಸಂಪೂರ್ಣ ನಾಶಗೊಳ್ಳಲಿಲ್ಲ. ದೇಶದ ಒಂದಲ್ಲ ಒಂದು ಭಾಗದಲ್ಲಿ ಅವು ಯಥಾವತ್ತಾಗಿ ಕಾಣಬರುತ್ತವೆ. ಪುರಾಣ ವಸ್ತು ಸಂಶೋಧಕರಿಗೆ ಉತ್ಖನನ ಮಾಡುವಾಗ ಯಾವ ಬಗೆಯಲ್ಲಿ ಹಳೆಯ ಮಣ್ಣಿನ ಪಾತ್ರೆಗಳು ಸಿಕ್ಕಿವೆಯೋ, ಅದೇ ಬಗೆಯ ಮಣ್ಣಿನ ಪಾತ್ರೆಗಳು ದೇಶದಲ್ಲಿ ಬಳಕೆಯಾಗುತ್ತಿವೆ. ಪ್ರಾಚೀನ ಶಿಲ್ಪ ಅಥವಾ ಚಿತ್ರಕಲೆಯಿಂದ ಯಾವ ಬಗೆಯ ಪೋಷಾಕನ್ನು ಚಿತ್ರಿಸಲಾಗಿದೆಯೋ ಅದೇ ಬಗೆಯ ಪೋಷಾಕು ಇವತ್ತಿಗೂ ಒಂದಲ್ಲ ಒಂದು ಕಡೆಯಲ್ಲಿ ಬಳಕೆಯಲ್ಲಿವೆ.

ಸೂರ್ಯ ದೇವತೆಯು ಪ್ರಾಚೀನ ಕಾಲದಿಂದ ಇಂದಿನವರೆಗೂ ಭಜಿಸಲ್ಪಡುತ್ತಿದ್ದಾನೆ; ಯಜ್ಞ ಸಂಸ್ಥೆಯೂ ಹಾಗೆಯೇ ಖಂಡಿತವಾಗಿ ಮುಂದುವರಿದು ಕೊಂಡು ಬಂದಿದೆ. ಅಥರ್ವವೇದದಲ್ಲಿ ಹೇಳಿರುವ ಮಾಟ-ಮಂತ್ರ, ಪರಿಹಾರ, ಔಷಧಿ ಮುಂತಾದವುಗಳು ಇಂದಿಗೂ ಶೇಕಡ ೮೦ರಷ್ಟು ಬಳಕೆಯಲ್ಲಿವೆ.

ಹೀಗೆ ಸಂಸ್ಕೃತಿಗೆ ಈ ಅಖಂಡ ಪರಂಪರೆಯು, ಹಿಂದೂಸ್ಥಾನವನ್ನು ಹೊರತುಪಡಿಸಿದರೆ, ಕೇವಲ ಚೀನ ಮತ್ತು ಜಪಾನ್‌ನಂತಹ ಪೌರಸ್ತ್ಯ ದೇಶಗಳಲ್ಲಿ ಕಂಡುಬರುತ್ತದೆ. ಯೂರೋಪ್, ಆಫ್ರಿಕಾ ಮುಂತಾದ ಇತರ ಭೂಪ್ರದೇಶಗಳಲ್ಲಿ ಈ ಪ್ರಾಚೀನ ಪರಂಪರೆಯು ಖಂಡಿತಗೊಂಡಂತೆ ಕಂಡುಬಂದಿದೆ. ಈ ದೇಶಗಳಲ್ಲಿ ಪ್ರಾಚೀನ ಸಂಸ್ಕೃತಿಯ ಅವಶೇಷಗಳು ಸಿಗಲಿಲ್ಲ ಎಂದೇನಲ್ಲ, ಯುರೋಪದಲ್ಲಿಯ ಹಳೆಯ ಅವಶೇಷಗಳು ಇಂದು ಐಸ್‌ಲ್ಯಾಂಡಿನಂತಹ ದೂರದ ಪ್ರದೇಶದಲ್ಲಿ ಗೋಚರಿಸುತ್ತವೆ. ಇಂದಿನ ಯುರೋಪಿಯನ್ ಜನರು ಕೇವಲ ಜಿಜ್ಞಾಸೆಯಿಂದಾಗಿಯೇ ಅವರು ಸಂಶೋಧನೆ ಮಾಡುತ್ತಾರೆ. ಅಲ್ಲಿ ಉಪಲಬ್ಧವಿರುವ ಟ್ಯುಟ್ಯಾನಿಕ್ ಹಾಡುಗಳನ್ನು ಸಂಗ್ರಹ ಮಾಡುತ್ತಾರೆ. ಆದರೆ ಇದೆಲ್ಲದರ ಬಗೆಗೆ ಅವರಿಗೆ ಆತ್ಮೀಯತೆ ಇರುವದಿಲ್ಲ. ಇದು 'ತಮ್ಮದು' ಎಂಬ ಭಾವನೆಯು ಅವರಲ್ಲಿ ಕಂಡುಬರುವದಿಲ್ಲ. ರೋಮ್ ಮತ್ತು ಗ್ರೀಕ್ ಪುರಾಣದಲ್ಲಿಯ ಕಥೆಗಳು, ದೇವತೆಯರು ಮುಂತಾದವುಗಳ ಮಾಹಿತಿಯು ಉಪಲಬ್ಧವಿದ್ದರೂ, ಅವುಗಳ ಸಂಸ್ಕಾರವು ಕ್ರೈಸ್ತ-ಧರ್ಮದ ಆಧುನಿಕ ಯೂರೋಪಿನ ಜೀವನದಲ್ಲಿ ಗೋಚರಿಸುವುದಿಲ್ಲ. ಈ ಪುರಾಣದಿಂದ ಸಂಸ್ಕೃತಿ ಚಿಹ್ನೆಯ ವಿಷಯದಲ್ಲಿ ಅವರಿಗೆ ಕುತೂಹಲವಿದ್ದರೂ ಆತ್ಮೀಯತೆ ಇರುವದು ಕಂಡುಬರುವದಿಲ್ಲ.

**ಖಂಡಿತ ಪರಂಪರೆ :** ಎರಡನೆಯ ಉದಾಹರಣೆಯಾಗಿ ಮಹಮ್ಮದಿ ಧರ್ಮದ ವರ್ಚಸ್ಸಿನ ಅಡಿಯಲ್ಲಿಯ ಇಂದಿನ ಈಜಿಪ್ತನ್ನು ನೋಡಬಹುದು. ಇಲ್ಲಿ ಗೋಚರಿಸುವ ಬೃಹದಾಕಾರದ ಪಿರಾಮಿಡ್ ಎಂದರೆ, ಫೆರೋಹಾನಂತಹ ರಾಜನ ಸಮಾಧಿ, ಅದರಲ್ಲಿ ಸಾವಿರಾರು ವರ್ಷಗಳಿಂದ ಜತನ ಮಾಡುತ್ತ ಬಂದಿರುವ 'ಮಮಿ' 'ಸ್ಫಿಂಕ್ಸ'ನ ಬೃಹತ್ ಪ್ರತಿಮೆಯಂತಹ ಈಜಿಪ್ತಿಯನ್ ಸಂಸ್ಕೃತಿಯ ಚಿಹ್ನೆಗಳು ಇಂದಿಗೂ ಉಪಲಬ್ಧವಿವೆ. ಆದರೆ ಫೆರೋಹಾನಂತಹ ರಾಜರುಗಳ; ಶೀಬಾ, ಕ್ಲಿಯೋಪಾತ್ರಾಳಂತಹ ರಾಣಿಯರು; ಅವರ ಕಾಲದ ಕಥೆ-ಚಿತ್ರ-ಪಾತ್ರೆಗಳ ಪ್ರತಿಬಿಂಬವು ಇಂದಿನ ಮಹಮ್ಮದ ಧರ್ಮಾನುಯಾಯಿ ಈಜಿಪ್ತಿನಲ್ಲಿ ಅದೆಷ್ಟು ಸಿಗಬಹುದು? ಅವುಗಳ ಬಗೆಗೆ ಅವರಲ್ಲಿ ಆತ್ಮೀಯತೆ ಇದೆಯೆ? ಪ್ರಾಚೀನ ಕಾಲದಲ್ಲಿ ಈ ದೇಶವು ಮುಂದುವರಿದಿತ್ತು, ಸುಸಂಸ್ಕೃತವಾಗಿತ್ತು ಎಂದೆನ್ನಬೇಕಾದರೆ ಆಧುನಿಕ ಈಜಿಪ್ತಿಯನ್ ಮನುಷ್ಯನ ಅಂತಃಕರಣವು ಆತ್ಮೀಯ ಭಾವನೆಯಿಂದ ಉಮ್ಮಳಿಸಿ ಬರುವದಿಲ್ಲ. ಇದೆಲ್ಲ ತನ್ನದರಿಂದ ದೂರ ಬೇರೆ, ಹಳೆಯದು, ಪರರದ್ದು ಎಂಬ ಭಾವನೆಯು ಇಂದಿನ ಅಲ್ಲಿಯ ಜನರಲ್ಲಿ ಕಂಡುಬರುತ್ತದೆ.

ಕ್ರೈಸ್ತ ಮತ್ತು ಮಹಮ್ಮದಿ ಧರ್ಮದ ವರ್ಚಸ್ಸು ಎಲ್ಲೆಲ್ಲಿ ಪ್ರಸ್ಥಾಪಿತಗೊಂಡಿತೋ ಅಲ್ಲೆಲ್ಲ ಈ ಬಗೆಯ ಖಂಡಿತ ಪರಂಪರೆಯು ಗೋಚರಿಸುತ್ತದೆ. ಪೂರ್ವಜನ ಸ್ಮೃತಿ ಚಿಹ್ನೆಗಳ ವಿಷಯದಲ್ಲಿ ಇಂದಿನ ಜನರಲ್ಲಿ ಆತ್ಮೀಯ ಅಭಿಮಾನವಿದ್ದಂತೆ ಕಂಡುಬರುವುದಿಲ್ಲ.

ಅದರೊಂದಿಗೆ ಚೀನ, ಜಪಾನ್ ಅಥವಾ ಹಿಂದೂಸ್ಥಾನದಲ್ಲಿಯ ಸಂಸ್ಕೃತಿಯ ಚರಿತ್ರೆಯನ್ನು ಹೋಲಿಸಿ ನೋಡಿದರೆ, ಇಲ್ಲಿಯ ಪರಂಪರೆಯು ೫೦೦೦ ವರ್ಷಗಳ ಕಾಲ ಅಖಂಡವಾಗಿ ನಡೆದು ಬಂದಿರುವದು ಕಂಡುಬರುತ್ತದೆ. ಪೂರ್ವಜರ ಗ್ರಂಥ, ಅವರ ಪೋಷಾಕು, ಅವರ ದೈವಗಳು,



ಸೂರ್ಯ ನಮಸ್ಕಾರ

ಅವರ ರೀತಿರಿವಾಜು, ಅವರ ತತ್ವಜ್ಞಾನ, ಅವರ ನೈತಿಕ ಕಲ್ಪನೆ ಈ ಎಲ್ಲವುಗಳ ಬಗೆಗೆ ಒಂದು ಬಗೆಯ ಆತ್ಮೀಯತೆಯುಳ್ಳ ಅಭಿಮಾನ ಗೋಚರಿಸುತ್ತದೆ. ಮುಖ್ಯವಾಗಿ, ಈ ಎಲ್ಲ ಸಂಗತಿಗಳು ಒಂದಲ್ಲ ಒಂದು ಕಡೆಗಳಲ್ಲಿ ಪ್ರಚಲಿತವಾಗಿರುವದನ್ನು ಕಾಣುತ್ತೇವೆ. ಅಖಂಡ ಪರಂಪರೆಯು ಹಿಂದೂ ಸಾಂಸ್ಕೃತಿಕ ಚರಿತ್ರೆಯ ಮೊದಲ ಲಕ್ಷಣ ಎಂದಿದ್ದು ಈ ಕಾರಣಕ್ಕೆ.

**ರಾಜಕೀಯ ಮತ್ತು ಧಾರ್ಮಿಕಸತ್ತೆಯ ಕೇಂದ್ರೀಕರಣದ ಕೊರತೆ**

ಆಂಗ್ಲ ಆಳ್ವಿಕೆಗಿಂತ ಮೊದಲು ಹಿಂದೂಸ್ಥಾನದಲ್ಲಿ ಎಲ್ಲರಿಗಾಗಿ ಸಮಾನ ಕಾನೂನು ಜಾರಿಗೆ ತಂದು, ಅದನ್ನು ಅನುಷ್ಠಾನಗೊಳಿಸುವಂತಹ ಪ್ರಬಲ, ಕೇಂದ್ರೀಯ ರಾಜಸತ್ತೆಯು ಎಂದೂ ಇರಲಿಲ್ಲ. 'ಸಾಮ್ರಾಜ್ಯ'ಗಳು ಸಾಕಷ್ಟು ಬಂದವು, ಆದರೆ ಅದರ ವಿಸ್ತಾರ ಮಾತ್ರ ಸಂಪೂರ್ಣ ಹಿಂದೂಸ್ಥಾನದ ತುಂಬ ಆಗಲಿಲ್ಲ. ಎಷ್ಟು ಆಯಿತೋ, ಅಷ್ಟು ಭಾಗದಲ್ಲಿ ಆ ಸಾಮ್ರಾಜ್ಯಸತ್ತೆಯು ಅಲ್ಲಿಯ ದೈನಂದಿನ ಜೀವನಕ್ರಮದಲ್ಲಿ ವಿರಳವಾಗಿ ಜಾರಿಗೆ ಬಂತು. ಹಳ್ಳಿಗಳಂತೂ ಜನರಿಗೆ ರಾಜಸತ್ತೆಯ ಅಸ್ತಿತ್ವವು ವಿರಳವೇನೋ ಎಂಬಂತೆ, ಬಹಳವೆಂದರೆ ಕರ ನೀಡುವ ಕಾಲಕ್ಕೆ ಮಾತ್ರ ಅರಿವಾಗುತ್ತಿತ್ತು. ಉಳಿದ ಹೊತ್ತಿನಲ್ಲಿ ಯಾವ ರಾಜಸತ್ತೆ ಬಂತು, ಯಾವುದು ಹೋಯಿತು ಎನ್ನುವುದರ ನೆರಳೂ ಸಹ ಅವರ ಜೀವನದ ಆಳಕ್ಕೆ ತಲುಪುತ್ತಲೂ ಇರಲಿಲ್ಲ. ಬಹಳಷ್ಟು ಪ್ರಮಾಣದಲ್ಲಿ ಸ್ವಯಂಪೂರ್ಣವಾಗಿರುವ ಇಂಥ ಪ್ರಾದೇಶಿಕ ಮಟ್ಟದ ಗುಂಪುಗಳಲ್ಲಿ ಜನರ ವಿಶಿಷ್ಟ ಬಗೆಯ ಜೀವನಕ್ರಮವು ಅಬಾಧಿತವಾಗಿ ಮುಂದುವರಿಯುತ್ತಿರುತ್ತದೆ. ಒಂದೊಂದು ಸಲ ಮಿತ್ರಭಾವದಿಂದ, ಹಲವು ಸಲ ಶತ್ರುಭಾವದಿಂದ ನೆರೆಹೊರೆಯಲ್ಲಿ ಬದುಕುವ ಹಲವು ಚಿಕ್ಕ ಚಿಕ್ಕ ರಾಜ್ಯಗಳು, ಈ ದೇಶದಲ್ಲಿಯ ರಾಜಸತ್ತೆಯ ಸ್ವರೂಪವು ಹೀಗೆಯೇ ಇರುವದನ್ನು ಕಾಣುತ್ತೇವೆ. ಅದೇ ರೀತಿ ಪ್ರಾಚೀನ ಕಾಲದಲ್ಲಿ ಹಲವು ರಾಜ್ಯಗಳು ತೀರ ಚಿಕ್ಕ ನಗರದಂತೆಯೋ ಅಥವಾ ತಾಲೂಕಿನಂತೆಯೋ ವಿಸ್ತಾರವಾಗಿರುತ್ತಿದ್ದವು. ಪ್ರಾಚೀನ ಘೋಷಯಾತ್ರೆಯ ವರ್ಣನೆಗಳು ಇದನ್ನು ವ್ಯಕ್ತಪಡಿಸುತ್ತವೆ. ತಮ್ಮ ರಾಜ್ಯದ ಸೀಮೆಯವರೆಗೆ ಹೋಗಿ ಮರಳಲು ಎಷ್ಟೋ ಗೌಳಿಗರಿಗೆ ಎರಡೇ ದಿನ ಸಾಲುತ್ತಿತ್ತು. ಅದೂ ಸಹ ಹಿಂದಿನ ಕಾಲದಲ್ಲಿದ್ದಂತಹ ಸಾರಿಗೆಯ ಅಭಾವದ ಕಾಲದಲ್ಲಿ! ದಿಗ್ವಿಜಯ ಮಾಡುವ ದೊಡ್ಡ-ದೊಡ್ಡ ರಾಜರು ಸಹ ಅವರ ಆಕ್ರಮಣವನ್ನು ಬೇರೆ ರಾಜನು ಒಪ್ಪಿಕೊಂಡರೆ ಖುಷಿಪಡುತ್ತಿದ್ದರು. ತಾಂತ್ರಿಕ ಸ್ವಾಮಿತ್ವವನ್ನು ಸ್ಥಾಪಿಸಿ, ಒಂದಿಷ್ಟು ಸಂಪತ್ತನ್ನು ವಸೂಲಿ ಮಾಡಿ, ಅವರು ಮುಂದೆ ಸಾಗುತ್ತಿದ್ದರು. ಆದರೆ ಜನರ ಸಾಂಸ್ಕೃತಿಕ ಜೀವನದ ಮೇಲೆ ಪರಿಣಾಮ ಬೀರಬಲ್ಲಂಥ ಪ್ರಭಾವಶಾಲಿಯಾದ ಕೇಂದ್ರೀಯ ರಾಜಸತ್ತೆಯು ಇರಲೇ ಇಲ್ಲ. ಕೇವಲ ಅಶೋಕನೊಬ್ಬನ ರಾಜಸತ್ತೆಯನ್ನು ಮಾತ್ರ ಭಾರತದಲ್ಲಿಯ ಕೇಂದ್ರೀಯ ರಾಜಸತ್ತೆಯೆಂದು ತೋರಿಸಬಹುದಾಗಿದೆ. ಅದೂ ಸಹ ಆಸೇತು ಹಿಮಾಚಲದಂತೆ ಆಂಗ್ಲರ ರಾಜ್ಯದಂತೆ ಸ್ಥಾಪನೆಗೊಳ್ಳಲಿಲ್ಲ ಮತ್ತು ತಾಳಿಯೂ ಉಳಿಯಲಿಲ್ಲ.

ಧಾರ್ಮಿಕ ವಿಷಯದಲ್ಲಂತೂ ಕೇಂದ್ರೀಯ ಸತ್ತೆಯಂತೂ ಹಿಂದೂಸ್ಥಾನದಲ್ಲಿ ಎಂದಿಗೂ ಇರಲಿಲ್ಲ. ಒಂದೇ ವಿಶಿಷ್ಟ ಧಾರ್ಮಿಕ ತತ್ವವನ್ನು ಬಲವಂತದಿಂದ ಪ್ರಸಾರ ಮಾಡುವದನ್ನು ಮತ್ತು ಜಾರಿಗೊಳಿಸುವಿಕೆಯನ್ನು ದೇಶದ ತುಂಬೆಲ್ಲ ಮಾಡಬಹುದಾದ ಕೇಂದ್ರೀಯ ಧಾರ್ಮಿಕಸತ್ತೆಯಾಗಲಿ, ಧರ್ಮಾಧಿಕಾರಿಯಾಗಲಿ ಇರಲಿಲ್ಲ. ಕ್ರೈಸ್ತ ಚರ್ಚುಗಳು ಹಾಗೆ ಸುಸಂಘಟಿತವಾದ ಕೇಂದ್ರಸತ್ತೆಯಾಗಿತ್ತೋ ಮತ್ತು ಅದು ಹೇಗೆ ರಾಜಸತ್ತೆಯೊಂದಿಗೆ ಸರಿಸಮಾನವಾಗಿ ರಾಜ್ಯಾಧಿಕಾರಿಗಳಂತೆಯೇ, ಧರ್ಮಾಧಿಕಾರಿಗಳ ಮೂಲಕ ಜನರ ಮೇಲೆ ಅಮಲುಗೊಳಿಸುವಷ್ಟು, ಅಷ್ಟೇ ಅಲ್ಲ, ರಾಜಸತ್ತೆಯನ್ನೇ ಅಂಕಿತದಲ್ಲಿಟ್ಟುಕೊಂಡು ಧಾರ್ಮಿಕಸತ್ತೆಯ ಪ್ರಾಬಲ್ಯ ಕಂಡುಬರುವಂತೆ ನಡೆದಿರುವದು ಹಿಂದೂಸ್ಥಾನದಲ್ಲಿ ಕಂಡುಬರುವದಿಲ್ಲ. ದೇವರು ಒಬ್ಬನೇ ಮತ್ತು ಕ್ರಿಸ್ತ ಅಥವಾ ಮಹಮ್ಮದ ಅವರ ಏಕೈಕ ದೇವದೂತನಾಗಿದ್ದಾನೆ, ಅವನನ್ನು ಒಪ್ಪುವವರಿಗೆ, ಭಜಿಸುವವರಿಗೆ ಮಾತ್ರ ಸ್ವರ್ಗ ಪ್ರಾಪ್ತಿ, ಉಳಿದ ಪಾಖಂಡಿಗಳಿಗೆ ಸ್ವರ್ಗವಿಲ್ಲ; ಮಹಮ್ಮದನನ್ನು ದೇವದೂತನೆಂದು ಒಪ್ಪದವರು ಕಾಫೀರರು; ಅವರನ್ನು ಖಡ್ಗದ ಬಲದಿಂದ ತಮ್ಮ ಮತಕ್ಕೆ ಸೇರಿಸಬಹುದು; ಹಾಗೆ ಮಾಡುವದು ಅತ್ಯಂತ ಶ್ರೇಷ್ಠ ಧಾರ್ಮಿಕ ಕರ್ತವ್ಯ. ಕ್ರಿಸ್ತನನ್ನು ಒಪ್ಪದವರೆಲ್ಲ ಹಾದಿತಪ್ಪಿದ ಬಡಪಾಯಿ ಕುರುಗಳು; ಅವರ ಕೈಹಿಡಿದು ಕರೆತಂದು ಕ್ರೈಸ್ತ ಪಂಥಕ್ಕೆ ಸೇರಿಸುವದು ಪರಮಪವಿತ್ರ ಕರ್ತವ್ಯವಾಗಿದೆ; ಈ ರೀತಿಯ ಒತ್ತಡವಾಗಲಿ ಅಥವಾ ಅದರಂತೆ ನಡೆಯುವ ಧಾರ್ಮಿಕ ಪ್ರಸಾರದ ಗುಂಪಾಗಲಿ ರೂಪಗೊಂಡಿದ್ದು ಹಿಂದೂಸ್ಥಾನದಲ್ಲಂತೂ ಕಂಡುಬರುವದಿಲ್ಲ. ಹಲವು ರಾಜಸತ್ತೆಯಂತೆಯೇ ಹಲವು ಧಾರ್ಮಿಕ ಪಂಥಗಳೂ ಸಹ ಅಕ್ಕಪಕ್ಕದಲ್ಲಿ ನೆಮ್ಮದಿಯಿಂದ ಸಹಬಾಳ್ವೆ ನಡೆಸಿವೆ. ದೇವರು ಒಬ್ಬನೆಂದರೂ ಸರಿಯೆ. ಅವನ ರೂಪ ಬೇರೆ, ಬೇರೆ ಎಂದರೂ ಯಾವ ಅಭ್ಯಂತರವೂ ಇಲ್ಲ. ಪ್ರತಿಯೊಂದು ದೇವರ ಪೂಜಾರಿಗಳೂ ಬೇರೆ ಬೇರೆ. ಪ್ರತಿಯೊಂದು ಜಾತಿಗೂ ಅಷ್ಟೇ ಅಲ್ಲ, ಪ್ರತಿಯೊಂದು ಕುಟುಂಬದವರಿಗೂ ಬೇರೆ ಬೇರೆ ದೇವರನ್ನು ಕೀಳಾಗಿ ನೋಡದೆ, ಸ್ವಂತಕ್ಕಾಗಿ ಖಾಸಾ ಎನಿಸುವ ದೈವವನ್ನು ಆಯ್ಕೆಮಾಡುವ ಸ್ವಾತಂತ್ರ್ಯವಿದೆ. ಸಾಂಸ್ಕೃತಿಕ ಸಂಕ್ರಮಣದ ಸ್ವರೂಪವು ಇದರಿಂದಾಗಿ ಏಕರೂಪವಾಗಲಿ ಅಥವಾ ಕೇಂದ್ರೀಕೃತವಾಗಲಿ ಆಗಿರಲಿಲ್ಲ. ಜನರು ಪರಂಪರಾಗತ ಜ್ಞಾನವನ್ನು ವಿಶಿಷ್ಟ ಧರ್ಮಾಧಿಕಾರಿಗಳಿಂದಲೇ, ವಿಶಿಷ್ಟ ಸ್ಥಾನದಲ್ಲೇ, ವಿಶಿಷ್ಟ ಪದ್ಧತಿಯಿಂದಲೇ ಪಡೆಯಬೇಕೆಂಬ ಕಡ್ಡಾಯವಿರಲಿಲ್ಲ. ಕೆಲವರು ಅದನ್ನು ಗ್ರಂಥಗಳ ಮೂಲಕ ಪಡೆಯುತ್ತಿದ್ದರು. ಬಹುಸಂಖ್ಯಾತ ಜನರು ಅದನ್ನು ಉದ್ಯೋಗ ದಂಧೆ, ಕಥನಕಾರ, ನಟ, ಗಾಯಕ, ಹೊಗಳು ಭಟ್ಟರು, ಚಾರಣ ಇವರುಗಳಿಂದ ಪಡೆಯುತ್ತಿದ್ದರು. ಬ್ರಾಹ್ಮಣರು ದೇಶದೆಲ್ಲೆಡೆ ಸಂಚರಿಸಿ ಜನರಿಗೆ ಧಾರ್ಮಿಕ ತತ್ವಗಳನ್ನು ಕಲಿಸುತ್ತಿದ್ದರು. ಆದರೆ ಈ ಧರ್ಮ ಪ್ರಸಾರಕರನ್ನು ಒಂದೇ ಕಡೆ ಕಟ್ಟಿಹಾಕುವ ಪ್ರಬಲವಾದ ಧರ್ಮಸತ್ತೆಯ ಕೇಂದ್ರವಾಗಲಿ, ಅಥವಾ ಜನರ ದೈನಂದಿನ ಜೀವನದ ಮೇಲೆ ಪರಿಣಾಮ ಬೀರುವಂತಹ ಪ್ರಬಲ ರಾಜಸತ್ತೆಯ ಕೇಂದ್ರವಾಗಲಿ ಇರಲಿಲ್ಲ. ಆದ್ದರಿಂದ ರಾಜಕೀಯ ಅಥವಾ ಧಾರ್ಮಿಕಸತ್ತೆಯ ಕೇಂದ್ರೀಕರಣದ ಕೊರತೆಯು ಹಿಂದೂ ಸಾಂಸ್ಕೃತಿಕ ಇತಿಹಾಸದ ಎರಡನೆಯ ಮುಖ್ಯಲಕ್ಷಣವೆಂದು ಒಪ್ಪಬೇಕಾಗುತ್ತದೆ.

**ಸಂಸ್ಕೃತಿಯ ಸಂಗಮದ ಬಗೆಗೆ ಒಲವು :** ಸಾವಿರಾರು ವರ್ಷಗಳಿಂದ ಹೊರಗಿನ ಜನ ಹಿಂದೂಸ್ಥಾನವನ್ನು ಪ್ರವೇಶಿಸುತ್ತಲೇ ಬಂದಿದ್ದಾರೆ. ಆದರೆ ಭಿನ್ನ ಭಿನ್ನ ಸಂಸ್ಕೃತಿಯ ದೀರ್ಘಕಾಲದ ಸಂಪರ್ಕ ಏರ್ಪಟ್ಟು, ಯಾವುದೇ ಒಂದು ಸಂಸ್ಕೃತಿಯನ್ನು ಸಂಪೂರ್ಣವಾಗಿ ಹತ್ತಿಕ್ಕಿ ಅಥವಾ ನಾಶಮಾಡಿ, ಬೇರೊಂದು ಜೀವಂತವಾಗಿರುವಂತಹ ತೀವ್ರ ಸಂಸ್ಕೃತಿ ಸಂಘರ್ಷ ಎಂದೂ ನಿರ್ಮಾಣಗೊಳ್ಳಲಿಲ್ಲ. ಒಂದೆಡೆ ಈ ದೇಶದ ಹಳೆಯ ಮತ್ತು ಇನ್ನೊಂದೆಡೆ ಹೊಸ ಪರಕೀಯತೆ – ಇವುಗಳ ನಡುವೆ ಸದಾ ಸಾಂಸ್ಕೃತಿಕ ಹೊಂದಾಣಿಕೆ ಯಾಗುತ್ತಲೇ ಬಂದಿದೆ. ಹೀಗೆ ಯಾವ ಪರಂಪರೆಯು ಪರಿಣತಗೊಂಡಿತೋ ಅದರೊಳಗೆ ಸರ್ವಸಂಸ್ಕೃತಿಯ ಮೂಲತತ್ವಗಳು ಜೀವಂತವಾಗಿ ಉಳಿದಿವೆ. ಹೊಂದಾಣಿಕೆಯು ಹಿಂದೂ ಸಂಸ್ಕೃತಿಯ ಆತ್ಮವಾಗಿದೆ. ತಮ್ಮ ವಿಶಿಷ್ಟ ಸಂಸ್ಕೃತಿಯನ್ನು ಪ್ರಚಾರಮಾಡಲು ಕುರು ಪಾಂಚಾಲರು ಎಂದೂ ಯಾತ್ರೆಯನ್ನು ಕೈಗೊಳ್ಳಲಿಲ್ಲ. ಅವರು ಹೇಗೆ ಬೇರೆ ಬೇರೆ ಪ್ರದೇಶದಲ್ಲಿ ಪಸರಿಸಿದರೋ ಹಾಗೆ ಅವರ ಸಂಬಂಧವೂ ಬೇರೆಯವರೊಂದಿಗೆ ಬರಲಾರಂಭಿಸಿತು, ಆಚಾರ, ಧರ್ಮದಲ್ಲಿ ವ್ಯತ್ಯಾಸವಾಗಲಾರಂಭಿಸಿತು. ಈ ಸಮಾವೇಶಕ ವೃತ್ತಿಯ ದೃಷ್ಟಿಯಿಂದ ಹಿಂದೂಸ್ಥಾನದಲ್ಲಿನ ಹಲವು ದೈವಗಳ ಬಗೆಗೆ ಯೋಚಿಸುವ

ಸಂಗತಿಯಾಗಿದೆ. ಹಲವು ದೈವಗಳನ್ನು ಒಪ್ಪುವುದರಿಂದಾಗಿ ಹಿಂದೂಗಳ ದೈವಗಳ ಸಂಖ್ಯೆಯಲ್ಲಿ ಸದಾಕಾಲ ಹೆಚ್ಚಳವೇ ಆಗುತ್ತಲಿದೆ. 'ಶಿವ'ನು ಅವೈದಿಕ ದೇವರು, ಅವನನ್ನು ವೇದದಲ್ಲಿಯ ಸೂರ್ಯ ದೇವತೆಯ ಬೇರೆ ಸ್ವರೂಪವಾದ 'ವಿಷ್ಣು'ವಿಗೆ ಸಮಾನವಾಗಿ ಪರಿಗಣಿಸಲಾಗಿದೆ. ಯಕ್ಷ, ಕಿನ್ನರ, ಭೂತ, ಪಿಶಾಚಿ, ಕಿರುಕುಳ ಮತ್ತು ರೋಗರುಜಿನ ಹರಡುವ ದೈವಗಳು, ನದಿಗಳು, ಜಲಪಾತ, ಪರ್ವತಗಳ ದೈವಗಳು – ಇಂಥ ಆದಿಮಾನವನ ದೈವಗಳು ಇಲ್ಲಿ ಅನಾದಿಕಾಲದಿಂದಲೂ ಜೀವಹಿಡಿದುಕೊಂಡು ಉಳಿದಿವೆ. ಶಿವ ಮತ್ತು ವಿಷ್ಣು ಇವರಿಗೆ ಸರಿಸಮಾನವಾಗಿ ಹಳ್ಳಿಗಳಲ್ಲಿಯ ಸಕಲ ಜಾತಿಯ ಜನರು ಇಂದಿಗೂ ಅವುಗಳ ಪೂಜಾರ್ಚನೆ ಮಾಡಿ ಭಜಿಸುತ್ತಲೇ ಬಂದಿದ್ದಾರೆ.

ಈ ಅನೇಕ ದೈವವಾದದ ಬುನಾದಿ ಎಂದು ಪರಿಗಣಿಸಲ್ಪಡುವ ಸರ್ವಶಕ್ತ ಪರಮೇಶ್ವರನನ್ನು ಒಪ್ಪುವ ತತ್ವಜ್ಞಾನವು ತುಂಬ ಸಹಿಷ್ಣುವಾದುದು. ವೈವಾಹಿಕ ಅಥವಾ ಉಳಿದ ಯಾವುದೇ ವಿಷಯದಲ್ಲಿಯ ವರ್ತನೆಯ ಒಂದು ಪ್ರಕಾರವೂ ಒಂದೇ ಗುಂಪಿನ ಪ್ರಸ್ಥಾಪಿತ ಪರಂಪರೆ ಎಂದು ಸಿದ್ಧಗೊಂಡಿದ್ದರೂ, ಅದಕ್ಕೆ ಒಪ್ಪಿಗೆ ಸಿಕ್ಕಿದೆ. ಬಹುಪತಿತ್ವ, ಬಹುಪತ್ನಿತ್ವ, ಪಿತೃಪ್ರಧಾನ ಮತ್ತು ಮಾತೃಪ್ರಧಾನ ಪದ್ಧತಿ, ಹಲವು ದೇವತಾಪೂಜೆ, ಕ್ಷುದ್ರ ದೇವತೆ, ಚಾರ್ವಾಕವಾದ – ಇವೆಲ್ಲ ದೇಶದ ವಿವಿಧ ವಿಭಾಗಗಳಲ್ಲಿ ಅಸ್ತಿತ್ವದಲ್ಲಿರುವದು ಕಂಡುಬರುತ್ತದೆ. ಕೆಲವು ಸಲವಂತೂ ಒಂದೇ ವಿಭಾಗದಲ್ಲಿ, ಪರಸ್ಪರರ ಸಾನಿಧ್ಯದಲ್ಲೂ ಅವು ಅಸ್ತಿತ್ವದಲ್ಲಿರುತ್ತವೆ.

ಲೋಕಬೀಜವೂ ಸಹ (Folk-elements) ಸ್ಥಾನಭ್ರಷ್ಟಗೊಂಡಿರುವದು ಹಿಂದೂಸ್ಥಾನದಲ್ಲಿ ಗೋಚರಿಸುವದಿಲ್ಲ. ಕಾಡಿನಲ್ಲಿ ನೆಲಸುವ ಗುಂಪುಗಳೂ ಸಹ ಸಾಕಷ್ಟು ಅಂಶ ತಮ್ಮ ತಮ್ಮ ಕಾಡುಗಳನ್ನು ಸಂರಕ್ಷಿಸಿಕೊಂಡಂತೆ ಕಾಣುತ್ತದೆ. ದೊಡ್ಡ ದೊಡ್ಡ ನದಿ ಕಣಿವೆಗಳಲ್ಲಿ ಕೃಷಿ ಮಾಡಿ ಬದುಕುವ ಜನರು ಅಲೆಮಾರಿ ತಂಡಗಳ ಆಕ್ರಮಣದಿಂದಾಗಿ ಓಡಿಹೋಗಿರುವದು ಕಂಡುಬರುತ್ತದೆ. ಆದರೆ ಹಲ್ಲೆಕೋರರ ಬಲ ಕುಗ್ಗಿದ ಬಳಿಕ ಅವರು ಮತ್ತೆ ತಮ್ಮ ಪೂರ್ವಜರ ಠಾಣಕ್ಕೆ ಮರಳಿದ್ದಾರೆ. ಹಲವು ಸಲ ಕಂಡುಬಂದಿರುವದೇನೆಂದರೆ, ಹಿಂದಿನ ವಿಜಯಿಗಳಾದ ಈ ಅಲೆಮಾರಿ ಆಕ್ರಮಣಕಾರರು ಇಂದು ಹೀನರಾಗಿ, ಕೆಳಸ್ತರದಲ್ಲಿದ್ದಾರೆ. ಅವರ ಹಿಂದಿನ ಸ್ತರದ ಕುಶಲ ಕೃಷಿಕರು ತೊರೆದುಹೋದ ಬರಡು ಮರಡಿ ಪ್ರದೇಶದಲ್ಲಿ ವಾಸ ಮಾಡುತ್ತಲಿದ್ದಾರೆ. ದಿಲ್ಲಿಯ ಸುತ್ತಮುತ್ತ ಗೋಚರಿಸುವ ಗುಜ್ಜರ ಜನರು ಈ ಬಗೆಯವರು. ಏಕಕಾಲಕ್ಕೆ ಆಕ್ರಮಣ ಮಾಡಿ ಸ್ವಂತ ವರ್ಚಸ್ಸನ್ನು ಸ್ಥಾಪಿಸುವ ಈ ಗುಜ್ಜರರು ಕೊನೆಗೆ ಎಂಥ ಅವಸ್ಥೆಗೆ ಹೋಗಿ ತಲುಪಿದರೆಂದರೆ, ಒಂದು ದಂತಕಥೆಯಲ್ಲಿ ಅವರನ್ನು ಹಾಳುಸುರಿವ ಊರಿನಲ್ಲಿರುವವರಿಗಿಂತಲೂ ಹೀನರೆಂದು ಭಾವಿಸಲಾಗಿದೆ. ದಿಲ್ಲಿಯ ಬಾದಶಹಾನಿಗೆ, "ನಿನ್ನ ರಾಜಧಾನಿ ಉಧ್ವಸ್ತಗೊಳ್ಳುತ್ತದೆ, ಯಾ ರಹೇ ಉಜರ್, ಯಾ ರಹೇ ಗುಜರ್" ಎಂದು ಶಾಪ ನೀಡಿದ ದಂತಕಥೆಯಿದೆ.

ಹಿಂದೂಸ್ಥಾನದಲ್ಲಿರುವ ಹಲವು ದೈವವಾದದೊಂದಿಗೆ, ಉಳಿದೆಡೆ ಬೆಳೆದ ಕ್ರೈಸ್ತ ಮತ್ತು ಮಹಮ್ಮದಿ ಏಕೇಶ್ವರವಾದದೊಂದಿಗೆ ತುಲನೆಮಾಡಿ ನೋಡುವಂತಹದು. ದೇವರೊಬ್ಬನೆ ಮತ್ತು ಇಂತಿಂಥವನು ಅವನ ಏಕೈಕ ದೂತನೆಂದು ಪ್ರತಿಪಾದಿಸುವ ಈ ಪಂಥದ ಪ್ರಚಾರಕರಾಗಿದ್ದವರು, ಪೂರ್ವ ಸಂಸ್ಕೃತಿಯ ಗುರುತೂ ಸಹ ಉಳಿಯಗೊಡದೆ, ಅದನ್ನು ಬೇರುಸಹಿತ ಕಿತ್ತೊಗೆಯುವ ಶತಪ್ರಯತ್ನವನ್ನು ಮಾಡುತ್ತಿರುತ್ತಾರೆ. ತಮ್ಮ ಪಂಥವನ್ನು ಪ್ರಸ್ಥಾಪಿತಗೊಳಿಸಲು, ಪೂರ್ವ ಪಂಥವನ್ನು ಉಚ್ಚಾಟನೆಗೊಳಿಸುವದೇ ಅವರಿಗೆ ಯೋಗ್ಯ ಎನಿಸುತ್ತಿರಬೇಕು. ಹೊಂದಾಣಿಕೆ ಮಾಡಿಕೊಳ್ಳುವ ಅವಕಾಶವೇ ಅವರಿಗಿರಲಿಲ್ಲ. ಒಂದೋ ನೀವಾದರೂ ಇರಿ, ಇಲ್ಲವೇ ನಾವಾದರೂ ಇರುತ್ತೇವೆ ಎಂಬ ನಾನು–ನೀನು ಎಂಬ ರೀತಿಯಿರುತ್ತಿತ್ತು. ಹೀಗೆ ಇಂಥ 'ನಾನು–ನೀನು' ಎಂಬ ಪಂಥದ ಪ್ರಸಾರಕ್ಕಾಗಿ ಎಷ್ಟೋ ಸಲ ಶಸ್ತ್ರಬಲಕ್ಕೆ, ಬಲವಂತಕ್ಕೆ ಮಾರುಹೋದರೆ ಅದರಲ್ಲಿ ಅಚ್ಚರಿ ಏನಿದೆ? ಪೂರ್ವದ ಸಂಸ್ಕೃತಿಯ ಲವಲೇಶವೂ ಉಳಿಯಬಾರದೆನ್ನುವ ಈ ಹೊಸ ಪಂಥದ ಪ್ರಸಾರಕರು ಅದೆಷ್ಟು ದಕ್ಷರಾಗಿರುತ್ತಿದ್ದರು ಎನ್ನುವದಕ್ಕೆ ಒಂದು ಉದಾಹರಣೆಯು ಗಮನಾರ್ಹವಾದುದು. ನಮ್ಮಲ್ಲಿ ಯಾವ ಬಗೆಯ ಅಶ್ವಮೇಧ ಮಾಡಿ, ಬಳಿಕ ಯಜ್ಞ ಅಶ್ವದ ಮಾಂಸವನ್ನು ಪ್ರಸಾದವೆಂದು ಭಕ್ಷಿಸುವ ಪದ್ಧತಿಯಿತ್ತೋ, ಅದೇ ರೀತಿ ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಕುದುರೆಗೆ ಮಹತ್ವ ನೀಡಿ, ಅದರ ಮಾಂಸವನ್ನು ತಿನ್ನುವ ಪದ್ಧತಿಯೂ ಕ್ರಿಸ್ತಪೂರ್ವ ಸಂಸ್ಕೃತಿಯಲ್ಲಿ ರೂಢಿಯಲ್ಲಿತ್ತು. ಆದರೆ 'ದೇವದೂತ'ರು ಕುದುರೆಯ ಮಾಂಸವನ್ನು ಸೇವಿಸುವದನ್ನು ನಿಷೇಧಿಸಿದರು. ಹಿಂದಿನ ಲಗ್ನ ಪದ್ಧತಿ, ಪೂಜೆ, ತಿಂಡಿ ತಿನಿಸು, ಬಟ್ಟೆ ಪೋಷಾಕು – ಮುಂತಾದ ಎಲ್ಲ ಪದ್ಧತಿಗಳನ್ನು ಮೂಲೆಗುಂಪು ಮಾಡಿ ಹೊಸ ಪಂಥದ ಏಕತೆಯನ್ನು ಪ್ರಸ್ತಾಪಿಸುವ ಕಡೆಗೆ ಅವರ ಗಮನವಿರುತ್ತಿತ್ತು. ಅವರಿಂದ ಹಲವು ದೇವತೆಗಳಿಗೆ ತಾಣ ನೀಡುವದು ಅಸಾಧ್ಯವೇ ಆಗಿತ್ತು.

ಆದರೆ ಹಿಂದೂಸ್ಥಾನದಲ್ಲಿ ಮಾತ್ರ ಅನೇಕರ ವೈಶಿಷ್ಟ್ಯಗಳಿಗೆ ಹಾನಿಯನ್ನುಂಟು ಮಾಡದೆ ಒಂದು ಬಗೆಯ ಸಮಾವೇಶಕ ಏಕತೆಯು ಪ್ರಾಪ್ತವಾದಂತಿದೆ. ವಿವಿಧತೆಯಲ್ಲಿ ಏಕತೆಯನ್ನು ಸಾಧಿಸುವ ಪದ್ಧತಿಯು ಹಿಂದೂಸಂಸ್ಕೃತಿಯ ವೈಶಿಷ್ಟ್ಯವಾಗಿದೆ; ಈ ವೈಶಿಷ್ಟ್ಯವು ಇಲ್ಲಿಯ ಜನರ ರೋಮ ರೋಮದಲ್ಲಿ ಮೈಗೂಡಿದಂತೆ ಕಾಣಬರುತ್ತದೆ. ಸರ್ವಭೂತಗಳಲ್ಲಿ ಯಾವ ಪ್ರಮಾಣದಲ್ಲಿ ಅಂತಿಮ ಚಿತ್ತವಿದೆಯೋ ಆ ಬ್ರಹ್ಮನೇ ನಾನು ಎಂದೊಪ್ಪುವ ಬ್ರಹ್ಮವಾದಿಗೂ ಕೆಲವು ಪ್ರಮಾಣದ ಬ್ರಹ್ಮೋಪಚಾರ, ದೈವ ಪೂಜೆ ಇದ್ದೇ ಇರುತ್ತದೆ!

ದಕ್ಷಿಣ ದಿಶೆ ಕೆಟ್ಟದ್ದು, ರಾಕ್ಷಸರದ್ದು, ಹೀಗಾಗಿ ದುಷ್ಟ ರಾಕ್ಷಸನಾದ ರಾವಣನು ದಕ್ಷಿಣದವನಾಗಿರುವದು ಸರಿಯಾಗಿದೆ. ಆದರೆ ಅವನನ್ನೂ ತಮ್ಮವನನ್ನಾಗಿ ಸಮಾವೇಶಗೊಳಿಸಿಕೊಳ್ಳುವ ಹೊಂದಾಣಿಕೆಯ ವೃತ್ತಿ ಅವನನ್ನು ಬ್ರಾಹ್ಮ ಎಂದೊಪ್ಪಿಕೊಳ್ಳುವವರಲ್ಲಿದೆ. ನೀವೂ ಇರಿ, ನಾವೂ ಇರುತ್ತೇವೆ ಎಂಬ ಸಹಿಷ್ಣು ವೃತ್ತಿಯೂ ಎಲ್ಲೆಡೆ ಕಾಣುತ್ತದೆ. ಮಧ್ಯಕಾಲದಲ್ಲಿ ಬುದ್ಧ ಅಥವಾ ಮಹಾವೀರರ ಪಂಥದ ಪ್ರಸಾರವಾಗಲಾರಂಭಿಸಿದಾಗ ಈ ವೃತ್ತಿಗೆ ಬಾಧೆಯಾಗುವ ಸಮಯ ಬಂದಿತ್ತು. ಏಕೆಂದರೆ ಬುದ್ಧನ ನಿರ್ವಾಣ ಕಲ್ಪನೆಯಲ್ಲಿ ದೈವವಾದಕ್ಕೆ ಅವಕಾಶವಿಲ್ಲ. ವಾಸನೆಯನ್ನು ತ್ಯಾಗಮಾಡಿ ಆತ್ಮಕ್ಲೇಶ, ಚಿಂತನೆಯ ಸಹಾಯದಿಂದ ಕೊನೆಗೆ, ಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವ ಕಲ್ಪನೆಗೆ ದೈವದ ಕಲ್ಪನೆ ಹೊಂದುವದಾದರೂ ಹೇಗೆ? ಆದರೆ ಮೋಜಿನ

ಸಂಗತಿ ಎಂದರೆ, ಬೌದ್ಧ ಪಂಥದ ಪ್ರಸಾರ ಸಾಕಷ್ಟಾಯಿತು. ಅಶೋಕನಂತಹ ಸಮ್ರಾಟನ, ಅವನ ಪ್ರಬಲ, ವಿಸ್ತೀರ್ಣ ರಾಜಸತ್ತೆಯ ಬೆಂಬಲ ಅವನಿಗೆ ಸಿಕ್ಕರೂ, ಕೊನೆಗೆ ಬುದ್ಧನೇ ಒಬ್ಬ ದೇವರಾಗಿ ಕೂತುಬಿಟ್ಟ! 'ತಾರಾ' ಎಂಬ ಯಕ್ಷಿಣಿಯ ಪೂಜೆ ಅವರ ಪಂಥದಲ್ಲಿ ಉಳಿಯಿತು. ನಮ್ಮ ಜನರಂತೂ ಬುದ್ಧನನ್ನು ವಿಷ್ಣುವಿನ ಒಂಬತ್ತನೇ ಅವತಾರವೆಂದು ರೂಪಿಸಿ ಸಂಪೂರ್ಣ ಅರಗಿಸಿಕೊಂಡರು. ಚೀನ – ಜಪಾನಿನಲ್ಲೂ ಅವನು ದೈವವೇ ಆದ.

ಜಿನನ ಪಂಥದಲ್ಲೂ ದೈವತ್ವವಾದಕ್ಕೆ ಅವಕಾಶವಿಲ್ಲ. ಆದರೆ ಅಲ್ಲೂ ಇಪ್ಪತ್ನಾಲ್ಕು ತೀರ್ಥಂಕರರೇ ದೇವರಾಗಿ ಅವರ ಮತ್ತು ಕೆಲವು ಕ್ಷುದ್ರ ದೇವತೆಗಳ ಪೂಜೆ ಉಳಿದುಕೊಂಡಿತು. ವಿಂಧ್ಯ ವಾಸಿನಿ ದೇವಿ ಎಂಬ ದೊಡ್ಡ ದೈವವನ್ನೇ ಅವರ ಪಂಥ ಒಪ್ಪಿತು.



ನಮ್ಮ ಕೆಲಸವೇ ಅವರ ಹಾಗೆ ತಿನ್ನೋದು, ಆ ಕೆಲಸ ನಿಲ್ಲಿಸೋದು ಬೇಡ ಮುಂದುವರಿಸೋಣ

ಸರ್ವ ಸಂಗ್ರಾಹಕ ಅನೇಕ ದೈವವಾದವನ್ನು ಹಲವು ಸಮಾಜಶಾಸ್ತ್ರಜ್ಞರು ಕಾಡು ಎಂದು ಭಾವಿಸುತ್ತಾರೆ. ಏಕೆ ಹಾಗೆ ಭಾವಿಸಿದರೋ ಗೊತ್ತಿಲ್ಲ. ಹಲವು ದೇವತೆಗಳಿಗೇ ಲಜ್ಜೆಯೆನಿಸುವಂತಹದು ಅದರಲ್ಲೇನಿದೆ? ಆದರೆ ಆಂಗ್ಲರ ಆಡಳಿತ ಆರಂಭವಾದಾಗ, ಅವರ ಸಂಸ್ಕೃತಿಯ ಪರಿಣಾಮವು ಇಲ್ಲಿಯ ಕೆಲವರ ಮನದ ಮೇಲೆ ಮೂಡಿ ಅವರಿಗೆ ನಮ್ಮ ಅಧಿಕ ದೇವತೆಗಳ ರೀತಿಯು ತ್ಯಾಜ್ಯವೆನಿಸತೊಡಗಿತು. ಅಲ್ಲಿಂದಲೇ ಬ್ರಾಹ್ಮೋ ಅಥವಾ ಆರ್ಯ ಸಮಾಜದಂಥ ಪಂಥದ ನಿರ್ಮಾಣವಾಯಿತು. ಆದರೆ ಗಮನಿಸಬೇಕಾದ ಒಂದು ಸಂಗತಿಯೆಂದರೆ, ಈ ಪಂಥದ ಉದಯ ಮತ್ತು ಪ್ರಸಾರ ಉತ್ತರದಲ್ಲೇ ವಿಶೇಷವಾಗಿ ನಡೆಯಿತು. ಅದರ ಪ್ರಭಾವ ದಕ್ಷಿಣದಲ್ಲಿ ಬೀಳಲೇ ಇಲ್ಲ. ವಿಂಧ್ಯ, ಸಾತಪುಡಾ ದಾಟಿ ದಕ್ಷಿಣಕ್ಕೆ ಬಂದ ಜನರು ಇಲ್ಲಿಯ ಜನರ ರೂಢಿಯನ್ನು ಎತ್ತಿಕೊಂಡು, ಅವರೊಂದಿಗೆ ಸೇರಿ ಸಮರಸರಾದರು. ಅವರು ಉತ್ತರದವರಿಗಿಂತ ಭಿನ್ನವಾಗಿ ಉಳಿದರು.

ಸಂಸ್ಕೃತಿಯ ಸಂಘರ್ಷ ಜರುಗಿ ಒಬ್ಬರ ಸೋಲು, ಮತ್ತೊಬ್ಬರ ಗೆಲುವು ಎಂಬ ದೃಶ್ಯ ಹಿಂದೂಸ್ಥಾನದಲ್ಲಿ ಕಾಣದೆ, ಅದರ ಸಂಗಮ ಜರುಗಿ, ಇಬ್ಬರೂ ಕೆಲವು ಅಂಶಗಳಲ್ಲಿ ವಿಜಯಿಗಳಾಗಿ ಕೆಲವು ಅಂಶಗಳಲ್ಲಿ ಸೋಲು ಆಗಿ, ಕೊನೆಗೆ ಅವರಲ್ಲಿ ಗೆಳೆತನವಾದಂತೆ ಕಾಣುತ್ತದೆ. ಹೀಗಾಗಿ ಕಳೆದ ಐದು ಸಾವಿರ ವರ್ಷಗಳಲ್ಲಿ ರೀತಿರಿವಾಜು ಮತ್ತು ರೂಢಿಯ ಅತೀ ದೊಡ್ಡ ಸಂಗ್ರಹವಾಗಿದೆ. ಅದು ದೇಶದ ಎಲ್ಲೆಡೆ ಹರಡಿದೆ. ದಂತಕಥೆ ಮತ್ತು ಇತಿಹಾಸ, ದೊಡ್ಡ ದೊಡ್ಡ ರಾಜ ಮನೆತನದವರ ಕಥೆ, ತತ್ವಜ್ಞಾನದ ಪ್ರಮೇಯ, ನೈತಿಕ ಕಲ್ಪನೆ, ದೇವರ ಮತ್ತು ವೀರರ ಕಥೆ, ಪಂಚತಂತ್ರ ಮತ್ತು ಬೃಹತ್ಕಥೆ, ಅಲ್ಲಿ ಬಣ್ಣಿಸಿದ ಜಾನಪದ ಕಥೆ, ಇದೆಲ್ಲವೂ ಈಗ ಹಿಂದೂಸ್ಥಾನದ ಸಕಲ ಪ್ರಾಂತಗಳ ಮತ್ತು ಜಮಾತಿಯ ಸಾಮಯಿಕ ಸಂಪತ್ತಾಗಿದೆ.

ಸಾಂಸ್ಕೃತಿಕ ಸಂಕ್ರಮಣದ ಸ್ವರೂಪವು ಒಂದೇ ಆಗಿ ಕೇಂದ್ರೀಕೃತಗೊಳ್ಳದೇ ಇರುವದರಿಂದ ಪ್ರತಿಯೊಂದು ಪ್ರಾದೇಶಿಕ ವಿಭಾಗವು, ತಮ್ಮ ವಿಶಿಷ್ಟವಾದ ಸ್ಥಳೀಯ ಸಂಸ್ಕೃತಿಗೆ ಹೊಂದಿಕೊಳ್ಳುವಂತೆ ಈ ಪರಂಪರಾಗತ ಜ್ಞಾನದ ಅಡ್ಡ ಅಗಲ ನೂಲು ಹೆಣೆಯುತ್ತಲೇ ಇರುತ್ತದೆ. ಮತ್ತು ಹೊಂದಾಣಿಕೆಯಾಗದ ಭಾಗವನ್ನು ಕಿತ್ತೊಗೆದು, ಅದರ ಬದಲು ಸುಸಂಗತವಾದ, ರುಚಿಕರವಾದ ಹೊಸ ಕಥಾಭಾಗ ಅಥವಾ ಕಲ್ಪನೆಯನ್ನು ಅದರಲ್ಲಿ ಸೇರಿಸುತ್ತದೆ.

ಈ ಘಟನಾವಳಿಯು ಎಲ್ಲ ವಿಷಯಗಳ ಬಾಬತ್ತಿನಲ್ಲಿ ಸದಾ ನಡೆಯುತ್ತಿರುತ್ತದೆ. ಹಿಂದೂಗಳ ತಮ್ಮ ದೇವರ ಬಗೆಗಿನ ದೃಷ್ಟಿಕೋನವು ಈ ಘಟನಾವಳಿಗೆ ಸಾಕಷ್ಟು ಸಹಾಯವಾಗಿದೆ. ದೇವರು, ದೊಡ್ಡ ದೊಡ್ಡ ವೀರರು, ಮನುಷ್ಯರ ಉತ್ಪತ್ತಿಯು ಒಂದೇ ತತ್ವದಡಿಯಲ್ಲಿದೆ. ಎಲ್ಲರಲ್ಲೂ ದೇವರು ಇರುವುದರಿಂದ ಇದೆಲ್ಲ ಕೊನೆಗೆ ಒಂದೇ ಚಿತ್ತತತ್ವದಲ್ಲಿ ವಿಲೀನಗೊಳ್ಳಬೇಕಾಗಿದೆ. ಹೀಗಾಗಿ ಶಾಶ್ವತ ನರಕವಾಸವೂ ಇಲ್ಲ, ತನ್ನ ಆಜ್ಞೆ ಸರಿಯಾಗಿ ಪಾಲಿಸಲಾಗುತ್ತದೆಯೋ ಇಲ್ಲವೋ ಎಂಬ ಬಗೆಗೆ ದಕ್ಷವಿರುವ ದೇವರೂ ಇಲ್ಲ ಅಥವಾ ವೈಯಕ್ತಿಕ ಮೋಕ್ಷವು ಕೇವಲ ಅವನ ಕೃಪೆಯನ್ನು ಅವಲಂಬಿಸಿರುವಂತೆ ಅವನು ಸರ್ವಸತ್ತಾಧೀಶನೂ ಅಲ್ಲ. ಹಿಂದೂಗಳು ತಮ್ಮ ದೇವರೊಂದಿಗೆ ಒಮ್ಮೆ ಆದರದಿಂದ, ಮತ್ತೊಮ್ಮೆ ಪ್ರೇಮದಿಂದ, ಮಗದೊಮ್ಮೆ ಜಗಳದಿಂದ, ಇನ್ನೊಮ್ಮೆ ದರ್ಪದಿಂದ ನಡೆದುಕೊಳ್ಳುತ್ತಾರೆ!

ಇದು ವಿಶೇಷ ಪವಿತ್ರ, ಇದು ಸಾಮಾನ್ಯ, ಇದು ಸೂಕ್ತ ಇದು ಅಸೂಕ್ತ, ಇದು ವಿಹಿತ, ಇದು ನಿಷಿದ್ಧ ಎಂದು ನಿರ್ಧರಿಸುವ ಯಾವುದೇ ಸ್ವತಂತ್ರ, ಸ್ವಯಂಸಿದ್ಧ ಮಾನದಂಡವಿಲ್ಲದಿರುವದರಿಂದ ಎಲ್ಲ ಬಗೆಯ ಆಚಾರ ಬೇರೆ ಬೇರೆ ಜಮಾತಿಗಳಲ್ಲಿ ಅಥವಾ ಒಬ್ಬನೇ ವ್ಯಕ್ತಿಯ ದೈನಂದಿನ ಜೀವನದಲ್ಲೂ ಯಾರಿಗೂ ಅಡ್ಡಿಪಡಿಸದೆ ಸುಖದಿಂದ ಬಾಳಬಲ್ಲರು. ತಾಯಿ – ತಂದೆ ಮತ್ತು ಮಕ್ಕಳ ನಡುವೆ ಸಾವಿರ ವರ್ಷಗಳ ಸಾಂಸ್ಕೃತಿಕ ವ್ಯತ್ಯಾಸವಿರಬಹುದು! ಈ ರೀತಿಯಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಪ್ರವೃತ್ತಿಯು ಹಿಂದು ಸಂಸ್ಕೃತಿಯಲ್ಲಿ ಐದು ಸಾವಿರ ವರ್ಷಗಳಿಂದ ಬೆಳೆದಿದೆ. ಈ ದೀರ್ಘ ಕಾಲಘಟ್ಟದಲ್ಲಿ ಸಾಹಿತ್ಯ, ಧಾರ್ಮಿಕ ತಿಳಿವಳಿಕೆ, ತತ್ವಜ್ಞಾನ, ನೈತಿಕ ಕಲ್ಪನೆ ಇಂಥ ಮತ್ತು ಈ ಬಗೆಯ ಸಾವಿರಾರು ವಿಷಯಗಳ ಬಾಬತ್ತಿನಲ್ಲಿ ಎಂಥ ಸಾಂಸ್ಕೃತಿಕ ಐಕ್ಯ ಸಾಧಿಸಲಾಗಿದೆ ಎಂದರೆ, ಅದರಿಂದ ಹಿಂದೂ ಉಳಿದೆಲ್ಲ ಹಿಂದೂಗಳಂತೆ ಮತ್ತು ಹಿಂದೂಗಳಿಗಿಂತ ಭಿನ್ನವಾಗಿರುವದನ್ನು ಥಟ್ಟನೆ ಗುರುತಿಸಬಹುದಾಗಿದೆ. ಕ್ರೈಸ್ತ ಧರ್ಮವು ಯುರೋಪದ ಮೇಲೆ ಹೊರಿಸಿದ ಐಕ್ಯಕ್ಕಿಂತ ಹಿಂದೂಸ್ಥಾನದಲ್ಲಿ ಕ್ರಮೇಣ ಉತ್ಕ್ರಾಂತ ಹೊಂದುತ್ತ ಬಂದ ಈ ಸಾಂಸ್ಕೃತಿಕ ಐಕ್ಯವು ಎಷ್ಟೋ ಪಟ್ಟು ಶ್ರೇಷ್ಠವಾಗಿದೆ.

ಆದರೆ ಈ ಸಮಾವೇಶಕ ಮತ್ತು ಸರ್ವಸಂಗ್ರಾಹಕ ವೃತ್ತಿಯಿಂದಾಗಿಯೇ ನಮ್ಮ ನಮ್ಮ ಭಿನ್ನತೆಯನ್ನು ಶಾಶ್ವತವಾಗಿ ಉಳಿಸುವ ವೃತ್ತಿಯು ಬೆಳೆಯುತ್ತದೆ. 'ನಿನ್ನದು ನಿನ್ನ ಬಳಿ, ನನ್ನದು ನನ್ನ ಬಳಿ' – ಎಂಬ ವೃತ್ತಿಯಿಂದ ಒಂದು ಬಗೆಯ ನಿರ್ಲಿಪ್ತತೆ ಕಾಣಿಸಿಕೊಂಡಿತು. ಬೇಲಿ ನಿರ್ಮಾಣವಾಯಿತು. ಕೇಂದ್ರೀಯ ಪ್ರಬಲ ಸತ್ತೆಯ ಕೊರತೆ ಮತ್ತು ಮನುಷ್ಯನ ಅಗತ್ಯಗಳಲ್ಲಿ ಪ್ರಮುಖವಾದ ಸುರಕ್ಷಿತತೆಯ ಕಾರಣಕ್ಕಾಗಿ ಕುಟುಂಬವೇ ಕೇಂದ್ರವಾಯಿತು. ಬೇರೆ ಬೇರೆ ಉದ್ಯೋಗ ಮಾಡುವ ಕುಟುಂಬಗಳು ತಮ್ಮ ತಮ್ಮ ವೈಶಿಷ್ಟ್ಯವನ್ನು ಶಾಶ್ವತವಾಗಿ ಉಳಿಸಿಕೊಂಡು ಸ್ವಂತದ ಸುತ್ತಲೂ ಗೋಡೆ ನಿರ್ಮಿಸಿಕೊಂಡಿತು. ಹಿಂದೂಸ್ಥಾನದಲ್ಲಿ ಜಾತಿ ಸಂಸ್ಥೆಯನ್ನು ಯಾರು ತಂದರೆಂದು ಖಚಿತವಾಗಿ ಹೇಳುವದು ಅಸಾಧ್ಯ. ಆದರೆ ಅದರ ಉಗಮ ಮಾತ್ರ ಈ ನಿರ್ಲಿಪ್ತತೆಯಲ್ಲೇ ಇದೆ. ತಮ್ಮ ತಮ್ಮ ಧಂದೆಯ ವೈಶಿಷ್ಟ್ಯ ಉಳಿಸಿಕೊಳ್ಳುವ ಪ್ರಯತ್ನದಿಂದಾಗಿಯೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಭೇದ ನಿರ್ಮಾಣಗೊಂಡಿತು. ಮೊದಲಿನ ಇಬ್ಬರಲ್ಲಿ ಒಂದು ಬಗೆಯ ಐಕ್ಯತೆಯಿದೆ. ಹಣದ ಗಳಿಕೆಗಾಗಿ ಮೂರನೆಯವರನ್ನು ಸೇರಿಸಿಕೊಂಡರು. ಪೂರ್ವದ ಪ್ರಜೆಯ ಸಮಾವೇಶವು ನಾಲ್ಕನೆಯದವರದಾಗುತ್ತದೆ. ಕೇಂದ್ರೀಯ ಸಂರಕ್ಷಣ ವ್ಯವಸ್ಥೆಯ ಕೊರತೆಯಿಂದಾಗಿ ಒಂದು ಬಗೆಯ ಅಸ್ತವ್ಯಸ್ತತನ ಬಂತು. ವ್ಯವಹಾರದಲ್ಲಿ ಪರಸ್ಪರರ ಬಗೆಗೆ ಅಪನಂಬಿಕೆ, ಮತ್ಸರ, ಅಸಹಿಷ್ಣುತೆ ಮತ್ತು ನಿರ್ಲಿಪ್ತತೆ ಬಂತು. 'ಸ್ವಧರ್ಮೆ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ಈ ಕಾರಣದಿಂದಾಗಿಯೂ ನಿರ್ಲಿಪ್ತತೆ ಬೆಳೆಯಿತು. ಜಾತಿ ಸಂಸ್ಥೆಯು ದೃಢಮೂಲಗೊಂಡಿತು.

ಮೇಲಿನ ವಿಷಯಗಳು ಸರಿಯಾಗಿ ಅರ್ಥವಾಗಬೇಕಾದರೆ, ಹಿಂದೂಸ್ಥಾನದಲ್ಲಿ ಕುಟುಂಬ ಸಂಸ್ಥೆಯ ವಿಕಾಸ ಹೇಗಾಯಿತು; ಕುಲ, ಜಾತಿ, ಗ್ರಾಮಸಂಸ್ಥೆಯು ಹೇಗೆ ಬೆಳೆಯಿತು; ಅವರಲ್ಲಿ ಪ್ರಾದೇಶಿಕ ಭಿನ್ನತೆ ಏನಿದೆ – ಇವುಗಳ ಶೋಧನೆಯನ್ನು ಕೈಗೊಂಡು, ಅದರ ನಕಾಶೆ ಬಿಡಿಸಿ ಟಿಪ್ಪಣಿ ಮಾಡಿದ್ದೇ ಆದರೆ ಭಾರತದ ಇತಿಹಾಸದ ಮೇಲೆ ಸಾಕಷ್ಟು ಬೆಳಕು ಬೀಳಬಲ್ಲದು.

ಮರಾಠಿ ಮೂಲ : **ಇರಾವತಿ ಕರ್ವೆ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**, ನಂ. ೧೧೫ ಸಿ, ಸಪ್ತಗಿರಿ ಮಹರ್ಷಿ ರೆಸಿಡೆನ್ಸಿ
೧೧ನೇ 'ಕೆ' ಕ್ರಾಸ್, ಸಿ. ವಿ. ರಾಮನ್ ನಗರ, ನಾಗವಾರ ಪಾಳ್ಯ, ಬೆಂಗಳೂರು–೫೬೦ ೦೯೩




# ಐಎಂಎಫ್ ಆರ್ಥಿಕತಜ್ಞರು ಹೆಣೆದಿರುವ ಸಂಚುಗಳು

ಇಂಗ್ಲಿಷ್ ಮೂಲ : **ಎನ್. ಸುಂದರಮೂರ್ತಿ**
ಕನ್ನಡಕ್ಕೆ : **ಜ್ಯೋತಿ ಎ.**

**ಮಾ**ಜಿ ಪ್ರಧಾನಿ ಡಾ॥ ಮನಮೋಹನ ಸಿಂಗ್ ಮತ್ತು ಹಾಲಿ ಪ್ರಧಾನ ಮಂತ್ರಿ ನರೇಂದ್ರ ಮೋದಿಯವರ ನಡುವಿನ ತೀಕ್ಷ್ಣವಾದ ಮತ್ತು ಕಣ್ಣುಕೋರೈಸುವಂತಹ ವ್ಯತ್ಯಾಸವೊಂದಿದೆ. ಮನಮೋಹನರು ಬಾಯಿ ತೆರೆಯುತ್ತಿದ್ದುದು ಬಹಳ ಅಪರೂಪ, ಎಲ್ಲೊ ಒಮ್ಮೊಮ್ಮೆ. ಅದಕ್ಕೆ ತದ್ವಿರುದ್ಧವಾಗಿ, ಮೋದಿಯವರು ಬಾಯಿ ಮುಚ್ಚುವುದೇ ಅತೀ ವಿರಳ. ಬರೀ ಕೀಳು ಜನಪ್ರಿಯ ಭಾಷಣಗಳು ಮತ್ತು ಟೊಳ್ಳು ಭರವಸೆಗಳಿಂದಲೇ ಜನರ ಮನಸ್ಸನ್ನು ಗೆಲ್ಲಬಹುದೆಂಬ ಭ್ರಮೆ ಅವರದು. ಅಧಿಕಾರ ವಹಿಸಿಕೊಂಡ ಕೂಡಲೇ ಪ್ರಪ್ರಥಮವಾಗಿ ಈಗಾಗಲೇ ಕುಲಗೆಟ್ಟುಹೋಗಿರುವ ದೇಶದ ಮೂಲಭೂತ ಸಾಮಾಜಿಕ – ಆರ್ಥಿಕ ಪರಿಸ್ಥಿತಿಯತ್ತ ಗಮನಹರಿಸಬೇಕಿದ್ದ ಪ್ರಧಾನಿ ನರೇಂದ್ರ ಮೋದಿಯವರು ಅತೀ ಅವಸರದಲ್ಲಿರುವ ಮನುಷ್ಯರಂತೆ ಕಾಣುತ್ತಾರೆ. ದೇಶದಲ್ಲಿ ಬೃಹತ್ ಗಾತ್ರದ ವೆಚ್ಚವಿರುವ ಆರ್ಥಿಕ ಸುಧಾರಣೆಗಳನ್ನು ಶರವೇಗದಲ್ಲಿ ತರಲು ಹೊರಟಿದ್ದಾರೆ. ತಮ್ಮ ಸರ್ಕಾರವು ಜಾರಿಗೆ ತರಲು ಉದ್ದೇಶಿಸಿರುವ ಸುಧಾರಣೆ ಮತ್ತು ಬದಲಾವಣೆಗಳಿಗಾಗಿ ಜನಾದೇಶವನ್ನು ಪಡೆದಿದೆ ಎಂದು ಮೋದಿ ಅರ್ಥೈಸಿಕೊಂಡಿದ್ದಾರೆ. ಈ ರೀತಿಯ ತಿಳುವಳಿಕೆ ತಮ್ಮ ಅನುಕೂಲಕ್ಕೆ ತಕ್ಕ ಊಹೆಯೇ ಆಗಿದ್ದು, ಇದೊಂದು ಚರ್ಚಾಸ್ಪದ ವಿಷಯವಾಗಿದೆ. ಕಾಂಗ್ರೆಸ್ ನೇತೃತ್ವದ ಯುಪಿಎ ಸರ್ಕಾರ ಎರಡು ಅವಧಿಗಳಿಗೆ, ಅಂದರೆ ಹತ್ತು ವರ್ಷಗಳ ಕಾಲ ಆಡಳಿತ ನಡೆಸಿತು. ಅಗತ್ಯ ವಸ್ತುಗಳ ಬೆಲೆ ಗಗನಕ್ಕೇರಿತು, ಸಾರ್ವಜನಿಕ ಪಡಿತರ ವಿತರಣಾ ವ್ಯವಸ್ಥೆಯನ್ನು ಸರ್ವನಾಶ ಮಾಡಲಾಯಿತು, ಹಣದುಬ್ಬರ ಹೆಚ್ಚಾಯಿತು, ಉದ್ಯೋಗಗಳ ಕೊರತೆ ಉಂಟಾಯಿತು, ಗುತ್ತಿಗೆ ಮತ್ತು ದಿನಗೂಲಿ ಕಾರ್ಮಿಕ ಪದ್ಧತಿಯೇ ಕ್ರಮಬದ್ಧವಾಯಿತು, ಮಹಿಳೆಯರ ಮೇಲಿನ ದಾಳಿಗಳು ಅಧಿಕಗೊಂಡವು, ಹಗರಣಗಳು ಮತ್ತು ಭ್ರಷ್ಟಾಚಾರಗಳು ಮಿತಿಮೀರಿ ಬೆಳೆದವು. ದುರಾಡಳಿತ ಮತ್ತು ನಿಷ್ಕ್ರಿಯತೆ ಹೆಚ್ಚಾದವು. ದೇಶದ ಜನರು ಹತಾಶರಾಗಿ ಉದ್ವಿಗ್ನರಾದರು. ಪರಿಣಾಮ ಸಹಜವಾಗಿಯೇ ಆಡಳಿತಾರೂಢರನ್ನು ಬದಲಿಸಲು ಹಾತೊರೆದರು. ಹೀಗಾಗಿ ಭಾಜಪ ನೇತೃತ್ವದ ಎನ್‌ಡಿಎ ಹಿಂದೆಂದೂ ಕಾಣದಂತಹ ಭಾರಿ ಅಂತರದಿಂದ ಅಧಿಕಾರದ ಗದ್ದುಗೆ ಹಿಡಿಯಲು ಸಾಧ್ಯವಾಯಿತು. ಅದೊಂದು ರೀತಿಯಲ್ಲಿ ಭಾಜಪಕ್ಕೆ ನಕಾರಾತ್ಮಕ ಜನಾದೇಶವೆಂದೇ ಹೇಳಬೇಕು. ಆದ್ದರಿಂದ ಮೋದಿ ಸರ್ಕಾರ ಜಾರಿಗೆ ತರಲಿಚ್ಛಿಸಿರುವ ಸುಧಾರಣೆ ಮತ್ತು ಬದಲಾವಣೆಗಾಗಿ ಜನಾದೇಶ ಪಡೆದಿದೆ ಎಂದು ವ್ಯಾಖ್ಯಾನಿಸುವುದು ವಂಚನೆಯಿಂದ ತುಂಬಿದ್ದು ಮತ್ತು ಬೊಗಳೆ ಕೊಚ್ಚಿಕೊಳ್ಳುವಂತಹದ್ದು, ಅಷ್ಟೆ.

ಮೋದಿ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡು ಸುಮಾರು ಆರು ತಿಂಗಳು ಕಳೆದಿವೆ. ತಮ್ಮ ವಾಕ್ಚಾತುರ್ಯವನ್ನು ಪ್ರದರ್ಶಿಸಲು ಮತ್ತು ಬಂಡವಾಳಶಾಹಿ ಆರ್ಥಿಕ ಸುಧಾರಣೆಗಳನ್ನು ಮುಂದುವರಿಸುವ ದಿಶೆಯಲ್ಲಿ ತಮ್ಮ ಸರ್ಕಾರದ ಬದ್ಧತೆಯನ್ನು ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಹಾಗೂ ಜಾಗತಿಕ ಬಂಡವಳಿಗರಿಗೆ ಖಾತ್ರಿಪಡಿಸುವ ಸಲುವಾಗಿ ವಿಶ್ವಪರ್ಯಟನೆ ಮಾಡುತ್ತಿದ್ದಾರೆ. ಈಗಾಗಲೇ ವಿಮೆ, ಬ್ಯಾಂಕಿಂಗ್, ರಕ್ಷಣಾ ವಲಯ, ವಿಮಾನಯಾನ, ರೇಲ್ವೆ ಮತ್ತಿತರೆ ಅನೇಕ ಕ್ಷೇತ್ರಗಳಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆಯ ಹೆಚ್ಚಳಕ್ಕೆ ದಾರಿ ಸುಗಮಗೊಳಿಸಲಾಗಿದ್ದು, ಸಂಸತ್ತಿನ ಒಪ್ಪಿಗೆಗೆ ಕಾಯ್ದಿರಿಸಲಾಗಿದೆ. ಇತ್ತೀಚೆಗೆ ಜಪಾನ್‌ಗೆ ಭೇಟಿಯಿತ್ತ ಮೋದಿ, ಭಾರತದಲ್ಲಿ ಅಗ್ಗವಾಗಿ ಕಾರ್ಮಿಕರು ದೊರೆಯುವರೆಂಬ ಆಮಿಷವೊಡ್ಡಿ ಅಲ್ಲಿನ ಬಂಡವಳಿಗರಿಗೆ ನಮ್ಮ ದೇಶದಲ್ಲಿ ಬಂಡವಾಳ ಹೂಡಲು ಪ್ರಚೋದಿಸಿದರು. ಭಾರತದ ಪ್ರಧಾನ ಮಂತ್ರಿಯವರಿಂದ ಇಂತಹ ಮಾತುಗಳು ಬರುವುದೆಂದರೆ ಅದು ಅತ್ಯಂತ ಅಸಹ್ಯಕರವಾದುದು! ಒಂದು ದೇಶದ ಪ್ರಧಾನಿ ತನ್ನ ದೇಶದೊಳಗಿನ ಅಗ್ಗದ ಶ್ರಮಶಕ್ತಿಯನ್ನು ಶೋಷಣೆಗೈಯ್ಯುತ್ತಾ ಅಧಿಕ ಲಾಭ ಗಳಿಸಲು ವಿದೇಶಿ ಬಂಡವಾಳವನ್ನು ಆಹ್ವಾನಿಸುವುದನ್ನು "ಅಭಿವೃದ್ಧಿ" ಎಂದು ಕರೆಯಲಾಗುತ್ತದೆ! ಇದು

ಎನ್‌ಡಿಎ ಸರ್ಕಾರದ ನೈಜ ಮುಖಗಳು ಸ್ಪಷ್ಟವಾಗಿ ಹೊರಬರುತ್ತಿವೆ. ಈಗ ಅಧಿಕಾರದಲ್ಲಿರುವ ಪಕ್ಷವು ಚುನಾವಣಾ ಪ್ರಚಾರಗಳಲ್ಲಿ, ತನ್ನನ್ನು ಅಧಿಕಾರಕ್ಕೆ ತಂದದ್ದೇ ಆದರೆ ಒಂದು ನೂರು ದಿನಗಳಲ್ಲಿ ಆ ಕೆಲಸ ಮಾಡುತ್ತೇನೆ, ಈ ಕೆಲಸ ಮಾಡುತ್ತೇನೆ ಎಂದೆಲ್ಲಾ ಹೇಳಿಕೊಂಡಿತ್ತು. ಸರಿಯಾಗಿ ಒಂದು ನೂರು ದಿನಗಳಲ್ಲಿ, ಸರ್ಕಾರವು ಮುಂದೆ ಏನು ಮಾಡಲಿದೆ ಮತ್ತು ಹೇಗೆ ಮಾಡಲಿದೆ ಎಂಬುದರ ಕುರಿತು ನೀಲಿನಕ್ಷೆ ಮತ್ತು ಮಾರ್ಗಸೂಚಿ ಹೊರಹೊಮ್ಮಿದೆ. ಯಾವುದೇ ಭ್ರಮೆಯೂ ಬೇಡ. ಸವಾಲೆದುರಿಸುವ ದಿನಗಳು ಮುಂದೆ ಬರಲಿವೆ. ಅವೆಂದರೆ ಐಎಂಎಫ್ ಆರ್ಥಿಕತಜ್ಞರು ಸಂಚು ಹೂಡಿರುವ ಅಪ್ಪಟ, ಅನಿಯಂತ್ರಿತ ಬಂಡವಾಳಶಾಹಿ ಆರ್ಥಿಕ ಸುಧಾರಣೆಗಳೇ ಆಗಲಿವೆ.

‘ವಿಕಾಸವೋ’ ‘ವಿನಾಶವೋ’ ಎಂಬ ಸಂಶಯವೂ ಮೂಡುತ್ತದೆ! ಅಲ್ಲದೆ, ಭಾರತದಲ್ಲಿ ಶ್ರಮಿಕರಿಗೆ ಸಲ್ಲಬೇಕಾದ ಕೂಲಿ ನಿರಂತರವಾಗಿ ಅಗ್ಗವಾಗಿಯೇ ಉಳಿಯುತ್ತದೆಂದೂ ಮತ್ತು ಕಾರ್ಮಿಕರು ಸದಾಕಾಲ ಅಭದ್ರತೆಯ ಬದುಕು ಸಾಗಿಸಬೇಕೆಂದೂ ಪ್ರಧಾನಿ ಸೂಚಿಸುತ್ತಾರೆಯೇ? “ಮೇಕ್ ಇನ್ ಇಂಡಿಯಾ”! ಎಂದು ಎಲ್ಲೆಡೆಯೂ ಡಂಗೂರ ಬಾರಿಸುತ್ತಿರುವ ಘೋಷಣೆಯ ನೈಜಮುಖ ಇದು!




ಅಮೆರಿಕ ಮೂಲದ ಆರ್ಥಿಕತಜ್ಞ ಅರವಿಂದ್ ಸುಬ್ರಮಣಿಯನ್ ಅವರನ್ನು ಪ್ರಧಾನ ಆರ್ಥಿಕ ಸಲಹೆಗಾರರನ್ನಾಗಿಯೂ (ಸಿಇಎ), ರಾಜೀವ್ ಮಹರ್ಷಿಯವರನ್ನು ಆರ್ಥಿಕ ಕಾರ್ಯದರ್ಶಿಯನ್ನಾಗಿಯೂ ಮೋದಿ ನೇಮಿಸಿಕೊಂಡಿದ್ದಾರೆ. ಅರವಿಂದ್ ಸುಬ್ರಮಣಿಯನ್ ಮತ್ತು ಆರ್‌ಬಿಐ ಮುಖ್ಯಸ್ಥ ರಘುರಾಮ್ ರಾಜನ್ ಇಬ್ಬರೂ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯಲ್ಲಿ (ಐಎಂಎಫ್) ಕಾರ್ಯನಿರ್ವಹಿಸಿದ್ದು, ಆರ್ಥಿಕ ವಿಷಯಗಳ ಕುರಿತು ಸಮಾನ ಅಭಿಪ್ರಾಯವನ್ನು ಹೊಂದಿದ್ದಾರೆ. ರಾಜೀವ್ ಮಹರ್ಷಿ ರಾಜಸ್ತಾನದಲ್ಲಿ ಕಾರ್ಮಿಕರನ್ನು ಮುಕ್ತ ಮಾರುಕಟ್ಟೆಯ ಸರಕನ್ನಾಗಿಸುವ ದಿಶೆಯಲ್ಲಿ ತೀವ್ರತರವಾದ ಬದಲಾವಣೆಗಳನ್ನು ತರಲು ಪ್ರಮುಖ ಕಾರಣಕರ್ತನಾದವ ಎಂಬುದು ಗಮನಾರ್ಹ. ಕಾರ್ಮಿಕರನ್ನು ಮುಕ್ತ ಮಾರುಕಟ್ಟೆಯ ಸರಕಾಗಿಸುವುದೆಂದರೆ ಏನು? ಇದರರ್ಥ ಕಾರ್ಮಿಕರ ರಕ್ಷಣೆಗಿರುವಂತಹ ಕಾಯಿದೆಗಳ ನಿರಾಕರಣೆ ಎಂದಷ್ಟೆ. ಬಂಡವಾಳಶಾಹಿ ಆರ್ಥಿಕ ಸುಧಾರಣೆಗಳ ಅಗತ್ಯಗಳಿಗನುಸಾರವಾಗಿ ಕಾರ್ಮಿಕ ಕಾನೂನುಗಳನ್ನು ಬದಲಿಸಿಕೊಳ್ಳುವುದು ಇದರ ಅರ್ಥ. ರಾಜಸ್ತಾನದ ಪ್ರಯೋಗವನ್ನು ರಾಷ್ಟ್ರಮಟ್ಟದಲ್ಲಿ ವಿಸ್ತರಿಸಬೇಕೆಂದು ಎನ್‌ಡಿಎ ಸರ್ಕಾರವು ಚಿಂತನೆ ನಡೆಸಿದೆ. ಆದ್ದರಿಂದಲೇ ಮೇಲ್‌ಸ್ತರದ ಅಧಿಕಾರಶಾಹಿಯನ್ನು ಹೊಸದಾಗಿ ನೇಮಕಗೊಳಿಸಿ ಪುನರ್‌ರಚಿಸಲಾಗಿದೆ. ಈಗಾಗಲೇ ಎನ್‌ಡಿಎ ಸರ್ಕಾರದ ಪೂರ್ಣ ಪ್ರಮಾಣದ ಚೊಚ್ಚಲ ಬಜೆಟ್‌ಅನ್ನು ಮಂಡಿಸುವ ವಿಷಯದಲ್ಲಿ ಕೆಲಸ ಆರಂಭವಾಗಿದೆ. ಮೋದಿ ಸರ್ಕಾರದ ನೈಜ ಮುಖವು ಕಾಲಕ್ರಮೇಣ ಜನತೆಗೆ ಗೋಚರವಾಗಲಿದೆ. ಜಪಾನ್ ಮತ್ತು ಅಮೆರಿಕಗಳಲ್ಲಿ ಮೋದಿ ಮಾಡಿದ ಭಾಷಣವು ಯಾವ ರೀತಿಯಲ್ಲೂ ಸಮಾಧಾನ ತರುವಂಥದ್ದಲ್ಲ. ಹೂಡಿಕೆದಾರ – ಸ್ನೇಹಿ ಪರಿಸ್ಥಿತಿಯನ್ನು ಸೃಷ್ಟಿಸಬೇಕೆಂಬುದು ಎನ್‌ಡಿಎ ಸರ್ಕಾರದ ಮೂಲ ಉದ್ದೇಶ. ಪ್ರಜಾತಾಂತ್ರಿಕ ಕಾರ್ಮಿಕ ಸಂಘಗಳ ಹಕ್ಕುಗಳ ನಿರಾಕರಣೆಯಿಂದಲೇ ಆರ್ಥಿಕ ಸ್ಥಿರತೆ ಸಾಧಿಸಲು ಸಾಧ್ಯ ಎಂದು ತಿಳಿಯಲಾಗಿದೆ.

ಭಾರಿ ಲಾಭಗಳಿಸುವ ಖಾತ್ರಿ ಇಲ್ಲವೆಂದರೆ ಒಂದು ದೇಶ ಮತ್ತೊಂದು ದೇಶದಲ್ಲಿ ಯಾಕೆ ಹಣ ಹೂಡಬೇಕು? ಬಂಡವಾಳ ಹೂಡಿಕೆಯ ವರ್ಗಾವಣೆ ಎಂದೂ ಅದನ್ನು ಕರೆಯಬಹುದೆನ್ನಿ. ಅಧಿಕ ಲಾಭವೇ ಬಂಡವಳಿಗರ ಗುರಿ. ಹೂಡಿಕೆದಾರ – ಸ್ನೇಹಿ ವಾತಾವರಣ ಎಂದರೆ ಸಬ್ಸಿಡಿ ದರಗಳಲ್ಲಿ ಮೂಲಭೂತ ಸೌಕರ್ಯಗಳು, ವಿದ್ಯುತ್, ನೀರು, ಇತ್ಯಾದಿಗಳು, ತೆರಿಗೆ – ರಜೆಗಳು ಮತ್ತು ತೆರಿಗೆ – ವಿನಾಯ್ತಿಗಳು, ಅವರಿಗೆ ಬೇಕಾದಂತಹ ಸಾಗಣೆ ಮತ್ತು ಮುಕ್ತಮಾರುಕಟ್ಟೆ ಕಾರ್ಮಿಕ ನೀತಿಗಳು ಎಂದೇ ಇದರ ಅರ್ಥ. ಈಗಾಗಲೇ ಕೈಗಾರಿಕಾ ವಿವಾದಗಳ ಕಾಯಿದೆ, ಕಾರ್ಮಿಕ ಸಂಘಗಳ ಕಾಯಿದೆ, ಫ್ಯಾಕ್ಟರಿ ಕಾಯಿದೆ, ಗುತ್ತಿಗೆ ಕಾರ್ಮಿಕರ ಕಾಯಿದೆ, ಅಪ್ರೆಂಟಿಸ್ ಕಾಯಿದೆ, ಇತ್ಯಾದಿಗಳಂತಹ ಹಾಲಿ ಇರುವ ಕಾರ್ಮಿಕ ಕಾಯಿದೆಗಳ ತಿದ್ದುಪಡಿಗಾಗಿ ಸರ್ಕಾರ ಚಾಲನೆ ನೀಡಿದೆ. ೪೦ಕ್ಕಿಂತ ಕಡಿಮೆ ನೌಕರರನ್ನು ಹೊಂದಿರುವ ಕಾರ್ಖಾನೆಗಳು ಅಥವಾ ಘಟಕಗಳನ್ನು ಕಾರ್ಮಿಕ ಕಾಯಿದೆಯ ವ್ಯಾಪ್ತಿಯಿಂದ ಹೊರಗಿಡಲು ಹೊಂಚುಹಾಕಲಾಗಿದೆ. ಒಟ್ಟಿನಲ್ಲಿ, ವಿದೇಶಿ ಬಂಡವಾಳಕ್ಕೆ ಆಹ್ವಾನ ನೀಡುವುದೆಂದರೆ ನಮ್ಮ ದೇಶವನ್ನು ಮತ್ತದರ ಸಂಪನ್ಮೂಲಗಳನ್ನು ಶೋಷಣೆ ಮಾಡಲು ಮತ್ತು ಲೂಟಿ ಹೊಡೆಯಲು ಆಹ್ವಾನಿಸುವುದೆಂದೇ ಅರ್ಥ. ನಿರುದ್ಯೋಗ, ಕಾರ್ಮಿಕ – ವಿರೋಧಿ ನೀತಿಗಳು, ಸಂಬಳ ಕಡಿತ, ಪಿಂಚಣಿ ಕಡಿತ, ಮತ್ತು ದುಡಿಯುವ ಜನತೆಯ ಸಾಮಾಜಿಕ ಹಕ್ಕುಗಳ ಮೇಲಿನ ಆಕ್ರಮಣಕ್ಕೆ ಬಂಡವಾಳದ ವರ್ಗಾವಣೆಯೇ ಕಾರಣ. ಈ ಮೂಲಕ ಉದ್ಯೋಗಗಳನ್ನು ಸೃಷ್ಟಿಸದ ಅಭಿವೃದ್ಧಿ ರೂಪರೇಷೆಯನ್ನು ರೂಪಿಸಲಾಗಿದೆ. ಲಾಭ ಗಳಿಕೆಯ ದುರಾಸೆಯೇ ಇದಕ್ಕೆ ಮೂಲ. ಇದಕ್ಕೆ ಬಲಿಯಾಗಿರುವುದು ಜನರ ಹಿತ. ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ನೀತಿಗಳನ್ನು ಆಧರಿಸಿದ ಪ್ರಸಕ್ತ ಅಭಿವೃದ್ಧಿ ಮಾದರಿಯು ಆರ್ಥಿಕವಾಗಿ ಅಸಮರ್ಥವೂ, ಸಾಮಾಜಿಕವಾಗಿ ಅಸ್ಥಿರವೂ, ಪರಿಸರ ದೃಷ್ಟಿಯಿಂದ ಹಾನಿಕಾರಕವೂ ಮತ್ತು ರಾಜಕೀಯವಾಗಿ ಅಭದ್ರತೆಯಿಂದ ಕೂಡಿದ್ದೂ ಆಗಿದೆ. ಬಿಎಂಎಸ್ ಪ್ರಧಾನ ಕಾರ್ಯದರ್ಶಿ ವರ್ಜೇಶ್ ಉಪಾಧ್ಯಾಯ ಹೀಗೆ ಹೇಳುತ್ತಾರೆ: “ಮೋದಿಯವರು ಜಪಾನ್, ಚೀನಾ, ಅಮೆರಿಕ ಸೇರಿದಂತೆ ಎಲ್ಲರನ್ನೂ ಭಾರತಕ್ಕೆ ಬಂದು ವ್ಯಾಪಾರ ಮಾಡುವಂತೆ ಆಹ್ವಾನಿಸುತ್ತಿದ್ದಾರೆ. ಅವರು ಮಾಡುತ್ತಿರುವ ಕೆಲಸ ಈಗಿರುವ ನೀತಿಗಳ ದುರ್ಬಲತೆಯನ್ನು ತೆಗೆಯುವುದರ ಬದಲಿಗೆ ಸಮಾಜವನ್ನೇ ದುರ್ಬಲಗೊಳಿಸುತ್ತದೆ.”

ಕಪ್ಪುಹಣದ ಬಗ್ಗೆ ಮೋದಿ ಸರ್ಕಾರ ತನ್ನ ನಿಲುವಿನಿಂದ ಹಿಂದೆ ಸರಿದು, ವಿದೇಶಿ ಬ್ಯಾಂಕುಗಳಲ್ಲಿ ಅಕ್ರಮವಾಗಿ ಮತ್ತು ರಹಸ್ಯವಾಗಿ ಹಣ ಇಟ್ಟಿರುವ ವ್ಯಕ್ತಿಗಳ ಹೆಸರುಗಳನ್ನು ಬಹಿರಂಗಪಡಿಸಲು ಸಾಧ್ಯವಿಲ್ಲ ಎಂದಿದೆ. ಲೋಕಸಭೆ

ಚುನಾವಣೆಗಳ ಸಂದರ್ಭದಲ್ಲಿ ಮೋದಿ ಮತ್ತು ಅವರ ಪಕ್ಷವು ತಮ್ಮನ್ನು ಅಧಿಕಾರಕ್ಕೆ ತಂದದ್ದೇ ಆದರೆ, ಹೊರದೇಶಗಳಲ್ಲಿ ರಹಸ್ಯವಾಗಿಟ್ಟಿರುವ ಕಪ್ಪು ಹಣವನ್ನು ವಾಪಸ್ ತರುವ ಭರವಸೆ ನೀಡಿದ್ದರು. ವಿದೇಶಿ ಬ್ಯಾಂಕುಗಳಲ್ಲಿ ಜಮೆಯಾಗಿರುವ ಕಪ್ಪುಹಣದ ಮೊತ್ತ ಸುಮಾರು ೬ ಲಕ್ಷ ಕೋಟಿಯಷ್ಟು ಇರಬಹುದು. ಈ ಮೊತ್ತ ಇನ್ನೂ ಹೆಚ್ಚಿದ್ದರೂ ಅಚ್ಚರಿಯೇನಿಲ್ಲ. ಅಂದಾಜುಗಳಲ್ಲಿ ಮಾತ್ರ ವ್ಯತ್ಯಾಸವಿರಬಹುದು. ಇದಲ್ಲದೆ, ಭಾರತದೊಳಗೇ ಕೋಟಿಗಟ್ಟಲೆ ಕಪ್ಪುಹಣ ಚಲಾವಣೆಯಾಗುತ್ತಿದೆ. ಸರ್ಕಾರಕ್ಕೆ ಇದರ ಬಗ್ಗೆ ಅರಿವು ಇಲ್ಲವೆಂದಲ್ಲ. ಭಾರತದೊಳಗೆ ಲಭ್ಯವಿರುವ ಮತ್ತು ವಿದೇಶಗಳಲ್ಲಿ ರಹಸ್ಯವಾಗಿಟ್ಟಿರುವ ಅಕ್ರಮ ಹಣದ ಒಟ್ಟು ಮೊತ್ತವೆಷ್ಟೆಂಬುದನ್ನು ಸರ್ಕಾರ ಮತ್ತು ಭಾರತೀಯ ರಿಸರ್ವ್ ಬ್ಯಾಂಕ್‌ಗಳು ತಿಳಿದಿವೆ. ಚುನಾವಣೆಗಳ ಸಂದರ್ಭದಲ್ಲಿ, ಸಾವಿರಾರು ಕೋಟಿ ರೂಪಾಯಿಗಳನ್ನು ಪ್ರಚಾರಕ್ಕಾಗಿ ವೆಚ್ಚ ಮಾಡಲಾಗುತ್ತದೆ. ಈ ಹಣವು ಎಲ್ಲಿಂದ ಬರುತ್ತದೆ ? ಭಾರತದ ೧/೩ರಷ್ಟು ಜನಸಂಖ್ಯೆಯು ಅತೀವ ಬಡತನದಿಂದಾಗಿ ಬಳಲುತ್ತಿದ್ದಾರೆ ಮತ್ತು ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿ ಹಸಿದ ಹೊಟ್ಟೆಯಲ್ಲಿ ಮಲಗುತ್ತಿರುವ ಸ್ಥಿತಿ ಇಂದಿಗೂ ಇದೆ. ಯುಪಿಎ ಆಗಲೀ, ಎನ್‌ಡಿಎ ಆಗಲೀ ಎರಡೂ ಸರ್ಕಾರಗಳು ಈ ಪರಿಸ್ಥಿತಿ ಕುರಿತು ಚಕಾರವೆತ್ತುತ್ತಿಲ್ಲ. ಭಾಜಪ ನೇತೃತ್ವದ ಸರ್ಕಾರ ಭಾರತದಲ್ಲಾಗಲೀ ಹೊರದೇಶಗಳಲ್ಲಾಗಲೀ ಕಪ್ಪುಹಣ ಹೊಂದಿರುವ ಅಪರಾಧಿಗಳನ್ನು ರಕ್ಷಿಸಲು ಯತ್ನಿಸುತ್ತಿರುವುದು ಸ್ಪಷ್ಟವಾಗಿದೆ. ಇದೇ ಸಂದರ್ಭದಲ್ಲಿ, ಮೋದಿ ಸರ್ಕಾರಕ್ಕೆ ಕಾರ್ಮಿಕರ ಮೇಲೆ ದಾಳಿ ನಡೆಸುವಾಗ ಯಾವುದೇ ಬಗೆಯ ಸಾಕ್ಷಿಪ್ರಜ್ಞೆ ಕಾಡುವುದಿಲ್ಲ.

ಸರ್ವೋಚ್ಚ ನ್ಯಾಯಾಲಯವು ತನ್ನ ೨೦೧೧ರ ಆದೇಶದನ್ವಯ ವಿದೇಶಗಳಲ್ಲಿರುವ ಎಲ್ಲಾ ಭಾರತೀಯ ಬ್ಯಾಂಕ್ ಖಾತೆದಾರರ ಹೆಸರುಗಳನ್ನು ಬಹಿರಂಗಗೊಳಿಸಲು ಸರ್ಕಾರಕ್ಕೆ ಆದೇಶ ನೀಡಿತ್ತು. ಅಧಿಕಾರಕ್ಕೆ ಬಂದ ನಂತರ ನರೇಂದ್ರ ಮೋದಿ ಸರ್ಕಾರ ಈ ೨೦೧೧ರ ಸರ್ವೋಚ್ಚ ನ್ಯಾಯಾಲಯದ ಆದೇಶದ ತಿದ್ದುಪಡಿಗಾಗಿ ಮೊರೆ ಹೋಯಿತು. ಸರ್ಕಾರವು ಹಿಂದೆ ಸರಿಯಲು ಯತ್ನಿಸಿದಾಗ ಕುಪಿತಗೊಂಡ ಸರ್ವೋಚ್ಚ ನ್ಯಾಯಾಲಯವು ಪ್ರತಿಕ್ರಿಯಿಸಿದ್ದು ಹೀಗೆ : "ನೀವು ಯಾರನ್ನೂ ರಕ್ಷಿಸುವ ಅಗತ್ಯವಿಲ್ಲ. ಅಂತಹ ಜನರ (ವಿದೇಶಿ ಬ್ಯಾಂಕುಗಳಲ್ಲಿ ಹಣವನ್ನು ಕದ್ದಿಟ್ಟಿರುವ ಜನರ) ಮೇಲೆ ರಕ್ಷಾ ಕವಚವನ್ನೇಕೆ ಹೊದಿಸುತ್ತಿರುವಿರಿ ? ಫ್ರಾನ್ಸ್, ಜರ್ಮನಿ ಅಥವಾ ಇನ್ನಿತರೆ ದೇಶಗಳಿಂದ ನಿಮಗೆ ದೊರಕಿರುವಂತಹ ಮಾಹಿತಿ ಮತ್ತು ಸಂಪೂರ್ಣ ಪಟ್ಟಿಯನ್ನು ನಮಗೆ ನೀಡಿ." ಒಂದು ದಿನದೊಳಗಾಗಿ ಎಲ್ಲಾ ರಹಸ್ಯ ಖಾತೆದಾರರ ಹೆಸರುಗಳನ್ನು ಬಹಿರಂಗಗೊಳಿಸುವಂತೆ ಸರ್ವೋಚ್ಚ ನ್ಯಾಯಾಲಯ ಸರ್ಕಾರಕ್ಕೆ ಆದೇಶ ನೀಡಿತು. ಅಕ್ಟೋಬರ್ ೨೯ರಂದು ಸರ್ಕಾರವು ೬೨೭ ಹೆಸರುಗಳುಳ್ಳ ಪಟ್ಟಿಯೊಂದನ್ನು ನ್ಯಾಯಾಲಯಕ್ಕೆ ಸಲ್ಲಿಸಿತು. ಇದು ಪಟ್ಟಿಯ ಅತಿ ಸಣ್ಣದೊಂದು ತುಣುಕೆಂದು ಕಾಣುತ್ತದೆ. ಮಾಧ್ಯಮಗಳ ವರದಿಯಂತೆ, ಸ್ವಿಟ್ಜರ್‌ಲ್ಯಾಂಡ್ ದೇಶವೊಂದರಲ್ಲೇ ೮೦೦೦ ಖಾತೆಗಳು ಇವೆಯಂತೆ. ಕಪ್ಪುಹಣ ಕುರಿತ ತನಿಖೆ ಅಂತಿಮಗೊಳಿಸಲು ಸರ್ವೋಚ್ಚ ನ್ಯಾಯಾಲಯ ೨೦೧೫ ಮಾರ್ಚ್ ೩೧ರ ತನಕ ಗಡುವು ನೀಡಿದೆ.

## ಶಾಶ್ವತ

ವಾಹನ ಚಾಲಕ ರಾತ್ರಿ
ಎರಡು ಕಣ್ಣುಗಳನ್ನು
ಒಂದು ಗಳಿಗೆ
ಮುಚ್ಚಿದರೆ,
ನೂರಾರು ಕಣ್ಣುಗಳು
ಶಾಶ್ವತವಾಗಿ
ಮುಚ್ಚಿಹೋಗಬಹುದು !

ಸಿ. ಪಿ. ಕೆ.
ಮೈಸೂರು

ಗೋಪ್ಯತೆಯ ಷರತ್ತನ್ನು ಉಲ್ಲೇಖಿಸುತ್ತ, ವಿದೇಶಗಳಲ್ಲಿ ಬಚ್ಚಿಟ್ಟಿರುವ ಕಪ್ಪುಹಣದ ವಿಚಾರದಲ್ಲಿ ಕೇಂದ್ರ ಸರ್ಕಾರವು ಹಿಂಜರಿಯುತ್ತಿದೆ. ಇನ್ನು ಇವರು ದೇಶದೊಳಗೇ ಹುದುಗಿಸಿಟ್ಟಿರುವ ಕಪ್ಪುಹಣದ ಕುರಿತು ಹೇಗೆ ವ್ಯವಹರಿಸಿಯಾರು ? ಯಾರೂ ಇಂತಹ ಪ್ರಶ್ನೆಯನ್ನು ಎತ್ತಿಲ್ಲ !

ಚುನಾವಣೆಗಳ ಸಂದರ್ಭದಲ್ಲಿ, ತಾನು ಅಧಿಕಾರಕ್ಕೆ ಬಂದರೆ ನೂರು ದಿನಗಳೊಳಗೆ ಕಪ್ಪು ಹಣವನ್ನು ವಾಪಸ್ಸು ತರುವುದಾಗಿ ಭಾಜಪ ಭರವಸೆ ನೀಡಿತ್ತು. ಸರ್ಕಾರ ಈಗ ನಡುಗುತ್ತಿದೆ. ಚುನಾವಣೆಗಳಲ್ಲಿ ಕಪ್ಪುಹಣ ದೊಡ್ಡ ಪಾತ್ರ ವಹಿಸುತ್ತದೆ ಎಂಬುದನ್ನು ಯಾರೂ ಕೂಡ ನಿರಾಕರಿಸಲಾಗದು. ಕಪ್ಪುಹಣದ ವಿರುದ್ಧದ ಹೋರಾಟ ಯಾವ ರೂಪ ಪಡೆಯುತ್ತದೆ ಎಂದು ಕಾದು ನೋಡಬೇಕಿದೆ. ಕಾನೂನು ವ್ಯವಸ್ಥೆಯಲ್ಲೇ ಬಹಳಷ್ಟು ಲೋಪದೋಷಗಳು ಇರುವಂತೆ ಕಾಣುತ್ತದೆ.

ಇನ್ನು, ಜನಸಾಮಾನ್ಯರ ಮೇಲೆ ಮತ್ತೊಂದು ದಾಳಿ ನಡೆಯುವುದು ಅಷ್ಟೇನೂ ದೂರವಿಲ್ಲ. ಕೇಂದ್ರ ಸರ್ಕಾರವು ರಸ್ತೆ ಸಾರಿಗೆ ಮತ್ತು ಸುರಕ್ಷತೆ ಮಸೂದೆ, ೨೦೧೪ ಎಂಬ ಹೊಸ ಮಸೂದೆಯೊಂದನ್ನು ಸಂಸತ್ತಿನಲ್ಲಿ ಮಂಡಿಸಲು ಚಿಂತನೆ ನಡೆಸಿದೆ. ದೇಶದಾದ್ಯಂತ ಎಲ್ಲಾ ಬಸ್ ಮಾರ್ಗಗಳನ್ನೂ ಸಂಪೂರ್ಣವಾಗಿ ಖಾಸಗೀಕರಣಕ್ಕೆ ಒಳಪಡಿಸುವುದೇ ಇದರ ಉದ್ದೇಶ. ಇದು ಸರ್ಕಾರಿ ಸ್ವಾಮ್ಯದ ರಾಜ್ಯ ರಸ್ತೆ ಸಾರಿಗೆ ನಿಗಮಗಳ ಮೇಲಿನ ದಾಳಿಯೂ ಹೌದು. ಜನತೆಗೆ ಅತ್ಯವಶ್ಯಕವಾದ ಕನಿಷ್ಠ ಆಹಾರ, ವಸತಿ, ಕುಡಿಯುವ ನೀರು, ಶಿಕ್ಷಣ, ಉದ್ಯೋಗ, ಆರೋಗ್ಯ ರಕ್ಷಣೆ ಮತ್ತು ನೈರ್ಮಲ್ಯ ಹಾಗೂ ಸಾರಿಗೆ ಸೌಲಭ್ಯಗಳನ್ನು ಕಲ್ಪಿಸಿ ಕೊಡುವುದು ಸರ್ಕಾರದ ಮೂಲಭೂತ ಕರ್ತವ್ಯ. ಈಗಾಗಲೇ ಆರ್ಥಿಕ ಸುಧಾರಣೆಗಳ ಹೆಸರಿನಲ್ಲಿ ಸರ್ಕಾರವು ತನ್ನ ಜವಾಬ್ದಾರಿಯಿಂದ ಕಾಲಕ್ರಮೇಣ ಕಳಚಿಕೊಳ್ಳುತ್ತಿದೆ. ಕುಡಿಯುವ ನೀರು, ಶಿಕ್ಷಣ ಮತ್ತು ಆರೋಗ್ಯ ರಕ್ಷಣೆ ಕ್ಷೇತ್ರಗಳು ಇಂದು ಕಾರ್ಪೊರೇಟ್ ಸಂಸ್ಥೆಗಳು ನಡೆಸುವ ವ್ಯವಹಾರಗಳಾಗಿಬಿಟ್ಟಿವೆ. "ಹಣ ನೀಡು, ಇಲ್ಲವೇ ನಾಶವಾಗು" ಎಂಬುದೇ ಈಗಿನ ನಿಯಮ. ಇದೀಗ ರಾಜ್ಯ ರಸ್ತೆ ಸಾರಿಗೆ ನಿಗಮಗಳ ಮೇಲೆ ದಾಳಿ ಮಾಡಲಾಗುತ್ತಿದೆ. ದೇಶದಲ್ಲಿ ಸುಮಾರು ೫೫ ರಾಜ್ಯ ರಸ್ತೆ ಸಾರಿಗೆ ನಿಗಮಗಳಿದ್ದು, ಪ್ರಸ್ತಾಪಿತ ತಿದ್ದುಪಡಿ ಸಂಸತ್ತಿನಲ್ಲಿ ಅಂಗೀಕೃತವಾದದ್ದೇ ಆದರೆ, ಆಯಾ ರಾಜ್ಯ ಸರ್ಕಾರಗಳು ತಮ್ಮತಮ್ಮ ಸಾರಿಗೆ ನಿಗಮಗಳ ಮೇಲಿನ ನಿಯಂತ್ರಣವನ್ನು ಕಳೆದುಕೊಳ್ಳಲಿವೆ. ಅವುಗಳೆಲ್ಲವೂ "ಭಾರತೀಯ ಮೋಟಾರ್ ವಾಹನ ನಿಯಂತ್ರಣ ಮತ್ತು ರಸ್ತೆ ಸುರಕ್ಷತಾ ಪ್ರಾಧಿಕಾರ"ದ ಅಡಿಯಲ್ಲಿ ಕಾರ್ಯನಿರ್ವಹಿಸಬೇಕಾಗುತ್ತದೆ. ಈ ಪ್ರಾಧಿಕಾರಕ್ಕೆ ಸಾಕಷ್ಟು ವಿಶೇಷ ಅಧಿಕಾರಗಳನ್ನು ನೀಡಲಾಗುವುದು. ಅಂತಿಮವಾಗಿ ಸಂಕಷ್ಟಕ್ಕೀಡಾಗುವವರು ಜನಸಾಮಾನ್ಯರು. ಈ ಮೂಲಕ ಪ್ರಯಾಣಿಕರನ್ನು ದೋಚಲು ಮತ್ತು ಭಾರಿ ಲಾಭ ಗಳಿಸಲು ಯಾವುದಕ್ಕೂ ಹೇಸದ ಲಾಭಕೋರ ಖಾಸಗಿ ಬಸ್ ಮಾಲೀಕರಿಗೆ ಮುಕ್ತ ಪ್ರವೇಶ ನೀಡಲಾಗುವುದು.

ಎನ್‌ಡಿಎ ಸರ್ಕಾರದ ನೈಜ ಮುಖಗಳು ಸ್ಪಷ್ಟವಾಗಿ ಹೊರಬರುತ್ತಿವೆ. ಈಗ ಅಧಿಕಾರದಲ್ಲಿರುವ ಪಕ್ಷವು ಚುನಾವಣಾ ಪ್ರಚಾರಗಳಲ್ಲಿ, ತನ್ನನ್ನು ಅಧಿಕಾರಕ್ಕೆ ತಂದದ್ದೇ ಆದರೆ ಒಂದು ನೂರು ದಿನಗಳಲ್ಲಿ ಆ ಕೆಲಸ ಮಾಡುತ್ತೇನೆ, ಈ ಕೆಲಸ ಮಾಡುತ್ತೇನೆ ಎಂದೆಲ್ಲಾ ಹೇಳಿಕೊಂಡಿತ್ತು. ಸರಿಯಾಗಿ ಒಂದು ನೂರು ದಿನಗಳಲ್ಲಿ, ಸರ್ಕಾರವು ಮುಂದೆ ಏನು ಮಾಡಲಿದೆ ಮತ್ತು ಹೇಗೆ ಮಾಡಲಿದೆ ಎಂಬುದರ ಕುರಿತು ನೀಲಿನಕ್ಷೆ ಮತ್ತು ಮಾರ್ಗಸೂಚಿ ಹೊರಹೊಮ್ಮಿದೆ. ಯಾವುದೇ ಭ್ರಮೆಯೂ ಬೇಡ. ಸವಾಲೆದುರಿಸುವ ದಿನಗಳು ಮುಂದೆ ಬರಲಿವೆ. ಅವೆಂದರೆ ಐಎಂಎಫ್ ಆರ್ಥಿಕತಜ್ಞರು ಸಂಚುಹೂಡಿರುವ ಅಪ್ಪಟ, ಅನಿಯಂತ್ರಿತ ಬಂಡವಾಳಶಾಹಿ ಆರ್ಥಿಕ ಸುಧಾರಣೆಗಳೇ ಆಗಲಿವೆ.

ಇಂಗ್ಲಿಷ್ ಮೂಲ : **ಎನ್. ಸುಂದರಮೂರ್ತಿ**
(ವಿಮಾ ಕಾಮ್‌ಗಾರ್ ಪತ್ರಿಕೆ)
ಕನ್ನಡಕ್ಕೆ : **ಜ್ಯೋತಿ ಎ.**
ನಂ. ೩೭, ೧೬ನೇ ಮುಖ್ಯರಸ್ತೆ
ಎಂ. ಸಿ. ಲೇಔಟ್, ವಿಜಯನಗರ
ಬೆಂಗಳೂರು – ೫೬೦ ೦೪೦



# ಪ್ರಾಯಕ್ಕೆ ಬಂದ ಭಾರತದ ಮಧ್ಯಮ ವರ್ಗ

**ಇಂಗ್ಲಿಷ್ ಮೂಲ : ಡಿ. ಡಿ. ಕೋಸಾಂಬಿ**

**ಕನ್ನಡಕ್ಕೆ : ಟಿ. ವೆಂಕಟೇಶ ಮೂರ್ತಿ**

ಇತಿಹಾಸಕಾರ, ಗಣಿತಶಾಸ್ತ್ರಜ್ಞ ಮತ್ತು ಅಪಾರ ವಿದ್ವತ್ತಿಗೆ ಹೆಸರಾಗಿದ್ದ ಡಿ. ಡಿ. ಕೋಸಾಂಬಿ ಔಪಚಾರಿಕವಾಗಿ ಇತಿಹಾಸವನ್ನು ಅಭ್ಯಾಸ ಮಾಡಿದವರಲ್ಲ. **ದಿ ಡಿಸ್ಕವರಿ ಆಫ್ ಇಂಡಿಯ** ಬರೆದ ನೆಹರು ಸಹ ಅದನ್ನು ಮಾಡಿರಲಿಲ್ಲ. ಆದರೆ ಇಬ್ಬರೂ ಭಾರತದ ಬಗ್ಗೆ ಅಪಾರ ಕಾಳಜಿ ಇದ್ದವರು, ಪ್ರಾಚೀನ ಭಾರತದ ಜೀವನವನ್ನು ಅರ್ಥೈಸಿದವರು ಮತ್ತು ಸಮಕಾಲೀನ ಭಾರತದ ಮುನ್ನಡೆಗೆ ನಿರ್ದಿಷ್ಟ ಮಾರ್ಗಗಳನ್ನು ಗುರುತಿಸಿದ್ದವರು. ಕೋಸಾಂಬಿ ಮಾರ್ಕ್ಸ್‌ವಾದವನ್ನು ಅರಗಿಸಿಕೊಂಡಿದ್ದವರು ಮತ್ತು ನೆಹರು ಅದನ್ನು ಭಾಗಶಃ ಮಾತ್ರ ಪರಿಚಯಿಸಿಕೊಂಡಿದ್ದವರು. ಪ್ರಸ್ತುತ ಲೇಖನವು ನೆಹರು ಕೃತಿಯ ಒಂದು ವಿಮರ್ಶೆ. ಇದರಲ್ಲಿ ಕೋಸಾಂಬಿ "ಅಧಿಕೃತ ಮಾರ್ಕ್ಸ್‌ವಾದಿಗಳು" ಎಂಬುದನ್ನು ಭಾರತ ಕಮ್ಯುನಿಸ್ಟ್ ಪಕ್ಷದ ಅಂದಿನ ನಾಯಕರ ಬಗ್ಗೆ ಮಾಡಿರುವ ಪ್ರಯೋಗ; ವಿಶೇಷತಃ ಎಸ್. ಎ. ಡಾಂಗೆ ಕೋಸಾಂಬಿಯವರ ಮರ್ಮಾಘಾತಕ್ಕೆ ಗುರಿಯಾಗಿದ್ದುದುಂಟು.

ಈ ವಿಮರ್ಶಾ ಲೇಖನವು ನ್ಯೂಯಾರ್ಕ್‌ನಿಂದ ಪ್ರಕಟವಾಗುತ್ತಿದ್ದ "ಸೈನ್ಸ್ ಅಂಡ್ ಸೊಸೈಟಿ" ಎಂಬುದರ 1946ರ ಒಂದು ಸಂಚಿಕೆಯಲ್ಲಿ ಪ್ರಕಟವಾಗಿತ್ತು. (ಪು. 392-398)




**ಭಾ**ರತದ ಭೂತ ಮತ್ತು ವರ್ತಮಾನಗಳನ್ನು ಕುರಿತ ಜವಾಹರಲಾಲ್ ನೆಹರುರವರ ಬಹು ನಿರೀಕ್ಷಿತ ಕೃತಿ ಜವಾಹರಲಾಲ್ ನೆಹರು, ದಿ ಡಿಸ್ಕವರಿ ಆಫ್ ಇಂಡಿಯ, (ಕಲ್ಕತ್ತ ೧೯೪೬) ಹೊರಬಂದಿದ್ದು, ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಲೇಖಕರ ವಿಶೇಷ ಪಾತ್ರ ಹಾಗೂ ಯುದ್ಧ ವಿರೋಧಿ ಹೋರಾಟದಲ್ಲಿ ಅವರ ಸಕ್ರಿಯ ಪಾಲು ಮೂಡಿಸಿದ್ದ ಮಹತ್ತರ ಭರವಸೆಗಳನ್ನು ಅನೇಕ ರೀತಿಯಲ್ಲಿ ಸಮರ್ಥಿಸಿದೆ. ಅವರ ವೃತ್ತಿಜೀವನ ಚೆನ್ನಾಗಿಯೇ ಗೊತ್ತಿರುವುದರಿಂದ ಇಲ್ಲಿ ಅದರ ಬಗ್ಗೆ ಹೇಳುವ ಅಗತ್ಯವಿಲ್ಲ; ಅದನ್ನು ತಿಳಿಯದವರು ಲೇಖಕರ ಆತ್ಮಚರಿತ್ರೆಯನ್ನೂ, ಈ ಕೃತಿಯನ್ನೂ ಓದುವುದು ಒಳ್ಳೆಯದು. ಪಂಡಿತ್ ಜವಾಹರಲಾಲ್‌ರವರಿಗಿಂತ ಚೆನ್ನಾಗಿ ಬೇರಾವ ವ್ಯಕ್ತಿಯೂ ಭಾರತವನ್ನು ಅರಿತಿಲ್ಲ. ತಮ್ಮ ಅಭಿಪ್ರಾಯಗಳನ್ನು ಹಿಂದಿ ಮತ್ತು ಉರ್ದು ಎರಡರಲ್ಲೂ ಪ್ರತಿಭಾಪೂರ್ಣವಾಗಿ ಅವರು ವ್ಯಕ್ತಪಡಿಸಬಲ್ಲರು. ಇದನ್ನು ಅವರ ಹಿಂದೂ ಮತ್ತು ಮುಸಲ್ಮಾನ ಸ್ನೇಹಿತರು ಹಾಗೂ ಅಭಿಮಾನಿಗಳು ಒಪ್ಪುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಇಂಗ್ಲೆಂಡಿನಲ್ಲಿ ಪಡೆದ ಶಿಕ್ಷಣದಿಂದಾಗಿ ಅವರಿಗೆ ಬ್ರಿಟಿಷ್ ಆಡಳಿತ ವರ್ಗದ ನಿಕಟ ಪರಿಚಯವಿದೆ. ಆದ್ದರಿಂದ, ಈ ಕೃತಿ ಭಾರತದಲ್ಲಿನ ಬ್ರಿಟಿಷ್ ಆಳ್ವಿಕೆಯ ಖಂಡನೆಯಾಗಿದೆ. ಆದರೆ, ಅದಕ್ಕಿಂತ ಹೆಚ್ಚಾಗಿ ಭಾರತೀಯ ಇತಿಹಾಸವನ್ನು ಸಾಂಸ್ಕೃತಿಕ ಹಾಗೂ ರಾಜಕೀಯವಾಗಿ ಒಂದೇ ನೋಟದಲ್ಲಿ ಹಿಡಿದಿಡುವ ಹೆಬ್ಬಯಕೆಯಿಂದ ಕೂಡಿದೆ. ನೆಹರುರವರು ಈ ಕೃತಿಯನ್ನು ಅತ್ಯಂತ ಕಷ್ಟದ ಸಂದರ್ಭಗಳಲ್ಲಿ ಜೈಲಿನಲ್ಲಿ ಬರೆದು ಮುಗಿಸಿದ್ದು ಗಣನೀಯ ಸಾಧನೆ. ಅದರಲ್ಲೂ ಲೇಖಕರು ಫ್ಯಾಸಿಸ್ಟ್‌ವಾದ ಮತ್ತು ಅದು ಪ್ರತಿನಿಧಿಸುವ ಎಲ್ಲವನ್ನು ವಿಚಲಿತರಾಗದೆ ವಿರೋಧಿಸುತ್ತಿದ್ದ ರೆನ್ನುವುದು ಮತ್ತು ಅವರ ಸಹಾಯವಿಲ್ಲದೆಯೂ ಹಿಟ್ಲರ್ ವಾದದ ವಿರುದ್ಧ ಹೋರಾಟ ನಡೆಯುತ್ತಿತ್ತು ಎನ್ನುವ ಪೂರ್ಣ ಪ್ರಜ್ಞೆ ಅವರಲ್ಲಿತ್ತು ಎನ್ನುವುದು ಎರಡೂ ಗಣನೀಯ. ಸಾಕಷ್ಟು ಸಂಖ್ಯೆಯಲ್ಲಿ ದೇಶದೊಳಗೆ ನುಸುಳಿದ್ದ ಬ್ರಿಟಿಷರ ದಳ್ಳಾಳಿಗಳು ಕ್ಷೇಮವಾಗಿ ಕಛೇರಿಯಲ್ಲಿ ಆಸೀನರಾಗಿಯೇ ಯುದ್ಧ ನಡೆಸುತ್ತಿದ್ದಾಗ ನೆಹರುರಂತಹ ದಕ್ಷ ವ್ಯಕ್ತಿ ವಿಚಾರಣೆಯಿಲ್ಲದೆ ಜೈಲಿನಲ್ಲಿರಬೇಕಾಗಿದ್ದು ಭಾರತೀಯ ಜನತೆಯ ಮಟ್ಟಿಗೆ ದೌರ್ಭಾಗ್ಯದ ಸಂಗತಿ; ಏಕೆಂದರೆ, ಬ್ರಿಟಿಷ್ ಅಧಿಕಾರಿಗಳು ಹಾಗೂ ಭಾರತೀಯ ವ್ಯಾಪಾರಿಗಳು ತಮ್ಮ ಜೇಬುಗಳನ್ನು ಕಾಗದದ ಹಣದಿಂದ ತುಂಬಿಸಿಕೊಳ್ಳುತ್ತಿದ್ದರೆ ಜನತೆಗೆ ಸಿಕ್ಕ ಲಾಭ ಹಣದುಬ್ಬರ, ಕ್ಷಾಮ, ಸಾಂಕ್ರಾಮಿಕ ರೋಗಗಳು ಹಾಗೂ ಕೊರತೆಗಳು ಮಾತ್ರ. ಅಮೆರಿಕದವರಿಗೆ ಅರ್ಥವಾಗುವಂತಹ ಮಾತಿನಲ್ಲಿ ಇದನ್ನು ವಿವರಿಸಿ ಹೇಳುವುದು ಯುದ್ಧ ಕಾಲದಲ್ಲಿ ಭಾರತದಲ್ಲಿ ಸಂಭವಿಸಿದ ಘಟನೆಗಳಿಗೆ ಪ್ರತ್ಯಕ್ಷ ಸಾಕ್ಷಿದಾರನಾಗಿದ್ದ ಯಾವುದೇ ಸೂಕ್ಷ್ಮ ವ್ಯಕ್ತಿಗೆ ನಿಲುಕುವಂಥದ್ದಲ್ಲ.

ಸಾಮಾನ್ಯ ಓದುಗನಿಗೆ ಈ ಕೃತಿಯನ್ನು ಬಲವಾಗಿ ಶಿಫಾರಸ್ಸು ಮಾಡಲಾಗುವುದಿಲ್ಲ. ಈ

ಬರಹಗಾರ ಸ್ವತಃ ಲೇಖಕರ ನಮ್ರ ಅಭಿಮಾನಿಯೆಂದು ಸ್ಪಷ್ಟನೆ ನೀಡ ಬಯಸುತ್ತಾನೆ. ಈ ಬರಹದ ಬಹು ಭಾಗ ಕೃತಿಯಲ್ಲಿನ ಅನೇಕ ದೋಷಗಳೆಡೆಗೆ ಬೊಟ್ಟು ಮಾಡಿ ತೋರಿಸುವುದನ್ನು ತಪ್ಪಾಗಿ ಅರ್ಥೈಸಬಾರದೆಂದು ಈ ಸ್ಪಷ್ಟನೆ. ಭಾರತದ ಪ್ರಾಚೀನ ಇತಿಹಾಸದ ಬಗ್ಗೆ ಹೆಚ್ಚೇನೂ ಹೇಳಲಾಗುವುದಿಲ್ಲ, ಏಕೆಂದರೆ ನಮಗೆ ಲಭ್ಯವಿರುವ ಮೂಲಗಳು ತೀರ ಅಲ್ಪ ಮತ್ತು ಅವುಗಳ ವ್ಯಾಖ್ಯಾನ ಅವುಗಳನ್ನು ಅಭ್ಯಸಿಸಲು ಇಡೀ ಜೀವಮಾನವನ್ನೇ ಮುಡುಪಾಗಿಟ್ಟ ವರನ್ನೂ ಕಕ್ಕಾಬಿಕ್ಕಿ ಮಾಡುತ್ತದೆ. ಈ ವಿಷಯವಾಗಿ ನಾವು ಲೇಖಕರನ್ನು ಜವಾಬ್ದಾರರನ್ನಾಗಿಸಬೇಕಿಲ್ಲ. ಅವರು ಭಾರತೀಯ ಮೂಲಗಳನ್ನು ಮತ್ತಷ್ಟು ವಿಮರ್ಶಾತ್ಮಕವಾಗಿ ಅಭ್ಯಸಿಸಲು ಬಿಡುವು ಮಾಡಿಕೊಳ್ಳಲಾಗದಿರುವುದು ಹಾಗೂ ಬ್ರಿಟಿಷ್ ಬರಹಗಾರರ ಜನಪ್ರಿಯ ಕಥನಗಳನ್ನು ಹೆಚ್ಚಾಗಿ ಅವಲಂಬಿಸಿರುವುದು ಅನೇಕ ರೀತಿಯಲ್ಲಿ ದುರದೃಷ್ಟಕರ. ಹೇಗಾದರೂ, ಭಾರತದ ರಾಜಕೀಯ ಖೈದಿಗಳಿಗೆ ಹೇಳಿಕೊಳ್ಳುವಂತಹ ಪರಾಮರ್ಶ ಗ್ರಂಥಾಲಯದ ಸೌಲಭ್ಯಗಳು ಇಲ್ಲದಿರುವುದರಿಂದ ಇದಕ್ಕೆ ರಿಯಾಯಿತಿ ನೀಡಬಹುದು.

ಓದುಗನನ್ನು ಆಶ್ಚರ್ಯಗೊಳಿಸಬಹುದಾದ ಒಂದು ವೈಶಿಷ್ಟ್ಯವೆಂದರೆ ಸಾಕಷ್ಟು ದುರುಪಯೋಗಗೊಳ್ಳುವ 'ಜನಾಂಗ' ಪದದ ಬಗೆಗಿನ ವಿಚಿತ್ರ ಮನೋಭಾವ; ಜನಾಂಗೀಯವಾದ ಮತ್ತು ಸಾಮ್ರಾಜ್ಯವಾದದ ದೂಷಣೆ ಪು. ೩೮೬ರಲ್ಲಿ ಕಂಡುಬರುತ್ತದೆ. ಆದರೆ, "ಮನಶ್ಶಾಸ್ತ್ರ ಗಣನೀಯವಾದದ್ದು ಮತ್ತು ಜನಾಂಗೀಯ ನೆನಪುಗಳು ಬಹುಕಾಲ ಮರೆಯಲಾಗದ್ದು" ಎಂದು ಪುಟ ೩೮೭ರಲ್ಲಿ ಓದುತ್ತೇವೆ. ಜನಾಂಗೀಯ ನೆನಪು ಎನ್ನುವುದರ ಅರ್ಥ ಮಾತ್ರ ಸ್ಪಷ್ಟವಾಗಿಲ್ಲ. ಅದರಲ್ಲೂ ಮೌರ್ಯ ಮತ್ತು ಗುಪ್ತರ ಕಾಲದ ವೈಭವ, ಹಸ್ತಪ್ರತಿಗಳನ್ನು ಮರೆತ ದೇಶವನ್ನು ಕುರಿತಾಗಲಿ, ಯಾವುದೇ ಕಾಲದ ಗುಹೆಯನ್ನಾದರೂ ಪುರಾಣಕಾಲದ (ಕಾಲ್ಪನಿಕ) ಪಾಂಡವರದ್ದೆಂದು ಆರೋಪಿಸುವ ದೇಶದ ಕುರಿತಾಗಲಿ ಸ್ಪಷ್ಟನೆಯಿಲ್ಲ. ಕಲ್ಕತ್ತಾದ ಎಸ್‌ಪ್ಲನೇಡ್‌ನಲ್ಲಿರುವ ಔತ್ರಾಂ (೧೮೫೭ರ ದಂಗೆಯ ಕೊಲೆಗಡುಕ)ನ ಪ್ರತಿಮೆಯನ್ನು ರಾಜಕುಮಾರ ಪ್ರತಾಪ ಸಿಂಹನದ್ದೆಂದು ಹೇಳಬಲ್ಲ ದೇಶವನ್ನು ಕುರಿತಂತೆಯೂ ಸ್ಪಷ್ಟನೆಯಿಲ್ಲ. ಅದಕ್ಕೆ ತದ್ವಿರುದ್ಧವಾಗಿ ವರ್ಗೀಯ ನೆನಪುಗಳು ಅಲ್ಪಕಾಲ ಉಳಿಯುವಂತಹವು; ಏನೇ ಆದರೂ ನೆಹರೂರವರ ಕಲ್ಪನೆಯ ಜನಾಂಗೀಯ ನೆನಪುಗಳಿಗಿಂತ ತೀರ ವಿಭಿನ್ನವಾದಂಥವು. ಉದಾಹರಣೆಗೆ, ಬೊಂಬಾಯಿಯ ಪೊಲೀಸ್ ಕಮಿಷನರ್ ವಿಷಯವನ್ನು ತೆಗೆದುಕೊಳ್ಳ ಬಹುದು. ಜನವರಿ ಮತ್ತು ಫೆಬ್ರವರಿ ೧೯೪೬ರ ಕಡೆಯಲ್ಲಿ ಜನತೆಯ ಅತೃಪ್ತಿಯನ್ನು ಅಸಮರ್ಥವಾಗಿ ನಿಭಾಯಿಸಿದ ಅಥವಾ ಬೇಕಾಗಿಯೇ ಪ್ರಚೋದಿಸಿದ ರೀತಿ (ಬೊಂಬಾಯಿಯ ಕಾರ್ಮಿಕ ವರ್ಗ ವಾಸಿಸುತ್ತಿದ್ದ ಸ್ಥಳಗಳಲ್ಲಿ ನಿಜವಾಗಿಯೂ ರಕ್ತದೋಕುಳಿಯಾಗಿತ್ತು) ಅಸಹ್ಯ ಹುಟ್ಟಿಸುತ್ತಿತ್ತು. ಆದರೇನಂತೆ, ಮೇ ತಿಂಗಳಿನಲ್ಲಿ ಅದೇ ಪೊಲೀಸ್ ಕಮಿಷನರ್, ಕಾಂಗ್ರೆಸ್ ಮಂತ್ರಿವರ್ಯರೊಂದಿಗೆ, ಬೊಂಬಾಯಿಯ ಆ ವರ್ಷದ ಶ್ರೀಮಂತ ಭಾರತೀಯ ವಿವಾಹಗಳಲ್ಲಿ ಗಣ್ಯ ಅತಿಥಿಯಾಗಿದ್ದ. "ಹಳೆಯ ಜನಾಂಗಗಳು ಜೀವನದಲ್ಲಿ ಆ ಮನೋಭಾವನೆ (ಯಾವುದನ್ನೂ ಪ್ರತಿಭಟಿಸದಿರುವ ತತ್ವ)ಯನ್ನು ಬೆಳೆಸಿ ಕೊಳ್ಳುತ್ತಾರೆ" ಎಂದು ಪು. ೪೩೧ರಲ್ಲಿ ಹೇಳಲಾಗಿದೆ. ಇದರರ್ಥವೂ ಏನೆಂದು ಸ್ಪಷ್ಟವಾಗಿಲ್ಲ, ಏಕೆಂದರೆ, ಜನಾಂಗೀಯವಾಗಿ ನೋಡಿದಾಗ ಯಾವುದೇ ಜನಾಂಗ ಮತ್ತೊಂದಕ್ಕಿಂತ ಹಳೆಯದೆನ್ನಲು ಯಾವ ಕುರುಹೂ ಇಲ್ಲ. ವಾಸ್ತವವಾಗಿ ಈ ವಾಕ್ಯವನ್ನು ಭಾರತೀಯ ಜನಾಂಗಗಳಿಗೆ ಅನ್ವಯಿಸುವಂಥದ್ದು ಎಂದುಕೊಳ್ಳುವುದಾದರೆ ೧೯೪೦ರಿಂದೀಚೆಗೆ ಈ ಅಪ್ರತಿರೋಧ ತತ್ವ ಕಡಿಮೆಯಾಗಿ ದೇಶದಲ್ಲಿ ಉದ್ರಿಕ್ತ ರಾಜಕೀಯ ಚಟುವಟಿಕೆಗಳಿಗೆ ಎಡೆ ಮಾಡಿಕೊಡುತ್ತಿದೆ ಎನ್ನುವುದನ್ನು ವಿವರಿಸುವುದು ಬಹಳ ಕಷ್ಟ.

ಪ್ರಸ್ತುತ ವಿಮರ್ಶಕನಿಗೆ ಇನ್ನೂ ಗಂಭೀರ ವಿಷಯವೆಂದರೆ ಕೃತಿಯಲ್ಲಿನ "ಏಕೆ" ಎನ್ನುವ ಪ್ರಶ್ನೆಯ ಅಭಾವ. ಒಬ್ಬ ಲೇಖಕ ಅವನ ತಾತ್ವಿಕ ಚೌಕಟ್ಟಿನಲ್ಲಿ ಸ್ವಲ್ಪವಾದರೂ ವಿಶ್ಲೇಷಣೆಗೆ ಪ್ರಯತ್ನಿಸದಿದ್ದಲ್ಲಿ ಇತಿಹಾಸವನ್ನು ಬರೆಯುವ ಯಾವುದೇ ಪ್ರಯತ್ನವನ್ನು ಪಕ್ವವೆಂದು ಪರಿಗಣಿಸಲು ಸಾಧ್ಯವಿಲ್ಲ. ಪ್ರಾಚೀನ

ಕಾಲದ ವಾಸ್ತವಾಂಶಗಳನ್ನು ವಿವರಿಸುವಲ್ಲಿ ಗಣನೀಯ ಕಷ್ಟಗಳು ಎದುರಾಗುತ್ತವೆ. ವಾಸ್ತವಾಂಶಗಳು ಯಾವಾಗಲೂ ಸ್ಪಷ್ಟವಾಗಿಲ್ಲದಿರುವುದೇ ಇದಕ್ಕೆ ಕಾರಣ. ಆದರೆ ಆಧುನಿಕ ಕಾಲಕ್ಕೆ ಸಂಬಂಧಿಸಿದಂತೆ ಲೇಖಕರು ಈಗ ಅನುಸರಿಸಿರುವ ಮಾರ್ಗವನ್ನು ಪ್ರಶ್ನಿಸಲಾಗದಿರದೆಂದು ನನಗನ್ನಿಸುತ್ತದೆ. ಮತ್ತಷ್ಟು ಮುಂದುವರೆದು "ಜನಾಂಗ" ಪದದ ಅಸ್ಪಷ್ಟ ಬಳಕೆಗೂ, ನಿಶ್ಚಿತ ಬದಲಾವಣೆಗಳು ಏಕೆ ನಿಶ್ಚಿತ ಕಾಲಗಳಲ್ಲಾಗುತ್ತವೆ ಎನ್ನುವುದನ್ನು ಪ್ರಶ್ನಿಸದಿರುವುದಕ್ಕೂ, ಕೃತಿಯಲ್ಲಿ ಗಮನಾರ್ಹವಾಗಿ ಕಂಡುಬರದ ವರ್ಗ ವಿಶ್ಲೇಷಣೆಗೂ ನಿಕಟ ಸಂಬಂಧವಿದೆಯೆಂದು ಧೈರ್ಯವಾಗಿ ಹೇಳಬಹುದು. "ಯಾರ ಪ್ರಯೋಜನಕ್ಕಾಗಿ ?" ಎನ್ನುವ ಪ್ರಶ್ನೆಯನ್ನು ಲೇಖಕರು ತಮಗೆ ತಾವೇ ಹಾಕಿಕೊಂಡಿದ್ದಲ್ಲಿ ಬಹಳಷ್ಟು ಪ್ರಯೋಜನವಾಗುತ್ತಿತ್ತು; ಇತಿಹಾಸದ ನಿರ್ದಿಷ್ಟ ಕಾಲದಲ್ಲಿ ನಿರ್ದಿಷ್ಟ ಬದಲಾವಣೆಯನ್ನು ಬಯಸಿದ್ದು ಅಥವಾ ಪ್ರಯೋಜನ ಪಡೆದದ್ದು ಯಾವ ವರ್ಗ ? ಲೇಖಕರು ಗಮನಿಸಿರುವ ಈ ಒಂದು ವಿಷಯವನ್ನು ಸ್ಪಷ್ಟಗೊಳಿಸಬಹುದಿತ್ತು. ಬ್ರಿಟಿಷರು ಇಂಗ್ಲೆಂಡಿನಲ್ಲಿ ತಮಗಿರುವ ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳ ಬಗ್ಗೆ ಹೆಮ್ಮೆ ಪಡುತ್ತಾರಾದರೂ ಭಾರತಕ್ಕೆ ಅವುಗಳನ್ನು ನೀಡುವುದರ ವಿರುದ್ಧ ಅವರಲ್ಲಿ ಕೆಲವರಾದರೂ ನಿರಾಶೆಯಿಂದ ಇಲ್ಲಿಯವರೆಗೂ ಪರಿಣಾಮಕಾರಿಯಾಗಿ ಹೋರಾಡಿದ್ದಾರೆ. ಸ್ಪಷ್ಟವಾಗಿಯೇ ಭಾರತದ ಸ್ಥಳೀಯ ಸರ್ಕಾರಗಳು ಮತ್ತು ನಾಗರಿಕ ಹಕ್ಕುಗಳನ್ನು ಹತ್ತಿಕ್ಕಲು ಹೋರಾಡಿದ ಇಂಗ್ಲಿಷ್ ವರ್ಗವೇ ಇಂಗ್ಲೆಂಡಿನಲ್ಲಿ ಕೆಳ ವರ್ಗಗಳ ವಿರುದ್ಧ ನಿರಾಶೆಯಿಂದ ಹೋರಾಡಿದೆ. ಆದರೆ ಇಂಗ್ಲೆಂಡಿನ ಕಾರ್ಮಿಕ ವರ್ಗದ ಒತ್ತಡ ಅತಿಯಾದಾಗ ಬಂಡವಳಿಗ ಮಧ್ಯಮ ವರ್ಗದ ಮುಂಚೂಣಿಯಲ್ಲೇಲ್ಲೋ ಕಾಣಿಸಿಕೊಂಡ ಒಡಕು ಸ್ಥಳೀಯವಾಗಿ ಒಳಿತನ್ನು ಸಾಧಿಸಿತು. ನಂತರ ಸೋತ ಬಂಡವಳಿಗ ಮಧ್ಯಮ ವರ್ಗ ಅದೇ ಕಡಿವಾಣವನ್ನು ಉತ್ಪಾದನಾ ಮೂಲಗಳ ಇತರ ಒಡೆಯರ ಮೇಲೂ ಹಾಕಬೇಕೆಂದು ಹೋರಾಡಿ ಅಂತಿಮವಾಗಿ ಇಡೀ ವಿಷಯದ ಬಗ್ಗೆ ತೃಪ್ತಿಪಟ್ಟಿತು. ಆಡಳಿತಗಾರರು ಸ್ವಸಂತೋಷದಿಂದ ಮನಃಪೂರ್ವಕವಾಗಿ ಕೆಲವು ಸುಧಾರಣೆಗಳನ್ನು ದಯಪಾಲಿಸಿದ್ದಾಗಿ ಘೋಷಿಸಿದರು. ಇದಕ್ಕೆ ಹೋಲಿಸಿ ನೋಡಿದರೆ ಭಾರತದಿಂದ ಬಂದ ವರ್ಗ ವಿರೋಧ ಅಷ್ಟಕ್ಕಷ್ಟೆ. ಬ್ರಿಟಿಷರು ಊಳಿಗಮಾನ್ಯ ಪದ್ಧತಿಯ ಹಾಗೂ ಧಾರ್ಮಿಕ ಹಕ್ಕುಗಳನ್ನು ಆದಷ್ಟೂ ಮಟ್ಟಿಗೆ ಕಾಪಾಡಿಕೊಂಡು ಬರಲು ಎಲ್ಲ ಎಚ್ಚರಿಕೆಯನ್ನೂ ವಹಿಸಿದ್ದರು.

ಇಷ್ಟೇ ಅಲ್ಲದೆ, ಮುಸ್ಲಿಂ ಕೋಮಿನಲ್ಲಿನ ವಿಕಸಿತ ಆಧುನಿಕ ಬಂಡವಾಳದ ಅಭಾವ ಹಾಗೂ ಭಾರತದ ಮುಸ್ಲಿಮರ ಮಹತ್ವದ ಸಾಪೇಕ್ಷ ಬಡತನಗಳು ಮುಸ್ಲಿಂ ಲೀಗ್ (ಪು. ೪೬೬) ಮತ್ತು ಮುಸ್ಲಿಮರ ಹಿಂದುಳಿಕೆ (ಪು. ೪೬೮)ಗಳನ್ನು ವಿವರಿಸಬಹುದೆಂದು ಸೂಚಿಸಬಹುದು (ನೆಹರು ಇದನ್ನು ಮಾಡುವುದಿಲ್ಲ). ಭಾರತದ ಮುಸ್ಲಿಂ ಮೇಲು ವರ್ಗಗಳ ಪ್ರಗತಿ ವಿರೋಧಿ ಮನೋಭಾವವನ್ನೂ ಹೀಗೆಯೇ ವಿವರಿಸಬಹುದು. ನೆಹರೂರವರೆ ಪು. ೪೩೭ರಲ್ಲಿ ಸೂಚಿಸಿರುವಂತೆ ಬ್ರಿಟಿಷ್ ವ್ಯಾಪಾರಿಗಳು ಅನುಭವಿಸುವ ಹಿತರಕ್ಷಣೆಯನ್ನು ಭಾರತೀಯ ವ್ಯಾಪಾರಿಗಳು ವಿರೋಧಿಸುವ ನಿಲುವು ಸರಿಯಾಗೇ ಇದ್ದರೂ ಅದೇ ಹಿತರಕ್ಷಣೆ ಸಿಲೋನಿನಲ್ಲಿ ತಮಗೆ ಸಿಗಬೇಕೆಂದು ಭಾರತೀಯ ವ್ಯಾಪಾರಿಗಳು ಹಕ್ಕೊತ್ತಾಯ ಮಾಡುತ್ತಾರೆ. ದಕ್ಷಿಣ ಆಫ್ರಿಕದ ಭಾರತೀಯರು ಅಲ್ಲಿನ ಭಾರತೀಯ ವಾಣಿಜ್ಯ ಸಮುದಾಯದ ಸಂಪೂರ್ಣ ಬೆಂಬಲದೊಂದಿಗೆ ಸಮಾನತೆಗಾಗಿ ಹೋರಾಡುತ್ತಿದ್ದಾರೆ. ಆದರೆ ಅವರಿಗೆ ಬೇಕಾಗಿರುವ ಸಮಾನತೆ ಬಿಳಿಯರೊಂದಿಗೇ ಹೊರತು ಸ್ಥಳೀಯ ಕರಿಯರೊಂದಿಗಲ್ಲ. ಈ ಸಂಗತಿಯ ಬಗ್ಗೆ ಲೇಖಕರಿಗೆ ನಿಸ್ಸಂದೇಹವಾದ ಅರಿವಿದೆ. ಪ್ರಾಂತೀಯ ವ್ಯತ್ಯಾಸಗಳು ಮತ್ತು ಕೈಗಾರಿಕಾ ಬೆಳವಣಿಗೆ (ಪು. ೩೭–೩೮)ಯ ವಿಚಿತ್ರ ಪ್ರತಿಪಾದನೆ ವರ್ಗ ವಿಶ್ಲೇಷಣೆಯ ಅಭಾವದಿಂದಾಗಿ ಕಲುಷಿತಗೊಂಡಿದೆ. ಪ್ರಾಚೀನ ಕಾಲದಿಂದಲೂ ಗುಜರಾತ್, ಖಾತಿಯವಾಡ ಮತ್ತು ಕಚ್ ಪ್ರಾಂತೀಯರು ವಾಣಿಜ್ಯೋದ್ಯಮಿಗಳು, ಉತ್ಪಾದಕರು, ವ್ಯಾಪಾರಿಗಳು ಮತ್ತು ನಾವಿಕರೆಂದು ಓದುತ್ತೇವೆ. ಮೇಲೆ ಹೇಳಿರುವ ಪ್ರಾಂತಗಳ ಜನರು ಇಂದಿನ ಭಾರತದ ಬಂಡವಾಳಗಾರರಲ್ಲಿ ಪ್ರಮುಖ ಸ್ಥಾನ ಪಡೆದಿದ್ದರೂ, ಆ ಪ್ರಾಂತಗಳವರೇ ಆದ ಬಹುತೇಕ ಜನರು ವಾಣಿಜ್ಯೋದ್ಯಮಿಗಳಲ್ಲ ಎನ್ನುವುದನ್ನು ನಿರಾಕರಿಸಲಾಗುವುದಿಲ್ಲ. ಮೊಹಮ್ಮದೀಯ ವ್ಯಾಪಾರಿಗಳ ಸಂಪರ್ಕಕ್ಕೆ ಬೇಗನೆ ಬಂದದ್ದರಿಂದ ಈ ಸಣ್ಣ ಸಮುದಾಯ ಬ್ರಿಟಿಷರ ಜತೆ ಸಂಪರ್ಕ ಬೆಳೆಸಿಕೊಳ್ಳಲು ಸಹಾಯಕವಾಯಿತು. ಹಾಗೆಯೇ ಅವರನ್ನು ಹೊಸ ಉತ್ಪಾದನಾ ವ್ಯವಸ್ಥೆಗೆ ಪರಿಚಯ ಮಾಡಿಸಿತು, ಅರ್ಥಾತ್, ಯಂತ್ರಗಳು ಮತ್ತು ಆಧುನಿಕ ಬಂಡವಾಳಾಧಾರಿತ ಉತ್ಪಾದನೆ. ಬಹುಶಃ ಇದಕ್ಕೆ ಉತ್ತಮ ಉದಾಹರಣೆಯೆಂದರೆ ಪಾರ್ಸಿ ಸಮುದಾಯ. ಗುಜರಾತಿ ಮೂಲದ ಈ ಸಮುದಾಯ ಅತ್ಯಂತ ನಾಚಿಕೆಗೇಡಿನ ತುಳಿತಕ್ಕೊಳಗಾಗಿದ್ದ ನಿರಾಶ್ರಿತ ಅಲ್ಪಸಂಖ್ಯಾತರು. ಈಗ ಸಾಂಸ್ಕೃತಿಕವಾಗಿ ಅತ್ಯಂತ ಮುಂದುವರಿದ ಹಾಗೂ ಭಾರತದ ಪ್ರಬಲ ಸಮುದಾಯಗಳಲ್ಲೊಂದಾಗಿರುವುದಕ್ಕೆ ಅವರು ಅನುಸರಿಸಿದ ಆಧುನಿಕ ಕೈಗಾರಿಕಾ ಮತ್ತು ಆರ್ಥಿಕ ಬಂಡವಾಳ ವಿಧಾನವೇ ಕಾರಣ. ಇದಕ್ಕೆ ತೀರ ಭಿನ್ನವಾಗಿದ್ದು ರಜಪುಟಾಣದ ಮಾರ್ವಾಡಿ (ಪು. ೩೪–೯೬) ಸಮುದಾಯದ ಉದಾಹರಣೆ. ಈ ಸಮುದಾಯಕ್ಕೆ ಹಿಂದಿನ ಕಾಲದಲ್ಲಿ ಹಣ ಹಾಗೂ ಬಡ್ಡಿ ಸಾಲದ ಮೇಲೆ ಹಿಡಿತವಿದ್ದಿತಾದರೂ ಯಾವುದೇ ರಾಜಕೀಯ ಹಕ್ಕುಗಳಿರಲಿಲ್ಲ. ನೆಹರುರವರು ದಾಖಲೆಗಳನ್ನು ಪರಿಶೀಲಿಸುವ ಗೋಜಿಗೆ ಹೋದಲ್ಲಿ ಭಾರತದಲ್ಲಿ ಬ್ರಿಟಿಷರ ವಿಸ್ತರಣೆಗೆ ಈ ಬಡ್ಡಿಗೆ ಸಾಲ ನೀಡುವವರು ಎಷ್ಟು ಬಾರಿ ಅವರನ್ನು ಬೆಂಬಲಿಸಿದ್ದರೆಂದು ತಿಳಿಯುತ್ತದೆ. ಇದು ಅವರಲ್ಲಿ ಮೂಲ ಸಮಕಾಲೀನ ಸಂಗತಿಯೊಂದರ – ಹೀಗೆ ಸಂಗ್ರಹವಾದ ಹುಸಿ ಬಂಡವಾಳ ಆಧುನಿಕ ಉತ್ಪಾದನಾ ಹಣವಾಗಿ ಪರಿವರ್ತಿತವಾಗುತ್ತದೆಂಬ – ಅರಿವನ್ನು ಮೂಡಿಸದಿರಬಹುದು. ಈ ಬದಲಾವಣೆಯ ಗತಿ ನಿಜವಾಗಿಯೂ ಎಷ್ಟು ತೀವ್ರವಾಗಿದೆಯೆಂದರೆ ಅತ್ಯಂತ ಹಿಂದುಳಿದ ಮತ್ತು ಅವನತಿ ಹೊಂದಿದ ಭಾರತೀಯರು, ಸಾಮಂತ ರಾಜರುಗಳು, ದೊಡ್ಡ ಸಂಖ್ಯೆಯಲ್ಲಿ ಷೇರುದಾರರಾಗುತ್ತಿದ್ದಾರೆ. ೩೦ ರೂಪಾಯಿ ಮುಖಬೆಲೆಗೆ ನೀಡಿದ್ದ ಷೇರು ಬಂಡವಾಳವನ್ನು ಇಂದು (೧೯೪೬) ೩೦೦೦ ರೂಪಾಯಿಗೂ ಹೆಚ್ಚಾಗಿ ನಮೂದಿಸುವ ಕಾಲ ಹೋಯಿತು. ಅಥವಾ ೧೦೦ ರೂಪಾಯಿಗೆ ಪಡೆದಿದ್ದ ಷೇರೊಂದಕ್ಕೆ ೯ ರೂಪಾಯಿಗಳನ್ನು ಬಂಡವಾಳ ಮರುಪಾವತಿಯ ರೂಪದಲ್ಲಿ ಹಿಂಪಡೆದ ನಂತರ ೧೫೦ ರೂಪಾಯಿಗಳ ಲಾಭಾಂಶವನ್ನು ಗಳಿಸಿ ೨೩೦೦ ರೂಪಾಯಿ ಎಂದು ನಮೂದಿಸುವ ಪರಿಸ್ಥಿತಿ ಈಗಿಲ್ಲ. ಕೈಗಾರಿಕೆಯ ಆಧುನೀಕರಣದ ರೇಸಿನಲ್ಲಿ ಅಂಥ ಷೇರುಗಳಿಗೆ (ದಾಸ್ತಾನುಗಳಿಗೆ) ಪ್ರಾರಂಭಾನುಕೂಲವಿತ್ತು. ಆದರೆ ಇಂಥ ಬಂಡವಾಳದ ಒಟ್ಟು ಮೊತ್ತ ನಿರ್ಲಕ್ಷಿಸುವಂತಿತ್ತು. ಈಗ ಇದು ಮೂಲ ಸಂಗ್ರಹಣೆಯ ಮಾರ್ಪಾಟಿನಿಂದಾಗಿ ಮತ್ತು ಹಿಡಿತವಿಲ್ಲದ ಹಣದುಬ್ಬರ ಹಾಗೂ ಯುದ್ಧ ಕಾಲದ ಲಾಭಗಳಿಂದಾಗಿ ಮಹತ್ತರವಾಗಿ ಹೆಚ್ಚಾಗಿದೆ.

## ಮಾಧ್ಯಮ



ಖಾಸಗಿ ಕೋಣೆಗೆ
ಕ್ಯಾಮೆರಾ ಹಿಡಿಯಲು
ಹೊರಟಿದೆ
ದೃಶ್ಯ ಮಾಧ್ಯಮ.
ಸುದ್ದಿ ಕೂಡ
ಮಾರಲ್ಪಡುವ ಹೊತ್ತಲ್ಲಿ
ಪತ್ರಿಕೋದ್ಯಮ
ಅಸಲಿಗೂ ಆಗಿದೆ
ಉದ್ಯಮ.
ಮುದ್ರಣ ಮಾಧ್ಯಮ
ಇರುವುದರಲ್ಲಿ ಉತ್ತಮ.

**ಎಚ್. ಕೆ. ಶರತ್**
ವಿದ್ಯಾನಗರ, ಹಾಸನ – ೫೭೩೨೦೧

ನೆಹರು ಈ ಬಂಡವಾಳ ಶೇಖರಣೆಯನ್ನು ನಿರ್ಲಕ್ಷಿಸಿರುವುದಷ್ಟೇ ಅಲ್ಲದೆ ಅವರು ಮನವರಿಕೆ ಮಾಡಿಕೊಳ್ಳದಿರುವ ಮತ್ತೊಂದು ಅಂಶವಿದೆ. ತನ್ನ ಸ್ಥಾನವನ್ನು ಸುಭದ್ರವಾಗಿರಿಸಿಕೊಂಡಿರುವ ಭಾರತದ ಮಧ್ಯಮ ವರ್ಗದ ಮೇಲೆ ಬಂಡವಾಳ ಶೇಖರಣೆಯ ಪರಿಮಾಣಾತ್ಮಕ ಮಾರ್ಪಾಡು ಗುಣಾತ್ಮಕವಾಗಿಯೂ ಎಂತಹ ಪರಿಣಾಮ ಬೀರಿದೆ ಎನ್ನುವುದೇ ಆ ಅಂಶ. ಭೋಜನಕೂಟದ ಕೆಲವು ತುಣುಕುಗಳನ್ನು (ಸಾಮಾನ್ಯವಾಗಿ ಅಧಿಕ ಲಾಭಗಳಿಕೆಯಿಂದ) ಶಿಕ್ಷಣ, ವೈಜ್ಞಾನಿಕ ಸಂಶೋಧನೆ ಮತ್ತು ದಾನಗಳತ್ತ ಚುಮುಕಿಸಲಾಗಿದೆ. ಪ್ರಾಚೀನ ವರ್ತನೆಗಳು ಮತ್ತು ನೈತಿಕತೆಗಳು ದುರದೃಷ್ಟವಶಾತ್ ಸಾಕಷ್ಟು ಸಡಿಲವಾಗಿರುವುದನ್ನು ಗಮನಿಸಬಹುದಾಗಿದೆ. ಆದರೂ ಈ ವರ್ಗದ ಮುಖ್ಯ ಲಕ್ಷಣಕ್ಕೆ ಹೋಲಿಸಿದರೆ ಇದೇನೇನೂ ಅಲ್ಲವೆನ್ನುವುದು ಈಗ ಸ್ಪಷ್ಟವಾಗಿ ಕಾಣಬರುತ್ತಿರುವ ಕಾಳಸಂತೆಯಲ್ಲಿನ ಅತ್ಯಾಶೆ, ವಿಪರೀತ ಲಾಭಕ್ಕಾಗಿ ಖರ್ಚಾಗುವ ಲಂಚದ ವೈಪರೀತ್ಯ, ಷೇರುಗಳ ಕುರಿತ ಊಹಾಪೋಹ ಮತ್ತು ಸಹ – ಭಾರತೀಯರ ದಾರಿದ್ರ್ಯ ಹಾಗೂ ಜೀವಗಳ ಬಗ್ಗೆ ಹೆಚ್ಚುತ್ತಿರುವ ನಿರ್ದಯ ಅನಾದರಗಳಿಂದ ಗೊತ್ತಾಗುತ್ತದೆ. ಎಡೆಬಿಡದೆ ಕ್ಷಯಿಸುತ್ತಿರುವ ನಮ್ಮ ರೈತ ಕಾರ್ಮಿಕರ (ಶೇಕಡ ೫೦ಕ್ಕೂ ಹೆಚ್ಚಿನ ಜನಸಂಖ್ಯೆಯ) ಜೀವನ ಸ್ಥಿತಿ, ನಮ್ಮ ಕಾರ್ಮಿಕರು ಕಛೇರಿಗಳಲ್ಲಿ ಕಡಿಮೆ ವರಮಾನಕ್ಕಾಗಿ ದುಡಿಯುವವರು ಹಾಗೂ ಪ್ರಜ್ಞಾವಂತರ ವರಮಾನವನ್ನು ಮೇಲು ಮಧ್ಯಮ ವರ್ಗದವರ ಕಿಸೆಗಳನ್ನು ತುಂಬುತ್ತಿರುವ ಸಂಪತ್ತಿಗೆ ಹೋಲಿಸಿದರೆ ವ್ಯತ್ಯಾಸ ಕಣ್ಣಿಗೆ ರಾಚುವಂತಹದ್ದು. ಇಂಥ ಶ್ರೀಮಂತಿಕೆಯನ್ನು (ಮನೆಯಲ್ಲ ನೂತ) ಬಿಳಿ ಖದ್ದರ್ ಮತ್ತು ಶಾಶ್ವತ ಗಾಂಧಿ ಟೋಪಿಯ ಸರಳತೆಗಳು ಕೇವಲ ಮರೆಮಾಚಬಹುದು ಅಷ್ಟೆ. ನೆಹರು ಮತ್ತು ಅವರ ಗೆಳೆಯರು ತಮ್ಮ ಜೀವಿತದ ಸೊಗಸಾದ ಅನೇಕ ವರ್ಷಗಳನ್ನು ಭಾರತಕ್ಕೊಂದು ಹೊಸ ಸಂವಿಧಾನವನ್ನು ರೂಪಿಸಲು ಸೆರೆಮನೆಯಲ್ಲಿ ಕಳೆದಿದ್ದಾರೆ. ಆ ಸಂವಿಧಾನವು ಕೇವಲ ಹೊಸದಾಗಿ ವಿಸ್ತಾರಗೊಂಡ ಭಾರತೀಯ ಮಧ್ಯಮ ವರ್ಗದ ಪ್ರಭಾವಕ್ಕೆ ಮಾನ್ಯತೆ ನೀಡಲಿದೆ.

ವಾಸ್ತವವಾಗಿ ಬ್ರಿಟನ್ನಿನ ಮಂತ್ರಿ ಮಂಡಲದ ಮಾತುಕತೆಗಳು ಭಾರತದ ಹೊಸ ಬಂಡವಳಿಗ ಮಧ್ಯಮ ಮಾರ್ಗದ ಮಾನ್ಯತೆಯಲ್ಲದೆ ಮತ್ತೇನೂ ಅಲ್ಲ. ಹಳೆಯ ಧರ್ಮದರ್ಶಿತ್ವ ಪ್ರತಿಪಾದನೆಯು ಬಂಡವಾಳದ ಹೂಡಿಕೆಯಿಂದಾಗಲೀ ರಫ್ತಿನಿಂದಾಗಲೀ ಇನ್ನೆಂದೂ ಏಕಸ್ವಾಮ್ಯ ಲಾಭಗಳನ್ನು ತರುವುದಿಲ್ಲ. ರಫ್ತು ಮತ್ತು ಹೂಡಿಕೆಗಳಲ್ಲಿ ತೊಡಗಿಸಿಕೊಳ್ಳಬೇಕಾಗಿರುವ ಬ್ರಿಟನ್ನಿನ ಮಧ್ಯಮ ವರ್ಗ ಕಚ್ಚಾ ಸಾಮಗ್ರಿಗಳು ಬೇಕಾಗಿರುವ ತನ್ನ ಭಾರತೀಯ ವಿದ್ವತ್ತಿನೊಂದಿಗೆ ಒಪ್ಪಂದ ಮಾಡಿಕೊಳ್ಳುವುದರ ಅಗತ್ಯತೆಯನ್ನು ಮನಗಂಡಿದೆ. ಆಧುನಿಕ ಉದ್ಯೋಗಪತಿಗಳು ಮತ್ತು ಬಂಡವಾಳಗಾರರು ಕಾಂಗ್ರೆಸ್ (ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ ಎಂಬರ್ಥದಲ್ಲಿ ಈ ಟಿಪ್ಪಣಿಯಲ್ಲಿ ಬಳಸಲಾಗಿದೆ) ನಿಧಿಗೆ ದೇಣಿಗೆ ನೀಡುವುದು ಹಾಗೂ ಮುಸ್ಲಿಂ ಲೀಗ್‌ನ ನಾಯಕತ್ವ ಭಾರತೀಯ ಶ್ರೀಮಂತ ಮೊಹಮ್ಮದೀಯರೊಂದಿಗೆ ಸೌಹಾರ್ದತೆಯಿಂದ ಇರುವುದರಲ್ಲಿ ಏನೂ ಮಹತ್ವವಿಲ್ಲದೆ ಇಲ್ಲ; ಇವೆರಡೂ ರಾಜಕೀಯ ಸಂಸ್ಥೆಗಳ ನಡುವಿನ ತಿಕ್ಕಾಟಕ್ಕೆ ಇರುವ ಒಂದು ಕಾರಣವನ್ನು ಸೂಚಿಸಬಹುದು. ಅದು ಮುಸ್ಲಿಂ ಅಲ್ಪಸಂಖ್ಯಾತರು ದೇಶದ ಸಂಖ್ಯೆಯ ಮೂರನೆಯ ಒಂದು ಭಾಗವಿದ್ದು ದೇಶದ ಹತ್ತನೆಯ ಒಂದು ಭಾಗದ ಆಸ್ತಿಯ ಒಡೆತನ ಹೊಂದಿದ್ದಾರೆ ಎನ್ನುವುದಕ್ಕೆ ಮತ್ತು ಮುಸ್ಲಿಮರ ಹಿಡಿತದಲ್ಲಿರುವ ಆಸ್ತಿ ಎಲ್ಲಕ್ಕೂ ಮೇಲಾಗಿ ಕಪಟ ವಿನಿಮಯ ಬಂಡವಾಳ ಅಥವಾ ಭಾಗಶಃ ಊಳಿಗಮಾನ್ಯ ಭೂ ವ್ಯವಸಾಯೋತ್ಪನ್ನಗಳನ್ನು ಆಧರಿಸಿದೆ ಎಂಬುದಕ್ಕೆ ಸೂಚನೆ. ಇವೆರಡೂ ಸಹ ಬ್ರಿಟಿಷರಿಂದ ರಕ್ಷಣೆ ಬಯಸುತ್ತವೆ.

ನೆಹರುರವರು ಸ್ಪಷ್ಟವಾಗಿ ಇದನ್ನೆಲ್ಲಾ ಒಪ್ಪಿಕೊಳ್ಳದಿರುವ ಹಿನ್ನೆಲೆಯಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷದ (ಪು.೫೨೪ ಮತ್ತು ೬೨೯) ಬಗೆಗಿನ ಅವರ ಟೀಕೆ ಆಸಕ್ತಿ ಹುಟ್ಟಿಸುತ್ತದೆ. (ತಾತ್ವಿಕವಾಗಿ ಎಂದೂ ಬಲವಾಗಿರದಿದ್ದ) ಭಾರತೀಯ ಕಮ್ಯುನಿಸ್ಟ್ ಪಕ್ಷವನ್ನು ೧೯೪೨ರಲ್ಲಿ ನಿರರ್ಥಕಗೊಳಿಸುವಷ್ಟು ಹತ್ತಿಕ್ಕಲಾಗಿತ್ತು ಎನ್ನುವುದನ್ನು ನೆಹರು ಮನಗಾಣುವುದಿಲ್ಲ. ಪ್ರಸಕ್ತ ರಾಜಕೀಯದಲ್ಲಿ ಅದರ ಹೆಚ್ಚುತ್ತಿರುವ ಶಕ್ತಿಗೆ ಮುಖ್ಯ ಕಾರಣ ಕಮ್ಯುನಿಸ್ಟರು ನಿಜವಾಗಿಯೂ ರೈತ ಕಾರ್ಮಿಕರ, ಸಣ್ಣ ಕೈಗಾರಿಕೆಗಳ ಕಾರ್ಮಿಕರ ಬಳಿಗೆ ಹೋಗಿರುವುದು ಎಂಬುದು ಸ್ಪಷ್ಟವಾಗಿದೆ. ಭಾರತದ ಜನಸಂಖ್ಯೆಯ ಇವೆರಡೂ ವಿಭಾಗಗಳಲ್ಲಿ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ೧೯೪೫ರ ಮುಂಚೆ ಹೊಂದಿದ್ದ ಪ್ರಭಾವವನ್ನು ಈಗ ಉಳಿಸಿಕೊಂಡಿಲ್ಲ. ಕಾಂಗ್ರೆಸ್ ಯೋಜನಾ ಸಮಿತಿ (ಪು. ೪೮೨–೮೪)ಯ ಬಗ್ಗೆ ಹೇಳುವುದಾದರೆ ಈ ಸಮಿತಿಯ ವರದಿ (೧೯೩೭–೩೯) ಅಂದು ಅಧಿಕಾರದಲ್ಲಿದ್ದ ಪ್ರಾಂತೀಯ ಕಾಂಗ್ರೆಸ್ ಸರ್ಕಾರದ ಮೇಲೆ ಎಳ್ಳಷ್ಟೂ ಪ್ರಭಾವ ಬೀರಿರಲಿಲ್ಲವೆನ್ನುವುದು ಅಚ್ಚರಿಮೂಡಿಸುತ್ತದೆ. ಕಾಂಗ್ರೆಸ್ ಹಾಕಿಕೊಂಡಿದ್ದ ಕಾರ್ಯಕ್ರಮಕ್ಕೂ ಮತ್ತು ಕಾಂಗ್ರೆಸ್ ಮಂತ್ರಿಮಂಡಲಗಳ ವಾಸ್ತವ ಕಾರ್ಯವೈಖರಿಗೆ ಇದ್ದ ವ್ಯತ್ಯಾಸಗಳನ್ನು ನೆಹರುರವರು ಮನಗಂಡಿರಬಹುದು, ಅದು ಅವರ ತಿಳಿವಳಿಕೆಯನ್ನು ಹೆಚ್ಚಿಸಿಯೂ ಇರಬಹುದು. ಕಾಂಗ್ರೆಸ್ ಈಗಿರುವ ರೀತಿಯನ್ನು ನೋಡಿದರೆ (ಅದರ ಯೋಜನಾ ಸಮಿತಿಯಂತೆಯೇ) ಅದು ಸಮಾಜವಾದದ ಒಲವನ್ನು ತೋರುವ ಅಪಾಯದ ಯಾವ ಕುರುಹೂ ಇಲ್ಲ! ಮುಸ್ಲಿಂ ಲೀಗ್ ನಾಯಕತ್ವದ ಬಗ್ಗೆ ಹೇಳುವುದಾದರೆ ಸಮಯಸಾಧನೆ ಮತ್ತು ಪ್ರಗತಿ ವಿರೋಧವನ್ನು ಬಿಟ್ಟು ಬೇರೇನನ್ನೂ ಅದರಲ್ಲಿ ಕಾಣುವುದು ಕಷ್ಟ. ಬಂಡವಾಳ ಹೂಡಿಕೆಯ ಅಂಕಿಸಂಖ್ಯೆಗಳ ಆಳಕ್ಕಿಳಿಯದೆ ಕಾಂಗ್ರೆಸ್ ಸರ್ಕಾರಗಳು ಆಡಳಿತ ನಡೆಸುತ್ತಿದ್ದ ಪ್ರಾಂತಗಳಲ್ಲಿ ೧೯೩೭–೩೯ರ ಅವಧಿಯಲ್ಲಿ ಗಣನೀಯ ಸಂಖ್ಯೆಯಲ್ಲಿ ಹೊಸ ಉದ್ಯಮಗಳು ಪ್ರಾರಂಭವಾದವು ಎಂದು ಹೇಳಬಹುದು. ಇದನ್ನು ಆ ಅವಧಿಯ ಪತ್ರಿಕಾ ಜಾಹೀರಾತುಗಳು ದೃಢೀಕರಿಸುತ್ತವೆ. ಬ್ರಿಟಿಷರ ಮತ್ತು ಕಾಂಗ್ರೆಸ್ ಯೋಜನಾ ಸಮಿತಿಯ ಗಮನಕ್ಕೆ ಬಂದಿತ್ತೋ ಇಲ್ಲವೋ, ಆದರೆ ಹೂಡಿಕೆದಾರನಂತೂ ಕಾಂಗ್ರೆಸ್ಸನ್ನು ನಂಬಿದ್ದ. ಇದನ್ನು ಇಂದು ಸ್ಫೋಟಕ ಗತಿಯಲ್ಲಿ ಬೆಳೆಯುತ್ತಿರುವ ಬಂಡವಾಳಕ್ಕೆ ಹೋಲಿಸಲಾಗುವುದಿಲ್ಲ.

ಆಗಸ್ಟ್ ೧೯೪೨ (ಪು. ೫೭೮)ರ ಮನಸ್ಸು ಪ್ರಚೋದಕ ಘಟನೆಗಳ ಕುರಿತು ನೆಹರು ನೇರ ಸಂಸದೀಯ ದೃಷ್ಟಿಕೋನವನ್ನು ತಳಿದಿದ್ದಾರೆ. ಆದರೂ ಹೊರಗಿನಿಂದ ನೋಡುವವರನ್ನು ದಂಗುಬಡಿಸುವ ಒಂದು ಅಂಶ ಪುಸ್ತಕದಲ್ಲಿ ಮೂಡಿಬಂದಿಲ್ಲವೆನ್ನುವುದನ್ನು ಗಮನಿಸಲೇಬೇಕು. ಅಖಿಲ ಭಾರತ ಕಾಂಗ್ರೆಸ್ ಸಮಿತಿ ಬೊಂಬಾಯಿಯಲ್ಲಿ ಸಭೆ ಸೇರಿದಾಗ ಅದರ ಸದಸ್ಯರಿಗೆ ತಮ್ಮ ಬಂಧನ ಸನ್ನಿಹಿತವಾಗುತ್ತಿದೆಯೆಂದು ತಿಳಿದಿತ್ತು. ಅವರಲ್ಲಿ ಬಹುತೇಕರು ಪರಿಸ್ಥಿತಿಯನ್ನೆ ದುರಿಸಲು ಸಿದ್ಧರಾಗಿದ್ದರು. ಗೃಹಕೃತ್ಯ ವಿಚಾರಗಳನ್ನು ಹಾಗೂ ಯಾವುದೇ ಸಂಕಷ್ಟಗಳನ್ನು ನಿಭಾಯಿಸಲು ಮುಂದಿನ ಒಂದೆರಡು ವರ್ಷಗಳಿಗಾಗುವಷ್ಟು ಸ್ವಂತ ಆರ್ಥಿಕ ವ್ಯವಸ್ಥೆಯನ್ನು ಅವರೆಲ್ಲಾ ಮಾಡಿಕೊಂಡಿದ್ದರು. ನನ್ನನ್ನು ದಿಗ್ಭ್ರಮೆಗೊಳಿಸುವ ವಿಚಾರವೆಂದರೆ ಬ್ರಿಟಿಷ್ ಎದುರಾಳಿಯು ಧಾಳಿ ಮಾಡುವ ಸಂಭವದ ಅರಿವಿದ್ದರೂ ಸಹ ಈ ಗಣ್ಯ ಮತ್ತು ಶಕ್ತಿಯುತ ಪ್ರತಿನಿಧಿಗಳಲ್ಲಿ ಒಬ್ಬರಾದರೂ ಕಾಂಗ್ರೆಸ್‌ಗಾಗಲಿ ಅಥವಾ ಇಡೀ ದೇಶಕ್ಕಾಗಲಿ ಒಂದು ಯೋಜನೆಯನ್ನು ರೂಪಿಸುವ ಬಗ್ಗೆ ತಲೆ ಕೆಡಿಸಿಕೊಳ್ಳಲೇ ಇಲ್ಲವೆನ್ನುವುದು. "ಮಹಾತ್ಮರು ನಮಗೊಂದು ದಾರಿ ತೋರಿಸುತ್ತಾರೆ" ಎನ್ನುವುದು ಸಾಮಾನ್ಯ ತಿಳುವಳಿಕೆಯಾಗಿತ್ತಾದರೂ ಬಂಧನಗಳಿಗೆ ಮುಂಚೆ ಮಾಡಿದ ಮಹಾತ್ಮರವರ ಭಾಷಣ ಯಾವ ವಿಶೇಷ ಪ್ರಭಾವವನ್ನೂ ಬೀರಲಿಲ್ಲ. ನಿರೀಕ್ಷಿತ ಆಸ್ಫೋಟವು ವಾಸ್ತವವಾಗಿ ಘಟಿಸಿದ ದಿನದ ಹಿಂದಿನ ಸಂಜೆ (ಅಂದರೆ ಆಗಸ್ಟ್ ೮, ೧೯೪೨) ನೆರೆದಿದ್ದ ಪ್ರತಿನಿಧಿಗಳನ್ನುದ್ದೇಶಿಸಿ ಮಾಡಿದ ಭಾಷಣ ಕ್ರಾಂತಿಕಾರಿಯಾಗಿರಲಿಲ್ಲ. ಅಲ್ಲದೆ, ಯಾವುದೇ ರೀತಿಯ ಸಂಘಟನಾತ್ಮಕ ಯೋಜನೆಯನ್ನೂ ಹೊಂದಿರಲಿಲ್ಲ. ಆದರೆ ವಸ್ತುನಿಷ್ಠವಾಗಿ ಗ್ರಹಿಸಿದಾಗ ಅದೊಂದು ಭೋಜನ ಕೂಟದ ನಂತರದ ಭಾಷಣದಂತಿತ್ತೆಂದು ಅನಿಸುತ್ತದೆ. ಜನತೆಯ ಅತೃಪ್ತಿಯ ಅರಿವಿದ್ದರೂ ವಾಸ್ತವವಾದ ಸಂಘಟನಾತ್ಮಕ ಯೋಜನೆ ಏಕೆ ನಾಪತ್ತೆಯಾಗಿತ್ತು? ಇದರ ಅರ್ಥ, ಭಾರತೀಯ ಮಧ್ಯಮವರ್ಗದಲ್ಲಿದ್ದ ಚಿಂತನಾ ಲಕ್ಷಣ ಕಾಂಗ್ರೆಸ್ ನಾಯಕತ್ವವನ್ನು ಸಹ ವ್ಯಾಪಿಸಿಕೊಂಡಿತ್ತು ಎಂದೇ? ರಾಷ್ಟ್ರೀಯ ಕ್ರಾಂತಿಕಾರಿ ಅಳತೆಗೋಲಿನಿಂದ ಪರೀಕ್ಷಿಸಿದಾಗ ಕಾಂಗ್ರೆಸ್ ಎಷ್ಟೇ ನಿರರ್ಥಕ ವಾದದ್ದೆನಿಸಿದರೂ ವರ್ಗಾಧಾರಿತವಾಗಿ ಆ ಸಂಘಟನೆ ಸಾಕಷ್ಟು ಯಶಸ್ವಿಯಾಗಿತ್ತೆಂದು ಹೇಳಬಹುದು. ಅಂದರೆ, ತನಗೆ ಆತ್ಮೀಯವಾದ ಬಂಡವಳಿಗ ವರ್ಗದ ರಕ್ಷಣೆಗೆ ಅದು ಯಾವಾಗಲೂ ಧಾವಿಸಲು ಸಿದ್ಧವಿದ್ದಿತು. ಗಾಬರಿಗೊಂಡಂತೆ ತೋರಿದ



ಸುಮ್ಮನೆ ಸುತ್ತುತ್ತಿಲ್ಲ
ಹೊಲಗದ್ದೆಗಳ ತುಂಬ
ಗೀಜಗನ ಹಕ್ಕಿ;
ಗೂಡು ಕಟ್ಟಿ ಬದುಕು
ಕಟ್ಟಿಕೊಳ್ಳಲು
ಕೂಡಿಡುತ್ತಿದೆ
ಹುಲುಕಡ್ಡಿಗಳ ಹಕ್ಕಿ

**ಡಾ॥ ಪ್ರಕಾಶ ಗ. ಖಾಡೆ**
ಬಾಗಲಕೋಟೆ

ಬ್ರಿಟಿಷ್ ಸರ್ಕಾರ ನಾಯಕರನ್ನೆಲ್ಲ ಜೈಲಿನಲ್ಲಿರಿಸಿದ್ದು ನಂತರದ ವರ್ಷದಲ್ಲಿ ಕಾಂಗ್ರೆಸ್‌ಗೂ ನಡೆದ ಘಟನೆಗಳಿಗೆ ತಾನು ಯಾವುದೇ ರೀತಿಯಲ್ಲಿ ಜವಾಬ್ದಾರಿಯಲ್ಲವೆಂದು ಹೇಳಿಕೊಳ್ಳಬಹುದಾಗಿದ್ದು ಕಾಂಗ್ರೆಸ್‌ಗೆ ಕ್ಷಮೆ ದೊರಕಿತು. ಅದೇ ಸಮಯದಲ್ಲಿ ಜೈಲಿನ ಮೋಡಿ ಮತ್ತು ಸೆರೆ ಶಿಬಿರಗಳು ಕಾಂಗ್ರೆಸ್ ಆಡಳಿತಾರೂಢ ಸರ್ಕಾರದ ಪರವಾಗಿಲ್ಲ ಎನ್ನುವ ಭಾವನೆಯನ್ನು ಮೂಡಿಸಿ ಆ ಸಂಘಟನೆಗೆ ಜನಸಮುದಾಯದಲ್ಲಿದ್ದ ಮೊದಲಿನ ಜನಪ್ರಿಯತೆಯನ್ನು ಮತ್ತೆ ಗಿಟ್ಟಿಸಿಕೊಟ್ಟಿತು. ಬ್ರಿಟಿಷರೇನಾದರೂ ಯುದ್ಧದಲ್ಲಿ ಗೆದ್ದರೆ, ಕಾಂಗ್ರೆಸ್ ಜಪಾನಿನ ಪರವಾಗಿರಲಿಲ್ಲವೆನ್ನುವುದು ಕೂಡ ಸಾಕಷ್ಟು ಸ್ಪಷ್ಟವಾಗಿರುತ್ತಿತ್ತು; ಹಾಗಿಲ್ಲದೆ ಜಪಾನೀಯರು ಒಂದು ವೇಳೆ ಭಾರತವನ್ನು ಅಧೀನ ಮಾಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದರೆ (ಹಾಗಾಗಲು ಜಪಾನೀಯರು ತಮ್ಮೆಲ್ಲ ಶಕ್ತಿಯನ್ನು ಬಳಸಿ ತಕ್ಷಣವೇ ಅಂದು ಹೆಸರಿಗೆ ಮಾತ್ರ ಇದ್ದ ರಕ್ಷಣಾ ವ್ಯವಸ್ಥೆ ಕುಸಿಯುವಂತೆ ಆಕ್ರಮಣ ಮಾಡಬೇಕಿತ್ತು) ಅವರು ಕಾಂಗ್ರೆಸ್ ಬ್ರಿಟಿಷರಿಗೆ ಸಹಾಯ ಮಾಡಿತು ಎಂದು ದೂಷಿಸುವಂತೆಯೂ ಇರಲಿಲ್ಲ. ಅಂತಿಮವಾಗಿ, ಸಮುದಾಯದ ಅತೃಪ್ತಿ ಉಲ್ಬಣಿಸುವಂತೆ ಮಾಡಿ ಅದನ್ನು ಛಿದ್ರಗೊಳಿಸುವ, ಸಮುದಾಯವನ್ನು ಹತ್ತಿಕ್ಕುವ ಅಸಹ್ಯಕರ ಜವಾಬ್ದಾರಿ ದಡ್ಡ ಅಧಿಕಾರಿವರ್ಗದ ಮೇಲೆ ಬಿದ್ದಿತು. ಇದು ಭಾರತೀಯ ಮಧ್ಯಮ ವರ್ಗಕ್ಕೆ ಖಂಡಿತ ಹಾನಿಯನ್ನುಂಟುಮಾಡುತ್ತಿರಲಿಲ್ಲ.

ಈ ಸಂಬಂಧವಾಗಿ ನಾವು ಮತ್ತೆ ಲೆನಿನ್‌ರವರು ಹೇಳಿದ್ದನ್ನು ನೆನಪಿಸಿಕೊಳ್ಳಬಹುದು. "ಕೆಳ ವರ್ಗಗಳಿಗೆ ಹಿಂದಿನ ವಿಧಾನ ಬೇಡವಾದಾಗ ಮತ್ತು ಮೇಲು ವರ್ಗ ಹಿಂದಿನ ವಿಧಾನದಲ್ಲೆ ಮುಂದುವರಿಯಲಾಗದಿದ್ದಾಗ ಮಾತ್ರ ಕ್ರಾಂತಿ ವಿಜಯಿಯಾಗಲು ಸಾಧ್ಯ. ಆ ಸತ್ಯವನ್ನು ಬೇರೆ ರೀತಿಯಲ್ಲೂ ಹೇಳಬೇಕೆಂದರೆ, ಒಂದು ರಾಷ್ಟ್ರೀಯ ಮುಗ್ಗಟ್ಟು ಶೋಷಿತ ಮತ್ತು ಶೋಷಕ ಹೀಗೆ ಇಬ್ಬರನ್ನೂ ಬಾಧಿಸದೆ ಕ್ರಾಂತಿ ಅಸಾಧ್ಯ." ೧೯೪೨ರ ಒಂದು ನಿರ್ವಿವಾದ ಸಂಗತಿಯೆಂದರೆ ಒಂದೆಡೆ ದುಡಿಯುವ ಜನತೆಗೆ ದಾರಿದ್ರ್ಯದ ಹೀನಾಯ ಸ್ಥಿತಿಯ ಬಿಸಿ ತಟ್ಟಲು ಪ್ರಾರಂಭವಾಗಿದ್ದರೆ ಮತ್ತೊಂದೆಡೆ ಭಾರತೀಯ ಬಂಡವಳಿಗ ಮಧ್ಯಮ ವರ್ಗ ಹಿಂದೆಂದಿಗಿಂತಲೂ ಹೆಚ್ಚು ಏಳಿಗೆ ಹೊಂದುತ್ತಿತ್ತು. ನೆಹರುರವರ ಕೃತಿಯಲ್ಲಿ ಇದನ್ನು ಹುಡುಕುವುದು ವ್ಯರ್ಥ ಪ್ರಯತ್ನವಾಗುತ್ತದೆ. ಯುದ್ಧಕಾಲೀನ ಗುತ್ತಿಗೆಗಳು, ಬೆಲೆಯೇರಿಕೆಗಳು, ಕಾಳಸಂತೆಯಲ್ಲಿ ವ್ಯಾಪಕವಾಗಿ ತೊಡಗಿಸಿಕೊಳ್ಳುವ ಜಾಣ್ಮೆ ಇವೆಲ್ಲಾ ಬಂಡವಾಳಗಾರರಿಗೆ ಮತ್ತು ಕೈಗಾರಿಕೋದ್ಯಮಿಗಳಿಗೆ ಅವರಿಗೆ ಬೇಕಾದದ್ದನ್ನು ನೀಡಿದ್ದವು. ಅಷ್ಟೇ ಅಲ್ಲದೆ, ಭಾರತೀಯರ ಅತೃಪ್ತಿಯನ್ನು ಹೊರಗೆಡಹುವುದರ ಮುಂಚೂಣಿಯಲ್ಲಿರುತ್ತಿದ್ದ ಕೆಳ ಮಧ್ಯಮ ವರ್ಗಗಳು ಸಹ ಉತ್ತಮ ದಿನಗಳನ್ನು ಕಾಣಲಾರಂಭಿಸಿದ್ದವು. ಇದಕ್ಕೆ ಮುಖ್ಯ ಕಾರಣಗಳು ಯುದ್ಧ ಮತ್ತು ಅದರಿಂದಾಗಿ ಉತ್ತಮಗೊಳ್ಳುತ್ತಿದ್ದ ಆರ್ಥಿಕ ಸ್ಥಿತಿ ಹಾಗೂ ಈ ಪರಿಸ್ಥಿತಿಯಿಂದ ಹುಟ್ಟಿಕೊಂಡಿದ್ದ ಗುಮಾಸ್ತರ ಉದ್ಯೋಗ. ಇದನ್ನು ಭಾರತದಲ್ಲಿ ಬಂಡವಾಳಗಾರರು ಹೆಚ್ಚು ಹೆಚ್ಚಾಗಿ ಲಾಭಗಳಿಸಲು ಬ್ರಿಟಿಷರು ಅನುವುಮಾಡಿಕೊಟ್ಟ ಸತ್ಯವನ್ನೂ ಗಣನೆಗೆ ತೆಗೆದುಕೊಂಡರೆ, ೧೯೪೨ ಏಕೆ ಯೋಜನಾರಹಿತವಾಗಿತ್ತು ಹಾಗೂ ಕ್ರಾಂತಿಯ ನಿಟ್ಟಿನಲ್ಲಿ ಸಮುದಾಯದ ಒತ್ತಡವಿದ್ದರೂ ಬಿಕ್ಕಟ್ಟುಗಳು ಏಕೆ ಎಡೆಬಿಡದೆ ಮುಂದಾದವು ಎನ್ನುವುದನ್ನು ವಿವರಿಸಲು ಸಾಧ್ಯವಾಗಬಹುದು.

ಇಂದಿಗೂ ಭಾರತದ ಬೇರಾವುದೇ ಸಂಸ್ಥೆಗಿಂತಲೂ ಹೆಚ್ಚು ಸಾಮೂಹಿಕ ಬೆಂಬಲವನ್ನು ಹೊಂದಿರುವ ಶಕ್ತಿಯುತ ಸಂಸ್ಥೆಯೊಂದರ ನಾಯಕತ್ವವನ್ನು ಇತಿಹಾಸ ನೆಹರು ಅವರ ಪಾಲಿಗೊದಗಿಸಿದೆ. ಆ ಸಂಸ್ಥೆ ತನ್ನ ಸತತ ಯಾತನಾಮಯ ಹೋರಾಟದಿಂದ ಇಡೀ ಉಪಖಂಡದ ರಾಜಕೀಯ ಹತೋಟಿಯನ್ನು ತನ್ನ ಮುಷ್ಟಿಯಲ್ಲಿಟ್ಟುಕೊಳ್ಳುವ ನಿರ್ಧಾರವನ್ನು ಪ್ರದರ್ಶಿಸಿದೆ. ಆದರೆ ಕಾಂಗ್ರೆಸ್ಸನ್ನು ಬಲವಾಗಿ ಬೆಂಬಲಿಸುವ ವರ್ಗದ ಹಿತಾಸಕ್ತಿಗಳು ದೇಶದ ಬಡವರ್ಗಗಳ ಹಿತಾಸಕ್ತಿಗಳಿಗಿಂತ ಭಿನ್ನ ವಾದಾಗ, ನೆಹರುರವರ ಮಾರ್ಕ್ಸ್‌ವಾದದ ಬಗೆಗಿನ ಒಲವು ಉಳಿಯುವುದೇ ಅಥವಾ ಬದಲಾಗುವುದೇ ? ಅಥವಾ ಅವರಲ್ಲಿನ ವರ್ಗ ವಿಶ್ಲೇಷಣೆಯ ಅಭಾವ ಅವರನ್ನು ಭ್ರಾಂತಮುಕ್ತನನ್ನಾಗಿಸುವುದೆ ? ಮಹಾತ್ಮ ಗಾಂಧಿಗಿಂತಲೂ ಸಾಚಾ ಆದವರು ಮತ್ತೊಬ್ಬರಿಲ್ಲ. ಅವರನ್ನು ಭಾರತದ ಬಂಡವಾಳಗಾರರ ಕೈಗೊಂಬೆ ಎನ್ನುವುದು ತಿಳಿಗೇಡಿತನ. ಆದರೆ ಇಂದಿನ ಭಾರತ ದಲ್ಲಿ ಹೊಸ ಬಂಡವಳಿಗ ಮಧ್ಯಮ ವರ್ಗವನ್ನು ಬಿಟ್ಟು ಶಕ್ತಿಯುತವಾಗಿ ಸಂಘಟಿತವಾದ ಮತ್ತೊಂದು ವರ್ಗವಿಲ್ಲ. ಈ ವರ್ಗ ಜಾಣ್ಮೆಯಿಂದ ತನಗೆ ಲಾಭದಾಯಕವಾದ ಮಹಾತ್ಮರ ತತ್ವಗಳನ್ನು ಬಳಸಿ ಕೊಂಡು ಅಪಾಯಕಾರಿ ಎನಿಸಿದ ಅವರ ಚಿಂತನೆ ಗಳನ್ನು ನಿರಾಕರಣಾರ್ಥಕ ತತ್ವಕ್ಕಿಳಿಸಿಬಿಡುತ್ತದೆ. ಭಾರತಕ್ಕೆ ಈ ವರ್ಗದ ಅನಿವಾರ್ಯತೆ ಇದ್ದಂತೆಯೇ ಮಧ್ಯಮ ವರ್ಗಕ್ಕೆ ನೆಹರುರವರ ನಾಯಕತ್ವದ ಅನಿವಾರ್ಯತೆ ಇದೆ. ನನಗೆ ತೋರುವಂತೆ ಭವಿಷ್ಯದ ಕವಲು ದಾರಿಗಳು ಸ್ಪಷ್ಟ; ಅಸ್ಪಷ್ಟವಾಗಿರುವುದು ನೆಹರುರವರು ಹೋರಾಟದ ಯಾವ ಮಾರ್ಗವನ್ನು ಅನುಸರಿಸುತ್ತಾರೆ ಎನ್ನುವುದು.

ಈ ಸಮಯದಲ್ಲಿ 'ಅಧಿಕೃತ ಮಾರ್ಕ್ಸ್‌ವಾದಿ'ಗಳ ತಿಳುವಳಿಕೆ ಬ್ರಿಟಿಷರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ಗೆ ಅಧಿಕಾರವನ್ನು ಎಂದೂ ಹಸ್ತಾಂತರಿಸುವುದಿಲ್ಲ ಎನ್ನುವುದಾಗಿತ್ತು. ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್‌ಗಳೊಂದಿಗೆ ಹೇಗೋ ಸಮೀಕರಿಸಲ್ಪಟ್ಟಿದ್ದ ಹಿಂದೂಗಳು ಮತ್ತು ಮುಸ್ಲಿಮರು ಒಂದಾಗಿ ವಿದೇಶಿ ಸಾಮ್ರಾಜ್ಯವಾದಿಗಳನ್ನು ಹೊರದೂಡುವುದೇ ಪರಿಹಾರವೆಂದು ಅಧಿಕೃತ ಮಾರ್ಕ್ಸ್‌ವಾದಿಗಳು ನಂಬಿದ್ದರು. ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಎಂಬ ಎರಡೂ ಪಕ್ಷಗಳ ಹಿಂದಿನ ವರ್ಗ ಸ್ವರೂಪವನ್ನು ಬಹಿರಂಗವಾಗಿ ಕಮ್ಯುನಿಸ್ಟ್ ಪಕ್ಷವು ಪ್ರಶ್ನಿಸಲೇ ಇಲ್ಲ. ಬಹುಶಃ, ಯಾವುದಾದರೂ ಗೂಢ ರೀತಿಯಲ್ಲಿ ಮುಸ್ಲಿಂ ಲೀಗ್ ಹೃದಯಾಂತರಾಳದಲ್ಲಿ ಬ್ರಿಟಿಷರ ವಿರುದ್ಧ ಹಾಗೂ ಸಮಾಜವಾದಿ ಹಾದಿಯಲ್ಲಿತ್ತೆಂದು 'ಅಧಿಕೃತ ಮಾರ್ಕ್ಸ್‌ವಾದಿ'ಗಳಿಗೆ ಡಬ್ಲ್ಯು. ಕ್ಯಾಂಟ್‌ವೆಲ್ ಸ್ಮಿತ್‌ನ ಬರವಣಿಗೆಗಳಿಂದ ಅನಿಸಿರಬೇಕು ! ಸಾಮ್ರಾಜ್ಯವಾದ – ವಿರೋಧಿ ನಿಲುವು ತಾಳಿದ್ದಕ್ಕಾಗಿ ಬ್ರಿಟಿಷ್ ಚಕ್ರಾಧಿಪತ್ಯದ ಅಧಿಕಾರಿಗಳು ಎಷ್ಟು ನಾಯಕರನ್ನು ಜೈಲಿಗೆ ಕಳುಹಿಸಿದ್ದರು ಅಥವಾ ಗಲ್ಲಿಗೇರಿಸಿದ್ದರು ಎನ್ನುವುದೊಂದು ಮುಖ್ಯ ಪರೀಕ್ಷೆಯಾಗಿತ್ತು. ಆದರೆ 'ಅಧಿಕೃತ ಮಾರ್ಕ್ಸ್‌ವಾದಿ'ಗಳು ಈ ಅಳತೆಗೋಲನ್ನು ಕಮ್ಯುನಿಸ್ಟರು ಬಳಸಲಿಲ್ಲ. ಲೀಗ್‌ನ ಹಠಮಾರಿತನ ಮತ್ತು ಅದರ ಮುಂಚೂಣಿ ಮಹಿಮಾತಿಶಯರುಗಳಿಗೆ ಅತ್ಯಂತ ಲಾಭದಾಯಕವಾಗಿದ್ದ ಬ್ರಿಟಿಷರೊಂದಿಗಿನ ಮೈತ್ರಿ ಹಾಗೂ "ಎರಡು ರಾಷ್ಟ್ರಗಳು" ಎಂಬ ಪ್ರತಿಪಾದನೆಯ ಪಟ್ಟನ್ನು ನಮ್ರತೆಯಿಂದ ಕಡೆಗಣಿಸಲಾಯಿತು. ಪಂಜಾಬ್ ಮತ್ತು ಬಂಗಾಳದಲ್ಲಿ ಉತ್ತುಂಗಕ್ಕೇರಿದ್ದ ರೈತ ಚಳುವಳಿಗಳು ೧೯೪೭ರ ಪಾಕಿಸ್ತಾನದ ಬೇರ್ಪಡುವಿಕೆ ಯಿಂದಾಗಿ ಸಂಪೂರ್ಣ ನಾಶವಾಗಿದ್ದಕ್ಕೆ ಯಾವ ಒತ್ತನ್ನೂ ನೀಡಲಾಗಿಲ್ಲ. ಹಾಗೆ ನೋಡಿದರೆ, ೧೯೪೨ – ೪೩ರ ಸತಾರ ರೈತ ದಂಗೆ (ಪ್ರತಿ ಸರ್ಕಾರ)ಯನ್ನು 'ಅಧಿಕೃತ ಮಾರ್ಕ್ಸ್‌ವಾದಿ'ಗಳು ಶುದ್ಧ ಎಳಸುತನ ಎಂದು ತಳ್ಳಿಹಾಕಿದರು.

ಇಂಗ್ಲಿಷ್ ಮೂಲ : **ಡಿ. ಡಿ. ಕೋಸಾಂಬಿ**
ಕನ್ನಡಕ್ಕೆ : **ಟಿ. ವೆಂಕಟೇಶ ಮೂರ್ತಿ**
ನಂ. ೨೧೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡನಗರ, ಗವೀಪುರಂ, ಬೆಂಗಳೂರು – ೫೬೦ ೦೧೯





## ಪಾಕಿಸ್ತಾನದಲ್ಲಿ ತಾಲಿಬಾನ್‌ಗಳಿಂದ ಮಕ್ಕಳ ಕಗ್ಗೊಲೆ

ಇಸ್ಲಾಮಿಕ್ ರಾಜ್ಯ ಸ್ಥಾಪನೆಯ ಗುರಿ ಇರಿಸಿಕೊಂಡು ಪಶ್ಚಿಮ ಏಶಿಯಾದ ಸಿರಿಯ ಮತ್ತು ಇರಾಕ್‌ಗಳಲ್ಲಿ ಉದಯಿಸಿರುವ ಮೂಲಭೂತವಾದಿ ಸಂಘಟನೆ, ರಷ್ಯ–ನ್ಯಾಟೋ ರಾಷ್ಟ್ರಗಳ ಶೀತಲ ಸಮರಕ್ಕೆ ಮತ್ತೆ ಎಡೆಕೊಡುವಂತೆ ಕಾಣುತ್ತಿರುವ ಯುಕ್ರೇನಿನ ಬೆಳವಣಿಗೆಗಳು, 'ಬ್ರಿಕ್ಸ್' – ಬ್ರೆಜಿಲ್, ರಷ್ಯ, ಇಂಡಿಯಾ, ಚೀಣ, ದಕ್ಷಿಣ ಆಫ್ರಿಕ ದೇಶಗಳಿಂದ ಅಭಿವೃದ್ಧಿ ಬ್ಯಾಂಕ್ ಒಂದರ ಸ್ಥಾಪನೆ, ಹಾಂಕಾಂಗ್‌ನಲ್ಲಿ ವಿಫಲಗೊಂಡ ವಿದ್ಯಾರ್ಥಿಗಳ ಆಂದೋಳನ, ಭಾರತ, ಪಾಕಿಸ್ತಾನಗಳಿಗೆ ಸಂದ ನೊಬೆಲ್ ಶಾಂತಿ ಪುರಸ್ಕಾರ, ಮುಂದುವರಿಯುತ್ತಿರುವ ಭಯೋತ್ಪಾದಕತೆ, ಮುಂತಾದವು ಕಳೆದ ವರ್ಷದ ಪ್ರಮುಖ ಘಟನೆಗಳು.



ವರ್ಷದ ಕೊನೆಯಲ್ಲಿ, ಡಿಸೆಂಬರ್ ಎರಡನೇ ವಾರದಲ್ಲಿ ಪಾಕಿಸ್ತಾನದ ಪೇಶಾವರ್‌ನಲ್ಲಿ ಶಾಲೆಯೊಂದಕ್ಕೆ ನುಗ್ಗಿದ ತಾಲಿಬಾನ್ ದುಷ್ಕರ್ಮಿಗಳು ಮಕ್ಕಳ ಮೇಲೆ ಯದ್ವಾತದ್ವಾ ಗುಂಡು ಹಾರಿಸಿ ೧೩೨ ಮಕ್ಕಳನ್ನು ಹತ್ಯೆಗೈದದ್ದು ಅತಿ ದೊಡ್ಡ ದುರಂತ. ಡಿಸೆಂಬರ್ ೧೬ರಂದು ಸಂಭವಿಸಿದ ಈ ದುರಂತದಲ್ಲಿ ಸತ್ತವರ ಸಂಖ್ಯೆ ೧೪೮ ದಾಟಿದೆ. ಭಯೋತ್ಪಾದನೆ ಕೃತ್ಯಕ್ಕೆ ಬಲಿಯಾದವರಿಗೆ 'ಹೊಸತು' ನಮನ ಸಲ್ಲಿಸುತ್ತ, ನೊಂದ ಪೋಷಕರಿಗೆ ಸಂತಾಪ ವ್ಯಕ್ತಪಡಿಸುತ್ತದೆ. ಇದುವರೆಗೆ ನಡೆದಿರುವ ಭಯೋತ್ಪಾದನೆಯ ಕೃತ್ಯಗಳಲ್ಲಿ ಇದು ಅತಿ ದೊಡ್ಡದು ಹಾಗೂ ಹೇಯಕೃತ್ಯ. ಪಾಕಿಸ್ತಾನಿ ಸೈನಿಕ ಕಾರ್ಯಾಚರಣೆಗೆ ಪ್ರತೀಕಾರವಾಗಿ ಮಕ್ಕಳ ಮೇಲೆ ಸೇಡು ತೀರಿಸಿಕೊಂಡ ತಾಲಿಬಾನ್‌ಗಳ ಅಟ್ಟಹಾಸ ಅತ್ಯಂತ ಹೀನಕೃತ್ಯ, ಖಂಡನೀಯ. ಪಾಕಿಸ್ತಾನದಲ್ಲಿ ಭಯೋತ್ಪಾದಕರ ಹಾವಳಿ ನಿರಂತರವಾಗಿ ಕೆಲ ವರ್ಷಗಳಿಂದ ನಡೆಯುತ್ತಿದೆ. ಪಾಕಿಸ್ತಾನಿ ಪ್ರೇರಿತ ಭಯೋತ್ಪಾದಕರು ಆಗಾಗ ಭಾರತದಲ್ಲೂ ಹೀನಕೃತ್ಯ ಎಸಗುತ್ತಿದ್ದಾರೆ. ಪಾಕಿಸ್ತಾನಿ ಆಡಳಿತ ಮತ್ತು ಸೇನೆಗೆ ಮೊನ್ನೆ ನಡೆದ ದುರ್ಘಟನೆ ತಿರುಗೇಟಾಗಿದೆ. ಇನ್ನಾದರೂ ಪಾಕಿಸ್ತಾನ ಆಡಳಿತ ಭಯೋತ್ಪಾದನೆಗೆ ಕುಮ್ಮಕ್ಕು ನೀಡುವುದನ್ನು ನಿಲ್ಲಿಸಿ, ಭಯೋತ್ಪಾದಕರ ವಿರುದ್ಧ ಕ್ರಮ ಕೈಗೊಳ್ಳಲಿ. ಪೇಶಾವರ ಪ್ರಾಂತದ ವಜೀರಸ್ತಾನದಲ್ಲಿ ತಾಲಿಬಾನ್‌ಗಳ ಪ್ರಾಬಲ್ಯ ಅಧಿಕವಾಗಿದೆ. ಅವರನ್ನು ತೊಡೆದುಹಾಕಲು ಅಮೆರಿಕ ಕ್ರಮ ಕೈಗೊಳ್ಳುತ್ತಿದೆ. ಕೆಲ ವರ್ಷಗಳಿಂದ, ಆಫ್ಘನ್ ಗಡಿಯಿಂದ ಸ್ವತಃಷ್ಟಲಿ ಡ್ರೋನ್ ದಾಳಿ ನಡೆಸುತ್ತ ಬಂದಿದೆ. ಈ ಡ್ರೋನ್ ದಾಳಿಯಲ್ಲಿ ಆಹುತಿಯಾಗಿರುವವರಲ್ಲಿ ನಾಗರಿಕರೇ ಹೆಚ್ಚು. ಮತ್ತೊಂದು ವಿಷಯ. ಈ ತಾಲಿಬಾನ್‌ಗಳು ಒಂದು ಕಾಲದಲ್ಲಿ, ಅಂದರೆ ಶೀತಯುದ್ಧದ ದಿನಗಳಲ್ಲಿ ಅಮೆರಿಕದ ಆಡಳಿತಕ್ಕೆ ಬೇಕಾದವರಾಗಿದ್ದರು ಆಫ್ಘಾನಿಸ್ತಾನದಲ್ಲಿ. ಅಂದು ತಾಲಿಬಾನ್‌ಗಳು ಸೋವಿಯೆತ್ ಸೇನೆಯ ವಿರುದ್ಧ ಸಮರ ನಡೆಸುತ್ತಿದ್ದು ಅಮೆರಿಕದಿಂದ ಸಾಕಷ್ಟು ಡಾಲರುಗಳು, ಶಸ್ತ್ರಾಸ್ತ್ರಗಳನ್ನು ಪಡೆದು ಬೆಳೆದದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಈಗ ಅವರೇ ಅಮೆರಿಕದ ವಿರುದ್ಧ ತಿರುಗಿಬಿದ್ದಿದ್ದಾರೆ. ಪಾಕಿಸ್ತಾನ ಆಡಳಿತ ಕೂಡ ತಾಲಿಬಾನ್‌ಗಳನ್ನು ಭಾರತದ ವಿರುದ್ಧ ಎತ್ತಿಕಟ್ಟಿತ್ತು ಎಂಬುದನ್ನು ಗಮನಿಸಬೇಕು. ಅದೇನೇ ಇರಲಿ ಪೆಡಂಭೂತದಂತೆ ಬೆಳೆದಿರುವ ಮೂಲಭೂತವಾದವನ್ನು ಮಟ್ಟಹಾಕುವುದು ನಾಗರಿಕ ಸಮಾಜದ ಆದ್ಯ ಕರ್ತವ್ಯ ಇಂದು.



ತಾಲಿಬಾನ್ ದುಷ್ಕರ್ಮಿಗಳು ಯದ್ವಾತದ್ವಾ ಗುಂಡು ಹಾರಿಸಿದ ಪಾಕಿಸ್ತಾನದ ಪೇಶಾವರ್‌ನ ಶಾಲೆಯ ಒಂದು ನೋಟ

ಈ ದುರ್ಘಟನೆಯ ಹಿನ್ನೆಲೆಯಲ್ಲೇ ಆಸ್ಟ್ರೇಲಿಯದ ಸಿಡ್ನಿಯ ಕೆಫೆ ಯೊಂದರಲ್ಲಿ ನಡೆದ ಪ್ರಕರಣವನ್ನು ಅವಲೋಕಿಸಬೇಕು. ಇಸ್ಲಾಮಿಕ್ ರಾಜ್ಯ ಸ್ಥಾಪನೆಯ ಸಂಘಟನೆ ತನ್ನ ಜಾಲವನ್ನು ಪ್ರಪಂಚದ ನಾನಾ ಭಾಗಗಳಿಗೆ ಹರಡಿರುವುದಕ್ಕೆ ಇದು ಸಾಕ್ಷಿ. ಸಿಡ್ನಿ ಕೆಫೆ ಘಟನೆಯಲ್ಲಿ ತೊಡಗಿದ್ದವನು ಒಬ್ಬನೇ ಶಸ್ತ್ರಧಾರಿ ಇರಾನಿಯನ್. ಈತನನ್ನು ಇಸ್ಲಾಮಿಕ್ ರಾಜ್ಯ ಸಂಘಟನೆಯ ಸದಸ್ಯ ಎಂದು ಗುರ್ತಿಸಲಾಗಿದೆ. ಕೆಫೆಯಲ್ಲಿದ್ದ ಐವತ್ತು ಮಂದಿಯನ್ನು ಒತ್ತೆಯಾಳುಗಳನ್ನಾಗಿ ಇರಿಸಿಕೊಂಡಿದ್ದ ಈತ ಪೊಲೀಸರ ಗುಂಡಿಗೆ ಬಲಿಯಾದ. ದುರ್ಘಟನೆಯಲ್ಲಿ ಓರ್ವ ಅಮಾಯಕ ಮೃತಪಟ್ಟ. ಭಾರಿ ದುರಂತ ತಪ್ಪಿತಾದರೂ ಸಿಡ್ನಿಯ ಘಟನೆ ಎಚ್ಚರಿಕೆಯ ಗಂಟೆ. ಜಗತ್ತಿನಾದ್ಯಂತ ಕಾರ್ಯಕರ್ತರನ್ನು ಆಕರ್ಷಿಸುತ್ತಿರುವ ಇಸ್ಲಾಮಿಕ್ ರಾಜ್ಯ ಸಂಘಟನೆಯ ಕರಿನೆರಳು ಭಾರತದ ಮೇಲೂ ಬಿದ್ದಿದೆ. ಬೆಂಗಳೂರಿನಲ್ಲಿ ಮೆಹ್ದಿ ಎಂಬುವವನನ್ನು ಈ ನಂಟಿನ ಸಂಬಂಧದಲ್ಲಿ ಪೊಲೀಸರು ವಶಕ್ಕೆ ತೆಗೆದುಕೊಂಡಿದ್ದಾರೆ. ಭಯೋತ್ಪಾದನೆಯ ವಿರುದ್ಧ ಅಮೆರಿಕ ಯುದ್ಧ ಸಾರಿ ಒಂದು ದಶಕಕ್ಕೆ ಮೇಲಾದರೂ ಭಯೋತ್ಪಾದಕ ಕೃತ್ಯಗಳ ಜಾಲ ಮಾತ್ರ ಹೆಚ್ಚುತ್ತಲೇ ಇದೆ.

**ಸೀಯಾರ್ಕೆ**

# ಅಮೆರಿಕ : ಪೊಲೀಸರ ದೌರ್ಜನ್ಯಕ್ಕೆ ಮೌನ ಸಮ್ಮತಿ

ಕಳೆದ ನವೆಂಬರ್ ತಿಂಗಳ ಅಂತ್ಯದಲ್ಲಿ ಅಮೆರಿಕದಲ್ಲಿ ಭುಗಿಲೆದ್ದ ಆಫ್ರಿಕನ್ ಅಮೆರಿಕನ್ನರ ಆಕ್ರೋಶ, ಅಮೆರಿಕದ ಸದನ ಸಮಿತಿ ಬಹಿರಂಗಪಡಿಸಿರುವ ಸಿಐಎ ಹಿಂಸಾಚಾರ ಜಗತ್ತಿನ ಗಮನ ಸೆಳೆದಿರುವ ವಿದ್ಯಮಾನಗಳು. ಎರಡೂ ಘಟನೆಗಳು ಮಾನವ ಹಕ್ಕುಗಳ ಉಲ್ಲಂಘನೆಗೆ ಸಂಬಂಧಿಸಿದ್ದು. ಮಾನವ ಹಕ್ಕುಗಳ ಏಕೈಕ ಪ್ರತಿಪಾದಕ ತಾನು ಎಂದು ಕೊಚ್ಚಿಕೊಳ್ಳುವ, ಇತರ ದೇಶಗಳನ್ನು ಈ ಕುರಿತು ದೂಷಿಸುವ ಅಮೆರಿಕದಲ್ಲೇ ಇಂಥ ಪ್ರಕರಣಗಳು ಹೆಚ್ಚು. ಹತ್ತು ವರ್ಷಗಳಿಗೂ ಹಿಂದೆ ಅಮೆರಿಕದ ವರ್ಲ್ಡ್ ಟ್ರೇಡ್ ಸೆಂಟರ್‌ನ ಮೇಲೆ ಭಯೋತ್ಪಾದಕರ ದಾಳಿಯ ನಂತರ ಇಂಥ ದೌರ್ಜನ್ಯದ ಪ್ರಕರಣಗಳು ಸಾಕಷ್ಟು ಹೆಚ್ಚಿವೆ. ವಿಚಾರಣೆಯೇ ಇಲ್ಲದೆ ಸಹಸ್ರಾರು ಮಂದಿ ಮುಸಲ್ಮಾನರು ಅಮೆರಿಕದ ಕಾರಾಗೃಹಗಳಲ್ಲಿ ಕೊಳೆಯುತ್ತಿದ್ದಾರೆ. ವಿಚಾರಣಾಧೀನ ಬಂಧಿತರ ಬಾಯಿ ಬಿಡಿಸಲು ಸಿಐಎ ಹಾಗೂ ಅಮೆರಿಕದ ಪೊಲೀಸರು ನಡೆಸುವ, ನಡೆಸುತ್ತಿರುವ ಅಮಾನುಷ ಹಿಂಸಾಚಾರವನ್ನು ಅಮೆರಿಕದ ಸೆನೆಟ್ ಸಮಿತಿಯ ವರದಿಯೊಂದು ಬಯಲು ಮಾಡಿದೆ. ಗ್ವಾಂಟನಾಮೋ ಕಾರಾಗೃಹದಲ್ಲಿ ಸಿಐಎ ನಡೆಸಿದ ದೌರ್ಜನ್ಯ ತಿಳಿದಿರುವ ವಿಚಾರ. ಎಲ್ಲ ಕಡೆಯೂ ಪೊಲೀಸರ ವರ್ತನೆ ಒಂದೇ ಬಗೆ. ಅಮೆರಿಕ ಮಾತ್ರ ಹಿಂದಿಟ್ಟುಕೊಳ್ಳುತ್ತದೆ. ಈಗ ನಿಜ ಹೊರಬರುತ್ತಿದೆ.

ಕರಿಯರು, ನೀಗ್ರೋಗಳು ಎಂದು ಕರೆಯುತ್ತಿದ್ದ ಜನಾಂಗ ಬಿಳಿಯರಿಂದ ನಾನಾ ಬಗೆಯ ದೌರ್ಜನ್ಯಗಳಿಗೆ ಗುರಿಯಾಗುತ್ತಿರುವುದು ಹೊಸ ವಿಷಯವೇನಲ್ಲ. ಒಂದು ಕಾಲದಲ್ಲಿ ಗುಲಾಮರಾಗಿದ್ದ ಈ ಜನ ನಡೆಸಿದ ಹೋರಾಟ, ಬಿಳಿಯರ ವರ್ಣಭೇದ ನೀತಿಯನ್ನು ವಿರೋಧಿಸಿ ಕೈಗೊಂಡ ಪ್ರತಿಭಟನೆ, ಚಳವಳಿಗಳ ಫಲವಾಗಿ ಇಂದು ಆಫ್ರಿಕನ್ ಅಮೆರಿಕನ್ನರೆಂದು ಗುರ್ತಿಸಿಕೊಂಡಿದ್ದಾರೆ. ಅವೆಲ್ಲ ಈಗ ಇತಿಹಾಸದ ಪುಟಗಳನ್ನು ಸೇರಿದೆ. ಎಲ್ಲ ಬಗೆಯ ಅಪಮಾನಕರ ವರ್ಣಭೇದದ ಉಪಟಳವನ್ನು ಅನುಭವಿಸಿರುವ ಈ ಆಫ್ರಿಕನ್ ಅಮೆರಿಕನ್



*ಬಿಳಿಯ ಪೊಲೀಸು ಅಧಿಕಾರಿಯ ಗುಂಡಿಗೆ ಬಲಿಯಾದ ಮೈಕೇಲ್ ಬ್ರೌನ್*

ಜನಾಂಗದ ಸ್ಥಿತಿ ಇಂದಿಗೂ ಅಷ್ಟೇನೂ ಸುಧಾರಿಸಿಲ್ಲ. ತನ್ನ ಜನಾಂಗದವರೇ ಒಬ್ಬರಾದ ಬರಾಕ್ ಒಬಾಮಾ ರಾಷ್ಟ್ರದ ಅಧಿಪತಿಯಾಗಿದ್ದರೂ ಬಿಳಿಯರ ಅಟ್ಟಹಾಸ ಮುಂದುವರಿದಿದೆ. ಒಂದು ರೀತಿಯಲ್ಲಿ ಈ ಆಫ್ರಿಕನ್ ಅಮೆರಿಕನ್ನರ ಸ್ಥಿತಿ ನಮ್ಮ ದೇಶದ ದಲಿತರ ಸ್ಥಿತಿಯಂತೆಯೇ ಹೀನವಾಗಿದೆ. ಅಮೆರಿಕ ಸ್ವತಂತ್ರಗೊಂಡು ಇನ್ನೂರು ವರ್ಷಗಳ ಮೇಲಾಗಿದ್ದರೂ, ಇಂದು ಜಗತ್ತಿನಲ್ಲೇ ಅತ್ಯಂತ ಶ್ರೀಮಂತ ರಾಷ್ಟ್ರ ಎನಿಸಿಕೊಂಡಿದ್ದರೂ ಬಡತನ, ನಿರುದ್ಯೋಗ, ಅನಕ್ಷರತೆ ಆಫ್ರಿಕನ್ ಅಮೆರಿಕನ್ನರಲ್ಲಿ ತಾಂಡವವಾಡುತ್ತಿದೆ. ಒಂದು ಅಂದಾಜಿನ ಪ್ರಕಾರ ಈ ಜನಾಂಗದವರಲ್ಲಿ ನಿರುದ್ಯೋಗದ ಪ್ರಮಾಣ ಶೇಕಡ ೧೭ಕ್ಕೂ ಅಧಿಕವಾಗಿದೆ. ಆಫ್ರಿಕನ್ ಅಮೆರಿಕನ್ನರು ವಾಸಿಸುವ ಬಡಾವಣೆಗಳನ್ನು ನೋಡಿದರೆ ಅವರ ಸ್ಥಿತಿ ಹೇಗಿದೆ ಎಂದು ಗೋಚರವಾಗುತ್ತದೆ. ಹೆಚ್ಚಿನವರು




*ಬಿಳಿ ಪೊಲೀಸನ ಬಿಗಿಹಿಡಿತಕ್ಕೆ ಬಲಿಯಾಗಿ ಸಾವನ್ನಪ್ಪಿದ್ದ ೪೩ ವರ್ಷ ವಯಸ್ಸಿನ ಎರಿಕ್ ಗಾರ್ನರ್*

ಅಮೆರಿಕದ ಡೌನ್ ಟೌನ್ ಎಂದು ಕರೆಯುವ ಜಾಗದಲ್ಲಿ ವಾಸಿಸುತ್ತಾರೆ. ಇದು ಹೆಚ್ಚು ಜನಸಂದಣಿ ಇರುವ ಸ್ಥಳ. ಉಳಿದವರು ಒಂದು ಬಗೆಯ ಸ್ಲಮ್‌ಗಳಲ್ಲಿ ವಾಸಿಸುತ್ತಾರೆ. ಬಿಳಿಯರು ವಾಸಿಸುವ ಬಡಾವಣೆಗಳಲ್ಲಿ ಇವರು ಮನೆ ಮಾಡಿಕೊಂಡಿರುವುದು ಬಹಳ ಕಡಿಮೆ.

ಪೊಲೀಸರ ದೌರ್ಜನ್ಯಕ್ಕೆ ಬಲಿಯಾಗುವವರು ಹೆಚ್ಚಾಗಿ ಆಫ್ರಿಕನ್ ಅಮೆರಿಕನ್ನರೇ. ಬಿಳಿಯ ಪೊಲೀಸರು ಏನು ಮಾಡಿದರೂ ಸರಿಯೇ ಅವರಿಗೆ ಶಿಕ್ಷೆಯಾಗುವುದೇ ಇಲ್ಲ. ಅಮೆರಿಕದ ನ್ಯೂಯಾರ್ಕ್, ಷಿಕಾಗೊ, ಫಿಲಡೆಲ್ಫಿಯ, ಲಾಸ್‌ಏಂಜಲಿಸ್, ಡೆಟ್ರಾಯಿಟ್, ವಾಷಿಂಗ್ಟನ್‌ಗಳಲ್ಲಿ ಈಚೆಗೆ ನಡೆದ ಬೃಹತ್ ಪ್ರತಿಭಟನಾ ಪ್ರದರ್ಶನಗಳು ಅಂಥವು. ಈ ಪ್ರತಿಭಟನೆ ನಡೆದದ್ದು ಹದಿನೆಂಟು ವಯಸ್ಸಿನ ನಿರಾಯುಧ ಆಫ್ರಿಕನ್ ಅಮೆರಿಕನ್ ಯುವಕನ ಮೇಲೆ ಗುಂಡು ಹಾರಿಸಿ ಹತ್ಯೆಗೈದ ಪೊಲೀಸು ಅಧಿಕಾರಿಗೆ ಶಿಕ್ಷೆಯಾಗದೆ ಖುಲಾಸೆಯಾದ್ದನ್ನು ವಿರೋಧಿಸಿ. ಕಳೆದ ಆಗಸ್ಟ್ ತಿಂಗಳಲ್ಲಿ ಮಿಸ್ಸೊರಿಯ ಫರ್ಗುಸನ್ ಎಂಬಲ್ಲಿ ಬಿಳಿಯ ಪೊಲೀಸು ಅಧಿಕಾರಿ ಡಾರೆನ್ ವಿಲ್ಸನ್ ಸಂಶಯಾಸ್ಪದ ವ್ಯಕ್ತಿ ಎಂದು ಗುರ್ತಿಸಿ ಮೈಕೇಲ್ ಬ್ರೌನ್ ಎಂಬ ಆಫ್ರಿಕನ್ ಅಮೆರಿಕನ್ ಯುವಕನನ್ನು ಗುಂಡು ಹಾರಿಸಿ ಕೊಲೆಗೈದ. ಈ ಘಟನೆ ಕುರಿತು ಆಗಲೇ ಪೊಲೀಸು ಅಧಿಕಾರಿಗೆ ಶಿಕ್ಷೆಯಾಗಬೇಕೆಂದು ಒತ್ತಾಯಿಸಿ ಪ್ರತಿಭಟನೆಗಳು ಜರುಗಿದ್ದುವು. ನ್ಯಾಯಾಲಯದಲ್ಲಿ ವಿಚಾರಣೆಗೆ ಒಳಗಾದ ಪೊಲೀಸು ಅಧಿಕಾರಿ ತಪ್ಪಿತಸ್ಥನಲ್ಲ ಎಂಬ ತೀರ್ಪು ನವೆಂಬರ್ ತಿಂಗಳ ಕೊನೆಯಲ್ಲಿ ಪ್ರಕಟವಾಯಿತು. ಮುಕ್ಕಾಲು ವಾಸಿ ಬಿಳಿಯರೇ ಇದ್ದ ಜ್ಯೂರಿ ನೀಡಿದ ತೀರ್ಪು ಇದು. ಇದರ ವಿರುದ್ಧವೇ ಅಮೆರಿಕಾದಾದ್ಯಂತ ಪ್ರತಿಭಟನಾ ಪ್ರದರ್ಶನಗಳು ನಡೆದದ್ದು, ಇಂಥ ತೀರ್ಪು ಮೊದಲನೆಯದೇನಲ್ಲ. ಪೊಲೀಸರು ಏನೇ ಮಾಡಿದರೂ ಅದು ಆತ್ಮರಕ್ಷಣೆಗೆ, ವ್ಯಕ್ತಿಯ ಬಗ್ಗೆ ಸಂಶಯ ಬಂದದ್ದರಿಂದ ಎನ್ನುವುದು ಸಿದ್ಧಾಂತ ನ್ಯಾಯಾಲಯಗಳಲ್ಲಿ. ಅವರು ಆಫ್ರಿಕನ್ ಅಮೆರಿಕನ್ನರಾಗಿದ್ದರಂತೂ ಹೇಳಬೇಕಾಗೇ ಇಲ್ಲ. ೧೯೮೦ರಲ್ಲಿ ಸಂಚಾರ ನಿಯಮ ಉಲ್ಲಂಘಿಸಿದ ಆಫ್ರಿಕನ್ ಅಮೆರಿಕನ್ ಮೋಟಾರ್ ಸೈಕಲ್ ಚಾಲಕನನ್ನು ಚಚ್ಚಿ ಕೊಲೆಗೈದ ನಾಲ್ಕು ಮಂದಿ ಬಿಳಿಯ ಪೊಲೀಸರು ದೋಷಮುಕ್ತರಾದರು. ೧೯೯೨ರಲ್ಲಿ ರೋಡ್ನಿಕಿಂಗ್ ಎಂಬ ಇನ್ನೊಬ್ಬ ಆಫ್ರಿಕನ್ ಅಮೆರಿಕನ್ನನ್ನು ಬಿಳಿಯ ಪೊಲೀಸರು ಥಳಿಸಿದ್ದು, ಬೂಟು ಕಾಲಿನಲ್ಲಿ ಒದ್ದಿದ್ದು ಚಿತ್ರೀಕರಣ ಸಾಕ್ಷ್ಯ ಇದ್ದರೂ ಪೊಲೀಸರಿಗೆ ಶಿಕ್ಷೆಯಾಗಲಿಲ್ಲ. ೨೦೧೨ರಲ್ಲಿ ೧೭ನೇ ವಯಸ್ಸಿನ ಆಫ್ರಿಕನ್ ಅಮೆರಿಕನ್ ಟ್ರೇಯ್‌ವಾನ್ ಮಾರ್ಟಿನ್ ಅನ್ನು ಗುಂಡು ಹಾರಿಸಿ ಕೊಂದ ಪೊಲೀಸನಿಗೂ ಖುಲಾಸೆಯಾಯಿತು. ಮೈಕೇಲ್ ಬ್ರೌನ್ ಪ್ರಕರಣ ಮುಗಿದ ಕೆಲವೇ ದಿನಗಳಲ್ಲಿ ನ್ಯೂಯಾರ್ಕ್ ನಗರದಲ್ಲಿ ಮತ್ತೆ ಆಫ್ರಿಕನ್ ಅಮೆರಿಕನ್ನರು ಬೃಹತ್ ಪ್ರದರ್ಶನ ನಡೆಸಿದರು. ಇದೂ ಕೂಡ ಇನ್ನೊಬ್ಬ ಪೊಲೀಸು ಅಧಿಕಾರಿಯನ್ನು ನಿರಪರಾಧಿ ಎಂದು ಬಿಡುಗಡೆ ಮಾಡಿದ್ದರ ವಿರುದ್ಧ. ಆರು ಮಕ್ಕಳ ತಂದೆ ೪೩ ವಯಸ್ಸಿನ ಎರಿಕ್ ಗಾರ್ನರ್ ಎಂಬಾತನನ್ನು ಉಸಿರುಕಟ್ಟುವಂತೆ ಕುತ್ತಿಗೆ ಹಿಡಿದಿದ್ದ ಪೊಲೀಸು ಅಧಿಕಾರಿ ಡೇನಿಯಲ್ ಪ್ಯಾಂಟೆಲೊ. ಆಫ್ರಿಕನ್ ಅಮೆರಿಕನ್ ಗಾರ್ನರ್ ಎಸಗಿದ್ದ ಅಪರಾಧ ಅಕ್ರಮವಾಗಿ ಸಿಗರೇಟು ಮಾರಾಟ ಮಾಡುತ್ತಿದ್ದ ಎಂಬುದು. ಬಿಳಿ ಪೊಲೀಸನ ಬಿಗಿಹಿಡಿತಕ್ಕೆ ಆತ ಸಾವನ್ನಪ್ಪಿದ್ದ. ಇಂಥ ಪ್ರಕರಣ ಆಗಾಗ ಸಂಭವಿಸುತ್ತಲೇ ಇರುತ್ತವೆ. ಇದು ಜನಾಂಗ ತಾರತಮ್ಯ ಅಲ್ಲದೆ ಮತ್ತಿನ್ನೇನು ? ನ್ಯಾಯಾಲಯಗಳಲ್ಲಿ ಬಿಳಿಯರಿಗೊಂದು, ಕರಿಯರಿಗೊಂದು ನ್ಯಾಯವೆ ಅಮೆರಿಕದಲ್ಲಿ !

* * *

## ಕ್ಯೂಬ–ಅಮೆರಿಕ ಸಂಬಂಧಗಳ ಸುಧಾರಣೆ

ರಾಯಭಾರಿ ಸಂಬಂಧಗಳನ್ನು ಪುನಃ ಸ್ಥಾಪಿಸಲು ಕ್ಯೂಬ ಮತ್ತು ಅಮೆರಿಕಗಳು ಮುಂದಾಗಿರುವುದು ಸ್ವಾಗತಾರ್ಹ ಬೆಳವಣಿಗೆ. ಅರ್ಧ ಶತಮಾನದ ಹಿಂದೆ ಕ್ಯೂಬಾದಲ್ಲಿ ಕ್ರಾಂತಿ ಜರುಗಿ ಫಿಡೆಲ್ ಕ್ಯಾಸ್ಟ್ರೊ ನಾಯಕತ್ವದಲ್ಲಿ ಕಮ್ಯುನಿಸ್ಟ್ ಸರಕಾರ ಸ್ಥಾಪನೆಯಾದ ಮೇಲೆ ೧೯೬೧ರಲ್ಲಿ ಅಮೆರಿಕ ಏಕಪಕ್ಷೀಯವಾಗಿ ರಾಯಭಾರಿ ಸಂಬಂಧಗಳನ್ನು ಸ್ಥಗಿತಗೊಳಿಸಿದ್ದಲ್ಲದೆ ಅದರ ಮೇಲೆ ಆರ್ಥಿಕ ದಿಗ್ಬಂಧನವನ್ನು ಹೊರಿಸಿತು. ತನ್ನ ನೆರೆಯಲ್ಲಿಯೇ ಕಮ್ಯುನಿಸ್ಟ್ ರಾಷ್ಟ್ರವೊಂದರ ಉದಯವನ್ನು ತಾಳದ ಅಮೆರಿಕ ಮೂರನೇ ಜಾಗತಿಕ ಯುದ್ಧ ಪ್ರಾರಂಭಿಸಲೂ ಸಿದ್ಧವಾಗಿತ್ತು ಶೀತಯುದ್ಧ ಉತ್ತುಂಗದಲ್ಲಿದ್ದಾಗ. ಇತಿಹಾಸದಲ್ಲಿ ಅದು ಬೇ ಆಫ್ ಪಿಗ್ಸ್ ಪ್ರಕರಣ ಎಂದು ದಾಖಲಾಗಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಕ್ಯೂಬಾದ ಸರಕಾರವನ್ನು ಪದಚ್ಯುತಗೊಳಿಸಲು, ನಾಯಕ ಫಿಡಲ್ ಕ್ಯಾಸ್ಟ್ರೊನನ್ನು ಕೊಲೆಮಾಡಲು ನಡೆಸಿದ ಪ್ರಯತ್ನಗಳು ಒಂದೆ ಎರಡೇ. ಅವನ್ನೆಲ್ಲ ಇಲ್ಲಿ ಪಟ್ಟಿ ಮಾಡುವುದು ಅನಗತ್ಯ. ಹಲವಾರು ವರ್ಷಗಳಿಂದ ಕ್ಯೂಬಾದ ಮೇಲೆ ವಿಧಿಸಿದ್ದ ಆರ್ಥಿಕ ದಿಗ್ಬಂಧನವನ್ನು ತೆಗೆದುಹಾಕುವಂತೆ ವಿಶ್ವಸಂಸ್ಥೆ ಮಹಾಸಭೆ ಒತ್ತಾಯಪಡಿಸುತ್ತ ಬಂದಿತ್ತಾದರೂ ಅಮೆರಿಕ ಕಡೆಗಣಿಸಿತ್ತು. ಕಳೆದ ವರ್ಷ ಕೂಡ ವಿಶ್ವಸಂಸ್ಥೆಯ ಮಹಾಸಭೆ ಆ ಬಗ್ಗೆ ನಿರ್ಣಯ ಅಂಗೀಕರಿಸಿತ್ತು. ನಿರ್ಣಯದ ವಿರುದ್ಧ ಮತ ಚಲಾಯಿಸಿದ್ದು ಅಮೆರಿಕ ಮತ್ತು ಇಸ್ರೇಲ್ ಮಾತ್ರ.

ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ಕ್ಯೂಬಾದ ಮೇಲೆ ವಿಧಿಸಿದ್ದ ಆರ್ಥಿಕ ದಿಗ್ಬಂಧನದ ವಿಫಲತೆಯನ್ನು ಒಪ್ಪಿಕೊಂಡಿದ್ದಾರೆ. ಮಾತೆತ್ತಿದರೆ ಆರ್ಥಿಕ ದಿಗ್ಬಂಧನ ವಿಧಿಸುವ ಪರಿಪಾಠ ಬೆಳೆದದ್ದೇ ಶೀತಯುದ್ಧದ ಕಾಲದಲ್ಲಿ. ಅಮೆರಿಕ ತನ್ನ ಆರ್ಥಿಕ ಮತ್ತು ಮಿಲಿಟರಿ ಪ್ರಾಬಲ್ಯವನ್ನು ಬಳಸಿಕೊಂಡು ಈ ದಿಗ್ಬಂಧನದ ಅಸ್ತ್ರ ಬಳಸುತ್ತ ಬಂದಿದೆ. ಈಗಲೂ ರಷ್ಯಾದ ಮೇಲೆ ಅದೇ ಪ್ರಯೋಗವನ್ನು ಅಮೆರಿಕ ಮತ್ತು ನ್ಯಾಟೋ ಕೂಟದ ರಾಷ್ಟ್ರಗಳು ಮಾಡಿವೆ. ನಿರರ್ಥಕ ಎಂದು ಸಾಬೀತಾಗಿದ್ದರೂ ಅಮೆರಿಕ ದಿಗ್ಬಂಧನದ ಬೆದರಿಕೆ ಹಾಕುವುದನ್ನು ಮಾತ್ರ ಬಿಟ್ಟಿಲ್ಲ. ಈಗ ಐವತ್ತು ವರ್ಷ ಮುಗಿದ ಮೇಲಾದರೂ ಕ್ಯೂಬಾದ ಮೇಲೆ ವಿಧಿಸಲಾಗಿರುವ ದಿಗ್ಬಂಧನ ತೊಲಗಲಿ. ಆದಷ್ಟು ಬೇಗನೆ. ರಾಯಭಾರಿ ಸಂಬಂಧಗಳನ್ನು ಕ್ಯೂಬಾದೊಂದಿಗೆ ಪುನರ್‌ಸ್ಥಾಪಿಸುವ ಅಮೆರಿಕದ ನಿರ್ಧಾರಕ್ಕೆ ದಕ್ಷಿಣ ಅಮೆರಿಕದ ಈಚಿನ ವರ್ಷಗಳ ಬೆಳವಣಿಗೆಗಳೂ ಕಾರಣವಿರಬಹುದು. ಎಲ್ಲವೂ ಸರಿಯೆ, ಆದರೆ ಅಮೆರಿಕ ಈ ಸಂದರ್ಭದಲ್ಲಿ ಕ್ಯೂಬಾದ ವ್ಯವಸ್ಥೆಯನ್ನು ಬುಡಮೇಲು ಮಾಡಲು ಪ್ರಯತ್ನ ನಡೆಸದಿರಲಿ ಎಂಬ ಎಚ್ಚರಿಕೆ ನೀಡುವುದು ಅಗತ್ಯ. ಕ್ಯೂಬ ಕೂಡ ಎಚ್ಚರಿಕೆ ವಹಿಸುವುದು ಅಗತ್ಯ.

ಸೀಯಾರ್ಕೆ
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ಕುಂ. ವೀರಭದ್ರಪ್ಪ

# ಸವಾರಿ

ಗಗನಚುಂಬಿ ವಸತಿ ಸಂಕೀರ್ಣದಲ್ಲಿದ್ದ ಆ ಗೃಹದ ವೈಶಿಷ್ಟ್ಯವೆಂದರೆ ಅದಕ್ಕೆ ಒಂದೇ ಒಂದು ಕಿಟಕಿ ಇಲ್ಲದಿದ್ದುದು. ಮಾಲಕ ಕಡಿಮೆ ಬಾಡಿಗೆ ನಿಗದಿಪಡಿಸಿದ್ದರೂ ಅದು ಬಹುಕಾಲದವರೆಗೆ ಖಾಲಿ ಉಳಿದಿತ್ತು. ತನ್ನ ಮಾಸಿಕ ಆದಾಯಕ್ಕನುಸಾರವಾಗಿಯೋ, ನನ್ನವರು ತನ್ನವರು ಇಲ್ಲವೆಂಬ ಕಾರಣಕ್ಕೋ, ತನ್ನ ಪ್ರೌಢೋತ್ತರ ಜೀವನಕ್ಕೆ ಬೆಳಕಿನ ಅಗತ್ಯವಿಲ್ಲವೆಂದು ನಿರ್ಧರಿಸಿಯೋ ನಿವೃತ್ತ ವ್ಯಕ್ತಿಯೋರ್ವ ಅದನ್ನು ಬಾಡಿಗೆಗೆ ಹಿಡಿದ. ತನ್ನ ಪೂರ್ವಾಪರ ಹೇಳಿಕೊಳ್ಳದೆ ನಿಗೂಢವಾಗಿ ಉಳಿದ. ಪರಿಚಯ ಹೇಳಿಕೊಳ್ಳುವವರೇ ಅಪರಿಚಿತರಾಗುವವರೆಂದರೆ ಇನ್ನು ತನ್ನ ಕುರಿತು ಕಿಂಚಿತ್ತಾದರೂ ಹೇಳಿಕೊಳ್ಳದ ವ್ಯಕ್ತಿ ಪರಿಚಿತನಾಗುವುದು ಸಾಧ್ಯವೆ! ಎರಡನೆ ಮಹಡಿಯ ಕೂಗಳತೆಯ ಸಹವಾರಿಗೆಯವರೂ, ಕಣ್ಣಳತೆಯ ನೆರೆಹೊರೆಯವರೂ ಆ ವ್ಯಕ್ತಿಯ ಮಾಹಿತಿ ಸಂಗ್ರಹಿಸುವಲ್ಲಿ ವಿಫಲರಾದರು. ಅದಕ್ಕೆ ಕಾರಣ ಆ ವ್ಯಕ್ತಿಯ ನೋಟದಲ್ಲಿದ್ದ ವೈರಾಗ್ಯ, ತನ್ನ ಪಂಚೇಂದ್ರಿಯಗಳ ನಿಗೂಢತೆ.

ಉತ್ತರಗಳಿಲ್ಲದ ಪ್ರಶ್ನೆಗಳೇ ಮೈವೆತ್ತಂತಿದ್ದ ಆತ ತನ್ನ ನಿವಾಸದಿಂದ ಹೊರಬರಲು ಸೂರ್ಯ ಅಸ್ತಮಿಸುವುದನ್ನೇ ಕಾಯುತ್ತಿದ್ದ. ಮಧ್ಯರಾತ್ರಿಯನ್ನೇ ಸಂಜೆ ಎಂದು ಭಾವಿಸುತ್ತಿದ್ದ, ತನ್ನ ನಿವಾಸದಿಂದ ಹೊರಬಂದು ವರಾಂಡದಲ್ಲಿ ತುಸು ಹೊತ್ತು ಪ್ರಶ್ನಾರ್ಥಕ ಚಿಹ್ನೆಯಂತೆ ನಿಲ್ಲುತ್ತಿದ್ದ, ಅಕ್ಕಪಕ್ಕದಲ್ಲಿದ್ದ ಮನೆಗಳ ಕಡೆ ಸ್ಥಿತಪ್ರಜ್ಞನಂತೆ ದೃಷ್ಟಿ ಹಾಯಿಸುತ್ತಿದ್ದ, ನಿಡುಸುಯ್ಯದೆ ಶತಪಥ ಹೆಜ್ಜೆ ಹಾಕುತ್ತಿದ್ದ, ಪುನಃ ತನ್ನ ಮನೆಯನ್ನು ಸೇರಿ ಇದ್ದೊಂದು ಬಾಗಿಲನ್ನು ಮುಚ್ಚಿ ಭದ್ರ ಪಡಿಸುತ್ತಿದ್ದ. ಆದರೆ ಯಾರೊಬ್ಬರೂ ಸೌಜನ್ಯಕ್ಕೆ ಅಥವಾ ತಮ್ಮ ಇರುವಿಕೆಯನ್ನು ಸಾದರಪಡಿಸುವುದಕ್ಕೆ ಆ ನಿವಾಸದ ಮುಚ್ಚಿರುತ್ತಿದ್ದ ಬಾಗಿಲನ್ನು ತಟ್ಟುತ್ತಿರಲಿಲ್ಲವೆನ್ನುವುದು ಎಷ್ಟು ನಿಜವೋ, ಅಂಥ ಕ್ರಿಯೆಯನ್ನು ಆತ ನಿರೀಕ್ಷಿಸುತ್ತಿರಲಿಲ್ಲ ಎನ್ನುವುದು ಸಹ ಅಷ್ಟೇ ನಿಜ.

ಇತರರು ತಾವು ಗಮನಿಸುವುದರ ಮೂಲಕ ತನ್ನ ಪಂಚೇಂದ್ರಿಯಗಳ ಮೇಲೆ ಹತೋಟಿ ಸಾಧಿಸಿದರೆ ತನ್ನ ಅಸ್ತಿತ್ವಕ್ಕೆ ಬೆಲೆ ಎಲ್ಲಿ? ಕಾರಣ ಪಂಚೇಂದ್ರಿಯಗಳಿಗೆ ಪಂಚೇಂದ್ರಿಯಗಳೇ ಪ್ರತಿಸ್ಪರ್ಧಿ, ಬೇರೆಯವರ ಪಂಚೇಂದ್ರಿಯಗಳನ್ನು ತಾನು ನಿರ್ಲಕ್ಷಿಸುವ ರೀತಿಯಲ್ಲಿಯೇ ಇತರರ ಪಂಚೇಂದ್ರಿಯಗಳ ಕುರಿತಂತೆ ತಾನು ಉದಾಸೀನ ಭಾವವನ್ನು ತಳೆಯುವುದು ಮುಖ್ಯ. ತನ್ನ ಪಂಚೇಂದ್ರಿಯಗಳ ಅಹವಾಲನ್ನು ಆಲಿಸುವುದು, ಅವುಗಳ ಸಂವೇದನಾಶೀಲತೆ, ಸೃಜನಶೀಲ ಗುಣವನ್ನು ಪ್ರೋತ್ಸಾಹಿಸುವುದು ತನ್ನ ಕರ್ತವ್ಯ ತಾನೆ! ಹೀಗೆ ಯೋಚಿಸಲಾರಂಭಿಸಿದ ಆ ವ್ಯಕ್ತಿಯೊಳಗಿನ ತೆರೆದ ಕಿಟಕಿಗಳು ಮುಖ್ಯವೇ ಹೊರತು ನಿವಾಸದ ಮುಚ್ಚಿರುವ ಕಿಟಕಿಗಳು ನಗಣ್ಯ. ತನ್ನ ನಯನೇಂದ್ರಿಯಗಳು ಏನನ್ನೋ ನೋಡುತ್ತವೆ, ತನ್ನ ಘ್ರಾಣೇಂದ್ರಿಯ ಏನನ್ನೋ ಆಘ್ರಾಣಿಸುತ್ತದೆ, ತನ್ನ ಚರ್ಮ ಯಾವುದೋ ಸ್ಪರ್ಶದಿಂದ ರೋಮಾಂಚನಗೊಳ್ಳುತ್ತದೆ, ತನ್ನ ಜಿಹ್ವೆ ತಿನಿಸಿನಂಗಡಿಗಳನ್ನು ಕಲ್ಪಿಸಿಕೊಂಡು ಲಾಲಾರಸವನ್ನು ಸ್ರವಿಸುತ್ತದೆ, ತನ್ನ ಶ್ರವಣೇಂದ್ರಿಯಗಳು ಶಬ್ದಾತೀತ ಧ್ವನಿಗಳನ್ನು ಆಲಿಸಿ ಪುಳಕಗೊಳ್ಳುತ್ತವೆ. ಅಷ್ಟೇ ಅಲ್ಲದೆ ತನ್ನ ಕೈಗಳ ಹಾಗೂ ಕಾಲುಗಳ ಚಲನೆಯಂತೂ ಅಲೌಕಿಕವೇ ಸರಿ. ಇಂಥ ಪರಾವರ್ತಿತ ಪ್ರತಿಕ್ರಿಯೆಯನ್ನು ಸದಾ ಅನುಭವಿಸುತ್ತಿದ್ದರೂ ತಾನು ಏಕಾಕಿ, ತನ್ನ ಬದುಕು ಕ್ಲೀಷೆ. ಏಕತಾನತೆಯನ್ನು ನೀಗಿಕೊಳ್ಳಲು ಯಾವುದಾದರೊಂದು ಸೃಜನಶೀಲ ಕ್ರಿಯೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುವುದು ಅಗತ್ಯ. ಈ ಸತ್ಯ ಸಾಕ್ಷಾತ್ಕಾರವಾದ ಮರುಕ್ಷಣ ಹಿಂದೆ ತಾನು ಏನಾಗಿದ್ದೆ, ಮುಂದೆ ತಾನು ಏನಾಗಬೇಕು? ಪ್ರತಿಕ್ಷಣ ತಲ್ಲಣ ಅನುಭವಿಸತೊಡಗಿದ. ತನಗೆ ಮನವರಿಕೆಯಾಗಲಾರಂಭಿಸಿದಂತೆ...

ತಾನು ವಾಸ್ತುಶಿಲ್ಪಿ, ಜೀವನಪರ್ಯಂತ ನಿರ್ಮಿಸಿರುವ ನೂರಾರು ಕಟ್ಟಡಗಳು ದೇಶದಾದ್ಯಂತ ಅಸ್ತಿತ್ವದಲ್ಲಿವೆ, ಅಷ್ಟೇ ಅಲ್ಲದೆ ತಾನು ಸೃಜನಶೀಲ ಕಲಾವಿದ, ತಾನು ರಚಿಸಿರುವ ಸಾವಿರಾರು ಕಲಾಕೃತಿಗಳು ಜಗತ್ತಿನ ಹತ್ತು ಹಲವು ಸಂಗ್ರಹಾಲಯಗಳಲ್ಲಿದ್ದು ಲಕ್ಷೋಪಲಕ್ಷ ಕಲೋಪಾಸಕರ ಮನಸ್ಸನ್ನು



ಆಹ್ಲಾದಗೊಳಿಸುತ್ತಲೇ ಇವೆ, ಹಸ್ತಲಾಘವ ಮಾಡಿದವರ ಲಕ್ಷಾಂತರ ಹಸ್ತಗಳಿಗೆ ತನ್ನ ಹಸ್ತದಲ್ಲಿನ ಅಮೂಲ್ಯ ರೇಖೆಗಳು ವಲಸೆ ಹೋಗಿವೆ, ಕೀರ್ತಿಯಷ್ಟೇ ಸಂಪಾದನೆಯೂ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ತನ್ನಿಂದ ತಾನೂ ತನ್ನವರೂ ಮಳೆಬಿಲ್ಲುಗಳಂತೆ ವಿಕಾಸವಾಗಿದ್ದಾಗಲೀ, ಅವನತಿಯ ಎಳೆವಿಸಿಲಿಗೆ ನೇಪಥ್ಯಕ್ಕೆ ಸರಿದದ್ದಾಗಲೀ ತಡವಾಗಲಿಲ್ಲ. ಆ ವಿಷಾದ ಕ್ಷಣ ಉದಿಸಿದಾದ ಬಳಿಕ ಅದು ಅಸ್ತಮಿಸುವ ಗಳಿಗೆಯ ನಿರೀಕ್ಷೆಯಲ್ಲಿ ತಾನು! ನಿರೀಕ್ಷೆಯ ಬೇಗುದಿಯಿಂದ ಬಿಡುಗಡೆ ಪಡೆಯುವ ಸಲುವಾಗಿ ತಾನು! ಉರಗ ಮೃದ್ವಂಗಿ ಸಹಸ್ರಪದಿ ದ್ವಿಪಾದಿಗಳಿಗಿಂತ ಚತುಷ್ಪಾದಿಗಳು, ಅವುಗಳಲ್ಲಿ ವಿಧ್ವಂಸಕ ಪ್ರವೃತ್ತಿಯ ಮೂಷಕಗಳು ಅಚ್ಚುಮೆಚ್ಚು, ಅದೂ ಕಾಲ್ಪನಿಕವಾಗಿ. ಯೋಚಿಸಲಾರಂಭಿಸಿದ ಬೆನ್ನಲ್ಲಿಯೇ ಮೂಷಿಕವೊಂದು ತನ್ನ ಮನಸ್ಸಲ್ಲಿ ಕಾಣಿಸಿಕೊಂಡಿತು, ಹೇಗಾದರೂ ತನಗೊಂದು ರೂಪ ಕರುಣಿಸುವಂತೆ ಪ್ರಾರ್ಥಿಸಿತು. ಹೇಗೋ ತನಗೆ ಚಿತ್ರಕಲೆ ತಿಳಿದಿತ್ತಲ್ಲವೆ! ಅದಕ್ಕೆ ಪೂರಕವಾಗಿ ತನ್ನ ಕೈಗೆಟುಕುವ ರೀತಿಯಲ್ಲಿ ಚಿತ್ರಕಲೆ ರಚನೆಗೆ ಸಂಬಂಧಿಸಿದ ಪರಿಕರಗಳಿಗೆ ಬರವಿರಲಿಲ್ಲ. ಅತ್ಯುತ್ತಮ ಕ್ಯಾನ್ವಾಸ್ ಹೋಲುವ ಗೋಡೆಗಳಂತೂ ತನ್ನ ಸುತ್ತಲಿದ್ದವು. ಘನೀಭವಿಸಿದ್ದ ಬಣ್ಣಕ್ಕೆ ನೀರು ಬೆರೆಸಿ ಹದಮಾಡಿದ್ದಲ್ಲದೆ ತನ್ನ ಬಲಗೈಗೆ ಬ್ರಷ್ ಎತ್ತಿಕೊಂಡ. ಒಂದರೆಗಳಿಗೆ ಕಣ್ಣು ಮುಚ್ಚಿ ಧೇನಿಸತೊಡಗಿದೊಡನೆ ಮೂಷಿಕ ಕಲ್ಪನೆಯಲ್ಲಿ ರೂಪಗೊಂಡಿತು. ಎಂದೋ ನೋಡಿದ್ದು ಕಲ್ಪನೆಗೆ ಸಹಕರಿಸಿತು. ಅಂದಮೇಲೆ ಕೇಳುವುದೇನಿದೆ? ತನಗೆ ಅಭಿಮುಖವಿದ್ದ ಗೋಡೆ ಮೇಲೆ ಮೂಷಿಕದ ಚಿತ್ರವನ್ನು ರಚಿಸಲು ತಾನು ತೆಗೆದುಕೊಂಡ ಸಮಯ ಕೆಲವು ನಿಮಿಷಗಳು ಮಾತ್ರ, ಅದೂ ಕ್ರಿಯಾಶೀಲ ಭಂಗಿಯಲ್ಲಿ.

ನಿಗುರಿರುವ ಕಿವಿಗಳು, ತ್ರಿಕೋಣಾಕೃತಿಯ ಮೂತಿ, ಸ್ವಲ್ಪವೇ ತೆರೆದಿರುವ ಬಾಯಿ, ಬಾಯಿಯೊಳಗೆ ಕೋರೈಸುವ ಒಂದೆರಡು ಹಲ್ಲುಗಳು, ಇಕ್ಕೆಲದಲ್ಲಿ ಕಂಪಿಸುವ ಒಂದೆರಡು ಮೀಸೆಯ ಕೂದಲು, ಸಬೂಳನೆ ದೇಹ, ಕಟ್ಟಕಡೆಗೆ ಅದೇ ತಾನೆ ಚಲನೆಯನ್ನು ಸ್ಥಗಿತಗೊಳಿಸಿರುವ ಬಾಲ. ಕಾಲುಗಳಂತೂ ಸರೇ ಸರಿ. ವಿವಿಧ ಭಂಗಿಯಲ್ಲಿ ನಿಂತು ವೀಕ್ಷಿಸಿದ. ತನ್ನ ಸೃಜನಶೀಲತೆಯನ್ನು ತಾನೇ ಶ್ಲಾಘಿಸಿಕೊಳ್ಳುವುದನ್ನು ಮರೆಯಲಿಲ್ಲ. ಮರುಕ್ಷಣ ಏನು ಯೋಚಿಸಿದನೆಂದರೆ! ಅರೆ ತಾನು ರಚಿಸಿರುವ ಇಲಿ ಗಂಡೋ ಹೆಣ್ಣೋ! ತನಗೆ ತಿಳಿದಿರುವಂತೆ ಚತುಷ್ಪಾದಿಗಳ ಪೈಕಿ ಗಂಡೂ ಹೆಣ್ಣುಗಳೆರಡಕ್ಕೂ ಮೀಸೆ ಇರುವುದು ಮಾಮೂಲು, ಕಲಾವಿದನಾದ ತಾನೂ ಮೊದಲಿನಿಂದಲೂ ಪುರುಷ ಪಕ್ಷಪಾತಿ, ಅದು ತನ್ನ ಪತ್ನಿ ಮಾಡುತ್ತಿದ್ದ ಪ್ರಧಾನ ಆರೋಪ. ಆದ್ದರಿಂದ ಸಹಜವಾಗಿ ತಾನು ರಚಿಸಿರುವುದು ಗಂಡು ಮೂಷಿಕವೇ! ತನ್ನ ವೇದನೆ ಅದರದ್ದಾಗ ಬಾರದು ಎಂದು ಹೊಳೆದದ್ದೇ ತಡ ಚಾರ್‌ಕೋಲ್ ಪೆನ್ಸಿಲ್ ಕೈಗೆತ್ತಿಕೊಂಡು ಗೋಡೆ ಕಡೆ ನಡೆದ. ಅದಕ್ಕಭಿಮುಖವಾಗಿ ಇನ್ನೊಂದು ಇಲಿಯ ಚಿತ್ರವನ್ನು ರಚಿಸಿದ. ಅದಾದ ಬಳಿಕ ವಿವಿಧ ದೂರಗಳಲ್ಲಿ ನಿಂತು ಅವೆರಡನ್ನೂ ಏಕಕಾಲಕ್ಕೆ ದಿಟ್ಟಿಸಿದ. ಅವೆರಡರ ಪೈಕಿ ಯಾವುದು ಗಂಡೋ ಯಾವುದು ಹೆಣ್ಣೋ! ಚಿತ್ರರೂಪಿ ಅವುಗಳ ದೇಹಗಳಲ್ಲಿ ಜನನಾಂಗಗಳು ಇರುವುದೇನೋ ನಿಜ, ಆದರೆ ಅದನ್ನು ತನ್ನಿಂದ ಗುರುತಿಸುವುದಾಗಲಿಲ್ಲ. ಮೇರೆ ಮೀರಿದ ಕಲ್ಪನೆಯೋ, ದೃಷ್ಟಿ ದೋಷವೋ! ಅವೆರಡೂ ಪರಸ್ಪರ ಸಮೀಪಿಸಿದಂತೆ, ಸಂಧಿಸಿದಂತೆ ಭಾಸವಾಯಿತು. ಅವೆರಡೂ ಇನ್ನೂ ಸಮೀಪಿಸಿ ಮಿಲನ ಮಧುಚಂದ್ರ ಆಚರಿಸಿಕೊಂಡರೆ ತನ್ನ ಮನೆ ಪಾವನ!

ಹೇಗೋ ಸ್ವಲ್ಪ ಹೊತ್ತಿನ ಹಿಂದೆ ಮಾಡಿರಿಸಿದ್ದ ಅಡುಗೆ ಇತ್ತಲ್ಲವೆ! ಜಠರದ ಹಸಿವು ತಣಿಸಲೆಂದು ಅಗತ್ಯಕ್ಕಿಂತ ತುಸು ಹೆಚ್ಚಾಗಿಯೇ ಭುಂಜಿಸಿ ಮಲಗಿದ, ಗಾಢ ನಿದ್ದೆಗೆ ಜಾರಿದ. ವಾಸ್ತವವಾಗಿ ಅದು ಗಾಢ ನಿದ್ರೆಯಾಗಿರದೆ ಕನಸು ಕನವರಿಕೆಗಳ ಆಡುಂಬೊಲವಾಗಿತ್ತು. ಚತುಷ್ಪಾದಿಗಳು ಹೊದ್ದಿದ್ದ ದುಪ್ಪಟಿಯನ್ನು ಪ್ರವೇಶಿಸಿ ಕಿರುಕುಳ ನೀಡುತ್ತಿರುವಂತೆ, ಮನೆಯ ಮೂಲೆಮೂಲೆಯನ್ನು ಜಾಲಾಡುತ್ತಿರುವಂತೆ, ಸಿಕ್ಕಸಿಕ್ಕ ವಸ್ತುಗಳ ಮೇಲೆ ದಾಳಿ ಮಾಡುತ್ತಿರುವಂತೆ ಭಾಸವಾಯಿತು. ಕಣ್ಣುಮುಚ್ಚಿ ನೋಡುತ್ತಾನೆ, ಅವು ವಿಧ್ವಂಸಕ ಪ್ರವೃತ್ತಿಯ ಮೂಷಿಕಗಳು. ತನ್ನ ಚಿತ್ರ ಜೀವತಳೆಯುವುದೆಂದರೆ! ಸೃಷ್ಟಿಸಿದವನಿಗೇ ಪರಿಪರಿಯಿಂದ ಕಿರುಕುಳ ಕೊಡುವುದೆಂದರೆ! ಅವುಗಳನ್ನು ನಿವಾರಿಸುವಷ್ಟು ಚೈತನ್ಯ ತನ್ನ ಶರೀರದಲ್ಲಾಗಲೀ ಶಾರೀರದಲ್ಲಾಗಲೀ ಇಲ್ಲ. ಅದೂ ಅಲ್ಲದೆ ಮನೆಯಲ್ಲಿನ ವಸ್ತುಗಳೋ ಬೆರಳೆಣಿಕೆಯಷ್ಟು, ಆದರೆ ಮನಸ್ಸಿನಲ್ಲಿರುವ ವಸ್ತುಗಳೋ ಅಸಂಖ್ಯಾತ.

ಆದರೆ ಚಾಲಾಕಿ ಮೂಷಿಕಗಳು ಆತನ ಊಹೆಗೆ ನಿಲುಕದ ರೀತಿಯಲ್ಲಿದ್ದವು. ವಸ್ತುಗಳು ಇರುವುದು ತನ್ನ ಮನಸ್ಸಿನಲ್ಲಿ. ಆದರೆ ಅದು ಹಲವು ನಿಮಿಷಗಳ ಕಾಲ ತನ್ನನ್ನು ಗೋಳಾಡಿಸಿದ್ದೂ ಅಲ್ಲದೆ ದೇಹದ ಯಾವುದೋ ಒಂದು ರಂಧ್ರದ ಮೂಲಕ ತನ್ನ ದೇಹವನ್ನು ಪ್ರವೇಶಿಸುತ್ತಿರುವಂತೆಯೂ, ಜಠರದಲ್ಲಿನ ಆಹಾರ ಸೇರಿದಂತೆ ಉಳಿದೆಲ್ಲವನ್ನೂ ಕಬಳಿಸುತ್ತಿರುವಂತೆಯೂ! ನಿರಂತರ ಕಬಳಿಕೆಯಿಂದಾಗಿ ತನ್ನ ದೇಹ ನಿತ್ರಾಣವಾಯಿತು. ವಿಧ್ವಂಸಕ ಪ್ರವೃತ್ತಿಗೂ ಕೃತಘ್ನತೆಗೂ ಸಂಬಂಧ ಇರಬಹುದೆಂದು ಭಾವಿಸಿದ. ಅದು ಅನಿರ್ವಚನೀಯ ಕಿರುಕುಳವೋ, ವಿಲಕ್ಷಣ ಸುಖವೋ! ಮಂಪರು ಆವರಿಸಿತು, ನಿದ್ದೆ ಹೋದ.

ಚಿತ್ರರೂಪಿ ಮೂಷಿಕಗಳಿಗೆ ತಕ್ಕಶಾಸ್ತಿ ಮಾಡುವ ಮೂಲಕ ದಿನಚರಿಯನ್ನು ಆರಂಭಿಸಬೇಕೆಂದು ಆತ ನಿರ್ಧರಿಸಿದ್ದು ಬೆಳಗಿನ ಅರೆಜಾಗರದಲ್ಲಿ. ಎಚ್ಚರದ ಆತ್ಮ ನಿದ್ದೆಯೋ, ನಿದ್ದೆಯ ಆತ್ಮ ಎಚ್ಚರವೋ! ಅಂತೂ ಎಚ್ಚರಗೊಂಡ, ಉಜ್ಜಿಕೊಂಡಾದ ಬಳಿಕ ಕಣ್ಣಿಗೆಡ್ಡವಾಗಿ ಚಾಳೀಸು ಧರಿಸಿದ, ಅಸಂಖ್ಯಾತ ಮೂಷಿಕಗಳ ಮಲದ ಕಣಗಳಿಂದ ಹಾಸಿಗೆ ಮಲಿನವಾಗಿತ್ತು, ಮೃಗಾಲಯದ ದುರ್ವಾಸನೆ ಹಾಸಿಗೆಯಲ್ಲೊಂದೇ ಅಲ್ಲದೆ ತನ್ನ ದೇಹದಲ್ಲೂ, ತನ್ನ ಅಂತರಂಗದಲ್ಲೂ! ಕಂಪಿಸುತ್ತಿದ್ದ ಕೈಗಳಲ್ಲಿ ಡಸ್ಟರ್ ಹಿಡಿದುಕೊಂಡ. ಕಾಲುಗಳು ನಡುಗುತ್ತಿದ್ದರೂ ಲೆಕ್ಕಿಸದೆ ಗೋಡೆಯ ಪರಿಮಳವನ್ನು ಆಘ್ರಾಣಿಸುತ್ತ ಸಮೀಪಿಸಿದ ಚಿತ್ರಗಳತ್ತ ತೀಕ್ಷ್ಣನೋಟ ಬೀರಿದ. ಮೂಷಿಕಗಳು ತಮ್ಮನ್ನು ಅಳಿಸಿದಿಯಾದರೆ ರೌರವ ನರಕ ಕಾದಿದೆ ಎಂದು ಹೇಳಿದಂತೆ ಭಾಸವಾಯಿತು. ತನ್ನ ಕಿಬ್ಬೊಟ್ಟೆಯಲ್ಲಿ ಮಲಗಿದ್ದ ತಾಯಿ ಸಹ ಎಚ್ಚರಗೊಂಡಳಲ್ಲದೆ ತಾನಿರುವುದರಿಂದಾಗಿಯೇ ಆ ಚಿತ್ರಗಳನ್ನು ರಚಿಸಿದ್ದೆಂದೂ, ಅವುಗಳನ್ನು ಕಲಾವಿದನಾದವ ಅಳಿಸಿದರೆ ಶಿಶುಹತ್ಯೆ ದೋಷಕ್ಕೆ ಗುರಿಯಾಗುವುದಾಗಿ ಎಚ್ಚರಿಸಿದಳು. ಕೂಸುಗಳೇ ಹೆತ್ತ ತನ್ನನ್ನು ಶೋಷಿಸುವುದು ಸರಿಯೇ ಎಂದು ಕೇಳಿದ, ಅದಕ್ಕೆ ಸಮಾಧಾನ ನೀಡಲು

ತನ್ನೊಡಲು ತಡಕಾಡಿತು. ತನ್ನ ದಿನಚರಿಯ ನೆಮ್ಮದಿ ಮುಖ್ಯವೆಂದೆನ್ನಿಸಿ ಚಿತ್ರಗಳನ್ನು ಅಳಿಸಲು ನಿರ್ಧರಿಸಿ ಕಾರ್ಯೋನ್ಮುಖನಾದ.

ಎಷ್ಟೇ ಪ್ರಯತ್ನಿಸಿದರೂ ಮೂಷಿಕ ಚಿತ್ರಗಳನ್ನು ಅಳಿಸುವುದು ತನ್ನಿಂದ ಸಾಧ್ಯವಾಗಲೇ ಇಲ್ಲ. ಅಳಿಸಲಾಗದ ಅಸಹಾಯಕತೆ ಉದ್ವಿಗ್ನತೆಯನ್ನು ಸೃಷ್ಟಿಸಿತು, ಉದ್ವಿಗ್ನತೆ ತನ್ನ ದಿನಚರಿಯನ್ನು ಅಸ್ತವ್ಯಸ್ತಗೊಳಿಸಿದ ಪರಿಣಾಮವಾಗಿ ಪ್ರಸ್ವಗೊಳ್ಳಲಾರಂಭಿಸಿದ. ಆ ಚಿತ್ರಗಳನ್ನು ಗೋಡೆಯಿಂದ ಅಳಿಸುವ ಬಗೆ ಕುರಿತಂತೆ ಹಲವು ತಾಸುಗಳ ಪರ್ಯಂತ ಯೋಚಿಸಿದ್ದು ಮಾರ್ಜಾಲದ ರೂಪದಲ್ಲಿ ಆವಿರ್ಭವಿಸಿತು. ವಿಳಂಬಿಸಿದರೆಲ್ಲಿ ತನ್ನ ಮನಸ್ಸಿನಿಂದ ಮಾರ್ಜಾಲ ಅಂತರ್ಧಾನವಾಗುವುದೋ !

ಆ ನಿರ್ಧಾರಕ್ಕೆ ಬಂದಾಗ ಸೂರ್ಯಾಸ್ತವಾಗಿತ್ತಲ್ಲದೆ ಸಂಕಷ್ಟಚತುರ್ಥಿಯ ಚಂದಿರನ ಬೆಳಕು ಬೀದಿ ದೀಪದ ಬೆಳಕಿನಲ್ಲಿ ಸಮ್ಮಿಶ್ರಣಗೊಂಡು ಗೋಡೆ ಮೇಲಿದ್ದ ಚಿತ್ರಗಳ ಮೇಲೆ ಪ್ರತಿಫಲಿಸಿತ್ತು. ಅವುಗಳನ್ನು ನೋಡಿದೊಡನೆ ತನ್ನೊಳಗಿನ ಮಾರ್ಜಾಲ ರಣಕೇಕೆ ಹಾಕಲಾರಂಭಿಸಿತು, ತನ್ನ ಅಚಲ ನಿರ್ಧಾರ ದಲ್ಲಿದ್ದ ತಮ್ಮ ಮೃತ್ಯುವನ್ನು ಗುರುತಿಸಿದ ಮೂಷಿಕಗಳೆರಡೂ ರಚಿಸದಿರಲು ಪ್ರಾರ್ಥಿಸುತ್ತಿರುವಂತೆ ಭಾಸವಾಯಿತು. ಉಭಯ ಸಂಕಟ ತೀರುವ ಮುನ್ನವೇ ತನ್ನ ಸೃಜನಶೀಲತೆಯನ್ನು ಸಾಕಾರಗೊಳಿಸಬೇಕೆಂದು ನಿರ್ಧರಿಸಿ ಪರಿಕರಗಳೊಂದಿಗೆ ಗೋಡೆಯನ್ನು ಆತುರತೆಯಿಂದ ಸಮೀಪಿಸಿ ಸಕ್ರಿಯನಾದ. ಮಾರ್ಜಾಲದ ಕಣ್ಗಾವಲು ತನ್ನ ಉದ್ದೇಶವೇ ಹೊರತು ಹಿಂಸೆಯಲ್ಲವೆಂದು ಗೊಣಗುತ್ತ ಮೂಷಿಕ ಚಿತ್ರಗಳಿದ್ದ ಗೋಡೆಯ ಮೇಲ್ಭಾಗದಲ್ಲಿ ರೇಖಿಸುವ ಕಾಯಕಕ್ಕೆ ತೊಡಗಿದ.

ಪ್ರಯತ್ನಕ್ಕೆ ಆರಂಭಿಸಿ ಆರೇಳು ನಿಮಿಷಗಳಲ್ಲಿ ಚಿತ್ರ ಗೋಡೆ ಮೇಲೆ ಮೂಡಿತು. ವಿವಿಧ ಕೋನಗಳಲ್ಲಿ ನಿಂತು ನೋಡಿದ. ಊರಿರುವ ಮುಂಗಾಲುಗಳು, ಬಿಲ್ಲಿನಾಕಾರದ ಬಾಯಿ, ಎಡಬಲಕ್ಕೆ ಚಿಮ್ಮಿರುವ ಮೀಸೆ, ನಿಗುರಿರುವ ಕಿವಿಗಳು, ಕೆಕ್ಕರಿಸುತ್ತಿರುವ ಕಣ್ಣುಗಳು. ನೆಮ್ಮದಿಗೆ ಭಂಗವೊದಗದಂತೆ ನೋಡಿಕೊಳ್ಳುವುದು ತನ್ನ ಕರ್ತವ್ಯವೆಂದು ಭರವಸೆ ನೀಡುತ್ತಿರುವಂಥ ಮುಖಭಾವ. ತನ್ನಂಥ ನಿವೃತ್ತ ಕಲಾವಿದನಿಗೆ ಇದಕ್ಕಿಂತ ಇನ್ನೇನು ಬೇಕು !

ನಿರುಮ್ಮಳತೆಯಿಂದ ವೈಯಕ್ತಿಕ ಕಾರ್ಯಗಳನ್ನು ಪೂರೈಸಿದ. ಮಲಗುವ ಪೂರ್ವದಲ್ಲಿ ಮೂಷಿಕ ಹಾಗೂ ಮಾರ್ಜಾಲದ ಚಿತ್ರಗಳನ್ನು ಅಭಿಮಾನದಿಂದ ಆಸ್ವಾದಿಸಿದ. ಕಳೆದ ರಾತ್ರಿಯ ದುಃಸ್ವಪ್ನ ಮರುಕಳಿಸಲಿಲ್ಲ ತನ್ನ ಪುಣ್ಯಕ್ಕೆ. ಎರಡು ವರ್ಷಗಳ ಹಿಂದೆ ಸೊಸೆಯ ಚೊಚ್ಚಿಲ ಹೆರಿಗೆ ಮಾಡಿಸಲೆಂದು ಅಮೆರಿಕಾಕ್ಕೆ ಹೋಗಿ ಅಲ್ಲಿಯೇ ಉಳಿದು ಮನೆಕೆಲಸದವಳಾಗಿರುವ ತನ್ನ ಪತ್ನಿಯೂ, ಇಳಿವಯಸ್ಸಿನಲ್ಲೂ ಹೆಂಡತಿ ಏಕೆ ಎಂದು ಪ್ರಶ್ನಿಸಿದ ಮಗನೂ, ಕಾಲ್ಪನಿಕ ಮೊಮ್ಮಕ್ಕಳೂ, ತನ್ನ ಪೂರ್ವಾಶ್ರಮದ ಜೀವನಸಂಧ್ಯಾ, ನಿಶ್ಚಿತ ಠೇವಣಿಗಳನ್ನು

# ಬದುಕಿನ ಬೇರು



ಇಅ ಬೆಕ್ಕು ನಾಯಿ
ಒಂದಿನ್ನೊಂದರ ಶಿಕಾರಿಗಾಗಿ
ಹಾತೊರೆವುದಿಲ್ಲ ತೆರೆತೆರೆದು ಬಾಯಿ !
ಇತ್ತ ಮನುಜ ಲೋಕದಲಿ
ಯಾವುದೊಂದು ಮೂಲೆಯಲಿ
ಅನುದಿನದ ದನಿಯೊಂದು ಮಾರ್ದನಿಸುತಿದೆ:
'ಈ ಕಸಾಯಿಖಾನೆಯಲಿ
ನೀನು ಸಜ್ಜನನಾಗಿ ಬಹುಕಾಲ ಬದುಕಿರಲಾರೆ
ಸುಮ್ಮನೇ ಬೇಗ ಸಾಯಿ !
ಸಾಯಿ ಸಾಯಿ ಸಾಯಿ !!'
ಜಿಗುಟು ಜೀವ ಸಿಡಿದೇಳುವುದು :
'ಇಲ್ಲ !
ನಾನು ಬೇಗ ಸಾಯುವುದಿಲ್ಲ !
ಸಹಜ ಸಾವು ಬರುವನಕ
ಬದುಕಿರುವ ಬಲವಿರುವನಕ
ಛಲ ಬತ್ತದಿರುವನಕ
ಮನುಜ ಸಾಯುವುದಿಲ್ಲ !'

ಸಾಯಿಯೆಂದರೆ ಯಾರೋ
ಸುಮ್ಮನೇ ಯಾರೂ ಸಾಯುವುದಿಲ್ಲ !
ನಿಮ್ಮವರ ನೀವೆ
ಕೊಲ್ಲುವವಸರವೇಕೆ ಸಹಜೀವಿಗಳಿರಾ ?
ಹೊರಗಿನಾದೇಶಕ್ಕೆ ಹೊರಟು ಹೋಗುವುದಕ್ಕೆ
ಈ ಜೀವ ಜಗಕಿಳಿದು ಬರಲಿಲ್ಲ
ಬಂದವರ 'ಮಣಿಹ' ತೀರುವ ತನಕ
ಯಾರೂ ಜಾಗ ಖಾಲಿ ಮಾಡುವುದಿಲ್ಲ !

ಮನುಷ್ಯನ ಕೊಲ್ಲಬಯಸುವರೆಂಥ ಮನುಷ್ಯರು ?
ಮನುಷ್ಯರೆನಿಸಿದರೂ ಮನುಷ್ಯರಲ್ಲದವರು !
ಮನುಷ್ಯರಾಗಲಿಕೊಲ್ಲದವರು !
ಪರರ ನಿರ್ಗಮನದತ್ತಲೇ ಸದಾ
ಗಮನ ಹರಿಸುವವರು !
ಮನುಜನಸ್ತಿತ್ವದ ಮಹತಿಯರಿಯದೆ
ಕೋವಿಯ ಗುಂಡು ಹಾರಿಸಲೆಂದು
ಕಾಡುಗೈ ತುರಿಸುವವರು !

ಕೊಲುವ ಭಾಷೆಯ ಎದುರು
ಗೆಲುವ ಭಾಷೆಯನೆ ಬಲವಾಗಿ ನಂಬಿ
ಬದುಕಿರುವ ಧೀರಸಂಕಲ್ಪ ನಿಂತೀತು
ನಾಳಿನ ತಲೆ
ಮಾರಿಗೊಂದು ಸರಿ ಮಾದರಿಯ ಬಗೆಯಾಗಿ !
ಸುಮ್ಮಸುಮ್ಮನೆ ಯಾರೂ
ಸಾವಿನ ದವಡೆಗೆ ಸಿಲುಕದ ಹಾಗೆ
ಎಚ್ಚರಿಕೆ ನೀಡುವುದು ನಿಜದ ಬದುಕು :
ನಿನಗಾಗಿ ಕಾಯುತಿರೆ ಜೀವಚೈತನ್ಯದ ತೇರು
ಅದನೆಳೆಯಲು ಕೊನೆತನಕ ಬದುಕು
ಎಂದು ಮನುಜನ ಹುರಿದುಂಬಿಸುವುದು
ನೆಲದ ಘನಸತ್ವವನು ಹೀರಿ ಬಲಗೊಳ್ಳುವೊಲು
ಅವನ ಬದುಕಿನ ಬೇರು !

ಡಾ॥ ಬಿ. ಎ. ಸನದಿ
'ಮಿಲನ', ವಿನಾಯಕ ಸಾ ಮಿಲ್ ಎದುರು, ಹೆರವಟ್ಟ,
ಕುಮಟಾ, ಉತ್ತರ ಕನ್ನಡ ಜಿಲ್ಲೆ – 581 332



* * *

ಇರಿಸಿಕೊಂಡು ಮಾಸಿಕವಾಗಿ ಬಡ್ಡಿ ಸಂದಾಯ ಮಾಡುತ್ತಿರುವ ಬ್ಯಾಂಕುಗಳೂ, ವಾನಪ್ರಸ್ಥಾಶ್ರಮ ಗಳಂಥ ನಗರಪಾಲಿಕೆಯ ಉದ್ಯಾನಗಳೂ, ದೈಹಿಕ ಚಟುವಟಿಕೆಗಳನ್ನು ಒಂದೊಂದಾಗಿ ಉಪಸಂಹರಿಸಿ ಕೊಳ್ಳುತ್ತಿರುವ ಕಾಯಿಲೆಗಳೂ, ಬೀರುವಿನಲ್ಲಿರುವ ಔಷಧ ಮಾತ್ರೆಗಳೂ ಮುಚ್ಚಿದ್ದ ರೆಪ್ಪೆಯ ಪೇರೇಡ್ ಮೈದಾನದಲ್ಲಿ ಎಂದಿನಂತೆ ಕವಾಯತು ಮಾಡಿ ನಿರ್ಗಮಿಸಿದ ಬಳಿಕ ನಿಧಾನವಾಗಿ ನಿದ್ದೆ ಒಲಿಯಿತು.

ಎಚ್ಚರಗೊಳ್ಳುವ ಪೂರ್ವದಲ್ಲಿ ಕಿಟಕಿಯ ಸಂದು ಗಳಿಂದ ಬೆಳಕಿನ ಕೋಲುಗಳು ಹಾಯ್ದು ಮನೆಯ ಒಳ ಆವರಣವನ್ನು ನಿಚ್ಚಳಗೊಳಿಸಿದ್ದವು. ತಾನು ನಿಷೇಧಿಸಿದ್ದ ಹಾಲು, ವೃತ್ತಪತ್ರಿಕೆ ವಿತರಕರು ಸಂಬಂಧವಾಚಕಗಳನ್ನು ಪ್ರಯೋಗಿಸುತ್ತಿದ್ದುದು ಸ್ಪಷ್ಟವಾಗಿ ಕೇಳಿಸಿತು. ವೈದ್ಯರ ಸಲಹೆಗಳನ್ನು ಸ್ಮರಿಸಿ ಕೊಳ್ಳುತ್ತ ಎದ್ದು ಕೂತ. ಎಡ ಅಂಗೈಯ ತುರಿಕೆಯನ್ನು ಬಲಗೈಯಿಂದಲೂ, ಬಲ ಅಂಗೈಯ ತುರಿಕೆಯನ್ನು ಎಡಗೈಯಿಂದಲೂ ತುರಿಸಿಕೊಳ್ಳುತ್ತ ಕಣ್ಣರಳಿಸಿದ. ಏನನ್ನೋ ನೆನಪಿಸಿಕೊಂಡು ಕತ್ತೊರಳಿಸಿ ನೋಡಿದ ಗೋಡೆ ಕಡೆ. ನಂಬಿಕೆ ಸಾಲದಾಯಿತು. ಪುನಃ ಕಣ್ಣುಜ್ಜಿಕೊಂಡು ನೋಡಿ ದಿಗ್ಭ್ರಮೆಗೀಡಾದ. ಕಾರಣ ಮಾರ್ಜಾಲವಿತ್ತೇ ಹೊರತು ಮೂಷಿಕಗಳಿರಲಿಲ್ಲ. ಅದೇನಾದರೂ ಅವುಗಳನ್ನು! ಒಂದು ಕ್ಷಣ ಗಾಬರಿ ಗೊಂಡು ಪುನಃ ಚೇತರಿಸಿಕೊಂಡ. ಕಾರ್ಯ ಕಾರಣಕ್ಕಿಂತ ಮುಖ್ಯವಾಗಿ ವಿಧ್ವಂಸಕ ಶಕ್ತಿಗಳು ನಾಶವಾದವಲ್ಲ, ತನಗದೇ ಸಾಕು ಎಂದು ಭಾವಿಸಿ ನೆಮ್ಮದಿಯ ಉಸಿರು ಚೆಲ್ಲಿ ಕೃತಜ್ಞತೆಯಿಂದ ಮಾರ್ಜಾಲದ ಕಡೆ ನೋಡಿದ.

ಆದರೆ ಆ ರಾತ್ರಿಯ ನೆಮ್ಮದಿಯನ್ನು ಮಾರ್ಜಾಲದ ಕರ್ಕಶ ಕೂಗು ಆಪೋಶನ ತೆಗೆದು ಕೊಂಡಿತು. ಆ ಅರಚುವಿಕೆಯ ನೇಪಥ್ಯದಲ್ಲಿ ಆಹಾರದ ಹಂಬಲ ತೀವ್ರವಾಗಿತ್ತು. ಆದರೆ ಅದನ್ನು ತೀರಿಸುವ ಬಗೆ! ಪಾತ್ರೆಯನ್ನು ಚಿತ್ರಿಸಬಹುದೇ ವಿನಾ ಹಾಲನ್ನು ಚಿತ್ರಿಸುವುದು ತನ್ನಿಂದಾಗದು. ಹೀಗೆ ಮಾಡಿದರೆ ಹೇಗೆ ಎಂದು ಯೋಚಿಸಿ ಕಾರ್ಯಪ್ರವೃತ್ತನಾದ. ಮಲಗುವ ಮೊದಲು ಒಂದಕ್ಕಿಂತ ಹೆಚ್ಚು ಮೂಷಿಕಗಳ ಚಿತ್ರಗಳನ್ನು ಸರಬರಾಜು ಮಾಡುತ್ತ ಅದರ ಕ್ಷುದ್ಬಾಧೆ ತಣಿಸ ಲಾರಂಭಿಸಿದ. ದಿನಗಳುರುಳಿದಂತೆ ಅದೂ ತನಗೆ ಬೇಸರವನ್ನುಂಟುಮಾಡಿತು. ಮುಂದೊಂದು ದಿವಸ...

ಮಾರ್ಜಾಲವನ್ನು ನಿವಾರಿಸುವುದೇ ಒಳಿತೆಂದು ನಿರ್ಧರಿಸಿ ಏನು ಮಾಡಿದನೆಂದರೆ ಭಿತ್ತಿಯ ಇನ್ನೊಂದು ಪಾರ್ಶ್ವದಲ್ಲಿ ವ್ಯಾಘ್ರದ ಚಿತ್ರ ರಚಿಸಿದ. ನಿರೀಕ್ಷಿಸಿದಂತೆ ವ್ಯಾಘ್ರ ಮಾರ್ಜಾಲವನ್ನು ಬಲಿ ತೆಗೆದುಕೊಂಡಿತು. ವ್ಯಾಘ್ರದ ಹಸಿವು ತೀರಿಸುವುದು ಅದರ ಸೃಷ್ಟಿಕರ್ತನಾದ ತನ್ನ ಹೊಣೆ ಎಂದು ಭಾವಿಸಿದ. ವೃದ್ಧಾಪ್ಯದ ಕಾಲಕ್ಷೇಪಕ್ಕೆ ಇದೊಂದು ಉತ್ತಮ ಅವಕಾಶವೆಂದು ಪರಿಗಣಿಸಿದ. ಕತ್ತೆ, ಕುದುರೆ, ಮೊಲ, ಜಿಂಕೆ! ಹೀಗೆ ದಿನಕ್ಕೊಂದೊಂದು ಚಿತ್ರವನ್ನು ಅದರ ಒಡಲಿಗೆ ರವಾನಿಸಲಾರಂಭಿಸಿದ. ಅದು ಎಷ್ಟು ಗುಟ್ಟಾಗಿ ಎಂದರೆ ನೆರೆಹೊರೆ ಯವರಿಗೆ ಒತ್ತಟ್ಟಿಗಿರಲಿ, ಅಂತರಂಗದಲ್ಲಿದ್ದ ನಿಕಟವರ್ತಿಗಳಿಗೂ ತಿಳಿಯದಂತೆ ಎಚ್ಚರವಹಿಸಿದ.

ಹೀಗೆ ದಿನಗಳು ವಾರಗಳು ತಿಂಗಳುಗಳು ಉರುಳಿದವು. ಸಸ್ಯಾಹಾರಿ ಪ್ರಾಣಿಗಳನ್ನು ಪೂರೈಸಿ ಸುಸ್ತಾದ. ಆ ದಿವಸ ಏನು ಸಂಭವಿಸಿತೆಂದರೆ! ತನ್ನ ಪ್ರೀತಿಯ ವ್ಯಾಘ್ರದ ಒಡಲ ಬೇಗುದಿಗೆ ಯಾವ ಪ್ರಾಣಿಯನ್ನು ಪೂರೈಸುವುದೆಂದು ಯೋಚಿಸುತ್ತಿದ್ದ. ಒಂಟೆ, ಜಿರಾಫೆಗಳನ್ನು ಮಾನಸಿಕವಾಗಿ ಕಲ್ಪಿಸಿ ಕೊಂಡಿದ್ದ. ಅವೆರಡೂ ಗಾತ್ರದ ದೃಷ್ಟಿಯಲ್ಲಿ ವ್ಯಾಘ್ರಕ್ಕಿಂತ ದೊಡ್ಡವು, ಆದ್ದರಿಂದ ಅವುಗಳ ಪೈಕಿ ಜಿರಾಫೆಯ ಮರಿಯ ಚಿತ್ರವನ್ನು ಪೂರೈಸುವುದು ಒಳಿತೆಂದು ನಿರ್ಧರಿಸಿದ್ದ. ಅದರ ಮಾದರಿಯನ್ನೂ, ಪರಿಕರಗಳನ್ನೂ ಕೈಯಲ್ಲಿ ಹಿಡಿದುಕೊಂಡು ಗೋಡೆ ಕಡೆ ನಡೆದ. ಇನ್ನೇನು ರಚಿಸಬೇಕೆನ್ನುವಷ್ಟರಲ್ಲಿ ಬಾಗಿಲು ತಟ್ಟುತ್ತಿರುವ ಸದ್ದು ಕೇಳಿಸಿತು. ಭಯ, ಆತಂಕ ಕುತೂಹಲ ಆವರಿಸಿತು, ಅಂಥ ಸದ್ದು ಕೇಳಿ ಎಷ್ಟು ಕಾಲವಾಯಿತೋ! ನೆಂಟರಿಷ್ಟರು, ಗೆಳೆಯರು ಇದ್ದರೇನೋ ನಿಜ, ಆದರೆ ಅವರ್ಯಾರೂ ತನ್ನ ನೆನಪಿನಲ್ಲಿ ಉಳಿದಿಲ್ಲ. ತೆರೆಯದಿದ್ದಲ್ಲಿ ತಟ್ಟಿದವರು ಬೇಸರ ಮಾಡಿಕೊಳ್ಳುವರು. ಪ್ರಜ್ಞಾವಂತ ನಾಗರಿಕನಾದ ಆತ ಪರಿಕರಗಳನ್ನು ಬದಿಗಿರಿಸಿ ಮೆಲ್ಲಗೆ ನಡೆದು ಚಿಲಕಗಳನ್ನು ಒಂದೊಂದಾಗಿ ಸರಿಸಿದ.

ಕದಗಳನ್ನು ಸ್ವಲ್ಪವೇ ಓರೆ ಮಾಡಿ ಇಣುಕಿದ. ಬೀದಿ ದೀಪದ ಬೆಳಕಿಗೆ ಬೆನ್ನು ಮಾಡಿದ್ದರಿಂದ ಆಗಂತುಕ ಸ್ಪಷ್ಟವಾಗಿ ಗೋಚರಿಸಲಿಲ್ಲ. ಕಣ್ಣುಗಳಿಗಡ್ಡವಾಗಿ ಚಾಳೀಸು ಧರಿಸುವುದು, ಹುಬ್ಬುಗಳ ಮೇಲೆ ಅಂಗೈ ಇರಿಸುವುದು, ತಲೆ ಮೇಲೆತ್ತುವುದು, ನಿಖರವಾಗಿ ಗುರುತಿಸಲು ಪ್ರಯತ್ನಿಸುವುದು, ಯಾರು ಎಂದು ಕೇಳುವುದು ಅನಿವಾರ್ಯವಾಯಿತು.

ಸಣ್ಣಗೆ ಉದುರುತ್ತಿದ್ದ ಮಳೆಯಿಂದ ರಕ್ಷಿಸಿಕೊಳ್ಳಲು ಚೀಲದಿಂದಲೂ, ತನ್ನೆರಡೂ ಕೈಗಳಿಂದಲೂ ವಿಫಲ ಪ್ರಯತ್ನ ನಡೆಸಿದ್ದ ಆಗಂತುಕ ಮಾತಿನ ಆರಂಭದಲ್ಲಿ 'ಲೇ' ಎಂಬ ಪ್ರತ್ಯಯ ಪ್ರಯೋಗಿಸಿದೊಡನೆ 'ಓಹ್ ನೀನಾ' ಎಂದು ಉದ್ಗರಿಸುವುದು ಅನಿವಾರ್ಯ ವಾಯಿತು. ಬಾ ಎಂದು ಹೇಳಲು ತುಟಿಗಳನ್ನು ಅಣಿಗೊಳಿಸಿಕೊಳ್ಳುವಷ್ಟರಲ್ಲಿ ಆಗಂತುಕ ಒಳಗೆ ಪ್ರವೇಶಿಸಿದ ಎನ್ನುವುದಕ್ಕಿಂತ ನುಗ್ಗಿದ. ಬೆಳಕಿನಲ್ಲಿ ನಿಚ್ಚಳಗೊಂಡ ಆ ವ್ಯಕ್ತಿಯನ್ನು ಆಪಾದಮಸ್ತಕ ದಿಟ್ಟಿಸಿದ. ಸುಕ್ಕುಗಟ್ಟಿರುವ ಮುಖ, ಬೋಳುದಲೆ, ನೀಳನಾಸಿಕ, ಜೋಲುಬಿದ್ದಿರುವ ಎದೆ, ತನಗಿಂತ ಆರಂಗುಲ ದೀರ್ಘ ದೇಹ. ಇಷ್ಟು ಗುರುತಿಸಿದ್ದೂ ಆಯಿತು, ಹಸ್ತಲಾಘವ ಮಾಡಿದ್ದೂ ಆಯಿತು. ಇದ್ದಕ್ಕಿದ್ದಂತೆ ಎಂದು ಕೇಳಿದ್ದಕ್ಕೆ ಆ ವ್ಯಕ್ತಿ ಎಲ್ಲವನ್ನೂ ಹೇಳಿಕೊಂಡ ಸಮಸ್ಯೆಗಳ ಸಹಿತ. ತಮ್ಮಿಬ್ಬರದ್ದೂ ಅದೇ ಕಥೆ, ಅದೇ ಇತಿಹಾಸ. ಎಂಜಲುಗೈ ಒರೆಸಿ ಕೊಳ್ಳುತ್ತ ಪರಿಚಿತ ಗೋಡೆ ಕಡೆ ನೋಡಿದ, ತಮ್ಮಂಥ ವೃದ್ಧರಿಗೆ ಸದಭಿರುಚಿತನವೇ ಊರುಗೋಲು ಎಂದು ಮೆಚ್ಚುಗೆ ವ್ಯಕ್ತಪಡಿಸಿದ. ತಾನೂ ಒಳ್ಳೆಯ ಗಾಯಕ. ನಡುರಾತ್ರಿ ಸಮೀಪಿಸಿರದಿದ್ದಲ್ಲಿ ತನ್ನ ಇಷ್ಟವಾದ ಮಾಲಕೌಂಸ್ ಹಾಡುತ್ತಿದ್ದನೇನೋ! ಅವರಿಬ್ಬರೂ ತಮ್ಮ ವೃತ್ತಿಸಂಬಂಧೀ ನೆನಪುಗಳನ್ನು ನೆನಪಿಸಿ ಕೊಳ್ಳುವುದರ ಜೊತೆಗೆ ತಮ್ಮ ಕರುಳಕುಡಿಗಳ ಲಾಭ ನಷ್ಟ ಕುರಿತಂತೆಯೂ ಅನುಭವಗಳನ್ನು ವಿನಿಮಯ ಮಾಡಿಕೊಂಡರು. ಮಲಗುವ ಮುನ್ನ ಅತಿಥಿ ಗೋಡೆ ಕಡೆ ನಡೆದು ವ್ಯಾಘ್ರದ ಚಿತ್ರವನ್ನು ಸ್ಪರ್ಶಿಸಿ ಆತಿಥೇಯನ ಕಲಾನೈಪುಣ್ಯವನ್ನು ಮುಕ್ತಕಂಠದಿಂದ ಶ್ಲಾಘಿಸಿದನು. ಆ ಬಳಿಕ ಅವರು ಒಂದೊಂದು ನೆನಪಿಗೂ ಒಂದೊಂದು ನಿಟ್ಟುಸಿರುಬಿಡುತ್ತಲೂ, ವಿಧಿಲಿಖಿತವನ್ನು ಹಳಿಯುತ್ತಲೂ ನಿದ್ದೆ ಹೋದರು.

ಎಂದಿನಂತೆ ಬೆಳಗಾಯಿತು, ಆತಿಥೇಯ ಎಚ್ಚರಗೊಂಡ, ಅತಿಥಿ ಮಲಗಿದ್ದ ಹಾಸಿಗೆ ಕಡೆ ಕಣ್ಣಿಂದ ತಡಕಾಡಿದ, ಆತ ಅಲ್ಲಿಲ್ಲದಿರುವುದನ್ನು ಕಂಡು ಗಾಬರಿಗೊಂಡ. ಮುಚ್ಚಿದ ಬಾಗಿಲು ಮುಚ್ಚಿ ದಂತೆಯೇ ಇರುವುದು. ಅಂದ ಮೇಲೆ! ವ್ಯಾಘ್ರದ ಚಿತ್ರವಿದ್ದ ಕಡೆ ನಿಧಾನವಾಗಿ ಕಣ್ಣು ಹೊರಳಿಸಿದ. ಸಂಜೆ ಜಿರಾಫೆ ಅಥವಾ ಯಾವುದಾದರೊಂದು ಸಸ್ಯಾಹಾರಿ ಪ್ರಾಣಿ ಚಿತ್ರ ಬರೆಯದಿದ್ದುದು ತನ್ನ ತಪ್ಪು ಎಂದು ಕಣ್ಣುಗಳನ್ನು ಒದ್ದೆ ಮಾಡಿಕೊಂಡ. ಆ ಕಹಿ ಘಟನೆ ಎಷ್ಟು ದಿವಸ ನೆನಪಿನಲ್ಲುಳಿದೀತು!

ಎಂದಿನಂತೆ ಆತನ ದಿನಚರಿ ಅವ್ಯಾಹತವಾಗಿ ಸಾಗಿತು. ದಿನಕ್ಕೊಂದೆರಡಾದರೂ ಸಸ್ಯಾಹಾರಿ ಪ್ರಾಣಿಗಳ ಚಿತ್ರಗಳನ್ನು ಬರೆದೂ ಬರೆದೂ ತನ್ನ ರಟ್ಟೆಗಳು ಸೋತವು. ಆ ವೃದ್ಧನ ಸೋಲನ್ನು ಗೌರವಿಸಿ ಗೋಡೆಯಿಂದ ನಿರ್ಗಮಿಸುವ ಸ್ಥಿತಿಯಲ್ಲಿ ವ್ಯಾಘ್ರವಿರಲಿಲ್ಲ. ಮಾಂಸಾಹಾರಿ ಪ್ರಾಣಿಯ ಜಠರದ ದಾವಾನಲಕ್ಕೆ ತುತ್ತಾದ ಶಾಖಾಹಾರಿ ಪ್ರಾಣಿಗಳೂ, ಅವುಗಳ ಶಾಪವೂ!

ಇದು ನ್ಯಾಯವೇ ಎಂದು ಆತ ಪ್ರಶ್ನಿಸಿದ್ದಲ್ಲಿ ತನಗೆ ಆಹಾರ ಒದಗಿಸುವುದು ಸೃಷ್ಟಿಸಿದವನ ಹೊಣೆ ಯಲ್ಲವೆ ಎಂದು ಅದು ಜವಾಬು ನೀಡುತ್ತಿತ್ತೇನೊ! ಒಂದನ್ನು ನಿರ್ನಾಮ ಮಾಡಲು ಇನ್ನೊಂದನ್ನು ಸೃಷ್ಟಿಸಿದ್ದು ತನ್ನ ತಪ್ಪು. ವ್ಯಾಘ್ರವನ್ನು ಅಳಿಸಲು ನುರಿತ ಬೇಟೆಗಾರನನ್ನು ಸೃಷ್ಟಿಸಬಹುದು, ಸೃಷ್ಟಿಸಿದ ಬಳಿಕ ಅವನೂ ತನ್ನನ್ನು ಚಿತ್ರಹಿಂಸೆಗೆ ಗುರಿ ಮಾಡದೆ ಇರಲಾರ. ಸದ್ಯಕ್ಕೆ ವ್ಯಾಘ್ರವನ್ನು ಹೇಗಾದರೂ ಸಂಭಾಳಿಸುತ್ತ ಕಾಲಕ್ಷೇಪ ಮಾಡುವುದು ಒಳಿತು ಎಂದು ಆತ ನಿಶ್ಚಯಿಸಿದ.

ಮುಂದೆ ಕೆಲವು ದಿವಸಗಳ ಬಳಿಕ ಆತ ವಿಷಮಶೀತ ಕಾಯಿಲೆಗೆ ತುತ್ತಾದ. ಆಸ್ಪತ್ರೆಗೆ ಹೋಗಿ ಚಿಕಿತ್ಸೆ ಪಡೆದರೂ ಜ್ವರ ಇಳಿಮುಖವಾಗಲಿಲ್ಲ. ನರಳುತ್ತಲೇ ಗೋಡೆ ಮೇಲೆ ತೋಚಿದ ಪ್ರಾಣಿಯ ಚಿತ್ರ ಗೀಚಿ ವ್ಯಾಘ್ರವನ್ನು ಸಂತುಷ್ಟಗೊಳಿಸಲು ಪ್ರಯತ್ನಿಸಿದ. ದೈಹಿಕ ದೌರ್ಬಲ್ಯದಿಂದಾಗಿಯೋ, ಮಾನಸಿಕ ಅಸಮತೋಲದಿಂದಾಗಿಯೋ ಚಿತ್ರರಚನೆ ತ್ರಾಸದಾಯಕವಾಯಿತು. ಉದಾಹರಣೆ ಕೊಡುವು ದಾದರೆ ಮೊಲ ಇಲಿಯಂತೆಯೂ, ಜಿಂಕೆ ನರಿ ಯಂತೆಯೂ. ಅಲ್ಲದೆ ಪ್ರಾಣಿಗಳ ಅಂಗಸೌಷ್ಟವದಲ್ಲೂ ಏರುಪೇರು ಸಂಭವಿಸದೆ ಇರುತ್ತಿರಲಿಲ್ಲ. ಅಂಥ ದುರ್ಬಲ ಪ್ರಾಣಿಗಳನ್ನು ಆಹಾರವಾಗಿ ಸ್ವೀಕರಿಸಲು ವ್ಯಾಘ್ರ ನಿರಾಕರಿಸುತ್ತಿತ್ತಲ್ಲದೆ ತನ್ನ ಕಡೆ ತೀಕ್ಷ್ಣ ನೋಟ ಬೀರುತ್ತಿತ್ತು. ಮೊದಮೊದಲು ತನ್ನ ಅಸಹಾಯಕ ಸ್ಥಿತಿಯನ್ನು ನಿವೇದಿಸಿಕೊಂಡ ನಾದರೂ ಪ್ರಯೋಜನವಾಗಲಿಲ್ಲ.

ಮುಚ್ಚಿದ್ದು ಮುಚ್ಚಿದಂತೆಯೇ ಇರುವ ಬಾಗಿಲು ನೆರೆಹೊರೆಯವರ ಗಮನ ಸೆಳೆಯಿತು. ಅದು ಇಂದು ತೆರೆದೀತು, ನಾಳೆ ತೆರೆದೀತು ಎಂದು ಕಾದು ನೋಡಿದರೂ ಪ್ರಯೋಜನ ವಾಗಲಿಲ್ಲ, ಆತನ ಗುಣಸ್ವಭಾವ ಕುರಿತಂತೆ ತಮಗೆ ಯಾವ ಮಾಹಿತಿ ಇರದಿದ್ದರೂ ಅನುಕಂಪಕ್ಕೆ ಕೊರತೆ ಇರಲಿಲ್ಲ. ಕುತೂಹಲದೊಂದಿಗೆ ಭಯ–ಆತಂಕ ಸೇರಿದ ಪರಿಣಾಮದಿಂದಾಗಿ ಬಾಗಿಲನ್ನು ಬಡಿದು ಸದ್ದು ಮಾಡಿದರೂ ಪ್ರಯೋಜನವಾಗಲಿಲ್ಲ, ಬಾಗಿಲು ತೆರೆಯುವಂತೆ ಪರಿಪರಿಯಿಂದ ಪ್ರಾರ್ಥಿಸಿದರೂ ಪ್ರಯೋಜನವಾಗಲಿಲ್ಲ, ಒಳಗೆ ಇಣುಕಲು ಕಿಟಕಿ ಬಾಗಿಲುಗಳಿಗಿರಬಹುದಾದ ರಂಧ್ರಗಳನ್ನು ಶೋಧಿಸಿದರೂ ಪ್ರಯೋಜನ ವಾಗಲಿಲ್ಲ. ಆ ವೃದ್ಧ ಒಂಟಿತನದ ಬೇಗುದಿಗೆ ಬೇಸತ್ತೇನಾದರೂ ಆತ್ಮಹತ್ಯೆ ಮಾಡಿಕೊಂಡಿರ ಬಹುದೆ ಎಂದು ಅವರು ಸಂದೇಹಿಸಿದ ಬೆನ್ನಲ್ಲೇ ಅಪಾರ್ಟ್‌ಮೆಂಟ್ ಮಾಲಿಕನೂ ಅಲ್ಲಿಗೆ ಬಂದು ಪ್ರಯತ್ನಗಳನ್ನು ಪುನರಾವರ್ತನೆ ಮಾಡಿದರೂ ಪ್ರಯೋಜನವಾಗಲಿಲ್ಲ, ಕಳೇಬರದ ದುರ್ವಾಸನೆ ಆಘ್ರಾಣಿಸಲು ಪ್ರಯತ್ನಿಸಿದರಾದರೂ ಪ್ರಯೋಜನ ವಾಗಲಿಲ್ಲ. ಇನ್ನು ಆತನ ಪತ್ನಿ ಮಕ್ಕಳು ಬಂಧುಬಳಗ ನನ್ನವರು ತನ್ನವರು! ಅವರ ಬಗ್ಗೆ ಮಾಹಿತಿ ಇದ್ದರೆ ತಾನೆ ತಮ್ಮಲ್ಲಿ ಯಾರಿಗಾದರು!

ಕೊನೆ ಪ್ರಯತ್ನವೆಂದು ಹತ್ತಿರವಿದ್ದ ಠಾಣೆಗೆ ದೂರು ಸಲ್ಲಿಸಿದ್ದಾಯಿತು, ಹಿಂದೆಯೇ ಸ್ಥಳಕ್ಕೆ ಪೊಲೀಸ್ ಅಧಿಕಾರಿ ಆಗಮಿಸಿದ್ದೂ ಆಯಿತು. ಆತ ನೀಡಿದ ಆಜ್ಞೆಯಂತೆ ಪೊಲೀಸರು ಬಾಗಿಲನ್ನು ಮುರಿದು ತೆರೆಯುವ ಪ್ರಯತ್ನವನ್ನು ಆರಂಭಿಸಿದರು. ಒಳಗಡೆ ಅಭೂತಪೂರ್ವ ರೀತಿಯಲ್ಲಿ ಭದ್ರಪಡಿಸಿ ಕೊಂಡಿದ್ದರಿಂದಾಗಿ ಮುರಿಯುವ ಪ್ರಕ್ರಿಯೆ ತಾಸುಪರ್ಯಂತ ನಡೆದು...!

ಕೊನೆಗೂ ಮುರಿದು ತೆರೆದೊಡನೆ ಪರಾವರ್ತಿತ ಪ್ರಕ್ರಿಯೆಗೆ ಒಳಪಟ್ಟು ಕೂಡಲೆ ತಮ್ಮ ತಮ್ಮ ಮೂಗು ಬಾಯಿಗಳನ್ನು ಕರವಸ್ತ್ರಗಳಿಂದ ಮುಚ್ಚಿಕೊಂಡರು. ಆತಂಕ ಅನುಕಂಪ ಕುತೂಹಲ ಅನುಭವಿಸುತ್ತ ಒಂದೆರಡು ಹೆಜ್ಜೆ ಒಳಗಿರಿಸಿದರು, ಕಳೇಬರದ ಸಲುವಾಗಿ ಮೇಲೂ ಕೆಳಗೂ ಕಣ್ಣು ಹಾಯಿಸಿದರು. ಆಘ್ರಾಣಿಸಿದರು ಶಕ್ತಿಮೀರಿ. ವಿಚಿತ್ರವೆಂದರೆ ವೃದ್ಧನ ದೇಹ ಎಲ್ಲೂ ಗೋಚರಿಸಲಿಲ್ಲ, ಆದರೆ ಮೃಗಾಲಯದ ಕಟುವಾಸನೆ ಚಿಕ್ಕ ಪ್ರಮಾಣದಲ್ಲಿ ದಟ್ಟೈಸಿತ್ತು.

ವೃದ್ಧನ ದೇಹ ದೊರಕಿದ ಬಳಿಕವಷ್ಟೆ ಸಾವು ಕೊಲೆ ಆತ್ಮಹತ್ಯೆ ಕುರಿತು ಜಿಜ್ಞಾಸೆ! ಅಗೋಚರ ವಾಗಲು ವೃದ್ಧ ಯೋಗಿ ಮಾಂತ್ರಿಕನಾಗಿರಲಿಲ್ಲ. ಅಂದಮೇಲೆ! ಪೊಲೀಸ್ ಅಧಿಕಾರಿ ಯೋಚಿಸಿದ ನಾದರೂ ಹೊಳೆಯಲಿಲ್ಲ. ಶತಪಥ ಹೆಜ್ಜೆ ಹಾಕುತ್ತಿದ್ದ ಆತನನ್ನು ಗೋಡೆ ಮೇಲಿದ್ದ ವ್ಯಾಘ್ರದ ಚಿತ್ರ ಆಕರ್ಷಿಸಿತು. ಮೆಲ್ಲಗೆ ಸಮೀಪಿಸಿ ಅದರತ್ತ ಪರೀಕ್ಷಾರ್ಥ ನೋಟ ಬೀರಿದ. ಕೆಂಪು ಬಣ್ಣದ ಕಲೆ ಅದರ ಬಾಯಿಯ ಮೇಲ್ಭಾಗದಲ್ಲಿತ್ತು. ಅದನ್ನು ಜಾಗರೂಕತೆಯಿಂದ ಸಂಗ್ರಹಿಸಿದ್ದು ಏಕೆಂದರೆ ಅದಕ್ಕೆ!


**ಕುಂ. ವೀರಭದ್ರಪ್ಪ**

'ಅನ್ನಪೂರ್ಣ ನಿಲಯ', ಪೊಲೀಸ್ ಠಾಣೆ ಬಳಿ

ಕೊಟ್ಟೂರು – ೫೮೩೧೩೪, ಬಳ್ಳಾರಿ ಜಿಲ್ಲೆ


## ಗುಡುಗುವವರು !

ಗುಡುಗಿದ ಮಳೆಗೆ
ಗುಡಿಸಿಲು ತೊರೆದು
ನಾವೇ ಗುಡಿಸುವ
ಗುಡಿಯಲಿ ತಂಗಿದರೆ
ಗುಡುಗುವರು ನೋಡಾ !


**ಅಂಬಾದಾಸ ವಡೆ**

ಬಾಗಲಕೋಟೆ

ಹಾರ್ದಿಕ ಶುಭಾಶಯಗಳೊಂದಿಗೆ

# ಫೆಡರಲ್ ಮೊಗಲ್ ಗೋಯೆಟ್ಜೆ ಇಂಡಿಯ ಎಂಪ್ಲಾಯೀಸ್ ಅಸೋಸಿಯೇಷನ್

**(AITUC ಗೆ ಸೇರ್ಪಡೆ)**

**ನೋ. ಸಂ. DRT (B-1) TUA/45/78-79**

**ನಂ. 2037, 3ನೇ ಘಟ್ಟ, 4ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು – 560 064**



**ಕಾಂ. ಹೆಚ್. ಮಹಾದೇವನ್**
**ಅಧ್ಯಕ್ಷರು**



**ಶ್ರೀ ಬಿ. ಶ್ರೀನಿವಾಸ್‌ಮೂರ್ತಿ**
**ಹಿರಿಯ ಉಪಾಧ್ಯಕ್ಷರು**



**ಶ್ರೀ ಜಯಸಿಂಹ**
**ಕಿರಿಯ ಉಪಾಧ್ಯಕ್ಷರು**



**ಶ್ರೀ ಜಿ. ಜಿ. ಲೋಕೇಶ್**
**ಪ್ರಧಾನ ಕಾರ್ಯದರ್ಶಿ**



**ಶ್ರೀ ವಿ.ಬಿ. ಪಾಟೀಲ್**
**ಜಂಟಿ ಕಾರ್ಯದರ್ಶಿ**



**ಶ್ರೀ ಸಿದ್ದರಾಜು ಡಿ.**
**ಸಹ ಕಾರ್ಯದರ್ಶಿ**



**ಶ್ರೀ ಬಿ.ವಿ. ವೀರಭದ್ರಸ್ವಾಮಿ**
**ಸಂಘಟನಾ ಕಾರ್ಯದರ್ಶಿ**



**ಶ್ರೀ ರುದ್ರಯ್ಯ**
**ಕಚೇರಿ ಕಾರ್ಯದರ್ಶಿ**



**ಶ್ರೀ ಶಶಿಕುಮಾರ್ ಯು.**
**ಖಜಾಂಚಿ**

# ತಲೆ ತಿನ್ನುವ ತಲೆ ಇಲ್ಲದವನು!

ನಮ್ಮ ಪುರಾಣಗಳಲ್ಲಿ ಕತೆಯೊಂದಿದೆ – ಅಮೃತವನ್ನು ಮೋಸದಿಂದ ಗಳಿಸಿ ನುಂಗಿಬಿಟ್ಟ ರಾಕ್ಷಸನೊಬ್ಬ. ಮೋಹಿನಿ (ವಿಷ್ಣು) ಅವನನ್ನು ತರಿದು ಹಾಕಲು ಕತ್ತು ಕತ್ತರಿಸಿದಳಂತೆ; ಆದರೆ ಅಮರನಾಗಿದ್ದ ರಾಕ್ಷಸ ಎರಡು ಪಾಲಾದರೂ ಬದುಕುಳಿದ. ಒಂದು ಜೀವಕ್ಕೆ ದೇಹ ಮಾತ್ರ; ಇನ್ನೊಂದಕ್ಕೆ ತಲೆ ಮಾತ್ರ ದಕ್ಕಿದವು. ತಲೆ ಮುಖ್ಯವಲ್ಲವೇ? ಅದಕ್ಕೆ ರಾಹು ಎಂದು ಹೆಸರಿಟ್ಟರು. ತಲೆಯಿಲ್ಲದ್ದು ಕೇತು ಎಂಬ ಹೆಸರು ಪಡೆಯಿತು.

ವಾಸ್ತವ ಏನೇ ಇದ್ದರೂ ಗ್ರಹಣ ಏಕೆ ಉಂಟಾಗುತ್ತದೆ ಎಂದು ತಿಳಿಸಲು ಈ ಕತೆ ಬಹಳ ಉಪಯೋಗಿಯಾಯಿತು. ಸೂರ್ಯ ಚಂದ್ರರನ್ನು ಇವು (ಬೇರೆ ಬೇರೆಯಾಗಿ) ತಿನ್ನುತ್ತವೆ ಎಂಬ ಕತೆ ಜನಸಾಮಾನ್ಯರನ್ನು ತಲುಪಿದವು. ಆಳವಾಗಿ ಬೇರೂರಿಬಿಟ್ಟವು. ಆರ್ಯಭಟನ ಮೊದಲಾಗಿ ಅನೇಕರು ಈ ಕತೆಯನ್ನು ಹೀಗಳೆದರೂ ಇದನ್ನು ಅಳಿಸಿಹಾಕಲು ಸಾಧ್ಯವೇ ಆಗಲಿಲ್ಲ.

ರಾಹು ಮತ್ತು ಕೇತು ಎಂಬವು ಚಂದ್ರಕಕ್ಷೆಯಲ್ಲಿನ ಕಾಲ್ಪನಿಕ ಬಿಂದುಗಳು. ಭೂಮಿಯ ಕಕ್ಷಾತಲವನ್ನು ಛೇದಿಸುವ ಬಿಂದುಗಳು. ಈ ಬಿಂದುಗಳಲ್ಲಿ ಚಂದ್ರನಿದ್ದಾಗ ಹುಣ್ಣಿಮೆಯಾದರೆ ಚಂದ್ರಗ್ರಹಣ; ಅಮಾವಾಸ್ಯೆಯಾದರೆ ಸೂರ್ಯಗ್ರಹಣ. ಅಂದರೆ ಗ್ರಹಣದ ಲೆಕ್ಕ ಮಾಡಲು ಈ ಕಾಲ್ಪನಿಕ ಬಿಂದುಗಳು ಆಕಾಶದಲ್ಲಿ ಎಲ್ಲಿವೆ ಎಂದು ತಿಳಿಯುವುದು ಅವಶ್ಯಕ ಎಂದಾಯಿತು. ಚಂದ್ರ ತನ್ನ ಕಕ್ಷೆಯಲ್ಲಿ ಮುನ್ನಡೆದಂತೆ ಈ ಬಿಂದುಗಳೂ ಮುನ್ನಡೆಯುತ್ತವೆ. ಆದರೆ ಈ ಚಲನೆ ಅಷ್ಟು ಸರಳವಲ್ಲ. ಸ್ವಲ್ಪಸ್ವಲ್ಪವೇ ಇವು ಹಿನ್ನಡೆಯುತ್ತವೆ. ಇದನ್ನು ಪತ್ತೆ ಮಾಡಿಕೊಂಡ ನಮ್ಮ ಹಿರಿಯರು ಇವಕ್ಕೆ ಗ್ರಹಗಳ ಪಟ್ಟ ಕೊಡಿಸಿ, ಲೆಕ್ಕ ಮುಂದುವರಿಸಿದರು. ಗ್ರಹಗಳ ಜೊತೆ ಹೀಗೆ ಇವು ಸ್ಥಾನ ಗಿಟ್ಟಿಸಿಕೊಂಡವು. ಇವುಗಳ ನಡುವೆ ಕರಾರುವಾಕ್ಕಾಗಿ ೧೮೦ ಡಿಗ್ರಿ ಅಂತರವಿರುವುದರಿಂದ ರಾಹುವಿನ ಸ್ಥಾನ ಗೊತ್ತಾದರೆ ಸಾಕು; ಇನ್ನೊಂದನ್ನು ಪುನಃ ಬೇರೆಯಾಗಿ ಲೆಕ್ಕ ಹಾಕುವ ಅವಶ್ಯಕತೆ ಇಲ್ಲ.

ಗ್ರಹಗಳ ಸ್ಥಾನವನ್ನು ಗುರುತಿಸುವಾಗ ರಾಹುವಿನ ಸ್ಥಾನವನ್ನು ಮಾತ್ರ ಹೇಳುವ ಪದ್ಧತಿ ಹೀಗೆ ಬೆಳೆದುಬಂದಿತು. ಆದರೆ ಪಠ್ಯಪುಸ್ತಕಗಳಲ್ಲಿ ಪಾತಬಿಂದು ಅಥವಾ ಪರ್ವಬಿಂದು ಎಂಬ ಶಬ್ದವೇ ಬಳಕೆಯಲ್ಲಿತ್ತು.

ಸುಮಾರು ಕ್ರಿಸ್ತಶಕ ಒಂದನೆಯ ಶತಮಾನದ ಹೊತ್ತಿಗೆ (ಅಥವಾ ಇನ್ನೂ ಮುಂಚೆ) ಭಾರತದಿಂದ ಏಷ್ಯದ ಇತರ ದೇಶಗಳಿಗೆ ಖಗೋಳ ವಿಜ್ಞಾನ ಗ್ರಂಥಗಳು ತಲುಪಿದವು. ಅಲ್ಲಿನ ಭಾಷೆಗಳಿಗೆ ತರ್ಜುಮೆಗೊಂಡವು. ಮುಖ್ಯವಾಗಿ ಚೀಣೀ ಮತ್ತು ಬರ್ಮೀಸ್ ಭಾಷೆಗಳನ್ನು ಉದಾಹರಿಸ ಬಹುದು. ರಾಹುವಿನ ಕತೆಯೂ ಬಹುಶಃ ಬೇರೆಯಾಗಿ ತಲುಪಿತು. ತಲೆಯಿಲ್ಲದ ಕೇತು ಅವರ ಗಮನ ಸೆಳೆಯಲಿಲ್ಲವೋ ಏನೋ. ಏಕೆಂದರೆ ಕೇತು ಎಂಬ ಪದವನ್ನು ಧೂಮಕೇತುವಿಗಾಗಿ ಮಾತ್ರ ಬಳಸಿದ ಉದಾಹರಣೆಗಳಿವೆ. ಚೀಣಾದ ಕೆಲವು ಪುಸ್ತಕಗಳಲ್ಲಿ ಕೇತುವಿಗೆ ಬೇರೆಯೇ ಅರ್ಥವಿದೆ. ಅದು ಅಪಭೂ ಅಂದರೆ ಚಂದ್ರ ಭೂಮಿ ನಡುವೆ ಕನಿಷ್ಠ ದೂರ ಇರುವ ಬಿಂದು.

**ಡಾ|| ಬಿ. ಎಸ್. ಶೈಲಜಾ, ಗೀತಾ ಕೈದಾಳ ಗಣೇಶ**

ಹೀಗೆ ತಲೆಯೇ ಇಲ್ಲದ ಕೇತು ಎಂಬುದರ ಹೆಸರು ತಲೆ ಮತ್ತು ಬಾಲ ಎರಡೂ ಇರುವ ಧೂಮಕೇತುವಿನ ಹೆಸರಿಗೆ ಅಂಟಿಕೊಂಡಿದ್ದು ಆಶ್ಚರ್ಯ ಅಲ್ಲವೇ? ಇಷ್ಟೇ ಅಲ್ಲ; ಇದು ಖಗೋಳ ವಿಜ್ಞಾನಿಗಳ ತಲೆ ತಿನ್ನುವ ಕೆಲಸವನ್ನೂ ಮಾಡಿದೆ.

ಅಂಗ್ಕೋರ್ ವಾಟ್ ಎಂಬುದು ಕ್ಯಾಂಬೋಡಿಯಾದಲ್ಲಿರುವ ಅನೇಕ ಹಿಂದೂ ದೇವಾಲಯಗಳಲ್ಲಿ ಮುಖ್ಯವಾದದ್ದು. ಇಲ್ಲಿನ ಬಂಟೈಸ್ರೀ ಎಂಬ ಶಿವ ದೇವಾಲಯ ಶಿಲ್ಪಕಲೆ, ವಿನ್ಯಾಸ ಇವುಗಳಿಗೆ ಬಹಳ ಪ್ರಸಿದ್ಧವಾಗಿವೆ. ಹಾಳುಬಿದ್ದಿದ್ದ ಈ ದೇವಾಲಯವನ್ನು ಪುನರುತ್ಥಾನಗೊಳಿಸಿದ್ದು ಸುಮಾರು ೮೦ ವರ್ಷಗಳ ಹಿಂದೆ. ಪುರಾತತ್ವ ಶಾಸ್ತ್ರಜ್ಞರಿಗೆ ಇದು ಬಹು ಆಪ್ಯಾಯಮಾನವಾದ ತಾಣ.

ಅಲ್ಲಿ ಆಳುತ್ತಿದ್ದ ರಾಜರು ಸಂಸ್ಕೃತದಲ್ಲಿ ಅನೇಕ ಶಿಲಾಶಾಸನಗಳನ್ನು ಬರೆಸಿದ್ದಾರೆ. ಆ ರಾಜರ ವಂಶಾವಳಿಯನ್ನು ತಿಳಿಯುವುದು ಸಾಧ್ಯವಾಗಿದೆ. ಹಿಂದೂ ಸಂಸ್ಕೃತಿಯ ಪ್ರಭಾವವನ್ನು ಗುರುತಿಸುವುದೂ ಸಾಧ್ಯವಾಗಿದೆ.

ಆ ದೇವಾಲಯದ ಒಂದು ಶಾಸನ ಹೀಗಿದೆ.

*ಸಪ್ತೈಕವಾಹು ಚಂದ್ರೇಶು ಪ್ರಾಸಾದೇಸ್ಮಿನ್ ಯಥಾವಚಃ।*
*ವೈಶಾಖಸ್ಯಾದಿ ಪಕ್ಷಸ್ಯ ದ್ವಾದಶ್ಯಾಮ್ ಸುರ ಮಂತ್ರಿಣಿ॥*
*ಚಿತ್ರೇ ವೃಷ ಗತಾದಿತ್ಯ ಸೌರ್ಯೋರ್ ಮಿಥುನಸ್ಥಯೋತ್।*
*ಭೌಮರಾಹೌ ತುಲಾಸ್ಥೇಂದೌ ವೃಶ್ಚಿಕಸ್ಥ ವೃಹಸ್ಪಸ್ತೌ॥*
*ಸೌಮ್ಯೇ ಶುಕ್ರೇ ಚ ಕೇತೌ ಮೇಷಾಸ್ಥೇ ಸ್ಥಿರೌಚಕೇ।*
*ಕರ್ಕಸ್ಥೇ ಚ ಲಗ್ನೇ ಯೋತಿಶ್ಥಿಪತ್ ಪತ್ರಿಮೇ ನೃಪಃ॥*
*ತ್ರಿವಿಕ್ರಮ ಮಹಾನಾಥಮ್ ಶ್ರೀಜಯಾದಿಪಮ್ ನೃಪಃ।*
*ನಾಮ ಶ್ಲಾಘ್ಯಂ ದ್ವಿಜಸ್ಯಾಸ್ಯ ಪ್ರತಿಮಾಯಾಸ್ ತದಾಕರೋತ್॥*

ಈ ಪಠ್ಯವು ಮೊದಲ ಬಾರಿಗೆ ಪ್ರಕಟವಾದದ್ದು ೧೯೨೨ರಲ್ಲಿ –



ಎನ್‌ಜಿಸಿ ೭೬೬೨ ಎಂಬ ಪ್ಲಾನೆಟರಿ ನೆಬ್ಯುಲಾ (NGC ೭೬೬೨)

ಫ್ರೆಂಚ್ ಭಾಷೆಯಲ್ಲಿ ಅನುವಾದಗೊಂಡು! ದೇವಸ್ಥಾನದ ಕುರಿತ ವಿವರವಾದ ಅಧ್ಯಯನವನ್ನು ೧೮೬೦ರಲ್ಲಿ ಹೆನ್ರಿ ಮೋಹೌ ನೇತೃತ್ವದ ಫ್ರೆಂಚ್ ತಂಡ ಕೈಗೊಂಡಿತ್ತು; ಅದರ ವರದಿಯನ್ನು ಫಿನೋಟ್, ಗೋಲುಬೋವ್ ಮತ್ತು ಚೋದೆ ಇವರುಗಳು ೧೯೨೯ರಲ್ಲಿ ಪ್ರಕಟಿಸಿದರು. ಮುಂದೆ ೧೯೫೩ರಲ್ಲಿ ಆರ್. ಸಿ. ಮಜುಂದಾರ್ ಅವರೂ ಕಾಂಭೋಜದ ಶಾಸನಗಳನ್ನು ಪ್ರಕಟಿಸಿದರು. ಈ ಎಲ್ಲ ಅಧ್ಯಯನಗಳೂ ಶಾಸನ ಖ್ಮೇರ್ ರಾಜ ಚಂದ್ರವರ್ಮನ ಕಾಲದ್ದು ಎಂದು ನಿರ್ಧರಿಸುವುದಕ್ಕೆ ಮಾತ್ರ ಸೀಮಿತವಾಗಿವೆ.

ಮುಂದೆ ಈ ಶಾಸನದ ಪಠ್ಯ ಆರ್ಥರ್ ಬೀರ್ ಎಂಬ ಖಗೋಳಜ್ಞರನ್ನು ಆಕರ್ಷಿಸಿತು. ೧೯೬೦ರ ದಶಕದಲ್ಲಿ ಅವರು ಪ್ರತಿಯೊಂದು ಪದಪುಂಜದ ಅರ್ಥವನ್ನು ಬಿಡಿಸಿದರು. ಹಿಂದೂಗಳಿಗೆ ಅದು ಕಷ್ಟವೇನಲ್ಲ; ಇದು ಯಾವುದೋ ಮುಹೂರ್ತವನ್ನು ಸೂಚಿಸುತ್ತಿದೆ ಎಂದು ಊಹಿಸಬಹುದು. ಇದರ ಅರ್ಥ –

೧೨೧೬ನೆಯ ಶಕವರ್ಷದಲ್ಲಿ ವೈಶಾಖ ಮಾಸದ ಶುಕ್ಲ ಪಕ್ಷದ ೧೨ನೆಯ ದಿನ ಗುರುವಾರ ಚಿತ್ರಾ ನಕ್ಷತ್ರದಲ್ಲಿ, ರವಿ ಮತ್ತು ಶನಿ ವೃಷಭದಲ್ಲಿ, ಮಂಗಳ ಮತ್ತು ರಾಹು ಮಿಥುನದಲ್ಲಿ, ಚಂದ್ರ ತುಲಾದಲ್ಲಿ, ಗುರು ವೃಶ್ಚಿಕದಲ್ಲಿ, ಬುಧ, ಶುಕ್ರ ಮತ್ತು ಕೇತು ಮೇಷದಲ್ಲಿ ಇರುವಾಗ ಕಟಕ ಲಗ್ನದಲ್ಲಿ ಎರಡು ಪ್ರತಿಮೆಗಳನ್ನು ಸ್ಥಾಪಿಸಿದನು.

೧೯೧೪ರಲ್ಲಿ ಲಭ್ಯವಿದ್ದ ಪಂಚಾಂಗಗಳನ್ನು ಉಪಯೋಗಿಸಿ ಇದರ ನಿಖರ ದಿನಾಂಕವನ್ನು ಕಂಡುಹಿಡಿಯಲು ಡಾ॥ ಫಾನ್ ಕ್ಲುಬರ್ ಪ್ರಯತ್ನಿಸಿ ೧೨೯೫ರ ಏಪ್ರಿಲ್ ೭ ಅಥವಾ ೨೮ ಇರಬಹುದು ಎಂದು ಸೂಚಿಸಿ ನಿರ್ಣಯಿಸಲಾಗದೇ ಕೈಬಿಟ್ಟಿದ್ದರು. ಆರ್ಥರ್ ಬೀರ್ ಅವರು ಪುನಃ ಪ್ರಯತ್ನಿಸಿದರು. ರಾಹು ಮತ್ತು ಕೇತುಗಳು ೧೮೦ ಡಿಗ್ರಿ ಅಂತರದಲ್ಲಿ ಇಲ್ಲ; ಕೇವಲ ೬೦ ಡಿಗ್ರಿ ಅಂತರದಲ್ಲಿ ಇವೆ ಎಂಬುದೇ ಸಮಸ್ಯೆಯ ಮೂಲ.

ಟುಕರ್ಮನ್ ಎಂಬುವರು ಕ್ರಿ. ಶ. ೨ರಿಂದ ೧೬೪೯ರವರೆಗೆ ಸೂರ್ಯ, ಚಂದ್ರ ಮತ್ತು ಗ್ರಹಗಳ ಸ್ಥಾನ ವಿವರಗಳನ್ನು ಲೆಕ್ಕ ಹಾಕಿ ಸಿದ್ಧಪಡಿಸಿದ್ದ ಪಟ್ಟಿಯೊಂದು ಬೀರ್ ಅವರಿಗೆ ಸಹಾಯಕವಾಯಿತು. ಆದರೆ ಇದು ೧೬ ಏಪ್ರಿಲ್, ೧೨೯೫ ಎಂಬ ತಾರೀಖನ್ನು ಕೊಟ್ಟು ಸಮಸ್ಯೆಯನ್ನು ಇನ್ನೂ ಗೋಜಲು ಮಾಡಿತು. ಆದರೆ ಆ ಪಟ್ಟಿ ಗ್ರೀನ್‌ವಿಚ್‌ಗಾಗಿ ಮಾಡಿದ್ದರಿಂದ ಪುನಃ ಸ್ವಲ್ಪ ತಿದ್ದುಪಡಿ ಮಾಡಿದಾಗ ೧೨೯೫ರ ಏಪ್ರಿಲ್ ೨೮ ಎಂದಾಯಿತು; ಆದರೆ ಕೇತುವಿನ ಸ್ಥಾನ ಮಾತ್ರ ತಪ್ಪಾಗಿತ್ತು.

ಅರಬ್ ಗ್ರಂಥಗಳನ್ನು ಆಧರಿಸಿ ಅವರು ಬಹುಶಃ ಇದು ಕೈಡ್ ಎಂದು ಅರಬ್ಬರು ಹೆಸರಿಸಿರುವ ಅದೃಶ್ಯ ಗ್ರಹ ಎಂದು ಸೂಚಿಸಿದರು. ಇದೇ ಹೆಸರು ಚೀಣಾದ ಕೃತಿಗಳಲ್ಲಿಯೂ ದೊರಕಿದೆ ಎಂದು ಹೇಳಿ ಸಂಸ್ಕೃತ ಗ್ರಂಥಗಳ ಪದಶಃ ವಿವರಣೆ ಬಹಳ ಕಷ್ಟ ಎಂದು ನೆನಪಿಸಿದರು.

ಇದೇ ಸಂದರ್ಭದಲ್ಲಿ ಶ್ರೀರಂಗಪಟ್ಟಣದ ಶಾಸನವೊಂದನ್ನು ಕೈಗೆತ್ತಿಕೊಂಡು ಹೋಲಿಸಬಹುದು. ಅದು ಇಷ್ಟೊಂದು ಕ್ಲಿಷ್ಟವಾಗಿಲ್ಲ. ಟಿಪ್ಪುಸುಲ್ತಾನನ ಕಾಲದ್ದು. ಕೋಟೆಯ ಬಾಗಿಲಿನ ಮೇಲಿದೆ. (ಇತ್ತು ಎನ್ನಬಹುದು; ಬಹಳ ಕಷ್ಟಪಟ್ಟು ಆ ಕೋಟೆಯ ಬಾಗಿಲನ್ನು ಈಗ ಹುಡುಕಿದಾಗ ಈ ಶಾಸನವನ್ನು ಕಿತ್ತು ಸಾಗಿಸಿದ್ದುದು ಕಂಡುಬರುತ್ತದೆ.) ಎಲ್ಲ ಗ್ರಹಗಳ ಸ್ಥಾನಗಳೂ ಸರಿಯಾಗಿ ಹೊಂದಿಕೊಳ್ಳುತ್ತವೆ. ಕೇತುವೂ ಅಷ್ಟೆ. ಇದು ಪರ್ಷಿಯನ್ ಭಾಷೆಯಲ್ಲಿದೆ.

ಕೋಟೆಯ ಬಾಗಿಲಿಗೆ ಅಡಿಪಾಯವನ್ನು ಹಾಕಿದ ದಿನ ಮೌಲೂದಿ ಶಕ ೧೨೧೯ನೆಯ ವರ್ಷ, ಝುಬರ್‌ಜಯ್, ಖುಸ್ರವೀ ತಿಂಗಳು, ೯ನೆಯ ದಿನ, ಮಂಗಳವಾರ, ಗುರು ಉಚ್ಚನಾಗಿದ್ದನು, ಧನುರ್ಲಗ್ನ, ಶುಕ್ರ ಮತ್ತು ಗುರು ತುಲಾ ರಾಶಿಯಲ್ಲಿ, ಬುಧ ಮತ್ತು ರವಿ ಕನ್ಯಾ ರಾಶಿಯಲ್ಲಿ, ಮಂಗಳ ವೃಶ್ಚಿಕದಲ್ಲಿ, ಚಂದ್ರ ಮಕರ ರಾಶಿಯಲ್ಲಿ, ಶನಿ ಮೇಷದಲ್ಲಿ, ಬಾಲ ಮೀನದಲ್ಲಿತ್ತು.

ಇದು ೧೭೯೨ರ ಸೆಪ್ಟೆಂಬರ್ ೨೫ಕ್ಕೆ ಸರಿಯಾಗಿ ಹೊಂದುತ್ತದೆ. ಬಾಲ ಎಂಬುದನ್ನು ಇಂಗ್ಲಿಷ್‌ನಲ್ಲಿ ಡ್ರಾಗನ್ ಬಾಲ ಎಂದು ಅನುವಾದಿಸಲಾಗಿದೆ.

ಕೇತು ಎಂಬುದನ್ನು ಸೂಚಿಸಲು ಬಳಸಿರುವ ಪದ – ಝುನಬ್ – ಇದನ್ನು ಧೂಮಕೇತುವಿಗೂ ಬಳಸುತ್ತಾರೆ. ಸಾಮಾನ್ಯವಾಗಿ ರಾಹುವನ್ನು ಬಿಟ್ಟು ಕೇತುವನ್ನು ಬೇರೆಯಾಗಿ ಹೇಳುವ ಪದ್ಧತಿ ಪ್ರಚಲಿತವಿಲ್ಲದ ಕಾರಣ ಇಲ್ಲಿ ಯಾವುದೋ ಧೂಮಕೇತುವನ್ನೇ ಉಲ್ಲೇಖಿಸಿರಬಹುದೇ ಎಂಬ ಅನುಮಾನ ಎದ್ದಿತು. ಲಭ್ಯವಿರುವ ಎಲ್ಲಾ ದಾಖಲೆಗಳನ್ನು ತಿರುವಿಹಾಕಿದಾಗ ಯಾವುದೇ ಧೂಮಕೇತು ಮೇಷರಾಶಿಯ ಆಸುಪಾಸಿನಲ್ಲಿ ಆ ದಿನಾಂಕದಲ್ಲಿ ಇರುವ ಸಾಧ್ಯತೆ ಕಂಡುಬರಲಿಲ್ಲ. ಅಲ್ಲದೆ ಸಾಮಾನ್ಯವಾಗಿ ಧೂಮಕೇತುಗಳು ಸೂರ್ಯನ ಆಸುಪಾಸಿನಲ್ಲಿರುವಾಗ ಬರಿಗಣ್ಣಿಗೆ ಕಾಣುವಂತಿರುತ್ತವೆ. ಈ ಸಂದರ್ಭದಲ್ಲಿ ಅದು ಸೂರ್ಯನಿಂದ ಬಹಳ ದೂರದಲ್ಲಿದೆ. ೧೭೯೧ರ ಡಿಸೆಂಬರ್‌ನಲ್ಲಿ ಕೆರೊಲಿನ್ ಹರ್ಷೆಲ್ ಒಂದು ಧೂಮಕೇತುವನ್ನು ಕಂಡುಹಿಡಿದಿದ್ದಳು; ಅದು ಸೆಪ್ಟೆಂಬರ್‌ವರೆಗೂ ಕಾಣಲಿಲ್ಲ. ಏಪ್ರಿಲ್‌ನಲ್ಲಿಯೇ ಕ್ಷೀಣವಾಯಿತು. ಇನ್ನೊಂದು ಧೂಮಕೇತು ೧೭೯೨ರ ಡಿಸೆಂಬರ್‌ನಲ್ಲಿ ಬಂದಿತಾದರೂ ಅದನ್ನು ಕಂಡುಹಿಡಿದದ್ದು ೧೭೯೫ರ ಜನವರಿಯಲ್ಲಿ.

೧೭೯೨ರ ಸೆಪ್ಟೆಂಬರ್‌ನಲ್ಲಿ ಸೂರ್ಯಗ್ರಹಣವಾಗಿತ್ತು. ಇದರ ಆಧಾರದ ಮೇಲೆ ರಾಹು (ಮತ್ತು ಕೇತು) ಸ್ಥಾನವನ್ನು ಲೆಕ್ಕ ಹಾಕಿ ಪರಿಶೀಲಿಸಿದಾಗ ಸ್ಥಾನ ಸರಿಯಾಗಿದೆ ಎಂದು ತಿಳಿಯುತ್ತದೆ.

ಈ ಎರಡೂ ಶಾಸನಗಳಲ್ಲಿ ಕೇತು ಎಂದು ಸೂಚಿಸಿರುವ ಕಾಯ ಮೀನ – ಮೇಷಗಳಲ್ಲಿ ಇದೆ. ಆಕಾಶದ ಈ ಭಾಗದಲ್ಲಿ ಇನ್ನೇನಾದರೂ ವಿಶೇಷ ಘಟಿಸಿರಬಹುದೇ ಎಂದು ಹುಡುಕಿದಾಗ ಒಂದು ಚೀನೀ ದಾಖಲೆ ಸಿಕ್ಕಿತು. ೧೯೨೦ರಲ್ಲಿ ಮೀನ ಮತ್ತು ಆಂಡ್ರೊಮಿಡಾ (ದ್ರೌಪದಿ) ಪುಂಜಗಳ ನಡುವೆ ಒಂದು "ಅತಿಥಿ" ನಕ್ಷತ್ರ ಕಂಡುಬಂದಿತ್ತು. ಅದು ಎರಡು ಬಾರಿ ಕಂಡಿತ್ತು; ಅಂದರೆ ಒಮ್ಮೆ ಕಾಣಿಸಿಕೊಂಡು ಕ್ಷೀಣವಾಗಿ ಪುನಃ ಕಾಣಿಸಿಕೊಂಡಿತು. ಆ ಬಳಿಕ ಪುನಃ ಕಾಣದಾಯಿತು.

ಇದು ಒಂದು ಚಂಚಲ ನಕ್ಷತ್ರವಾಗಿರಬಹುದು ಎಂಬ ಊಹೆಯ ಮೇಲೆ ಹುಡುಕಾಟ ಆರಂಭಿಸಿದಾಗ ಹತ್ತು ವರ್ಷಗಳ ಹಿಂದೆ ಪ್ರಕಟವಾದ

46 (IV ಶ್ರೀಪ 159)

ಶ್ರೀರಂಗಪಟ್ಟಣ

ಕೋಟೆಯ ಆನೆಬಾಗಿಲ ಮೇಲೆ

This inscription in Persian characters, records the construction of the fort at Śrīraṅgapaṭṭaṇa. The Sultān laid the foundation of the fort on Tuesday, the 9th day of the month of Khusravi, of the year Zabarjad, in the year 1219 Maulūdi, which corresponds to 1791 A. D.

1 ಚೊ ಷಃ ' ಈನ್‌ಖಿಲಾ ರಾ ಬುನಯಾದ್ ಫರ್ಮೂದ್ [।*] ಜಬರ್‌ಜದ್ ಸಾಲ ಮ್ಹಾ ಇ ಖುಸ್ರವಿ ಬೂದ್
2 ಹಜಾರ್ ಓ ನೂಹ್ ಸದ್ ಓ ಬರ್ 'ಅಷರ್ ನುಹ್‌ಹಮ್ [।*] ಷುಮಾರ್ ಇ ಸಾಲ್ ಅಹಮದ್ ಬುದ್ ಜಿ ಮೌಲೂದ್

ಶ್ರೀರಂಗಪ

3 ಬತಾರೀಖ್ ಇ ನುಹುಮ್ ರೋಜ್‌ಇ ಸಿಷಮ್ಬಾ[।*]ಬೈನ್ ಇ ಸಾ' ಅತ್ ಇ ಬಿರ್‌ಜೀಸ್ ಇ ಮಸೂ'ದ್
4 ತುಲೂ'ಇ ಗೌಸ್ ಬೂದ್ ಓ ಹಮ್ ಬ ಮೀಜಾನ್ [।*] ಷಫಖ್ ಬರ್ ಜೊಹ್ರಾ ಓ ಬಿರ್‌ಜೀಸ್ ಅಫ್‌ಜೂದ್
5 ಅತಾ-ರುದ್ ಆಫ್ತಾಬ್ ಓ ರಾಸ್ ಹರ್ ಸ್ಹಿ [।*] ಬ ಬುರ್‌ಜಿ ಸುಂಬುಲ ಬೂದನ್ದ ಮಹಮೂದ್
6 ಬ ಜದ್ದಿ ಮ್ಹಾ ಬ ಅಖರಬ್ ಬೂದ್ ಮಿರ್ರೀಖ್ [।*] ಜನಬ್ ದರ್‌ಹೂತ್ ಕೈವಾನ್ ದರ್ ಹಮಲ್ ಬೂದ್
7 ಷುಮುರ್ ಇನ್ ವಖ್ತ್ ರಯ್ ಇನ್‌ಅಸ್ತ ಪಿನ್ದಾರ್ [।*] ಕಿ ಖಿಲಾ ಅಜ್‌ಹಮ್ಹ ಅಸ್‌ಬಾಬ್ ಪುರ್ ಬೂದ್
8 ಬಿ ಮಾನದ್ ಖಾಯಿಮ್ ಓ ಮಹಫೂಜ್ ಜಾಫ್ಹಾತ್[।*] ಬ ಫಧಲಿ ರಹಮತ್‌ಇ ಖಲಾಖ್ ಇ ಮಾ ಬೂದ್

## TRANSLITERATION

1 Cho shah 'in qil 'a rā bunyād farmūd [।*] Zabarjad sāl māh i Khusrawi būd
2 Hazār o nūh ṣad o bar 'ashr nuhham [।*] shumār i sāl Ahmed bud zi Maulūd
3 Ba tārīkh i nuhum rōz i Si shamba [।*]ba 'ayn i sā 'at i Birjīs i mas'ūd
4 Ṭulū'i gaus būd o ham ba mīzān [।*] shafaq bar Zohra o Birjis afzūd
5 'Aṭārud 'Āftāb o Rās har sih [।*] ba burj i sumbula būdand mahmūd
6 Ba Jaddi māh ba 'aqrab būd Mirrīkh [।*] Zanab dar Hūt Kaiwan dar Hamal būd
7 Shumur'īn waqt ra'īnast pindār [।*] ki qil'a az hama asbab pur būd
8 Bimānad qā'im o mahfūz zāfāt [।*] ba faḍl i rāhmat i khallāq i ma'būd

46 (IV Sr 159)

Śrīraṅgapaṭṭaṇa

On the elephant gate of the fort

When the king laid the foundation of this fort the year was Zabarjad and the month Khusravi, one thousand two hundred and ninteen reckoned from the year of the *maulūd* (birth) of Ahmad (Muhamad) the full moon. The date was the ninth and the day was Tuesday; the auspicious time when Jupiter was in the ascendant. Sagittarins was rising and in Libra twilight encircled Venus and Juptier. Mercury and the sun at the head of each month were auspicious in the sign Virgo. The moon was in Capricorn, Mars in Scorpio the tail (of the Dragon) was in Pisces, while Saturn was in Aries. The portent of such a time, bethink you, is that the fort is well equipped in everything. May it remain secure and free from calamity, through the favour and mercy of the Creator.

*ಶ್ರೀರಂಗಪಟ್ಟಣದ ಶಾಸನ*



*ಕ್ಯಾಂಬೋಡಿಯಾದ ಬಂಟೈಸ್ರೀ ದೇವಾಲಯ*

ಪ್ರಬಂಧವೊಂದರಲ್ಲಿ ಕುತೂಹಲಕಾರೀ ಅಂಶವೊಂದು ಸಿಕ್ಕಿತು. ಆಕಾಶದ ಇದೇ ಭಾಗದಲ್ಲಿ ಪ್ಲಾನೆಟರಿ ನೆಬ್ಯುಲಾ ಒಂದಿದೆ (NGC ೭೬೬೨). ಇದನ್ನು ದೊಡ್ಡ ದೂರದರ್ಶಕದಿಂದ ನೋಡಿದಾಗ ಎರಡು ಉಂಗುರಗಳಂತಹ ರಚನೆಗಳು ಒಂದನ್ನೊಂದು ಆವರಿಸಿರುವಂತೆ ಕಾಣುತ್ತವೆ. ಮಧ್ಯಭಾಗದಿಂದ ವೇಗವಾಗಿ ಹೊರಗೆ ಚಿಮ್ಮುತ್ತಿರುವ ವಸ್ತುವಿನ ವೇಗವನ್ನು ಅಳತೆ ಮಾಡಿ ಎಷ್ಟು ವರ್ಷಗಳ ಹಿಂದೆ ಅವು ಚಿಮ್ಮಿವೆ ಎಂದು ಲೆಕ್ಕ ಮಾಡಲಾಗಿತ್ತು. ಅದರ ದೂರ ೮೦೦ ಪಾರ್ಸೆಕ್ ಎಂದಿಟ್ಟುಕೊಂಡರೆ, ಸುಮಾರು ೭೦೦ ವರ್ಷಗಳ ಹಿಂದೆ ಒಮ್ಮೆ, ೧೦೦೦ ವರ್ಷಗಳ ಹಿಂದೆ ಇನ್ನೊಮ್ಮೆ ವಸ್ತುವನ್ನು ವೇಗವಾಗಿ ಹೊರಗೆಸೆಯಿತು ಎಂದು ತಿಳಿಯಬಹುದು. ದೂರವನ್ನು ನಿಖರವಾಗಿ ತಿಳಿದರೆ ಈ ಸಂಖ್ಯೆಗಳು ಬದಲಾಗುತ್ತವೆ.

ಸೂರ್ಯನಂತಹ ನಕ್ಷತ್ರದ ಅಂತಿಮ ಘಟ್ಟವೇ ಪ್ಲಾನೆಟರಿ ನೆಬ್ಯುಲಾ. ತನ್ನ ಅರ್ಧಕ್ಕಿಂತ ಹೆಚ್ಚು ವಸ್ತುವನ್ನು ಅದು ಈ ಹಂತದಲ್ಲಿ ಕಳೆದುಕೊಳ್ಳುತ್ತದೆ. ಆಗ ತಾತ್ಕಾಲಿಕವಾಗಿ ಅದು ಬಹಳ ಪ್ರಕಾಶಮಾನವಾಗಿ ಕಾಣುತ್ತದೆ.

ಹಾಗಾದರೆ ೧೨೧೫ರಲ್ಲಿ ಮತ್ತು ೧೭೯೨ರಲ್ಲಿ ಕೂಡ ಇದೇ ನಕ್ಷತ್ರ ಸ್ಫೋಟಿಸಿ, ಬರಿಗಣ್ಣಿಗೆ ಕಾಣುವ ಪ್ರಕಾಶ ಪಡೆದಿರಬಹುದಲ್ಲವೇ ? ಇದನ್ನು ಧೂಮಕೇತು ಎಂದು ತಪ್ಪು ತಿಳಿದು ದಾಖಲು ಮಾಡಿರಬಹುದಲ್ಲವೇ ?

ಈ ಎರಡೂ ಶಾಸನಗಳು ಈ ದೃಷ್ಟಿಯಿಂದ ಬಹಳ ಮಹತ್ವ ಪಡೆಯುತ್ತವೆ. ಸಾಮಾನ್ಯವಾಗಿ ಗ್ರಹಗಳ ಸ್ಥಾನಗಳನ್ನು ನಕ್ಷತ್ರಗಳೊಡನೆ ಹೇಳುವ ಪದ್ಧತಿ ಜಾರಿಯಿದ್ದಾಗ ಹೀಗೆ ರಾಶಿಗಳ ಹೆಸರನ್ನು ಹೇಳಿರುವುದೂ ಒಂದು ವಿಶೇಷ ಎಂದು ಹೇಳಬಹುದು.

**ಡಾ॥ ಬಿ. ಎಸ್. ಶೈಲಜಾ, ಗೀತಾ ಕೈದಾಳ ಗಣೇಶ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು – ೫೬೦ ೦೦೧

ಎಚ್. ಕೆ. ರಾಮಚಂದ್ರಮೂರ್ತಿ

ಕೆಲವು ವರ್ಷಗಳ ಹಿಂದಿನ ಮಾತು. ಗೆಳೆಯ ರಾಳ್ಲಪಳ್ಳಿ ಪ್ರೊ॥ ಫಣಿಶಾಯಿ ಅವರ ಜಯನಗರದ ಮನೆಯಲ್ಲೊಂದು ಪುಟ್ಟ, ಸಂಗೀತ ಗೋಷ್ಠಿ. ನನ್ನ ಪ್ರಿಯ ಗುರುಗಳಾದ ಪ್ರೊ॥ ಎ. ಎನ್. ಮೂರ್ತಿರಾಯರೂ ಅಲ್ಲಿದ್ದರು. ತಿರುಪತಿಯಿಂದ ಬಂದಿದ್ದ ಅವರ ತಂದೆ ಪ್ರಕಾಂಡ ಸಂಗೀತಜ್ಞ ಡಾ॥ ರಾಳ್ಲಪಳ್ಳಿ ಅನಂತ ಕೃಷ್ಣಶರ್ಮರನ್ನು ಭೇಟಿಯಾಗಲು ಡಾ॥ ವಿ. ದೊರೆಸ್ವಾಮಿ ಅಯ್ಯಂಗಾರ್ ಅವರು ಬಂದಿದ್ದರು... ಡಾ॥ ಶರ್ಮರ ಬೇಡಿಕೆಯಂತೆ ಅಯ್ಯಂಗಾರ್ ಅವರು ಸುಮಾರು ೧ ೧/೨ ಗಂಟೆ ಕಾಲ ವೀಣಾವಾದನ ಪ್ರಸ್ತುತಪಡಿಸಿದರು. ಇಂಥ ಆತ್ಮೀಯ ಖಾಸಗಿ ಶ್ರೋತೃಗಳ ಸಲುವಾಗಿ ವೀಣೆ ನುಡಿಸುವಾಗ ಅಯ್ಯಂಗಾರ್ ಅವರು ಎಂದೂ ನಿರಾಶೆಗೊಳಿಸುತ್ತಿರಲಿಲ್ಲ. ಅಂದು ಅವರ ವಾದನ ಅತ್ಯಂತ ಸೂಕ್ಷ್ಮ ರೀತಿಯಲ್ಲಿ ನಮ್ಮ ಹೃದಯ ಸ್ಪರ್ಶಿಸುವಂತಿತ್ತು. ಆ ಮಾತು ಹಾಗಿರಲಿ.



# ನಾದ ಸಂಪನ್ನತೆಯ ನೇದನೂರಿ

ಆಮೇಲೆ ಲೋಕಾಭಿರಾಮವಾಗಿ ಮಾತನಾಡುತ್ತಾ ನಮ್ಮಲ್ಲಿ ಯಾರೋ ಕೇಳಿದ ಪ್ರಶ್ನೆಗುತ್ತರವಾಗಿ ರಾಳ್ಲಪಳ್ಳಿಯವರು 'ನಮ್ಮ ಅಭಿಜಾತ ಕರ್ಣಾಟಕ ಸಂಗೀತದ ಒಬ್ಬ ಶ್ರೇಷ್ಠ ಪ್ರತಿನಿಧಿಯೆಂದರೆ ನೇದನೂರಿ ಕೃಷ್ಣಮೂರ್ತಿಯೆ ಸರಿ' ಎಂದರು. ಅದು ಬಹುದೊಡ್ಡ ಸಂಗೀತ ಶಾಸ್ತ್ರಜ್ಞರೊಬ್ಬರ, ಔಚಿತ್ಯಪೂರ್ಣವಾದ ಮಾತು.

ಆ ಮಹಾನ್ ವಿದ್ವಾಂಸರಾದ ನೇದನೂರಿ ಇನ್ನಿಲ್ಲ. ಅವರು ೨೦೧೪ರ ಡಿಸೆಂಬರ್ ದಿನಾಂಕ ೮ರಂದು ವಿಶಾಖಪಟ್ಟಣದ ತಮ್ಮ ಮನೆಯಲ್ಲಿ ತೀರಿಕೊಂಡರು. ಅವರು ಸ್ವಲ್ಪ ಕಾಲ ಅನಾರೋಗ್ಯದಿಂದ ನರಳುತ್ತಿದ್ದು ಚಿಕಿತ್ಸೆ ಪಡೆಯುತ್ತಿರುವಾಗಲೇ ಕೊನೆಯುಸಿರೆಳೆದರಂತೆ. ಅವರ ನಿಧನದಿಂದ ಕರ್ಣಾಟಕ ಸಂಗೀತ ಲೋಕಕ್ಕೆ ತುಂಬಲಾರದ ನಷ್ಟವುಂಟಾಗಿದೆ. ನಮ್ಮ ಸಂಗೀತ ಪರಂಪರೆಗೆ ಅವರು ಬಿಟ್ಟುಹೋಗಿರುವ ಹಲವು ವಿಶಿಷ್ಟ ಅಂಶಗಳು ಚಿರಕಾಲ ನಮ್ಮ ಸಾಂಸ್ಕೃತಿಕ ಸಂಪತ್ತಿನ ಚಿರಂತನ ಮೌಲ್ಯಗಳಾಗಿರುವುದರಲ್ಲಿ ಯಾವ ಸಂಶಯವೂ ಇಲ್ಲ.

ನೇದನೂರಿಯವರು ೧೯೨೭ರ ಅಕ್ಟೋಬರ್ ೧೦ರಂದು ಆಂಧ್ರಪ್ರದೇಶದ ಕೊತಪಲ್ಲಿಯಲ್ಲಿ ಜನ್ಮವೆತ್ತಿದರು. ಬಾಲ್ಯದಿಂದಲೇ ಸಂಗೀತದ ಅಗಾಧ ಪ್ರಭಾವದ ಹಿನ್ನೆಲೆಯಲ್ಲಿ ಬೆಳೆದರು. ಮನೆಯಲ್ಲಿ ಅವರ ತಂದೆ, ಜಯದೇವನ ಅಷ್ಟಪದಿಗಳನ್ನು ಹಾಡುವ ಸಂಪ್ರದಾಯವನ್ನು ಬಹು ವಿಶಿಷ್ಟ ರೀತಿಯಲ್ಲಿ ಪೋಷಿಸಿದ್ದರು. ಅವರ ತಾಯಿ 'ಆಧ್ಯಾತ್ಮ ರಾಮಾಯಣ'ದಲ್ಲಿ ಮಹತ್ವದ ಪಾಂಡಿತ್ಯ ಪಡೆದಿದ್ದರಂತೆ.

೧೯೪೦ರಲ್ಲಿ ನೇದನೂರಿಯವರು ಆಂಧ್ರದ ವಿಜಯನಗರಮ್ ಮಹಾರಾಜಾ ಕಾಲೇಜಿನಲ್ಲಿ ತಮ್ಮ ಸಂಗೀತ ಶಿಕ್ಷಣವನ್ನು ಪ್ರಾರಂಭಿಸಿದರು. ಅವರ ಗುರುಗಳಾದ ದ್ವಾರಂ ನರಸಿಂಗರಾವ್ ನಾಯ್ಡು, ಶ್ರೀಪಾದ ಪಿನಾಕಪಾಣಿ ಮುಂತಾದವರು ಅವರ ಪ್ರೌಢ ಸಾಧನೆಗೆ ಸಹಕಾರವಾದವು. ಅವರ ಅನೇಕ ಶಿಷ್ಯರುಗಳಲ್ಲಿ ಗೋವಿಂದ ಬಾಲಕೃಷ್ಣ, ಮಲ್ಲಾಡಿ ಸೋದರರು ಮುಂತಾದವರು ಬಹು ಮುಖ್ಯರು.

ನೇದನೂರಿಯವರು ತಾಳ್ಳಪಾಕು ಅಣ್ಣಮಾಚಾರ್ಯರ ೧೦೮ ಕೃತಿಗಳಿಗೆ ರಾಗಸಂಯೋಜನೆ ಮಾಡಿ ಬಹು ದೊಡ್ಡ ಕಲಾಸೇವೆಯಲ್ಲಿ ಕೃತಕೃತ್ಯರಾದರು. ಅವರಿಗೆ 'ಸಂಗೀತ ಚೂಡಾಮಣಿ', 'ಸಂಗೀತ ಕಲಾಸಾಗರ', 'ಗಾನ ಕಲಾನಿಧಿ' ಮುಂತಾದ ಪ್ರಶಸ್ತಿಗಳನ್ನು ನೀಡಲಾಗಿದ್ದು, ಅವರು ೫ ದಶಕಗಳ ಕಾಲ ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯಲ್ಲಿ ಭಾಗವಹಿಸಿದ್ದರು. ದೇಶ ವಿದೇಶಗಳ ಪ್ರವಾಸದಲ್ಲಿ ಹಲವಾರು ಕಡೆ ಅವರ ಸಂಗೀತ ಕಚೇರಿಗಳು ಏರ್ಪಟ್ಟವು – ಕೆನಡಾದ ಕಾಲ್ಗರಿಯಲ್ಲಿ ನಡೆದ,

**ನೇದನೂರಿಯವರು ತಾಳ್ಳಪಾಕು ಅಣ್ಣಮಾಚಾರ್ಯರ ೧೦೮ ಕೃತಿಗಳಿಗೆ ರಾಗಸಂಯೋಜನೆ ಮಾಡಿ ಬಹು ದೊಡ್ಡ ಕಲಾಸೇವೆಯಲ್ಲಿ ಕೃತಕೃತ್ಯರಾದರು. ಅವರಿಗೆ 'ಸಂಗೀತ ಚೂಡಾಮಣಿ', 'ಸಂಗೀತ ಕಲಾಸಾಗರ', 'ಗಾನ ಕಲಾನಿಧಿ' ಮುಂತಾದ ಪ್ರಶಸ್ತಿಗಳನ್ನು ನೀಡಲಾಗಿದ್ದು, ಅವರು ೫ ದಶಕಗಳ ಕಾಲ ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯಲ್ಲಿ ಭಾಗವಹಿಸಿದ್ದರು. ದೇಶ ವಿದೇಶಗಳ ಪ್ರವಾಸದಲ್ಲಿ ಹಲವಾರು ಕಡೆ ಅವರ ಸಂಗೀತ ಕಚೇರಿಗಳು ಏರ್ಪಟ್ಟವು.**

ಕಾರ್ಯಕ್ರಮವನ್ನು ನನ್ನ ಮಗಳು 'ಅದೊಂದು ಅನನ್ಯ ಅನುಭವ' ಎಂದಿದ್ದಳು.

ಪ್ರಧಾನವಾಗಿ ನೇದನೂರಿಯವರ ನಾದಸಂಪನ್ನತೆ – ಧ್ವನಿಯ ಅದ್ಭುತ ಪರಿಶುದ್ಧತೆ (ಟೋನಲ್ ಕ್ವಾಲಿಟಿ) ಲೋಕವಿಖ್ಯಾತವಾಗಿದ್ದು ಅದೇ ಅವರ ಗಾನಶೈಲಿಯ ಜೀವಾಳವೆಂದು ಪ್ರಾಜ್ಞರು ಹೇಳುವುದುಂಟು. ಅವರ ಹಾಡುಗಾರಿಕೆಯಲ್ಲಿ ಯಾವ ರೀತಿಯ 'ಏಕತಾನತೆ'ಯಾಗಲಿ, ಅಸಹಜವೆನ್ನಬಹುದಾದ 'ಪೂರ್ವಸಿದ್ಧತೆ'ಯಾಗಲಿ ಇರುತ್ತಿರಲಿಲ್ಲ. ೩–೪ ಗಂಟೆಗಳ ಕಾಲ ಹಾಡುವಾಗ ಅವರ ಗಾಯನದಲ್ಲಿ ಒಂದು ರೀತಿಯ ವಿಶಿಷ್ಟ, ಸ್ವಯಂಪ್ರೇರಿತ (ವಾಣಿ) 'ಬನಿ' ಇರುತ್ತಿತ್ತು. ಅವರೊಮ್ಮೆ ಹೇಳಿದ ಮಾತುಗಳು ಅವರ ಅತ್ಯುನ್ನತ ಕಲಾಭಿಜ್ಞತೆಯ ಅಭಿವ್ಯಕ್ತಿಯೆನ್ನಬಹುದು : "ಸಂಗೀತವು ಕಲೆ ಹಾಗೂ (ವಿಜ್ಞಾನ) ಶಾಸ್ತ್ರಗಳ ವಿವೇಕಯುಕ್ತ, ಸಮ್ಮಿಳನವಾದ್ದರಿಂದ ಕೇವಲ ಜನಪ್ರಿಯತೆ ಗಳಿಸಲು ಅದರ ಅಭಿಜಾತ ಲಕ್ಷಣಗಳನ್ನು ಕೆಡಿಸಬಾರದು." ಹತ್ತಾರು ವರ್ಷ ಅವರ ಸ್ನಿಗ್ಧ ಸಂಗೀತವನ್ನು ಕೇಳಿದವರ ಏಕಾಗ್ರತೆಗೆ ಎಂದೂ ಭಂಗ ಬರುತ್ತಿರಲಿಲ್ಲ.

ಪ್ರಖ್ಯಾತ ಗಾಯಕ–ಸಂಗೀತ ಶಾಸ್ತ್ರಜ್ಞ ಶ್ರೀ ಟಿ. ಎಮ್. ಕೃಷ್ಣ ಅವರು 'ಸಂಗೀತ ಕೇವಲ ಶಾಸ್ತ್ರವಲ್ಲ – ಅದೊಂದು ವಿಶಿಷ್ಟ ಕಲೆ' ಎಂದು ಹೇಳುತ್ತಾ... 'ಸಂಗೀತದ ಬಗೆಗಿನ ಸೌಂದರ್ಯ ಮೀಮಾಂಸೆ ಮತ್ತು ವ್ಯಾಕರಣ ಕುರಿತಂತೆ ಸಂಪೂರ್ಣ ಜ್ಞಾನವನ್ನು ಪಡೆದೇ ಅದರ ವಿವಿಧ ಇಂಪಾದ ಹಾಗೂ ತಾಳಬದ್ಧತೆಯ ಸ್ವರೂಪಗಳನ್ನು ವ್ಯಕ್ತಪಡಿಸುವುದು, ಕೇಳುಗರಿಗೆ ಪರಿಚಯಿಸುವುದು ಸಂಗೀತಗಾರನ ಕರ್ತವ್ಯ... ಯಾವುದೋ ಒಂದು ಸಂದೇಶವನ್ನೋ ಅಥವಾ ತನ್ನ ಧರ್ಮನಿಷ್ಠೆಯ ಅನುಭವವನ್ನೋ ತಿಳಿಹೇಳುವುದಲ್ಲ... ಹಾಗೆ ಪಡೆದ ಅನುಭವವು ವಿನ್ಯಾಸಗಳನ್ನು ರೂಪಿಸುತ್ತದೆ ಮತ್ತು ಆ ಸ್ವರೂಪದ ಶ್ರುತಿಮಾಧುರ್ಯದಲ್ಲಿ ಕೊನೆಗೊಳ್ಳುತ್ತದೆ' ಎನ್ನುತ್ತಾರೆ. ಈ ಮಾತುಗಳನ್ನು ಯಾವುದೇ ನೈಜ ಸಂಗೀತಗಾರನಿಗೂ ಅನ್ವಯಿಸಬಹುದಾದರೂ ನೇದನೂರಿಯವರಂಥ ಉನ್ನತ ಪ್ರತಿಭಾನ್ವಿತರ ಸಂಗೀತ ಕೇಳಿ ರಸಾನುಭವ ಪಡೆದ ಪುಣ್ಯವಂತರಿಗೆ ಈ ಮಾತುಗಳು ಎಷ್ಟು ಖಚಿತ, ಔಚಿತ್ಯಪೂರ್ಣವೆಂಬುದು ತಿಳಿಯುತ್ತದೆ.

ವೈಯಕ್ತಿಕ ಜೀವನದ ಒಂದೆರಡು ಮಾತುಗಳು... ನನಗೂ ನನ್ನ ದಿ॥ ಪತ್ನಿಗೂ ನೇದನೂರಿಯವರ ಸಂಗೀತವೆಂದರೆ ಪಂಚಪ್ರಾಣ. ಪ್ರೊ॥ ಡೇವಿಡ್ ಶೂಲ್‌ಮನ್ ಹೇಳುವಂತೆ ನಮ್ಮಂಥ ಹಲವು ಸಂಗೀತ ಶ್ರೋತೃಗಳಿಗೆ ಕರ್ನಾಟಕ ಸಂಗೀತದ ತಾಂತ್ರಿಕ ಜ್ಞಾನವಿಲ್ಲದಿದ್ದರೂ, ಅದರ ಸೂಕ್ಷ್ಮಾತಿಸೂಕ್ಷ್ಮ ಅಂಶಗಳ ಅರಿವಿಲ್ಲದಿದ್ದರೂ ಸಂಗೀತವನ್ನು ಕೇಳಲು ಹಾತೊರೆಯುತ್ತೇವೆ. ಇಂಥ ಒಂದು ಸಭೆ ಜಯನಗರದ ನ್ಯಾಷನಲ್ ಕಾಲೇಜಿನಲ್ಲಿ ನಡೆದಾಗ ನೇದನೂರಿಯವರು ಹಾಡಿದ ಕಾನಡ ರಾಗದ 'ಸುಖಿ ಎವ್ವರೋ', ಸಾಮ ರಾಗದ 'ಅನ್ನಪೂರ್ಣೆ' ಮುಂತಾದ ಹಾಡುಗಳ ನೆನಪುಗಳು ನನ್ನನ್ನು ಇನ್ನೂ ಕಾಡುತ್ತವೆ. ಅಂದಿನ ಸಂಗೀತ ಸಭೆಗೆ ಒತ್ತಾಯಪೂರ್ವಕವಾಗಿ ಬಂದ ನನ್ನ ಹೆಂಡತಿ (ಅವರ ಆರೋಗ್ಯ ಚೆನ್ನಾಗಿರಲಿಲ್ಲ) ಆಮೇಲೆ ಹೇಳಿದ ಮಾತುಗಳು ನನ್ನ ಕಿವಿಗಳಲ್ಲಿ ಪ್ರತಿಕ್ಷಣವೂ ಅನುರಣಿಸುತ್ತವೆ : 'ಅಯ್ಯೋ ಬಿಡಿ – ನಮ್ಮ ದೈಹಿಕ ಬಾಧೆಗಳು ಇದ್ದೇ ಇರುತ್ತವೆ. ಆದರೆ ಇವತ್ತು ಕೇಳಿದ (ನೇದನೂರಿಯವರ) ಸಂಗೀತ ನಮ್ಮ ಜೀವನದಲ್ಲಿ ಅತ್ಯಂತ ಅಪರೂಪದ ಸಂಪತ್ತು, ಅಲ್ಲವೇ ?' ಎಷ್ಟು ಸಹಜವಾದ ನುಡಿಗಳವು !!



**ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೧೧೨, ಶ್ರಾವಂತಿ ಪ್ಯಾಲೆಸ್
ಸಿ. ಆರ್. ಬಡಾವಣೆ
೩ನೇ ಅಡ್ಡರಸ್ತೆ
ಜೆ. ಪಿ. ನಗರ ೧ನೇ ಹಂತ
ಬೆಂಗಳೂರು – ೫೬೦ ೦೭೮



# ಹೊಸತು

ನೆಮ್ಮದಿಯ ನಾಳೆ ನಮ್ಮದು



ಹೊಸ ವರ್ಷದ ಹಾರ್ದಿಕ ಶುಭಾಶಯಗಳು

# ೨೦೧೫

## ಜನವರಿ

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | ೩೧ |

## ಫೆಬ್ರವರಿ

| | | | | |
|---|---|---|---|---|
| ಭಾನುವಾರ | ೧ | ೮ | ೧೫ | ೨೨ |
| ಸೋಮವಾರ | ೨ | ೯ | ೧೬ | ೨೩ |
| ಮಂಗಳವಾರ | ೩ | ೧೦ | ೧೭ | ೨೪ |
| ಬುಧವಾರ | ೪ | ೧೧ | ೧೮ | ೨೫ |
| ಗುರುವಾರ | ೫ | ೧೨ | ೧೯ | ೨೬ |
| ಶುಕ್ರವಾರ | ೬ | ೧೩ | ೨೦ | ೨೭ |
| ಶನಿವಾರ | ೭ | ೧೪ | ೨೧ | ೨೮ |

## ಮಾರ್ಚ್

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | ೩೧ |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

## ಏಪ್ರಿಲ್

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | |
| ಶನಿವಾರ | ೪ | ೧೧ | ೧೮ | ೨೫ | |

## ಮೇ

| | | | | | |
|---|---|---|---|---|---|
| ಭಾನುವಾರ | ೩೧ | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

## ಜೂನ್

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

## ಜುಲೈ

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | ೩೧ |
| ಶನಿವಾರ | ೪ | ೧೧ | ೧೮ | ೨೫ | |

## ಆಗಸ್ಟ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | ೩೧ | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

## ಅಕ್ಟೋಬರ್

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | ೩೧ |

## ನವೆಂಬರ್

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

## ಡಿಸೆಂಬರ್

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | ೩೧ |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

ಪೆನ್ಸಿಲ್ ತುದಿಯಲ್ಲಿ ಬಳಸುವ ಗ್ರಾಫೈಟ್ $sp^2$ ರಾಸಾಯನಿಕ ಬಂಧ ಹೊಂದಿರುವುದರಿಂದಲೇ ಅದು ಮಿದುವಾಗಿದ್ದು ವಿದ್ಯುತ್ ವಾಹಕ ಗುಣವನ್ನು ಪ್ರದರ್ಶಿಸುವುದು. ವಜ್ರದಲ್ಲಿನ $sp^3$ ರಾಸಾಯನಿಕ ಬಂಧವು, ಅದನ್ನು ಕಠೋರವನ್ನಾಗಿಸಿ ಅದರ ಅವಾಹಕ ಗುಣಕ್ಕೆ ಕಾರಣವಾಗಿದೆ. ಇಲ್ಲಿ ಕುತೂಹಲಕಾರಿ ವಿಷಯವೆಂದರೆ, ಗ್ರಾಫೈಟ್ ಮತ್ತು ವಜ್ರ ಎರಡೂ ಕಾರ್ಬನ್ ಅಣುಗಳಿಂದ ರಚನೆಯಾಗಿರುವುದು.






# ವಿಸ್ಮಯಕಾರಿ ಕಾರ್ಬನ್ ನ್ಯಾನೊನಳಿಗೆಗಳು

ಜಗತ್ತಿನಲ್ಲಿರುವ ಬಹುತೇಕ ಜೈವಿಕ ಪದಾರ್ಥಗಳಲ್ಲಿ ಕಾರ್ಬನ್ ಧಾತುವಿನದೇ ಮೇಲುಗೈ. ಮಿಲಿಯಾಂತರ ರಾಸಾಯನಿಕ ಸಂಯುಕ್ತಗಳಲ್ಲಿ ಕಾರ್ಬನ್‌ನ ಅಸ್ತಿತ್ವವಿದ್ದರೂ ಕಟ್ಟಿಗೆ, ಬಟ್ಟೆ, ಸೀಮೆಎಣ್ಣೆ, ಪೆಟ್ರೋಲ್, ಡೀಸೆಲ್ ಹೀಗೆ ಬಹುತೇಕ ಪದಾರ್ಥಗಳಲ್ಲಿ ಇದು ಪ್ರಮುಖವಾಗಿ ಕಾಣಸಿಗುತ್ತದೆ. ಜೀವಜಗತ್ತಿನ ಮುಖ್ಯ ವಸ್ತುವಾದ ಕಾರ್ಬನ್ ಎಂಬ ಈ ಧಾತು, ರಾಸಾಯನಿಕ ಆವರ್ತ ಕೋಷ್ಟಕದಲ್ಲಿ ಪರಮಾಣು ಸಂಖ್ಯೆ ೬ಅನ್ನು ಹೊಂದಿದೆ. ಕಾರ್ಬನ್‌ನ ಒಂದು ಪರಮಾಣು ಮತ್ತೊಂದು ಪರಮಾಣುವಿನ ಜೊತೆ ಏರ್ಪಡುವ ರಾಸಾಯನಿಕ ಬಂಧವೇ ಇದರ ಅನೇಕ ಬಹುರೂಪಿಗಳಿಗೆ ಕಾರಣವಾಗಿದೆ. ಒಂದೆಡೆ ಹೊಳೆಯುವ ವಜ್ರ, ಚಿಮಿಣಿಯಿಂದ ಹೊರಸೂಸುವ ಕಪ್ಪು ಹೊಗೆ, ಬರೆಯುವ ಪೆನ್ಸಿಲ್ ತುದಿಯಲ್ಲಿರುವ ಗ್ರಾಫೈಟ್ ಎಲ್ಲವೂ ಇದರ ಬಹುರೂಪಿಗಳೇ. ವಿಜ್ಞಾನಿಗಳಾದ ಕ್ರೋಟೋ ಮತ್ತು ಸ್ಮಾಲೆ ೧೯೮೫ರಲ್ಲಿ ಕಾರ್ಬನ್‌ನ ಹೊಸ ಬಹುರೂಪಿಯಾದ ಫುಲರಿನ್ ಎನ್ನುವ ೬೦ ಕಾರ್ಬನ್ ಪರಮಾಣುವುಳ್ಳ ಪಂಜರದಂಥ ರಚನೆಯ ಗೋಳವನ್ನು ಆವಿಷ್ಕರಿಸಿದರು. ಇವರ ಈ ಆವಿಷ್ಕಾರಕ್ಕಾಗಿ ೧೯೯೬ರ ರಸಾಯನವಿಜ್ಞಾನದ ನೊಬೆಲ್ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಈ ರೀತಿಯಾಗಿ ಕಂಡುಹಿಡಿದ ಫುಲರಿನ್ ಕಾರ್ಬನ್ ಗೋಳಗಳ ಸ್ಥಿರತೆ ಮತ್ತು ಸದೃಢತೆ ಅಸಾಧಾರಣವಾಗಿದ್ದು, ಇವುಗಳ ವ್ಯಾಸ ಕೇವಲ ೦.೭೧ ನ್ಯಾನೊಮೀಟರ್ ಎಂಬುದು ಅಚ್ಚರಿಯನ್ನುಂಟು ಮಾಡದಿರದು ! (ನ್ಯಾನೊಮೀಟರ್ ಎಂಬುದು ಅಳತೆಪಟ್ಟಿಯ ಅತಿ ಸಣ್ಣ ಭಾಗವಾದ ಒಂದು ಮಿಲಿಮೀಟರ್‌ಅನ್ನು ಹತ್ತು ಲಕ್ಷ ಬಾರಿ ವಿಂಗಡಿಸಿದಾಗ ದೊರೆಯುವ ಅತಿ ಸಣ್ಣ ಪರಿಮಾಣ.) ರಾಕೆಟ್ ವೇಗದಲ್ಲಿ ಇಲ್ಲಿಂದ ಮೊದಲ್ಗೊಂಡವು ಕಾರ್ಬನ್ ಕುರಿತ ಅತ್ಯಾಧುನಿಕ ಸಂಶೋಧನೆಗಳು. ಫುಲರಿನ್‌ಗಳಿಂದ ಆರಂಭವಾದ ಈ ನ್ಯಾನೊಸಂಶೋಧನೆಯ ಝರಿ, ಇಂದು

**ಎಸ್. ಮಂಜುನಾಥ**

ಜಲಪಾತವಾಗಿ ಧುಮ್ಮಿಕ್ಕಿ ಹರಿಯುತ್ತಿದೆ. ಇಂದು ಕಾರ್ಬನ್ ಎನ್ನುವ ಮಾಯಾ ಪದಾರ್ಥ ಎಲ್ಲ ಸಂಶೋಧಕರ ಪಾಲಿಗೆ ವರ ಕೊಡುವ ಕಲ್ಪವೃಕ್ಷವಾಗಿ, ಲಕ್ಷಗಟ್ಟಲೆ ಸಂಶೋಧನಾ ಪ್ರಬಂಧಗಳಿಗೆ ಮೂಲ ವಸ್ತುವಾಗಿದೆ. ಇದರ ಚರಿತ್ರೆಯೇ ರೋಚಕ !

ಕಾರ್ಬನ್ ಪರಮಾಣುಗಳು ಎರಡು ಆಯಾಮಗಳಲ್ಲಿ ಗ್ರಾಫೈಟ್ ಥರದಲ್ಲಿ ಮತ್ತು ಮೂರು ಆಯಾಮಗಳಲ್ಲಿ ವಜ್ರದಲ್ಲಿರುವಂತೆ ರಾಸಾಯನಿಕ ಬಂಧನಕ್ಕೆ ಒಳಪಟ್ಟಿರುವುದೇ ಅದರ ವಿವಿಧ ಬಹುರೂಪಿಗಳಿಗೆ ಕಾರಣವಾಗಿದೆ. ಗ್ರಾಫೈಟನ್ನು ಸೂಕ್ಷ್ಮವಾಗಿ ವೀಕ್ಷಿಸಿದಾಗ ಅದು ಎರಡು ಆಯಾಮಗಳ ಪದರಿನಂತಹ ರಚನೆಗಳನ್ನು ಹೊಂದಿರುವುದು ದೃಢಪಟ್ಟಿದೆ. ಈ ರೀತಿಯ ಗ್ರಾಫೈಟಿನ ಒಂದು ಪರಮಾಣು ದಪ್ಪದ ಹಾಳೆಯೇ, ಇಂದು 'ಗ್ರಾಫಿನ್' ಎಂದು ಜಗದ್ವಿಖ್ಯಾತಿಯಾಗಿ ಎಲ್ಲ ಸಂಶೋಧಕರ ಹೃನ್ಮನವನ್ನು ಕದ್ದಿದೆ. ಇದುವೇ ಕಾರ್ಬನಿನ ಅತ್ಯಾಧುನಿಕ ಬಹುರೂಪಿ !



ಚಿತ್ರ ೧. ಕಾರ್ಬನ್–೬೦ ಫುಲರಿನ್ ಚೆಂಡು



ಚಿತ್ರ ೨. ಕಾರ್ಬನ್ ನ್ಯಾನೊನಳಿಗೆ

ಜಪಾನ್‌ನ ವಿಜ್ಞಾನಿ ಸುಮಿಯೊ ಇಜಿಮಾ ೧೯೯೧ರಲ್ಲಿ ಫುಲರಿನ್ ಅಧ್ಯಯನದ ತಮ್ಮ ಸಂಶೋಧನೆಗಳಲ್ಲಿ ನ್ಯಾನೊನಳಿಗೆ ಆಕಾರದ ಗ್ರಾಫೈಟ್ ರಚನೆಗಳನ್ನು ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಮೊಟ್ಟಮೊದಲ ಬಾರಿಗೆ ಕಂಡು, ಅವನ್ನು ಜಗತ್ತಿಗೆ ಪರಿಚಯಿಸಿದರು. ವಿಶ್ವದ ಅತಿ ಪ್ರತಿಷ್ಠಿತ ವೈಜ್ಞಾನಿಕ ಸಂಶೋಧನಾ ನಿಯತಕಾಲಿಕವಾದ 'ನೇಚರ್'ನಲ್ಲಿ, ಇವರು ಇದೇ ವಿಷಯ ಕುರಿತು ಪ್ರಕಟಿಸಿದ ಪ್ರಬಂಧವು ಸುಮಾರು ೩೫೦೦೦ ಉಲ್ಲೇಖಗಳನ್ನು ಕಂಡಿದೆ. ಇದೂ ಒಂದು ಅದ್ಭುತ ದಾಖಲೆಯೇ ಹೌದು! ಅಂದಿನ ಅವರ 'ಹೆಲಿಕಲ್ ಮೈಕ್ರೊ ಟ್ಯುಬುಲ್ಸ್ ಆಫ್ ಗ್ರಾಫೈಟಿಕ್ ಕಾರ್ಬನ್' ಎಂಬ ಪ್ರಬಂಧದಲ್ಲಿ ಚರ್ಚಿಸಿದ ವಸ್ತುವೇ ಇಂದು ಪ್ರಪಂಚದೆಲ್ಲೆಡೆ 'ಕಾರ್ಬನ್ ನ್ಯಾನೊನಳಿಗೆ'ಗಳು ಎಂದು ಚಿರಪರಿಚಿತವಾಗಿವೆ. ಮುಂದುವರಿದ ಅನೇಕ ರಾಷ್ಟ್ರಗಳಲ್ಲಿ ಸಾವಿರಾರು ಸಂಶೋಧಕರು ಇದರ ವಿವಿಧ ಬಗೆಯ ಸಂಶೋಧನೆಯಲ್ಲಿ ನಿರಂತರವಾಗಿ ತೊಡಗಿ ಇವುಗಳನ್ನು ವೈವಿಧ್ಯಮಯವಾಗಿ ತಯಾರಿಸುವ ಬಗೆ, ಇವುಗಳ ಅಸಾಧಾರಣ ಗುಣಸ್ವಭಾವಗಳು ಮತ್ತು ಬೇರೆ ಬೇರೆ ಕ್ಷೇತ್ರಗಳಲ್ಲಿನ ಇವುಗಳ ಅನ್ವಯಿಕೆಗಳ ಬಗ್ಗೆ ಬೆಳಕು ಚೆಲ್ಲುತ್ತಿದ್ದಾರೆ. ಅಂತೆಯೇ ಇಂದು ಯುವ ಸಂಶೋಧಕರಿಗೆ ಈ ಕ್ಷೇತ್ರದಲ್ಲಿ ವಿಪುಲ ಅವಕಾಶಗಳನ್ನು ಸೃಷ್ಟಿಸಿದ ಕೀರ್ತಿ ಇದಕ್ಕೆ ಸಲ್ಲುತ್ತದೆ.

ಗ್ರಾಫಿನ್‌ನ ಏಕಪದರಿನ ಹಾಳೆಯನ್ನು ಸುರಳಿ ಸುತ್ತಿ, ಸ್ತಂಭಾಕೃತಿ ರಚಿಸಿ, ಈ ಸ್ತಂಭಾಕೃತಿಯ ಎರಡು ತುದಿಗಳಿಗೆ, ಕತ್ತರಿಸಿದ ಫುಲರಿನ್‌ನ ಅರ್ಧ ಗೋಳಾಕೃತಿಗಳನ್ನು ಜೋಡಿಸಿದಾಗ ದೊರೆಯುವ ನ್ಯಾನೊ ರಚನೆಯೇ ಕಾರ್ಬನ್ ನ್ಯಾನೊನಳಿಗೆ. ಈ ನಳಿಗೆಗಳ ವ್ಯಾಸ ೧ರಿಂದ ೨೦ ನ್ಯಾನೊಮೀಟರ್ ಇದ್ದು, ಇನ್ನೂ ಇವುಗಳ ಉದ್ದ ೧೦೦ ನ್ಯಾ.ಮೀ.ನಿಂದ ಹಲವು ಸೆ.ಮೀ.ವರೆಗೆ ವ್ಯಾಪಿಸಿರುತ್ತದೆ. ನ್ಯಾನೊದಿಂದ ಮ್ಯಾಕ್ರೊಗಾತ್ರ ಹೊಂದಿರುವುದರಿಂದಲೇ, ನೂರಾರು ಬಗೆಯ ನ್ಯಾನೊಸಾಮಗ್ರಿಗಳಲ್ಲಿ ಇವಕ್ಕೆ ವಿಶೇಷ ಸ್ಥಾನಮಾನ ದೊರಕಿವೆ. ಕಾರ್ಬನ್ ನ್ಯಾನೊನಳಿಗೆಗಳಲ್ಲಿ, ಏಕಭಿತ್ತಿಯ ಕಾರ್ಬನ್ ನ್ಯಾನೊನಳಿಗೆ (SWCNT) ಮತ್ತು ಅನೇಕ ಭಿತ್ತಿಯ ಕಾರ್ಬನ್ ನ್ಯಾನೊನಳಿಗೆಗಳು (MWCNT) ಎಂಬ ಎರಡು ವಿಧಗಳಿವೆ. ಇವುಗಳ ಹೆಸರೇ ಸೂಚಿಸುವಂತೆ ನಳಿಗೆಯು ಒಂದು ಗ್ರಾಫಿನ್ ಹಾಳೆಯಿಂದ ಸುತ್ತಿದ್ದರೆ ಏಕಭಿತ್ತಿಯವೆಂದು, ಅಕಸ್ಮಾತ್ ಅನೇಕ ಗ್ರಾಫಿನ್ ಹಾಳೆಗಳು ಒಂದರೊಳಗೆ ಒಂದರಂತೆ ಸ್ತಂಭಾಕಾರದಲ್ಲಿ ಸುತ್ತಿಕೊಂಡಿದ್ದರೆ ಅನೇಕ ಭಿತ್ತಿಯ ನ್ಯಾನೊನಳಿಗೆಗಳು ಎಂದು ಕರೆಯಲಾಗುವುದು.

ಇನ್ನೂ ಕಾರ್ಬನ್ ನ್ಯಾನೊನಳಿಗೆಗಳನ್ನು ಅನೇಕ ಬಗೆಯಲ್ಲಿ ತಯಾರಿಸಲಾಗುವುದು.



ಚಿತ್ರ ೩. ಸುಮಿಯೊ ಇಜಿಮಾ




ಚಿತ್ರ ೪. ಏಕಭಿತ್ತಿಯ ಮತ್ತು ಅನೇಕ ಭಿತ್ತಿಯ ಕಾರ್ಬನ್ ನ್ಯಾನೊನಳಿಗೆಗಳು

ಅವುಗಳಲ್ಲಿ ರಾಸಾಯನಿಕ ಬಾಷ್ಪ ಸಂಚಯನ (Chemical vapour deposition), ವಿದ್ಯುಚ್ಚಾಪ ವಿಸರ್ಜನೆ (Electric arc discharge), ಲಯಬದ್ಧ ಲೇಸರ್ ಅಪಕ್ಷರಣ (Pulsed laser ablation), ಉಷ್ಣ ಪರಿವರ್ತನೆಯ (Pyrolysis) ಪದ್ಧತಿಗಳು ಮಾತ್ರ ಸರ್ವವ್ಯಾಪಿಯಾಗಿ ಮಾನ್ಯತೆ ಪಡೆದು ಪ್ರಖ್ಯಾತಿ ಹೊಂದಿವೆ. ನ್ಯಾನೊ ತಂತ್ರಜ್ಞಾನ ಕ್ಷೇತ್ರದಲ್ಲಿ ಈ ಪದ್ಧತಿಗಳು ಹೊಸತೇನಲ್ಲ. ಅವು ಅತ್ಯಂತ ಜನಜನಿತವಾಗಿವೆ. ವಿದ್ಯುಚ್ಚಾಪ ವಿಸರ್ಜನಾ ರೀತಿಯ ಪದ್ಧತಿಗಳು ಪ್ರಯೋಗಾಲಯಗಳಲ್ಲಿ ಸರಳವಾಗಿ ಸಣ್ಣ ಪ್ರಮಾಣದಲ್ಲಿ ನ್ಯಾನೊನಳಿಗೆಗಳನ್ನು ತಯಾರಿಸಲು ಸಹಕಾರಿಯಾಗಿವೆ. ಇನ್ನೂ ರಾಸಾಯನಿಕ ಬಾಷ್ಪ ಸಂಚಯನದಂಥ ಪದ್ಧತಿಗಳನ್ನು ಉಪಯೋಗಿಸಿ ದೊಡ್ಡ ಪ್ರಮಾಣದಲ್ಲಿ ನ್ಯಾನೊನಳಿಗೆಗಳನ್ನು ತಯಾರಿಸಬಹುದಾಗಿದೆ. ವಿವಿಧ ಬಗೆಯ ಪದ್ಧತಿಗಳನ್ನು ಬಳಸಿ ಅನೇಕ ಭಿತ್ತಿಯ ನ್ಯಾನೊನಳಿಗೆಗಳನ್ನು ಸುಲಭವಾಗಿ ತಯಾರಿಸಬಹುದಾದರೂ ಏಕಭಿತ್ತಿಯ ನ್ಯಾನೊನಳಿಗೆಗಳ ಸೃಷ್ಟಿ ಕೊಂಚ ಕಷ್ಟವೇ ಸರಿ. ಈ ರೀತಿಯಾಗಿ ತಯಾರಿಸಲ್ಪಟ್ಟ ನಳಿಗೆಗಳನ್ನು ಮುಂದಿನ ಹಂತಗಳಲ್ಲಿ; ಬೇಡವಾದ ಪದಾರ್ಥಗಳಿಂದ ಬೇರ್ಪಡಿಸಿ ಶುದ್ಧೀಕರಿಸುವುದು, ಅವುಗಳ ಇಳುವರಿಯನ್ನು ಹೆಚ್ಚಿಸುವುದು, ಅವುಗಳ ಒಳಗೆ ಬೇರೆ ಪದಾರ್ಥಗಳನ್ನು ತುಂಬುವುದಾಗಿರುತ್ತದೆ. ಅನೇಕ ರೀತಿಯ ರಾಸಾಯನಿಕ ಪ್ರಕ್ರಿಯೆಗಳನ್ನು ಬಳಸಿಕೊಂಡು ನಳಿಗೆಗಳ ಶುದ್ಧೀಕರಣ ಪ್ರಕ್ರಿಯೆ ಪೂರ್ಣಗೊಳಿಸಲಾಗುತ್ತದೆ.

ಸಿಎನ್‌ಟಿ ಎಂಬ ಹ್ರಸ್ವ ರೂಪದಲ್ಲಿ ಕರೆಯುವ ಕಾರ್ಬನ್ ನ್ಯಾನೊ ನಳಿಗೆಗಳು ಬೆರಗುಗೊಳಿಸುವಂಥ ಅನೇಕ ಪ್ರಮುಖವಾದ ಆಕರ್ಷಕ ಗುಣಗಳನ್ನು ಹೊಂದಿವೆ. ಇವುಗಳ ವಿದ್ಯುತ್, ಉಷ್ಣೀಯ, ರಾಸಾಯನಿಕ ಮತ್ತು ಯಾಂತ್ರಿಕ ಗುಣಗಳು ಪ್ರಚಲಿತವಾಗಿ ಬಳಕೆಯಲ್ಲಿರುವ ವಸ್ತುಗಳಿಗಿಂತ ಭಿನ್ನವಾಗಿವೆ. ಇವುಗಳ ಕರ್ಷಣ ಸಾಮರ್ಥ್ಯ (Tensile strength) ೧೦೦ ಗಿಗಾ ಪಾಸ್ಕಲ್ (GPa), ಅಂದರೆ ಇವನ್ನು ಜಗ್ಗಿದಾಗ ಸ್ಟೀಲ್‌ಗಿಂತಲೂ ಸುಮಾರು ನೂರುಪಟ್ಟು ಹೆಚ್ಚು ಬಿಗುವಾಗಿರುತ್ತವೆ. ಇವುಗಳ ಸ್ಥಿತಿಸ್ಥಾಪಕ ಮಾಡ್ಯುಲಸ್ (Modulus of elasticity) ಸುಮಾರು ೧೦೦೦ GPa, ಅಂದರೆ ಇವು ಸ್ಟೀಲ್‌ಗಿಂತಲೂ ಐದುಪಟ್ಟು ಹೆಚ್ಚು ಬಲಿಷ್ಠವಾಗಿವೆ. ಇದರರ್ಥವಿಷ್ಟೆ, ನಳಿಗೆಗಳ ಮೇಲೆ ಬಾಹ್ಯವಾಗಿ ಭಾರ ಹೇರಿದಾಗ ಅವು ಸ್ಟೀಲ್‌ಗಿಂತಲೂ ಹೆಚ್ಚಾಗಿ ತಮ್ಮ ಮುಂಚಿನ ಸ್ಥಿತಿಯನ್ನು ಕಾಯ್ದುಕೊಳ್ಳುತ್ತವೆ. ಸ್ವಾರಸ್ಯಕಾರಿ ಸಂಗತಿಯೆಂದರೆ, ಸ್ಟೀಲ್‌ಗಿಂತಲೂ ಅಧಿಕ ಶಕ್ತಿ ಹೊಂದಿದ್ದರೂ ಇವುಗಳ ತೂಕ ಮಾತ್ರ ಸ್ಟೀಲ್‌ಗಿಂತ ಐದುಪಟ್ಟು ಕಡಿಮೆ ಇರುವುದು! ಒಟ್ಟಾರೆಯಾಗಿ ಹೇಳುವುದಾದರೆ ಪ್ರಸ್ತುತ ಉಪಯೋಗಿಸುತ್ತಿರುವ ಕೈಗಾರಿಕಾ ನೂಲಿಗಿಂತ ೧೦ ಪಟ್ಟು ಹೆಚ್ಚು ಸಾಮರ್ಥ್ಯ ಹೊಂದಿರುವುದರಿಂದಲೇ ಇವುಗಳ ಕೈಗಾರಿಕಾ ಅನ್ವಯಿಕೆಗಳ ಮಹತ್ವವನ್ನು ಸುಲಭವಾಗಿ ಅರಿಯಬಹುದಾಗಿದೆ.

ಇನ್ನು ನ್ಯಾನೊನಳಿಗೆಯಲ್ಲಿನ ಕಾರ್ಬನ್ ಪರಮಾಣುಗಳ ಜೋಡಣೆ ಯಾವ ರೀತಿಯಲ್ಲಾಗಿದೆ ಎಂಬ ಆಧಾರದ ಮೇಲೆ ಇವುಗಳನ್ನು ಆರ್ಮ್ ಚೇರ್ (ಆರಾಮ ಕುರ್ಚಿ), ಝಿಗ್‌ಝಾಗ್ (ಅಡ್ಡಾದಿಡ್ಡಿ) ಮತ್ತು ಕೈರಲ್ (ಅಸಮಮಿತಿ) ಎಂದು ಮೂರು ವಿಧಗಳಾಗಿ ವಿಂಗಡಿಸಲಾಗಿದೆ. ನಳಿಗೆಯ ಮೇಲಿನ ಕಾರ್ಬನ್ ಪರಮಾಣುಗಳ ಜೋಡಣೆಯನ್ನಾಧರಿಸಿಯೇ ಇವುಗಳ ವಿದ್ಯುತ್ ಗುಣಗಳು ನಿರ್ಧರಿಸಲ್ಪಟ್ಟಿವೆ. ನಳಿಗೆಗಳಲ್ಲಿ ವಾಹಕ ಮತ್ತು ಅರೆವಾಹಕ ನಳಿಗೆಗಳು ಎರಡನ್ನೂ ಕಾಣಬಹುದು. ಈ ಮೂರರ ಪೈಕಿ ಆರಾಮ ಕುರ್ಚಿ ನಳಿಗೆಗಳು ಯಾವಾಗಲೂ ಲೋಹಿಯ ಗುಣಗಳನ್ನು ಹೊಂದಿರುತ್ತವೆ. ವಾಹಕ ನಳಿಗೆಗಳಲ್ಲಿ ವಿದ್ಯುತ್ ಸಾಂದ್ರತೆ ಸುಮಾರು $೧೦^{೯}$ ಆಂಪಿಯರ್/ಚದರ ಮೀಟರ್ ($A/m^2$) ಇರುವುದು, ತಾಮ್ರಕ್ಕಿಂತಲೂ ಸಾವಿರಪಟ್ಟು




ಚಿತ್ರ ೫. ವಿವಿಧ ಬಗೆಯ ಕಾರ್ಬನ್ ನ್ಯಾನೊನಳಿಗೆಗಳು

ಅಧಿಕವಾಗಿದೆ ಎಂದರೆ ನಂಬಲು ಸಾಧ್ಯವೇ? ಹಾಗೆಯೇ, ನಳಿಗೆಗಳ ಅಕ್ಷೆಯ ದಿಕ್ಕಿನಲ್ಲಿ, ಇವುಗಳ ಉಷ್ಣವಾಹಕ ಸಾಮರ್ಥ್ಯ (Thermal conductivity) ತಾಮ್ರಕ್ಕಿಂತಲೂ ಹತ್ತುಪಟ್ಟು ಅಧಿಕವಾಗಿದೆ. ಈ ತೆರನಾದ ಅಮೋಘ ಗುಣಗಳನ್ನು ಹೊಂದಿರುವುದರಿಂದಲೇ, ಇವು ಪ್ರತಿಯೊಬ್ಬ ಸಂಶೋಧಕರ ಆಸಕ್ತಿಯ ಕೇಂದ್ರ ಬಿಂದುಗಳಾಗಿವೆ.

ಇನ್ನು ಭಾರತರತ್ನ ಪ್ರೊ॥ ಸಿ. ಎನ್. ಆರ್. ರಾವ್ ಅವರ ಅನೇಕ ಸಂಶೋಧನಾ ಕ್ಷೇತ್ರಗಳಲ್ಲಿ, ಕಾರ್ಬನ್ ನ್ಯಾನೊನಳಿಗೆಗಳ ಬಗೆಗಿನ ಸಂಶೋಧನೆಯು ಸಹ ಪ್ರಮುಖವಾಗಿದೆ. ಚಾಪ ವಿಸರ್ಜನೆ ಮತ್ತು ಉಷ್ಣ ಪರಿವರ್ತನಾ ವಿಧಾನಗಳನ್ನು ಬಳಸಿ ಏಕಭಿತ್ತಿಯ ನ್ಯಾನೊನಳಿಗೆ ಮತ್ತು ಅನೇಕ ಭಿತ್ತಿಯ ನ್ಯಾನೊನಳಿಗೆಗಳನ್ನು ತಯಾರಿಸುವುದು, ಅವುಗಳಲ್ಲಿ ಹೈಡ್ರೋಜನ್ ಸಂಗ್ರಹಿಸುವುದು. ಇವೇ ಇನ್ನಿತರ ಬಗೆಯ ಸಂಶೋಧನೆಗಳು ಮತ್ತು ಅವರು ಸರಳ ಉಷ್ಣ ಪರಿವರ್ತನೆಯ ವಿಧಾನವಾಗಿ ತಯಾರಿಸಿದ ವೈ–ಜಂಕ್ಷನ್ ಕಾರ್ಬನ್ ನ್ಯಾನೊನಳಿಗೆಗಳು ಸಂಶೋಧನಾ ವಲಯಗಳಲ್ಲಿ ಹೆಚ್ಚು ಚರ್ಚಿತವಾಗಿವೆ. ಇನ್ನೂ ಸಾಲುಗೂಡಿದ (Aligned) ಕಾರ್ಬನ್ ನ್ಯಾನೊನಳಿಗೆಗಳ ತಯಾರಿಕೆಯು ಅನ್ವಯಿಕ ಕ್ಷೇತ್ರದಲ್ಲಿ ಬಹಳ ಮಹತ್ವದ್ದಾಗಿದೆ. ನ್ಯಾನೊನಳಿಗೆಗಳು ತಾವು ಬೆಳೆದ ತಳಕ್ಕೆ ಲಂಬವಾಗಿ ಸಾಲುಗಟ್ಟಿರುವಂಥ ರಾಶಿಯನ್ನೇ ಸರಳ ವಿಧಾನದಲ್ಲಿ ತಯಾರಿಸಬಹುದೆಂದು ಪ್ರೊ॥ ರಾವ್ ಸಾಧಿಸಿತೋರಿಸಿದ್ದಾರೆ. ನ್ಯಾನೊ ಎಲೆಕ್ಟ್ರಾನಿಕ್ಸ್ ಎಂಬ ನೂತನ ತಂತ್ರಜ್ಞಾನ ಶಾಖೆಯಲ್ಲಿ ಕಾರ್ಬನ್ ನ್ಯಾನೊನಳಿಗೆಗಳನ್ನು ಬಳಸಿ ಹಲವು ಎಲೆಕ್ಟ್ರಾನಿಕ್ ಮಂಡಲಗಳನ್ನು (Electronic circuits) ತಯಾರಿಸಬಹುದು. ಅದಕ್ಕಾಗಿಯೇ ನಳಿಗೆಗಳನ್ನು ಪಿ–ಥರ ಮತ್ತು ಎನ್–ಥರ (p-type & n-type)ವಾಗಿಸಲು ಅವನ್ನು ಕ್ರಮವಾಗಿ ಬೋರಾನ್ ಮತ್ತು ನೈಟ್ರೋಜನ್‌ಗಳಿಂದ ಡೋಪ್ ಮಾಡಿ, ಅವನ್ನು ಡಯೋಡ್ ಅಥವಾ ಟ್ರಾನ್ಸಿಸ್ಟರ್‌ಗಳಾಗಿ ಬಳಸುವಂಥ ಸಂಶೋಧನೆಗಳನ್ನು ಪ್ರೊ॥ ರಾವ್ ನಡೆಸಿದ್ದಾರೆ. ಇನ್ನೂ ಸಾಮಾನ್ಯವಾಗಿ ಕಾರ್ಬನ್ ನ್ಯಾನೊನಳಿಗೆಗಳ ತುದಿಗಳು ಫುಲರಿನ್‌ನ ಅರ್ಧಗೋಳಗಳಿಂದ ಮುಚ್ಚಿರುತ್ತವೆ. ಈ ರೀತಿಯಾಗಿ ಮುಚ್ಚಿರುವ ನಳಿಗೆಗಳ ತುದಿಯನ್ನು ತೆರೆಯುವುದು, ಬೆಳ್ಳಿ, ಬಂಗಾರ, ಪ್ಲಾಟಿನಂನಂತಹ ಲೋಹಗಳನ್ನು ಅದರೊಳಕ್ಕೆ ತುಂಬಿ ಅವನ್ನು ಫಲನಗೊಳಿಸುವುದು (functionalizing), ತೆರೆದಿರುವ ನಳಿಗೆಗಳ ತುದಿಯನ್ನು ಪುನಃ ಮುಚ್ಚುವುದು, ಇಲ್ಲವೇ ಹೊರಗಿರುವ ಕಾರ್ಬನ್ ನ್ಯಾನೊ ನಳಿಗೆಗಳನ್ನು ಸುಟ್ಟು ಅದರೊಳಗೆ ತುಂಬಿದ್ದ ಪದಾರ್ಥಗಳ ನಳಿಗೆಗಳನ್ನು ಸೃಷ್ಟಿಸಲು, ಅವನ್ನು ಅಚ್ಚಿನ ಮಾದರಿಯಾಗಿ ಬಳಸುವುದು, ಇವೇ ಮುಂತಾದ ಬಗೆಯ ಆಸಕ್ತಿದಾಯಕ ವಿಷಯಗಳ ಸಂಶೋಧನೆಯಲ್ಲಿಯೇ ಪ್ರೊ॥ ರಾವ್ ಅವರು ದಶಕಗಳನ್ನೇ ಕಳೆದಿದ್ದಾರೆ.



*ಚಿತ್ರ ೬. ಜಗದ್ವಿಖ್ಯಾತ ವಿಜ್ಞಾನಿ ಪ್ರೊ॥ ಸಿ. ಎನ್. ಆರ್. ರಾವ್*

ನ್ಯಾನೊ ಗಾತ್ರದ ಕಾರ್ಬನ್‌ನಳಿಗೆಗಳು ವಿವಿಧ ಕ್ಷೇತ್ರಗಳಲ್ಲಿ ಭಾರಿ ಬೇಡಿಕೆಯನ್ನು ಸೃಷ್ಟಿಸಿವೆ. ಶಕ್ತಿಯ ಅನ್ವಯಿಕೆಗಳು, ಹೈಡ್ರೋಜನ್ ಸಂರಕ್ಷಣೆ, ನ್ಯಾನೊ ಎಲೆಕ್ಟ್ರಾನಿಕ್ಸ್, ವೈದ್ಯಕೀಯ, ನ್ಯಾನೊ ಶೋಧಕ ಮತ್ತು ಸಂವೇದಕಗಳು ಹೀಗೆ ಅನೇಕ ಕಡೆ ಇವುಗಳ ಉಪಯೋಗಗಳನ್ನು ನೋಡಬಹುದು. ಈಗಾಗಲೇ ಕಾರ್ಬನ್ ನ್ಯಾನೊನಳಿಗೆ ಸಂಯುಕ್ತ ಬಳಸಿ ಸೈಕಲ್ ಭಾಗಗಳನ್ನು ತಯಾರಿಸಲಾಗಿದೆ. ಜಲಾವೃತ ಹಡಗಿನ ಕೆಳಭಾಗಕ್ಕೆ ನೀರಿನ ದುರ್ನಾತ ತಡೆಯಲು ಸಿಎನ್‌ಟಿಯಿಂದ ತಯಾರಿಸಿದ ಬಣ್ಣವನ್ನು ಹಚ್ಚಲಾಗುತ್ತಿದೆ. ಸಿಎನ್‌ಟಿಯ ಟ್ರಾನ್ಸಿಸ್ಟರ್‌ಗಳನ್ನು ನ್ಯಾನೊ ಎಲೆಕ್ಟ್ರಾನಿಕ್ಸ್‌ನಲ್ಲಿ ವ್ಯಾಪಕವಾಗಿ ಬಳಸಲಾಗುತ್ತಿದೆ. ಸಿಎನ್‌ಟಿಯಿಂದ ತಯಾರಿಸಲಾದ ಸುರಕ್ಷಾ ಹೊದಿಕೆಗಳು, ಬಾಹ್ಯಾಕಾಶ ನೌಕೆಗಳ ಸೂಕ್ಷ್ಮ ಯಂತ್ರೋಪಕರಣಗಳನ್ನು ಸಂರಕ್ಷಿಸಿಡಲು ಉಪಯೋಗಿಸಲಾಗಿದೆ.

ಮಾರುಕಟ್ಟೆಯಲ್ಲಿ ಇಂದು ಸಿಎನ್‌ಟಿ ಪುಡಿಯು ಸುಲಭವಾಗಿ ಲಭ್ಯ. ಸಿಎನ್‌ಟಿ ಪುಡಿಯನ್ನು ಪಾಲಿಮರ್‌ಗೆ ಬಳಸಿ ಭಾರ ಹೇರುವ ಕಡೆಗಳಲ್ಲಿ ಅನ್ವಯಿಕ ಸಂದರ್ಭಗಳಲ್ಲಿ ಬಳಸಬಹುದಾಗಿದೆ. ಸಿಎನ್‌ಟಿ ಸಂಯುಕ್ತಗಳನ್ನು ಹಗುರ ವಿಮಾನ, ಹಗುರ ಹಡಗು, ಹಗುರ ಉಪಗ್ರಹ ಮತ್ತು ಬಾಹ್ಯಾಕಾಶ ನೌಕೆಗಳಲ್ಲಿ ಈಗಾಗಲೇ ಪ್ರಾಯೋಗಿಕ ಯಶಸ್ಸಿನ ಬಳಿಕ ಇದನ್ನು ವಾಣಿಜ್ಯವಾಗಿ ಸದ್ಬಳಕೆ ಮಾಡಿಕೊಳ್ಳಲು ಸಕಲ ಪ್ರಯತ್ನಗಳು ಕ್ಷಿಪ್ರಗತಿಯಲ್ಲಿ ನಡೆಯುತ್ತಿವೆ. ಸಿಎನ್‌ಟಿ ಬಳಸಿ ತಯಾರಿಸಿದ ಲೋಹ ಸಂಯುಕ್ತಗಳನ್ನು ವಾಹನಗಳಲ್ಲಿ ಉಪಯೋಗಿಸಿ ಅವುಗಳ ಸಾಮರ್ಥ್ಯ ಮತ್ತು ದಕ್ಷತೆಯನ್ನು

ಹೆಚ್ಚಿಸುವಲ್ಲಿ ಗಮನಾರ್ಹ ಸಾಧನೆ ಮಾಡುತ್ತಿವೆ. ಮೊಬೈಲ್, ಲ್ಯಾಪ್‌ಟಾಪ್, ನೋಟ್‌ಬುಕ್‌ಗಳ ಬ್ಯಾಟರಿಗಳಲ್ಲಿ ಸಿಎನ್‌ಟಿ ಪುಡಿ ಬಳಸಿ ಲಿಥಿಯಮ್ ಬ್ಯಾಟರಿಗಳ ಕ್ಷಮತೆಯನ್ನು ಹೆಚ್ಚಿಸಲಾಗಿದೆ. ಸಿಎನ್‌ಟಿಯನ್ನು ಇಂಧನ ಕೋಶಗಳಲ್ಲಿ ವೇಗವರ್ಧಕವಾಗಿ ಉಪಯೋಗಿಸಿ, ಅವುಗಳಲ್ಲಿ ಪ್ಲಾಟಿನಂ ಬಳಕೆಯ ಪ್ರಮಾಣ ತಗ್ಗಿಸಲಾಗಿದೆ. ಜೊತೆಗೆ ಪ್ಲಾಟಿನಂ ಬಳಸದೆಯೇ ಇಂಧನ ಕೋಶಗಳಲ್ಲಿ ಡೋಪ್‌ಗೊಂಡ ಸಿಎನ್‌ಟಿಗಳನ್ನು ಬಳಸಿ ಇಂಧನ ಉತ್ಪಾದನೆಯ ಬಗೆಯನ್ನು ಸಾಧಿಸಲಾಗಿದೆ. ಇನ್ನೂ ಸಿಎನ್‌ಟಿಗಳ ಅಸಾಧಾರಣ ಕರ್ಷಣ ಸಾಮರ್ಥ್ಯದಿಂದಾಗಿ ಪರಮಾಣು ಬಲ ಸೂಕ್ಷ್ಮದರ್ಶಕ (Atomic Force Microscope)ದ ತುದಿಯಾಗಿ ಮತ್ತು ಸ್ಕ್ಯಾನಿಂಗ್ ಟನಲಿಂಗ್ ಸೂಕ್ಷ್ಮದರ್ಶಕದ ತುದಿಯಾಗಿ ಇವುಗಳನ್ನು ಬಳಸಲಾಗುತ್ತಿದೆ. ಇಂದು ಎಲ್‌ಇಡಿ ಮತ್ತು ಎಲ್‌ಸಿಡಿ ಪರದೆಗಳ ಪೈಪೋಟಿಯಲ್ಲಿ, ಸಿಎನ್‌ಟಿಗಳಿಂದ ತಯಾರಿಸಲ್ಪಟ್ಟ ಪರದೆಗಳು ಪ್ರಾಯೋಗಿಕ ಯಶಸ್ಸನ್ನು ಕಂಡು, ಮುಂಬರುವ ದಿನಗಳಲ್ಲಿ ಮಾರುಕಟ್ಟೆಗೆ ದಾಂಗುಡಿ ಇಡುವ ಎಲ್ಲ ಲಕ್ಷಣಗಳು ಸ್ಪಷ್ಟವಾಗಿ ಗೋಚರಿಸುತ್ತಿವೆ.

ಇನ್ನು ವೈದ್ಯಕೀಯ ಕ್ಷೇತ್ರದಲ್ಲಿಯೂ ಸಹ ಸಿಎನ್‌ಟಿಗಳ ಉಪಯುಕ್ತತೆಯನ್ನು ಧಾರಾಳವಾಗಿ ಕಾಣಬಹುದು. ಚಿಕಿತ್ಸೆಯ ಭಾಗವಾಗಿ ಅಥವಾ ಔಷಧಿಯಾಗಿ ಮಾನವ ಶರೀರದೊಳಕ್ಕೆ ಸೇರಿಸಲು ಹಲವು ಸಮಸ್ಯೆಗಳಿದ್ದರೂ ಕೂಡ ಅವೆಲ್ಲವನ್ನು ನಿವಾರಿಸಿ ಆಧುನಿಕ ವೈದ್ಯಕೀಯ ರಂಗದಲ್ಲಿ ಇವನ್ನು ಯಶಸ್ವಿಯಾಗಿ ಬಳಸಿ ಹಲವು ಉನ್ನತ ಮಟ್ಟದ ಸಂಶೋಧನೆಗಳು ಸಕ್ರಿಯವಾಗಿ ನಡೆಯುತ್ತಿವೆ. ಡಿಎನ್‌ಎ, ಪ್ರೋಟೀನ್ ಮತ್ತು ಇನ್ನಿತರೆ ಜೈವಿಕ ಘಟಕಗಳ ಜೊತೆ ಇವು ಸುಲಭವಾಗಿ ಹೊಂದಿಕೊಳ್ಳು ವುದರಿಂದ ಇವನ್ನು ಜೈವಿಕ ಸಂವೇದಕಗಳಾಗಿ ಮತ್ತು ಶೋಧಕಗಳಾಗಿ ಬಳಸಲಾಗುತ್ತಿದೆ. ಇನ್ನು, ಇಂದು ಅತ್ಯಂತ ಅಪಾಯಕಾರಿ ರೋಗವೆನ್ನಿಸಿರುವ ಕ್ಯಾನ್ಸರ್ ರೋಗದ ಚಿಕಿತ್ಸೆಯಲ್ಲಿ, ರೇಡಿಯೊ ಮತ್ತು ರಾಸಾಯನಿಕ ಚಿಕಿತ್ಸೆಗಳು ಪ್ರಸ್ತುತ ಚಾಲ್ತಿಯಲ್ಲಿವೆ. ಆದರೆ ಈ ಚಿಕಿತ್ಸೆಗಳಿಂದ ಉಂಟಾಗುವ ಅಡ್ಡಪರಿಣಾಮಗಳು ಗಂಭೀರ ಸ್ವರೂಪದವು. ಅಂತೆಯೇ ಈ ದುಷ್ಪರಿಣಾಮಗಳನ್ನು ನಿವಾರಿಸುವ ನಿಟ್ಟಿನಲ್ಲಿ ಸಿಎನ್‌ಟಿಗಳನ್ನು ಉಪಯೋಗಿಸಿ ನೇರ ಮತ್ತು ಕೇಂದ್ರೀಕೃತ ಔಷಧಿ ವಿತರಣೆಯಲ್ಲಿ ಪರಿಣಾಮಕಾರಿಯಾಗಿ ಬಳಸುವ ಹಲವು ವಿನೂತನ ಪ್ರಯೋಗಗಳು ನಡೆದು; ಅದರಲ್ಲಿ ಯಶ ಸಾಧಿಸುವ ಮತ್ತು ಇದನ್ನು ಶೀಘ್ರದಲ್ಲಿ ವೈದ್ಯಕೀಯ ಕ್ಷೇತ್ರದಲ್ಲಿ ಚಾಲ್ತಿಗೆ ತರುವ ಎಲ್ಲ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಿವೆ. ಹಾಗೆಯೇ, ಮುರಿದ ಎಲುಬುಗಳ ಬದಲಿಯಾಗಿ ಮತ್ತು ಕೃತಕ ಕೀಲುಗಳಲ್ಲಿಯೂ ಇವನ್ನು ಬಳಸಲಾಗುತ್ತಿದೆ. ಗಾಯಗೊಂಡ ಮತ್ತು ರೋಗಗ್ರಸ್ತ ಅಂಗಾಂಶಗಳನ್ನು ಸರಿಪಡಿಸುವುದು ಅಥವಾ ಬದಲಿಸುವುದು ಅಂಗಾಂಶ ಕೃಷಿಯ ಮುಖ್ಯ ಉದ್ದೇಶವಾಗಿದೆ. ಈ ನಿಟ್ಟಿನಲ್ಲಿ ಸಿಎನ್‌ಟಿಗಳನ್ನು ಬಳಸಿ ಅಂಗಾಂಶ ಕೃಷಿಯಲ್ಲಿ ಬಳಸ ಬಹುದಾಗಿದೆ. ಹೇಳುತ್ತಾ ಹೋದರೆ, ಇವುಗಳ ಅನ್ವಯಿಕೆಗಳ ಪಟ್ಟಿಗೆ ಕೊನೆಯೇ ಇಲ್ಲ !

ಸುಮಿಯೊ ಇಜಿಮಾರವರು ೧೯೯೧ರಲ್ಲಿ ಪ್ರಾರಂಭಿಸಿದ ಸಿಎನ್‌ಟಿಯ ಈ ಅದ್ಭುತ ಪಯಣ ಇಲ್ಲಿಯವರೆಗೂ ಹಿಂತಿರುಗಿ ನೋಡಿಯೇ ಇಲ್ಲ! ಝರಿಯಾಗಿ ಆರಂಭಗೊಂಡು ಇಂದು ಅನೇಕ ಕವಲುಗಳನ್ನು ಪಡೆದು, ದಶದಿಕ್ಕುಗಳಲ್ಲಿಯೂ ಹಿಗ್ಗಿ, ತನ್ನ ಹರಿವನ್ನು, ವಿಸ್ತಾರವನ್ನು ಹಿಗ್ಗಿಸಿಕೊಂಡು ಸಾಧನೆಯ ಸಮುದ್ರದೆಡೆಗೆ ಭೋರ್ಗರೆಯುತ್ತಿರುವ ಸಿಎನ್‌ಟಿಗಳ ಈ ಆಧುನಿಕ ಸಂಶೋಧನಾ ಲೋಕ ನಿಜಕ್ಕೂ ವಿಸ್ಮಯಕಾರಿಯಲ್ಲವೇ ?

**ಎಸ್. ಮಂಜುನಾಥ**
ಅಧ್ಯಕ್ಷರು, ಮೇಡಂಕ್ಯೂರಿ ವಿಜ್ಞಾನ ಅಕಾಡೆಮಿ
ನಂ. ೬೩, ವಾರ್ಡ್–೧೨, ರೆಡ್ಡಿ ಬೀದಿ, ಬಿ.ಎಂ.ಡಿ. ಶಾಲೆ ಹಿಂಭಾಗ, ಬಳ್ಳಾರಿ – ೫೮೩ ೧೦೧




# ಮುಗಿಲು

ಮುಗಿಲಿಳಿದು ಹರಿಯತೊಡಗಿತು
ಅದನ್ನು ಭಾಗ ಭಾಗ ಮಾಡಿ
ದಿಕ್ಕು ದಿಕ್ಕಿಗೆ ಕಟ್ಟೆಯ ಕಟ್ಟಿ
ಬೇಕೆಂದಲ್ಲಿ ಬಲವಂತ ತರುಬಿ
ಅಡ್ಡಡ್ಡ ಕಡಿದು, ಪೀಸ್ ಪೀಸ್ ಮಾಡಿ
ಪ್ಯಾಕೆಟ್‌ಗಳಲ್ಲಿ ತುಂಬಿ ಶೀತಾಗಾರಗಳಲ್ಲಿಟ್ಟು
ಹೆಣದಂತೆ ರಕ್ಷಿಸಿ, ಬೇಕೆಂದಾಗ ಬಗ್ಗಿ
ನೋಡಿದೆವು, ನೋಡಲು ಬಂದವರಿಗೆ
ಟಿಕೆಟಿಟ್ಟು ತೋರಿಸಿದೆವು
ಬೇಕಾದವರಿಗೆ ತೂಕ ಮಾಡಿ ಹಂಚಿದೆವು...

ಮುಗಿಲಿಗೆ ಕಸಿವಿಸಿಯಾಯಿತು !
ಆದರೂ ಕೇಳಲಿಲ್ಲ, ಹರಿದು ಚಿಂದಿಯಾದ
ಮುಗಿಲು ತನ್ನ ಬಣ್ಣ ಕಳೆದುಕೊಂಡಿತು
ಬಿಳಿ ಮೋಡಗಳೆಲ್ಲ ಕರಗಿದವು
ಕರಿ ಮೋಡಗಳೆಲ್ಲ ಚದುರಿದವು
ಮಳೆಬಿಲ್ಲು ಮಾಯವಾಯಿತು
ಆವಿ ಹನಿಯೊಡೆಯಲೇ ಇಲ್ಲ
ನೀರಾವಿ ಮಂಜುಗಡ್ಡೆಯಾಗಲೇ ಇಲ್ಲ

ಮುಗಿಲಿಗೆ ತಲೆಚಿಟ್ಟು ಹಿಡಿಯಿತು
ಕೊಸರಾಡಿ, ಎದ್ದು ನಿಂತಿತು, ಸಾಧ್ಯವಾಗಲಿಲ್ಲ
ಆರ್ತನಾದ ಮಾಡಿತು... ಹರಿದು ಹಂಚಿ
ಹೋಗಿದ್ದ ಅದರ ದನಿ ಯಾರಿಗೂ ಕೇಳಲಿಲ್ಲ
ಬಂಧನಗಳಲ್ಲಿ ಸಿಲುಕಿದ ಅದರ
ನೋವು ನಿವಾರಿಸುವ ಯಾವ ಔಷಧಿಯೂ
ಮಾರುಕಟ್ಟೆಯಲ್ಲಿ ಸಿಗಲಿಲ್ಲ

ಮುಗಿಲು ಈಗ ಸಂತೆಯ ಪಾಲಾಗಿದೆ
ಸಂತೆ ಅಷ್ಟ ದಿಕ್ಕುಗಳ ಪಾಲಾಗಿದೆ
ದಿಕ್ಕುಗಳು ಒಡೆಯರ ಪಾಲಾಗಿವೆ



ಒಡೆಯರನ್ನು ಆಳುವವರು ಖರೀದಿಸಿದ್ದಾರೆ
ಆಳುವವರ ಮೂಗುಗಳಿಗೆ ಪರದೇಶಿ ದಾರ

ಈಗ ಮುಗಿಲಿನ ಅಳಲು ಕೇಳುವವರೇ ಇಲ್ಲ

**ವೀರಣ್ಣ ಕಮ್ಮಾರ,** ಸಹ ನೋಂದಣಿದಾರರು, ಕರ್ನಾಟಕ ಕೇಂದ್ರ ವಿಶ್ವವಿದ್ಯಾಲಯ, ಕಡಗಂಚಿ, ಆಳಂದ ರಸ್ತೆ, ಕಲಬುರಗಿ – ೫೮೫ ೩೧೧

ಮ. ಶ್ರೀ. ಮುರಳಿ ಕೃಷ್ಣ

**ಈ** ರಾಜ್ಯದ ಹೆಸರೇ ಸೂಚಿಸುವಂತೆ ಒಮ್ಮೆ ಇದು ಅನೇಕ ರಾಜ, ಮಹಾರಾಜರ ನಾಡಾಗಿತ್ತು. ಭಾರತದ ದೊಡ್ಡ ರಾಜ್ಯಗಳಲ್ಲಿ ಒಂದಾದ ರಾಜಸ್ತಾನದ ಭವ್ಯ ಇತಿಹಾಸ ಸಮೃದ್ಧ ಹಾಗೂ ವೈವಿಧ್ಯಮಯ. ಇಲ್ಲಿನ ಕೋಟೆ–ಕೊತ್ತಲಗಳು, ಅರಮನೆಗಳು, ವಸ್ತುಸಂಗ್ರಹಾಲಯಗಳು, ಹವೇಲಿಗಳು, ದೇವಾಲಯಗಳು, ಮರುಭೂಮಿಯ ವೈಚಿತ್ರ್ಯಗಳು, ಕಾಡು–ಮೇಡುಗಳು, ರಜಪೂತರ ಶೌರ್ಯ–ಸಾಹಸಗಾಥೆಗಳು, ಜಾತ್ರೆಗಳು, ಕಲೆಗಳು, ಗ್ರಾಮೀಣ ಜನರ ರಂಗು–ರಂಗಿನ ಪೋಷಾಕುಗಳು, ಸಮ್ಮಿಳಿತ ಸಂಸ್ಕೃತಿಯ ವೈಶಿಷ್ಟ್ಯಗಳು ಎಲ್ಲವೂ ಪ್ರವಾಸಿಗರನ್ನು ಕೈಬೀಸಿ ಕರೆಯುತ್ತವೆ. "ಇಲ್ಲಿ ಕೈ ಬೀಸಿದರೆ ಇತಿಹಾಸ ಸಿಗುತ್ತದೆ" ಎಂದರೆ ಅತಿಶಯೋಕ್ತಿಯಾಗದು. ಇದು ಈ ರಾಜ್ಯ ಬೆಡಗಿನ, ಬೆರಗಿನ ಒಂದು ಕೆಲಿಡೋಸ್ಕೋಪ್. ಬನ್ನಿ, ಇಡೀ ಭಾರತದ ಕೋಟೆಗಳಲ್ಲೇ ಗಮ್ಯಸ್ಥಾನ ಪಡೆದಿರುವ ಚಿತ್ತೌರ್‌ಗರ್(ಡ್) ಕೋಟೆಯಲ್ಲಿ ಒಂದು ಸುತ್ತು ಹಾಕೋಣ... ಹಾಗೂ ಚಿತ್ತೌರ್‌ಗರ್(ಡ್)ನ ಇತರ ಸ್ಮಾರಕಗಳ ಬಗೆಗೆ ಅರಿಯೋಣ...

ಚಿತ್ತೌರ್‌ಗರ್', 'ಚಿತ್ತೌರ್‌ಗಢ' 'ಚಿತ್ತೋರ್‌ಗರ್', 'ಚಿತ್ತೋರ್‌ಗಢ' ಎಂದು ವಿವಿಧ ಹೆಸರುಗಳಿಂದ ಕರೆಯಲಾಗುವ ಈ ಸ್ಥಳವು ಇತಿಹಾಸದ ಅನೇಕ ಘಟನೆಗಳಿಗೆ ಸಾಕ್ಷಿಯಾಗಿದೆ. ಇದರ ಸಮೀಪದ ಬೆರಾಚ್ ನದಿಯ ಹತ್ತಿರ ನಡೆದ ಉತ್ಖನನದಲ್ಲಿ ಇತಿಹಾಸ ಪೂರ್ವ ಯುಗದ ಕೆಲವು ಕಲ್ಲಿನ ಉಪಕರಣಗಳು ದೊರೆತಿವೆ. ಇದಲ್ಲದೆ, ಕ್ರಿಸ್ತಪೂರ್ವದ, ಬೌದ್ಧಧರ್ಮಕ್ಕೆ ಸಂಬಂಧಿಸಿದ

# ಶೌರ್ಯ, ಸಾಹಸ ರಂಜನೀಯ ಕಥೆಗಳ ಚಿತ್ತೌರ್‌ಗಢ

ವಿಜಯ ಸ್ತಂಭದ ನಿರ್ಮಾಣದ ವರ್ಷದ ಬಗೆಗೆ ಇತಿಹಾಸಕಾರರಲ್ಲಿ ಐಕಮತ್ಯವಿಲ್ಲ. ಒಂದು ಆಧಾರದ ಅನ್ವಯ ಇದನ್ನು ಮಹಾರಾಣ ಕುಂಭನು ಕ್ರಿ. ಶ. ೧೪೪೮ರಲ್ಲಿ ಚಿತ್ತೌರ್‌ಗಢಕ್ಕೆ ಸಮರ್ಪಿಸಿದನು. ಮಾಳ್ವಾ ಸುಲ್ತಾನ ಮೆಹಮ್ಮುದ್ ಖಿಲ್ಜಿ ಮೇಲೆ ತಾನು ಸಾಧಿಸಿದ ಪ್ರಥಮ ವಿಜಯದ ದ್ಯೋತಕವಾಗಿ ಈ ಸ್ತಂಭವನ್ನು ನಿರ್ಮಿಸಿದನೆಂದು ಹೇಳುತ್ತಾರೆ. ಇನ್ನು ಕೆಲವು ವಿದ್ವಾಂಸರು ಆ ಕಾಲದಲ್ಲಿ ದೇಗುಲಗಳ ಎದುರಿಗೆ ಸ್ತಂಭಗಳನ್ನು ಕಟ್ಟುವುದು ವಾಡಿಕೆಯಾಗಿತ್ತೆಂದೂ, ಅದರಂತೆ ಮಹಾರಾಣ ಕುಂಭನು ಕುಂಭಶ್ಯಾಮ ಮಂದಿರದ ಎದುರಿಗೆ ವಿಜಯ ಸ್ತಂಭವನ್ನು ಕಟ್ಟಿಸಿದನೆಂದೂ ಹೇಳಿದ್ದಾರೆ. ಆದರೆ ಈ ಸ್ತಂಭವಿರುವುದು ಕುಂಭಶ್ಯಾಮ ದೇಗುಲದಿಂದ ಸುಮಾರು ೧೦೦ ಗಜಗಳ ದೂರದಲ್ಲಿ (ದಕ್ಷಿಣಕ್ಕೆ).



ಕೆಲವು ಅವಶೇಷಗಳು ಸಿಕ್ಕಿವೆ. ರಾಜಸ್ತಾನದ ದಕ್ಷಿಣ ಭಾಗದಲ್ಲಿರುವ ಈ ಊರು, ಗಂಭೇರಿ ನದಿಯ ಸಮೀಪವಿರುವ ದೊಡ್ಡ ಬೆಟ್ಟವೊಂದರ ಪಕ್ಕದಲ್ಲಿದೆ. ಈ ಊರಿನ ಉಗಮವಾದದ್ದು ಕ್ರಿ. ಶ. ಏಳನೇ ಶತಮಾನದಲ್ಲಿ ಎನ್ನುತ್ತಾರೆ. ಆಗ ಇದರ ಹೆಸರು 'ಚಿತ್ರಕೂಟ್' ಅಥವಾ 'ಚಿತ್ರಕೋಟ್' ಎಂದಿತ್ತು. 'ಚಿತ್ತಾಂಗ' ಎಂಬ ಮೌರ್ಯ ಅಥವಾ ಮೋರಿ ರಜಪೂತ ರಾಜನೊಬ್ಬ ಇಲ್ಲಿ ಆಳ್ವಿಕೆ ನಡೆಸಿದ್ದ. ಅವನ ಹೆಸರೇ ಈ ಊರಿಗೆ ಪ್ರಾಪ್ತವಾಯಿತು ಎಂದು ಹೇಳುತ್ತಾರೆ. ಆದರೆ ಇನ್ನೊಂದು ಮೂಲದ ಪ್ರಕಾರ ಚಿತ್ತೌರ್‌ಗಢ, 'ಬಪ್ಪಾ' ಅಥವಾ 'ಬಪ್ಪು' ರಾವಲ್ ಎಂಬ ಭಿಲ್ ಬುಡಕಟ್ಟು ಜನಾಂಗದ ರಾಜನಿಂದ ಅಸ್ತಿತ್ವಕ್ಕೆ ಬಂದಿತು. ಇದಾದದ್ದು ಕ್ರಿ. ಶ. ೭೨೮ರಲ್ಲಿ.

ಚಿತ್ತೌರ್‌ಗಢದ ಇತಿಹಾಸವನ್ನು ತ್ಯಾಗ, ಬಲಿದಾನ ಮತ್ತು ರಕ್ತದಿಂದ ಬರೆಯಲಾಗಿದೆ ಎನ್ನಬಹುದು. ಸುಮಾರು ಕ್ರಿ. ಶ. ೮ನೇ ಶತಮಾನದಿಂದ ಕ್ರಿ. ಶ. ೧೬ನೇ ಶತಮಾನದವರೆಗೆ ಇದು ರಜಪೂತರ ಸಿಸೋಡಿಯಾ ವಂಶಕ್ಕೆ (ಬಣ) ಸೇರಿದ ರಾಜರ ರಾಜಧಾನಿಯಾಗಿತ್ತು. ಅನೇಕ ಏಳು–ಬೀಳುಗಳನ್ನು ಕಂಡಿರುವ ಚಿತ್ತೌರ್‌ಗಢ ಮಧ್ಯಯುಗದಲ್ಲಿ ಮುಸಲ್ಮಾನ ಆಕ್ರಮಣಕಾರರಿಗೆ ತುತ್ತಾಯಿತು. ಆ ಕಾಲದ ಯುಗಧರ್ಮದಂತೆ ಕೊಲೆ, ಸುಲಿಗೆ, ಲೂಟಿ, ಹೆಂಗಸರ ಮಾನಾಪಹರಣ, ಧ್ವಂಸ ಇತ್ಯಾದಿ ಜರುಗಿದವು. ಇವುಗಳ ಹಿನ್ನೆಲೆಯಲ್ಲಿ ಇದ್ದದ್ದು ರಾಜ್ಯ ವಿಸ್ತರಣೆಯಂಥವೇ ಪ್ರಮುಖ ಕಾರಣ. ಕ್ರಿ. ಶ. ೧೩೦೩ರಲ್ಲಿ ದೆಹಲಿಯ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿ ಚಿತ್ತೌರ್‌ಗಢದ ಮೇಲೆ ಆಕ್ರಮಣ ಮಾಡಿದ. ಅವನು ತನ್ನ ರಾಜ್ಯ ವಿಸ್ತರಣೆಗಾಗಿ ಆಕ್ರಮಣ ಮಾಡಿದನೋ ಅಥವಾ ಅತ್ಯಂತ ರೂಪವತಿಯಾಗಿದ್ದಳು ಎನ್ನಲಾದ ರಾಣಿ ಪದ್ಮಿನಿಯನ್ನು ತನ್ನವಳನ್ನಾಗಿಸಿಕೊಳ್ಳಲು ದಂಡೆತ್ತಿ ಬಂದನೋ ಎಂಬ ವಿಷಯದ ಬಗೆಗೆ ಇತಿಹಾಸಜ್ಞರಲ್ಲಿ ಭಿನ್ನಾಭಿಪ್ರಾಯಗಳಿವೆ. ದಾಳಿಯ ನಂತರ ಪರಿಸ್ಥಿತಿ ಪ್ರಕ್ಷುಬ್ಧವಾದಾಗ, ರಾಜನಾಗಿದ್ದ ಭೀಮ ಸಿಂಗ್‌ನೇ ಸ್ವತಃ ಕದನದ ಮುಂದಾಳತ್ವವನ್ನು ವಹಿಸಿ ವೀರಮರಣವನ್ನಪ್ಪಿದ. ಕೋಟೆಯ ಒಳಗಡೆ ರಾಣಿ ಪದ್ಮಿನಿ ಅಥವಾ ಪದ್ಮಾವತಿ ಮತ್ತು ಮಕ್ಕಳು, ಇತರ ಮಹಿಳೆಯರು



*ಕೆರೆಯೊಂದರ ಮಧ್ಯದಲ್ಲಿ ರಾಣಿ ಪದ್ಮಿನಿಯ ಅರಮನೆ ಕಟ್ಟಲಾಗಿದೆ. ಅದರ ಒಂದು ಒಳ ನೋಟ*

ಸಾಮೂಹಿಕವಾಗಿ ಚಿತೆಯನ್ನೇರಿ (ಜೌಹರ್ ಪದ್ಧತಿ) ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಾರೆ. ೧೫ನೇ ಶತಮಾನದ ಮಧ್ಯಭಾಗದಲ್ಲಿ ರಾಣ ಕುಂಭನ ಆಳ್ವಿಕೆಯಲ್ಲಿ ಚಿತ್ತೌರ್‌ಗಢ ಪುನಃ ತನ್ನ ಹಿರಿಮೆಯನ್ನು ಗಳಿಸಿತು. ಗುಜರಾತಿನ ಸುಲ್ತಾನ ಬಹದ್ದೂರ್ ಶಾ ಕ್ರಿ. ಶ. ೧೫೩೫ರಲ್ಲಿ ದಾಳಿ ಮಾಡುತ್ತಾನೆ. ಸುಮಾರು ೩೨,೦೦೦ ರಜಪೂತ ಸೈನಿಕರು ಮತ್ತು ಜೌಹರ್ ಪದ್ಧತಿಯಡಿ ೧೩,೦೦೦ ಮಹಿಳೆಯರು ಪ್ರಾಣಾರ್ಪಣೆ ಮಾಡಿಕೊಂಡರು ಎಂಬುದು ಕೆಲವು ಇತಿಹಾಸಜ್ಞರ ಅಂಬೋಣ. ಮೂರನೇ ಹಾಗೂ ಕೊನೆಯ ಆಕ್ರಮಣವನ್ನು ಮಾಡಿದ್ದು ಮೊಘಲ್ ಬಾದಶಹ ಅಕ್ಬರ್. ಅದು ಆದದ್ದು ಕ್ರಿ. ಶ. ೧೫೬೮ರಲ್ಲಿ. ಜೈಮಲ್ ಮತ್ತು ಕಲ್ಲ ಎಂಬ ಇಬ್ಬರು ರಜಪೂತ ಸೈನ್ಯಾಧಿಪತಿಗಳು ಕೋಟೆಯನ್ನು ರಕ್ಷಿಸಲು ಶತಾಯಗತಾಯ ಹೋರಾಡುತ್ತಾರೆ. ಕೊನೆಗೆ ಕಾಳಗದಲ್ಲಿ ಹತರಾಗುತ್ತಾರೆ. ಕೋಟೆ ಅಕ್ಬರನ ಕೈವಶವಾಗುತ್ತದೆ. ಈ ಬಾರಿಯೂ ಜೌಹರ್ ಪದ್ಧತಿಗೆ ರಜಪೂತ ಮಹಿಳೆಯರು ಮೊರೆ ಹೋಗುತ್ತಾರೆ.

ನಾವು ಚಿತ್ತೌರ್‌ಗಢ ತಲುಪಿದಾಗ ಬೆಳಿಗ್ಗೆ ೬-೦೦ ಗಂಟೆಯಾಗಿತ್ತು. ಪ್ರಾತಃವಿಧಿಗಳನ್ನು ಪೂರೈಸಿಕೊಂಡು ನೇರವಾಗಿ ಕೋಟೆಯತ್ತ ಪ್ರಯಾಣ ಬೆಳೆಸಿದೆವು. ಚಿತ್ತೌರ್‌ಗಢದ ಪ್ರಮುಖ ಆಕರ್ಷಣೆಯೆಂದರೆ ಅಲ್ಲಿರುವ ಬೃಹತ್ ಕೋಟೆ. ಅದಿರುವುದು ಸುಮಾರು ೧೮೦ ಮೀಟರ್ ಎತ್ತರದ ಬೆಟ್ಟದ ಮೇಲೆ. ಅದರ ವಿಸ್ತೀರ್ಣ ಸುಮಾರು ೭೦೦ ಎಕರೆ. ಇಂತಹ ವಿಶಾಲವಾದ ಕ್ಲಿಲೆಯನ್ನು ವೀಕ್ಷಿಸಲು ಹೆಚ್ಚಿನ ಸಮಯಾವಧಿ ಬೇಕಾಗುತ್ತದೆ. ನಮ್ಮ ಬಳಿ ವಾಹನವಿದ್ದುದರಿಂದ, ಸಂದರ್ಶನಾ ಕಾರ್ಯ ಸುಗಮವಾಗಿ ಸಾಗಿತು. ಚಿತ್ತೌರ್‌ಗಢ ಕೋಟೆಯ ಇತಿಹಾಸದ ಪಯಣದಲ್ಲಿ ನಮಗೆ ಶ್ರೀಧರ ದೀಕ್ಷಿತ್ ಎಂಬ ಒಬ್ಬ ಯುವಕ ಮಾರ್ಗದರ್ಶನ ನೀಡಿದ. ಆತ ಇತಿಹಾಸದ ವಿದ್ಯಾರ್ಥಿಯಾಗಿದ್ದರಿಂದ ನಮಗೆ ಅನುಕೂಲವಾಯಿತು.

ಕೋಟೆಯ ಪ್ರವೇಶದ್ವಾರದ ಹೆಸರು 'ಪಡನ್ ಪೋಲ್' ಅಥವಾ 'ಪದನ್' ಪೋಲ್. ಮುಂದೆ ಸಾಗಿದಂತೆ, ನಮಗೆ ಇನ್ನೂ ಏಳು ದ್ವಾರಗಳು ಸಿಗುತ್ತವೆ. ಅವೆಂದರೆ : (ಅ) 'ಭೈರೊನ್ ಅಥವಾ 'ಟೂಟ' (ಛಿದ್ರಗೊಂಡಿರುವ) ಪೋಲ್ (ಆ) 'ಹನುಮಾನ್' ಪೋಲ್, (ಇ) 'ಗಣೇಶ್' ಪೋಲ್, (ಈ) 'ಜೋರ್ಲ' ಪೋಲ್, (ಉ) 'ಲಕ್ಷ್ಮಣ್' ಪೋಲ್, (ಊ) 'ರಾಮ್' ಪೋಲ್, (ಋ) 'ಸೂರಜ್' ಪೋಲ್. ಈ ಎಲ್ಲ ಏಳು ದ್ವಾರಗಳನ್ನು ಮಹಾರಾಣ ಕುಂಭನ ರಾಜ್ಯಭಾರದ ಅವಧಿಯಲ್ಲಿ ಕಟ್ಟಲಾಯಿತು ಎನ್ನಲಾಗಿದೆ. ಮೊದಲನೇ ದ್ವಾರದ ಎಡಭಾಗದಲ್ಲಿ ರಾಮ್‌ಭಾಗ್ ಸಿಂಗ್‌ನ ಒಂದು ಸ್ಮಾರಕವಿದೆ. ಪ್ರತಾಪಗಢದ ಸಾಮಂತನಾಗಿದ್ದ ಅವನು, ಕ್ರಿ. ಶ. ೧೫೩೪ರಲ್ಲಿ ಗುಜರಾತಿನ ಸುಲ್ತಾನ ಬಹದ್ದೂರ್ ಶಾನ ಸೈನ್ಯದೊಡನೆ ಕಾದಾಡುತ್ತ ಇಲ್ಲಿ ಮರಣವನ್ನಪ್ಪಿದ. ಎರಡನೇ ದ್ವಾರವಾದ 'ಭೈರೊನ್' (ಟೂಟ) ಪೋಲ್‌ನ ಬಲಬದಿಯಲ್ಲಿದೆ ಎರಡು ಛತ್ರಿಯಾಕಾರದ ಸ್ಮಾರಕಗಳು. ನಾಲ್ಕು ಕಂಬಗಳ ಚಿಕ್ಕ ಛತ್ರಿಯಾಕಾರದ ಸ್ಮಾರಕ ಸಿಸೋಡಿಯಾ ಪಟ್ಟನ ಸ್ಮರಣಾರ್ಥ ಕಟ್ಟಲಾಗಿದೆ. ಆರು ಕಂಬಗಳ ಎರಡನೇ ಸ್ಮಾರಕ ರಾಥೋಡ್ ಜೈಮಲ್‌ಗೆ ಸಮರ್ಪಿಸಲಾಗಿದೆ. ಕ್ರಿ. ಶ. ೧೫೬೮ರಲ್ಲಿ ಮೊಗಲ್ ಬಾದಶಹ ಅಕ್ಬರ್ ಚಿತ್ತೌರ್‌ಗಢ ಮೇಲೆ ದಂಡೆತ್ತಿ ಬಂದಾಗ, ಇವರೀರ್ವರು ಮಹಾರಾಣನ ಸಹಾಯಕ್ಕೆ ಧಾವಿಸುತ್ತಾರೆ. ಶತ್ರುವಿನ ವಿರುದ್ಧ ಕಾದಾಡುತ್ತ ಅಸುನೀಗುತ್ತಾರೆ.

'ಹನುಮಾನ್ ಪೋಲ್', 'ಗಣೇಶ್ ಪೋಲ್' ಮತ್ತು 'ಲಕ್ಷ್ಮಣ್ ಪೋಲ್' ಬಳಿ ಕ್ರಮವಾಗಿ ಹನುಮಾನ್, ಗಣೇಶ ಮತ್ತು ಲಕ್ಷ್ಮಣ ಮಂದಿರಗಳಿವೆ. 'ರಾಮ್ ಪೋಲ್' ಬಳಿಯಿದೆ ರಾಮ ದೇವಸ್ಥಾನ. ಇಲ್ಲಿಂದ ಮುಂದೆ ಸಾಗಿದರೆ, ನಾವು ಕೋಟೆಯ ಒಳಭಾಗವನ್ನು ತಲಪುತ್ತೇವೆ. ಇಲ್ಲಿ ರಾಣ ಕುಂಭನ ಅರಮನೆಯ ಅವಶೇಷಗಳು ಕಂಡುಬರುತ್ತವೆ. ಇದನ್ನು ಕ್ರಿ. ಶ. ೧೪೩೩-೬೮ರ ಅವಧಿಯಲ್ಲಿ ಕಟ್ಟಲಾಗಿತ್ತು. ಒಂದು ಕಾಲದಲ್ಲಿ ಇಲ್ಲಿ ಆನೆ ಮತ್ತು ಕುದುರೆ ಲಾಯಗಳಿದ್ದುವು. ಹಾಗೆಯೆ ಜ಼ೆನಾನಗಳು ಮತ್ತು ಒಂದು ಶಿವಮಂದಿರ ಸಹ ಇದ್ದವು. ರಾಣಿ ಪದ್ಮಿನಿ ಮತ್ತು ಇತರ ರಾಜವಂಶದ ಮಹಿಳೆಯರು ಇಲ್ಲಿ ಜೌಹರ್ ಪದ್ಧತಿಗೆ ಮೊರೆಹೋದರು ಎನ್ನುತ್ತಾರೆ. ಇದರ ಸಮೀಪದಲ್ಲಿವೆ 'ನೌಲಖಾ ಭಂಡಾರ್' (ಖಜಾನೆ), 'ಮೀರಾ ಬಾಯಿ', 'ಕುಂಭ ಶ್ಯಾಮ' ಮತ್ತು ೧೧ನೇ ಶತಮಾನದ ಜೈನ ಸಂಪ್ರದಾಯದ 'ಸಾತ್ ಬೀಸ್ ದೇವ್‌ರಿ' ದೇವಾಲಯಗಳು.

ಇಡೀ ಚಿತ್ತೌರ್‌ಗಢ ಕೋಟೆಯಲ್ಲಿನ ಮಹತ್ವದ ದೇವಾಲಯಗಳಲ್ಲಿ 'ಕುಂಭಶ್ಯಾಮ' ದೇಗುಲವೂ ಒಂದು. ಭಗವಾನ್ ವಿಷ್ಣುವಿನ ೧೨ ಅವತಾರಗಳಿಗೆ ಸಮರ್ಪಿಸಲಾಗಿರುವ ಈ ದೇವಾಲಯವನ್ನು ಕಟ್ಟಿಸಿದ್ದು ಮಹಾರಾಣ ಕುಂಭ. ಇದರ ಮುಂಭಾಗ ದಲ್ಲಿ ಛತ್ರಿಯೊಂದರ ಕೆಳಗೆ ಗರುಡನ ವಿಗ್ರಹವಿದೆ. ಗುಮ್ಮಟದಲ್ಲಿ ಆಕರ್ಷಕ ಕಲಾಕೃತಿಗಳಿವೆ. ಇಲ್ಲಿ ಕಂಡುಬರುವ ಬಟ್ಟೆಗಳ ವಿನ್ಯಾಸಗಳು, ಆಭರಣಗಳು, ಕೇಶಶೈಲಿಗಳು, ಸಂಗೀತ ವಾದ್ಯಗಳು ಮತ್ತಿತರ ಆಲಂಕಾರಿಕ ಕೆತ್ತನೆಗಳು ೧೫ನೇ ಶತಮಾನದ ಮೇವಾಡದ ಜೀವನಶೈಲಿಯನ್ನು ಸಶಕ್ತವಾಗಿ ಬಿಂಬಿಸುತ್ತವೆ. ಈ ದೇಗುಲದ ಆವರಣದಲ್ಲಿದೆ ಮೀರಾ ಮಂದಿರ್. ಭಾರತದ ಭಕ್ತಿಪರಂಪರೆಯಲ್ಲಿ ಮೀರಾ ಬಾಯಿಗೆ ಪ್ರಮುಖ ಸ್ಥಾನವಿರುವ ಸಂಗತಿ ಎಲ್ಲರಿಗೂ ತಿಳಿದ ವಿಷಯವೇ. ಆಕೆಯ ಕೃಷ್ಣಭಕ್ತಿ ಅನೇಕ ಜಾನಪದ, ದಂತಕತೆಗಳಿಗೆ ವಸ್ತುವಾಗಿದೆ. ಕೆಲವು ಜಾನಪದ ಕಥೆಗಳು, ದೊಡ್ಡದಾದ ಬರನ್ ದೇವಸ್ಥಾನವನ್ನು ಮಹಾರಾಣ ಕುಂಭ ಕಟ್ಟಿಸಿದನೆಂದು ಮತ್ತು ಚಿಕ್ಕದಾದ ಕುಂಭಶ್ಯಾಮ ಮಂದಿರವನ್ನು ಅವನ ಪತ್ನಿ ರಾಣಿ ಮೀರಾ ಬಾಯಿ ನಿರ್ಮಿಸಿದಳೆಂದು ಸಾರುತ್ತವೆ. ಈ ವಿಷಯವನ್ನು ಆಧಾರವಾಗಿರಿಸಿಕೊಂಡು, ಬ್ರಿಟಿಷ್ ಇತಿಹಾಸಜ್ಞ ಕರ್ನಲ್ ಟಾಡ್ ತನ್ನ ಒಂದು ಮೇರು ಕೃತಿಯಲ್ಲಿ ಮೀರಾ ಬಾಯಿ ಮಹಾರಾಣ ಕುಂಭನ ಪತ್ನಿಯಾಗಿದ್ದಳು ಎಂದು ಬರೆದಿದ್ದಾನೆ. ಆದರೆ ಹಲವು ಇತಿಹಾಸಜ್ಞರು ಆಕೆ ಮೇವಾಡದ ರಾಣ ಸಿಂಗನ ಮಗನಾದ ಭೋಜರಾಜನನ್ನು ವರಿಸಿದ್ದಳು ಎಂದು ಅಭಿಪ್ರಾಯಪಟ್ಟಿದ್ದಾರೆ. ಅಂತೆಯೇ ಈ ಎರಡು ದೇವಾಲಯಗಳನ್ನು ಮಹಾರಾಣ ಕುಂಭನೇ ನಿರ್ಮಾಣ ಮಾಡಿದನೆಂಬುದರ ಬಗೆಗೆ ಒತ್ತು ನೀಡುತ್ತಾರೆ.

ಕುಂಭಶ್ಯಾಮ ಮಂದಿರದ ಬಲಭಾಗದಿಂದ ಮುನ್ನಡೆದರೆ 'ವಿಜಯ ಸ್ತಂಭ' ಸಿಗುತ್ತದೆ. ೪೭ ಚದರಡಿ, ೧೦ ಅಡಿ ಎತ್ತರದ ವೇದಿಕೆಯ ಮೇಲೆ ೯ ಅಂತಸ್ತುಗಳ ೧೨೨ ಅಡಿ ಎತ್ತರದ ಗೋಪುರ ದೂರದಿಂದಲೇ ಗೋಚರಿಸುತ್ತದೆ. ಮೇಲಕ್ಕೆ ತಲುಪಲು ೧೫೭ ಮೆಟ್ಟಿಲುಗಳಿವೆ. ಈ ಸ್ಮಾರಕದ ಒಳಗಡೆ ಮತ್ತು ಹೊರಗಡೆ ಇರುವ ರಾಮಾಯಣ, ಮಹಾಭಾರತದ ದೃಶ್ಯಗಳು, ಅರ್ಧನಾರೀಶ್ವರ, ಉಮಾಮಹೇಶ್ವರ, ಲಕ್ಷ್ಮೀನಾರಾಯಣ, ಬ್ರಹ್ಮ, ಸಾವಿತ್ರಿ, ಹರಿಹರ, ವಿಷ್ಣುವಿನ ಅವತಾರಗಳು ಮತ್ತು ಇತರ ದೇವ-ದೇವಿಯರ ಕೆತ್ತನೆಗಳು ಮನಮೋಹಕವಾಗಿವೆ. ಅಲ್ಲದೆ ಆ ಕಾಲದ ಸಾಮಾಜಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಕೆಲವು ದೃಶ್ಯಾವಳಿಗಳೂ ಇವೆ. ಈ ಸ್ಥಳದ ಅಧ್ಯಯನಾಕಾರ ರತನ್ ಚಂದ್ ಅಗ್ಗರ್‌ವಾಲ್‌ರ ಪ್ರಕಾರ 'ವಿಜಯ ಸ್ತಂಭ' ಮತ್ತು ಕುಂಭಶ್ಯಾಮ ದೇಗುಲದ ಚಿತ್ತಾಕರ್ಷಕ ಶಿಲ್ಪಕಲಾಭಿವ್ಯಕ್ತಿಗೆ ಕಾರಣ ರಾದವರು ಜಯೀತ ಹಾಗೂ ಅವನ ಪುತ್ರರು 'ವಿಜಯ ಸ್ತಂಭ'ದ ಐದನೇ ಮಹಡಿಯಲ್ಲಿ ಈ ಜಯೀತನ ಪುತ್ಥಳಿಯನ್ನು ಕಾಣಬಹುದು.

ಈ ಸ್ತಂಭದ ನಿರ್ಮಾಣದ ವರ್ಷದ ಬಗೆಗೆ ಇತಿಹಾಸಕಾರರಲ್ಲಿ ಐಕಮತ್ಯವಿಲ್ಲ. ಒಂದು ಆಧಾರದ ಅನ್ವಯ ಇದನ್ನು ಮಹಾರಾಣ ಕುಂಭನು ಕ್ರಿ. ಶ. ೧೪೪೮ರಲ್ಲಿ ಚಿತ್ತೌರ್‌ಗಢಕ್ಕೆ ಸಮರ್ಪಿಸಿದನು. ಮಾಳ್ವಾ ಸುಲ್ತಾನ ಮೆಹಮ್ಮುದ್ ಖಿಲ್ಜಿ ಮೇಲೆ ತಾನು ಸಾಧಿಸಿದ ಪ್ರಥಮ ವಿಜಯದ ದ್ಯೋತಕವಾಗಿ ಈ ಸ್ತಂಭವನ್ನು ನಿರ್ಮಿಸಿದನೆಂದು ಹೇಳುತ್ತಾರೆ. ಇನ್ನು ಕೆಲವು ವಿದ್ವಾಂಸರು ಆ ಕಾಲದಲ್ಲಿ ದೇಗುಲಗಳ ಎದುರಿಗೆ ಸ್ತಂಭಗಳನ್ನು ಕಟ್ಟುವುದು ವಾಡಿಕೆ ಯಾಗಿತ್ತೆಂದೂ, ಅದರಂತೆ ಮಹಾರಾಣ ಕುಂಭನು ಕುಂಭಶ್ಯಾಮ ಮಂದಿರದ ಎದುರಿಗೆ ವಿಜಯ ಸ್ತಂಭವನ್ನು ಕಟ್ಟಿಸಿದನೆಂದೂ ಹೇಳಿದ್ದಾರೆ. ಆದರೆ ಈ ಸ್ತಂಭವಿರುವುದು ಕುಂಭಶ್ಯಾಮ ದೇಗುಲದಿಂದ ಸುಮಾರು ೧೦೦ ಗಜಗಳ ದೂರದಲ್ಲಿ (ದಕ್ಷಿಣಕ್ಕೆ). ಹಾಗೆಯೇ ಸ್ತಂಭದ ಒಳಗಡೆಯಿರುವ ಶಾಸನಗಳು ಮತ್ತಿತರ ದಾಖಲೆಗಳೂ ಸಹ ಮೇಲಿನ ವಾದವನ್ನು ಪುಷ್ಟೀಕರಿಸುವುದಿಲ್ಲ ಎಂಬುದು ಇತರ ಕೆಲವು ವಿದ್ವಾಂಸರ ಅಭಿಮತ. ವಾದಗಳು ಏನೇ ಇರಲಿ, ಈ ಸ್ಮಾರಕ ನೋಡುಗರನ್ನು ಮೂಕವಿಸ್ಮಿತರನ್ನಾಗಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಇದು ದೆಹಲಿಯ ಕುತುಬ್‌ಮಿನಾರ್‌ಗಿಂತಲೂ ಉತ್ಕೃಷ್ಟವೆಂದು ಕರ್ನಲ್ ಟಾಡ್ ಉಲ್ಲೇಖಿಸಿದ್ದಾನೆ. ಮತ್ತೊಬ್ಬ ಕಲಾ ಇತಿಹಾಸಜ್ಞ ಜೇಮ್ಸ್ ಫರ್ಗುಸನ್‌ನ ಪ್ರಕಾರ ಇದು ರೋಮ್‌ನಲ್ಲಿರುವ ಟ್ರೋಜನ್ ಸ್ತಂಭಕ್ಕಿಂತಲೂ ಮಿಗಿಲಾದದ್ದು ಎಂದು ಉದ್ಗರಿಸಿರುವುದು ಇದರ ವಾಸ್ತು ಶ್ರೀಮಂತಿಕೆಯನ್ನು ಎತ್ತಿತೋರಿಸುತ್ತದೆ.



***ಸಾಮೂಹಿಕವಾಗಿ ಚಿತೆಯನ್ನೇರುತ್ತಿರುವ ರಾಣಿ ಪದ್ಮಿನಿ ಮತ್ತು ಇತರ ಮಹಿಳೆಯರು***



ಕುಂಭಶ್ಯಾಮ ಮಂದಿರ

ವಿಜಯ ಸ್ತಂಭದ ಆಸುಪಾಸಿನಲ್ಲಿರುವ ಸಮೀಧೇಶ್ವರ ಮಂದಿರ, ಮಹಾಸತಿ ಸ್ಥಳ, ಗೋಮುಖ ಕುಂಡ್, ಜೈಮಲ್ ಪಟ್ಟ ಅರಮನೆಯ ಪಳೆಯುಳಿಕೆಗಳು, ಕಾಳಿಕಾ ಮಾತಾ ಮಂದಿರ ಮುಂತಾದ ಸ್ಮಾರಕಗಳು ವೀಕ್ಷಕರನ್ನು ಗತಕಾಲದ ಪ್ರವಾಸಿಗಳನ್ನಾಗಿಸುತ್ತವೆ.

ಜೈಮಲ್ ಪಟ್ಟಾ ಅರಮನೆಯ ದಕ್ಷಿಣ ದಿಕ್ಕಿನಲ್ಲಿದೆ 'ಕಾಳಿಕಾ ಮಾತಾ ಮಂದಿರ್.' ಇದೊಂದು ದೊಡ್ಡ ಮತ್ತು ಪುರಾತನ ದೇಗುಲ. ಇದರ ಕಂಬಗಳು, ಛಾವಣಿಗಳು ಮತ್ತು ಗರ್ಭಗುಡಿಯಲ್ಲಿರುವ ಕೆತ್ತನೆಗಳನ್ನು ಗಮನಿಸಿದರೆ, ಇದನ್ನು ಗುಹಿಲ ವಂಶದ ಮೇವಾಡದ ರಾಜರು ೮ನೇ ಅಥವಾ ೯ನೇ ಶತಮಾನದಲ್ಲಿ ಕಟ್ಟಿದರು ಎಂಬುದು ವೇದ್ಯವಾಗುತ್ತದೆ. ಗರ್ಭಗುಡಿಯ ದ್ವಾರ ಮತ್ತು ಅದರ ಹಿಂಬದಿಯ ಕೆಲವೆಡೆ ಸೂರ್ಯ ವಿಗ್ರಹ ಕೆತ್ತಿರುವುದರಿಂದ ಪ್ರಾಯಶಃ ಇದು ಮೊದಲು ಸೂರ್ಯ ದೇಗುಲವಾಗಿದ್ದಿರಬಹುದು. ದೇಗುಲದ ಪೂರ್ವಕ್ಕೆ 'ಸೂರ್ಯ ಕುಂಡ್' ಇದೆ. ಮೊಘಲರ ದಾಳಿಯಲ್ಲಿ ಇದು ನಾಶಗೊಂಡು, ಬಳಿಕ ಕಾಳಿಕಾ ಮಾತಾಳ ವಿಗ್ರಹವನ್ನು ಪ್ರತಿಷ್ಠಾಪಿಸಿರಬಹುದೆಂದು ಊಹಿಸಲಾಗಿದೆ.

'ಸೂರ್ಯ ಕುಂಡ್'ನ ದಕ್ಷಿಣಕ್ಕೆ ಇರುವುದು ರಾಣಿ ಪದ್ಮಿನಿಯ ಅರಮನೆ. ಕೆರೆಯೊಂದರ ಮಧ್ಯದಲ್ಲಿ ಇದನ್ನು ಕಟ್ಟಲಾಗಿದೆ. ಇಲ್ಲಿನ ಮುಖ್ಯ ಹಾಲಿನಲ್ಲಿದ್ದ ಕನ್ನಡಿಯಲ್ಲೇ ದೆಹಲಿ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿ ಜ಼ೆನಾನ ಮಹಲ್‌ನಲ್ಲಿ ನಿಂತಿದ್ದ ಅಪ್ರತಿಮ ಸುಂದರಿ ರಾಣಿ ಪದ್ಮಿನಿಯ ಪ್ರತಿಬಿಂಬವನ್ನು ಕಂಡಿದ್ದು. ಒಂದು ಆಖ್ಯಾನದ ಪ್ರಕಾರ ಈ ವ್ಯವಸ್ಥೆಯನ್ನು ಏರ್ಪಾಟು ಮಾಡಿದ್ದು ಆಕೆಯಗಂಡ ರಾಣ ರತನ್ ಸಿಂಗ್. ಆ ಸೌಂದರ್ಯ ಖನಿಯನ್ನು ವಶಪಡಿಸಿಕೊಳ್ಳಲೆಂದೇ ಅಲ್ಲಾವುದ್ದೀನ್ ಖಿಲ್ಜಿ ದಂಡೆತ್ತಿ ಬಂದನೆಂದು

# ಚರಿತ್ರೆ – ಪುರಾಣ

ಕಾವ್ಯಲೋಕ

ಪುರಾಣಕೆ ಚರಿತ್ರೆಯ ಹಂಗಿಲ್ಲ
ಪುಣ್ಯಪುರುಷರ ಕಥೆಗಳನು ನೇಯ್ದು
ಜೇಡರ ಬಲೆಯಾಗಿಸಿ ಬಣ್ಣ ಹಚ್ಚಿದರಾಯ್ತು.
ನಡೆದುದನೆ ಆಯ್ದು ಘಟನೆಗಳ ಜೋಡಿಸಿ
ಯಥಾವತ್ತಾಗಿ ಯಾಂತ್ರೀಕರಿಸುವುದು ಚರಿತ್ರೆ.

ಪುರಾಣಕೆ ಮೌಲ್ಯಗಳ ಹಂಗಿಲ್ಲ
ಪಾಂಡವರ ಸತಿಯಾಗಿ ಸಾಲದೆಂಬಂತೆ
ಭಾವನನು ಬಯಸಿ ಬಯಲಾದರೂ ಗರತಿ.
ಸತ್ತಗಂಡನನು ಮರುಗಳಿಗೆಯಲಿ ಬದುಕಿಸಿ
ಭಗವಂತನಿಗೆ ಷರತ್ತು ವಿಧಿಸಿದಾಕೆಗೆ ಆರತಿ.
ಮಾಯಾಜಿಂಕೆಗೆ ಮನಸುಕೊಟ್ಟು
ಗಂಡಮೈದುನರ ಬದುಕು ಮೂರಾಬಟ್ಟೆಯಾಗಿಸಿ
ರಾವಣನ ತೋಳ್ತೆಕ್ಕೆಗೆ ಸಿಕ್ಕಿದರೂ ಪೂಜಿತೆ.
ಸಾವಿರಾರು ನಾರಿಯರ ಸ್ತ್ರೀಲೋಲನೆಮ್ಮ ಗುರು
ಉಡುಪಿ ಮಠದಲಿ ಬಂಧಿಯಾದ ಮಾಯಕಾರ.

ಮುಡಿಯಲಿ ಗಂಗೆ ತೊಡೆಮೇಲೆ ಗೌರಿಯ
ರಿದ್ದರೂ ಏಕಪತ್ನಿ ವ್ರತಸ್ಥರ ಪೂಜನೀಯ
ಊರಿನ ಹಂಗಿಲ್ಲದೆ ಕಾಡಿನಲಿ ಬದುಕಿದರೂ
ಕಾಡಾನೆಗಳ ಕಾಟವಿಲ್ಲ ಸಿಂಹಗಳ ಸುಳಿವಿಲ್ಲ
ಹುಲಿಸವಾರಿ ಮಾಡಿ, ಇಲಿಗಳ ಮೇಲೆ ಕುಂತು
ಬ್ರಹ್ಮಾಂಡವನೆ ಪರ್ಯಟನೆ ಮಾಡಲಡ್ಡಿಯಿಲ್ಲ.
ಅಣ್ಣ ತಮ್ಮನನು ಮಗ ತಂದೆಯನೆ ಕೊಂದು
ಗದ್ದುಗೆ ಹಿಡಿದ ಚರಿತ್ರೆಗೆದುರಾಗಿ ರಾಜ್ಯ ತೊರೆದ
ಸೋದರನ ಪಾದುಕೆ ತಂದು ಪಟ್ಟಾಭಿಷೇಕ
ಮಾಡಿದ ಭಗವಂತರನೇಕರು



ಪುರಾಣಕೆ ನರಮಾನವರ ಹಂಗಿಲ್ಲ
ಒಪ್ಪೊತ್ತಿನ ಊಟಕ್ಕೆ ನರನಾಡಿ
ಹುರಿಮಾಡಿ ಹಿಂಡಿ ರಕ್ತ ಸುರಿಸಿದ್ದಿಲ್ಲ
ಅಂಗೈಯಗಲ ಭೂಮಿ ಒಡೆಯನಾಗಲು
ವರ್ಷಗಟ್ಟಲೆ ಕೋರ್ಟು ಸುತ್ತಿದ್ದಿಲ್ಲ
ಗಾಳಿ ಬಿರುಗಾಳಿ ಚಳಿಮಳೆಯ
ತಪ್ಪಿಸಿಕೊಳ್ಳಲು ಸೂರಿನ ಜಂಜಾಟವಿಲ್ಲ
ಮಗಳ ಮದುವೆಗೆ ಗಂಡು ಹುಡುಕುವ
ಪೋಲಿಪುಂಡರ ತಪ್ಪಿಸಿ ಬದುಕುವ
ಜೀವನ ಬಂಡೆಯಾಗಿ ಮೈಮೇಲೆ ಬಿದ್ದಿದ್ದಿಲ್ಲ.

ಪುರಾಣಕೆ ಹುಲುಮಾನವ ಬೇಕಾಗಿಲ್ಲ
ಚಂದಕೆ ಚರಿತ್ರೆ ಘಟಿಸುವುದಿಲ್ಲ
ನಡೆದುದನ್ನೇ ನಂದಾದೀಪ ಮಾಡಿ
ಎಣ್ಣೆಬತ್ತಿಯನು ವರ್ತಮಾನದಲಿರಿಸಿ
ನೆನಪು ಭೂತ; ಭವಿಷ್ಯ ದಿಕ್ಸೂಚಿ.

**ಡಾ॥ ಎಲ್. ಹನುಮಂತಯ್ಯ**
ನಂ. 207ಎ, 3ನೇ 'ಡಿ' ಅಡ್ಡರಸ್ತೆ, 2ನೇ ಬ್ಲಾಕ್, 3ನೇ ಹಂತ
ಬಸವೇಶ್ವರನಗರ, ಬೆಂಗಳೂರು – 560 079

ಹೇಳಲಾಗಿದೆ. ಆದರೆ ಇದು ರಾಣಿ ಪದ್ಮಿನಿಯ ಬೇಸಿಗೆಯ ನಿವಾಸವಾಗಿತ್ತೆಂದು ಹೇಳುವವರಿದ್ದಾರೆ. ಆದರೆ ಆಕೆ ಜೌಹರ್ ಪದ್ಧತಿಗೆ ಮೊರೆಹೋದದ್ದು ರಾಣ ಕುಂಭದ ಮಹಲ್‌ನಲ್ಲಿ (ಅರಮನೆ) ಎಂದು ನಮ್ಮ ಮಾರ್ಗದರ್ಶಿ ತಿಳಿಸಿದ. ದಾಳಿಗಳಿಂದ ಜರ್ಜರಿತವಾಗಿದ್ದ ಈ ಅರಮನೆಯನ್ನು ಮತ್ತು ಕೋಟೆಯಲ್ಲಿದ್ದ ಇತರ ಕೆಲವು ಕಟ್ಟಡಗಳನ್ನು ದುರಸ್ತಿಗೊಳಿಸಿದ್ದು ಮಹಾರಾಣ ಸಜ್ಜನ್ ಸಿಂಗ್. ಇದು ಜರುಗಿದ್ದು ೧೯ನೇ ಶತಮಾನದ ೮ನೇ ದಶಕದಲ್ಲಿ.

ಅನುಪಮ ರೂಪವತಿ ಎಂದು ಜನಜನಿತವಾಗಿರುವ ರಾಣಿ ಪದ್ಮಿನಿ ಅಥವಾ ಪದ್ಮಾವತಿ ರಜಪೂತ ಕವಿಗಳ ಮತ್ತು ಸೂಫಿ ಕತೆಗಾರರ ಅನೇಕ ವರ್ಣನೆಗಳಿಗೆ ವಸ್ತುವಾಗಿದ್ದಾಳೆ. ಅವುಗಳಿಗೆ ಸ್ಪಷ್ಟ ರೂಪುರೇಖೆ ದೊರೆತದ್ದು ಇಂಡಾಲಜಿಯಲ್ಲೇ ಸರಿಸಾಟಿಯಿಲ್ಲದ ಕೃತಿಯೆಂದು ಗುರುತಿಸಲ್ಪಡುವ ಜೇಮ್ಸ್ ಟಾಡ್‌ನ 'ಆ್ಯನಲ್ಸ್ ಆ್ಯಂಡ್ ಆ್ಯಂಟಿ ಕ್ವಿಟೀಸ್ ಆಫ್ ರಾಜಾಸ್ತಾನ್'ದಲ್ಲಿ ಎಂಬುದು ಮನನೀಯ ವಿಚಾರ. ಅನೇಕ ವರ್ಷಗಳ ಪಯಣದ ತರುವಾಯ ಟಾಡ್ ಈ ಗ್ರಂಥವನ್ನು ಕ್ರಿ.ಶ. ೧೮೨೯ರಲ್ಲಿ ಬರೆದ. ಆದರೆ ಅನೇಕ ಆಧುನಿಕ ಇತಿಹಾಸಕಾರರು ಪದ್ಮಿನಿಯ ಕಥೆಯನ್ನು ಕಾಲ್ಪನಿಕವೆಂದು ಪರಿಗಣಿಸಿದ್ದಾರೆ. ಯಾವುದೇ ಸಮಕಾಲೀನ ಬರಹಗಾರರು ಪದ್ಮಿನಿಯ ಬಗ್ಗೆಯಾಗಲಿ ಅಥವಾ ಅವಳಿಗೆ ಸಂಬಂಧಿಸಿದ ಘಟನೆಗಳ ಕುರಿತು ಪ್ರಸ್ತಾಪ ಮಾಡಿಲ್ಲ ಎಂಬುದು ಅವರು ಮುಂದಿಡುವ ವಾದ. ಅಲ್ಲಾವುದ್ದೀನ್ ಖಿಲ್ಜಿಯ ಆಸ್ಥಾನದಲ್ಲಿದ್ದ ಸುಪ್ರಸಿದ್ಧ ಕವಿ, ವಿದ್ವಾಂಸ ಮತ್ತು ಸಂಗೀತಜ್ಞ 'ಅಮೀರ್ ಖುಸ್ರು ಚಿತ್ತೌರ್‌ನ ಮುತ್ತಿಗೆಯ ಸಂದರ್ಭದಲ್ಲಿ ಸುಲ್ತಾನನ ಜೊತೆಯೇ ಇದ್ದ ಎನ್ನಲಾಗಿದೆ. ಇದರ ಬಗೆಗೆ ಆತ 'ತಾರೀಖ್-ಇ-ಅಲೈ' ಎಂಬ ಗ್ರಂಥವನ್ನು ಬರೆದ. ಅದರಲ್ಲಿ ಪದ್ಮಿನಿಯ ಪ್ರಸ್ತಾಪವೇ ಇಲ್ಲ. ಹಾಗೆಯೇ ಜಿಯಾವುದ್ದೀನ್ ಬರಾನಿ ಸಹ ಅವಳ ಕುರಿತು ಉಲ್ಲೇಖ ಮಾಡಿಲ್ಲ. ನಂತರ ಬಂದ ಇತಿಹಾಸ ದಾಖಲೆಕಾರರು ಚಿತ್ತೌರ್‌ನಲ್ಲಿದ್ದ ರಾಣಿ ಪದ್ಮಿನಿ ಅಥವಾ ಆಕೆ ಪಾಲಿಸಿದ ಜೌಹರ್ ಪದ್ಧತಿಯ ಕುರಿತು ಬರೆದಿಲ್ಲ. ಶಾದ್-ಇ-ಸಿರಾಜ್ ಅಫಿಫ್‌ನ 'ತಾರೀಖ್-ಇ-ಫಿರೋಜ್‌ಶಾಹಿ ಅಥವಾ ಸಿರ್ ಹಿಂದಿಯ 'ತಾರೀಖ್-ಇ-ಮುಬಾರಕ್‌ಶಾಹಿ'ಯಾಗಲಿ ಪದ್ಮಿನಿ ಬಗೆಗೆ ಮೌನವಹಿಸಿವೆ.

ಆಧುನಿಕ ವಿದ್ವಾಂಸರಲ್ಲಿ ಒಬ್ಬರಾದ ಸತೀಶ್ ಚಂದ್ರ ತಮ್ಮ 'ಮಿಡೀವಲ್ ಇಂಡಿಯಾ: ಫರ್ಮ್ ಸುಲ್ತಾನತ್ ಟು ದ ಮೊಘಲ್ಸ್' ಎಂಬ ತಮ್ಮ ಕೃತಿಯಲ್ಲಿ ಕ್ರಿ.ಶ. ೧೫ನೇ ಶತಮಾನದ ಮೊದಲ ದಶಕಗಳಲ್ಲಿ ಪದ್ಮಿನಿ ವೃತ್ತಾಂತವು ಸಾಹಿತ್ಯಕ ಕೃತಿಯಲ್ಲಿ ಮೂಡಿಬಂದಿತು ಎಂಬುದರ ಬಗೆಗೆ ಬೆಳಕು ಚೆಲ್ಲಿದ್ದಾರೆ. ಸುಮಾರು ಒಂದು ನೂರು ವರ್ಷಗಳ ತರುವಾಯ ಮಲಿಕ್ ಮೊಹಮ್ಮದ್ ಜಯಸಿ ಎಂಬ ಸೂಫಿ ಕವಿ ಇದಕ್ಕೆ ಹಲವು ಭ್ರಮಾತ್ಮಕ ಕತೆಗಳನ್ನು ಹೆಣೆದ ಎಂಬ ವಿಷಯವನ್ನು ಹೊರಗೆಡಹಿದ್ದಾರೆ. ಅಲ್ಲದೆ ರಾಜಸ್ತಾನದ ಅಗ್ರ ಇತಿಹಾಸಜ್ಞರಾದ ಗೌರಿಶಂಕರ್ ಓಝು ಸಹ ಪದ್ಮಿನಿಯ ಕಥೆಯನ್ನು ಅಲ್ಲಗಳೆದಿದ್ದಾರೆ ಎಂಬ ಅಂಶದತ್ತ ಸತೀಶ ಚಂದ್ರ ಗಮನ ಸೆಳೆದಿದ್ದಾರೆ. ಆದರೆ ಮುಸಲ್ಮಾನ ಇತಿಹಾಸಕಾರರಾದ, ಫೆರಿಶ್ತಾ ಮತ್ತು 'ಅರೇಬಿಕ್ ಹಿಸ್ಟರಿ ಆಫ್ ಗುಜರಾತ್' ಬರೆದ ದಬೀರ್ ಭಿನ್ನವಾದ ನೆಲೆಗಳಿಂದ ಪದ್ಮಿನಿಯ ಇರುವನ್ನು ಸಮರ್ಥಿಸಿದ್ದಾರೆ.

ಫೆರಿಶ್ತಾ ಪ್ರಕಾರ ಅಲ್ಲಾವುದ್ದೀನ್ ಖಿಲ್ಜಿ ಚಿತ್ತೌರ್‌ನ ರಾಣನನ್ನು ದೆಹಲಿಗೆ ರವಾನಿಸಿ, ಅಲ್ಲಿ ಅವನನ್ನು ಒಂದು ವರ್ಷ ಬಂಧನದಲ್ಲಿರಿಸುತ್ತಾನೆ. ಖಿಲ್ಜಿ ರಾಣನ ಬಿಡುಗಡೆಗಾಗಿ ಪದ್ಮಿನಿಯನ್ನು ತನಗೆ ನೀಡಬೇಕೆಂಬ ನಿಬಂಧನೆ ಹಾಕುತ್ತಾನೆ. ರಾಣನ ಕುಟುಂಬಕ್ಕೆ ಈ ವಿಷಯ ತಿಳಿಸಿದಾಗ, ಒಬ್ಬ ರಾಜಕುಮಾರಿ (ಪದ್ಮಿನಿಯಲ್ಲ) ಒಂದು ಯೋಜನೆ ರೂಪಿಸುತ್ತಾಳೆ. ಅದರಂತೆ, ಕೆಲವು ಸೈನಿಕರನ್ನು ರಾಣಿ ಮತ್ತವಳ ಪರಿಚಾರಿಕೆಯರಂತೆ ಮಾರುವೇಷದಲ್ಲಿ ಕಳುಹಿಸಲಾಗುತ್ತದೆ. ಅವರು ಸೂಕ್ತ ಸಮಯದಲ್ಲಿ ಬಂದೀಖಾನೆಯ ಕಾವಲುಗಾರರನ್ನು ಹತ್ತಿಕ್ಕಿ ರಾಣನನ್ನು ಗಿರಿಪ್ರದೇಶಕ್ಕೆ ಕೊಂಡೊಯ್ಯುತ್ತಾರೆ. ಅಲ್ಲಿಂದ ನಂತರ ಅವರು ಗೆರಿಲ್ಲಾ ಮಾದರಿಯ ಯುದ್ಧವನ್ನು ಹೂಡುತ್ತಾರೆ. ಬ್ರಿಟಿಷ್ ಇತಿಹಾಸಜ್ಞ ಕರ್ನಲ್ ಪಿನ್ಹೆ ತನ್ನ 'ಹಿಸ್ಟರಿ ಆಫ್ ಮೇವಾರ್' ಕೃತಿಯಲ್ಲಿ ಅಲ್ಲಾವುದ್ದೀನ್ ಖಿಲ್ಜಿ ಪದ್ಮಿನಿಯನ್ನು ವಶಪಡಿಸಿಕೊಳ್ಳಲು ಮಾತ್ರ ಚಿತ್ತೌರ್ ಮೇಲೆ ದಂಡೆತ್ತಿ ಬಂದ ಎಂಬುದನ್ನು, ಅಲ್ಲಗಳೆದಿದ್ದಾನೆ. ಕೇಂಬ್ರಿಜ್ ಹಿಸ್ಟರಿ ಆಫ್ ಇಂಡಿಯಾ ಬರೆದ ಸರ್ ಹೈಗ್ ಸಹ ಫೆರಿಶ್ತಾನ ನಿಲುವನ್ನು ಎತ್ತಿಹಿಡಿದಿದ್ದಾನೆ. ಆದರೆ ಈ ಕೃತಿಗಳಲ್ಲಿ ಪದ್ಮಿನಿ ಜೌಹರ್ ಪದ್ಧತಿಯನ್ನು ಅನುಸರಿಸಿದಳು ಎಂಬುವುದರ ಬಗ್ಗೆ ಪ್ರಸ್ತಾಪವಿಲ್ಲ. ಹೀಗೆ ರಾಣಿ ಪದ್ಮಿನಿಯ ಸುತ್ತ ಕುತೂಹಲಕಾರಿ ಕಥೆಗಳು ಹೆಣೆಯಲ್ಪಟ್ಟಿವೆ.

ಕೀರ್ತಿ ಗೋಪುರ ಮತ್ತು ಇತರ ಕೆಲವು ಸ್ಮಾರಕಗಳನ್ನು ಕಂಡು ಚಿತ್ತೌರ್ ಗಢಕ್ಕೆ ವಿದಾಯ ಹೇಳಿದಾಗ ನೇಸರ ಪಡುವಣದ ಹಾದಿಯಲ್ಲಿ ದಾಪುಗಾಲು ಹಾಕುತ್ತ ಮುನ್ನಡೆದಿದ್ದ. ಸ್ಮಾರಕಗಳು ಕಾಂಚನಬಣ್ಣದಲ್ಲಿ ಮಿಂದಿದ್ದವು.

*(ಆಧಾರ : ಹಲವು ಮೂಲಗಳಿಂದ)*

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ ತುರಹಳ್ಳಿ
ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

ಸುದ್ದಿ ಚಿತ್ರ






**ಎಂ. ಎಸ್. ಕೃಷ್ಣನ್ ಟ್ರಸ್ಟ್ ಹಾಗೂ ಹೊಸತು ಪತ್ರಿಕೆಯ ಸಹಯೋಗದಲ್ಲಿ ದಿನಾಂಕ ೧೯-೧೨-೨೦೧೪ರಂದು ಆಯೋಜಿಸಿದ 'ಆರ್ಥಿಕ ಅಭಿವೃದ್ಧಿ ಮತ್ತು ರಾಷ್ಟ್ರೀಯತೆ' ವಿಷಯ ಕುರಿತ ವಿಚಾರ ಸಂಕಿರಣದಲ್ಲಿ ದೇಶದ ಖ್ಯಾತ ಅರ್ಥಶಾಸ್ತ್ರಜ್ಞ ಜೆ. ಎನ್. ಯು. ನಿವೃತ್ತ ಪ್ರಾಧ್ಯಾಪಕ ಶ್ರೀ ಅಮಿತ್ ಭಾದುರಿ ಅವರು ಮಾತನಾಡಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಕೆ. ಎಸ್. ಪಾರ್ಥಸಾರಥಿ, ಎಂ. ಎಸ್. ಕೆ. ಟ್ರಸ್ಟ್‌ನ ವ್ಯವಸ್ಥಾಪಕ ಟ್ರಸ್ಟಿ ಶ್ರೀ ಜಿ. ಬಾಬು ಹಾಗೂ ಹೊಸತು ಸಂಪಾದಕ ಡಾ॥ ಸಿದ್ದನಗೌಡ ಪಾಟೀಲ ವೇದಿಕೆ ಮೇಲೆ ಉಪಸ್ಥಿತರಿದ್ದರು.**



# ಗ್ರಹಗಳ ಗುಂಪುಗಾರಿಕೆ

ಲವ್ ಜಾಯ್ ಎಂಬ ಹೆಸರಿನ ಧೂಮಕೇತು ಈ ತಿಂಗಳಲ್ಲಿ ಬರಿಗಣ್ಣಿಗೆ ಕಾಣುವ ಸಾಧ್ಯತೆ ಇದೆ. ಆದರೆ ಸಾಮಾನ್ಯವಾಗಿ ಧೂಮಕೇತುಗಳ ಪ್ರಕಾಶವನ್ನು ನಿಖರವಾಗಿ ಲೆಕ್ಕ ಹಾಕುವುದು ಸಾಧ್ಯವಿಲ್ಲ. ಹಿಂದೆ ಅನೇಕ ಬಾರಿ ಅವು ನಿರೀಕ್ಷೆಯನ್ನು ಹುಸಿಗೊಳಿಸಿವೆ. ಆದ್ದರಿಂದ ಅದನ್ನು ಅಬ್ಬರದ ಸುದ್ದಿಯನ್ನಾಗಿಸುವುದು ತಪ್ಪಾಗುತ್ತದೆ. ಜನವರಿ ಎರಡನೆಯ ವಾರದಲ್ಲಿ ಅದು ವೃಷಭ ರಾಶಿಯ ಪಕ್ಕ ಹಾದುಹೋಗುವ ಸಂದರ್ಭವನ್ನು ಉಪಯೋಗಿಸಿ ಪತ್ತೆಮಾಡಬಹುದು. ಅದು ಹೀಗೆ ಪೂರ್ವ ದಿಕ್ಕಿನಲ್ಲಿ ಕಾಣುವುದೇ ಒಂದು ವಿಶೇಷ; ಏಕೆಂದರೆ ಸಾಮಾನ್ಯವಾಗಿ ಧೂಮಕೇತುಗಳು ಪ್ರಕಾಶ ಪಡೆದಾಗ ಸೂರ್ಯನಿಗೆ ಸಮೀಪವಿರುತ್ತವೆ. ಅಂದರೆ ಸಂಜೆ ಪಶ್ಚಿಮದಲ್ಲಿ ಅಥವಾ ಮುಂಜಾವು ಪೂರ್ವದಲ್ಲಿ. ಇದು ಸಂಜೆ ಪೂರ್ವದಲ್ಲಿದೆ. ಇದಕ್ಕೆ ಕಾರಣವಿದೆ. ಭೂಮಿ ಇದನ್ನು ಹಿಂದೆ ಹಾಕಿ ಮುಂದೆ ಓಡುತ್ತಿದೆ. ಆದ್ದರಿಂದ ಇನ್ನೊಂದು ಅನಾನುಕೂಲವಿದೆ. ಇದರ ಬಾಲ ನಮಗೆ ಕಾಣುವುದಿಲ್ಲ. ನಮ್ಮ ದೃಷ್ಟಿ ರೇಖೆಯಲ್ಲಿಯೇ ಇದೆ. ಆದ್ದರಿಂದ ಚುಕ್ಕೆಯಂತೆ ಕಾಣಬಹುದು. ಕಾದು ನೋಡೋಣ. ಅದು ವೃಷಭದಿಂದ ಮುಂದೆ ಸಾಗಿ ತಿಂಗಳ ಕೊನೆಗೆ ಮೇಷವನ್ನು ತಲುಪುತ್ತದೆ.

**ಕ**ಳೆದ ತಿಂಗಳು ದಿಗಂತದ ಅಂಚಿನಲ್ಲಿ ಕಾಣಿಸಿಕೊಂಡ ಶುಕ್ರ ಈ ತಿಂಗಳು ಮೇಲೇರಿ, ಸಾಯಂಕಾಲದ ಶುಭ್ರ ಸಂಜೆಗಳನ್ನು ಬೆಳಗಿಸುತ್ತದೆ. ಸೂಕ್ಷ್ಮವಾಗಿ ಗಮನಿಸಿದಲ್ಲಿ ಅದಕ್ಕೂ ದಿಗಂತಕ್ಕೂ ನಡುವೆ ಬುಧಗ್ರಹವೂ ಕಾಣುತ್ತದೆ. ಇದು ದಿನೇ ದಿನೇ ಮೇಲೇರಿ ೧೧ರಂದು ಶುಕ್ರದ ಜೊತೆಗೂಡುತ್ತದೆ. ೧೪ರಂದು ಗರಿಷ್ಠ ಎತ್ತರ ತಲುಪಿ, ಆಮೇಲೆ ಪುನಃ ದೂರಾಗುತ್ತದೆ. ೩೦ರ ಹೊತ್ತಿಗೆ ಕಾಣುವುದೇ ಇಲ್ಲ.

ಮಂಕಾಗಿ ಕಂಡರೂ, ಗುರುತಿಸಬಹುದಾದ ಇನ್ನೊಂದು ಗ್ರಹ ಮಂಗಳ. ೨೨ರ ಸಂಜೆ, ಬುಧ ಅದರ ಮೇಲೆ ಶುಕ್ರ, ಪಕ್ಕದಲ್ಲಿ ಚಂದ್ರ, ಇನ್ನೂ ಮೇಲೆ ಮಂಗಳ ಕಾಣುತ್ತದೆ.

ಗುರುಗ್ರಹ ರಾತ್ರಿ ಸ್ವಲ್ಪ ತಡವಾಗಿ, ಅಂದರೆ ೯ ಗಂಟೆ ಎನ್ನಬಹುದು, ಪೂರ್ವದಲ್ಲಿ ಉದಯಿಸುತ್ತದೆ. ೫ರಂದು ಹುಣ್ಣಿಮೆಯ ಚಂದ್ರನ ಪ್ರಖರ ಬೆಳಕಿನಲ್ಲೂ ಇದನ್ನು ಗುರುತಿಸುವುದು ಸಾಧ್ಯವಿದೆ. ಇನ್ನೊಂದು ಗ್ರಹ ಶನಿ ಬೆಳಗಿನ ಜಾವ ಕಾಣುತ್ತದೆ. ೧೬ರಂದು ಅದು ಚಂದ್ರನ ಪಕ್ಕವೇ ಇರುತ್ತದೆ.

ಈ ವರ್ಷದಲ್ಲಿ ಪ್ರತಿ ತಿಂಗಳೂ ಚಂದ್ರ ರೋಹಿಣಿಯನ್ನು ಮರೆಮಾಡುವ ಆಚ್ಛಾದನೆಗಳಿವೆ. ಆದ್ದರಿಂದ, ಚಂದ್ರನ ಜಾಡನ್ನು ತಿಳಿಯಲು ಇದು ಸದವಕಾಶ. ೨೯ರಂದು ಚಂದ್ರನನ್ನು ಗಮನಿಸಿ. ಅದರ ಪಕ್ಕ ಕಾಣುವ ಕೆಂಪು ನಕ್ಷತ್ರವೇ ರೋಹಿಣಿ. ಇದಲ್ಲದೆ, ಚಂದ್ರ ೨೫ರಂದು ಯುರೇನಸ್ ಗ್ರಹವನ್ನೂ ಆಚ್ಛಾದಿಸಲಿದೆ.

೪ರಂದು ಭೂಮಿ–ಸೂರ್ಯರ ನಡುವೆ ಕನಿಷ್ಠ ಅಂತರವಿರುತ್ತದೆ.

**ಜನವರಿ ತಿಂಗಳ ಖಗೋಳ ದಿನಚರಿ**

| | |
|---|---|
| ೪ | ಭೂಮಿ ಅಪರವಿ ಬಿಂದುವಿನಲ್ಲಿ |
| ೫ | ಹುಣ್ಣಿಮೆ ೯:೩೦ಕ್ಕೆ |
| ೮ | ಗುರು, ಮಘ, ಚಂದ್ರ – ಪುಟ್ಟ ಗುಂಪು |
| ೯ | ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ |
| ೧೧ | ಶುಕ್ರ – ಬುಧ ಜೋಡಿ |
| ೧೩ | ಚಾಂದ್ರಮಾಸದ ಕೊನೆಯ ಪಾದ |
| ೧೪ | ಬುಧ ಗ್ರಹದ ಗರಿಷ್ಠ ಕೋನೋನ್ನತಿ |
| ೧೬ | ಶನಿ – ಚಂದ್ರ ಜೋಡಿ |
| ೨೦ | ಅಮಾವಾಸ್ಯೆ ೧೮:೩೦ಕ್ಕೆ |
| ೨೧ | ಬುಧ – ಚಂದ್ರ ಜೋಡಿ; ಚಂದ್ರ – ಭೂಮಿ ನಡುವೆ ಕನಿಷ್ಠ ದೂರ |
| ೨೨ | ಶುಕ್ರ – ಚಂದ್ರ ನಡುವೆ ೬ ಡಿಗ್ರಿ ಅಂತರ |
| ೨೩ | ಮಂಗಳ – ಚಂದ್ರ ನಡುವೆ ೪ ಡಿಗ್ರಿ ಅಂತರ |
| ೨೭ | ಚಾಂದ್ರಮಾಸದ ಕೊನೆಯ ಪಾದ |
| ೨೯ | ರೋಹಿಣಿ – ಚಂದ್ರ ಜೋಡಿ |
| ೩೦ | ಬುಧ ಗ್ರಹದ ಯುತಿ |






೨೨ರ ಸಂಜೆ ಚಂದ್ರ, ಶುಕ್ರ, ಬುಧ ಮತ್ತು ಮಂಗಳ

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧



ಮತಾಂತರಗೊಳ್ಳುವವರನ್ನು ದೂಷಿಸುವುದು ಸರಿಯಲ್ಲ. ಬಡವರಿಗೆ, ನಿರ್ಗತಿಕರಿಗೆ ಅನ್ನವೇ ದೇವರು. ಎರಡು ಹೊತ್ತು ಊಟ, ನಿಲ್ಲಲು ನೆಲೆಯಿಲ್ಲದವರಿಗೆ ಯಾವ ಮತಧಾರ್ಮಿಕ ಉಪದೇಶಗಳೂ ಮುಖ್ಯವಾಗುವುದಿಲ್ಲ. 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮ ಭಯಾವಹಃ' ಎಂಬ ಉಕ್ತಿಗಳು ಮತಾಂತರವನ್ನು ತಡೆಯಲು ಸಾಧ್ಯವಿಲ್ಲ. ಇದೆಲ್ಲಕ್ಕಿಂತ ಮಿಗಿಲಾಗಿ, ಭಾರತದ ಸಂವಿಧಾನ ಪ್ರತಿಯೊಬ್ಬ ಪ್ರಜೆಗೂ ನೀಡಿರುವ ಮೂಲಭೂತ ಹಕ್ಕಾದ ಯಾವುದೇ ಮತಧರ್ಮವನ್ನು ಅನುಸರಿಸುವ ಮತ್ತು ಆಚರಿಸುವ ಹಕ್ಕು ಮುಖ್ಯವಾಗುತ್ತದೆ.

# ಮತಾಂತರ ಮತ್ತು ಕಾನೂನು

ಇತ್ತೀಚಿನ ದಿನಗಳಲ್ಲಿ, ಮತಾಂತರ ಪ್ರಕ್ರಿಯೆ ವ್ಯಾಪಕವಾಗಿ ಚರ್ಚೆಗೆ ಒಳಗಾಗಿರುವ ವಿಷಯವಾಗಿದೆ. ಈ ಮತಾಂತರ ಪ್ರಕ್ರಿಯೆ ಅಥವಾ ಚಟುವಟಿಕೆ ಇತ್ತೀಚಿನ ಬೆಳವಣಿಗೆಯಲ್ಲ. ನಮ್ಮ ದೇಶಕ್ಕೆ ಬ್ರಿಟಿಷರ ಪ್ರವೇಶವಾದಾಗಿನಿಂದ ಪ್ರಾರಂಭವಾದ ಚಟುವಟಿಕೆ ಈ ಮತಾಂತರ. ಅದಕ್ಕೂ ಹಿಂದೆ, ಮುಘಲರ ಆಳ್ವಿಕೆಯ ಅವಧಿಯಲ್ಲಿ ಕೆಲವು ಮತಾಂತರ ಘಟನೆಗಳು ಸಂಭವಿಸಿದ್ದಿರಬಹುದು. ಆದರೆ, ಅವೆಲ್ಲ ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ. ಕ್ರಿಶ್ಚಿಯನ್ ಮಿಷನರಿ ಸಂಸ್ಥೆಗಳು ಬಡವರಿಗೆ ಉಚಿತ ವಿದ್ಯೆ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ನೀಡುವುದರ ಜೊತೆಯಲ್ಲೇ ತಮ್ಮ ಮತಧರ್ಮದೆಡೆಗೆ ಶಾಲೆ ಮತ್ತು ಔಷಧಾಲಯಗಳಿಗೆ ಬರುವ ಬಡವರನ್ನು ಆಕರ್ಷಿಸುವ ಪ್ರಯತ್ನ ಮಾಡುತ್ತಿದ್ದರು. ಇಸ್ಲಾಂ ಮತಧಾರ್ಮಿಕ ಸಂಸ್ಥೆಗಳಿಗಿಂತ ಹೆಚ್ಚಾಗಿ ಕ್ರಿಶ್ಚಿಯನ್ ಮತಧಾರ್ಮಿಕ ಸಂಸ್ಥೆಗಳು ಮತಾಂತರ ಚಟುವಟಿಕೆಗಳನ್ನು ತೀವ್ರವಾಗಿ ಮತ್ತು ವ್ಯಾಪಕವಾಗಿ ನಡೆಸುತ್ತಿದ್ದಾರೆಂದು ತಿಳಿಯಲಾಗಿದೆ. ಮತಾಂತರ ಚಟುವಟಿಕೆಗಳನ್ನು ಹಿಂದೂ ಮೂಲಭೂತವಾದಿ ಸಂಘಟನೆಗಳಾದ ಆರೆಸ್ಸೆಸ್, ವಿಶ್ವ ಹಿಂದೂ ಪರಿಷತ್ ಮತ್ತು ಭಜರಂಗದಳ ಗಂಭೀರವಾಗಿ ಪರಿಗಣಿಸಿ, ಮತಾಂತರ ಚಟುವಟಿಕೆಗಳನ್ನು ಸಂಪೂರ್ಣವಾಗಿ ತಡೆಗಟ್ಟಲು ನಿಶ್ಚಯಿಸಿದೆ. ಕಳೆದ ವಾರದಲ್ಲಿ, ಕೇಸರಿ ಪಡೆಯ ನೇತೃತ್ವದಲ್ಲಿ ೨೫೦ ಮುಸ್ಲಿಂ ಕುಟುಂಬಗಳನ್ನು 'ಹಿಂದೂ' ಮತಧರ್ಮಕ್ಕೆ ಮತಾಂತರ ಮಾಡಲಾಗಿದೆ. ಉತ್ತರ ಪ್ರದೇಶದಲ್ಲಿ ಕೇಸರಿ ಸಂಘಟನೆಗಳು 'ಘರ್ ವಾಪ್ಸಿ' ಎಂಬ ಪುನರ್ ಮತಾಂತರ ಕಾರ್ಯಕ್ರಮವನ್ನು ಆಚರಿಸಲು ನಿರ್ಧರಿಸಿವೆ. ಈ ಎಲ್ಲ ಬೆಳವಣಿಗೆಗಳ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರವು ಮತಾಂತರವನ್ನು ನಿಷೇಧಿಸುವ ಕಾನೂನನ್ನು ರೂಪಿಸಿ ಜಾರಿಗೆ ತರಲು ಗಂಭೀರ ಚಿಂತನೆ ನಡೆಸಿದೆ. ಆದರೆ, ಮತಾಂತರ ಪ್ರಕ್ರಿಯೆಯ ಚಾರಿತ್ರಿಕ ಮತ್ತು ಸಾಮಾಜಿಕ ಹಿನ್ನೆಲೆಯನ್ನು ಅಧ್ಯಯನ ಮಾಡದೆ, ಅರ್ಥಮಾಡಿಕೊಳ್ಳದೆ, ಕಾನೂನಿನಿಂದ ಮತಾಂತರವನ್ನು ತಡೆಗಟ್ಟುವ ಪ್ರಯತ್ನ ಅರ್ಥಹೀನವಾಗುತ್ತದೆ.

ಹಿಂದೂ ಮತಧಾರ್ಮಿಕ ಚೌಕಟ್ಟಿನಲ್ಲಿ, ಜಾತಿವ್ಯವಸ್ಥೆ ಅತ್ಯಂತ ಅಮಾನವೀಯ ಶ್ರೇಣೀಕೃತ ಸಮಾಜವನ್ನು ಹುಟ್ಟುಹಾಕಿತು. ಅಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಆಚರಣೆಗಳು ಜನ್ಮ ತಳೆದವು. ಮೇಲ್ಜಾತಿ ಮತ್ತು ಕೀಳ್ಜಾತಿಗಳೆಂಬ ಸಮುದಾಯಗಳು ಅಸ್ತಿತ್ವ ಪಡೆದವು. ಅನೇಕ ಶತಮಾನಗಳ ಕಾಲ ಬೇರೂರಿದ ವ್ಯವಸ್ಥೆಯಲ್ಲಿ, ದಲಿತ ಮತ್ತು ಇತರ ಜಾತಿ ಸಮುದಾಯದವರು ಅಸ್ಪೃಶ್ಯತೆ ಮತ್ತು ಇತರ ಅಮಾನುಷ ದೌರ್ಜನ್ಯಗಳನ್ನು ಸಹಿಸಬೇಕಾಯಿತು. ದಲಿತರು ಮತ್ತು ಇತರ ಕೆಳವರ್ಗದವರು ಶಿಕ್ಷಣ, ಭೂಮಿಯ ಮಾಲೀಕತ್ವ , ಆರೋಗ್ಯಕರ ವಸತಿ ಮತ್ತು ವೈದ್ಯಕೀಯ ಸೌಲಭ್ಯಗಳಿಂದ ವಂಚಿತರಾದರು. ಅಷ್ಟೇಕೆ, ಅವರು ಎಲ್ಲರಂತೆ ನಗರದ ಅಥವಾ ಗ್ರಾಮೀಣ ಪ್ರದೇಶಗಳ ಮಧ್ಯಭಾಗದಲ್ಲಿ ವಾಸಮಾಡುವಂತಿರಲಿಲ್ಲ. ಊರ ಹೊರಗಡೆ, ಪ್ರತ್ಯೇಕವಾಗಿ ನಿಗದಿಯಾದ ಪ್ರದೇಶದಲ್ಲಿ ವಾಸ ಮಾಡಬೇಕಾಗುತ್ತಿತ್ತು.

ಇಲ್ಲಿ ಏಳುವ ಮುಖ್ಯ ಪ್ರಶ್ನೆಯೆಂದರೆ, ಹಿಂದೂ ಮತಧರ್ಮದ ಪ್ರತಿಪಾದಕರು, ತಮ್ಮ ಮತಧರ್ಮದಲ್ಲೇ ಅಡಕವಾಗಿರುವ ಜಾತಿ ಎಂಬ ಹುಳುಕನ್ನು ಸರಿಪಡಿಸದೆ, ಮತಾಂತರ ಮಾಡುವ ಮತ್ತು ಮತಾಂತರಗೊಳ್ಳುವ ಸಂಸ್ಥೆಗಳನ್ನು ಮತ್ತು ವ್ಯಕ್ತಿಗಳನ್ನು ದೂಷಿಸುವುದು ಎಷ್ಟು ಸರಿ ?

ಬಡತನದ ಬೇಗೆ, ದಾರಿದ್ರ್ಯ ಹಾಗೂ ಮೂಲಭೂತ ಸೌಲಭ್ಯಗಳು ಮತ್ತು ಅವಕಾಶಗಳಿಂದ ವಂಚಿತರಾಗಿ ಹಲವು ಶತಮಾನಗಳಿಂದ ಸಾಮಾಜಿಕ ತಾರತಮ್ಯ ಮತ್ತು ಶೋಷಣೆಗಳಿಂದ ನಲುಗಿದ ದಲಿತರು ಮತ್ತು ಇತರರು ಉತ್ತಮ ಜೀವನಕ್ಕಾಗಿ ಹಾತೊರೆದರೆ ತಪ್ಪೇನಿದೆ ?

ಮತಾಂತರಗೊಳ್ಳುವವರನ್ನು ದೂಷಿಸುವುದು ಸರಿಯಲ್ಲ. ಬಡವರಿಗೆ, ನಿರ್ಗತಿಕರಿಗೆ ಅನ್ನವೇ ದೇವರು. ಎರಡು ಹೊತ್ತು ಊಟ, ನಿಲ್ಲಲು ನೆಲೆಯಿಲ್ಲದವರಿಗೆ ಯಾವ ಮತಧಾರ್ಮಿಕ ಉಪದೇಶಗಳೂ ಮುಖ್ಯವಾಗುವುದಿಲ್ಲ. 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮ ಭಯಾವಹಃ' ಎಂಬ ಉಕ್ತಿಗಳು ಮತಾಂತರವನ್ನು ತಡೆಯಲು ಸಾಧ್ಯವಿಲ್ಲ. ಇದೆಲ್ಲಕ್ಕಿಂತ ಮಿಗಿಲಾಗಿ, ಭಾರತದ ಸಂವಿಧಾನ ಪ್ರತಿಯೊಬ್ಬ ಪ್ರಜೆಗೂ ನೀಡಿರುವ ಮೂಲಭೂತ ಹಕ್ಕಾದ ಯಾವುದೇ ಮತಧರ್ಮವನ್ನು ಅನುಸರಿಸುವ ಮತ್ತು ಆಚರಿಸುವ ಹಕ್ಕು ಮುಖ್ಯವಾಗುತ್ತದೆ.

ಮತಾಂತರ ಪ್ರಕ್ರಿಯೆಯನ್ನು ಸಾಮಾಜಿಕ ನೆಲೆಯಲ್ಲಿ ಅರ್ಥಮಾಡಿಕೊಳ್ಳಬೇಕಾಗಿದೆ. ಅದರ ಹೊರತಾಗಿ, ಮತಧಾರ್ಮಿಕ ಮೂಲಭೂತವಾದಿ ಶಕ್ತಿಗಳು ಆವೇಶದಿಂದ, ಉದ್ರೇಕಿತರಾಗಿ, ಬೀದಿಗಿಳಿದರೆ ಸಾಮಾಜಿಕ ಸಾಮರಸ್ಯ ಕೆಡುವುದು ಖಂಡಿತ. ಭಾಜಪ ನೇತೃತ್ವದ ಎನ್‌ಡಿಎ ಸರ್ಕಾರ ಕೇಂದ್ರದಲ್ಲಿ ಅಸ್ತಿತ್ವಕ್ಕೆ ಬಂದನಂತರ ಹಿಂದೂ ಮೂಲಭೂತವಾದಿ ಶಕ್ತಿಗಳು ಇಮ್ಮಡಿ ಉತ್ಸಾಹದಿಂದ ಕಾರ್ಯೋನ್ಮುಖರಾಗಿರುವುದು ಗಮನಾರ್ಹ ಬೆಳವಣಿಗೆಯಾಗಿದೆ.

ಮತಧಾರ್ಮಿಕ ಮತಾಂತರ ಕೇವಲ ಕಾನೂನುಗಳಿಂದ ಪರಿಹರಿಸಬಲ್ಲ ಸರಳ ಸಮಸ್ಯೆಯಲ್ಲ. ಮತಾಂತರದ ಆಳವಾದ ಬೇರುಗಳನ್ನು ಗುರುತಿಸಬೇಕಾಗಿದೆ. ಯಾವುದೋ ಒಂದು ಸಮುದಾಯದ ಕೆಲವರು, ಆಮಿಷಗಳಿಗೆ ಆಕರ್ಷಿತರಾಗಿ, ಮತಾಂತರಗೊಂಡರೆ, ಆ ಘಟನೆಗೆ ಇಡೀ ಸಮಾಜ ತೀವ್ರವಾಗಿ ಪ್ರತಿಕ್ರಿಯಿಸಬೇಕಾಗಿಲ್ಲ ಅನ್ನುವುದು ನನ್ನ ಅಭಿಪ್ರಾಯ.

ದಲಿತರಿಗೆ ಮತ್ತು ನಿರ್ಗತಿಕರಿಗೆ ಉತ್ತಮ ಆರ್ಥಿಕ ಪರಿಸ್ಥಿತಿ, ಜೀವನ ಮತ್ತು ಸಾಮಾಜಿಕ ಗೌರವ ಹಿಂದೂ ಮತಧಾರ್ಮಿಕ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಲಭ್ಯವಾಗದೆ, ಇರುವುದು ಮತಾಂತರ ಪ್ರಕ್ರಿಯೆಗೆ ಕಾರಣವಾಗಿದೆ. ಹಿಂದೂ ಮತಧರ್ಮದ ಪ್ರತಿಪಾದಕರು ಮತ್ತು ಅನುಯಾಯಿಗಳು ತಮ್ಮ ಧಾರ್ಮಿಕ ನಿಲುವುಗಳನ್ನು, ಆಚರಣೆಗಳನ್ನು, ಪದ್ಧತಿಗಳನ್ನು ಮತ್ತು ಮೌಲ್ಯಗಳನ್ನು ವಿಮರ್ಶಾತ್ಮಕವಾಗಿ ಅವಲೋಕನ ಮಾಡಬೇಕಾಗಿದೆ. ಅದನ್ನು ಮಾಡದೆ ಮತಾಂತರ ಕುರಿತು ಮಾತನಾಡುವುದು ರಾಜಕೀಯ ಉದ್ದೇಶದಿಂದ ಎಂದು ಭಾವಿಸಬೇಕಾಗುತ್ತದೆ.

**ಶಂಕರನಾರಾಯಣ**
ನಂ. ೫೪/೧೧೪, ೧ನೇ ಅಡ್ಡರಸ್ತೆ, ಕೃಷ್ಣಾನಗರ, ಬೆಂಗಳೂರು – ೫೬೦ ೦೬೧




MICRO LABS LIMITED

# Micro Labs,
## Where Excellence Lies in Small Details . . .

Established in 1973, Micro Labs Limited is a multifaceted healthcare organization present across the entire pharmaceutical value chain from Research and Development, Active Pharmaceutical lngredients, Finished Formulations to Marketing and Distribution in lndia and overseas.

- Dolo won the Brand of the Year 2014 GOLD award and Amlong won Brand of the Year 2014 BRONZE Award at AWACS Marketing Excellence Awards 2014
- Brand Dolo awarded as 'Brand of the Year 2013' at 6th Annual Pharmaceutical Leadership Summit 2013
- Mr. Dilip Surana, CMD, Micro Labs Limited honoured as 'Most Dynamic Entrepreneur of the Year' at 4th Annua llndia Leadership Conclave and lndian Affairs Business Leadership Awards 2013
- Micro Labs Baddi manufacturing unit bagged the prestigious Gold Award at 'lndia Manufacturing Excellence Awards (lMEA)' 2012, held by an international firm Frost & Sullivan in association with The Economic Times
- Micro Labs is a regular recipient of lDMA Quality Excellence Awards, with a clean hat-trick of 3 awards in 2009, an unprecedented 4 awards in 2010, 3 awards in 2011, 4 consecutive awards in 2012 and 2 awards in 2013
- Besides, Micro Labs has been bestowed upon 'Pharma CSR organization of the year 2012' and 'I nnovative R&D company of the year 2012' at 5th Annual Pharmaceutical Leadership Summit & Business Leadership Awards 2012.

The other milestones:

- Ranked amongst top 19 in lndia with a market share of 1.8% as per AlOCD-AWACS 2014
- 14 specialty divisions, widest product range with 4500 dedicated field force
- 12 World class manufacturing facilities approved by USFDA, UK-MHRA, MCC-South Africa, Health Canada, WHO, TGA Australia 8: Medsafe-New Zealand, with 2000 qualified technical personnel
- A vibrant presence in over 40 countries, exporting formulations in all major therapeutic segments
- Two R&D centres, at Mumbai & Bangalore with more than 250 experienced scientists
- GDA foundation runs the Surana College and Surana PG centre in Bangalore and "Smt. Pyaribai Chunnilalji Surana Charitable trust runs Shree Parshwa Susheel Dham" a magnificent Jain temple in Attibele, Bangalore

**Dolo-650**







MICRO LABS LIMITED
27, Race Course Road, Bangalore - 560 001. India
Tel: +91 80 2237 0451-54, Fax: +91 80 2225 6323
www.microlabsltd.com

...Because health is in small details







ಓದಿ; ಚಂದಾದಾರರಾಗಿ; ಚಂದಾ ಉಡುಗೊರೆ ನೀಡಿ

ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು
ಗಂಭೀರ ವಿಶ್ಲೇಷಣೆಗೆ ಒಳಪಡಿಸುವ



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಗೌರವ ಸಂಪಾದಕರು : ಡಾ|| ಜಿ. ರಾಮಕೃಷ್ಣ
ಸಂಪಾದಕರು : ಡಾ|| ಸಿದ್ದನಗೌಡ ಪಾಟೀಲ







ಆಕಾರ ಡಿಮ್ಮೈ ¼ ; ಪುಟಗಳು 64 (ವಿಶೇಷಾಂಕ 256)
ಬೆಲೆ : ಸಾದಾ ಪ್ರತಿ ₹ 15 (ವಿಶೇಷಾಂಕ ₹ 45)
ಚಂದಾ : 1 ವರ್ಷಕ್ಕೆ ₹ 200; 3 ವರ್ಷಕ್ಕೆ ₹ 450







ಈ ಪ್ರಗತಿಪರ - ವೈಚಾರಿಕ ನಿಲುವಿನ ಪತ್ರಿಕೆಯನ್ನು ನೀವು ಮೆಚ್ಚಿದ್ದೀರೆಂದಾದಲ್ಲಿ ದಯವಿಟ್ಟು ಚಂದಾದಾರರಾಗಿ. ಹಾಗೆಯೇ, ನಿಮ್ಮ ಸ್ನೇಹಿತರಿಗೂ ಈ ಪತ್ರಿಕೆಯನ್ನು ಪರಿಚಯಿಸಿ; ಅವರೂ ಓದಿ ಚಂದಾದಾರರಾದಲ್ಲಿ ಪತ್ರಿಕೆಯ ಪ್ರಸಾರ ಹೆಚ್ಚುತ್ತದೆ. ನಮ್ಮ ಶ್ರಮ ಸಾರ್ಥಕವಾಗುತ್ತದೆ.

ನೀವು ಭಾಗವಹಿಸುವ ಶುಭ ಸಮಾರಂಭಗಳಲ್ಲಿ, ಹುಟ್ಟುಹಬ್ಬಗಳಲ್ಲಿ, ಪ್ರತಿಭಾ ಪುರಸ್ಕಾರ ನೀಡುವ ಸಂದರ್ಭದಲ್ಲಿ ಉಡುಗೊರೆ ನೀಡ ಬೇಕಾದಾಗ 'ಹೊಸತು' ಪತ್ರಿಕೆಯ ಚಂದಾವನ್ನೇ ಉಡುಗೊರೆ ರೂಪದಲ್ಲಿ ನೀಡಬಹುದಲ್ಲವೆ? ಯಾರಿಗೆ ಉಡುಗೊರೆ ನೀಡಬೇಕೆಂದಿರುವಿರೋ ಅವರ ವಿಳಾಸ ಮತ್ತು ಚಂದಾ ಮೊಬಲಗನ್ನು ನಮ್ಮ ವಿಳಾಸಕ್ಕೆ ಕಳಿಸಿದರೆ ನೀವು ತಿಳಿಸಿದ ವಿಳಾಸಕ್ಕೆ ಪತ್ರಿಕೆ ಕಳಿಸುವ ಜವಾಬ್ದಾರಿ ನಮ್ಮದು.







ಚಂದಾ ಹಣವನ್ನು 'ಹೊಸತು' ಹೆಸರಲ್ಲಿ ಡಿ.ಡಿ. / ಎಂ.ಓ. ಮಾಡಿ ಕೆಳಕಂಡ ವಿಳಾಸಕ್ಕೆ ಕಳಿಸಿ. ಇಲ್ಲವೇ, ಹಣವನ್ನು ನೇರವಾಗಿ ಬ್ಯಾಂಕ್ ಖಾತೆಗೆ ಜಮಾ ಮಾಡಿ ನಮ್ಮ ಕಛೇರಿಗೆ ತಿಳಿಸಿ (Current A/c No. 0788201015590; IFSC Code CNRB0000788, ಕೆನರಾ ಬ್ಯಾಂಕ್, ಮಾಧವನಗರ ಶಾಖೆ, ಬೆಂಗಳೂರು).







'ಹೊಸತು' ತಿಂಗಳ ಪತ್ರಿಕೆ, 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಬೆಂಗಳೂರು - 1. ✆ 30578029, email : hosathu@gmail.com

ಮೂರು ವರ್ಷಗಳ ಚಂದಾದಾರರಿಗೆ ಚಂದಾ ಅವಧಿ ಮುಗಿಯುವವರೆಗೂ
ನವಕರ್ನಾಟಕ ಪ್ರಕಾಶನದ ಎಲ್ಲ ಪುಸ್ತಕಗಳ ಮೇಲೆ 20% ರಿಯಾಯಿತಿ

ನವಕರ್ನಾಟಕ ಮಳಿಗೆಗಳಲ್ಲೂ ಪುಸ್ತಕ ಪ್ರದರ್ಶನಗಳಲ್ಲೂ ಚಂದಾ ನೀಡಬಹುದು




# ಪರಿಸರ

ಎಂದಿನಂತೆ 'ಹೊಸತು' ಪತ್ರಿಕೆಯ ವಿಶೇಷ ಸಂಚಿಕೆಗಾಗಿ ಜನಾಭಿಪ್ರಾಯ ರೂಪಿಸಲು **ಓದುಗರ ವೇದಿಕೆ** ಎಂಬ ಹೆಸರಿನಲ್ಲಿ ಪರಿಸರಕ್ಕೆ ಸಂಬಂಧಿಸಿದಂತೆ ಕಿರುಲೇಖನಗಳನ್ನು ಆಹ್ವಾನಿಸಿದ್ದೆವು. ಇದಕ್ಕೆ ಸ್ಪಂದಿಸಿ ಹಲವು ಲೇಖನಗಳು ಬಂದಿವೆ. ಒಕ್ಕೊರಲಿನಲ್ಲಿ ಪರಿಸರಹಾನಿಯನ್ನು ಖಂಡಿಸಿದ್ದಲ್ಲದೆ ಅದರ ರಕ್ಷಣೆಗೆ ವಿವಿಧ ಸಲಹೆ ಸೂಚನೆಗಳನ್ನು ಸಹೃದಯ ಲೇಖಕರು ನೀಡಿ ಸಂಬಂಧಪಟ್ಟ ಎಲ್ಲರನ್ನೂ ಎಚ್ಚರಿಸಿದ್ದಾರೆ. ಇವರೆಲ್ಲರಿಗೂ ಧನ್ಯವಾದಗಳನ್ನು ಹೇಳುತ್ತಾ ಉತ್ತಮವೆನಿಸಿದವುಗಳನ್ನು ಇಲ್ಲಿ ಪ್ರಕಟಿಸಿದ್ದೇವೆ. ಈ ವೇದಿಕೆಯ ಮೂಲಕ ಜನಾಭಿಪ್ರಾಯಕ್ಕೆ ಬೆಲೆ ಬಂದು ಪರಿಸರ ನಾಶದ ಆತಂಕ ದೂರವಾಗಿ ಜನಜಾಗೃತಿ ಮೂಡಲಿ ಎಂಬುದೇ ನಮ್ಮ ಆಶಯ. ಹಾಗಾದಲ್ಲಿ ನಮ್ಮ ಶ್ರಮ ಸಾರ್ಥಕವೆಂದು ತಿಳಿದಿದ್ದೇವೆ. –ಸಂಪಾದಕ

**ಪ**ರಿಸರದಲ್ಲಿ ಬದಲಾವಣೆ ನಿರಂತರವಾದದ್ದು ಮತ್ತು ಸಹಜವಾದದ್ದು ಆಗಿದೆ. ಆದರೆ ಈ ಬದಲಾವಣೆ ಎಂಬುದು ಸ್ವಾಭಾವಿಕವಾದದ್ದಾಗಿದ್ದರೆ ಒಳ್ಳೆಯದೇ; ಆದರೆ ಮಾನವನಂತಹ ಪ್ರಾಣಿಗಳ ಹಸ್ತಕ್ಷೇಪದಿಂದ ಸಹಜ ಪರಿಸರದಲ್ಲಿ ಅಪಾಯಕರ ಮಟ್ಟದಲ್ಲಿ ವ್ಯತ್ಯಾಸವಾಗುವುದು ಯಾವ ದೃಷ್ಟಿಕೋನದಿಂದಲೂ ಉತ್ತಮ ಬೆಳವಣಿಗೆ ಯಲ್ಲ. ಇಂತಹ ಮಾನವ ನಿರ್ಮಿತ ಅಪಾಯಗಳನ್ನೇ ಇಂದು "ಮಾಲಿನ್ಯ" ಎಂದು ಕರೆದುಕೊಳ್ಳುತ್ತಿದ್ದೇವೆ. ಪರಿಸರದ ಬಗ್ಗೆ ಸಹಜ ಕಾಳಜಿ ಹೊಂದಿರುವ ಯಾರಿಗೇ ಆದರೂ ತುಂಬ ಬೇಸರದ ಸಂಗತಿ ಎಂದರೆ ಇಂದು ಬುದ್ಧಿವಂತ ಮತ್ತು ಸುಶಿಕ್ಷಿತ ಸಮಾಜದ ಯಾರೂ ತಲೆಕೆಡಿಸಿಕೊಳ್ಳದಿರುವುದು. ಎಲ್ಲರಿಗೂ ತಮ್ಮ ಸಂಪತ್ತು ವೃದ್ಧಿ ಮತ್ತು ಜೀವನಮಟ್ಟ ಸುಧಾರಣೆಯೇ ಆದ್ಯ ಕರ್ತವ್ಯವಾಗಿರುವಾಗ ಪರಿಸರ ಮತ್ತು ಸಂಬಂಧಿಯಾದ ಇತರ ಘಟಕಗಳ ಆಗುಹೋಗುಗಳಿಗೆ ಚಿಂತಿಸುವವರು ಯಾರು ?

ಆಧುನಿಕ ಸಮಾಜದ ಎಲ್ಲರಿಗೂ ಅಂಟಿಕೊಂಡಿರುವ ಒಂದು ಕಾಯಿಲೆ ಎಂದರೆ ಸಂಪಾದನೆ ಮತ್ತು ಐಷಾರಾಮಿ ಜೀವನದ ಕನಸು. ಇಂತಹ ಕನಸುಗಳಿಂದ ಆಘಾತವಾಗಿರುವುದು ಮಾತ್ರ ನಮ್ಮ ಸುತ್ತಲಿನ ಪರಿಸರಕ್ಕೆ. ಇಂದಿನ ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಸಮಸ್ಯೆ ಸಂಭವಿಸಿರುವುದು ಎರಡರಿಂದ; ಒಂದು ಕಸ, ಇನ್ನೊಂದು ವಿಷ.

ಆಧುನಿಕ ಜೀವನಶೈಲಿಯ ಜೀವನದ ಪ್ರಭಾವದಿಂದ ನಾವು ಇಂದು ಸಾವಿರಾರು ಟನ್‌ಗಳ ಕಸವನ್ನು ಮತ್ತು ರಾಸಾಯನಿಕಗಳ ವಿಷವನ್ನು ನಮ್ಮ ಸುತ್ತಲಿನ ಪರಿಸರಕ್ಕೆ ಅಗಾಧವಾಗಿ ಸೇರಿಸುತ್ತಿದ್ದೇವೆ. ಇದರ ಪರಿಣಾಮವೆಂದರೆ ಮುಂದೊಂದು ದಿನ ನಮ್ಮ ಅಕ್ಕಪಕ್ಕದಲ್ಲಿ ಒಂದು ಅಡಿಯಷ್ಟು ಜಾಗದಲ್ಲಿ ಶುದ್ಧ ಮಣ್ಣು ಮತ್ತು ಒಂದಿಷ್ಟು ಶುದ್ಧ ಗಾಳಿಯೂ ದೊರಕದೇ ಹೋಗಬಹುದು. ಈಗಲೇ ನೆಲದ ನಾಲ್ಕೈದು ಅಡಿಗಳ ಮಣ್ಣೊಳಗೆ ಪ್ಲಾಸ್ಟಿಕ್ ಎಂಬ ವಿಷ ರಾಕ್ಷಸನ ಪ್ರವೇಶವಾದದ್ದಾಗಿದೆ. ಇನ್ನೂ ಇದರಿಂದ ನಮ್ಮ ಸಮಾಜ ಎಚ್ಚೆತ್ತುಕೊಳ್ಳದಿರುವುದೇ ದುರಂತವಾಗಿದೆ.

ನಗರ ಪ್ರದೇಶಗಳ ಕತೆ ಹೀಗಾದರೆ ನಮ್ಮ ಗ್ರಾಮೀಣ ಭಾಗದ್ದು ಇನ್ನೊಂದು ಸಮಸ್ಯೆ ಯಾಗಿದೆ, ಅದೆಂದರೆ ರಾಸಾಯನಿಕಗಳ ಬಳಕೆ. ಕೃಷಿಗೆ, ಅವಶ್ಯವೋ ಇಲ್ಲವೋ ನಮ್ಮ ರೈತರಿಗೆ ಇಂದು ಕೀಟನಾಶಕಗಳೇ ಬೇಕು. ರಸಗೊಬ್ಬರ ವ್ಯಾಪಾರಿಗಳೇ 'ಕೃಷಿ ವಿಜ್ಞಾನಿಗಳು !' ಕಳೆನಾಶಕ ಕೀಟನಾಶಕಗಳಿಂದ ನಮ್ಮ ಸುತ್ತಲಿನ ಪರಿಸರದಲ್ಲಾಗುವ ಬದಲಾವಣೆಗಳು ಜನರಿಗೆ ತಿಳಿಯುತ್ತಲೇ ಇಲ್ಲ. ನಮ್ಮ ಕೆರೆ, ಹಳ್ಳಕೊಳ್ಳ, ಬಾವಿಗಳಲ್ಲಿ ವಿಷ ತುಂಬಿ, ಜಲಚರಗಳು, ಪಕ್ಷಿಗಳು, ಕೀಟಗಳು ಕಣ್ಮರೆಯಾಗುತ್ತಿವೆ. ಇದು ನಮಗೆ ದಿನಂಪ್ರತಿ ಕಾಣುತ್ತಿರುವ ಸತ್ಯಗಳು. ನಮ್ಮ ಕಣ್ಣಿಗೆ ಗೋಚರವಾಗದ ಬದಲಾವಣೆಗಳು ಎಷ್ಟೋ ದೇವರೇ ಬಲ್ಲ, ಇದ್ದರೆ !

ಪರಿಸರದ ಮೇಲಿನ ಈ ದೌರ್ಜನ್ಯವನ್ನು ತಡೆಯಲು ನಮ್ಮ ಸಮಾಜದ ಜಾಗೃತಿಯಾಗ ಬೇಕಾದುದು ಇಂದಿನ ತುರ್ತು ಅಗತ್ಯ. ನಗರದ ಕೊಳಚೆ ನೀರು, ಕಾರ್ಖಾನೆಗಳ ತ್ಯಾಜ್ಯವನ್ನು ಜಲಮೂಲಗಳಿಗೆ ಸೇರಗೊಡದಂತೆ ಎಚ್ಚರವಹಿಸಬೇಕು. ನಗರ ಪ್ರದೇಶಗಳಲ್ಲಿ ಸಮೂಹ ಸಾರಿಗೆಯ ಬಳಕೆ ಹೆಚ್ಚಬೇಕು. ನಗರ ಪ್ರದೇಶಗಳಲ್ಲಿ ಭೂಮಿಯ ಮೇಲ್ಭಾಗದಲ್ಲಿ ಬಿದ್ದ ಮಳೆ ನೀರು ಇಂಗಲು ಸೂಕ್ತ ವ್ಯವಸ್ಥೆ ಇರಬೇಕು ಮತ್ತು ಸಸ್ಯಗಳನ್ನು ನೆಟ್ಟು ಬೆಳೆಸಲು ಪ್ರೋತ್ಸಾಹಿಸಬೇಕು.

ಇನ್ನು ನಮ್ಮ ಸರ್ಕಾರಗಳ ಅಭಿವೃದ್ಧಿ ಕಾರ್ಯಗಳು ಗುಣಮಟ್ಟದಿಂದ ಕೂಡಿದ್ದಾಗಿರ ಬೇಕು. ಪದೇ ಪದೇ ದುರಸ್ತಿಯಾಗುವುದು ಕೂಡ ಪರಿಸರವನ್ನು ಹಾಳುಮಾಡಲು ಒಂದು ದಾರಿಯಾಗುತ್ತದೆ. ಸೌರಶಕ್ತಿ, ವಾಯುಶಕ್ತಿ, ಜೈವಿಕ ಇಂಧನ ಮತ್ತು ಅಸಾಂಪ್ರದಾಯಿಕ ಇಂಧನಗಳ ಬಳಕೆ ಹೆಚ್ಚಬೇಕು. ಸುಧಾರಣೆಗಳು ಎಷ್ಟೇ ಆದರೂ ನಮ್ಮ ಜನರ ಅರಿವು ಹೆಚ್ಚಾಗದ ಹೊರತು ಇಂತಹ ಗಂಭೀರ ಸಮಸ್ಯೆಗಳಿಗೆ ಪರಿಹಾರ ದೊರಕುವುದು ಕಷ್ಟಸಾಧ್ಯವಾದುದಾಗಿದೆ.

**ಸಂಪತ್ ಕುಮಾರ್. ಎನ್.,** ಶಿವಮೊಗ್ಗ

**ಮಾ**ನವ ಪರಿಸರದ ಶಿಶು. ಪರಿಸರ ಹಾಳಾದರೆ ಮಾನವನಿಗೆಲ್ಲಿ ಬಾಳು ! ಬದಲಾಗಿರುವ, ಏರುತ್ತಿರುವ ತಾಪಮಾನ ಅತಿವೃಷ್ಟಿ, ಅನಾವೃಷ್ಟಿಗಳೆಲ್ಲಾ ಒಂದು ವಿಧದಲ್ಲಿ ಮಾನವ ತಾನಾಗಿಯೇ ತಂದುಕೊಂಡ ವಿಪತ್ತುಗಳು. ನೆಲ–ಜಲ–ಗಾಳಿಗಳನ್ನು ಉಳಿಸಿ ಚೆನ್ನಾಗಿಟ್ಟುಕೊಂಡರೆ ಮನುಷ್ಯ ಚೆನ್ನಾಗಿರಬಲ್ಲ. ಇವುಗಳಲ್ಲಿ ಹಲವು ಬಗೆಯ ಮಾಲಿನ್ಯಗಳನ್ನು ಬುದ್ಧಿವಂತನೆನಿಸಿಕೊಂಡ ಮಾನವ ಸೇರಿಸುತ್ತಾ ಕಲುಷಿತಗೊಳಿಸಿ ತಾನೂ ಹಾಳಾಗುತ್ತಿದ್ದಾನೆ.

ನೆಲದ ವಿಷಯದಲ್ಲಿ ಹೇಳುವುದಾದರೆ ಭೂಮಿಯ ಒಡಲಾಳ ಸೇರುತ್ತಿರುವುದು ಭಯಂಕರ ವಿಷ. ಮೊದಲು ನಮ್ಮ ಪಕ್ಕದ ಹಳ್ಳಿಯ ಜನ ಬಾವಿನೀರು ಸೇದಿ ಕುಡಿಯುತ್ತಿದ್ದರು, ಚೆನ್ನಾಗಿದ್ದರು. ಅಲ್ಲೊಂದೆರಡು ಕಾರ್ಖಾನೆಗಳು ಹುಟ್ಟಿದವು. ಪಕ್ಕದ ಕಾಲುವೆ ಹಾಳಾಯಿತು. ಕಾರ್ಖಾನೆಯ ತ್ಯಾಜ್ಯ ಇಂದು ಅಂತರ್ಜಲ ಸೇರಿ ಇಂದು ಅಲ್ಲಿಯ ಜನರಿಗೆ ಕುಡಿಯಲು ನೀರನ್ನು ಲೀಟರ್ ಲೆಕ್ಕದಲ್ಲಿ ಖರೀದಿಸುತ್ತಾರೆ. ಮುಂದೆ ನಮ್ಮ ಹಳ್ಳಿ ಸರದಿ.

ಮತ್ತೊಂದು ನೆಲದ ವಿಷಯವೆಂದರೆ ನಗರದವರ ದುರಾಸೆಗದು ಬಲಿಯಾಗಿ ಚಿಂದಿ ಚಿಂದಿಯಾಗಿ ನಿವೇಶನ ರೂಪ ತಳೆದಿರುವುದು. ಅಲ್ಲಿನ ಗಿಡ–ಮರ ಮಾಯವಾಗಿ ಸ್ಮಶಾನ ಸದೃಶವಾಗಿ ಗೋರಿಗಳಂತೆ ನಂಬರ್ ಬರೆಸಿಕೊಂಡು ರೈತನನ್ನು ಅಣಕಿಸುತ್ತಿವೆ. ಕಾಗೆ–ಗುಬ್ಬಿಗಳಿಲ್ಲ. ಮುಳ್ಳು ಕಂಟಿಗಳು ಬೆಳೆದು ಹಾವುಗಳು ವಾಸಿಸುತ್ತವೆ. ನಗರದವ ಇಲ್ಲಿ ಬಂದು ಮನೆ ಕಟ್ಟಲಾರ. ಮುಂದೆ ಲಾಭಕ್ಕೆ ಯಾರಿಗೋ ಮಾರಿಕೊಳ್ಳುತ್ತಾನೆ. ಈ ದಂಧೆ ನಗರದಾಚೆಗೆ ಹತ್ತಾರು ಕಿ. ಮೀ. ವ್ಯಾಪಿಸಿ ಮರ–ಗಿಡಗಳ ಮಾರಣ ಹೋಮ ಇನ್ನೂ ನಡೆಯುತ್ತಲೇ ಇದೆ. ಕೋಟಿಯವ ಎಸೆಯುವ ತುಸುಕಾಸಿಗೆ ರೈತನ ಬದುಕು, ಪರಿಸರ ಹಾಳಾಗುತ್ತಿದೆ. ಇದನ್ನು ತಡೆಯುವುದಾರು ಪ್ರಭುವೆ ? ಪ್ರಜಾಪ್ರಭುವೆ ?






ಬೇಲಿಯೇ ಎದ್ದು ಹೊಲ ಮೇಯ್ದಂತೆ ನುಂಗಣ್ಣ ಅಧಿಕಾರಿಗಳು, ಎಲ್ಲಾ ಮೇಯಲು ಮಂತ್ರಿ ಮಹೋದರರು! ರೈತದೇವರೇ ಮನಸ್ಸು ಮಾಡಿ. ಹೇಡಿತನಕ್ಕೆ ದಾಸನಾಗಬಾರದು ತಾವು. ಇದಕ್ಕೆ ಗಟ್ಟಿ ಕಾನೂನು ಅಗತ್ಯ.

ಜಲ ಉಳಿಸಲು ರಾಜಗಾಲುವೆಗಳ ತೆರವು ಅತ್ಯಗತ್ಯ. ನದೀ ತಟದಲ್ಲಿ ಕೈಗಾರಿಕೆಗಳಿಗೆ ಸರ್ಕಾರ ಅನುಮತಿ ಕೊಡಬಾರದು. ಅರ್ಕಾವತಿ ಕುಮುದ್ವತಿ ಪುನಶ್ಚೇತನದಂತಹ ಯೋಜನೆಗಳಲ್ಲಿ ಮತ್ತಷ್ಟು ಬಲಯುತವಾಗಿ ಸರ್ಕಾರ ಯೋಜನೆಗಳನ್ನು ರೂಪಿಸಬೇಕು. ಮರಳಿ, ತಾಯಿ ಮಡಿಲಿಗೆ ಎಂಬಂತೆ ಓದಿದ ಎಷ್ಟೋ ಜನ ಕೃಷಿಗೆ ಮರಳುತ್ತಿದ್ದಾರೆ. ಹಳ್ಳಿಯ ವಿದ್ಯಾವಂತ ರೈತರು ಇಂಗುಗುಂಡಿ, ಮಳೆಕೊಯ್ಲುಗಳನ್ನು ಸಕ್ರಿಯವಾಗಿ ಜಾರಿಗೆ ತರುವಲ್ಲಿ ಸಂಘಟಿತರಾಗಿ ಸರ್ಕಾರದ ಗಮನ ಸೆಳೆಯಬೇಕು. ಇಂಗುಗುಂಡಿ- ಮಳೆಕೊಯ್ಲು ಉಳ್ಳ ರೈತರಿಗೆ ಪ್ರೋತ್ಸಾಹಧನ ಸಾಲ-ಸೌಲಭ್ಯ ನೀಡಬೇಕು. ಕಡ್ಡಾಯವಾಗಿ ಎಕರೆಗಿಷ್ಟು ಮರವಿರಲೇಬೇಕೆಂಬ ಕಾನೂನು ಮಾಡಿ ಅದು ಇಲ್ಲವಾದರೆ ದಂಡವಿಧಿಸಬೇಕು.

ಇನ್ನು ಗಾಳಿ ಹಾಳಾಗುವಲ್ಲಿ ಧೂಮಪ್ರಿಯರ ಕೊಡುಗೆ ಅಪಾರ. ಕೈಗಾರಿಕೆಗಳ ಹೊಗೆಯ ಅಪಾಯಕಾರಿ ಅಂಶಗಳನ್ನು ತಡೆಯುವ, ಪರಿವರ್ತಿಸುವ ತಂತ್ರಜ್ಞಾನವನ್ನು ವಿಜ್ಞಾನಿಗಳು ಕಂಡುಹಿಡಿಯಬೇಕು. ಇದೇ ವಿಷಯವನ್ನು ವಾಹನಗಳಿಗೂ ಅನ್ವಯಿಸಿ ಪರಿಸರ ಸ್ನೇಹಿ ತಂತ್ರಜ್ಞಾನ ಮುಂದಿನ ಕೊಡುಗೆಯಾಗಬೇಕು.

ಪ್ರಧಾನಿಯವರು ಅನೇಕ ಸ್ವಚ್ಛ ದೇಶಗಳನ್ನು ನೋಡಿಕೊಂಡು ಬಂದಿದ್ದಾರೆ. ಆದರೆ ನಮ್ಮ ನಗರಗಳ ಕಸಗಳ ಕುಪ್ಪೆ, ಹರಿಯುತ್ತಿರುವ ಹೊಲಸು ನದಿ ಇದೆಲ್ಲಾ ವ್ಯವಸ್ಥಿತವಾಗಿ ಶುದ್ಧವಾಗಬೇಕು. ಚರಂಡಿಯಲ್ಲೂ ಬಿಡದಂತೆ ತ್ಯಾಜ್ಯ ನಿರ್ವಹಣೆಯಲ್ಲೂ ಗೊಬ್ಬರದ ಹುಳುಗಳಂತೆ ಅಗಾಧ ಭ್ರಷ್ಟರಿರುವ ತನಕ ಸ್ವಚ್ಛ ಬೆಂಗಳೂರು ಕನಸಿನ ಮಾತು. ಅಂತೆಯೇ ಎಲ್ಲಾ ನಗರಗಳೂ ಸಹ. ಇದಕ್ಕಾಗಿ ಅನೇಕ ಸೇನೆಗಳು, ಸಮಿತಿಗಳು (ಕ. ರಕ್ಷಣಾ ವೇದಿಕೆ ಕ. ಸೇನೆ, ಇತ್ಯಾದಿ) ಸಕ್ರಿಯವಾಗಿ ಸರ್ಕಾರದ ಗಮನ ಸೆಳೆಯಬೇಕು. ಶ್ರೀಸಾಮಾನ್ಯರುಗಳೂ ಒಂದಾಗಿ ಶ್ರೀಸಾಮಾನ್ಯರ ವೇದಿಕೆ ಸ್ಥಾಪಿಸಿ ಗಿಡಮರ ಬೆಳೆಸುವುದು, ಮಳೆಕೊಯ್ಲು ಇತ್ಯಾದಿ ಅರಿವು ಮೂಡಿಸೋಣ. ಸರ್ಕಾರವನ್ನೂ ಎಚ್ಚರಿಸೋಣ, ಬೆಂಬಲಿಸೋಣ. ಟೀಕಿಸೋಣ. ತಾಕು ಠೀಕಿನವರನ್ನು!

**ಶಿವಪ್ರಸಾದ್ ಮಲ್ಲರಬಾಣವಾಡಿ**, ನೆಲಮಂಗಲ

**ರಾ**ಜ್ಯದಲ್ಲಿ ರಾಷ್ಟ್ರೀಯ ಹೆದ್ದಾರಿಗಳನ್ನು ಚತುಷ್ಪಥ ರಸ್ತೆಗಳನ್ನಾಗಿ ಮಾಡಿ ರಾಷ್ಟ್ರಾದ್ಯಂತ ಅಪಘಾತ ರಹಿತ ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲ ಮಾಡಿಕೊಡಲು ಕೇಂದ್ರ ಸರಕಾರ ರಸ್ತೆಗಳ ಅಗಲೀಕರಣದ ಕಾರ್ಯವನ್ನು ಭರದಿಂದ ಮಾಡುತ್ತಿದೆ. ರಸ್ತೆಯ ಅಗಲೀಕರಣದ ಸಂದರ್ಭದಲ್ಲಿ ರಸ್ತೆಗಳ ಎರಡೂ ಬದಿಯಲ್ಲಿದ್ದ ನೂರಾರು ವರ್ಷ ಹಳೆಯದಾದ ನೆರಳು-ವ-ಪಕ್ಷಿಗಳಿಗೆ ಆಹಾರ ಒದಗಿಸುವ ಬೃಹತ್ ಮರಗಳನ್ನು ಉಳಿಸಿಕೊಂಡು ರಸ್ತೆಯ ನಿರ್ಮಾಣ ಕುರಿತು ಸರಕಾರ ಚಿಂತನ ಮಾಡದೆ ಮರಗಳ ಮಹತ್ವ ಹಾಗೂ ಅವುಗಳನ್ನು ಉಳಿಸಿಕೊಳ್ಳುವ ಕುರಿತು ಪರಿಸರವಾದಿಗಳ ಪರವಾಗಿ ಮಾಡಿಕೊಂಡ ಮನವಿಯನ್ನು ನಿರ್ಲಕ್ಷಿಸಿ ನಿರ್ದಾಕ್ಷಿಣ್ಯವಾಗಿ ಮರಗಳ ಹನನ ನಡೆದುಹೋಯಿತು.

೨೦೦೪ರಲ್ಲಿ ಕೇಂದ್ರ ಸರಕಾರದ ಭೂಸಾರಿಗೆ ಸಚಿವರಾಗಿದ್ದ ಕರ್ನಾಟಕದ ಕೆ. ಹೆಚ್. ಮುನಿಯಪ್ಪನವರಿಗೆ ಈ ಬಗ್ಗೆ ಮನವಿಮಾಡಿಕೊಂಡು ಅಗಲೀಕರಣವಾದ ರಸ್ತೆಯ ಎರಡೂ ಬದಿಗೆ ಬಹೂಪಯೋಗಿ ಮರಗಳನ್ನು ಹಾಗೂ ರಾಷ್ಟ್ರೀಯ ಹೆದ್ದಾರಿ-ವ-ವಿವಿಧ ರಸ್ತೆಗಳ ನಡುವಿರುವ ರಸ್ತೆ ವಿಭಜಕಗಳಲ್ಲಿ ಪರಿಸರದಲ್ಲಿ ಆರೋಗ್ಯಪೂರ್ಣ ವಾತಾವರಣ ಹಾಗೂ ಆಮ್ಲಜನಕವನ್ನು ಪೂರೈಸುವ ವಿವಿಧ ವರ್ಣಗಳ ಕಣಗಲಿ, ದಾಸವಾಳ ಹಾಗೂ ತುಳಸಿಕಂಟಿಗಳನ್ನು ಬೆಳೆಸಲು ಕ್ರಮ ಜರುಗಿಸಲು ಕೋರಿ ಪತ್ರವನ್ನು ಬರೆಯಲಾಗಿತ್ತು. ಆ ಕುರಿತು ಅವರು ಸ್ಪಂದಿಸಿ ಹಣ್ಣು ಹಂಪಲು ಕೊಡುವ ಹಾಗೂ ಪರಿಸರಕ್ಕೆ ಪೂರಕವಾದ ಮರ, ಗಿಡ, ಕಂಟಿಗಳನ್ನು ಬೆಳೆಸಲು ಕ್ರಮ ಜರುಗಿಸುವದಾಗಿ ತಿಳಿಸಿದ್ದರು.

ರಾಷ್ಟ್ರೀಯ ಹೆದ್ದಾರಿಯ ಎರಡೂ ಬದಿಗೆ ಮಾವು, ಬೇವು, ಬಸರಿ, ಅತ್ತಿಗಿಡ,

ಹಲಸು, ಬೀಳುಬಿಡದ ಆಲದ ಮರ, ನೇರಳೆ ಹಾಗೂ ಹುಣಸೆ ಮರಗಳನ್ನು ಬೆಳೆಸುವದರಿಂದ ಜನರಿಗೆ ಮರಗಳು ನೀಡುವ ಫಲ ದೊರೆಯುವದಲ್ಲದೆ, ಆಹಾರ ಹಾಗೂ ಆಶ್ರಯಕ್ಕೆ ಅವಕಾಶವಿಲ್ಲದೇ ವಿನಾಶದ ಅಂಚಿನಲ್ಲಿರುವ ಪಕ್ಷಿ ಸಂಕುಲಗಳು ಮರಗಳಲ್ಲಿ ಗೂಡು ಕಟ್ಟಿ ತಮ್ಮ ವಂಶದ ಅಭಿವೃದ್ಧಿ ಮಾಡಿಕೊಂಡು ಪರಿಸರದ ಸಮತೋಲನ ಕಾಯ್ದುಕೊಳ್ಳಲು ಸಹಕಾರಿಯಾಗಲಿದೆ.

ಮೇಲೆ ಹೇಳಿದ ಮರಗಳು ಸರ್ವಋತುಗಳಲ್ಲೂ ಹಸಿರಾಗಿದ್ದು ತನ್ಮೂಲಕ ಪ್ರಯಾಣಿಕರಿಗೆ ತಂಪನ್ನು ಒದಗಿಸುವುದರೊಂದಿಗೆ ಪರಿಸರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆಮ್ಲಜನಕ ದೊರಕುವಂತೆ ಮಾಡಬಲ್ಲವು.

ಅದೇ ಪ್ರಕಾರ ರಾಜ್ಯ ಹೆದ್ದಾರಿ, ಜಿಲ್ಲಾ ಮುಖ್ಯರಸ್ತೆಗಳು ಹಾಗೂ ನಗರ ಪ್ರದೇಶದ ವಿವಿಧ ಬಡಾವಣೆಗಳ ರಸ್ತೆಗಳ ಬದಿಗೆ ಕೂಡ ವಿವಿಧ ನಮೂನೆಗಳ ಫಲ ನೀಡುವ ಮರಗಳನ್ನು ಬೆಳೆಸಬೇಕಾಗಿದೆ. ಇಂತಹ ರಸ್ತೆಗಳನ್ನು ಮೇಲ್ದರ್ಜೆಗೆ ಏರಿಸುವ ಸಂದರ್ಭದಲ್ಲಿ ರಸ್ತೆಬದಿಗೆ ಬೆಳೆಸಿದ ಮರಗಳನ್ನು ರಸ್ತೆ ವಿಭಜಕದ ರೂಪದಲ್ಲಿ ಉಳಿಸಿಕೊಂಡು ಹೊಸದಾಗಿ ರಸ್ತೆ ನಿರ್ಮಾಣಕ್ಕೆ ಕ್ರಮ ಜರುಗಿಸುವ ಮೂಲಕ ಮರಗಳನ್ನು ಉಳಿಸಿಕೊಂಡು ವಾಹನಗಳ ಏಕಮುಖ ಸಂಚಾರಕ್ಕೆ ಅವಕಾಶ ಮಾಡಿಕೊಡುವದರಿಂದ ಉಪಯುಕ್ತ ಮರಗಳೂ ಉಳಿದುಕೊಂಡು ವಾಹನಗಳ ಸುಗಮ ಸಂಚಾರಕ್ಕೆ ಪೂರಕವಾದ ವಾತಾವರಣ ಉಂಟಾಗಲಿದೆ.

ರಾಷ್ಟ್ರೀಯ ಹೆದ್ದಾರಿ–ವ–ರಾಜ್ಯ ಹೆದ್ದಾರಿಗಳಿಗೆ ನೂರು ವರುಷಗಳ ನಂತರ ಆಗಬಹುದಾದ ಬದಲಾವಣೆಯನ್ನು ಗಮನದಲ್ಲಿರಿಸಿಕೊಂಡು ಮುಂದೆಯೂ ಸಹ ಮರಗಳನ್ನು ಕಡಿಯದಂತೆ ರಸ್ತೆ ಅಗಲೀಕರಣ ಮಾಡಲು ಅನುಕೂಲವಾಗುವಂತೆ ರಸ್ತೆಯ ಎರಡೂ ಬದಿಗಳಿಂದ ಸುಮಾರು ನೂರಡಿ ದೂರದಲ್ಲಿ ಮರಗಳನ್ನು ಬೆಳೆಸಲು ಕ್ರಮ ಜರುಗಿಸಬೇಕು. ಸದರಿ ಮರಗಳನ್ನು ರಸ್ತೆ ಪಕ್ಕದ ಜಮೀನುಗಳಲ್ಲಿ ಬೆಳೆಸಬೇಕಾದ ಅನಿವಾರ್ಯತೆ ಇರುವ ಕಾರಣ ಮರಗಳ ಪಾಲನೆ ಪೋಷಣೆ ಹಾಗೂ ಮರಗಳು ನೀಡುವ ಫಲಗಳನ್ನು ಹೊಲದ ಮಾಲೀಕರಿಗೆ ಕೊಡುವ ಕುರಿತು ಅವರ ಮನವೊಲಿಸಿದಲ್ಲಿ ರೈತರು ಮರಗಳನ್ನು ಪೋಷಿಸಲು ಅನುಕೂಲವಾಗಲಿದೆ. ಇದರಿಂದಾಗಿ ಪರಿಸರಕ್ಕೆ ಪೂರಕವಾದ ಮರಗಳ ಮಾರಣ ಹೋಮವಾಗುವದನ್ನು ತಪ್ಪಿಸಬಹುದಾಗಿದೆ.

ಅದೇ ಪ್ರಕಾರ ವಿವಿಧ ಮಹಾನಗರ, ನಗರಗಳಲ್ಲಿ ನಿರ್ಮಿಸಲಾಗುವ ಬಡಾವಣೆಗಳಲ್ಲಿ ರಸ್ತೆಗಳ ಅಗಲ ಹಾಗೂ ಉದ್ದವನ್ನು ಗಮನದಲ್ಲಿಟ್ಟುಕೊಂಡು ಹಣ್ಣುಗಳನ್ನು ಕೊಡುವ ಪೇರಲ, ಚಿಕ್ಕು, ನೇರಳೆ ಮರಗಳನ್ನು ನೆಡುವ ಮೂಲಕ ಜನ–ಜಾನುವಾರು ಹಾಗೂ ಪಕ್ಷಿ ಸಂಕುಲಕ್ಕೆ ಅನುಕೂಲ ಮಾಡಿಕೊಡುವದರೊಂದಿಗೆ ಪರಿಸರ ಮಾಲಿನ್ಯ ತಪ್ಪಿಸುವ ಆಮ್ಲಜನಕವನ್ನು ಹೆಚ್ಚು ಪಡೆಯಲು ಅನುಕೂಲವಾಗಲಿದೆ.

ರಾಜ್ಯದ ವಿವಿಧ ಮಹಾನಗರಗಳಲ್ಲಿ ಸುಗಮ ಸಂಚಾರಕ್ಕೆ ಅನುಕೂಲವಾಗಲು ವಿವಿಧ ರಸ್ತೆಗಳನ್ನು ಅಗಲೀಕರಿಸಿ ಮಾರ್ಗ ಮಧ್ಯದಲ್ಲಿ ರಸ್ತೆ ವಿಭಜಕ ನಿರ್ಮಿಸಲಾಗುತ್ತಿದೆ. ಅಂತಹ ವಿಭಜಕಗಳಲ್ಲಿ ಕಣಗಲಿ, ದಾಸವಾಳ, ಕೃಷ್ಣತುಳಸಿ ಕಂಟಿಗಳನ್ನು ಬೆಳೆಯುವಂತೆ ಹುಬ್ಬಳ್ಳಿ, ಧಾರವಾಡ, ಬೆಂಗಳೂರು ಮಹಾನಗರಗಳಿಗೆ, ನಂಜನಗೂಡಿನ ನಂಜುಂಡೇಶ್ವರ ದೇವಸ್ಥಾನದ ಪಕ್ಕದ ರಸ್ತೆ ವಿಭಜಕಗಳಲ್ಲಿ ಬೆಳೆಸಲು ಮನವಿ ಮಾಡಿಕೊಳ್ಳಲಾಗಿತ್ತು. ಆ ಕುರಿತು ಮಹಾನಗರ ಪಾಲಿಕೆಗಳು ಹಾಗೂ ಮೈಸೂರು ಜಿಲ್ಲಾಡಳಿತಗಳು ಕ್ರಿಯಾತ್ಮಕವಾಗಿ ಸ್ಪಂದಿಸಿ ರಸ್ತೆ ವಿಭಜಕಗಳಲ್ಲಿ ಕಿರುಕಂಟಿಗಳನ್ನು ಬೆಳೆಸುವ ಮೂಲಕ ಪರಿಸರದಲ್ಲಿ ಆಮ್ಲಜನಕ ಹಾಗೂ ಆರೋಗ್ಯಪೂರ್ಣ ವಾತಾವರಣ ನಿರ್ಮಿಸಲು ಕ್ರಮ ಜರುಗಿಸಿವೆ.

ಅದೇ ಪ್ರಕಾರ ರಸ್ತೆಯ ಬದಿಗೆ ಹಾಗೂ ರಸ್ತೆಗಳ ನಡುವಿನ ವಿಭಜಕ ಮಧ್ಯೆ ಉಪಯುಕ್ತ ಸದಾ ಹಸಿರಾಗಿರುವ ಫಲಕೊಡುವ ಮರಗಳನ್ನು ಬೆಳೆಸುವದು ಇಂದಿನ ಅವಶ್ಯಕತೆಯಾಗಿದೆ.

**ಬಸವರಾಜ ಹುಡೇದಗಡ್ಡಿ,** ಬೆಂಗಳೂರು

## ಪರಿಸರ ಕಾಳಜಿ ಮತ್ತು ಆಧುನಿಕ ಬದುಕು

ಪರಿಸರದ ಪಾವಿತ್ರ್ಯತೆಯನ್ನು ರಕ್ಷಿಸಿ, ಉಳಿಸಿಕೊಳ್ಳಬೇಕಾದ ಅಗತ್ಯದ ಬಗ್ಗೆ ವಿಶ್ವದ ಬಹುತೇಕ ಎಲ್ಲ ರಾಷ್ಟ್ರಗಳೂ ಕಳೆದೆರಡು ದಶಕಗಳಿಂದ ಪುಂಖಾನುಪುಂಖವಾಗಿ ಚಿಂತನೆಗಳನ್ನು ನಡೆಸುತ್ತಲೇ ಇವೆ. ಆದರೆ, ಪರಿಸರದ ಅಧೋಗತಿಯ ವೇಗ ಮಾತ್ರ ಈ ಹಿಂದೆಂದಿಗಿಂತಲೂ ಹೆಚ್ಚಾಗುತ್ತಿರುವುದು ವಿಪರ್ಯಾಸವೇ ಸರಿ. ಎಲ್ಲ ಜೀವಿಜಂತುಗಳ ಮೂಲ ಅಗತ್ಯತೆಗಳಾದ ಉಸಿರಾಡುವ ಶುದ್ಧ ಗಾಳಿ, ಬಳಸುವ ನೀರು, ವಾತಾವರಣದ ನಿಗದಿತ ಉಷ್ಣತೆ, ಸೂರ್ಯನಿಂದ ಬರುವ ಅತಿ ನೇರಳೆ ಕಿರಣಗಳನ್ನು ಸೋಸುವ ಭೂಮಿಯ ಓಝೋನ್ ಕವಚ, ಬಾನಂಗಳದಲ್ಲಿ ಅಡೆತಡೆಯಿಲ್ಲದೆ ಹಾರಾಡುವ ಪಕ್ಷಿಗಳು, ಜಲಚರಗಳು, ಹೀಗೆ ಬಹುತೇಕ ಮನುಷ್ಯನ ಆತಂಕರಹಿತ ಬದುಕಿನ ಅವಿಭಾಜ್ಯ ಅಂಗವೆನಿಸುವ ಎಲ್ಲವೂ ಹಲವು ವೈಪರೀತ್ಯಗಳಿಂದಾಗಿ ನೆಮ್ಮದಿಯ ಬದುಕಿಗೆ ಮಾರಕವಾಗುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗಿದೆ. ವೈಜ್ಞಾನಿಕ ಬೆಳವಣಿಗೆಯ ಕೊಡುಗೆಗಳ ಮೂಲಕ ಸುಖದ ಮರೀಚಿಕೆಯನ್ನರಸುತ್ತ ಸಂತೋಷವನ್ನು ಮೊಟಕುಗೊಳಿಸುತ್ತಿರುವ, ಹೊಸಕಿ ಹಾಕುತ್ತಿರುವ ಈ ವಿಪರ್ಯಾಸಗಳಿಗೆ ತುರ್ತಾಗಿ ತಡೆಯೊಡ್ಡಬೇಕಾದುದು ತತ್‌ಕ್ಷಣದ ಅಗತ್ಯವಾಗಿದೆ.

ಸುಮಾರು ಮೂರು ದಶಕಗಳ ಹಿಂದೆ ಪ್ಲಾಸ್ಟಿಕ್ ಚೀಲಗಳ ಆವಿಷ್ಕಾರವಾದಾಗ ಆಹಾರವಸ್ತುಗಳ ಸಂಗ್ರಹ ಹಾಗೂ ಸಾಗಣೆಯಲ್ಲಿ ಕ್ರಾಂತಿಯೇ ಆಯಿತು. ಅಡುಗೆ ಎಣ್ಣೆ, ಕುಡಿಯುವ ಹಾಲಿನ ಸಾಗಣೆಯಿಂದ ಮೊದಲುಗೊಂಡು ಬೀಡಿ ಸಿಗರೇಟುಗಳ ರಕ್ಷಣಾಕವಚಗಳಾಗಿ ಇವುಗಳನ್ನು ಬಳಸಿದಾಗ ಒಳಗಿನ ತಾಜಾತನವನ್ನು ರಕ್ಷಿಸುವುದಲ್ಲದೆ ಅಗ್ಗದ ದರದಲ್ಲಿ ಅನುಕೂಲಕರವಾಗಿ ಸಾಗಿಸಲು ಸುಲಭವಾಯಿತು. ಆದರೆ ಅವುಗಳನ್ನು ಬಳಸಿ ಎಲ್ಲೆಂದರಲ್ಲಿ ಎಸೆದಾಗ ಅವು ಕೊಳೆಯದೆ, ನಾಶವಾಗದೆ ಕಸದ ರಾಶಿಯ ಗಾತ್ರವನ್ನು ಹೆಚ್ಚಿಸಿ ಅಂತ್ಯ ಪರಿಣಾಮವನ್ನು ಭೀಕರಗೊಳಿಸಿದವು.

ಜನಸಂಖ್ಯಾ ಸ್ಫೋಟಕ್ಕಿಂತಲೂ ಭೀಕರವಾಗಿ ವಾಹನಗಳ ಸಂಖ್ಯಾಬಲವು ಏರತೊಡಗಿದಾಗ ಅವೆಷ್ಟೇ ಕಡಿಮೆ ಪ್ರಮಾಣದಲ್ಲಿ ಹೊಗೆಯನ್ನುಗುಳಿದರೂ ಅವುಗಳ ಮೊತ್ತವು ಹಸಿರುಮನೆಯ ಪರಿಣಾಮದಿಂದಾಗಿ ಪರಿಸರದ ಉಷ್ಣತೆಯಲ್ಲಿ ಏರಿಕೆಯುಂಟಾಯಿತು. ಇದು ಸಮುದ್ರಮಟ್ಟವನ್ನು ಹೆಚ್ಚಿಸಿ ಭೂಕಬಳಿಕೆಗೆ ಕಾರಣವಾದುದಲ್ಲದೆ ಅಕಾಲ ಮಳೆಯ ಬಿರುಸಿನ ಹೊಡೆತಕ್ಕೂ ನಾಂದಿ ಹಾಡಿದವು. ಇನ್ನು ಈ ಉಷ್ಣದೇರಿಕೆಯು ಅಸಹ್ಯವೆನಿಸಿದಾಗ, ಮುಖ್ಯವಾಗಿ ಧನಿಕ ವರ್ಗವು ತಣ್ಣಗಿರಲಿ ಎಂದು ಹವಾನಿಯಂತ್ರಣ ಸಾಧನಗಳ ಮೊರೆಯನ್ನು ಹೊಕ್ಕವು. ಈ ವಾತಾನುಕೂಲ ವ್ಯವಸ್ಥೆಯಲ್ಲಿ ಬಳಸುವ ಅನಿಲವು ಸೋರಿಕೆಗೊಂಡು ಭೂಮಿಯ ರಕ್ಷಣಾ ಮುಚ್ಚಳದಂತಿದ್ದ ಓಝೋನ್ ಪದರಗಳ ಛಿದ್ರತೆಗೂ ಕಾರಣವಾಗಿ, ಸೂರ್ಯನ ಅತಿನೇರಳೆ ಕಿರಣವು ತಡೆಯಿಲ್ಲದೆ ಭೂಮಿಗಿಳಿದು ಬಂದು ಅರ್ಬುದ ರೋಗದ ಏರಿಕೆಯಾಯಿತು. ಕುಡಿಯುವ ನೀರಿಗಾಗಿ ಜನರು ಬಳಸುತ್ತಿದ್ದ ಕೊಳವೆ ಬಾವಿಗಳು ದುರ್ಬಳಕೆಗೊಂಡು ವಾಣಿಜ್ಯ ಹಾಗೂ ಕೃಷಿಬಳಕೆಗೂ ಕಾರಣವಾಗಿ ಅಂತರ್ಜಲದ ಕುಸಿತವಾಗತೊಡಗಿ ಪಾರಂಪರಿಕ ತೆರೆದ ಬಾವಿಗಳನ್ನು ಒಣಗಿಸಿಯೇ ಬಿಟ್ಟವು. ಕಾರ್ಖಾನೆಗಳ ತ್ಯಾಜ್ಯ ಮತ್ತು ಮಲಿನ ನೀರು ಪುಣ್ಯನದಿ ಎಂದು ಕರೆಯುವ ಗಂಗಾನದಿಯಿಂದ ಮೊದಲ್ಗೊಂಡು ಬಹುತೇಕ ಎಲ್ಲ ನದಿಗಳನ್ನೂ ಬಳಕೆಗೆ ಅನರ್ಹಗೊಳಿಸಿದ್ದೇ ಅಲ್ಲದೆ ಅವುಗಳಲ್ಲಿದ್ದ ಜಲಚರಗಳನ್ನೂ ನಾಶಗೊಳಿಸಿದವು. ವಿದ್ಯುನ್ಮಾನ ಮಾಧ್ಯಮಗಳಂತೂ ಗುಬ್ಬಚ್ಚಿಗಳನ್ನು ಕಾಣದಂತೆ ಓಡಿಸಿದ್ದೇ ಅಲ್ಲದೆ ಪುರುಷರಲ್ಲಿ ನಪುಂಸಕತೆ, ಸ್ತ್ರೀಯರಲ್ಲಿ ಬಂಜೆತನಕ್ಕೂ ಕಾರಣವಾದುವು. ಇನ್ನು ಪೈಪೋಟಿಗಿಳಿದ ಮುಂದುವರಿದ ರಾಷ್ಟ್ರಗಳು ಅಂತರಿಕ್ಷದಲ್ಲಿ ಉಪಗ್ರಹಗಳ ಉಡಾವಣೆಯ ಮೂಲಕ ನಿರೀಕ್ಷೆಗೂ ಮೀರಿದ ಕಸವನ್ನೆಸೆದು ಅಂತರಿಕ್ಷವನ್ನೇ ತ್ಯಾಜ್ಯದ ತೊಟ್ಟಿಯನ್ನಾಗಿಸಿದವು.

ಈ ಪ್ರಕೃತಿಯು ಮನುಷ್ಯನ ಅಗತ್ಯತೆಗಳನ್ನು ತೀರಿಸಲು ಬೇಕಾದ ಎಲ್ಲ ವಸ್ತುಗಳನ್ನು ಮುಕ್ತವಾಗಿ ತೆಗೆದಿರಿಸಿದೆ. ಆದರೆ ಖಂಡಿತವಾಗಿ ಆತನ ದುರಾಸೆಯನ್ನು ನೀಗಿಸುವಷ್ಟಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ತನ್ನ ಬದುಕಿನುದ್ದಕ್ಕೂ ಸುಖಸಂತೋಷಗಳಿರಬೇಕು, ನೆಮ್ಮದಿಯ ಬದುಕು ತನಗಿರಬೇಕು ಎಂದು ಅಪೇಕ್ಷಿಸುವುದು ಸ್ವಾಭಾವಿಕವಾಗಿದೆ. ಇಂತಹ ಒತ್ತಡಗಳಿಲ್ಲದ, ಆರೋಗ್ಯಕರ ಬದುಕನ್ನು ಬಯಸುವವನಿಗೆ ತನ್ನೊಂದಿಗಿರುವ ಪರಿಸರವೂ ಶುಭ್ರವಾಗಿರಬೇಕು, ಅವುಗಳನ್ನು ನಾಶಮಾಡಬಾರದು, ಎಂಬ ಕಾಳಜಿಯೂ ಇರಬೇಕು. ನಮಗಿರುವುದು ಇದೊಂದೇ ಭೂಮಿ, ವಿಶ್ವದ ಮತ್ಯಾವುದೇ ಗ್ರಹಗಳೂ ಜೀವಿಗಳ ಬದುಕಿಗೆ ಅನರ್ಹವಾಗಿರುವುದರಿಂದ ನಾವೀ ಭೂಮಿಯನ್ನು ರಕ್ಷಿಸಿಕೊಳ್ಳಲೇಬೇಕು, ನಮಗೆ ಹಿಂದಿನ ಪೀಳಿಗೆಯವರು ಈ ಭೂಮಿಯನ್ನು ಸುರಕ್ಷಿತವಾಗಿ ನೆಮ್ಮದಿಯಿಂದ, ಸಂತೋಷದಿಂದ ಬದುಕಲು ಕೊಟ್ಟಂತೆ ನಾವು ಬರಲಿರುವ ಪೀಳಿಗೆಗೂ ಇವನ್ನು ರಕ್ಷಿಸಿ, ಅವರಿಗೆ ನೀಡಬೇಕು. ಹಾಗಿದ್ದಾಗ ಮಾತ್ರ ಆಧುನಿಕರು, ನಾಗರಿಕರೆಂದು ಕರೆಸಿಕೊಳ್ಳುವ ನಮ್ಮ ಬದುಕು ಅರ್ಥಪೂರ್ಣವಾದೀತು.

**ಕಿಗ್ಗಾಲು ಎಸ್. ಗಿರೀಶ್ ಮೂರ್ನಾಡು,** ಕೊಡಗು




ಮನುಷ್ಯನ ಉಳಿವಿಗೆ ಪರಿಸರ ಕಾರಣವಾದರೆ, ಇದೇ ಪರಿಸರದ ಅಳಿವಿಗೆ ಮನುಷ್ಯ ಕಾರಣನಾಗುತ್ತಿದ್ದಾನೆ. ನೀರು ಪ್ರಕೃತಿಯ ಕೊಡುಗೆ. ಈ ನೀರನ್ನು ನಿರ್ಮಲವಾಗಿರಲು ಬಿಡದೆ ಹರಿಯುವ ನೀರಿಗೆ ವಿಷವಿಕ್ಕಿ ನೀರಿನ ಮೂಲವನ್ನು ನಿರ್ಮೂಲ ಮಾಡುತ್ತಿದ್ದಾನೆ. ಉದ್ದಿಮೆಗಳಿಂದ ಉತ್ಪತ್ತಿಯಾಗುವ ಕಲುಷಿತ ನೀರನ್ನು ಶುದ್ಧೀಕರಿಸದೆ ಕೆರೆ, ನದಿಗಳಂತಹ ಕುಡಿಯುವ ನೀರಿನ ಮೂಲಗಳಿಗೆ ಹಾಗೆಯೇ ಬಿಡುತ್ತಿರುವುದು ಪರಿಸರದ ನಾಶಕ್ಕೂ ಮನುಷ್ಯರ ಅನಾರೋಗ್ಯಕ್ಕೂ ಕಾರಣವಾಗುತ್ತಿದೆ. ಅಡೆ-ತಡೆಯಿಲ್ಲದೆ ಕೊರೆಯುತ್ತಿರುವ ಬೋರ್‌ವೆಲ್‌ಗಳಿಂದ ಭೂಮಿಯೊಳಗಿನ ನೀರಿನ ಅಂತರ್ಜಲದ ನೀರಿನ ಮಟ್ಟದಲ್ಲಿ ಕುಸಿತ ಉಂಟಾಗಿ, ಸುತ್ತಮುತ್ತಲಿನ ಮರ-ಗಿಡಗಳ ನಾಶಕ್ಕೂ ಕಾರಣವಾಗುವುದಲ್ಲದೆ ಭೂಮಿಯ ಉಷ್ಣಾಂಶ ಏರಿಕೆಯಾಗಲು ಮಾನವನ ದುಷ್ಕೃತ್ಯಗಳೂ ಕಾರಣವಾಗುತ್ತಿವೆ.

ಇಂದು ಹೆಚ್ಚುತ್ತಿರುವ ಜನಸಂಖ್ಯೆ, ಉದ್ದಿಮೆಗಳು ಮತ್ತು ನಗರೀಕರಣಗಳಿಂದಾಗಿ ವಾಹನಗಳ ದಟ್ಟಣೆಯೂ ಹೆಚ್ಚಾಗುತ್ತ ತನ್ಮೂಲಕ ವಾತಾವರಣದಲ್ಲಿನ ಶುದ್ಧ ಗಾಳಿಯಲ್ಲಿ ಇಂಗಾಲಾಮ್ಲ ಸೇರಿ ಗಾಳಿಯೂ ಸಹ ಮಾಲಿನ್ಯಗೊಳ್ಳುತ್ತಿದೆ. ಹೆಚ್ಚುತ್ತಿರುವ ಹವಾನಿಯಂತ್ರಿತ ಕಟ್ಟಡಗಳಿಂದಾಗಿ ಓಝೋನ್ ಪದರಕ್ಕೆ ಧಕ್ಕೆಯಾಗಿ ಸೂರ್ಯನ ಬೆಳಕಿನ ಕಿರಣಗಳೂ ಅಪಾಯಕಾರಿಯಾಗುತ್ತಿವೆ. ತತ್ಪರಿಣಾಮವಾಗಿ ಮನುಷ್ಯನ ಕ್ಯಾನ್ಸರ್ ಕಾಯಿಲೆಗಳಿಗೆ ಇವು ಕಾರಣವಾಗುತ್ತಿವೆ.

ನಗರಗಳು ಬೆಳೆದಷ್ಟೂ ನೈರ್ಮಲ್ಯದ ಸಮಸ್ಯೆಯೂ ಹೆಚ್ಚಾಗುತ್ತಲಿದೆ. ಪರಿಸರ ನೈರ್ಮಲ್ಯದ ಕಾಳಜಿ ಇಲ್ಲವಾಗಿರುವುದರಿಂದಾಗಿ ಇಂದು ಬೆಂಗಳೂರಿನಂತಹ ನಗರಗಳಲ್ಲಿ ನೈರ್ಮಲ್ಯದ ಸಮಸ್ಯೆ ಬೃಹದಾಕಾರವಾಗಿ ಬೆಳೆಯಲು ಕಾರಣವಾಗಿದೆ. ನೈರ್ಮಲ್ಯವನ್ನು ವ್ಯವಸ್ಥಿತವಾಗಿ ನಿರ್ವಹಿಸಲು ನಾವಿಂದು ಅಸಮರ್ಥರಾಗಿದ್ದೇವೆ.

ಸಮೃದ್ಧವಾಗಿದ್ದ ಹಸಿರನ್ನು ನಾಶಪಡಿಸುತ್ತ ಕಾಡನ್ನು ನಾಡಾಗಿ ಪರಿವರ್ತಿಸುತ್ತ ಅಲ್ಲೆಲ್ಲಾ ತನ್ನ ಅಸ್ತಿತ್ವವನ್ನು ಸ್ಥಾಪಿಸಿ ಕಾಡುಗಳ ಸಂಖ್ಯೆ ಕ್ಷೀಣವಾಗಲು, ಕಾಡಿನ ಪ್ರಾಣಿಗಳು ನೀರು-ಆಹಾರಕ್ಕಾಗಿ ನಾಡಿಗೆ ದಾಳಿ ಇಡುತ್ತಿರುವುದು ದಿನನಿತ್ಯದ ಸುದ್ದಿಯಾಗಿದೆ. ನಾಡಂಚಿನ ಅರಣ್ಯಗಳಲ್ಲಿ ಅಲ್ಲಲ್ಲಿ ತಲೆ ಎತ್ತುತ್ತಿರುವ ರೆಸಾರ್ಟ್‌ಗಳೂ ಸಹ ಕಾಡಿನ ಪ್ರಾಣಿ ಸಂಕುಲಗಳ ನಾಶಕ್ಕೆ ತಮ್ಮ "ಕಾಣಿಕೆ" ನೀಡುತ್ತಿವೆ. ಇದಾವುದರ ಅರಿವೇ ಇಲ್ಲದಂತಿರುವ ಆಡಳಿತಶಾಹಿ ವರ್ಗವೂ ಸಹ ಪರಿಸರದ ನಾಶಕ್ಕೆ ಕಾರಣವಾಗಿದೆ ಎನ್ನಬಹುದು. ಭೂ ಕಬಳಿಕೆ ಇಂದು ಒಂದು ದೊಡ್ಡ ದಂಧೆಯಾಗಿ ಮಾರ್ಪಟ್ಟಿದೆ. ನಾಡಿರಲಿ, ಕಾಡನ್ನೂ ಸಹ ಕಬಳಿಸುವಂತಹ ಖದೀಮರಿಂದಾಗಿ ಕಾಡು ನಾಶವಾಗಿ ಹಸಿರು ಅಳಿದು ಪಶು-ಪಕ್ಷಿ ಸಂಕುಲಗಳು ನಾಶವಾಗುತ್ತಿವೆ. ಹೀಗೆ ಪರಿಸರವನ್ನು ನಾಶಗೊಳಿಸುತ್ತಾ ಹೋದಲ್ಲಿ ನಮ್ಮ ಮುಂದಿನ ಜನಾಂಗದ ಶಾಪಕ್ಕೆ ನಾವು ಗುರಿಯಾಗಬೇಕಾಗುತ್ತದೆ.

ಇಂತಹ ಎಲ್ಲ ವಿನಾಶಕಾರಿ ಬೆಳವಣಿಗೆಗಳನ್ನು ತಡೆಯೊಡ್ಡಲು ಇರುವ ಕಾನೂನು ಕುರುಡಾಗಿದೆ. ಕಾಯಬೇಕಾದ ಬೇಲಿಯೇ ಹೊಲವನ್ನು ಮೇಯ್ದಂತೆ ಆಳುವ ಅಧಿಕಾರಶಾಹಿಗಳು ಕೆಲವೊಮ್ಮೆ ಕಣ್ಣಿದ್ದೂ ಕುರುಡರಂತಿದ್ದಾರೆ. ಇದು ಹೀಗೆ ನಿರಂತರವಾಗಿ ಮುಂದುವರಿದಲ್ಲಿ ಪರಿಸರದ ನಾಶದಿಂದಾಗಿ ಮನುಕುಲ ಸರ್ವನಾಶದತ್ತ ಸಾಗುವುದು ಖಂಡಿತ.

**ಚನ್ನಸಂದ್ರ ಮಹದೇವು**, ಮಂಡ್ಯ

ಪರಿಸರ ಎಂದರೇನು ಮನುಜರೇ ನಿಮಗೆ ಗೊತ್ತೆ ? ನಮ್ಮ ಸುತ್ತಮುತ್ತ ಇರುವ ಎಲ್ಲವೂ ನಮ್ಮ ಪರಿಸರ. ಗಿಡ, ಮರ, ಮಣ್ಣು, ನೆಲ, ನೀರು, ಗಾಳಿ, ಬೆಳಕು, ಬೆಟ್ಟಗಳು, ನದಿ-ಹಳ್ಳಗಳು, ಕಾಡು-ಅರಣ್ಯಗಳು ಇವು ಎಲ್ಲ ನಮ್ಮ ನೈಸರ್ಗಿಕ ಪರಿಸರ.

ಮಾನವನು ತನ್ನ ಸ್ವಾರ್ಥಕ್ಕಾಗಿ ಭೂಗರ್ಭದ ಇಂಧನಗಳನ್ನು ಎಗ್ಗಿಲ್ಲದೆ ತೋಡುತ್ತಿರುವನು. ಪರಿಸರ ಮಾಲಿನ್ಯ ಕೈಗಾರಿಕೆಗಳಿಂದ ಹೆಚ್ಚುತ್ತಿದೆ. ಅವು ಉಗುಳುವ ಹೊಗೆ ಬರುವ ದಿನಗಳಲ್ಲಿ ಪರಿಸರವನ್ನೇ ಅಳಿಸಿಹಾಕುವುದು ಖಂಡಿತ. ಕೈಗಾರಿಕೆಗಳು ಹೊರಹಾಕುವ ಕಲುಷಿತ ನೀರನ್ನು ನದಿಗಳಿಗೆ, ಹಳ್ಳ-ಹೊಳೆಗಳಿಗೆ ಬಿಡಬಾರದು. ಅಲ್ಲದೆ, ಇಂದು ವಾಯುಮಂಡಲದಲ್ಲಿ, ಜಲಾಶಯಗಳಲ್ಲಿ ಕಲ್ಮಶಗಳು ತುಂಬಿರುವುದರಿಂದ

ಪರಿಶುದ್ಧ ಪರಿಸರವಿಲ್ಲ. ನಾವು ಪರಿಸರ ರಕ್ಷಿಸಲು ಕೂಡಲೇ ಗಮನಕೊಡಬೇಕು. ಇಲ್ಲದಿದ್ದರೆ ನಮ್ಮ ಭೂಮಂಡಲದಲ್ಲಿ ಜೀವಿಗಳ ಸಂತತಿಯೇ ಇಲ್ಲದಾಗುವ ಕಾಲ ಬಹಳ ದೂರವಿಲ್ಲ. ಮುಂಬರುವ ದಿನಗಳಲ್ಲಿ ಮನುಕುಲದ ಭವಿಷ್ಯವೇ ಆತಂಕಕ್ಕೊಳಗಾಗಲಿದೆ. ಇದನ್ನು ನಾವೆಲ್ಲರೂ ಅರಿತು ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು.

ನಾವು ಪ್ರತಿದಿನ ವಿನಾ ಕಾರಣ ಎಗ್ಗಿಲ್ಲದೆ ವಾಹನಗಳನ್ನು ಉಪಯೋಗಿಸುತ್ತೇವೆ. ಇದರಿಂದ ಪರಿಸರ ಮಾಲಿನ್ಯವಾಗುತ್ತದೆ. ಮತ್ತು ನಾನಾ ರೋಗಗಳಿಗೆ ಕಾರಣ ವಾಗುತ್ತದೆ. ಅಲ್ಲದೆ, ಇವೆಲ್ಲ ವಾಯುಮಾಲಿನ್ಯ ಹೆಚ್ಚಿಸುವ ಸಾಧನಗಳಾಗಿವೆ. ಅದಕ್ಕಾಗಿ ಪ್ರತಿಯೊಬ್ಬರು ಅವಶ್ಯವಿದ್ದಲ್ಲಿ ಮಾತ್ರ ವಾಹನಗಳನ್ನು ಉಪಯೋಗಿಸಬೇಕು.

ನೀರು ಪ್ರಕೃತಿಯ ಒಂದು ದಿವ್ಯ ಕೊಡುಗೆ. ಮಾನವನ ಬದುಕಿನಲ್ಲಿ ನೀರು ಅತ್ಯಂತ ಅಗತ್ಯವಾದುದು. ಅದು ಈ ಭೂಮಿಯ ಒಡಲಲ್ಲಿ ಇರುವುದರಿಂದಲೇ ಈ ಭೂಮಿ ಅತಿ ಸುಂದರವಾಗಿ ಕಾಣುತ್ತದೆ ಮತ್ತು ಕಂಗೊಳಿಸುತ್ತದೆ. ಅಂತರ್ಜಲ ಉಪಯೋಗ ದಿನೇ ದಿನೇ ಹೆಚ್ಚಾಗಿ, ಅದು ನಮ್ಮ ಭೂ ಒಡಲಿನ ಜಲಸಂಪತ್ತನ್ನೇ ಬರಿದು ಮಾಡುತ್ತಿದೆ. ನೈಸರ್ಗಿಕವಾಗಿ ಅಸ್ತಿತ್ವದಲ್ಲಿರುವ ವಸ್ತು ನೀರು. ಇದನ್ನು ಸಂರಕ್ಷಿಸಬೇಕು. ಮಾನವರಾದ ನಾವೆಲ್ಲರೂ ಮಳೆಯ ನೀರನ್ನು ಹಾಳುಮಾಡದೆ ಸಂರಕ್ಷಿಸಿಕೊಳ್ಳ ಬೇಕು. ಮನೆಗಳಲ್ಲಿ, ಶಾಲೆಗಳಲ್ಲಿ, ಕಲ್ಯಾಣ ಮಂಟಪಗಳಲ್ಲಿ ನೀರಿನ ಮರುಬಳಕೆಯ ತಂತ್ರವನ್ನು ಕಡ್ಡಾಯವಾಗಿ ಜಾರಿಗೆ ತರಬೇಕು. ಜನರಲ್ಲಿ ನೀರಿನ ಬಗ್ಗೆ ಜಾಗೃತಿ ಮೂಡಿಸಬೇಕು.

ಮಾನವನು ಈ ಭೂಮಿ ಎಂಬ ಹಸಿರು ಹಡಗಿನಲ್ಲಿ ಪಯಣಿಗನಾಗಿ ಸಾಗುತ್ತಿದ್ದಾನೆ. ಹಸಿರೇ ಅವನಿಗೆ ಉಸಿರು. ಈ ಹಸಿರು ಉಳಿಸದಿದ್ದರೆ ಅವನ ಉಸಿರು ಹೋಗುವುದು ಖಂಡಿತ. ಅವನ ಸ್ವಾರ್ಥಕ್ಕಾಗಿ ನಶಿಸಿಹೋಗುತ್ತಿವೆ ಉಳಿದ ಜೀವಜಂತುಗಳು. ಅಂತಹ ಜೀವಜಂತುಗಳನ್ನು ಉಳಿಸಬೇಕು. ಬೆಲೆ ಕಟ್ಟಲಾಗದ ಪರಿಸರದ ಮಹತ್ವವನ್ನು ನಾವೆಲ್ಲರೂ ಅರಿಯಬೇಕು. ಪ್ರಕೃತಿ ಸಂಪತ್ತನ್ನು ಉಳಿಸಿದಾಗ ಮಾನವನ ಬದುಕು ನಿರಾಳವಾಗುತ್ತದೆ. ಈ ಭೂಗ್ರಹದಲ್ಲಿ ಜೀವಿವೈವಿಧ್ಯತೆಯನ್ನು ಉಳಿಸದಿದ್ದರೆ ಮನುಕುಲದ ನಾಶ ದೂರವಿಲ್ಲ.

ಕಣ್ಮರೆಯಾಗುತ್ತಿರುವ ಕೆರೆಗಳನ್ನು ಪುನರ್‌ನಿರ್ಮಾಣ ಮಾಡಿ ನೀರನ್ನು ಸಂಗ್ರಹಿಸಿಕೊಳ್ಳಬೇಕು. ಇದರಿಂದಾಗಿ ಅಂತರ್ಜಲವು ಹೆಚ್ಚಾಗಿ ಭೂಮಿ ಸದಾ ತಂಪಾಗಿರುವುದು. ಇದು ಮಾನವನ ಮುಖ್ಯ ಕರ್ತವ್ಯವಾಗಿದೆ.

**ಸಂಗಣ್ಣ ಹೊಸಮನಿ**, ಕಲಬುರಗಿ

*ನೆರೆಹತ್ತಿ ಉರಿದೊಡೆ ನಿಲಬಹುದು*
*ಧರೆಹತ್ತಿ ಉರಿದೊಡೆ ನಿಲಲುಬಹುದೆ ?*

– ಎಂಬ ವಚನ ಇಂದು ನಮ್ಮ ಸುತ್ತಮುತ್ತಲಿನ ಪರಿಸರ ಅಧೋಗತಿಗೆ ಇಳಿಯುತ್ತಿರುವುದಕ್ಕೆ ಅನ್ವಯಿಸುವಂತಿದೆ. ಪರಿಸರದ ಮೇಲೆ ನಿರಂತರ ಆಕ್ರಮಣ ಮಿತಿಯಿಲ್ಲದೆ ನಡೆಯುತ್ತಿದೆ ಎಂಬುದು ಸಾರ್ವತ್ರಿಕ ಸತ್ಯ. ತನ್ನ ವಾರಸುದಾರಿಕೆಯ ಸ್ವತ್ತಿಗೆ ಅತ್ಯಂತ ಮುತುವರ್ಜಿಯಿಂದ ಚೌಕಟ್ಟು ನಿರ್ಮಿಸಿಕೊಳ್ಳುವ ಮನುಷ್ಯ ತನ್ನ ಸುತ್ತಮುತ್ತಲಿನ ಜೀವಿವೈವಿಧ್ಯವನ್ನು ಕುರಿತು ಗಾಢವಾಗಿ ಚಿಂತಿಸಿದ್ದೇ ಕಡಿಮೆ ಎನ್ನಬಹುದು.

ಮನುಷ್ಯ ಇತಿಮಿತಿಯಿಲ್ಲದ ತನ್ನ ಬಯಕೆಗಳನ್ನು ಜೀವಿವೈವಿಧ್ಯವನ್ನು ಬಲಿ ಕೊಟ್ಟಾದರೂ ಸರಿ ಪೂರೈಸಿಕೊಳ್ಳಲು ಹಾತೊರೆಯುತ್ತಿದ್ದಾನೆ. ತನ್ನ ಅವಶ್ಯಕತೆಗಳನ್ನು ಮೀರಿಯೂ ಪರಿಸರದ ಮೇಲೆ ಸವಾರಿ ಮಾಡುತ್ತಲಿದ್ದಾನೆ. ಪರಿಸರದ ಮೇಲೆ ಮನುಷ್ಯ ಮಾಡಿರಬಹುದಾದ ದೌರ್ಜನ್ಯಗಳನ್ನು ಬೇರೆ ಯಾವ ಜೀವಿಸಂಕುಲವೂ ಮಾಡಿರಲಾರದು. ತೋರಿಕೆಯ ಅಮಲಿಗೆ ಬಲಿಪಶುವಾದ ಮನುಷ್ಯನು ಯಾವ ವಿಷಯವಾದರೂ ಸರಿಯೆ, ಅದನ್ನು ಕೇವಲ ಲಾಭಕೋರತನದ ದೃಷ್ಟಿಯಲ್ಲಿ, ಸ್ವಾರ್ಥದ ದೃಷ್ಟಿಯಲ್ಲಿ ಗ್ರಹಿಸುವವನಾಗಿದ್ದಾನೆ. 'ಪರಿಸರ ಸ್ನೇಹಿ' ಎಂದು ಹೇಳುತ್ತಿರುವುದು ಬರೀ ಉಪೇಕ್ಷೆಯ ಮಾತುಗಳೆನಿಸುತ್ತವೆ. ಬಸ್ಸು , ರೈಲು, ರಸ್ತೆ , ಮಹಲು, ಏರ್‌ಪೋರ್ಟ್ ಎಲ್ಲವನ್ನೂ ವಿಶ್ವದರ್ಜೆಯಲ್ಲಿ ನೋಡಲಿಚ್ಛಿಸುವ ಸರ್ಕಾರ ಮತ್ತು ಜನರು ನಮ್ಮ ಸಾರ್ವಜನಿಕ ಶೌಚಾಲಯಗಳನ್ನು ಒಮ್ಮೆಯಾದರೂ ವಿಶ್ವದರ್ಜೆಯಲ್ಲಿಟ್ಟು ನೋಡಲು ಪ್ರಯತ್ನಿಸಿದ್ದೇ ಆದರೆ ನಿಜಕ್ಕೂ ಅದೊಂದು ವಿಸ್ಮಯವೇ ಸರಿ.

ಇತ್ತೀಚಿನ ದಿನಮಾನಗಳಲ್ಲಿ ಗಿಡಮರಗಳು ಕಣ್ಮರೆಯಾಗುತ್ತಿರುವಂತೆ ಸಾಮಾನ್ಯವಾಗಿ ಕಂಡು ಕೇಳಿಬರುತ್ತಿರುವುದು ಜಲಮೂಲಗಳ ವಿನಾಶಕ್ಕೆ ಸಂಬಂಧಪಟ್ಟ ವಿದ್ಯಮಾನ. ಅದು ಕೆರೆ, ನದಿ, ಕಾಲುವೆ ಎಲ್ಲವನ್ನೂ ಒಳಗೊಂಡಿದೆ. ಇದು ಸಾಲದೆಂಬಂತೆ ಭೂ ಒತ್ತುವರಿಯ ಮೇಲಾಟಗಳು ಬೇರೆ. ಅಸಮರ್ಪಕ ನಿರ್ವಹಣೆಯಿಂದಾಗಿ ಕಾನೂನು, ನಡಾವಳಿಗಳು ಇನ್ನಿಲ್ಲದ ವಿಷಮತೆಯನ್ನು ತಂದೊಡ್ಡಿವೆ. ಉದಾಹರಣೆಗೆ, ಗಂಗಾ ನದಿ ಪಾತ್ರದಲ್ಲಿ ಜನರು ಶವ ಸಂಸ್ಕಾರಕ್ಕೆ ಸಂಬಂಧಿಸಿದಂತೆ ಸ್ವಯಂ ಶಿಸ್ತನ್ನು ಪಾಲಿಸಿದರೆ ಆ ಮಹಾನ್ ನದಿಯ ಮಲಿನತೆಯನ್ನು ಅಲ್ಪ ಪ್ರಮಾಣದಲ್ಲಾದರೂ ತಗ್ಗಿಸಬಹುದು.




ಇನ್ನು ನೈರ್ಮಲ್ಯ ಕುರಿತಂತೆ ಒಂದು ಮಾತು. ಬಹುತೇಕ ಹಳ್ಳಿಗಳು ಕೊಚ್ಚೆಗುಂಡಿ ಗಳಾಗಿವೆ. ಶೌಚಾಲಯಗಳು ಕನಸಿನ ಮಾತಾಗಿ ಉಳಿದಿವೆ. ಇದಕ್ಕೆ ಆಳುವ ವರ್ಗಗಳ ಅನಾದರ, ಜನರ ಅವಜ್ಞೆ, ಬಡತನ, ಆರ್ಥಿಕ ಅಸಹಾಯಕತೆ ಮೊದಲಾದವು ಕಾರಣ. ಇದು ಜಾಣ ಕುರುಡು. ಅಂತೆಯೇ ಅತಿರೇಕದ ಪರಮಾವಧಿ ಕೂಡ. ಜನರು ರಾಜಾ ಕಾಲುವೆಗಳೆಂದು ತಿಳಿದಿದ್ದರೂ ಅವುಗಳನ್ನೇ ಒಡೆದುಹಾಕುವ, ಮುಚ್ಚುವ, ತಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳುವ ಉದಾಹರಣೆಗಳೂ ಉಂಟು. ಒಂದೇ ಒಂದು ಮಹಾಮಳೆಗೆ ಇಡೀ ರಾಜಧಾನಿಯೇ ತತ್ತರಿಸಿ ನಲುಗಿ ಹೋಗುತ್ತಿರುವುದು ನಮ್ಮ ನೈರ್ಮಲ್ಯ ವ್ಯವಸ್ಥೆಗೆ ಹಿಡಿದ ಕೈಗನ್ನಡಿಯಾಗಿದೆ.

ಪರಿಸರ ರಕ್ಷಣೆಯನ್ನು ಎಲ್ಲ ವಯೋಮಾನದವರು ಮಾಮೂಲಿ ಕಾರ್ಯಕ್ರಮ ವೆಂಬಂತೆ ಪರಿಗಣಿಸದೆ ಅದನ್ನು ಒಂದು 'ಮೌಲ್ಯ'ವೆಂಬಂತೆ ಸ್ವೀಕರಿಸಬೇಕಿದೆ. ಶಾಲೆ/ ಕಾಲೇಜುಗಳಲ್ಲಿ ಪರಿಸರ ಕಾಳಜಿಯನ್ನು ಕೇವಲ ಒಂದು ಪಠ್ಯವೆಂಬಂತೆ ಬೋಧಿಸದೆ ಅದನ್ನೊಂದು ಜೀವನಕ್ರಮವೆಂಬಂತೆ ತಿಳಿಸಿಕೊಡಬೇಕಿದೆ. ಸರಕಾರದ ಕೆಲವು ನೀತಿನಿಯಮಗಳು ಪರಿಸರಕ್ಕೆ ಸಂಬಂಧಿಸಿದಂತೆ ಇಬ್ಬದಿಯ ನಿಲುವನ್ನು ಅನುಸರಿಸುತ್ತಿರುವುದು ಕಂಡುಬರುತ್ತಿದ್ದು ಈ ಪ್ರಕ್ರಿಯೆಗೆ ಕೂಡಲೇ ಕಡಿವಾಣ ಹಾಕಬೇಕು. ಕಾರ್ಪೊರೇಟ್ ಜಗತ್ತು ತಾನು ವ್ಯವಸ್ಥೆಯಲ್ಲಿ ಬೇರೂರಲು ಕಾರ್ಯಾಚರಣೆ ನಡೆಸುವಾಗ ಪರಿಸರವನ್ನು ತನ್ನ ಸ್ವಾರ್ಥ ಸಾಧಿಸಲು ಅಧಃಪತನ ದತ್ತ ಕೊಂಡೊಯ್ಯುತ್ತಿದೆ. ಖಂಡಿತ ಇಂತಹ ಪ್ರಯತ್ನಕ್ಕೆ ಲಗಾಮು ಬೀಳಲೇಬೇಕು.

**ಆರ್. ಶಿವಶಂಕರ ಸೀಗೆಹಟ್ಟಿ** , ಚಿತ್ರದುರ್ಗ

"ನನ್ನ ಹೊರತಾದ ನನ್ನ ಸುತ್ತಮುತ್ತಲಿನ ಎಲ್ಲವೂ ಪರಿಸರ" ಎಂದಿದ್ದಾನೆ ಪ್ರಸಿದ್ಧ ವಿಜ್ಞಾನಿ ಐನ್‌ಸ್ಟೈನ್. ಕವಿಗಳ ದೃಷ್ಟಿಯಲ್ಲಿ ಪರಿಸರ ಎಂದರೆ ಸೌಂದರ್ಯ. ಆದರೆ ಈಗ ಪರಿಸರ ಎಂದರೆ ಮಾಲಿನ್ಯ. ಪರಿಸರ ವ್ಯವಸ್ಥೆಯನ್ನು ಭೌತಿಕ ಪರಿಸರ, ಜೈವಿಕ ಪರಿಸರ, ಸಾಂಸ್ಕೃತಿಕ ಪರಿಸರ, ಬೌದ್ಧಿಕ ಪರಿಸರ ಎಂದು ವರ್ಗೀಕರಿಸ ಬಹುದು. ಮಣ್ಣು, ನೀರು, ಗಾಳಿ, ಬೆಳಕು, ಶಾಖ, ಖನಿಜಗಳು, ಹವೆ, ಎಲ್ಲವೂ ಕೂಡಿ ಭೌತಿಕ ಪರಿಸರ ಎನಿಸುತ್ತದೆ. ಎಲ್ಲ ಜೀವಕೋಟಿಗಳಿಗೂ ಆಧಾರ ಭೌತಿಕ ಪರಿಸರ, ಜೈವಿಕ ಪರಿಸರವು ಸಸ್ಯ, ಮರ, ಕ್ರಿಮಿ–ಕೀಟ ಪ್ರಾಣಿ–ಪಕ್ಷಿ ಹಾಗೂ ಸರೀಸೃಪ ವರ್ಗ ಇವುಗಳನ್ನು ಒಳಗೊಂಡಿದೆ. ಸಾಂಸ್ಕೃತಿಕ ಪರಿಸರ ಎಂದರೆ ಮಾನವನ ಪ್ರಯತ್ನ ಮತ್ತು ಕೌಶಲ್ಯದಿಂದ ನಿರ್ಮಿಸಲ್ಪಟ್ಟ ಆಕೃತಿಗಳು (ಕಟ್ಟಡ, ರಸ್ತೆ, ಸೇತುವೆಗಳು). ಬೌದ್ಧಿಕ ಪರಿಸರ ಎಂದರೆ ವಿವಿಧ ವಿಚಾರಗಳಿಂದ ಸಮಾಜದ ಆರೋಗ್ಯವನ್ನು ಕಾಪಾಡುವದು.

ಒಣಗಿ ನಿಂತಿರುವ ಗಿಡ–ಮರಗಳು, ಕೈಗಾರಿಕೆಗಳ ಕಲ್ಮಶ ನೀರು, ಹೊಗೆ, ವಾಹನ ಸಂಚಾರದ ಇಂಗಾಲಾಮ್ಲಭರಿತ ಗಾಳಿ, ಧೂಳು, ಕರ್ಕಶ ಶಬ್ದ, ರೋಗ–ರುಜಿನಗಳು, ಕೊಳಚೆ ಪ್ರದೇಶಗಳು, ಸಾಮಾಜಿಕ ಅಸಮಾನತೆ ಇವು ಹದಗೆಟ್ಟ ಪರಿಸರದ ಲಕ್ಷಣಗಳು. ಕೈಗಾರಿಕೆಗಳು–ವಾಹನಗಳು ಹೊರಹಾಕುವ ಕಲ್ಮಶ, ಪೆಟ್ರೋಲ್, ಡೀಸೆಲ್, ಕಲ್ಲಿದ್ದಲಿನ ರೂಪದಲ್ಲಿ ಮಾನವ ಪ್ರತಿದಿನ ದಹಿಸುವ ಅಪಾರ ಪ್ರಮಾಣದ ಇಂಧನಗಳಿಂದ ಆಮ್ಲ ಮಳೆ ಉಂಟಾಗುತ್ತದೆ. ಈ ಮಳೆ ಸುರಿದ ನಂತರ ಹಸಿರಾಗಿದ್ದ ಗಿಡಗಳು ಒಣಗಲಾರಂಭಿಸುತ್ತವೆ. ನಮ್ಮ ಚರ್ಮಗಳ ಮೇಲೆ ಗುಳ್ಳೆಗಳಾಗುತ್ತವೆ. ಈ ಮಳೆಯ ಒಂದು ಹನಿ ಮಾನವನ ಮೈಮೇಲೆ ಬಿದ್ದರೆ ಕ್ಯಾನ್ಸರ್‌ಗೆ ತುತ್ತಾಗುವನು. ವಾತಾವರಣದಲ್ಲಿ ಗಂಧಕದ ಆಕ್ಸೈಡ್ ಮತ್ತು ಸಾರಜನಕದ ಅನಿಲಗಳು ಸೇರಿ ಆಮ್ಲವಾಗುತ್ತವೆ. ಅನಂತರ ಇಬ್ಬನಿ ರೂಪದಲ್ಲಿ ಭೂಮಿಗೆ ಬೀಳುತ್ತವೆ. ಈಗಾಗಲೇ ಇಂಥ ಆಮ್ಲಗಳಿಂದ ಕೂಡಿದ ಮಳೆ ಅಮೆರಿಕ, ಇಂಗ್ಲೆಂಡ್, ಜಪಾನ್, ಚೈನಾ, ನೈಜೀರಿಯಾ, ಬ್ರೆಜಿಲ್ ಮತ್ತು ಸ್ವೀಡನ್‌ಗಳಲ್ಲಿ ಕಂಡುಬಂದಿದೆ. ಮಾನವ ತನ್ನ ಭೋಗ ಜೀವನ, ನಗರೀಕರಣದ ಎಗ್ಗಿಲ್ಲದ ಕಲ್ಪನೆಯಿಂದಾಗಿ ಪರಿಸರ ಸಮತೋಲನಕ್ಕೆ ವ್ಯತಿರಿಕ್ತವಾದ ಕಾರ್ಯಗಳಿಗೆ ಕೈ ಹಾಕಿ ತನ್ನ




ಅಸ್ತಿತ್ವಕ್ಕೆ ತಾನೇ ಕೊಡಲಿ ಪೆಟ್ಟು ಹಾಕಿಕೊಳ್ಳುತ್ತಿದ್ದಾನೆ. ಸಹಜ ಪ್ರಕೃತಿಯ ಮೇಲೆ ಹೇರುವ ಒತ್ತಡಗಳಿಂದಾಗಿ ಅಸಹಜ ರೋಗ–ರುಜಿನಗಳು ಹುಟ್ಟಿಕೊಳ್ಳುತ್ತಿವೆ. ಮನುಷ್ಯ ಆಶ್ರಯಿಸಿರುವ, ಆಶ್ರಯಿಸುತ್ತಿರುವ, ಆಶ್ರಯಿಸಲಿರುವ ಪ್ರತಿಯೊಂದು ವಸ್ತುವನ್ನೂ ಮಲಿನತೆ ಎಂಬ ಮಾಯೆ ಬಿಗಿದಪ್ಪಿದೆ. ಈಗ ತಾನೆ ಜನಿಸಿದ ಮಗು ಸಹ ಈ ಮಾಯೆಯಿಂದ ಹೊರತಾಗಿಲ್ಲ. ವಾಸಿಸುವ ಮನೆ, ಕುಡಿವ ನೀರು, ಸೇವಿಸುವ ಆಹಾರ, ಓಡಾಡುವ ಪರಿಸರ ಎಲ್ಲವೂ ಇಂದು ಮಲಿನಗೊಂಡಿವೆ. ಪ್ರಪಂಚದಲ್ಲಿ ಇಂದು ಪ್ರತಿಶತ ೬೦ರಷ್ಟು ಮಂದಿ ಅಲರ್ಜಿ ಬಾಧೆಯಿಂದ ನರಳುತ್ತಿದ್ದಾರೆ. ಅಲ್ಲದೆ ಇದು ಮಕ್ಕಳ ಮಾನಸಿಕ ಬುದ್ಧಿಮಟ್ಟದ ಮೇಲೆ ಪ್ರತಿಕೂಲ ಪರಿಣಾಮವನ್ನು ಉಂಟುಮಾಡುತ್ತದೆ. ಜೀವಜಲಕ್ಕೂ ಕುತ್ತು ಬಂದಿದೆ. ಈಗ ಮಾನವನಿಗೆ ದೊರೆಯುತ್ತಿರುವ ಶುದ್ಧ ನೀರಿನ ಪ್ರಮಾಣ ೦.೩ರಷ್ಟು ಮಾತ್ರ. ಅಂತರ್ಜಲದ ಮಟ್ಟ ಕುಸಿಯುತ್ತಿದೆ. ಇಂದು ನೀರಿಗಾಗಿ ೮೦೦=೧೪೦೦ ಅಡಿ ಆಳಕ್ಕೆ ಬೋರ್‌ವೆಲ್ ಕೊರೆಯುವ ಹಂತ ತಲುಪಿದ್ದೇವೆ. ಅಶುದ್ಧ ನೀರಿನಿಂದ ಆಂಥ್ರಾಕ್ಸ್, ಜಲಬಾಧೆಯಂಥ ರೋಗಗಳು ಕರುಳು ಸಂಬಂಧಿ ರೋಗಗಳು ಉದ್ಭವವಾಗುತ್ತವೆ : ಮಿತಿಮೀರಿದ ನಗರೀಕರಣದಿಂದಾಗಿ ಮತ್ತು ಸುತ್ತಲಿನ ಅರಣ್ಯ, ಸಸ್ಯರಾಶಿಯನ್ನು ನಾಶಪಡಿಸಿದ ಪರಿಣಾಮದಿಂದಾಗಿ ಬರಗಾಲ, ಕ್ಷಾಮ ಉಂಟಾಗುತ್ತವೆ.

ಮನುಷ್ಯ ತನ್ನ ಒಳಪರಿಸರ (ಮನೆಯ ಒಳಗೆ) ಹೊರ ಪರಿಸರ (ಸಾರ್ವಜನಿಕ ಸ್ಥಳ, ಕಾರ್ಖಾನೆ ಇತ್ಯಾದಿ)ಗಳಲ್ಲಿ ತಾನು ಬಳಸಿ ಬಿಸಾಡಿದ ತ್ಯಾಜ್ಯಗಳು ಪರಿಸರ ಮಾಲಿನ್ಯಕ್ಕೆ ಕಾರಣವಾಗಿವೆ. ಭಾರತದಲ್ಲಿ ಪ್ರತಿದಿನ ೪೦–೫೦ ಬಿಲಿಯನ್ ಟನ್‌ಗಳಷ್ಟು ತ್ಯಾಜ್ಯ ಸಂಗ್ರಹವಾಗುತ್ತದೆ. ಅದರಲ್ಲಿ ಶೇಕಡ ೫ರಷ್ಟು ಮಾತ್ರ ವಿಲೇವಾರಿ ಆಗುತ್ತದೆ. ಈ ತ್ಯಾಜ್ಯ ಸಹ ಹಲವಾರು ರೋಗಗಳಿಗೆ ಕಾರಣವಾಗಿದೆ.

ಭೂಮಿಯಿಂದ ೨೦–೪೦ ಕಿ.ಮೀ. ಎತ್ತರದಲ್ಲಿ ಸ್ತರಗೋಲ ಎಂಬ ಪ್ರದೇಶದಲ್ಲಿ ಓಝೋನ್ ಪದರವಿದೆ. ಇದಕ್ಕೆ ಸೂರ್ಯನ ನೇರಳಾತೀತ ಕಿರಣಗಳನ್ನು ತಡೆಯುವ ಶಕ್ತಿಯಿದೆ. ಓಝೋನ್ ಆಮ್ಲಜನಕದ ಅನಿಲ ರೂಪ. ಇದು ವಿಷಾನಿಲ. ಇದು ಜೀವಿರಕ್ಷಕ ಪೊರೆಯಾಗಿ ಕಾರ್ಯ ನಿರ್ವಹಿಸುತ್ತದೆ. ಸೂರ್ಯನ ಕ್ರೂರ ಕಿರಣಗಳೆನಿಸಿದ ನೇರಳಾತೀತ ಕಿರಣಗಳು ಭೂಮಿಗೆ ನೇರವಾಗಿ ಬೀಳದಂತೆ ತಡೆಯುತ್ತದೆ. ಈ ಜೀವರಕ್ಷಕ ಪದರಿಗೆ 'ಕ್ಲೋರೋಫ್ಲೋರೋ' ಎಂಬ ಕಾರ್ಬನ್‌ಗಳಿಂದ ಅಪಾಯ ಒದಗಿದೆ. ಬಾಹ್ಯಾಕಾಶ ಸಂಶೋಧನೆಗೆ ಹಾರಿಬಿಡುವ ರಾಕೆಟ್‌ಗಳು ಓಝೋನ್ ನಾಶಕ್ಕೆ ಕಾರಣವಾಗಿವೆ. ಪ್ರತಿ ರಾಕೆಟ್ ಹಾರಿಸಿದಾಗ ೭೦ರಿಂದ ೧೫೦ ಟನ್‌ಗಳಷ್ಟು ಕ್ಲೋರಿನ್ ವಾಯುಮಂಡಲಕ್ಕೆ ಸೇರುತ್ತದೆ.

ಅತಿವೃಷ್ಟಿ, ಅನಾವೃಷ್ಟಿ, ಜಲಮಾಲಿನ್ಯ, ಕಲುಷಿತ ವಾತಾವರಣ, ಹವಾಮಾನ ವೈಪರೀತ್ಯ, ಜಾಗತಿಕ ಬಿಸಿಯಾಗುವಿಕೆ, ಹಿಮಪಾತ, ಅನಾರೋಗ್ಯ, ವೈರಸ್ ಹಾವಳಿ ಮುಂತಾದುವು ಅಭಿವೃದ್ಧಿ ಹೆಸರಿನಲ್ಲಿ ಪರಿಸರ ನಾಶಮಾಡಿದ ಕ್ರಿಯೆಯಿಂದಾಗಿ ಹುಟ್ಟಿಕೊಂಡಿರುವ ಸಮಸ್ಯೆಗಳು. "ಈ ಭೂಮಿ ಪ್ರತಿ ಮಾನವನ ಅಗತ್ಯವನ್ನು ಪೂರೈಸುತ್ತದೆ. ದುರಾಸೆಯನ್ನಲ್ಲ" ಎಂಬ ಮಹಾತ್ಮಾ ಗಾಂಧಿಯವರ ಮಾತು ಸತ್ಯ. ಅಭಿವೃದ್ಧಿ ಎಂದರೆ ಗ್ರಾಮೀಣಾಭಿವೃದ್ಧಿ, ಸಣ್ಣ ಕೈಗಾರಿಕೆಗಳ ಬೆಳವಣಿಗೆ, ಗಿಡ–ಮರಗಳ ನೆಡುವಿಕೆ, ಕಾರ್ಪೊರೇಟ್ ಕಾಡು ಮತ್ತು ಕೈಗಾರಿಕಾ ಕಾಡುಗಳ ನಿರ್ಮಾಣಕ್ಕೆ ಕಡಿವಾಣ ಹಾಕುವುದು, ಹಸಿರಿನ ಪರಿಸರದ ನಿರ್ಮಾಣ ಮಾಡುವದು, ಪರಿಸರ ಮಾಲಿನ್ಯ ಉಂಟುಮಾಡದೆ ಪ್ರಾಕೃತಿಕ ಸಂಪನ್ಮೂಲಗಳನ್ನು ಉಪಯೋಗಿಸುವದು. ಈ ರೀತಿ ವಿಧಾಯಕ ಕಾರ್ಯಗಳನ್ನು ಸರಕಾರ ಕೈಗೊಳ್ಳಬಹುದು. ನಾವು ಪರಿಸರದ ಬಗ್ಗೆ ಕಾಳಜಿವಹಿಸಿದರೆ ಜೀವನವಿಡೀ ಪರಿಸರ ನಮ್ಮ ಬಗ್ಗೆ ಕಾಳಜಿವಹಿಸುತ್ತದೆ ಎಂಬ ಅರಿವನ್ನು ಹೊಂದಬೇಕು.

ನಮ್ಮೆಲ್ಲರ ಭವಿಷ್ಯಕ್ಕೆ ಅಗತ್ಯವಾದ ಜೀವಿವೈವಿಧ್ಯದ ಒಡಲಾದ ಪಶ್ಚಿಮಘಟ್ಟದ ಭವಿಷ್ಯವೇ ಈಗ ತೂಗುಯ್ಯಾಲೆಯಲ್ಲಿದೆ. ಪಶ್ಚಿಮಘಟ್ಟದ ಪ್ರದೇಶದಲ್ಲಿ ೫೦೦೦ ಸಸ್ಯಗಳು, ೧೬೦೦ ಜಾತಿಯ ಗಿಡಗಳು, ೧೭೦೦ ಹೂ ಬಿಡುವ ಜಾತಿಯ ಗಿಡಗಳು ಅಳಿವಿನ ಅಂಚಿನಲ್ಲಿವೆ. ೩೨೫ ಜೀವಿಪ್ರಭೇದಗಳು ವಿನಾಶದ ಅಂಚಿನಲ್ಲಿವೆ. ವಿದೇಶಿ ಬಂಡವಾಳಶಾಹಿ, ಅಧಿಕಾರಶಾಹಿಯ ಅವಿವೇಕ ಮುಂತಾದುವು ಪಶ್ಚಿಮಘಟ್ಟದ ಉಸಿರನ್ನು ನಿಲ್ಲಿಸಲು ಸಂಚು ಹೂಡುತ್ತಿವೆ. ದಕ್ಷಿಣ ಭಾರತದ ಆರ್ಥಿಕತೆಗೆ ನೀಡುತ್ತಿರುವ ಕೊಡುಗೆಯ ದೃಷ್ಟಿಯಿಂದ ಪಶ್ಚಿಮ ಘಟ್ಟವನ್ನು ಸಂರಕ್ಷಿಸುವದು ಅನಿವಾರ್ಯ. ಮಾಧವ ಗಾಡ್ಗೀಳ್ ಮತ್ತು ಕಸ್ತೂರಿ ರಂಗನ್ ವರದಿಗಳಲ್ಲಿರುವ

ಉತ್ತಮ ಅಂಶಗಳನ್ನು ಅಳವಡಿಸಿಕೊಳ್ಳುವ ಬಗ್ಗೆ ಗಂಭೀರವಾಗಿ ಯೋಚಿಸಬೇಕಿದೆ.

ಅರಣ್ಯ, ನದಿ ಮೂಲಗಳ ನಾಶ, ಅಂತರ್ಜಲವನ್ನು ಬರಿದು ಮಾಡುವುದು, ಪ್ಲಾಸ್ಟಿಕ್ ತ್ಯಾಜ್ಯ ಸಮಸ್ಯೆಗೆ, ಹವಾಮಾನ ವೈಪರೀತ್ಯದಿಂದ ಸಂಭವಿಸುತ್ತಿರುವ ಅಕಾಲಿಕ ಮಳೆ, ವಿಷಗಾಳಿ, ರಾಸಾಯನಿಕಗಳಿಂದ ಉಂಟಾಗುತ್ತಿರುವ ವಾಯುಮಾಲಿನ್ಯ ರಾಜ್ಯದ ಪರಿಸರ ಸಮಸ್ಯೆಗಳಾದರೆ, ಕರಾವಳಿ ಪ್ರದೇಶದ ಮುಳುಗಡೆ, ಅರಣ್ಯನಾಶದಿಂದ ನದಿ ಬತ್ತುವಿಕೆ, ಹಸಿರು ಮನೆ ಅನಿಲಗಳಾದ ನೀರಾವಿ, ಕಾರ್ಬನ್ ಡೈಆಕ್ಸೈಡ್, ಮೀಥೇನ್‌ಗಳು ಸೂರ್ಯನ ಅವಗೆಂಪು ವಿಕಿರಣಗಳನ್ನು ಹಿಡಿದಿಡುವುದರಿಂದ ಅತಿ ಉಷ್ಣತೆ, ಜಾಗತಿಕ ತಾಪಮಾನ ಏರಿಕೆ, ಮತ್ತು ವಾಯುಮಾಲಿನ್ಯ ಭಾರತ ಎದುರಿಸುತ್ತಿರುವ ಪ್ರಮುಖ ಪರಿಸರ ಸಮಸ್ಯೆಗಳು.

ಜೂನ್ ೫ 'ವಿಶ್ವ ಪರಿಸರ ದಿನ'ವನ್ನು ಪರಿಸರ ದಿನಾಚರಣೆ ಎಂದು ನಾಲ್ಕಾರು ಸಸಿ ನೆಟ್ಟು, ತಂಬಿಗೆ ನೀರು ಹಾಕಿ ಕೈ ತೊಳೆದುಕೊಂಡರೆ ಮುಗಿಯಿತು. ಮುಂದೆ ನೆಟ್ಟ ಸಸಿಗಳು ಏನಾದವು ಎಂದು ಯಾರೂ ಗಮನಿಸುವದಿಲ್ಲ. ಉನ್ನತ ಸಮಾರಂಭಗಳಲ್ಲಿ ಪಾಟ್‌ನಲ್ಲಿರುವ ಸಸಿಯೊಂದಕ್ಕೆ ನೀರು ಹಾಕಿ ಉದ್ಘಾಟನೆ ಮಾಡಿದ ನಂತರ ಆ ಪಾಟ್ ಎಲ್ಲಿಯೋ ಮಾಯವಾಗುತ್ತದೆ. ಸಾವಿರಾರು ರೂಪಾಯಿ ಖರ್ಚುಮಾಡಿ ಅದ್ಧೂರಿ ಪ್ರಚಾರದ ಕಾರ್ಯಕ್ರಮ ನಡೆಸುವ ಬದಲು ಸಾವಿರಾರು ಸಸಿಗಳನ್ನು ಸುರಕ್ಷಿತವಾಗಿ ಬೆಳೆಯುವ ಪ್ರದೇಶದಲ್ಲಿ ನೆಟ್ಟು ಅವನ್ನು ಬೆಳೆಸಲಿಕ್ಕೆ ಸೂಕ್ತಕ್ರಮ ತೆಗೆದುಕೊಂಡರೆ ನಮ್ಮ ಶ್ರಮ ಸಾರ್ಥಕವಾದೀತು. ಹಾಗೆ ನಾವು ಬದುಕುವ ಪರಿಸರವನ್ನು ಸ್ವಚ್ಛವಾಗಿಟ್ಟುಕೊಳ್ಳುವ ಆಚರಣೆ ಆಗಬೇಕು. ಹಿಂದೆ ನಮ್ಮ ಹಿರಿಯರು ಅರಿತೋ ಅರಿಯದೆಯೋ ಬೆಳದಿಂಗಳ ಊಟ, ಭೂಮಿ ಹುಣ್ಣಿಮೆ, ಕೆರೆಗಳಲ್ಲಿ ತೆಪ್ಪೋತ್ಸವಗಳಂತಹ ಸಾಮೂಹಿಕ ಆಚರಣೆಗಳನ್ನು ಮಾಡುತ್ತಿದ್ದರು. ಆಗ ಹೊಲ, ಪ್ರದೇಶ, ಕೆರೆಗಳೆಲ್ಲ ಸ್ವಚ್ಛವಾಗಿರುತ್ತಿದ್ದವು. ಪರಿಸರವೂ ಸ್ವಚ್ಛವಾಗಿರುತ್ತಿತ್ತು.

ಬಾಹ್ಯ ಅಸ್ವಚ್ಛತೆಯಿಂದಾಗಿ ವ್ಯಕ್ತಿಗತವಾಗಿ ಆರೋಗ್ಯಕ್ಕೆ ಧಕ್ಕೆ ಉಂಟಾಗುತ್ತದೆ. ಕುಟುಂಬದ ನೆಮ್ಮದಿ ಹಾಳಾಗುತ್ತದೆ. ಆದರೆ ಬೌದ್ಧಿಕ ಅಸ್ವಚ್ಛತೆಯಿಂದ ಸಮಾಜದ ಆರೋಗ್ಯ ಕೆಡುತ್ತದೆ. ಬೌದ್ಧಿಕ ಅಸ್ವಚ್ಛತೆಯು ಜಾತಿ–ಜಾತಿಗಳಲ್ಲಿ ಕಲಹ ಎಬ್ಬಿಸುತ್ತದೆ, ಸಾಮಾಜಿಕ ನೆಮ್ಮದಿ ಕಳಂಕಿತವಾಗುತ್ತದೆ, ಸಮಾಜದ ವಿಘಟನೆ ಆಗುತ್ತದೆ. ಏಕತೆಗೆ ಕಂಟಕಪ್ರಾಯವಾಗುತ್ತದೆ. ವಿಚಾರಗಳ ಕೊಳಕುತನದಿಂದ ಕೋಮುವಾದ, ಜಾತೀಯತೆ, ಪ್ರತ್ಯೇಕತಾ ಮನೋಭಾವ ಉಂಟಾಗುವವು. ಇಂಥ ಕೊಳೆಯನ್ನು ಜ್ಞಾನದಿಂದ ನಿವಾರಿಸಲು ಸಾಧ್ಯ. ಈ ಕೊಳೆಯನ್ನು ಬುದ್ಧನು 'ಅವಿದ್ಯೆ' ಎಂದಿದ್ದಾನೆ. ಈ ಅವಿದ್ಯೆಯನ್ನು ಹೋಗಲಾಡಿಸುವ ಪ್ರಜ್ಞೆ ಎಲ್ಲರಲ್ಲಿ ಉಂಟಾಗಬೇಕು.

**ಯು. ಎನ್. ಸಂಗನಾಳಮಠ,** ಹೊನ್ನಾಳಿ

**ಪ**ರಿಸರದ ಅರ್ಥ ಬಹಳ ವ್ಯಾಪಕವಾದದ್ದು. ಪ್ರಕೃತಿಯು ಮಾನವ ಸಮಾಜಕ್ಕೆ ಕೊಟ್ಟ ಅತ್ಯಮೂಲ್ಯ ಕಾಣಿಕೆ. ಅಂದರೆ ಪ್ರಾಕೃತಿಕ ಸಂಪನ್ಮೂಲಗಳಾದ ಅರಣ್ಯ, ಗುಡ್ಡ, ನೀರು, ನದಿ, ಸಮುದ್ರ ಹಾಗೂ ಅಲ್ಲಿರುವ ಅಸಂಖ್ಯಾತ ಜೀವರಾಶಿ, ಖನಿಜ ರಾಶಿ ಎಲ್ಲವೂ ಪ್ರಕೃತಿಯ ಅಂಗಗಳು. ಮಾನವ ಸಮಾಜ ಹುಟ್ಟಿ ಬೆಳೆದು ಇಲ್ಲಿಯವರೆಗೆ ಜೀವಂತವಾಗಿರಲು ಪ್ರಕೃತಿಯ ಜೊತೆಗೆ ಮಾನವನ ಒಡನಾಟವೆ ಕಾರಣ. ಇಂದು ಮಾನವ ಸಮಾಜ ತನ್ನ ಸ್ವಾರ್ಥಕ್ಕಾಗಿ, ಅಹಂಕಾರಕ್ಕಾಗಿ, ಪರಿಸರವನ್ನು, ಅಂದರೆ ಪ್ರಕೃತಿಯನ್ನು ದುರುಪಯೋಗ ಮಾಡುತ್ತಿದೆ. ಹೀಗಾಗಿ ಈ ಸುಂದರ ಪರಿಸರ ಇನ್ನು ಕೆಲವೇ ಶತಕಗಳಲ್ಲಿ ನಾಶವಾಗಿ, ಮಾನವ ಸಮಾಜದ ನಾಶಕ್ಕೂ ಕಾರಣವಾದೀತು. ಆದ್ದರಿಂದ ಮಾನವನು ಅಭಿವೃದ್ಧಿಯ ಹೆಸರಿನಲ್ಲಿ ಈ ಸುಂದರ ಪರಿಸರವನ್ನು ಪ್ರಕೃತಿಯನ್ನು ನಾಶಗೊಳಿಸದಿರಲಿ. ಅಲ್ಲದೆ, ನಮ್ಮ ಮುಂದಿನ ಪೀಳಿಗೆಗೆ ಪ್ರಕೃತಿಯನ್ನು ಉಳಿಸಿ ಕಾಪಾಡುವುದು ಈಗಿನ ಮಾನವ ಸಮಾಜದ ಅತಿ ಮುಖ್ಯ ಕರ್ತವ್ಯ. ಇದು ಜಾಗತಿಕ ಮಟ್ಟದ ವಿಷಯವಾಯಿತು. ಈ ನಿಟ್ಟಿನಲ್ಲಿ ಎಲ್ಲ ದೇಶಗಳು, ಸಂಸ್ಕೃತಿಗಳು, ಧರ್ಮಗಳು ಪ್ರಯತ್ನಿಸಬೇಕು.

ಇನ್ನು ನನ್ನ ಸುತ್ತಮುತ್ತಲಿನ ಪರಿಸರದ ಬಗ್ಗೆ ಒಂದೆರಡು ಮಾತು. ನನಗೀಗ ೭೨ ವರ್ಷಗಳು. ಮೊದಲಿನ ೨೦ ವರ್ಷ ಸುಂದರ ನಗರ ಧಾರವಾಡದಲ್ಲಿ ಕಳೆದಿದ್ದರೆ ೫೦ ವರ್ಷ ಜನನಿಬಿಡ ಜನಾರಣ್ಯ ಮುಂಬಯಿ ನಗರದಲ್ಲಿ ಕಳೆದಿದ್ದೇನೆ. ಈ ಅವಧಿಯಲ್ಲಿ ಧಾರವಾಡ ಹಾಗೂ ಮುಂಬಯಿ ನಗರಗಳಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಪರಿಸರದ ನಾಶವಾಗಿದೆ. ಇದನ್ನು ಕಾಣುವ ದೌರ್ಭಾಗ್ಯ ನನ್ನದಾಗಿದೆ. ಧಾರವಾಡವೆಂದರೆ ಒಂದು ಕಾಲಕ್ಕೆ ಹಚ್ಚಹಸಿರಿನ ಸೀರೆಯುಟ್ಟ ಸುಂದರ ಬಸುರಿ. ಸಾರಸ್ವತಪೂರ, ಸಪ್ತಾಪೂರ, ಸಾಧನಕೇರಿ, ಮಾಳಮಡ್ಡಿ ಪ್ರದೇಶಗಳು ಹಚ್ಚ ಹಸಿರಿನಿಂದ ಕಣ್ಣಿಗೆ ತಂಪನ್ನೀಯುವ, ಸುಂದರ ತಾಣಗಳು. ಮಾವಿನ ತೋಪುಗಳು, ಪೇರಲ ತೋಟಗಳು ನವಲೂರು ಹಾಗೆ ಕೆಲಗೆರಿಯ ಕೇರಿಗಳು, ಒಂದು ಕಾಲಕ್ಕೆ ಧಾರವಾಡ ನಗರದ ಬನಸಿರಿಯ ಸಂಪತ್ತನ್ನು, ಅನುಭವಿಸಿದ ಪುಣ್ಯಜೀವಿಗಳು ನಾವು. ಇತ್ತೀಚೆಗೆ ಸಿಮೆಂಟ್ ಕಾಂಕ್ರೀಟಿನಿಂದ ಆವರಿಸಿದ ಮನೆಗಳು ಪರಿವರ್ತನೆಗೊಂಡಿವೆ. ಈ ಬೆಳವಣಿಗೆಗೆ ನಗರ ವಿಸ್ತಾರ, ಜನವಸತಿ ಹೆಚ್ಚಳ ಕಾರಣವಾದಂತೆ ನಮ್ಮ ಹಣದ ದಾಹವೂ ಅಷ್ಟೇ ಕಾರಣ. ಇದಕ್ಕೆ ನನ್ನ ಬಂಧುಗಳು ಹೊರತಾಗಿಲ್ಲ. ಹಣವೇನೋ ದೊರೆತಿದೆ, ಆದರೆ ಸಂತೋಷ ಸಮಾಧಾನ ನಮ್ಮಿಂದ ದೂರವಾಗಿವೆ.

**ಪರಿಸರ**

ಇನ್ನು ಮುಂಬಯಿಗೆ ಬರುವ ೫೦ ವರ್ಷಗಳ ಹಿಂದೆ ಈ ನಗರದ ಜನಸಂಖ್ಯೆ ೨೫ ಲಕ್ಷ. ಆದರೆ ಈಗಿನ ಜನಗಣತಿಯ ಪ್ರಕಾರ ಒಂದು ಕೋಟಿ ೫೦ ಲಕ್ಷಕ್ಕೂ ಮೀರಿದೆ. ಇದರಲ್ಲಿ ಪಕ್ಕದ ಠಾಣೆ, ನವಿಮುಂಬಯಿ ಡೊಂಬಿವಿಲಿ, ಕಲ್ಯಾಣ, ಉಲ್ಲಾಸನಗರ, ಇವುಗಳನ್ನು ಬಿಟ್ಟು ಈ ನಗರಗಳ ಜನಸಂಖ್ಯೆಯನ್ನು ಸೇರಿಸಿದರೆ ವಿಸ್ತೃತ ಮುಂಬಯಿ ನಗರದ ಒಟ್ಟು ಜನಸಂಖ್ಯೆ ೨ ಕೋಟಿಗೂ ಮೀರುತ್ತದೆ. ಇಷ್ಟು ವಿಶಾಲ ಪ್ರದೇಶ ಹಾಗೂ ಜನವಸತಿಗೆ ಮೂಲ ಸೌಕರ್ಯವನ್ನು ಒದಗಿಸುವಲ್ಲಿ ನಮ್ಮ ಪ್ರಶಾಸನಗಳು ಅಸಮರ್ಥವಾಗಿವೆ.

ಮುಂಬಯಿ ನಗರದ ಜನಸಂಖ್ಯೆಯ ೬೦% ಪ್ರದೇಶದ ಜನರು ಕೊಳಚೆ ಕೊಂಪೆ (ಸ್ಲಮ್)ಯಲ್ಲಿ ವಾಸಿಸುತ್ತಿದ್ದು, ಎಲ್ಲಿ ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ಪ್ರತಿದಿನ ಬೆಳಗು, ಬಹಿರ್ದೆಶೆಗಾಗಿ ಈ ಜನ ರೇಲ್ವೆ ಹಳಿ, ಬೃಹತ್ ಹೆದ್ದಾರಿ ಮತ್ತಿತರ ಸಾರ್ವಜನಿಕ ಸ್ಥಳಗಳನ್ನು ಉಪಯೋಗಿಸುವುದು ದಿನನಿತ್ಯದ ನೋಟ. ಇದೊಂದು ನರಕ–ಸದೃಶ ಚಿತ್ರ. ನಾವು ಇಲ್ಲಿಯ ಜನರನ್ನು ತೆಗಳುವ ಹಾಗಿಲ್ಲ. ಯಾಕೆಂದರೆ ನಮ್ಮ ಶಾಸನಗಳು, ಆಳುವ ವರ್ಗಗಳು, ಮೂಲಭೂತ ಸೌಕರ್ಯಗಳನ್ನು ಒದಗಿಸುವ ದಿಶೆಯಲ್ಲಿ ಅಸಮರ್ಥವಾಗಿವೆ/ವಾಗಿದ್ದಾರೆ. ಹೀಗಾಗಿ ಮುಂಬಯಿ ಎಂಬ ಹೆಸರಿನ ಶಹರ ಜಗತ್ತಿನಲ್ಲಿಯೇ ಅತಿ ದೊಡ್ಡ ಕೊಳಚೆ, ಕೊಂಪೆಯ ಪ್ರದೇಶವಾಗಿದೆ. ಇದನ್ನು ಜಗತ್ತಿನಲ್ಲಿಯೇ ಸುಂದರ ನಗರ ಮಾಡಲು ಹೊರಟಿರುವ ನಮ್ಮ ನೇತಾರರು ನಮ್ಮ ಬಿಲ್ಡರ್ ಲಾಬಿಗಳು ಇಂದಿನ ಈ ಸ್ಥಿತಿಗೆ ಕಾರಣ. ಅವರ ದುರಾಶೆ, ಸ್ವಾರ್ಥ, ಹಣದ ದಾಹ, ಇಲ್ಲಿ ತಾಂಡವವಾಡುತ್ತಿವೆ. ಇದಕ್ಕೆ ಹೊಣೆ ಯಾರು ?

ಪರಿಸರ ನಾಶಕ್ಕೆ ಮಧ್ಯಮ ವರ್ಗದವರೆಂದು ಹೇಳಿಕೊಳ್ಳುವ ನಾವೂ ಅಷ್ಟೇ ಕಾರಣೀಭೂತರಾಗಿದ್ದೇವೆ. ಮನೆ ಮನೆಯಲ್ಲಿ ೨–೩ ಎ. ಸಿ. ಭಾಗಗಳು ಅನಗತ್ಯವಾಗಿ ಉಪಯೋಗಿಸುವ ಪ್ಲಾಸ್ಟಿಕ್, ಇಲೆಕ್ಟ್ರಾನಿಕ್ ಸಲಕರಣೆಗಳೇ ಅಲ್ಲದೆ ದೊಡ್ಡ ದೊಡ್ಡ ಹೌಸಿಂಗ್ ಸಮುದಾಯಗಳಲ್ಲಿ ಮಾಲಿನ್ಯ ನಿರ್ಮೂಲೀಕರಣದ ಸೌಕರ್ಯ ಇಲ್ಲದೆ ಇರುವುದು ಮಾನವ ನಿರ್ಮಿತ ತ್ಯಾಜ್ಯವನ್ನು ನಿವಾರಿಸುವ, ನಿಯಂತ್ರಿಸುವ ವ್ಯವಸ್ಥೆ ಇಲ್ಲದೇ ಇರುವುದೂ ಈಗಿನ ಪರಿಸರ ಮಾಲಿನ್ಯಕ್ಕೆ ಕಾರಣ.

ಮುಂಬಯಿ ಜಗತ್ತಿನಲ್ಲಿಯೇ ಹೆಸರುವಾಸಿಯಾದ ನಗರ. ಯಾಕೆಂದರೆ ನಗರದ ಮಧ್ಯದಲ್ಲಿಯೇ ಹೆಸರುವಾಸಿಯಾದ ಹಾಗೂ ಯಾವಾಗಲೂ ಹಸಿರಾಗಿರುವ ರಾಷ್ಟ್ರೀಯ ಉದ್ಯಾನವನವಿದೆ. ಮುಂಬಯಿಯಲ್ಲಿರುವ ವೆಸ್ಟರ್ನ್ ಎಕ್ಸ್‌ಪ್ರೆಸ್ ಹೈವೇಯನ್ನು ನಿರ್ಮಾಣ ಮಾಡುವಾಗ, ಠಾಣೆ, ಬೊರಿವಿಲಿ ರಾಜ್ಯಮಾರ್ಗ ನಿರ್ಮಿಸುವಾಗ ಜೋಗೇಶ್ವರಿ ವಿಕ್ರೊಲಿ ಲಿಂಕ್ ರೋಡ್ ಮಾಡುವಾಗ ಸಾಕಷ್ಟು ವನಸಿರಿಯನ್ನು ನಾಶಮಾಡಿದ್ದೇವೆ. ಇನ್ನು ಮುಂದೆ ನಮ್ಮ ಯಾವುದೇ ಅಭಿವೃದ್ಧಿ ಯೋಜನೆಯನ್ನು ಪರಿಸರಕ್ಕೆ ಹಾನಿ ಆಗದ ಹಾಗೆ ಜಾರಿಗೆ ತರಲು ಒತ್ತಾಯಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯ. ಇನ್ನಾದರೂ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುವ ಅತ್ಯಾಚಾರವನ್ನು ನಿಲ್ಲಿಸೋಣ ಹಾಗೂ ನಮ್ಮ ಮುಂದಿನ ಪೀಳಿಗೆ ಆರೋಗ್ಯವಾಗಿ ಬಾಳಲು ಅವಕಾಶ ಮಾಡಿಕೊಡೋಣ.

**ಹ. ಶ್ರೀ. ಆಡೂರ,** ಮುಂಬಯಿ

**ಸುಂ**ದರ ಪರಿಸರ ಎಲ್ಲರಿಗೂ ಬೇಕು. ಶುದ್ಧ ಗಾಳಿ, ಶುದ್ಧ ನೀರು, ನಿರಪಾಯಕಾರಿ ಒಳ್ಳೆಯ ಆಹಾರ, ವಾಸಿಸಲು ಯೋಗ್ಯ ಮನೆ ಎಲ್ಲರೂ ಬಯಸುವಂತಹುದು. ಆದರೆ ಇದಾವುದೂ ಸದ್ಯದ ಪರಿಸ್ಥಿತಿಯಲ್ಲಿ ನಮಗೆ ಸಿಗುವಂತಿಲ್ಲ. ಆಧುನಿಕತೆ, ಯಂತ್ರ ಜಗತ್ತು ಹೊಸ ಹೊಸ ರೂಪ

# OUR ADVERTISERS




# ಸಮಾಜವಾದ–ಸ್ಥಿತಿಗತಿ

ಸಮಾಜವಾದದ ಕುತ್ತಿಗೆ ಹಿಚುಕುವ
ದುರುಳರು ಇರುವರು ಭಾರತ ರಾಷ್ಟ್ರದಲಿ
ಸಿರಿವಂತಿಕೆಯಲಿ ಬಡವರ ತುಳಿಯುವ
ಹೃದಯ ವಿಹೀನರು ನಡೆವರು ಹಮ್ಮಿನಲಿ

ಸ್ಥಿರಾಸ್ತಿ ಗಳಿಸುವ ಕುಬೇರ ಕುವರರು
ಕುಚೇಲ ಕುವರರ ಶೋಷಣೆ ಗೈಯುವರು
ಭೂ ಹೀನರುಗಳ ಭೂಮಾಲೀಕರು
ಕೆಂಡದ ಮೇಗಡೆ ನಡೆಸುತ ನಲಿಯುವರು

ಬಹು ವೈಭೋಗದ ಬಂಗಲೆ ನಿರ್ಮಿಸಿ
ರಾಜರ ತೆರದಲಿ ಬಿಮ್ಮನೆ ಬದುಕುವರು
ಸುಖೋಪಭೋಗದ ವೈಖರಿ ಚಿಂತಿಸಿ
ತಿನ್ನುವ ಕುಡಿಯುತ ರುಜಿನದಿ ಸಾಯುವರು

ಸರ್ವರು ಸಮಾನ ಪಾಲನು ಪಡೆಯುವ
ಸುವರ್ಣ ತತ್ವಕೆ ಕೊಳ್ಳಿಯನಿಕ್ಕುವರು
ಸರ್ವರು ಸಮಾನ ಬಾಳನು ನಡೆಸುವ
ಮಾನುಷ ನೀತಿಯ ಕೆಮ್ಮನೆ ಕೊಲ್ಲುವರು

ಪ್ರಜಾಪ್ರಭುತ್ವದಿ ರಾಜ್ಯವನಾಳುವ
ಸಚಿವರು ಕಂಸನ ವಂಶಜರಾಗಿಹರು
ರಾಜ್ಯದ ಬೊಕ್ಕಸ ಲೂಟಿಯ ಮಾಡುವ
ಗುತ್ತಿಗೆದಾರರು ರಕ್ಕಸರಾಗಿಹರು

ಜಮೀನುದಾರರು ಸಮಾಜವಾದಕೆ
ಸುವರ್ಣ ಶೃಂಖಲೆ ತೊಡಿಸುವ ಮಣಿಸುವರು
ಕುಬೇರ ತನುಜರು ಸಮತಾವಾದಕೆ
ಅಘೋರ ಹಾಲಾಹಲವನೆ ಉಣಿಸುವರು

ಪೌರೋಹಿತರಿಗು ಸಮಾಜವಾದಕು
ನಾಗರು – ಮುಂಗಲಿ ತೆರಸಂಬಂಧವೋ
ಮನುಧರ್ಮಶಾಸ್ತ್ರ – ಸಮತಾವಾದಕು
ಪೆರ್ಬುಲಿಯಾಕಳ ಬಗೆ ಸಂಬಂಧವೋ

ರಾಜರು ಆಳಿದ ಗುಡಿಗಳ ನಾಡಲಿ
ಸಮಾಜವಾದವು ಮಾನ್ಯತೆ ಪಡೆಯುವುದೆ
ಜಮೀನುದಾರರು ಮೆರೆಯುವ ಬೀಡಲಿ
ಸಮತಾವಾದವು ಕಿರುಕುಳ ತಡೆಯುವುದೆ

ಸಮಾಜವಾದವು ಅಶಕ್ತವಾಗಿದೆ
ವಿಚಾರವಂತರು ಸಶಕ್ತವಾಗಿರಿಸಿ
ಸಮತಾವಾದವು ಅಪಾಯದಲ್ಲಿದೆ
ಉಪಾಯವರಿಯುತ ಬಹುದಿನ ಬಾಳಿಸಿರಿ

ಸಮಾಜವಾದದ ವೈರಿ ಸಮೂಹವು
ಅಪಜಯ ಪಡೆವೊಲು ಸಮರವ ಸಾರೋಣ
ನವರಾಜ್ಯಾಂಗದ ಸಮಾಜವಾದವು
ಜಯವನು ಪಡೆವೊಲು ಸಮರದಿ ಪೋಗೋಣ
ಸಮರದಿ ಜಯಿಸಲು ಸಮಾಜವಾದವು
ಸರ್ವರು ಗೆಲುವಿನ ಗೀತೆಯ ಪಾಡೋಣ !


**ಎ. ಆರ್. ನಾರಾಯಣಘಟ್ಟ**
ನಂ. 168, ಗೀತಾ ಕುಟೀರ, ವಿಠಲನಗರ,
ಕುಮಾರಸ್ವಾಮಿ ಬಡಾವಣೆ
2ನೇ ಹಂತ, ಬೆಂಗಳೂರು – 560 078








# ಬಹುಮುಖ ವ್ಯಕ್ತಿತ್ವದ ಕಲಾವಿದ

## ಡಾ|| ಎಸ್. ಸಿ. ಪಾಟೀಲ



ಕಲಾವಿದ, ಕಲಾಶಿಕ್ಷಕ, ಕಲಾವಿಮರ್ಶಕ, ಜಾನಪದ ಕಲಾಪರಿಣತ, ಆಡಳಿತಾಧಿಕಾರಿ ಹೀಗೆ ಹಲವಾರು ಜವಾಬ್ದಾರಿಗಳನ್ನು ನಿರ್ವಹಿಸಿ ವೈವಿಧ್ಯಮಯವಾದ ಅನುಭವಗಳಿಂದ ತಮ್ಮ ವ್ಯಕ್ತಿತ್ವ ರೂಪಿಸಿಕೊಂಡವರು ಡಾ|| ಎಸ್. ಸಿ. ಪಾಟೀಲ. ಪ್ರಸ್ತುತ ನಿಯೋಜಿತ ಲಲಿತಕಲಾ ವಿಶ್ವವಿದ್ಯಾಲಯದ ವಿಶೇಷಾಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮೂಲತಃ ವಿಜಯಪುರ ಜಿಲ್ಲೆಯವರಾದ ಇವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿ ಪಡೆದು ಅಲ್ಲಿಯೇ ಕರ್ನಾಟಕದ 'ಜನಪದ ಚಿತ್ರಕಲೆ' ಎಂಬ ಸಂಶೋಧನಾ ಮಹಾಪ್ರಬಂಧ ಮಂಡಿಸಿ ಪಿಎಚ್.ಡಿ. ಪದವಿ ಪಡೆದರು. ಶಾಲಾ ಶಿಕ್ಷಣದಲ್ಲಿ ಚಿತ್ರಕಲೆ ಕುರಿತ ಪ್ರಬಂಧಕ್ಕೂ ಪಿಎಚ್.ಡಿ. ಪದವಿ ಪಡೆದಿದ್ದಾರೆ.

ಕರ್ನಾಟಕದ ಜನಪದ ಚಿತ್ರಕಲೆ, ಬಾರೋಕ್‌ಕಲೆ, ರಂಗೋಲಿ ಚಿತ್ರಕಲೆ, ಹಚ್ಚೆ ಚಿತ್ರಕಲೆ ಹೀಗೆ ಹಲವಾರು ಕ್ಷೇತ್ರಗಳ ಕುರಿತು ಅಧ್ಯಯನ ಮಾಡಿ, ಕೃತಿ ರಚನೆ ಮಾಡಿದ್ದಾರೆ. ಜನಪದ ಚಿತ್ರಕಲೆಯ ಜೊತೆಗೆ ಸರ್ರಿಯಲಿಸಂ ಕ್ಷೇತ್ರದಲ್ಲಿ ಹೆಚ್ಚಿನ ಸಾಧನೆ ಮಾಡಿದ್ದಾರೆ. ದೇಶ ವಿದೇಶಗಳಲ್ಲಿ ಚಿತ್ರಕಲಾ ಪ್ರದರ್ಶನ ನಡೆಸಿದ ಇವರು ಹಲವಾರು ಪ್ರಶಸ್ತಿಗಳನ್ನೂ ಪಡೆದಿದ್ದಾರೆ. ಎಸ್. ಸಿ. ಪಾಟೀಲರು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದ ನಿರ್ದೇಶಕರಾಗಿದ್ದಾಗ ನೂರಾರು ಚಿತ್ರಕಲಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದ್ದಾರೆ.











Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

